ಅವರ ಶಾಲೆಯ ಉತ್ತೀರ್ಣರಾದ ವಿದ್ಯಾರ್ಥಿಗಳಲ್ಲಿ ಪ್ರಪ್ರಥಮರಾಗಿಯೂ ಇಡೀ ಪಂಜಾಬ್ ವಿಶ್ವವಿದ್ಯಾನಿಲಯದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಶ್ರೇಣಿಯಲ್ಲಿ ೩೮ನೇ ಸ್ಥಾನವನ್ನು ಪಡೆದರು. ಮುಂದೆ ಕಾಲೇಜಿನಲ್ಲಿ ಓದುವದಕ್ಕೆ ಅವರಿಗೆ ಅದರಿಂದ ಸಹಾಯವಾಗಿ ವಿದ್ಯಾರ್ಥಿ ವೇತನವು ಸಿಕ್ಕಿತು. ಅವರ ಕಾಲೇಜಿನ ವಿದ್ಯಾಭ್ಯಾಸ ಕಾಲದಲ್ಲಿ ಮಧ್ಯರಾತ್ರಿಯಲ್ಲಿ ಓದುವದಕ್ಕೆ ದೀಪದ ಎಣ್ಣೆಗಾಗಿ ಒಂದೊಂದು ದಿನ ಅವರು ಊಟವನ್ನೇ ಬಿಟ್ಟುಬಿಡುತ್ತಿದ್ದರೆಂದು ಅವರ ಜೊತೆಯ ವಿದ್ಯಾರ್ಥಿಗಳು ಹೇಳುತ್ತಿದ್ದರು. ಎಷ್ಟೋ ಸಮಯ ಅವರು ದಿವಸಗಟ್ಟಲೆ ಉಪವಾಸವಿರಬೇಕಾಗುತ್ತಿತ್ತಾದರೂ ಮುಖದ ಮೇಲೆ ಆ ಕ್ಲೇಶದ ಸೂಚನೆಯನ್ನು ಸ್ವಲ್ಪವೂ ತೋರಿಸಿಕೊಳ್ಳದೆ ಶಾಂತವಾದ ಹಸನ್ಮುಖದಿಂದಲೇ ಯಥಾಪ್ರಕಾರ ಕ್ರಮವಾಗಿ ಕಾಲೇಜಿಗೆ ಹೋಗಿ ಬರುತ್ತಾ ತಪ್ಪದೆ ಅಭ್ಯಾಸದಲ್ಲಿ ನಿರತ ರಾಗಿರುತ್ತಿದ್ದರು.

ಆರ್ಯ ಜನಾಂಗದ ಲಕ್ಷಣವುಳ್ಳ ಮಾದರಿಯ ಅವರ ಮುಖವು ಮೃದುವೂ ಸುಂದರವೂ ಆಗಿದ್ದಿತು. ಆಳವಾಗಿ ಕಪ್ಪಾಗಿದ್ದ ಅವರ ಹೊಳಪಿನ ಕಣ್ಣುಗಳು ಅಂತರಾತ್ಮನ ಗೂಢವನ್ನೂ ಪ್ರೇಮವನ್ನೂ ತೋರಿಸುತ್ತಿದ್ದವು. ವಿಶಾಲವಾಗಿಯೂ ಪ್ರಧಾನವಾಗಿಯೂ ಕಾಣುತ್ತಿದ್ದ ಅವರ ದೊಡ್ಡ ಹಣೆಯು ಉನ್ನತವಾದ ಬುದ್ಧಿ ಶಕ್ತಿಯನ್ನು ಸೂಚಿಸುತ್ತಿದ್ದಿತು. ಅವರ ತುಟಿಗಳ ಸುತ್ತಲೂ ಹೆಣ್ಣಿನ ಕೋಮಲತೆ ಯಿದ್ದಿತು. ಅವರು ಗಂಭೀರಭಾವದಲ್ಲಿದ್ದಾಗ ಕೆಳತುಟಿಯು ಮೇಲಿನ ತುಟಿಗೆ ದುಂಡಾದ ಸಣ್ಣ ಗದ್ದದ ಮೇಲೆ ಒತ್ತಿ ಅದಮ್ಯವಾದ ಸಂಕಲ್ಪಶಕ್ತಿಯನ್ನು ತೋರಿಸುತ್ತಿತ್ತು. ಮುಂದೆ ಅವರು ಇಂಥಾ ಪ್ರಖ್ಯಾತವ್ಯಕ್ತಿ ಆಗಬಹುದೆಂಬ ಸೂಚನೆಯು ಅಥವಾ ಭರವಸೆಯು, ಅವರು ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಅಷ್ಟಾಗಿ ಅವರಲ್ಲಿ ತೋರುತ್ತಿರಲಿಲ್ಲ. ಆದರೂ ಆಗ ಅವರನ್ನು ನೋಡಿದ ಯಾರಿಗಾದರೂ ಅವರ ದೈವೀ ಸ್ವಭಾವವೂ ಅಪರೂಪವಾಗಿ ಕಾಣಬಹುದಾದ ಜೀವನದ ನಿಷ್ಕಪಟವೂ ನಿಷ್ಕಳಂಕವೂ ಪರಿಶುದ್ಧವೂ ಆದ ಗುಣವೂ ಯಾರ ಮನಸ್ಸಿನ ಮೇಲಾದರೂ ಅಸಾಧಾರಣವಾದ ಮುದ್ರೆಯೊತ್ತುತ್ತಿತ್ತು. ವಿನೀತ ಕನ್ಯೆಯಂತೆ ಲಜ್ಜಾಶೀಲರಾಗಿದ್ದರು. ಚೆಲುವಾದ ಬಿಳುಪು ಬಣ್ಣದ ತೆಳುವಾದ ಸಣ್ಣದೇಹದ ಮೂಲಕ ಅವರು ಪ್ರೇಮದ ಬೆಳಕಿನಲ್ಲಿ ಪರಿಶುದ್ಧ ಪಾರದರ್ಶಕವಾಗಿ ತೋರುತ್ತಿದ್ದರು. ಆದರೆ ನಿರಾಡಂಬರವಾದ ಆ ನಮ್ರ ಸ್ವಭಾವದೊಳಗೆ, ಅತಿ ಪವಿತ್ರವಾದುದರಿಂದ ವ್ಯಕ್ತಮಾಡಲಾಗದೆಂದು ಅವರು ಭಾವಿಸಿದ ಉದಾತ್ತವಾದ ಉದ್ದೇಶಗಳೂ ಉನ್ನತವಾದ ಆಕಾಂಕ್ಷೆಗಳೂ ಉಳ್ಳ

ಒಂದು ಮಹದ್ವ್ಯಕ್ತಿತ್ವವು ಹುದುಗಿದ್ದಿತು. ಕಷ್ಟಕಾರ್ಪಣ್ಯಗಳ ಕಣ್ಣೀರಿನಿಂದಲೂ ಹೃದಯದಲ್ಲಿ ಶಿಷ್ಯನ ನಮ್ರತೆಯಿಂದಲೂ ಕನ್ಯಾಮಣಿಯ ಮೌನದಿಂದಲೂ ವಿಶ್ವಚೇತನನಿರ್ಧಾರದಿಂದಲೂ ಈ ದೇವತಾ ಸ್ವರೂಪನಾದ ವಿದ್ಯಾರ್ಥಿಯು ಜ್ಞಾನ ದೇಗುಲದಲ್ಲಿ ಧರ್ಮಯೋಧನಂತೆ ರಾತ್ರಿಹಗಲೂ ಬಹಳ ಶ್ರಮಿಸುತ್ತಿದ್ದರು. ಅವರು ಯಾವಾಗಲೂ ಸಹಪಾಠಿಗಳಲ್ಲಿ ಮುಂದಾಳಾಗಿರುತ್ತಿದ್ದರು. ಅವರ ಅಧ್ಯಯನವು ಅಪಾರವಾಗಿದ್ದಿತು. ಅವರು ಸ್ವಾಮಿಗಳಾಗಿದ್ದಾಗ ಸಾಹಿತ್ಯದಲ್ಲಿಯೂ ತತ್ತ್ವಶಾಸ್ತ್ರದಲ್ಲಿಯೂ ಅವರಿಗಿದ್ದ ಜ್ಞಾನವೂ ಬೋಧವೂ ಅದ್ಭುತವಾಗಿದ್ದಿತು. ಮಾನವನ ಸಮಸ್ತ ವಿಚಾರವ್ಯಾಪ್ತಿಯೂ ಅವರಿಗೆ ಅವಗತವಾಗಿದ್ದಂತೆ ಇದ್ದಿತು.

ಅವರು ಎಂಟ್ರೆನ್ಸ್ ಪರೀಕ್ಷೆಯನ್ನು ಮುಗಿಸಿದ ಕೂಡಲೇ ಓದುವದನ್ನು ಬಿಟ್ಟು, ಯಾವದಾದರೂ ಉದ್ಯೋಗಕ್ಕೆ ಸೇರಿಕೊಂಡು, ಸಂಪಾದನೆಮಾಡಿ, ಕುಟುಂಬ ಭರಣಕ್ಕೆ ತಮಗೆ ಸಹಾಯವಾಗಬೇಕೆಂದು ಅವರ ತಂದೆಯವರು ಬಹಳ ಆಗ್ರಹ ಮಾಡಿದರೂ ಜಗ್ಗದೆ ಮುಂದೆ ಓದುವದಕ್ಕಾಗಿ ಅವರು ಲಾಹೋರಿಗೆ ಹೋಗಿ ಮಿಷನ್ ಕಾಲೇಜನ್ನು ಸೇರಿಕೊಂಡರು. ಇಲ್ಲಿ ಅವರು ಬಹಳ ತೀವ್ರವಾದ ಹಣಕಾಸಿನ ಮುಗ್ಗಟ್ಟಿಗೆ ಸಿಕ್ಕು ಅತಿಶಯ ಪ್ರತಿಕೂಲ ಪರಿಸ್ಥಿತಿಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಬೇಕಾಯಿತು. ಇದರಿಂದ ಅವರ ಆರೋಗ್ಯವು ಕೆಟ್ಟು ಆಗಾಗ ಕಾಹಿಲೆ ಬೀಳುತ್ತಿದ್ದರು. ಈ ಕಷ್ಟಗಳು ಸಾಲದೆಂದು ಅವರು ಹಿಂದೆ ಸಂಸ್ಕೃತವನ್ನು ಕಲಿತಿರಲಿಲ್ಲವಾದರೂ ಅದನ್ನು ಐಚ್ಛಿಕ ವಿಷಯಗಳಲ್ಲಿ ಒಂದನ್ನಾಗಿ ತೆಗೆದುಕೊಂಡರು. ಇಷ್ಟೆಲ್ಲಾ ಕಷ್ಟಗಳಿದ್ದರೂ ೧೮೯೦ರಲ್ಲಿ ಎಫ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರಥಮಸ್ಥಾನವನ್ನು ಪಡೆದರು. ಅವರು ಬಿ. ಎ. ಕ್ಲಾಸಿನಲ್ಲಿ ಓದುವ ವಿದ್ಯಾರ್ಥಿಯಾಗಿದ್ದಾಗಲೇ ಅವರ ಹೆಂಡತಿಯನ್ನೂ ಜೊತೆಗಿಟ್ಟುಕೊಂಡು ಜೀವನವನ್ನು ನಡೆಸಬೇಕಾಯಿತು. ಆಗ ಅವರಿಗೆ ಸಾಕಷ್ಟು ಸಂಪಾದನೆ ಇರಲಿಲ್ಲವಾದ್ದರಿಂದ, ಎರಡು ಹೊತ್ತು ಊಟಮಾಡುವದೇ ಕಷ್ಟವಾಗಿತ್ತು. ಅವರು ಜೀವನದ ಪ್ರತಿ ನಿಮಿಷವನ್ನೂ ತಮ್ಮ ಮಹದ್‌ವ್ಯಕ್ತಿತ್ವವನ್ನು ಬೆಳೆಸುವದಕ್ಕಾಗಿ ವಿನಿಯೋಗಿಸುತ್ತಿದ್ದರು. ಅತ್ಯಂತ ಸರಳ ಜೀವನವೂ ಉನ್ನತ ಭಾವನಾ–ವಿಚಾರಗಳೂ ಅವರ ಬಾಳಿನ ಗುಟ್ಟಾಗಿತ್ತು. ಅವರು ಆಧ್ಯಾತ್ಮಿಕ ಸಾಧನೆಗೂ ಕಾಲವನ್ನು ಉಪಯೋಗಿಸುತ್ತಿದ್ದುದರಿಂದ ಆ ವರ್ಷ ಬಿ. ಎ. ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳ ಒಟ್ಟಿನ ಅಂಕಗಳಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯಕ್ಕೇ ಅತ್ಯಂತ ಹೆಚ್ಚಿನ ಗುಣಾಂಕಗಳನ್ನು ಗಳಿಸಿದರೂ ಇಂಗ್ಲೀಷ್‌ನಲ್ಲಿ ಮೂರು ಗುಣಾಂಕಗಳು ಕಡಿಮೆ ಬಂದುದರಿಂದ ಅವರು ಉತ್ತೀರ್ಣರಾಗಲಿಲ್ಲ. ಮರುವರ್ಷ ೧೮೯೪ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ಪಂಜಾಬ್ ಯೂನಿವರ್ಸಿಟಿಗ-

ಪ್ರಥಮ ಸ್ಥಾನದಲ್ಲಿ ತೇರ್ಗಡೆಯಾದರು. ಆದುದರಿಂದ ಅವರಿಗೆ ತಿಂಗಳಿಗೆ 60 ರೂ. ಗಳು ವಿದ್ಯಾರ್ಥಿವೇತನವು ಬರುವಂತಾಯಿತು.

ಈಗ ಅವರ ೧೯॥ ವರ್ಷ ವಯಸ್ಸಿನಲ್ಲಿ ಲಾಹೋರಿನ ಗೌರ್ನಮೆಂಟ್ ಕಾಲೇಜಿನಲ್ಲಿ ಮ್ಯಾಥಮ್ಯಾಟಿಕ್ಸ್ (ಗಣಿತಶಾಸ್ತ್ರದ) ಎಂ. ಎ. ಕ್ಲಾಸಿಗೆ ಸೇರಿದರು. ೧೮೯೫ರಲ್ಲಿ ಅವರು ಮ್ಯಾಥಮ್ಯಾಟಿಕ್ಸ್ ಎಂ. ಎ., ಪದವಿಯನ್ನು ಬಹಳ ಹೆಚ್ಚಿನ ಗುಣಾಂಕಗಳಿಂದ ಪಡೆದರು. ಆ ವರ್ಷವೇ ಅವರಿಗೆ ಸಿಯಾಲ್‌ಕೋಟ್‌ನಲ್ಲಿ ಅಮೆರಿಕನ್ ಮಿಷನ್ ಹೈಸ್ಕೂಲಿನಲ್ಲಿ ಮಾಸ್ಟರ್ ಕೆಲಸವಾಯಿತು. ೧೮೯೬ರಲ್ಲಿ ಲಾಹೋರಿನ ಫೋರ್‌ಮನ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಅವರಿಗೆ ಮ್ಯಾಥಮ್ಯಾಟಿಕ್ಸ್ ಪ್ರೊಫೆಸರ್ ಕೆಲಸವಾಯಿತು. ಕೆಲವು ಕಾಲದ ಮೇಲೆ ಲಾಹೋರ್ ಓರಿಯಂಟಲ್ ಕಾಲೇಜಿನಲ್ಲಿ ಅವರು ರೀಡರ್ ಕೆಲಸವನ್ನು ಪಡೆದರು. ಆಗ ಅವರು ಉಪನಿಷತ್ತುಗಳನ್ನೂ ಬ್ರಹ್ಮಸೂತ್ರಗಳನ್ನೂ ಗೀತೆಯನ್ನೂ ಯೋಗವಾಸಿಷ್ಠವನ್ನೂ ಚೆನ್ನಾಗಿ ಅಧ್ಯಯನ ಮಾಡಿದರು. ಇದರಿಂದ ಅವರ ಹೃದಯವು ತೀವ್ರ ಪರಿವರ್ತನೆಯಾದುದರಿಂದ ಕೇವಲ ಪ್ರೊಫೆಸರ್ ಆಗಿಯೋ ಗೃಹಸ್ಥರಾಗಿಯೋ ಉಳಿಯುವದು ಸಾಧ್ಯವಾಗಲಿಲ್ಲ. ಅವರು ಪಾಶ್ಚಾತ್ಯ ತತ್ತ್ವಶಾಸ್ತ್ರವನ್ನೂ ಆಳವಾಗಿ ಅಭ್ಯಾಸ ಮಾಡಿ ಶುದ್ಧ ನೈತಿಕ-ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಿದ್ದರು.

ಅವರು ಕಾಲೇಜಿನಲ್ಲಿ ಓದುತ್ತಿರುವಾಗಲೇ ಹಫೀಸ್, ಮೌಲಾನಾ ರೂಂ, ಮಾಘ್ರಾಬಿ, ಉಮರ್ ಖಯಾಂ ಇವರೇ ಮೊದಲಾದ ಪರ್ಷಿಯಾದ ಸೂಫಿ ಮಹಾಂತರ ಸಾಹಿತ್ಯವನ್ನು ಅಭ್ಯಾಸಮಾಡಿದ್ದರು. ಪ್ರಾಚ್ಯ ಮತ್ತು ಪಾಶ್ಚಾತ್ತ್ಯ ತತ್ತ್ವಶಾಸ್ತ್ರಗಳ ಸಾಹಿತ್ಯ ಸ್ರೋತಸ್ಸಿನಲ್ಲಿ ಈಜಾಡಿದ್ದರು. ಉಪನಿಷತ್ತುಗಳನ್ನು ಅನೇಕಸಲ ಓದಿದ್ದರು. ಹಿಂದೀ, ಉರ್ದು, ಪಂಜಾಬೀ ಕವಿ-ಕಾವ್ಯಗಳ ಸೌಂದರ್ಯಕ್ಕೂ ಸವಿಗೂ ಮರುಳಾಗಿದ್ದರು.

ಅವಿರತವಾದ ಅಭ್ಯಾಸದ ತೀವ್ರ ಶ್ರಮವೂ ಪರಿಸ್ಥಿತಿಯ ಕಾಠಿಣ್ಯವೂ ಆರೋಗ್ಯವನ್ನು ಕೆಡಿಸಿದ್ದವು. ಅವರು ಎಂ. ಎ. ಪರೀಕ್ಷೆಯಲ್ಲಿ ಪದವೀಧರರಾಗಿ ಬಂದಾಗ, ಅವರು ಹೊತ್ತು ತಿರುಗುತ್ತಿದ್ದ ಎಲುಬಿನ ಗೂಡಿನಂತಿದ್ದ ದೇಹದಲ್ಲಿ ಪ್ರಾಣವು ಹೇಗೆ ಕಷ್ಟದಿಂದ ಸಿಕ್ಕಿಕೊಂಡಿರಬಹುದೆಂದು ಕಂಡವರೆಲ್ಲಾ ಆಶ್ಚರ್ಯ ಪಡುತ್ತಿದ್ದರು. ಅವರ ಮೂಳೆಗಳ ಮೇಲೆ ಮಾಂಸಖಂಡಗಳೇ ಇರಲಿಲ್ಲ. ಅವರ ದೊಡ್ಡ ತಲೆಯು ತೆಳುವಾದ ಮೂಳೆಯ ಕೊಕ್ಕರೆಯ ಕುತ್ತಿಗೆಯ ಮೇಲೆ ಓಲೆದಾಡು

ವಂತಿತ್ತು. ಧ್ವನಿಯು ಕರ್ಕಶವಾಗಿ ಮಾತಾಡುವದು ಕಷ್ಟವಾಗಿತ್ತು. ದೇಹದಿಂದ ಅಷ್ಟು ದುರ್ಬಲರಾಗಿದ್ದರು. ಆದರೆ ದೇಹವನ್ನು ಬಲಪಡಿಸಿಕೊಳ್ಳಬೇಕೆಂದು ದೃಢ ನಿರ್ಧಾರಮಾಡಿದರು. ಕ್ರಮಬದ್ಧವಾದ ಶಾರೀರಕ ವ್ಯಾಯಾಮದಿಂದಲೂ ಸ್ವಲ್ಪ ಹೆಚ್ಚು ಪ್ರಮಾಣದ ಕ್ಷೀರಸೇವನೆಯಿಂದಲೂ ಸ್ವಲ್ಪ ಕಾಲದಲ್ಲಿಯೇ ಆರೋಗ್ಯವನ್ನೂ ಬಲವನ್ನೂ ಸುಧಾರಿಸಿಕೊಂಡರು. ಹೊಸ ಹೊಸ ರೀತಿಯ ವ್ಯಾಯಾಮವನ್ನು ಕಂಡುಹಿಡಿಯುವದರಲ್ಲಿ ಸಂತೋಷಗೊಳ್ಳುತ್ತಿದ್ದರು. ಅಂದಿನಿಂದ ಅವರೆಂದೂ ಪ್ರತಿದಿನದ ವ್ಯಾಯಾಮವನ್ನು ಬಿಡುತ್ತಿರಲಿಲ್ಲ. ಅವರು ಕೊನೆಗೆ ಗಂಗೆಯಲ್ಲಿ ತೇಲಿ ಹೋಗುವದಕ್ಕೆ—ನಿರ್ಯಾಣಕ್ಕೆ—ಕೆಲವು ನಿಮಿಷಗಳ ಮುಂಚೆ ಸಹ ನದೀ ತೀರದಲ್ಲಿ ವ್ಯಾಯಾಮ ಮಾಡಿದ್ದರು. ಹೀಗೆ ತೆಳುವಾದ ಕೃಶ ಶರೀರದಿಂದ ಜಿಂಕೆಯಂತೆ ಅಥವಾ ಸಾರಗದಂತೆ ಚಪಲವೂ ವೇಗವೂ ಸತ್ತ್ವಯುತವೂ ಆದ ಬಲಿಷ್ಠದೇಹವನ್ನು ಸಂಪಾದಿಸಿದರು. ಅವರು ಮಹಾವೇಗಶಾಲಿಗಳಾದ ನಡಗೆಗಾರರಾಗಿದ್ದರು. ಅವರು ಸ್ವಾಮಿಗಳಾದ ಮೇಲೆ ಹಿಮಾಲಯದಲ್ಲಿ ದಿನಕ್ಕೆ ನಲವತ್ತು ಮೈಲಿಗಳ ಮೇಲೆ ನಡೆಯುತ್ತಿದ್ದರು. ಅವರು ಅಮೆರಿಕಾದಲ್ಲಿ ಅಲ್ಲಿಯ ಕೆಲವು ಸೈನಿಕರ ಜೊತೆಯಲ್ಲಿ ನಲವತ್ತು ಮೈಲಿಗಳ ಓಟದ ಪಂದ್ಯದಲ್ಲಿ ತಮಾಷೆಗಾಗಿ ಸ್ಪರ್ಧಿಸಿ, ಓಡಿ, ಜಯಶಾಲಿಯಾದ ಸೈನಿಕನಿಗಿಂತಲೂ ಎರಡು ಗಂಟೆಗಳ ಕಾಲ ಮುಂಚೆಯೇ ಬಂದು ಗುರಿಯನ್ನು ಸೇರಿದರು. ಅವರು ಒಮ್ಮೆ ಸ್ಯಾನ್ ಫ್ರ್ಯಾನ್ಸಿಸ್ಕೋ ನಗರದ ರಸ್ತೆಯಲ್ಲಿ ವೇಗವಾಗಿ ನಡೆದು ಹೋಗುತ್ತಿದ್ದಾಗ ಒಬ್ಬ ಅಮೆರಿಕನ್ ಎದುರಾಗಿ "ಏನು ? ನಿಮ್ಮದೇ ದೇಶವೆಂಬಂತೆ ನಡೆಯುತ್ತಿದ್ದೀರಿ ?" ಎಂದು ಟೀಕಿಸಲು, ಅವರು ನಗುನಗುತ್ತಾ "ಹೌದು ; ಸಂದೇಹವೇ ಇಲ್ಲ," ಎಂದು ಹೇಳಿ ನಡದೇ ಬಿಟ್ಟರು. ಮೊಣಕಾಲಿನ ಮೇಲೆ ಒಂದು ತುಂಡು ಬಟ್ಟೆಯನ್ನು ಸುತ್ತಿಕೊಂಡು ಕಂಬಳಿಯನ್ನು ಹೊದ್ದು ಗಂಗೋತ್ರಿ, ಜಮ್ನೋತ್ರಿ, ಬದರೀನಾಥ ಮೊದಲಾದ ಶಿಖರಗಳನ್ನು ಅವರು ಏರಿದರು. ಜಮ್ನೋತ್ರಿಯಿಂದ ಗಂಗೋತ್ರಿಗೆ ಹಿಮರಾಶಿಯಲ್ಲಿಯೂ ಹಿಮ ಪ್ರವಾಹದಲ್ಲಿಯೂ ದಾಟಿದರು. ಹಿಮಪರ್ವತಗಳಲ್ಲಿಯೇ ವಾಸಿಸಿ, ಗೊಂಡಾರಣ್ಯದ ಗುಹೆಗಳಲ್ಲಿಯೇ ಏಕಾಂಗಿಯಾಗಿ ಮಲಗುತ್ತಿದ್ದರು. ಗಿರಿಜನರು ಅವರನ್ನು—ಸ್ವಾಮಿಗಳನ್ನು—ದೇವರೆಂದೇ ನಂಬಿದ್ದರು, ಕರೆಯುತ್ತಿದ್ದರು. ಆ ಪರ್ವತಗಳಲ್ಲಿ ವೇಗವಾಗಿ ಹರಿಯುತ್ತಿದ್ದ ಮಳೆಗಾಲದ ಪ್ರವಾಹಗಳಲ್ಲಿ ಕೂಡ ಈ ದೇವರು ಆ ಗಿರಿಜನರ ದನಕರುಗಳನ್ನು ಈಚೆ ದಂಡೆಯಿಂದ ಆಚೆ ದಂಡೆಗೆ ದಾಟಿಸಿ ಕೊಡುತ್ತಿದ್ದರು. ಮಧ್ಯರಾತ್ರಿಯಲ್ಲಿ ಧ್ಯಾನಮಾಡುತ್ತಿದ್ದ ತಮ್ಮ ಆಸನವನ್ನು ಬಿಟ್ಟು, ಕತ್ತಲಿನ ಕಾನನದಲ್ಲಿ ಮೃತ್ಯುವನ್ನೂ ಭಯವನ್ನೂ, ಎದುರಿಸಿ, ಸ್ವಚ್ಛಂದವಾಗಿ ಅಲೆದಾಡುತ್ತಿದ್ದರು. ಲಾಹೋರಿನಲ್ಲಿ ಅವರು ವಿದ್ಯಾರ್ಥಿದಶೆಯಲ್ಲಿದ್ದಾಗ ಸಾಕಷ್ಟು

ಸರಿಯಾದ ಆಹಾರವಿಲ್ಲದೆ ಉಪವಾಸದಿಂದ ಅತ್ಯಂತ ಕೃಶ ಶರೀರಿಯಾಗಿದ್ದ ಅವರನ್ನು ನೋಡಿದ್ದ ಜನರು, ಈ ಹಿಮಾಲಯ ಪರ್ವತಗಳಲ್ಲಿ ಇಷ್ಟು ನಿರ್ಭಯವಾಗಿಯೂ ಧೈರ್ಯವಾಗಿಯೂ ನಿರ್ಲಕ್ಷ್ಯವಾಗಿಯೂ ಆವೇಶ–ರಭಸ ಪೂರ್ಣವಾಗಿಯೂ ಇಷ್ಟು ಬಲಿಷ್ಠವಾಗಿಯೂ ಗುಲಾಬಿಯ ಬಣ್ಣದಿಂದ ತೇಜಸ್ವಿಯಾಗಿಯೂ ಇದ್ದ ಈ ಕಾಡುಮನುಷ್ಯ ರಾಮರಲ್ಲಿ ಅವರ ಬಳಲಿ–ಕಳೆಗುಂದಿ–ಬಿಳಿಚಿಕೊಂಡ ಆ ಹಳೆಯ ಬಡಕಲು ಮುಖವನ್ನು ಗುರುತಿಸುವದು ಸಾಧ್ಯವೇ ಇರಲಿಲ್ಲ. ಅವರ ಈಗಿನ ಮುಖವು ತುಂಬಿತ್ತು; ಅಂದವಾಗಿ ಕಳೆಗಟ್ಟಿತ್ತು, ಉನ್ಮನೀ ಭಾವದ ಆನಂದದ ಅಮಲಿನಿಂದ ಕಣ್ಣುಗಳು ಅರ್ಧನಿಮೀಲಿತವಾಗಿರುತ್ತಿದ್ದವು. ಈ ಎಲ್ಲಾ ಪುಷ್ಕಲ ದೈಹಿಕ–ಆಧ್ಯಾತ್ಮಿಕ ಶಕ್ತಿಯ ಸಮೃದ್ಧಿಯಿಂದ ಸ್ವಾಮಿರಾಮರು ತಮ್ಮ ಜೀವಮಾನದ ಮೇರುಕೃತಿಯೆಂಬ ತಮ್ಮ ದಿವ್ಯವಾದ ವ್ಯಕ್ತಿತ್ವವನ್ನೇ ಲೋಕಕ್ಕೆ ಅರ್ಪಿಸಿದರು.

ಸ್ವಾಮಿ ರಾಮರ ವ್ಯಕ್ತಿತ್ವವು ಸ್ಫೋಟಕವಾಗಿದ್ದಿತೆಂದು ಹೇಳಬಹುದು. ಅವರು ಏನೂ ಹೇಳುವದಕ್ಕೆ ಇಲ್ಲವೇನೋ ಎಂಬಂತೆ ಎಷ್ಟೋ ತಿಂಗಳು ಮೌನವಾಗಿ ನಿಶ್ಶಬ್ದ ವಾಗಿರ ತ್ತಿದ್ದರು. ಆನಂದದಲ್ಲಿ ಮುಳುಗಿ ಕರಗಿರುತ್ತಿದ್ದರು. ಅನಂತರ, ಅವರು ಒಮ್ಮೆಗೇ ಜ್ವಾಲಾಮುಖಿಯಂತೆ ಬಗೆಯೊಡೆದು ಭಾವಾವೇಶದಿಂದ ತಮ್ಮ ವಿಚಾರ ಗಳನ್ನು ಉಚ್ಛೃಂಖಲವಾಗಿ ಹರಿಬಿಡುತ್ತಿದ್ದರು ಅಥವಾ ವ್ಯಕ್ತಮಾಡುತ್ತಿದ್ದರು. ಅವರು ಯಾವಾಗ ಮಾತನಾಡಿದರೂ ಬರೆದರೂ ಹೊಸದಾಗಿಯೂ ಉಲ್ಲಾಸಕರ ವಾಗಿಯೂ ಇರುತ್ತಿದ್ದಿತು. ಅವರು ಜನರ ಮಧ್ಯದಲ್ಲಿ ಹೆಚ್ಚುಕಾಲ ಇರಲು ಸಾಧ್ಯವಿಲ್ಲವೆಂಬಂತೆ ತೋರುತ್ತಿತ್ತು. ಜನರ ಸಹವಾಸದಿಂದ ಏನೋ ನಷ್ಟವಾದಂತೆ, ಆತ್ಮವು ಬಳಲಿದಂತೆ ಅನಿಸುತ್ತಿದ್ದುದರಿಂದ, ಅವರು ಅದನ್ನು ಪುನಃ ತುಂಬಿಕೊಳ್ಳು ವದಕ್ಕೆ ಮತ್ತೆ ಮತ್ತೆ ಪರ್ವತಾರಣ್ಯಗಳ ಏಕಾಂತಕ್ಕೆ ಓಡಿಹೋಗುತ್ತಿದ್ದರು. ಅಲ್ಲಿ ಅವರು ಹರಿಯುವ ಜಲಝರಿಗಳೊಡನೆಯೂ ವಿಶಾಲ ವೈಭವವಾದ ಅನಂತಾಕಾಶ ದೊಡನೆಯೂ ಶಾಂತವಾದ ತಾದಾತ್ಮ್ಯವನ್ನು ಅನುಭವಿಸಿ, ಬಿಸಿಲಿನಲ್ಲಿ ಬಂಡೆಗಳ ಮೇಲೆ ದೇಹವನ್ನು ಕೆಡವಿ, ಕಣ್ಣುಮುಚ್ಚಿಕೊಂಡು ಗಂಟೆಗಟ್ಟಲೆ ಮಲಗಿರು ತ್ತಿದ್ದರು.

ಅತಿಶಯ ಸುಸಂಸ್ಕೃತವೂ ವಿಕಸಿತವೂ ಆದ ಸ್ವಾಮಿ ರಾಮರ ರಾಗ–ಭಾವ ಗಳು (Emotion), ಅವರ ವ್ಯಕ್ತಿತ್ವದ ಇನ್ನೊಂದು ಆಕರ್ಷಕವಾದ ವೈಲಕ್ಷಣ್ಯ ವಾಗಿತ್ತು. ಗಭೀರವಾದ ನಿಷ್ಕಪಟ ಸರಳ ಭಾವವು ಅವರ ನಯನಗಳಿಂದ ಹೇರಳ

ವಾಗಿ ವ್ಯಕ್ತಿಯಾಗುತ್ತಿರುವದೋ ಎನ್ನುವಂತಿತ್ತು. ಅವರ ಮುಖಭಾವದ, ಪ್ರೀತಿಯ ನೋಟದ, ನಡೆನುಡಿಗಳ ಮಾಧುರ್ಯಕ್ಕೆ ಯಾರಾದರೂ ಮರುಳಾಗದಿರುವದೇ ಸಾಧ್ಯವಿರಲಿಲ್ಲ. ಮಹಮ್ಮದೀಯರಾಗಲೀ ಹಿಂದೂಗಳಾಗಲೀ ಅವರನ್ನು ಒಂದೇ ಬಗೆಯಿಂದ ಪ್ರೀತಿಸುತ್ತಿದ್ದರು. ಬೇರೆ ಬೇರೆ ಜನಾಂಗಗಳ ಜನರು ಸ್ವಾಮಿ ರಾಮರಲ್ಲಿ ತಮ್ಮ ಕುಟುಂಬ ಸಂಬಂಧವಾದ ಏನನ್ನೋ ಕಂಡು ಪ್ರೇಮಿಸುತ್ತಿದ್ದರು. ಅಮೆರಿಕನ್‌ರು ಅವರನ್ನು ಅಮೆರಿಕನ್ ಎಂದೇ ಜಪಾನೀಯರು ಅವರನ್ನು ಜಪಾನೀಯರೆಂದೇ ಪರ್ಷಿಯನ್‌ರು ಅವರನ್ನು ಪರ್ಷಿಯನ್ ಎಂದೇ ಭಾವಿಸುತ್ತಿದ್ದರು.

ಸ್ವಾಮಿ ರಾಮರ ದರ್ಶನವೆಂದರೆ, ಅತ್ಯುಚ್ಚವಾದ ಹೊಸಭಾವನೆಗಳಿಂದಲೂ ಹೊಸ ಆದರ್ಶಗಳಿಂದಲೂ ಹೊಸ ಶಕ್ತಿಗಳಿಂದಲೂ ಹೊಸ ದೃಷ್ಟಿಯಿಂದಲೂ ಹೊಸದರ್ಶನಗಳಿಂದಲೂ ಸ್ಫೂರ್ತಿ ಪಡೆಯುವದೇ ಆಗಿದ್ದಿತು.

ಅವರ ಸಾನ್ನಿಧ್ಯದ ಮೋಹಕತೆಗೂ ಮೆಚ್ಚುಗೆಗೂ ಕಾರಣವಾದ ಇನ್ನೊಂದು ವಿಶೇಷವೆಂದರೆ, ಅವರ ಶಿಖರೋಪಮವಾದ ಅತ್ಯುಚ್ಚ ಬುದ್ಧಿಶಕ್ತಿ ಮತ್ತು ಧೀರವಾದ ವಿಚಾರ ಸ್ವಾತಂತ್ರ್ಯ. ಅವರು ಏನನ್ನು ಬೋಧಿಸಿದರೂ ಅದು ಅವರ ಸಾಧನೆ ಯಲ್ಲಿಯೂ ಜೀವನದಲ್ಲಿಯೂ ಅನುಭವ ಪಡೆದದ್ದೇ ಆಗಿದ್ದಿತು. ಸತ್ಯವನ್ನು ಕಂಡು ಹಿಡಿಯುವದಕ್ಕೆ ಭೌತಿಕವಿಜ್ಞಾನದಲ್ಲಿ ಆಧಾರ ಪ್ರಮಾಣಗಳ (Authority) ಅಧಿಕಾರ ತೂಕವು ಬಹಳ ಕಡಿಮೆಯಾಗಿರುವಂತೆ ವ್ಯಕ್ತಿ ಜೀವನದ ಅಂತರಂಗದ ಧರ್ಮ ದಲ್ಲಿಯೂ ತತ್ತ್ವಶೋಧನೆಯಲ್ಲಿಯೂ ಅವುಗಳ ಕಾಟವು ಅತ್ಯಲ್ಪವಾಗಿರಬೇಕು. ಅಥವಾ ಇಲ್ಲವಾಗಬೇಕು. ಪ್ರತಿಯೊಬ್ಬರೂ ಅವರವರ ಜೀವನದ ಗೆಲವು-ಸೋಲು ಗಳ ಮೂಲಕ ದೇವರಲ್ಲಿಗೆ–ಸತ್ಯದೆಡೆಗೆ–ಹೋಗಬೇಕು. ಜೀವನವೇ ಅತ್ಯಂತ ಮಹತ್ವಾದ ದಿವ್ಯದರ್ಶನ–ದೈವಿಕವಾದ ಜ್ಞಾನ-ಪ್ರಕಾಶನ.

ತೀರ್ಥರಾಮರು ತಮ್ಮ ಅತ್ಯುನ್ನತ ಪಾರಮಾರ್ಥಿಕ ಧ್ಯೇಯಸಾಧನೆಗಾಗಿ ಪೂರ್ಣಸಿದ್ಧತೆಮಾಡಿಕೊಂಡು, ೧೯೦೦ ರ ಜುಲೈ ತಿಂಗಳಲ್ಲಿ ತಮ್ಮ ಉದ್ಯೋಗವನ್ನು ತ್ಯಾಗಮಾಡಿ, ಹೆಂಡತಿಮಕ್ಕಳನ್ನೂ ಕರೆದುಕೊಂಡು ಕೆಲವು ಸಂಗಡಿಗರೊಡನೆ ಹಿಮಾಲಯದ ಅರಣ್ಯಕ್ಕೆ ಹೋದರು. ೧೯೦೧ ರಲ್ಲಿ ಗೋಸಾಯಿ ತೀರ್ಥರಾಮರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಸ್ವಾಮಿ ರಾಮತೀರ್ಥರಾದರು. ಅವರು ಹಿಮಾಲಯದಲ್ಲಿ ಗಂಗೋತ್ರಿ, ಯಮುನೋತ್ರಿ, ಕೇದಾರನಾಥ, ಬದರೀನಾರಾಯಣ,

ಮೊದಲಾದ ಅನೇಕ ಕ್ಷೇತ್ರಗಳನ್ನು ಸಂದರ್ಶನಮಾಡಿ, ಹಿಮಾಚಲದಲ್ಲಿ ದೀರ್ಘಕಾಲ ತಪಸ್ಸು ಮಾಡಿದರು.

ಎರಡು ವರ್ಷಗಳು ಹಿಮಾಲಯದ ತಪಸ್ಸಿನಲ್ಲಿ ಸ್ವಾಮಿ ರಾಮರು ಅನುಭವಿಸಿದ ಆನಂದವನ್ನು ಬೀರುವದಕ್ಕಾಗಿ ಅಧ್ಯಾತ್ಮಪ್ರಚಾರಮಾಡುವ ಉತ್ಸಾಹದಿಂದ ಉರಿಯುತ್ತಾ ಕೆಳಗಿಳಿದು ಮೈದಾನಕ್ಕೆ ಬಂದರು. ೨೮-೮-೧೯೦೨ ರಲ್ಲಿ ಅವರು ತಮ್ಮ ಶಿಷ್ಯರಾದ ಸ್ವಾಮಿ ನಾರಾಯಣರೊಂದಿಗೆ ಕಲ್ಕತ್ತಾದಿಂದ ಹಡಗಿನಲ್ಲಿ ಜಪಾನಿಗೆ ಹೋದರು. ಅಲ್ಲಿ ಅವರು ಹದಿನೈದು ದಿನಗಳು ಮಾತ್ರ ಇದ್ದರು. ಜಪಾನ್ ಜನರ ಸಭೆಯಲ್ಲಿ ಮಾತನಾಡುವದಕ್ಕಾಗಿ ಅವರು ಎರಡುಸಲ ಆಹ್ವಾನಿತರಾದರು. ಟೋಕಿಯೋದ ಒಂದು ಕ್ರೈಸ್ತ ವೃತ್ತಪತ್ರಿಕೆಯು ಅವರನ್ನು " ಉತ್ಸಾಹಶಾಲಿಗಳಾದ ವೇದಾಂತ ತತ್ತ್ವಪ್ರಸಾರಕರು " ಎಂದು ಉನ್ನತಭಾವದಲ್ಲಿ ಅತಿಶಯ ಮೆಚ್ಚುಗೆಯಿಂದ ಪ್ರಚುರ ಪಡಿಸಿತು.

ಸ್ವಾಮಿ ರಾಮರು ಜಪಾನಿನಲ್ಲಿ ಅನೇಕ ಉಪನ್ಯಾಸಗಳನ್ನು ಮಾಡಿ ಅಮೆರಿಕಾಕ್ಕೆ ಹೋದರು. ಅಲ್ಲಿ ಅವರು ಒಂದೂವರೆ ವರ್ಷಗಳಿದ್ದು ವೇದಾಂತದ ಮೇಲೂ ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳ ಮೇಲೂ ಹಲವು ಉಪನ್ಯಾಸಗಳನ್ನು ಮಾಡಿದರು. ಅವರು ಅಮೆರಿಕನ್‌ರಿಗೆ ಅತ್ಯಂತ ಪ್ರಿಯರಾದರು. ಅಲ್ಲಿಯೂ ಅವರು ಬಹಳಕಾಲ ಏಕಾಂತದಲ್ಲಿಯೇ ಇರುತ್ತಿದ್ದರು. ಅಲ್ಲಿ ಅವರು ಸರಳವಾದ ಜೀವನ ವನ್ನು ನಡೆಸುತ್ತಿದ್ದರು ; ಅಡವಿಯಿಂದ ತಮ್ಮ ಕಟ್ಟಿಗೆಯನ್ನು ತಾವೇ ತಲೆಯ ಮೇಲೆ ಹೊತ್ತು ತರುತ್ತಿದ್ದರು. ಅವರ ಕೃತಿಯ ಮತ್ತು ಜೀವನದ ಮೇಲೆ ಶ್ಲಾಘನೆಯ ಲೇಖನಗಳು ಪ್ರಕಟವಾಗಿದ್ದ ಅನೇಕ ವೃತ್ತ ಪತ್ರಿಕೆಗಳ ಭಾಗಗಳನ್ನು ಸ್ಯಾಕ್ರಮೆಂಟೋ ನದಿಯಲ್ಲಿ ತೇಲಿಬಿಟ್ಟ ಅವರ ನಿರ್ಲಕ್ಷ್ಯತೆಗಾಗಿ ಕ್ಯಾಲಿಫೋರ್ನಿಯಾದ ಜನರು ಬೆರ ಗಾದರು. ಅವರು ಅಮೆರಿಕನ್‌ರ ಮೇಲೆ ಶಾಶ್ವತವಾದ ಪರಿಣಾಮವನ್ನುಂಟು ಮಾಡಿದರು. ಅನೇಕ ಅಮೆರಿಕನ್‌ರು ಅವರನ್ನು ಜೀವಂತ ಕ್ರಿಸ್ತನೆಂದು ತಿಳಿದಿದ್ದರು. ಅವರನ್ನು ಅನೇಕ ಸ್ತ್ರೀಪುರುಷರೂ ಮತ್ತು ಆಗಿನ ಅಮೆರಿಕನ್ ಪ್ರೆಸಿಡೆಂಟ್ ಸಹ ದರ್ಶನ ಮಾಡಿದರು.

ಇಂಡಿಯಾಕ್ಕೆ ಹಿಂದಿರುಗುವಾಗ ಅವರು ಈಜಿಪ್ಟಿಗೆ ಹೋಗಿ ಅಲ್ಲಿ ಒಂದು ಅತ್ಯಂತ ದೊಡ್ಡದಾದ ಮಸೀದಿಯಲ್ಲಿ ಮಹಮ್ಮದೀಯ ಸಭಿಕರ ಮುಂದೆ

ಪರ್ಷಿಯನ್ ಭಾಷೆಯಲ್ಲಿ ಉಪನ್ಯಾಸ ಮಾಡಿದರು. ಪರದೇಶಗಳಲ್ಲಿ ಎರಡೂವರೆ ವರ್ಷಗಳು ಪ್ರವಾಸಮಾಡಿ ಅವರು ೧೯೦೪ ರಲ್ಲಿ ಇಂಡಿಯಾಕ್ಕೆ ಹಿಂದಿರುಗಿದರು.

ಇಂಡಿಯಾದಲ್ಲಿಯೂ ಅನೇಕ ಸ್ಥಳಗಳಲ್ಲಿ ಅವರು ಸಂಚಾರಮಾಡಿ ವ್ಯವಹಾರ ಯೋಗ್ಯ (Practical) ವೇದಾಂತವನ್ನು ಪ್ರಸಾರ ಮಾಡಿದರು. ೧೯೦೫ ರಲ್ಲಿ ಅವರು ಹೃಷೀಕೇಶದಲ್ಲಿ ಕೇವಲ ಏಕಾಂತವನ್ನು ಸೇರಿದರು. ೧,೯೦೬ ರಲ್ಲಿ ಟೆಹರಿಯಿಂದ ೬೦ ಮೈಲಿಗಳ ದೂರದಲ್ಲಿ ೧೨,೦೯೦ ಅಡಿಗಳ ಎತ್ತರದಲ್ಲಿ ವಸಿಷ್ಠಾಶ್ರಮದಲ್ಲಿ ವಾಸಮಾಡಲು ಪ್ರಾರಂಭಿಸಿದರು.

ಅವರು ಒಮ್ಮೆ ಹರಿದ್ವಾರದಲ್ಲಿ ಸುಮಾರು ಒಂದು ತಿಂಗಳು ಅಸ್ವಸ್ಥರಾಗಿ ಮಲಗಿದ್ದಾಗ ಚಿರಸ್ಮರಣೀಯವಾದ ಒಂದು ಸ್ವಾರಸ್ಯವಾದ ಘಟನೆ ನಡೆಯಿತು. ಒಂದು ದಿನ, ಅನಿರೀಕ್ಷಿತವಾಗಿ, ಅವರ ಪೂರ್ವಾಶ್ರಮದ ಪತ್ನಿಯು ತಮ್ಮ ಆರು ವರ್ಷಕ್ಕೂ ಕಡಿಮೆ ವಯಸ್ಸಿನ ಚಿಕ್ಕ ಮಗನನ್ನೂ ಅವರ (ಸ್ವಾಮಿಗಳ) ಮಲ ತಾಯಿಯನ್ನೂ ಕರೆದುಕೊಂಡು, ಸ್ವಾಮಿಗಳು ಅಮೆರಿಕಾದಿಂದ ಹಿಂದಿರುಗಿದ ತರುಣದಲ್ಲಿ, ಅವರ ದರ್ಶನಕ್ಕಾಗಿ, ಹೆಚ್ಚಿನ ಖರ್ಚಿನಿಂದ, ದೂರ ಪಂಜಾಬಿನಿಂದ ಬಂದರು. ಮೊದಲೇ ಬಹಳ ಬಡ ಕುಟುಂಬ. ಒಂಟಿಯಾಗಿ ಸಂಪಾದಿಸುತ್ತಿದ್ದ ಸಮರ್ಥರಾದ ಪ್ರೊಫೆಸರ್ ತೀರ್ಥರಾಮರು ತಮ್ಮೊಳಗೆ ತುಂಬಿ ತುಳುಕುತ್ತಿದ್ದ ಉಜ್ಜ್ವಲವಾದ ಜ್ಞಾನವೈರಾಗ್ಯಗಳನ್ನು ತಡೆದುಕೊಳ್ಳಲಾರದೆ ಹೆಂಡತಿ-ಮಕ್ಕಳನ್ನು ತ್ಯಾಗಮಾಡಿ ಸಂನ್ಯಾಸ ತೆಗದುಕೊಂಡು ಸ್ವಾಮಿರಾಮತೀರ್ಥರಾಗಿದ್ದರು. ಆಗ ಇಡೀ ಕುಟುಂಬವನ್ನು ದೇವರ ಕರುಣೆಗೆ ಒಪ್ಪಸಿದಂತಾಯಿತು. ಯಾವ ಬಗೆಯ ಆಶ್ರಯವೂ ಆಸ್ತಿಯೂ ದುಡಿಮೆಯೂ ಇಲ್ಲದೆ ಅವರು ಭಕ್ತರ ಸಹಾಯದಿಂದ ಬದುಕಬೇಕಾಗಿತ್ತು. ಅಂಥಾ ಪರಿಸ್ಥಿತಿಯಲ್ಲಿ ಅವರು ಪ್ರೀತಿಯಿಂದ ಸ್ವಾಮಿಗಳ ಸಂದರ್ಶನಕ್ಕಾಗಿ ಅಷ್ಟು ದೂರ ಎಷ್ಟೋ ಖರ್ಚುಮಾಡಿಕೊಂಡು ಬರುವದೆಂದರೆ ಮಹಾ ಸಾಹಸವೇ ಆಗಿತ್ತು. ಸ್ವಾಮಿಗಳನ್ನು ನೋಡದೆ ಬಹಳ ಕಾಲವಾಗಿದ್ದುದರಿಂದ, ಅವರ ವಿಯೋಗದಿಂದ ಉಂಟಾದ ತಮ್ಮ ಕೇವಲ ಮಾನಸಿಕ ಯಾತನೆಯನ್ನು ಕಳೆದುಕೊಳ್ಳುವುದಕ್ಕಾಗಿ ಅವರ ಕುಟುಂಬದವರು ಪ್ರಾಯಶಃ ಸಾಲಮಾಡಿಕೊಂಡೋ ಪ್ರಯಾಣದ ವೆಚ್ಚಕ್ಕಾಗಿ ಕಷ್ಟದಿಂದ ಬೇಡಿಕೊಂಡೋ ಹರಿದ್ವಾರಕ್ಕೆ ಬಂದಿದ್ದರು. ಸ್ವಾಮಿಗಳ ಸಮೀಪದಲ್ಲಿ ಶುಶ್ರೂಷೆ ಮಾಡುತ್ತಿದ್ದ ಪೂರಣಸಿಂಗರು ಆ ದಿನ ದರ್ಶನಾರ್ಥಿಗಳು ಬಂದಿರುವದನ್ನು ತಿಳಿದು ಸ್ವಾಮಿಗಳಲ್ಲಿ ಹೋಗಿ ಅರಿಕೆಮಾಡಿದರು. ಅವರಿಗೆ ಬೇನೆಯು ಗುಣವಾಗಿದ್ದರೂ ಬಹಳ ಬಳಲಿಕೆಯೂ ನಿಶ್ಶಕ್ತಿಯೂ

ಇದ್ದುದರಿಂದ ಅವರು ಹಾಸಿಗೆಯಲ್ಲಿಯೇ ಮಲಗಿದ್ದರು. ಅವರ ಕೆನ್ನೆಗಳು ಹಿಂದಿನಂತೆ ಕಳೆಗಟ್ಟುತ್ತಿದ್ದವು ; ಅವರ ಆಳವಾದ ಕಪ್ಪು ಕಣ್ಣುಗಳು ಹೊಳೆಯಲು ತೊಡಗಿದ್ದವು. ಅವರು ಕನ್ನಡಕವನ್ನು ತರಿಸಿ, ತಮ್ಮ ಕಾಷಾಯ ವಸ್ತ್ರದಿಂದ ಆ ಗಾಜುಗಳನ್ನು ಚೆನ್ನಾಗಿ ಒರೆಸಿ ತಿಕ್ಕಿ ಹಾಕಿಕೊಂಡರು. ಅವರ ಹಿಂದಿನ ಹೆಂಡತಿಯೂ ತಾಯಿಯೂ ಚಿಕ್ಕ ಮಗುವೂ ಬಂದಿರುವದನ್ನು ಹೇಳಿದ್ದುದರಿಂದ, ಏನು ಉತ್ತರ ಹೇಳಬೇಕೆಂದು ಅವರು ಅಷ್ಟು ಹೊತ್ತೂ ಯೋಚಿಸುತ್ತಿದ್ದಂತೆ ತೋರಿತು.

ಆಗ ಅವರು “ ಪೂರಣಜೀ ! ನಿನ್ನಲ್ಲಿ ಏನಾದರೂ ಹಣವಿದೆಯೆ ? ” ಎಂದು ಕೇಳಿದರು. ಅದಕ್ಕೆ ಪೂರಣಜೀ “ ಹೌದು ಸ್ವಾಮಿ ! ಎಷ್ಟು ಬೇಕೆಂದು ಹೇಳಿದರೆ ಕೊಡಬಹುದು. ” ಎಂದರು.

ಸ್ವಾಮಿಜೀಃ “ ಪೂರಣಜೀ ! ಅವರನ್ನು ರೈಲ್ವೇಸ್ಟೇಷನ್ನಿಗೆ ಕರೆದುಕೊಂಡು ಹೋಗಿ, ಪಂಜಾಬಿಗೆ ಹಿಂದಿರುಗುವದಕ್ಕಾಗಿ ಟಿಕೆಟ್ ಕೊಡಿಸು. ನನ್ನ ಗಂಗೆಯಲ್ಲಿ ಅವರು ಸ್ನಾನಮಾಡಲಿ ; ಹಿಂದಿರುಗಿ ಹೋಗಲಿ. ಅವರು ನನ್ನನ್ನು ನೋಡಲು ಸಾಧ್ಯವಿಲ್ಲ, ” ಎಂದು ಕಠಿಣವಾಗಿ ದಯಾದಾಕ್ಷಿಣ್ಯಗಳಿಲ್ಲದೆ ಹೇಳಿದರು. ಪೂರಣ ಸಿಂಗರು ಆ ಮುಂದಿನ ಪ್ರಸಂಗವನ್ನು ಹೀಗೆ ಹೇಳಿದ್ದಾರೆ. “ ನಾನು ಆಗ ಒಂದು ತಿಂಗಳಿಂದ, ಅವರಲ್ಲಿ ನನಗಿದ್ದ ಸಣ್ಣದೊಂದು ಮೂಕ ಪಶುಪ್ರೇಮದಿಂದ ಅವರ ಜೊತೆಗಿದ್ದೆ. ಆದರೆ ಹೃದಯಶೂನ್ಯವಾದ ಅವರ ಆ ಉತ್ತರವನ್ನು ಕೇಳಿದೊಡನೆಯೇ ನನ್ನ ಹೃದಯದಲ್ಲಿ ಬೆಂಕಿ ಹತ್ತಿಕೊಂಡಂತೆ ಆಗಿ ನನ್ನಲ್ಲಿದ್ದ ಎಲ್ಲಾ ಶಾಂತಿಯೂ ಒಮ್ಮೆಗೇ ಸ್ಫೋಟವಾದಂತೆ ಆಯಿತು. ನಾನು ಕೂಡಲೇ ಬೆಂಕಿ ಕಾರುವಂತೆ ‘ ನಮಸ್ತೇ ! ಸ್ವಾಮಿಜೀ ! ನಾನೂ ಹೊರಡುತ್ತೇನೆ ; ನಿಮ್ಮನ್ನು ನಾನು ಪುನಃ ಎಂದೆಂದೂ ನೋಡುವದಿಲ್ಲ. ಆಹಾ ! ನೀವು ! ಆ ಬಡ ಕುಟುಂಬಕ್ಕೆ ಪಾಪ ! ಮೂಲಾಧಾರವೂ ಮುಖ್ಯಾಶ್ರಯವೂ ಆಗಿರಬೇಕಾಗಿದ್ದ ನೀವು, ನಿರ್ದಯವಾಗಿ ಕಿತ್ತು ಹರಿದುಕೊಂಡು ಬಂದಿರಿ. ಪಾಪ ! ಅವರು ಅಷ್ಟು ದೂರದಿಂದ ತಮ್ಮ ಪುಡಿಕಾಸನ್ನು ತಾವು ಖರ್ಚುಮಾಡಿಕೊಂಡು ಬಂದಿದ್ದಾರೆ. ಅಂಥವರು ನಿಮ್ಮ ಲಕ್ಷ್ಯದಲ್ಲಿಯೇ ಇಲ್ಲ. ನೀವು ಯಾವೂರು ದಾಸರೆಂದೂ ನೀವವರನ್ನು ಕೇಳುವಂತಿಲ್ಲ. ಆದರೆ ನಾವು, ಮೂಢ ಬಾಲಕರು, ಏನೂ ಅರಿಯದೆ, ನಿಮ್ಮ ಸುತ್ತಲೂ ಆಟವಾಡಿಕೊಂಡು, ನೀವು ಮಹಾತ್ಮರೆಂದೂ ವಿಶ್ವಪ್ರೇಮಿಗಳೆಂದೂ ವಿಶ್ವಕುಟುಂಬಿಗಳೆಂದೂ ನೀವೇ ದೇವರೆಂದೂ ಹೊಗಳಿ ಹೊಗಳಿ, ನಿಮ್ಮನ್ನು ವಿನೋದಪಡಿಸುತ್ತಿರುವ ಅಲ್ಪರಾದ ನಾವು ನಿಮಗೆ ಹೆಚ್ಚಿನವರು. ನೀವು ನಮಗೆ

ಆಶ್ರಯವನ್ನು ಕೊಡಬಹುದು ; ಆದರೆ ತಮ್ಮ ಪೂಜ್ಯ ಸ್ವಾಮಿಗಳ ಕೇವಲ ದರ್ಶನಾರ್ಥಿಗಳಾಗಿ ಬಂದಿರುವ ಆ ಪ್ರೇಮಳ ಯಾತ್ರಿಕರನ್ನು ನೀವು ಕಡೆಗಣ್ಣಿನಿಂದಲೂ ನೋಡಬಾರದು ; ಅವರ ಯೋಗಕ್ಷೇಮವನ್ನಂತು ವಿಚಾರಿಸಲೇ ಬಾರದು. ನಿಮ್ಮ ವಿಶ್ವಪ್ರೇಮವೂ ವ್ಯವಹಾರ ವೇದಾಂತವೂ (Practical Vedanta) ಇಷ್ಟು ಅಗಾಧವಾದುದು ; ಅವರೇನೂ ನಿಮ್ಮ ಮೇಲೆ ಪುನಃ ತಮ್ಮ ಹಿಂದಿನ ಹಕ್ಕನ್ನು ಸ್ಥಾಪಿಸುವದಕ್ಕೆ ಬಂದಿಲ್ಲ. ಅಂಥವರಿಗೆ ನೀವು ದರ್ಶನವನ್ನು ಕೂಡ ಕೊಡುವದಿಲ್ಲ ವೆಂದರೆ ಅಷ್ಟು ಕ್ರೂರವೂ ಘೋರವೂ ಬೇರೆ ಯಾವದೂ ಇರಲಾರದು. ನಿಮ್ಮ ದರ್ಶನ ಮಾತ್ರವೋ, ನಿಮ್ಮ ಒಂದು ಮುಗುಳು ನಗೆಯೋ, ನಿಮ್ಮ ಕೃಪಾದೃಷ್ಟಿಯೋ ಇಷ್ಟೇ ಅವರಿಗೆ ಬೇಕಾಗಿರುವಾಗ, ಸಾಕಾಗಿರುವಾಗ, ಅಷ್ಟು ಮಾತ್ರಕ್ಕೂ ಅವಕಾಶ ಕೊಡದೆ ಹೃದಯಶೂನ್ಯರಂತೆ ಕಠೋರವಾಗಿ ವರ್ತಿಸುವ, ಯಾವ ವ್ಯಕ್ತಿ ಸಂಬಂಧವನ್ನೂ ಗೌರವಿಸದಿರುವ–ಇಂಥಾ–ಮಹಾತ್ಮರ ಜೊತೆಯಲ್ಲಿರುವದು ನನ್ನಿಂದ ಸಾಧ್ಯವಿಲ್ಲ. ನನ್ನ ಪ್ರೇಮದ ಸ್ವಾಮಿಜೀ ! ಇದರಲ್ಲಿ ತಪ್ಪಿದ್ದರೆ ಕ್ಷಮಿಸಬೇಕು.' ಎಂದು ಆ ಕೋಣೆಯಿಂದ ಬಿರ್ರನೆ ಹೊರಟು ಹೊರಗೆ ಹೋಗಲು ಬಾಗಿಲನ್ನು ತೆರೆಯುವದರಲ್ಲಿದ್ದೆ ! ಅಷ್ಟರಲ್ಲಿ ಆಶ್ಚರ್ಯವೆನಿಸುವಂತೆ ಸ್ವಾಮಿಗಳು ಗೊಳ್ಳನೆ ನಕ್ಕು ನನ್ನನ್ನು ವಾಪಸು ಕರೆದು, 'ಒಳ್ಳೆಯದು ! ಪೂರಣಜಿ ! ಅವರನ್ನು ಒಳಗೆ ಕರೆದುಕೊಂಡು ಬಾ ' ಎಂದು. ಹೇಳಿದರು.

"ಅನಿರೀಕ್ಷಿತವಾದ ಅವರ ಆ ಉಲ್ಲಾಸಪೂರಿತವಾದ ಔದಾರ್ಯದಿಂದ ನಿಷ್ಕಾರಣವಾದ ನನ್ನ ಕೋಪಕ್ಕಾಗಿ ನನಗೇ ನಾಚಿಕೆಯಾಯಿತು. ಇಷ್ಟರೊಳಗೆ ಸ್ವಾಮಿಗಳ ಆ ಸಂಬಂಧಿಗಳೂ ಒಳಗೆ ಬಂದರು. ಸ್ವಾಮಿಗಳು ಪುನಃ ಸುಮ್ಮನೆ ಹೊಟ್ಟೆ ಬಿರಿಯುವಷ್ಟು ನಕ್ಕು, ತಮ್ಮ ಸ್ವಾಭಾವಿಕವಾದ ಮಂದಹಾಸದಿಂದ ಅವರನ್ನು ಬರಮಾಡಿಕೊಂಡರು ; ಆದರೆ ಅವರಲ್ಲಿ ಸಂನ್ಯಾಸಿಯ ಗಂಭೀರಭಾವವಿತ್ತು. ಅವರ ಆ ಮುದ್ದಾದ ಮಗುವು 'ಸ್ವಾಮಿಜೀ ! ನನ್ನ ಪಾಠಗಳನ್ನೆಲ್ಲಾ ನಿಮಗೆ ಒಪ್ಪಿಸಲೆ ?' ಎಂದು ಕೇಳಿದನು. ಅದಕ್ಕೆ ಸ್ವಾಮಿಗಳು "ಓಹೋ ! ಆಗಬಹುದು. ಬಹಳ ಸಂತೋಷ. ನೀನಾಗಲೇ ಓದಲು ಕಲಿತಿದ್ದೀಯ ಮಗು ? ಎಷ್ಟು ದಿವ್ಯವಾದುದು, ಸೊಗಸಾದುದು !" ಎಂದು ಹೇಳಿ ಆ ಮಗುವಿನ ಮುದ್ದಾದ ಪಠನವನ್ನು ಕೇಳಿ ಸಂತೋಷಪಟ್ಟರು. 'ಪೂರಣಜೀ ! ಅವನಿಗೆ ಆ ದ್ರಾಕ್ಷಿಯ ಗೊಂಚಲನ್ನು ಕೊಡು,' ಎಂದರು. ಆಗ ನಾನು ಆ ಮಗುವಿನ ಚಾಚಿದ ಕೈಗಳಲ್ಲಿ ಕೊಟ್ಟೆ. ಅವನಿಗೆ ದ್ರಾಕ್ಷಿಯಿಂದೇನೂ ಅಷ್ಟು ತೃಪ್ತಿಯಾದಂತೆ ಕಾಣಲಿಲ್ಲ ; ಅವನಿಗೆ ಇನ್ನೊಂದೂ ಸಿಕ್ಕಲಾರದ (ಸ್ವಾಮಿ) ವಸ್ತು ಬೇಕಾಗಿದ್ದಂತೆ ತೋರಿತು. ಸ್ವಾಮಿಗಳ

ಪತ್ನಿಯು ಅವರನ್ನೇ ನೋಡುತ್ತಾ ಮೌನವಾಗಿ ನಿಂತಿದ್ದಳು. ಅವರಿಬ್ಬರ ಮಧ್ಯದಲ್ಲಿ ಒಂದೂ ಮಾತು ನಡೆಯಲಿಲ್ಲ. ಆದರೆ ಸ್ವಾಮಿಗಳು ಗಂಟೆಹೊಡೆದಂತೆ ನಗುತ್ತಾ ತಮ್ಮ ಮಲತಾಯಿಯ ಜೊತೆಯಲ್ಲಿ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಅವರು ತಮ್ಮ ಕುಟುಂಬದ ಪ್ರತಿಯೊಬ್ಬರ ಯೋಗಕ್ಷೇಮವನ್ನೂ ಪ್ರೇಮದಿಂದ ವಿಚಾರಿಸಿದರು ; ಹೀಗೆ ಈ ಪ್ರಸಂಗವನ್ನು ಮುಗಿಸಿ ಅವರನ್ನು ಕಳಿಸಿ ಕೊಟ್ಟರು. ಅಲ್ಪ ಚೇತಸರು ಅಥವಾ ಸಾಮಾನ್ಯರು ಮತ್ತು ಮಹಾತ್ಮರು ಒಂದೇ ಗಾಳಿಯನ್ನು ಉಸಿರಾಡುತ್ತಾ ಒಂದೇ ನೆಲ, ಜಲ, ಬಿಸಿಲಿನಿಂದ ಜೀವಿಸಿದ್ದರೂ ಅವರ ಸಂಬಂಧ–ಸಹವಾಸಗಳು ಸ್ನೇಹ–ಸೌಹಾರ್ದಗಳಿಂದ ಬೆಳೆದು ಬೆಳಗದೆ, ಒಡೆದು ದೂರವಾಗಿ ದುಃಖದಲ್ಲಿ ಕೊನೆಗೊಳ್ಳಬಹುದು. ಆ ಯಾತ್ರಿಕರು, ಅಂತು, ಹೊರಟು ಹೋದರು.

ಪೂರಾ ಒಂದು ವರ್ಷದ ಮೇಲೆ ಪೂರಣಜೀಯು ಸ್ವಾಮಿಗಳೊಡನೆ ಏಕಾಂತ ದಲ್ಲಿ ಹಿಮಾಲಯದ ಮೈದಾನದಲ್ಲಿ ಕುಳಿತಿರುವಾಗ, ಆ ಹಿಂದಿನ ಪ್ರಸಂಗವನ್ನು ನೆನೆಸಿಕೊಂಡು ಹೇಳಿದ್ದೇನೆಂದರೆ,

“ ಪೂರಣಜೀ ! ಒಂದು ವರ್ಷದ ಹಿಂದೆ, ಹರಿದ್ವಾರದಲ್ಲ ರಾಮನ ಕುಟುಂಬ ದವರನ್ನು ಕಳಿಸಿಕೊಡಬೇಕೆಂದು ರಾಮನು ನಿನಗೆ ಹೇಳಿದಾಗ, ನೀನೆಷ್ಟು ಕೋಪಾವಿಷ್ಟನಾದೆ ! ಆದರೆ ರಾಮನಿಗೂ ಹೃದಯವಿದೆ, ದಯವಿದೆ, ಪ್ರಿಯವಿದೆ· ಆದರೆ, ಆಗ ಅವನು ಧರಿಸಿರುವ ಸಂನ್ಯಾಸ ವೇಷದ ನಿಯಮವನ್ನು ಪಾಲಿಸಬೇಕೆಂದು ಬಯಸಿದನು. ಅವರನ್ನು ನೋಡಲು ನಿರಾಕರಿಸಿದ್ದು ಕೇವಲ ತೋರಿಕೆಗೆ ಮಾತ್ರ ; ಕೇವಲ ಔಪಚಾರಿಕ. ದೇವನ ವಿಷಯದಲ್ಲಿಯಾಗಲೀ ಮಾನವನ ವಿಷಯದಲ್ಲಿಯಾಗಲೀ ರಾಗಭಾವಗಳೂ ರಸಭಾವಗಳೂ ಭಾವಾವೇಗಗಳೂ (Emotion) ಹೃದಯ:ವನ್ನು ಇನ್ನೂ ಕಲಕುತ್ತಿರುವವರೆಗೂ ಮನುಷ್ಯನು ತನ್ನ ವೈಯಕ್ತಿಕ ಸಂಬಂಧಗಳನ್ನು ಹೇಗೆ ಮರೆತಿರಲು ಸಾಧ್ಯ ? ಭಾವಶೂನ್ಯವಾದ ಪಾಷಾಣಗಳಂತೆ ಕವಿಗಳೂ ಕಲ್ಲಾಗಿ ನಿಸ್ಸತ್ತ್ವವಾಗುವದಕ್ಕೆ ಸಾಧ್ಯವಿಲ್ಲ. ಮನೋವೇದನೆಯೇ ಇಲ್ಲದಂತೆ ಭಾವನಾಶೂನ್ಯವಾಗುವದು ಆಧ್ಯಾತ್ಮಿಕ ವಿಕಸನವಲ್ಲ. ಅವರು ಕೀಟ್ಸ್ (Keats) ಕವಿಯನ್ನು ಕಠಿಣ ಶಬ್ದಗಳಿಂದಲೇ ಕೊಂದರು. ಆಧ್ಯಾತ್ಮಿಕ ಅನುಭವವು ಹೆಚ್ಚು ಬೆಳೆದಷ್ಟು ಭಾವನಾ ವಿಶೇಷವೂ ಬೆಳೆಯುತ್ತದೆ.

“ ಪೂರಣಜೀ ! ಆ ದಿನ ಬ್ರಹ್ಮಾನಂದನ* ಕಾಯಿಯ ಮುಖವು ಎಂಥಾ

*ಇದು, ಸ್ವಾಮಿಗಳ ಕೊನೆಯ ಮಗನ ಹೆಸರು.

ದೈವೀಕಳೆಯಿಂದ ಬೆಳಗುತ್ತಿತ್ತು ! ಆಕೆಯು ಅಂದು ಪೂಜನೀಯ ರೂಪವನ್ನು ಪಡೆದಂತೆ ಕಂಡಳು ; ಅಲ್ಲವೆ ?

" ನೀನು ಮದುವೆಯಾಗಿರುವದು ರಾಮನಿಗೆ ಸಂತೋಷ. ಎಷ್ಟು ಹೇಳಿದರೂ ವಿಚಾರಮಾಡಿ ನೋಡಿದರೆ, ವಿವಾಹಿತ ಜೀವನವೇ ಹೆಚ್ಚು ಸ್ಥಿರತೆಯುಳ್ಳದು. ನೀವು ದಂಪತಿಗಳಿಬ್ಬರೂ ಇಲ್ಲಿಗೆ ಬಂದು ಈ ಹಿಮಾಲಯದ ಶಿಖರಗಳ ಮೇಲೆ ವಾಸಮಾಡಬಹುದು. "

ಅವರು ಅತಿನಮ್ರವೂ ಪರಿಶುದ್ಧವೂ ಆದ ಬಡ ವಿದ್ಯಾರ್ಥಿದಶೆಯಿಂದ ವಿಶ್ವ ಪ್ರಜ್ಞೆಯುಳ್ಳ ಉತ್ಸಾಹ ಭರಿತ ಪೂರ್ಣಮಾನವರಾಗಿ ಬೆಳೆದಿದ್ದರು. ಅವರಲ್ಲಿ ಗಂಭೀರವಾದ ಏಕಾಗ್ರತೆಯಿದ್ದರೂ ವಿಲಕ್ಷಣವಾಗಿ ಚಿಮ್ಮುತ್ತಿರುವ ಚೈತನ್ಯದಿಂದ ಯಾವಾಗಲೂ ಉಲ್ಲಾಸ ಉಕ್ಕುತ್ತಿತ್ತು. ಅವರಲ್ಲಿ ಅಕ್ಷಯವಾದ ಆನಂದದ ಬುಗ್ಗೆ ಹತ್ತಿಕ್ಕಲಾರದ ನಗುವಿನ ರೂಪದಲ್ಲಿ ಸ್ಫೋಟವಾಗುತ್ತಿತ್ತು. ಅವರ ದೃಷ್ಟಿಯಲ್ಲಿ ಔನ್ನತ್ಯವೂ ವರ್ತನೆಯಲ್ಲಿ ಔದಾರ್ಯವೂ ಗಾಂಭೀರ್ಯವೂ ತುಂಬಿದ್ದವು. ಹಗುರವಾದ ಅವರ ವೇಗದ ನಡಿಗೆಯಲ್ಲಿ ಜಿಗಿದಾಡುವ ಜಿಂಕೆಯ ಓಟವಿದ್ದಿತು. ಅವರು ದಿವ್ಯವಾದ ಆನಂದ ಮಧುಪಾನದಿಂದ ಉನ್ಮತ್ತರಾಗಿ ಹುಚ್ಚೆದ್ದು ಕುಣಿಯುವಾಗ, ದೈವೀ ತೇಜಸ್ಸಿನಿಂದ ಅವರ ಮುಖವು ಉದ್ದೀಪ್ತವಾಗಿಯೂ ನೇತ್ರಗಳು ನಿಮೀಲಿತವಾಗಿಯೂ ಆನಂದ ಬಾಷ್ಪಪರಿಪೂರಿತವಾಗಿಯೂ ಇರುತ್ತಿದ್ದವು. ಅವರು ರಾವೀ ನದಿಯ ತೀರದಲ್ಲಿ, ವಿಶ್ವವನ್ನೇ ಉತ್ಕಟಪ್ರೇಮದಿಂದ ಆಲಂಗಿಸುವಂತೆ, ತಮ್ಮ ಕೈಗಳನ್ನು ವಿಶಾಲವಾಗಿ ಬಿಚ್ಚಿ ಭಾವೋದ್ವೇಗದಿಂದ ಒಮ್ಮೊಮ್ಮೆ ಹುಚ್ಚರಂತೆ ಕೂಗಿಡುತ್ತಿದ್ದರು. ಅವರ ಸುತ್ತಲಿದ್ದ ವನವೃಕ್ಷಗಳೂ ಕಲ್ಲು ಬಂಡೆಗಳೂ ಬೆಟ್ಟ ಗುಡ್ಡಗಳೂ ಸಹ ಅವರಾ ದಿವ್ಯಾವೇಶದ ಸ್ಪಂದನಗಳಿಂದ ಪ್ರಭಾವಿತವಾಗಿ ಕಂಪಿಸುವಂತೆ ತೋರುತ್ತಿತ್ತು !

ಗಾಳಿಗಳು ಅವರೊಡನೆ ಪಿಸುಗುಟ್ಟಿ ಆಟವಾಡುವಂತೆಯೂ ಕಲ್ಲುಗಳು ಮಾತಾಡುವಂತೆಯೂ ತೋರುತ್ತಿತ್ತು. ಅವರು ಓರಿಯಂಟಲ್ ಕಾಲೇಜಿನಲ್ಲಿ ರೀಡರ್ (Reader of Mathematics) ಆಗಿದ್ದಾಗ, ದೇಹದ ಪ್ರಜ್ಞೆಯೇ ಇಲ್ಲದವರಂತೆ ಕಾಲೇಜಿಗೆ ಹೋಗಿ ಬರುತ್ತಿದ್ದರು. ಅವರು ಮಿಷನ್‌ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಅವರ ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಕುರಿತು " ಓ, ಪ್ರಿಯತಮ ಕೃಷ್ಣ ! ನೀನು ಸರ್ವಜ್ಞನಲ್ಲವೆ ? ನಾನು ನಿನಗೆ ತಿಳಿಸುವುದೇನಿದೆ ? "

ಎನ್ನುತ್ತಿದ್ದರು. ಅವರು ತಮ್ಮ ವಿದ್ಯಾರ್ಥಿಗಳಿಗೆ ಹೀಗೆ ಸ್ಫೂರ್ತಿಯನ್ನು ಕೊಟ್ಟು, ಅವರಿಂದಲೇ ಸುಲಭವಾಗಿ ಲೆಕ್ಕಗಳನ್ನು ಮಾಡಿಸುತ್ತಿದ್ದರು.

ಒಂದು ದಿನ ತೀರ್ಥರಾಮರು ಲಾಹೋರ್ ಮಿಷನ್ ಕಾಲೇಜಿನ ಪ್ರಿನ್ಸಿಪಾಲ್‌ರಾದ ಡಾಕ್ಟರ್ ಈವಿಂಗ್ (Dr. Ewing) ಸಾಹೇಬರಲ್ಲಿ ಹೋಗಿ, ಅವರನ್ನು ಕುರಿತು, "ನೀವು ಕ್ರಿಸ್ತನನ್ನು ಪೂಜಿಸುತ್ತೀರಲ್ಲವೆ, ನೀವು ಅವನನ್ನು ಕಣ್ಣಿನಿಂದ ನೋಡಿದ್ದೀರಾ ? ಇಲ್ಲ ; ನೋಡಿರಲಿಕ್ಕಿಲ್ಲ. ನೋಡಿ, ನೋಡಿ, ಈವಿಂಗ್ ! ನಿಮ್ಮ ಎದುರಿಗೇ ಕ್ರಿಸ್ತನಿದ್ದಾನೆ ; ಇಗೋ, ಇಲ್ಲಿಯೇ ನಿಂತಿದ್ದಾನೆ, ನೋಡಿ ! " ಎಂದು ಅವರು ಬೆರಗಾಗುವಂತೆ ಆವೇಶದಿಂದ ಉದ್ಗಾರಮಾಡಿದರು.

ಹೀಗೆ ಅವರ ದಿವ್ಯಭಾವೋನ್ಮಾದವು ಮಿತಿಮೀರಿ ಉಕ್ಕುವಂತಿತ್ತು. ಆಗಿನ ಕಾಲದಲ್ಲಿ ಅವರು ತಮ್ಮಲ್ಲಿ ತಾವು ನೆಲೆನಿಂತು, ಆತ್ಮಲೀನರೂ ಓಂಕಾರೋಚ್ಚಾರಣೆಯಿಂದ ಆನಂದ ತುಂದಿಲರೂ ಆಗಿ ಬೀದಿಯಲ್ಲಿ ನಡೆಯುತ್ತಿದ್ದರೆ ಅವರ ನಡಿಗೆಯಿಂದ ರಸ್ತೆಯೇ ರೋಮಾಂಚನಗೊಳ್ಳುವಂತಿತ್ತು. ಲಾಹೋರ್ ರಸ್ತೆಗಳಲ್ಲಿ ಅವರನ್ನು ಕಂಡವರೆಲ್ಲಾ ಅವರಲ್ಲಿ ವಿಲಕ್ಷಣವಾದ ಆಕರ್ಷಣೆಯನ್ನು ಅನುಭವಿಸಿ ಮುಗ್ಧರಾಗುತ್ತಿದ್ದರು. ಅವರು ಜನರಿಗೆ "ನೀವೇ ದೇವರೆಂದು ಹೇಳಿ ; ನಡು ರಾತ್ರಿಯಲ್ಲಿ ಮನೆಯ ಮಹಡಿಯ ಮೇಲು ಮಾಳಿಗೆಯ ಮೇಲೆ ನಿಂತು, ಓ ಮನುಷ್ಯ 'ನಾನೇ ದೇವರು, ನಾನೇ ದೇವರು' ಎಂದು ಕೈಯೆತ್ತಿ ಸಾರು. " ಎಂದು ಘಂಟಾಘೋಷವಾಗಿ ಒತ್ತಿ ಹೇಳುತ್ತಿದ್ದರು.

ಲಾಹೋರಿನ ಡಾಕ್ಟರ್. ಮಹಮದ್ ಇಕ್ಬಾಲರು (Dr. Mohammad Iqbal) ಒಮ್ಮೆ ತೀರ್ಥರಾಮರಲ್ಲಿಗೆ ಹೋಗಿದ್ದಾಗ ತಾವು ಕಂಡಿದ್ದನ್ನು ಹೇಳಿರುವದೇನೆಂದರೆ, "ಒಂದು ದಿನ ನಾನು ಅವರಲ್ಲಿಗೆ ಹೋಗಿದ್ದಾಗ ಅವರಿಗೆ ತೀವ್ರವಾದ ಹೊಟ್ಟೆ ಶೂಲಿಯಿಂದ ನುಲಿತವು ಬಂದಿತ್ತು. ನರಮಂಡಲದ ಎಳೆತ–ಸೆಳೆತಗಳಿಂದ ಮೂಳೆಯು ಹಂದರದಂತಿದ್ದ ಅವರ ಶರೀರವು ವೃತ್ತಾಕಾರವಾಗಿಯೂ ಅರ್ಧ ವೃತ್ತಾಕಾರವಾಗಿಯೂ ಬಿಲ್ಲಿನಂತೆ ಬಾಗಿ ಸೆಟೆದು ಪುಟಿಯುತ್ತಿತ್ತು. ಅವರು ಇದರಿಂದ ಲಿವಿ ಲಿವಿ ಒದ್ದಾಡಿ ಯಮ ಯಾತನೆಯನ್ನು ಅನುಭವಿಸುತ್ತಿದ್ದರೂ ಗಂಟೆ ಹೊಡೆದಂತೆ ನಗುತ್ತಾ "ಓ ಇಕ್ಬಾಲ್ ! ರಾಮನ ಕೋಟಿ ಕೋಟಿ ಶರೀರಗಳಲ್ಲಿ ಇದೊಂದು ಶರೀರಕ್ಕೆ ಈ ವ್ಯಥೆಯು ಬಂದ ಮಾತ್ರಕ್ಕೆ ನಷ್ಟವೇನು ? ಕಷ್ಟವೇನು ? ನಾನು ನಕ್ಕು ನಕ್ಕು ನಲಿಯುತ್ತೇನೆ. ನನ್ನ ಮಿಕ್ಕ ಎಷ್ಟೋ ಕೋಟಿ ಶರೀರಗಳು

ಆರೋಗ್ಯದಿಂದ ಸುಖವಾಗಿವೆಯಲ್ಲ! ದೇಹದ ಪ್ರಾರಬ್ಧದ ಪಾಲಿಗೆ ಈ ಕ್ಲೇಶವೂ ನನ್ನ ಆತ್ಮದ ಪಾಲಿಗೆ ಸಂತೋಷವೂ ಬಂದೊದಗಿವೆ. " ಎಂದು ಹೇಳಿದರು.

ಸ್ವಾಮಿಗಳು ಒಂದು ವ್ರತಮನಸ್ಸೂ ಅಥವಾ ಕೇವಲ ಒಬ್ಬ ವ್ರತಧಾರಿಯೂ ಮಾತ್ರ ಆಗಿರಲಿಲ್ಲ. ಅವರು ಪ್ರಚಂಡ ಕ್ರಿಯಾಶೀಲ ವ್ಯಕ್ತಿಯೂ ಅದ್ಭುತ ಶಕ್ತಿಯೂ ಆಗಿದ್ದರು; ಅವರು ಸರ್ವಸಮರ್ಥ ಆತ್ಮವೇ ಆಗಿದ್ದರು.

ಅವರು ಅಮೆರಿಕಾದಲ್ಲಿಯೂ ಹಿಂದಿರುಗಿ ತಮ್ಮ ದೇಶಕ್ಕೆ ಬಂದ ಮೇಲೂ ಸಂನ್ಯಾಸ ಜೀವನದ ವಿವಿಕ್ತಶೀಲ ವೃತ್ತಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಬೇಸರಹೊಂದಿದವರಂತೆ ಕಾಣುತ್ತಿದ್ದರೆಂದು ಅವರ ಶಿಷ್ಯರಾದ ಪೂರಣಸಿಂಗರು ಹೇಳಿದ್ದಾರೆ. ಸ್ವಾಮಿ ರಾಮರು ಅಮೆರಿಕಾದಲ್ಲಿರುವಾಗ ಇಂಡಿಯಾ ದೇಶದ ಜಾತಿಪದ್ಧತಿಯ ವಿರುದ್ಧವಾಗಿಯೂ ವಿವಾಹಿತ ಜೀವನದ ಗುಣಗಳ ಶ್ಲಾಘನಾಪರವಾಗಿಯೂ ತುಂಬಾ ಬೋಧಿಸುತ್ತಿದ್ದರೆಂದು ತಮ್ಮ ಜೊತೆಗೇ ಡೆಹರಾಡೂನಿನಲ್ಲಿ ಒಂದೇ ಮನೆಯಲ್ಲಿ ಆರು ತಿಂಗಳು ವಾಸಮಾಡಿಕೊಂಡಿದ್ದ ಅವರ ಅಮೆರಿಕೆಯ ಮಹಿಳಾ ಶಿಷ್ಯಳಾದ ಕಮಲಾನಂದಳು ಹೇಳುತ್ತಿದ್ದಳೆಂದು ಪೂರಣಜೀ ಹೇಳುತ್ತಾರೆ. ಆದರೆ ಇಂಡಿಯಾಕ್ಕೆ ಹಿಂದಿರುಗಿದ ಮೇಲೆ, ಅವರು ಆ ಹವ್ಯಾಸವನ್ನು ಬಿಟ್ಟು ಪುನಃ ಬ್ರಹ್ಮಚರ್ಯದ ವಿಷಯವನ್ನೇ ಹೇಳುತ್ತಿದ್ದರು ಅವರು ಅಮೆರಿಕಾದ ವಿಮುಕ್ತ ಸ್ತ್ರೀಯರ (Freed women of America) ಸ್ನೇಹಪೂರ್ಣ ಸಹವಾಸದ ಸ್ವಚ್ಛಂದ ಸಂಪರ್ಕದಲ್ಲಿದ್ದಾಗ ವಿವಾಹ ಜೀವನದ ಪಾವಿತ್ರ್ಯತೆಯ ಮತ್ತು ಆದರ್ಶ ಮಹಿಳೆಯ ಧರ್ಮದ ಪಾರವನ್ನು ಪಾಶ್ಚಾತ್ಯರಿಗೆ ಬೋಧಿಸುವದು ಅವಶ್ಯವೆಂದು ಅವರಿಗೆ ತೋರಿರಬಹುದು. ಮುಂದೆ ಅವರು ಮಹಿಳಾಮಾತೆಯರ ಮಧುರ ಸಂಪರ್ಕವನ್ನು ಕಳೆದು ಕೊಳ್ಳದೆ ಇದ್ದಿದ್ದರೆ ಕವಿಹೃದಯದ ಅವರ ಜೀವನವು ಹೆಚ್ಚು ರಸಮಯವಾಗುತ್ತಿದ್ದಿತೆಂದು ಅವರ ಚರಿತ್ರಕಾರರಾದ ಪೂರಣಜೀ ಅಭಿಪ್ರಾಯಪಡುತ್ತಾರೆ.

"ಮಹಾರಾಜ ರಾಮನು ರಾಮ ಸಾರ್ವಭೌಮನ ಸೇವಕನಲ್ಲದೆ ಬೇರೆ ಸಾಮಾನ್ಯ ಮರ್ತ್ಯರ ಸೇವಕನಾಗಲಾರ"ನೆಂದು ತೀರ್ಥರಾಮರು ಉನ್ಮತ್ತಾವೇಶದಿಂದ, ಉಜ್ವಲ ಭಾಷೆಯ ಉರಿಮಾತಿನಿಂದ ಬರೆದು ತಮ್ಮ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದಾಗ, ಮೂಢ ಸೆನೇಟರ್‌ಗಳೂ ಅಜ್ಞ ಸಹೋದ್ಯೋಗಿಗಳೂ ತೀರ್ಥರಾಮರಿಗೆ ಹುಚ್ಚು ಹಿಡಿದಿದೆಯೆಂದು ಸಿಕ್ಕಾಪಟ್ಟೆ ಶೋಚನೀಯವಾಗಿ ಟೀಕೆ ಮಾಡುತ್ತಿದ್ದಾಗ, ಆ ಕಾಲದಲ್ಲಿ ಕೇವಲ ತರುಣ ಪ್ರಾಧ್ಯಾಪಕರಾಗಿದ್ದ

ಡಾಕ್ಟರ್ ಇಕ್ಬಾಲರು, ತೀರ್ಥರಾಮರಿಗೆ ಹುಚ್ಚು ಹಿಡಿದಿದ್ದರೆ, ಚಿತ್ತ ಸ್ವಾಸ್ಥ್ಯವೂ ವಿವೇಕ ಪ್ರಜ್ಞೆಯೂ ಬೇರೆ ಯಾರಲ್ಲಿಯೂ ಸ್ವಲ್ಪವೂ ಉಳಿದಿರಲು ಸಾಧ್ಯವಿಲ್ಲವೆಂದೂ ಅವರದು ಸ್ಪಿನೋಜನ (Spinoza) ಹುಚ್ಚುತನವೆಂದೂ ಪ್ರವಾದಿಯ ಕವಿಭಾವವೆಂದೂ ವಾದಿಸಿ ಹುಚ್ಚು ಟೀಕಾಚಾರ್ಯರುಗಳ ಬಾಯಿ ಕಟ್ಟಿಸಿದ್ದರು.

ಅವರು ಜಪಾನಿಗೆ ಹೋಗಿದ್ದಾಗಲೂ ಅಮೆರಿಕಾದಲ್ಲಿದ್ದ ಕೆಲವು ಕಾಲವೂ ವಿಲಕ್ಷಣ ಆನಂದಾವೇಶದ ರಭಸದಿಂದ ಅವರ ವ್ಯಕ್ತಿತ್ವವು ಎಲ್ಲರ ಮೇಲೆ ತನ್ನದೇ ಆದ ಮಹತ್‌ಪ್ರಭಾವ ಬೀರುವದರಲ್ಲಿ ಅದ್ಭುತ ಸಾಂಕ್ರಾಮಿಕವಾಗಿತ್ತು. ಅವರಲ್ಲಿ ಉರಿಯುತ್ತಿದ್ದ ದಿವ್ಯಭಾವದಿಂದ ಎಷ್ಟೋಜನ ಉನ್ನತ ಭಾವೋದ್ದೀಪನವನ್ನು ಪಡೆದರು. ಆದರೆ ಅವರು ಅಮೆರಿಕಾದಿಂದ ಹಿಂದಿರುಗಿದ ಅನಂತರ ಅವರಲ್ಲಿದ್ದ ಧ್ಯಾನಯೋಗಿಯ ಸೂಕ್ಷ್ಮವಾದ ಉಲ್ಲಾಸಭರಿತ ದಿವ್ಯ ಸ್ಫೂರ್ತಿಯು ಹಾರಿ ಹೋಗಿ ಅದರ ಸ್ಥಳದಲ್ಲಿ ಉದಾತ್ತ ವಿಚಾರ–ಪ್ರತಿಭೆಗಳ ಉಜ್ಜ್ವಲ ಪ್ರಭೆಯು ವಿರಾಜಿಸುತ್ತಿತ್ತು. ಅವರು ತಮ್ಮ ಹಿಂದಿನ ಉನ್ನತ ತುರ್ಯಾನಂದದ ದೈವೀ ಸ್ಫೂರ್ತಿಯನ್ನು ಪುನಃ ಪಡೆಯಲು ಮತ್ತೆ ಮತ್ತೆ ಏಕಾಂತವಾಸಕ್ಕೆ ಹೋಗುತ್ತಿದ್ದರು. ಕ್ರಿಸ್ತನ ಜೀವನದಲ್ಲಿಯೂ ಅವನ ಕೊನೆಗಾಲದಲ್ಲಿ ಹೀಗೆಯೇ ಆಗಿತ್ತೆಂದು ಬೈಬಲ್‌ನ ವಿಮರ್ಶಾತ್ಮಕವಾದ ಅಧ್ಯಯನದಿಂದ ಅವರ ಪರಿಶೀಲನೆಗೆ ಬಂದಿತ್ತು.

"Who has touched me, my power is gone"

"ನನ್ನನ್ನು ಮುಟ್ಟಿದವರಾರು ? ನನ್ನ ಶಕ್ತಿಯು ಹರಿದು ಹೋಯಿತು." ಎಂದು ಸಮರ್ಥ ಕ್ರಿಸ್ತನೂ ಲೋಕ ಸಂಸರ್ಗದಿಂದ ತಪಶ್ಶಕ್ತಿಯು ಕ್ಷೀಣವಾಗುವದನ್ನು ತನ್ನ ಸಹಜವಾದ ಉದ್ಗಾರದಿಂದ ವ್ಯಕ್ತಮಾಡಿದ್ದನು. ಇದು ಯಾರಿಗೂ ಬದಲಾಗದ ಕಠೋರ ಸತ್ಯ.

ಪರಮಾತ್ಮ ಪ್ರಜ್ಞೆಯ ದೈವಾವೇಶವು ಹೇಗೆ ಉತ್ಕರ್ಷಾಪಕರ್ಷಗಳಿಗೂ ಏರಿಳಿತಗಳಿಗೂ ಒಳಗಾಗಬಹುದು—ಎಂಬುದನ್ನು ರಾಮತೀರ್ಥರೇ ಅನೇಕ ಸಂದರ್ಭಗಳಲ್ಲಿ ವಿವರಿಸುತ್ತಿದ್ದರು. ಅವರ ಪ್ರಸಿದ್ಧ ಉದಾಹರಣೆಯೇ ಕ್ರಿಸ್ತನದಾಗಿತ್ತು. ಆದರೆ ಅವರಲ್ಲಿದ್ದ ತತ್ತ್ವಜ್ಞಾನವು ಅವರ ಧ್ಯಾನೋನ್ಮಾದವನ್ನು ನುಂಗಿತ್ತು. ಅವರ ಹಿಂದಿನ ಹುಚ್ಚು ಆವೇಶವನ್ನು ಮತ್ತೆ ಪಡೆದುಕೊಳ್ಳುವದಕ್ಕೆ ಅವರಿಗಿಂತಲೂ

ಹೆಚ್ಚಿನ ಆನಂದಾವೇಶವುಳ್ಳವರ ಸಹವಾಸವು ಅವರಿಗೆ ದೊರಕಲಿಲ್ಲ ; ಜೊತೆಗಿದ್ದ ಅವರ ಮುಗ್ಧ ಶಿಷ್ಯರಿಂದ ಅವರಿಗೆ ಆ ಸಹಾಯವಾಗಲಿಲ್ಲ. ಅಜೀರ್ಣವ್ಯಾಧಿ ಮೊದಲಾದ ಅವರ ದೈಹಿಕ ಬಾಧೆಗಳೂ ಅವರ ಉತ್ಸಾಹದ ಕುಸಿತಕ್ಕೆ ಕಾರಣ ವಾಗಿದ್ದವು. ತಮ್ಮ ಮುಖ್ಯ ಶಿಷ್ಯರಾದ ಸ್ವಾಮಿ ನಾರಾಯಣರನ್ನು ತಮ್ಮಿಂದ 15 ಮೈಲಿಗಳ ದೂರದಲ್ಲಿ ವಾಸಮಾಡಬೇಕೆಂದೂ ತಾವು ಕರೆದಾಗ ಬರಬೇಕೆಂದೂ ಅವರು ಆಜ್ಞೆಮಾಡಿದ್ದರಿಂದ ಅವರ ಬಾಧೆಯನ್ನು ಪರಿಹರಿಸುವದಕ್ಕೆ ನಾರಾಯಣರು ಮಾಡಿದ ಪ್ರಯತ್ನವೂ ಫಲವಾಗಲಿಲ್ಲ. ಪ್ರಪಂಚದ ದುಃಖವನ್ನು ಕಳೆದು ಅದನ್ನು ಉದ್ಧಾರಮಾಡುವದಕ್ಕಾಗಿ, ಮಹಾತ್ಮರು ತಮ್ಮ ಉಕ್ಕೇರುತ್ತಿರುವ ಆನಂದವನ್ನೇ ನೀಡಿ ತಾವು ನಿರ್ಗುಣ–ನೀರವ–ನಿಸ್ತರಂಗ ಶಾಂತಾತ್ಮರಾಗುತ್ತಾರೆ. ಜ್ಞಾನವಾಗಲೀ ಧ್ಯಾನವಾಗಲೀ ವೃತ್ತಿರೂಪವಾದುದರಿಂದ ಅವುಗಳಿಗೆ ತಾರುಣ್ಯ–ವಾರ್ಧಕ್ಯಗಳೂ ಪಾಕ–ಪರಿಪಾಕಗಳೂ ಉಬ್ಬರವಿಳಿತಗಳೂ ಇರಬಹುದೆಂಬುದು ಸ್ವಾಭಾವಿಕ.

ಇದೇ ಅನುಭವಕ್ಕೆ ಹಲವು ದೃಷ್ಟಾಂತಗಳು ಪುರಾಣೇತಿಹಾಸಗಳಲ್ಲಿಯೂ ಇವೆ. ಶ್ರೀಕೃಷ್ಣನು ತತ್ತ್ವಜ್ಞಾನಿಯೂ ಸ್ಥಿತಪ್ರಜ್ಞನೂ ಜೀವನ್ಮುಕ್ತನೂ ಇದ್ದನೆಂಬುದೇನು? ಅವನು ಭಗವಂತನೇ ಆಗಿದ್ದನು. ಆದರೂ ಕುರುಕ್ಷೇತ್ರಯುದ್ಧದಲ್ಲಿ ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಮಾಡಿ ತನ್ನ ವಿಶ್ವರೂಪವನ್ನು ತೋರಿಸಿದಾಗ ಕೃಷ್ಣನಲ್ಲಿ ಇದ್ದ ಉತ್ಸಾಹವೂ ದೈವಾವೇಶವೂ ದಿವ್ಯಸ್ಫೂರ್ತಿಯೂ ಅನಂತರ ಬಹಳ ಕಾಲದ ಮೇಲೆ ವಿರಾಮ ಸಮಯದಲ್ಲಿ ಅರ್ಜುನನ ಬೇಡಿಕೆಯಂತೆ ಅವನಿಗೆ " ಅನುಗೀತೆ "ಯನ್ನು ಕೃಷ್ಣನೇ ಬೋಧಿಸಿದಾಗ ಅವನಲ್ಲಿರಲಿಲ್ಲ.

ಇದೇ ಬಗೆಯ ಅನೇಕ ಉದಾಹರಣೆಗಳನ್ನು ಕೊಡಬಹುದು.

ಅವರೇ ಹೇಳುತ್ತಿದ್ದಂತೆ, ಪರಮಾನಂದದ ಆವೇಶವುಳ್ಳ ಅಂಥಾ ಮಹಾತ್ಮರು ಲೋಕಹಿತಸಾಧನೆಗೆಂದು ಏನನ್ನಾದರೂ ಮಾಡುವದಕ್ಕೆ ಹೋಗದೆ ಸುಮ್ಮನೆ ಶಾಂತವಾಗಿರಬೇಕು. ಅವರು ಪರಮಾತ್ಮ ಚಿಂತನದ ತೀವ್ರ ತಪಸ್ಸಿನಿಂದ ಉರಿಯುತ್ತಾ ಜೀವಿಸಿದ್ದರೆ ಸಾಕು. ಅವರ ಸಾನ್ನಿಧ್ಯಮಾತ್ರದಿಂದಲೇ ಲೋಕವು ಉನ್ನತಿಯನ್ನು ಪಡೆಯುತ್ತದೆ.

ವಿಧೇಯರಾದ ಸತ್ಪುತ್ರರಿಗೂ ಬುದ್ಧಿಶಾಲಿಗಳಾದ ವಿದ್ಯಾರ್ಥಿಗಳಿಗೂ ವಾತ್ಸಲ್ಯಪೂರ್ಣ ಅಧ್ಯಾಪಕರಿಗೂ ವಿವೇಕಿಗಳಾದ ಗೃಹಸ್ಥರಿಗೂ ಸೇವಾನಿಷ್ಠ

ನಾಗರಿಕರಿಗೂ ಉಜ್ಜ್ವಲ ರಾಷ್ಟ್ರಭಕ್ತರಿಗೂ ಪ್ರೇಮಾವೇಶದ ಭಗವದ್‌ಭಕ್ತರಿಗೂ ಸಾಧನಪರರಾದ ಸಾಧುಗಳಿಗೂ ವಿರಕ್ತರಾದ ಸಂನ್ಯಾಸಿಗಳಿಗೂ ನಿಸ್ಸ್ಪೃಹರಾದ ತಪಸ್ವಿಗಳಿಗೂ ಉತ್ಸಾಹಭರಿತ ಧರ್ಮಪ್ರಚಾರಕರಿಗೂ ಶ್ರದ್ಧಾವಂತ ಸನಾತನಿಗಳಿಗೂ ಕ್ರಾಂತಿಕಾರಕ ಸುಧಾರಕರಿಗೂ ಜೀವನ್ಮುಕ್ತರಿಗೂ ಅನುಭಾವಿಗಳಿಗೂ ಸ್ವಾಮಿರಾಮ ತೀರ್ಥರ ಜೀವನವು ಅಚ್ಚು ಮೆಚ್ಚಿನ ಉಚ್ಚವಾದ ಆದರ್ಶಗಳಿಂದ ತುಂಬಿತ್ತದೆ.

ರಾಮತೀರ್ಥರು ಇಂಡಿಯಾದಲ್ಲಿ ಅನೇಕ ವರ್ಷಗಳು ಸಂಚಾರಮಾಡಿ ವ್ಯವಹಾರ ಯೋಗ್ಯ (Practical) ವೇದಾಂತವನ್ನು ಪ್ರಸಾರ ಮಾಡಿದರು. ೧೯೦೫ರಲ್ಲಿ ಅವರು ಹೃಷೀಕೇಶದಲ್ಲಿ ಕೇವಲ ಏಕಾಂತವನ್ನು ಸೇರಿದರು. ೧೯೦೬ರಲ್ಲಿ ಟೆಹರಿಯಿಂದ ೬೦ ಮೈಲಿಗಳ ದೂರದಲ್ಲಿ ೧೨, ೯೯೦ ಅಡಿಗಳ ಎತ್ತರದಲ್ಲಿ ವಸಿಷ್ಠಾಶ್ರಮದಲ್ಲಿ ವಾಸಮಾಡಲು ಪ್ರಾರಂಭಿಸಿದರು. ಅವರ ೩೩ನೇ ವಯಸ್ಸಿನಲ್ಲಿ ಅವರು ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದಾಗ ಹತೋಟಿಯಲ್ಲಿ ಸಿಕ್ಕದ ವೇಗವಾದ ಪ್ರವಾಹವು ಅವರ ದೇಹವನ್ನು ಕೊಚ್ಚಿಕೊಂಡು ಹೋಯಿತು.

ಆ ಆಕಸ್ಮಿಕ ಮಹಾಸಮಾಧಿಯ—ಜಲಸಮಾಧಿಯ—ದುರಂತ ದಿನದ ಬೆಳಿಗ್ಗೆ, ಅವರು ಸ್ನಾನಕ್ಕೆ ಹೊರಡುವ ಸ್ವಲ್ಪ ಮುಂಚೆ ಆ ವಿಷಾದಕರ ಘಟನೆಗೆ ಕೆಲವು ನಿಮಿಷಗಳ ಹಿಂದೆ—ಅವರು ತಮ್ಮ ಜೀವನದ ಅಂತಿಮ ಮುಹೂರ್ತದಲ್ಲಿ ಬರೆದ ಒಂದು ಉರ್ದು ಲೇಖನದ ಕೊನೆಯಲ್ಲಿ ಮುಕ್ತಾಯಗೊಂಡಿರುವ ಚರಮ ಶ್ಲೋಕದಲ್ಲಿ, ಸನ್ನಿಹಿತವಿರುವ ಮೃತ್ಯುವಿನ ವಿಷಯವಾಗಿ ತಮ್ಮ ಮನಸ್ಸಿಗಾದ ಮುಂನ್ಸೂಚನೆಯನ್ನು ವ್ಯಕ್ತಮಾಡಿದ್ದಾರೆ. ಅದೇನೆಂದರೆ :

"ಓ ಮೃತ್ಯುವೇ ! ನಿನಗೆ ಇಚ್ಛೆಯಾದರೆ ಈ ದೇಹವನ್ನು ಯಥೇಚ್ಛೆಯಾಗಿ ತೆಗೆದುಕೊಂಡು ಹೋಗು. ನಾನು ಬದುಕುವದಕ್ಕೆ ಇನ್ನೂ ಹೆಚ್ಚಾಗಿ ಅನೇಕ ದೇಹಗಳಿವೆ. ನಾನು ಚಂದ್ರನ ರಜತಮಯವಾದ ತಂತುಗಳನ್ನೂ ಸೂರ್ಯನ ಸುವರ್ಣಮಯವಾದ ಕಿರಣಗಳನ್ನೂ ಧರಿಸಿ ಸುಖವಾಗಿ ಜೀವಿಸಬಲ್ಲೆ. ನಾನು ಬೆಟ್ಟಗಳ ಹಳ್ಳಗಳಾಗಿಯೂ ಹೊಳೆಗಳಾಗಿಯೂ ಹಾಡುತ್ತಾ ಮೊರೆಯುತ್ತಾ ಸ್ವಚ್ಛಂದವಾಗಿ ಅಲೆದಾಡುತ್ತೇನೆ. ಸಾಗರದ ತರಂಗಗಳಲ್ಲಿ ನಾನು ಸಂತೋಷವಾಗಿ ಕುಣಿಯುತ್ತಿರುತ್ತೇನೆ. ಮಂದ ಮಾರುತನ ಮನೋಹರ ವಿಲಾಸವು ನಾನೇ ; ಉನ್ಮತ್ತ ಮಾರುತನು ನಾನೇ. ನನ್ನೀ ರೂಪಗಳು ಬದಲಾವಣೆಯ ಸಂಚಾರೀಭಾವ ಗಳು, ಮೇರುಶಿಖರದಿಂ ಕೆಳಗಿಳಿದು ಬಂದೆ ; ಬಾಗಿಲುಗಳನು ತಟ್ಟಿದೆನು ;

ನಿದ್ರಿಪರನೆಚ್ಚರಿಸಿದೆ. ಸಂತೈಸಿದೆನೊಬ್ಬನಂ, ಇನ್ನೊಬ್ಬನ ಕಣ್ಣೀರುಗಳನೊರಸಿದೆ. ಕೆಲವರಿಗೆ ಹೊಡಿಸಿದೆ ; ಇತರರ ಮುಸುಕುಗಳ ತೆಗೆದೊಗೆದೆ. ನಾನಿದನು ಸೋಂಕಿದೆನು, ಅದನು ಸ್ಪರ್ಶಿಸಿದೆ. ತೆಗೆದೆ ನಾ ಟೋಪಿಯನು, ಒಗೆದು ನಾ ಓಡಿದೆನು. ನನ್ನೊಡನೆ ಇಡೆನು ಏನನ್ನೂ, ಯಾರೂ ನನ್ನನ್ನು ಕಂಡು ಹಿಡಿಯಲಾರರು. "

ಸ್ವಾಮಿರಾಮರ ಸಂದರ್ಶನವನ್ನು ಯಾರು ಮಾಡಿದರೂ ಅವರ ಜೀವನವೇ ಹೊಸಬಗೆಯಾಗುತ್ತಿತ್ತು. ಆ ಚೇತನದ ಅಲ್ಪತನವೂ ಕ್ಷುದ್ರತನವೂ ಅವರ ದರ್ಶನ ಮಾತ್ರದಿಂದ ಮಾಯವಾಗುತ್ತಿತ್ತು ; ಮಾನುಷ ಪ್ರಜ್ಞೆಯು ಆ ಕ್ಷಣವೇ ದಿವ್ಯ ಭಾವದ ಉನ್ನತ ಸ್ವರ್ಗೀಯ ಭೂಮಿಕೆಗೆ ಎತ್ತಲ್ಪಡುತ್ತಿತ್ತು. ಅವರ ಸಾಕ್ಷಾತ್ ಸಂಪರ್ಕ ಹೊಂದಿದವರ ಕಣ್ಣುಗಳಲ್ಲಿ ಅವರ ಕಣ್ಣುಗಳಿಂದ, ಜೀವನದ ವಿಷಯದಲ್ಲಿ, ಸಂಪೂರ್ಣ ಲೋಕಾತೀತ (ಲೋಕವನ್ನು ಮೀರಿದ) ದೃಷ್ಟಿಯು ಮಿಂಚಿ ಚಿಮ್ಮುತ್ತಿತ್ತು. ಅವರ ವ್ಯಕ್ತಿತ್ವವು ಸಮ್ಮೋಹಕವಾಗಿದ್ದಿತು. ಸರ್ವದಾ ಲಾಸ್ಯ ವಾಡುತ್ತಿದ್ದ ಅವರ ಮಂದಹಾಸವು ಸುತ್ತಲೆಲ್ಲಾ ಬೆಳಕು ಬೀರುವಂತೆ ತೋರುತ್ತಿತ್ತು. ಆ ಪ್ರಸರಣದ ಪರಿಧಿಯಲ್ಲಿ ಸಿಕ್ಕವರ ಪ್ರೀತಿ-ವಿಶ್ವಾಸಗಳನ್ನು ನಿಮಿಷದಲ್ಲಿ ಸೆಳೆದುಕೊಳ್ಳುತ್ತಿತ್ತು. ಸ್ವಾಮಿ ರಾಮರು ಕವಿ-ಸಂನ್ಯಾಸಿಗಳೂ, ತತ್ತ್ವಜ್ಞ-ಸಂತರೂ ಆನಂದೋನ್ಮತ್ತ ಯತೀಶ್ವರರೂ ಆಗಿದ್ದರು. ಅವರ ಅಂತ ರಂಗದ ಜ್ಞಾನಪ್ರಕಾಶವು ಸುತ್ತಲೂ ಎಲ್ಲರ ಮೇಲೂ ಸೌಂದರ್ಯ-ಪ್ರೇಮಗಳ ದಿವ್ಯ ಪ್ರಭಾಮಂಡಲವನ್ನು ಪ್ರಸರಿಸುತ್ತಿತ್ತು.

ಸ್ವಾಮಿ ರಾಮರು ಸಹಜವಾದ ಭೂಮಾನಂದೈಶ್ವರ್ಯದ ಆಢ್ಯತೆಯಿಂದ ತಮ್ಮನ್ನು ತಾವು 'ರಾಮ ಬದ್ಷಹ' ಎಂದು ಕರೆದುಕೊಳ್ಳುತ್ತಿದ್ದರು. ಅವರು ಜೀವನದ ತತ್ತ್ವಜ್ಞಾನವನ್ನು 'ವ್ಯವಹಾರ ವೇದಾಂತ'. "Practical Vedanta" ಎಂದು ಕರೆಯುತ್ತಿದ್ದರು. ಅವರ ಉಪದೇಶಗಳು ಪ್ರಾಚೀನ ಸಿದ್ಧಾಂತಗಳ ಹಾಗೂ ಶಾಸ್ತ್ರಗಳ ಪುನರುಚ್ಚಾರಣೆ ಮಾತ್ರ ಆಗಿರಲಿಲ್ಲ. ಸತ್ಯದ ಪರೀಕ್ಷೆಯನ್ನು ಬುದ್ಧಿಗೆ ಒಪ್ಪುವಂತೆ, ವಿಚಾರಸಮ್ಮತವಾಗಿ ಗ್ರಹಿಸುವದರಲ್ಲಿಯೂ ಅದನ್ನು ವ್ಯವಹಾರಸಾಧ್ಯವಾಗಿ ಮಾಡುವದರಲ್ಲಿಯೂ ಜೀವನದ ವಾಸ್ತವಾನು ಭವದಲ್ಲಿ ತರುವದರಲ್ಲಿಯೂ ಸಾಧಿಸಬೇಕೆಂದು ಅವರು ಹೇಳುತ್ತಿದ್ದರು ; ವಿಚಾರ ಮಾಡದೆ, ಸಾರ್ವತ್ರಿಕವಾದ ಅನುಭವಕ್ಕೆ ಹೋಲಿಸಿ ನೋಡದೆ, ಯಾವದನ್ನೂ ಸುಮ್ಮನೆ ಒಪ್ಪಿಕೊಳ್ಳಬಾರದೆಂದೂ ಹೇಳುತ್ತಿದ್ದರು. ಭೌತವಿಜ್ಞಾನ (Physics)

ರಸಾಯನ ಶಾಸ್ತ್ರ (Chemistry), ಪ್ರಾಣಿಶಾಸ್ತ್ರ (Biology) ಮೊದಲಾದವು ಗಳನ್ನು ಪ್ರಯೋಗಶಾಲೆಯಲ್ಲಿ ನಿರೀಕ್ಷೆ-ಪರೀಕ್ಷೆ-ಪ್ರಯೋಗಗಳಿಗೆ ಗುರಿಪಡಿಸಿ ವಿಚಾರದ ಒರೆಗಲ್ಲಿಗೆ ತಿಕ್ಕಿ ಅವುಗಳ ತತ್ತ್ವಗಳನ್ನು ಕಂಡುಹಿಡಿದಂತೆಯೇ ಧರ್ಮತತ್ತ್ವ-ಅಧ್ಯಾತ್ಮತತ್ತ್ವಗಳನ್ನೂ ವಿವೇಚನೆಯಿಂದ ಪರಿಶೀಲಿಸಿ ಒಪ್ಪಿಕೊಳ್ಳ ಬೇಕೆಂದು ಅವರು ಹೇಳುತ್ತಿದ್ದರು.

ಗಾಢವಾದ ರಾಗೋಜ್ಜ್ವಲತೆಯಿಂದಲೂ ಸೌಂದರ್ಯಾನುಭವದ ಕವಿಸಹಜ ವಾದ ಆನಂದದಿಂದಲೂ ಸುತ್ತಲಿರುವವರೊಡನೆ ತೋರಿಸುತ್ತಿದ್ದ ಏಕಾತ್ಮತೆಯ ಭಾವದಿಂದಲೂ ವಿಶಾಲವಾದ ಮಾನವೀಪ್ರೇಮದಿಂದಲೂ ಅವರು ಕೇವಲ ವಿದ್ವಾಂಸರಾದ ಶುಷ್ಕ ವೇದಾಂತಿಗಳಿಂದ ಭಿನ್ನರಾಗಿದ್ದರು. ಓಂಕಾರ ಗಾನವೇ ಅವರ ನಿತ್ಯದ ಆಹಾರವಾಗಿತ್ತು. ಸಹಜವಾಗಿ, ತಮ್ಮನ್ನು ತಾವು ತಮ್ಮ ವಿರೋಧಿಗಳಲ್ಲಿಯೂ ಕಾಣುತ್ತಿದ್ದ ಗಾಢವಾದ ಭಾವಾವೇಗವು ಅವರ ಶತ್ರುವಿನ ಹೃದಯವನ್ನೂ ವಶಪಡಿಸಿಕೊಳ್ಳುತ್ತಿತ್ತು. ಫೈಜಾಬಾದ್‌ನಲ್ಲಿ ಅವರನ್ನು ಇರಿದು ಕೊಲ್ಲುವದಕ್ಕಾಗಿ ತನ್ನ ವಸ್ತ್ರದಲ್ಲಿ ಕಠಾರಿಯನ್ನು ಮುಚ್ಚಿಟ್ಟುಕೊಂಡು ಬಂದಿದ್ದ ಒಬ್ಬ ಮತಾಂಧ ಮಹಮ್ಮದೀಯನ ಕೋಪಾವಿಷ್ಟವಾದ ವಿತಂಡವಾದವು ಅವರ ಮೋಹಕವಾದ ಮಂದಹಾಸದಿಂದಲೂ ಓಂಕಾರೋಚ್ಚಾರಣೆಯಿಂದಲೂ ಶಾಂತವಾಗಿ, ಆ ವೈರಿಯೂ ಪಶ್ಚಾತ್ತಾಪದಿಂದ ಅವರಿಗೆ ಶರಣಾಗತನಾಗಿ ಕ್ಷಮೆಯನ್ನು ಬೇಡಿ ಸಾಧುವಾದನೆಂಬದು ರಾಮತೀರ್ಥರ ಜೀವನದಲ್ಲಿ ನಡೆದ ವಿಸ್ಮಯಕಾರಕವಾದ ವಾಸ್ತವ ಘಟನೆ. ಅವರ ಕಾಂತಶಕ್ತಿಯ ವ್ಯಕ್ತಿತ್ವವು ಅಷ್ಟು ಸಮ್ಮೋಹಕವಾಗಿತ್ತು.

ಸ್ವಾಮಿ ವಿವೇಕಾನಂದರಂತೆಯೇ ಸ್ವಾಮಿರಾಮತೀರ್ಥರೂ ಭಾರತದಲ್ಲಿ ಆಧ್ಯಾತ್ಮಿಕ ಪುನರುಜ್ಜೀವನವನ್ನು ಉಂಟುಮಾಡಿದರು. ಆಧುನಿಕ ಭಾರತದ ವಿಚಾರ-ಭಾವನೆಗಳ ನಿರ್ಮಾಪಕರಾದ ವಿಭೂತಿಪುರುಷರಲ್ಲಿ ಸ್ವಾಮಿರಾಮತೀರ್ಥರೂ ಮುಖ್ಯರಾದವರು. ಜಡತೆಯನ್ನು ಕಳೆದೆದ್ದು, ಹಗಲು ಕನಸುಗಳನ್ನೂ ಬರಡಾದ ಕರ್ಮಾಚರಣೆಗಳನ್ನೂ ಕೈ ಬಿಟ್ಟು, ತನ್ನನ್ನು ತಾನು ಜಯಿಸುವದರಿಂದ ರಾಷ್ಟ್ರ ಸ್ವಾತಂತ್ರ್ಯವನ್ನು ಸಾಧಿಸಬೇಕೆಂದು ಅವರು ಭಾರತೀಯರನ್ನು ತಮ್ಮ ಬುದ್ಧಿವಾದಗಳಿಂದ ಬಡಿದೆಬ್ಬಿಸಿದರು. ಅವರು ತಮ್ಮ ಅಮೆರಿಕಾದ ಪ್ರವಾಸ-ಪ್ರವಚನಗಳಲ್ಲಿ, ಪಾಶ್ಚಾತ್ತ್ಯರು ಪೌರ್ವಾತ್ಯರನ್ನು ರಾಜಕೀಯ-ಆರ್ಥಿಕಾದಿ ರಂಗಗಳಲ್ಲಿ ಶೋಷಣೆ ಮಾಡುತ್ತಿರುವದನ್ನು, ನಿರ್ಭಯವಾಗಿ-ಯಾವ ನಿಷ್ಠುರ ರಾಜಕಾರಣಿಗೂ ಕಡಿಮೆ ಇಲ್ಲದಂತೆ-ಆದರೆ ನಿಷ್ಠುರವಾಗದಂತೆ, ಆತ್ಮೀಯತೆಯಿಂದ

ಅವರ ಮನಸ್ಸನ್ನು ಒಲಿಸಿಕೊಳ್ಳುವ ರೀತಿಯಲ್ಲಿ ಖಂಡಿಸುತ್ತಿದ್ದರು. ಹಿಂದುಳಿದಿರುವ ತಮ್ಮ ಮಾತೃಭೂಮಿಯ ಪರವಾಗಿ ಧೈರ್ಯೋತ್ಸಾಹಗಳಿಂದ ವಾದಿಸುತ್ತಿದ್ದರು. ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ವೀರಾವೇಶದಿಂದ ಹೋರಾಡಿದ ಕಾಂಗ್ರೆಸ್ ನಾಯಕರಲ್ಲಿ ಅನೇಕರಿಗೆ ಸ್ವಾಮಿರಾಮತೀರ್ಥರೇ ಪ್ರೇರಕಶಕ್ತಿಯೂ ಮಾರ್ಗದರ್ಶಕ ಧ್ರುವತಾರೆಯೂ ಆಗಿದ್ದರು. ಅವರು ೧೯೦೦ ರಲ್ಲಿ ೫೦ ವರ್ಷಗಳಿಗಿಂತಲೂ ಮುಂಚೆಯೇ ಭಾರತವು ಸ್ವಾತಂತ್ರ್ಯವನ್ನು ಪಡೆಯುವದೆಂದು ಹೇಳಿದ್ದ ಭವಿಷ್ಯವು ವಾಸ್ತವ ಘಟನೆಯಾಗಿರುವದು ಲೋಕಪ್ರಸಿದ್ಧವಾದುದು.

ಓಂ ! ಓಂ ! ಓಂ !



ಪೂಜ್ಯಸ್ವಾಮಿ ನಿತ್ಯಾನಂದರು
ಗಣೇಶಪುರಿ–ಮುಂಬಯಿ

# THE PATH OF TRUTH

## ಸತ್ಯದ ಪಥ

### ಕ್ರಿ. ಶ. 1-3-1903 ರಲ್ಲಿ ಅಮೆರಿಕದಲ್ಲಿ ಮಾಡಿದ ಉಪನ್ಯಾಸ

My own self in the form of ladies and gentlemen,

ಸಭ್ಯ ಸ್ತ್ರೀಪುರುಷರರೂಪದಲ್ಲಿರುವ ನನ್ನ ಆತ್ಮವೇ !

ಪತ್ರಿಕೆಗಳಲ್ಲಿ ಪ್ರಕಟಿಸಿರುವಂತೆ ಈ ರಾತ್ರಿಯ ಉಪನ್ಯಾಸದ ವಿಷಯವು "ಸತ್ಯದ ಪಥ" ಎಂದಿದೆ. ಈ ಶಿರೋನಾಮವು ಪಾಶ್ಚಾತ್ತ್ಯರ ಕಿವಿಗಳಿಗೆ ಏನಾದರೂ ಒಂದು ಅರ್ಥವನ್ನು ಕೊಡಬಹುದು; ಆದರೆ ವೇದಾಂತದ ದೃಷ್ಟಿಯಿಂದ ಈ ಶೀರ್ಷಿಕೆಯು ತಪ್ಪಾದುದು. ಸತ್ಯಕ್ಕೆ ಮಾರ್ಗ ಅಥವಾ ಸತ್ಯದ ಮಾರ್ಗ ಎಂಬ ಮಾತು ಪರಸ್ಪರ ವಿರುದ್ಧವಾದುದು, ಅಸಮಂಜಸವಾದುದು. ಸತ್ಯವು ದೂರವಿಲ್ಲ. ಹಾಗಾದರೆ, ಅದಕ್ಕೆ ದಾರಿ ಹೇಗಿರಬೇಕು? ಸತ್ಯವು ಈಗಾಗಲೇ ನಿಮ್ಮೊಡನೆ ಇದೆ; ಸತ್ಯವು ಮೊದಲೇ ನಿಮ್ಮ ಆತ್ಮನೇ ಆಗಿದೆ. ನೀವು ಆಗಲೇ ಅದರಲ್ಲಿಯೇ ಇದ್ದೀರಿ; ಅಲ್ಲ, ನೀವೇ ಸತ್ಯ ಆಗಿದ್ದೀರಿ; ಅದೇ ನೀವು. ಆದ್ದರಿಂದ ಸತ್ಯದ ಪಥ, ಸತ್ಯದ ಮಾರ್ಗ ಎಂಬ ಮಾತನ್ನು ಉಪಯೋಗಿಸುವುದು ತಪ್ಪು. ನಿಮ್ಮ ಪರಮಾತ್ಮ ಜ್ಞಾನದ ಅನುಭವವು ಸಾಧಿಸಲ್ಪಡ ತಕ್ಕುದಲ್ಲ; ಅದು ಪ್ರಯತ್ನದಿಂದ ಸಂಪಾದಿಸಬಹುದಾದುದಲ್ಲ. ಅದು ಸಾಧನದ (ಕರ್ಮದ) ಫಲವಲ್ಲ. ಅದು ಮೊದಲೇ ಸಿದ್ಧವಾಗಿದೆ,; ತಾನೇ ಸಿದ್ಧವಾಗಿದೆ. ನೀವು, ಅದು ಆಗಿಯೇ ಇದ್ದೀರಿ. ನೀವು ಸುಮ್ಮನೆ, ನಿಮ್ಮನ್ನು ಸೆರೆಹಾಕಿರುವ ಆಶೆಗಳ ಕೋಶ ಗಳನ್ನು ಒಡೆದುಕೊಂಡು ಹೊರಗೆ ಬರಬೇಕು, ಅಷ್ಟೆ. ಇದುವರೆಗೆ ನೀವು ಮಾಡಿದ್ದನ್ನೆಲ್ಲಾ ಸುಮ್ಮನೆ ನಾಶಮಾಡಬೇಕು, ಅಷ್ಟೆ; ಇದುವರೆಗೆ ನೀವು ನಡೆಸಿದ್ದನ್ನೆಲ್ಲಾ ಸುಮ್ಮನೆ ಕೆಡಿಸಬೇಕು. ಪರಮಾತ್ಮಾನುಭವ ಮಾಡುವದಕ್ಕೆ, ಮಾಡು—ಎನ್ನುವ ಮಾತಿನ ಸಾಮಾನ್ಯವಾದ ಅರ್ಥದಲ್ಲಿ ಏನನ್ನೂ ಮಾಡಬೇಕಾಗಿಲ್ಲ. ನಿಮ್ಮ ಸುತ್ತಲೂ ನೀವಾಗಿಯೇ ಕಟ್ಟಿಕೊಂಡಿರುವ ಸೆರೆಮನೆಯನ್ನು ಸುಮ್ಮನೆ ನೀವು ಒಡೆದುಕೊಂಡು ಹೊರಗೆ ಬರುವದೇ ತಡ, ಅಷ್ಟರಲ್ಲಿಯೇ ನೀವು ದೇವರಾಗಿರುತ್ತೀರಿ, ಮೂರ್ತಿ ಮತ್ತಾದ ಸತ್ಯವಾಗಿರುತ್ತೀರಿ. ಆದರೆ ತಾವು ಮಾಡಿದ್ದನ್ನು ತಾವು ನಾಶಮಾಡಿಕೊಳ್ಳು ವದೇ ಕೆಲವರಿಗೆ ಬಹಳ ಕಠಿಣವಾದ ಕಾರ್ಯವಾಗುತ್ತದೆ. ಆದ್ದರಿಂದ ಸತ್ಯಕ್ಕೆ ದಾರಿ—ಎನ್ನುವ ವಿಷಯದಲ್ಲಿ, ನಾವಾಗಿಯೇ ಹಾಕಿಕೊಂಡ ಕಟ್ಟನ್ನು ಬಿಚ್ಚಿಕೊಳ್ಳುವ

ಕ್ರಮವೇನು? ಹಿಂದಿನಿಂದ ಇದುವರೆಗೆ ಮಾಡಿದ್ದನ್ನು ಈಗ ಇಲ್ಲ ಮಾಡುವದು ಹೇಗೆ? ಇದನ್ನೇ ಇವತ್ತು ವಿಚಾರ ಮಾಡೋಣ. ಕಟ್ಟಿದ ಪಾಶಗಳನ್ನು ಬಿಚ್ಚಿಕೊಳ್ಳುವದಕ್ಕಾಗಿ ಸ್ವಲ್ಪ ಪ್ರಯತ್ನವನ್ನು ಮಾಡಬೇಕಾಗುತ್ತದೆ. ನಿಮ್ಮನ್ನು ಕಟ್ಟಿಹಾಕಿರುವ ಈ ಪಾಶಗಳು ಸರಪಳಿಗಳು, ಸಂಕೋಲೆಗಳು ಯಾವುವು? ಇವತ್ತು ನಿಮ್ಮ ಕವಿಗಳು ಅದನ್ನು ಮೆಚ್ಚಬಹುದೋ ಮೆಚ್ಚಲಾರರೋ ಅಮೇರಿಕದವರೂ ಯೂರೋಪ್ ಜನರೂ ಈ ದಿನ ಈ ಹೇಳಿಕೆಯ ಸೌಂದರ್ಯವನ್ನು ಗುರುತಿಸಬಹುದೋ ಗುರುತಿಸಲಾರರೋ ಸತ್ಯವು ಮಾತ್ರ ಒಂದೇ ಬಗೆಯಾಗಿರುತ್ತದೆ. ನಿಮ್ಮ ಎಲ್ಲಾ ಆಸಕ್ತಿಗಳೂ ನಿಮ್ಮ ಎಲ್ಲಾ ಅನುರಾಗಗಳೂ, ದ್ವೇಷಗಳೂ, ಎಲ್ಲಾ ಆಶೆಗಳೂ, ಸರಪಳಿಗಳಾಗಿವೆ; ಸಂಕೋಲೆಗಳಾಗಿವೆ ಎಂಬುದೇ ಈ ಸತ್ಯ. ಇವು ನಿಮ್ಮನ್ನು ಕಟ್ಟಿಹಾಕುತ್ತವೆ; ಕಟ್ಟಿಹಾಕಿವೆ. ದೇವರನ್ನು ನೋಡಲು ಇವು ನಿಮ್ಮನ್ನು ಬಿಡುವದಿಲ್ಲ. ಇವುಗಳೇ ನಿಮ್ಮ ಸೆರೆಮನೆ. ನಿಮ್ಮ ಬಯಕೆಗಳೇ ನಿಮ್ಮನ್ನು ಬಂಧಿಸುತ್ತವೆ. ನೀವು ಇಬ್ಬರು ಸ್ವಾಮಿಗಳನ್ನು ಸೇವಿಸಲಾರಿರಿ. ನೀವು ಧನಪಿಶಾಚಿಯನ್ನೂ ದೇವರನ್ನೂ ಒಂದೇ ಸಮಯದಲ್ಲಿ ಸೇವಿಸಲಾರಿರಿ. ಮಾಂಸದ ಮುದ್ದೆಯಾದ ಈ ದೇಹಕ್ಕೆ ನೀವು ದಾಸರಾಗಿದ್ದು ಅದೇ ಕಾಲದಲ್ಲಿಯೇ ವಿಶ್ವದ ಪ್ರಭುವೂ ಆಗಲಾರಿರಿ. ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುವದೆಂದರೆ ವಿಶ್ವದ ನಾಯಕರಾಗುವದು, ನಾಥರಾಗುವದು. ಬಯಕೆಗಳನ್ನು ಪೋಷಿಸುವದೆಂದರೆ ಪ್ರಾಪಂಚಿಕ ವಿಷಯಗಳಿಗೂ ಮಾಂಸದ ವಸ್ತುಗಳಿಗೂ, ಬದ್ಧರಾಗಿರುವದನ್ನೂ ದಾಸರಾಗಿರುವದನ್ನೂ ಗುಲಾಮರಾಗಿರುವದನ್ನೂ ಒಪ್ಪಿಕೊಂಡಂತೆ. ಪ್ರತಿಯೊಬ್ಬನೂ ತಾನು ಕ್ರಿಸ್ತನಾಗಬೇಕೆಂದು ಬಯಸುತ್ತಾನೆ; ಪ್ರತಿಯೊಬ್ಬನಿಗೂ ಸತ್ಯವನ್ನು ಅನುಭವಿಸಬೇಕೆನಿಸುತ್ತದೆ, ತಾನು, ಪೈಗಂಬರನೋ ಪ್ರವಾದಿಯೋ ಧರ್ಮೋಪದೇಶಕನೋ ಆಗಬೇಕೆನಿಸುತ್ತದೆ; ಆದರೆ, ಅದಕ್ಕೆ ಕೊಡಬೇಕಾದ ಬೆಲೆಯನ್ನು ತೆರುವದಕ್ಕೆ ಸಿದ್ಧರಾಗಿರತಕ್ಕವರು ಯಾರಾದರೂ ಇದ್ದರೆ, ಅವರು ಬಹಳ ಕಡಿಮೆ ಜನರೇ ಸರಿ, ಅತಿ ವಿರಳರೇ ಸರಿ.

ಭಾರತದಲ್ಲಿ, ಕುಸ್ತಿಯಲ್ಲಿ ಕುಶಲನಾದಂಥ ಒಬ ದೊಡ್ಡ ಪೈಲ್ವಾನನಿದ್ದನು. ಅವನು ತನ್ನ ಕೈಮೇಲೆ ಒಂದು ಸಿಂಹದ ಚಿತ್ರವನ್ನು ಹಚ್ಚೆ ಚುಚ್ಚಿಸಿಕೊಳ್ಳಬೇಕೆಂದು ಬಯಸಿ ಒಬ್ಬ ಹಜಾಮನನ್ನು ಕರೆದನು. ಅವನು, ತನ್ನ ಎರಡೂ ಕೈಗಳ ಮೇಲೆ ಭವ್ಯವಾದ ದೊಡ್ಡ ಸಿಂಹವನ್ನು ಚಿತ್ರಿಸಬೇಕೆಂದು ಆ ಕ್ಷೌರಿಕನಿಗೆ ಹೇಳಿದನು. ಅವನು, ತಾನು ಸಿಂಹಲಗ್ನದಲ್ಲಿಯೂ ಸಿಂಹರಾಶಿಯಲ್ಲಿಯೂ ಹುಟ್ಟಿರುವುದರಿಂದ ಅದರ ಪೂರ್ಣ ಪ್ರಭಾವದಿಂದ ಸಿಂಹದಂತೆ ಶೂರನೂ ಧೈರ್ಯಶಾಲಿಯೂ ಇರುವುದಾಗಿ ಹೇಳಿಕೊಳ್ಳುತ್ತಿದ್ದನು. ಅದರ ಸಂಕೇತವಾಗಿ ಕೈಗಳ ಮೇಲೆ ಸಿಂಹದ ಚಿತ್ರವನ್ನು ಹಚ್ಚೆ ಹೊಯ್ಸಿಕೊಳ್ಳುವುದಾಗಿಯೂ ಹೇಳಿದನು. ಕ್ಷೌರಿಕನು ತನ್ನ ಸೂಜಿಯನ್ನು ತೆಗೆದುಕೊಂಡು ಆ ಪೈಲ್ವಾನನ ಕೈಯ ಮೇಲೆ ಹಚ್ಚೆ ಚುಚ್ಚುವುದಕ್ಕೆ ಪ್ರಾರಂಭ ಮಾಡಿದನು.

ಅವನು ಸ್ವಲ್ಪ ಚುಚ್ಚುವುದರೊಳಗೆ ಆ ಜಟ್ಟಿಯು ಅದನ್ನು ಸಹಿಸುವುದು ಸಾಧ್ಯವಾಗ ಲಿಲ್ಲ. ಅವನು ಏದುಸಿರು ಬಿಡುತ್ತಾ "ನಿಲ್ಲು, ನಿಲ್ಲು, ಏನು ಮಾಡುತ್ತಿದ್ದಿ?" ಎಂದು ಆ ಕ್ಷೌರಿಕನನ್ನು ಕೇಳಿದನು. ಅವನು "ಸಿಂಹದ ಬಾಲವನ್ನು ಚಿತ್ರಿಸುತ್ತಿದ್ದೇನೆ" ಎಂದು ಹೇಳಿದನು. ಅದಕ್ಕೆ ಆ ಮಲ್ಲನು "ಲಕ್ಷಣವಾದ ಮಾದರಿಯನ್ನು ಬಯಸತಕ್ಕವರು (Fashionable People) ತಮ್ಮ ನಾಯಿಗಳ ಮತ್ತು ಕುದುರೆಗಳ ಬಾಲಗಳನ್ನು ಕತ್ತರಿಸಿ ಹಾಕುತ್ತಾರೆ ಎಂಬುದು ನಿನಗೆ ಗೊತ್ತಿಲ್ಲವೆ? ಮತ್ತು ಬಾಲವಿಲ್ಲದ ಸಿಂಹವನ್ನು ಜನರು ಬಹಳ ಬಲಿಷ್ಠವಾದುದೆಂದು ತಿಳಿಯುತ್ತಾರೆ. ನೀನೇಕೆ ಅದರ ಬಾಲವನ್ನು ಚುಚ್ಚುತ್ತಿದ್ದಿ? ಸಿಂಹದ ಬಾಲವು ಅವಶ್ಯವಿಲ್ಲ" ಎಂದು ವಿಚಿತ್ರವಾದ ನೆಪವನ್ನು ಹೇಳಿದನು. ಹಜಾಮನು "ಒಳ್ಳೆಯದು, ಬಾಲವನ್ನು ಬಿಟ್ಟು ಸಿಂಹದ ಬೇರೆ ಭಾಗ ಗಳನ್ನು ಚಿತ್ರಿಸುತ್ತೇನೆ" ಎಂದು ಹೇಳಿ ಪುನಃ ಸೂಜಿಯನ್ನು ತೆಗೆದುಕೊಂಡು ಅವನ ಕೈಯ ಚರ್ಮದಲ್ಲಿ ಚುಚ್ಚುವುದಕ್ಕೆ ತೊಡಗಿದನು. ಪಾಪ! ಆ ಮನುಷ್ಯನು ಅದನ್ನೂ ಸಹಿಸಲಾರದಾದ. "ಈಗೇನು ಮಾಡುತ್ತಿದ್ದಿ?" ಎಂದು ಆಕ್ಷೇಪಿಸಿದನು. "ನಾನೀಗ ಸಿಂಹದ ಕಿವಿಯನ್ನು ಬರೆಯುತ್ತಿದ್ದೇನೆ" ಎಂದು ಆ ನಾಪಿತನು ಹೇಳಿದನು. ಪುನಃ ಆ ಜಟ್ಟಿಯು "ಏನಯ್ಯ! ಎಂಥಾ ಮೂರ್ಖ ನೀನು. ಜನರು ತಮ್ಮ ನಾಯಿಗಳ ಕಿವಿಗಳನ್ನು ಕತ್ತರಿಸಿ ಹಾಕುತ್ತಾರೆಂಬುದು ನಿನಗೆ ತಿಳಿಯದೆ? ಉದ್ದ ಕಿವಿಗಳುಳ್ಳ ನಾಯಿಗಳು ಅವರಿಗೆ ಬೇಕಾಗಿಲ್ಲ. ಕಿವಿಗಳಿಲ್ಲದ ಸಿಂಹವೇ ಶ್ರೇಷ್ಠವೆಂಬುದು ನಿನಗೆ ತಿಳಿಯದೆ?" ಎಂದು ಹೇಳಿದನು. ಆ ಹಜಾಮನು ಸ್ವಲ್ಪ ಹೊತ್ತು ತಡೆದು, ಪುನಃ ಚುಚ್ಚುವುದಕ್ಕೆ ತೊಡಗಿದನು. ಆ ಪೈಲ್ವಾನನು ಅದನ್ನೂ ಸೈರಿಸಲಾರದೆ. "ಏ ಹಜಾಮ! ಏನು ಮಾಡುತ್ತಿದ್ದಿ?" ಎಂದು ರೇಗಿದನು. 'ನಾನೀಗ ಸಿಂಹದ ಸೊಂಟವನ್ನು ಚಿತ್ರಿಸುತ್ತಿದ್ದೇನೆ' ಎಂದು ಅವನು ಹೇಳಿದನು. "ಎಂಥಾ ಅವಿವೇಕಿ ನೀನು! ಭಾರ ತೀಯ ಕವಿಗಳ ಕವಿತೆಗಳನ್ನು ನೀನು ಓದಿಲ್ಲವೆ? ಅವರು ಸಿಂಹಕ್ಕೆ ಸಣ್ಣ ತೆಳುವಾದ, ಹೆಸರಿಗೆ ಮಾತ್ರ ಇರುವ, 'ಕೃಶಕಟಿ' 'ಸಿಂಹಕಟಿ' ಯನ್ನು ವರ್ಣಿಸಿಲ್ಲವೆ? ನೀನು ಸಿಂಹಕ್ಕೆ ಸೊಂಟವನ್ನೇ ತೋರಿಸಬೇಕಾಗಿಲ್ಲ" ಎಂದನು. ಆ ಹಜಾಮನು ಸಿಟ್ಟಿನಿಂದ ತನ್ನ ಸೂಜಿಯನ್ನೂ, ಬಣ್ಣಗಳನ್ನೂ ತೆಗೆದೊಗೆದು, ಆ ಹೇಡಿಗೆ ತನ್ನ ಸಮೀಪದಿಂದ ಹೊರಟು ಹೋಗಲು ಹೇಳಿದನು.

ಈ ಮನುಷ್ಯನು ತಾನು ಸಿಂಹರಾಶಿಯ ಪ್ರಭಾವದಲ್ಲಿ ಹುಟ್ಟಿದವನಾದುದರಿಂದ ಪುರುಷಸಿಂಹನೆಂದೂ ತನ್ನ ಸಮಾನ ಜಟ್ಟಿಗಳೂ ಕುಸ್ತಿಮಾಡತಕ್ಕವರೂ ಇಲ್ಲವೆಂದೂ ನಟನೆ ಮಾಡುತ್ತಿದ್ದ, ಇದನ್ನು ಜನರಿಗೆ ತೋರಿಸುವದಕ್ಕಾಗಿ ತನ್ನ ಮೈ ಮೇಲೆಲ್ಲಾ ಹಚ್ಚೆ ಚುಚ್ಚಿಸಿಕೊಳ್ಳುವುದರ ಮೂಲಕ ಸಿಂಹಗಳನ್ನು ಪ್ರದರ್ಶಿಸಬೇಕೆಂದು ಬಯಸು ತ್ತಿದ್ದ. ಆದರೆ ಅವನು ಸೂಜಿಯ ಚುಚ್ಚಿನ ನೋವನ್ನು ಮಾತ್ರ ಸಹಿಸಲಾರದಾದ. ದೇವ ರನ್ನು ನೋಡಬೇಕೆನ್ನುವವರಲ್ಲಿ, ವೇದಾಂತ ತತ್ತ್ವವನ್ನು ಅನುಭವ ಮಾಡಬೇಕೆಂದು

ಬಯಸುವವರಲ್ಲಿ, ಈ ನಿಮಿಷವೇ ಸತ್ಯವನ್ನು ಸಂಪೂರ್ಣವಾಗಿ ಅರಿಯಬೇಕೆನ್ನುವವರಲ್ಲಿ, ಕಣ್ಣು ಮಿಳುಕಿಸುವದರೊಳಗೆ ಸಮಸ್ತವನ್ನೂ ಸಾಧಿಸಬೇಕೆನ್ನುವವರಲ್ಲಿ. ಅರ್ಧ ನಿಮಿಷದಲ್ಲಿ ಕ್ರಿಸ್ತನಾಗಬೇಕನ್ನುವವರಲ್ಲಿ ಬಹುಭಾಗ ಜನರು ಇಂಥವರೇ ಇರುತ್ತಾರೆ. ಆದರೆ, ಅವರ ಆತ್ಮಗಳಲ್ಲಿ ಆ ಸಿಂಹವನ್ನು—ಆ ಸತ್ಯವನ್ನು—ಚಿತ್ರಿಸಿಕೊಳ್ಳುವಾಗ, ಅವರ ಜೀವದಿರುವಿಕೆಯಲ್ಲಿ ಸತ್ಯ-ಧರ್ಮಗಳ ಸಿಂಹವನ್ನು ಮುದ್ರಿಸಿಕೊಳ್ಳುವಾಗ, ಚುಚ್ಚಿಸಿಕೊಳ್ಳುವಾಗ, ಆ ಕುಟುಕಿನ ನೋವನ್ನು ಮಾತ್ರ ಅವರು ಸಹಿಸಿಕೊಳ್ಳಲಾರರು. ಯಾವದೊಂದು ಸಾಧನೆಯಲ್ಲಿ ಶ್ರಮವೋ ವ್ಯಥೆಯೋ ಇದೆಯೆಂದರೆ, ಅವರು ಹಿಂಜರಿಯುತ್ತಾರೆ. ‘ಬೆಲೆಯನ್ನು ನಾನು ಕೊಡಲಾರೆ, ಆದರೆ ಫಲವು ಮಾತ್ರ ನನಗೆ ಬೇಕು; ವಸ್ತುವು ಮಾತ್ರ ಬೇಕು’ ಎಂದು ಹೇಳುವ ಮನೋಭಾವದವರು ಅವರು.

ನೀವು ಸತ್ಯವನ್ನು ಸೇರುವುದಕ್ಕೋಸ್ಕರ ಮತ್ತು ದೇವತ್ವದ ಅನುಭವ ಪಡೆಯುವದಕ್ಕೋಸ್ಕರ ನಿಮ್ಮ ಅತ್ಯಂತ ಪ್ರಿಯವಾದ ಬಯಕೆಗಳೂ ಆಶೆಗಳೂ ಒಳಹೊರಗೆಲ್ಲಾ ಚುಚ್ಚಲ್ಪಡುತ್ತವೆ; ನಿಮ್ಮ ಪ್ರಿಯತಮವಾದ ವಾಂಛೆಗಳೂ ಕೋರಿಕೆಗಳೂ ಮತ್ತು ಅನುರಾಗಗಳೂ ಆಸಕ್ತಿಗಳೂ ಕತ್ತರಿಸಲ್ಪಡಬೇಕಾಗುತ್ತದೆ; ನಿಮ್ಮ ಎಲ್ಲಾ ಅಚ್ಚುಮೆಚ್ಚಿನ ಮೂಢ ನಂಬಿಕೆಗಳೂ ಮೂಢ ಭಕ್ತಿಗಳೂ ಮೂಢಾಚರಣೆಗಳೂ ಅವಿಚಾರ ಭಾವನೆಗಳೂ ಪೂರ್ವಗ್ರಹಗಳೂ ತೊಡೆದು ಹಾಕಲ್ಪಡಬೇಕು, ನಿರ್ಮೂಲ ಮಾಡಲ್ಪಡಬೇಕು; ವಿಚಾರಕ್ಕೆ ಮೊದಲೇ ಮಾಡಿಕೊಂಡ ಕಲ್ಪನೆಗಳೂ ಅಭಿಪ್ರಾಯಗಳೂ ಹರಿದು ಹರಿದು ಹಾಕಲ್ಪಡಬೇಕು. ನಿಮ್ಮನ್ನು ಹೀನಾಯಗೊಳಿಸುವ, ಭ್ರಷ್ಟರನ್ನಾಗಿ ಮಾಡುವ ಎಲ್ಲಾ ಹಂಬಲಿಕೆಗಳಿಂದಲೂ ವಿಮೋಚನೆಯನ್ನು ಹೊಂದಬೇಕು; ಬಿಡುಗಡೆಯನ್ನು ಪಡೆಯಬೇಕು. ನಿಮ್ಮನ್ನು ನೀವು ಪರಿಶುದ್ಧಗೊಳಿಸಬೇಕು. ಪರಿಶುದ್ಧಿ, ಪರಿಶುದ್ಧಿ, ಮನಶ್ಶುದ್ಧಿ—ಇದೇ ಬ್ರಹ್ಮಪ್ರಾಪ್ತಿಯ ಬೀಜಮಂತ್ರ. ಬೆಲೆಯನ್ನು ಕೊಡದೆ ನೀವು ದೇವರನ್ನು ಸೇರಲಾರಿರಿ. ಜನ್ಮಸಿದ್ಧವಾದ ನಿಮ್ಮ ಹಕ್ಕನ್ನೇ ನೀವು ತಿರುಗಿ ಪಡೆಯಲಾರಿರಿ. "Blessed are the pure in heart, for they shall see God" "ಹೃದಯ ಶುದ್ಧಿಯುಳ್ಳವರು ಪುಣ್ಯಾತ್ಮರು, ಧನ್ಯರು, ಏಕೆಂದರೆ ಅವರು ದೇವರನ್ನು ಕಾಣುತ್ತಾರೆ." ಹೃದಯ ಶುದ್ಧಿ—ಎಂದರೆ ಏನು? (ಸ್ತ್ರೀಪುರುಷ) ಕಾಮ ಸಂಬಂಧವಾದ ಪಾಪದಿಂದ ಮಾತ್ರ ವಿಮುಖನಾಗಿರುವದು—ಎಂದು ಇದರ ಅರ್ಥವಲ್ಲ. ಆ ಅರ್ಥವೂ ಸರಿ; ಆದರೆ ಅಷ್ಟೇ ಅರ್ಥವಲ್ಲ; ಹೃದಯ ಶುದ್ಧಿಯೆನ್ನುವದಕ್ಕೆ ಬಹಳ ಹೆಚ್ಚಾದ ಅರ್ಥವಿದೆ. ಇವತ್ತು ನಿಮಗೆ ಈ ಮಾತುಗಳು ರುಚಿಸದೇ ಇರಬಹುದು; ಒಂದು ದಿನವಲ್ಲದಿದ್ದರೆ ಇನ್ನೊಂದು ದಿನ ನೀವು ಅದನ್ನು ಒಪ್ಪಲೇ ಬೇಕು. ಇವತ್ತೋ ನಾಳೆಯೋ ನೀವು ಈ ತೀರ್ಮಾನಕ್ಕೆ ಬರಲೇ ಬೇಕು. ಈ ತೀರ್ಮಾನವೇನೆಂದರೆ, ಎಲ್ಲಾ ಆಸಕ್ತಿಗಳೂ—ಅದು ನಿಮ್ಮ ಮನೆಯ ಅಭಿಮಾನ ಆಸಕ್ತಿಗಳೇ ಇರಲಿ, ನಿಮ್ಮ

ಗಡಿಯಾರದಲ್ಲಿ, ನಿಮ್ಮ ನಾಯಿಯಲ್ಲಿ, ಅದು ಯಾವುದರಲ್ಲಿಯಾದರೂ ಅಭಿಮಾನ ವಾಗಿರಲಿ, ತಂದೆ ತಾಯಿಗಳಲ್ಲಿಯೇ ಅಭಿಮಾನವಿರಲಿ ಮಗುವಿನಲ್ಲಿಯೇ ಹೆಂಡತಿ ಯಲ್ಲಿಯೇ ಮಮತೆಯಿರಲಿ–ಸತ್ಯವನ್ನು ಅನುಭವ ಮಾಡಬೇಕೆಂಬ ಹಂಬಲವುಳ್ಳವನಿಗೆ ಸಂಪೂರ್ಣ ಸತ್ಯವನ್ನೇ—ಈ ನಿಮಿಷದಲ್ಲಿ–ಸ್ವಾಧೀನಪಡಿಸಿಕೊಳ್ಳಬೇಕೆಂದು ಬಯಸ ತಕ್ಕವನಿಗೆ, ಅಂಥಾ ಉದಾತ್ತವಾದ ಆಕಾಂಕ್ಷೆಯುಳ್ಳವನಿಗೆ ಆ ಅಭಿಮಾನ–ಆಸಕ್ತಿಗಳು ವ್ಯಭಿಚಾರದಷ್ಟೇ ಹೀನಾಯವೂ ಅಪಮಾನಕರವೂ ಅವನತಿಪ್ರದವೂ ದೌರ್ಬಲ್ಯವೂ ಆಗಿವೆ. ಇದೇ ಆ ಅಂತಿಮ ನಿರ್ಣಯ. ಯಾವ ಪ್ರಾಪಂಚಿಕ ವಿಷಯಕ್ಕೂ ಅಂಟಿ ಕೊಳ್ಳದಂತೆ, ಜೋತುಬೀಳದಂತೆ, ಎಲ್ಲಾ ವಿಷಯಾಸಕ್ತಿಗಳಿಂದಲೂ ನಿಮ್ಮನ್ನು ನೀವು ಬಿಡುಗಡೆ ಮಾಡಿಕೊಳ್ಳುವುದೇ ಹೃದಯ ಶುದ್ಧಿಯಾಗಿದೆ. ಪರಮಾತ್ಮ ಪ್ರಾಪ್ತಿ ಯಾಗುವುದಕ್ಕೆ ಪರಮಾತ್ಮನಲ್ಲಿ ಅವ್ಯಭಿಚಾರಿಯಾದ ಭಕ್ತಿಯು ಬೇಕು; (ಭಕ್ತಿರವ್ಯಭಿ ಚಾರಿಣೀ) ಪ್ರೀತಿಯು ಬೇಕು. ವ್ಯಭಿಚಾರವೆಂದರೆ ಪ್ರೀತಿಗೆ ಒಂದೇ ವಸ್ತುವಿನಲ್ಲಿ ನಿಷ್ಠೆಯಿಲ್ಲದೆ ಬೇರೆ ಬೇರೆ ವಸ್ತುಗಳಲ್ಲಿ ಹರಿದಾಡುತ್ತಿರುವುದು; ಅಥವಾ ಪ್ರೀತಿಯು ಒಂದೇ ವಸ್ತುವಿನಲ್ಲಿ ನೆಲೆಯಾಗಿ ನಿಲ್ಲದೆ, ಇನ್ನೊಂದಕ್ಕೆ ಹರಿಯುವದೇ ವ್ಯಭಿಚಾರ· ಪ್ರೀತಿಯು ಪರಮಾತ್ಮನನ್ನು ಬಿಟ್ಟು ಬೇರೆ ಯಾವ ವಸ್ತುವಿನಲ್ಲಿ ಇದ್ದರೂ, ಆ ಅಭಿ ಮಾನವೂ ಆಸಕ್ತಿಯೂ ವ್ಯಭಿಚಾರವೇ. ಆದ್ದರಿಂದ ಯಾವ ಆಸಕ್ತಿಯಾದರೂ–ಅಧ್ಯಾತ್ಮ ದೃಷ್ಟಿಯಿಂದ–ನೈತಿಕ ವ್ಯಭಿಚಾರದಷ್ಟೇ ಕೀಳಾದುದು, ಪತನಕ್ಕೆ ಕಾರಣವಾದುದು. ಆದ್ದರಿಂದ ಎಲ್ಲಾ ಆಸಕ್ತಿಗಳನ್ನೂ ಕಳೆದುಕೊಂಡ ಶುದ್ಧವಾದ ಹೃದಯಕ್ಕೇ ದೇವರ ದರ್ಶನವಾಗುತ್ತದೆ. ಹೃದಯಶುದ್ಧಿ ಎಂದರೆ ತ್ಯಾಗ. ಸರ್ವಸ್ವತ್ಯಾಗ. ತ್ಯಾಗದಲ್ಲಿ ಸ್ವಲ್ಪ ನ್ಯೂನತೆಯಾದರೂ ಕೊರತೆಯಾದರೂ ಹೃದಯವು ಶುದ್ಧವಾಗುವುದಿಲ್ಲ. ಆದ್ದರಿಂದಲೇ 'ಹೃದಯದಲ್ಲಿ ಪರಿಶುದ್ಧರಾಗಿರತಕ್ಕವರು ದೇವರನ್ನು ನಿಶ್ಚಯವಾಗಿಯೂ ಕಾಣುತ್ತಾರಾದ್ದರಿಂದ ಧನ್ಯರು' ಎಂದು ಹೇಳಿದೆ. ಮನಸ್ಸಿನಲ್ಲಿ ಈ ಶುದ್ಧಿಯನ್ನು ಸಂಪಾದಿಸಿಕೊಳ್ಳಿ, ನೀವು ದೇವರನ್ನು ಕಂಡೇ ಕಾಣುತ್ತೀರಿ.

ಹಳೆಯ ಪುರಾಣದಲ್ಲಿ ಆಟ್ಲಾಂಟಾ ಎಂಬುವವಳ ಒಂದು ಬಹಳ ಸುಂದರವಾದ ಕಥೆಯಿದೆ. ಆಕೆಯನ್ನು ಮದುವೆಯಾಗುವದಕ್ಕೆ ಬಯಸಿದ ಪ್ರತಿಯೊಬ್ಬ ಪುರುಷನೂ ಆಕೆಯೊಡನೆ ಪಂಥ ಕಟ್ಟಿ ಓಡಬೇಕಾಗಿತ್ತು. ಓಟದಲ್ಲಿ ಯಾರೂ ಆಕೆಯನ್ನು ಸೋಲಿಸು ವದಕ್ಕೆ ಸಾಧ್ಯವಿರಲಿಲ್ಲ. ಹಾಗೆ ಸೋಲಿಸಿದವನನ್ನೇ ತಾನು ಮದುವೆಯಾಗುವುದಾಗಿ ಆಕೆಯು ಪಣ ತೊಟ್ಟಿದ್ದಳು. ಒಬ್ಬ ಜಾಣನಾದ ಮನುಷ್ಯನು ತನ್ನ ಉಪಾಸ್ಯದೇವ ನಾದ ಬೃಹಸ್ಪತಿಯನ್ನು ಪ್ರಾರ್ಥಿಸಿ, ಓಟದ ಪಂದ್ಯಾಟದಲ್ಲಿ ಆಟ್ಲಾಂಟಳನ್ನು ಸೋಲಿಸಿ ಆಕೆಯನ್ನು ತಾನು ಗೆದ್ದುಕೊಳ್ಳುವುದು ಹೇಗೆಂದು ಸಲಹೆ ಕೇಳಿದನು. ಆ ದೇವರು ಅವನಿಗೆ ವಿಚಿತ್ರವಾದೊಂದು ಸಲಹೆ ಮಾಡಿದನು. ಅವರು ಓಡುವ ದಾರಿಯಲ್ಲಿ ಬಂಗಾರದ ಇಟ್ಟಿಗೆಗಳನ್ನು ಹರಡಬೇಕೆಂದು ಆ ಮನುಷ್ಯನಿಗೆ ಬೃಹಸ್ಪತಿಯು ಹೇಳಿದನು.

ಬೃಹಸ್ಪತಿಯಾದರೂ ಅವನ ಭಕ್ತನಿಗೆ ಈ ವಿಷಯದಲ್ಲಿ ಬೇರೆ ರೀತಿಯಿಂದ ಸಹಾಯ ಮಾಡುವಂತಿರಲಿಲ್ಲ. ಏಕೆಂದರೆ, ತಾನು ಇಡೀ ವಿಶ್ವದಲ್ಲಿಯೇ ಅತ್ಯಂತ ಬಲಿಷ್ಠಳೂ ವೇಗಶಾಲಿಯೂ ಆಗಬೇಕೆಂದು ಪರಮೇಶ್ವರನಿಂದ ಅಟ್ಲಾಂಟಳು ವರವನ್ನು ಪಡೆದಿದ್ದಳು. ಆದರೆ ಆ ಬೃಹಸ್ಪತಿಯ ಭಕ್ತನು ಓಡುವ ಜಾಡಿನಲ್ಲಿ ಬಂಗಾರದ ಇಟ್ಟಿಗೆಗಳನ್ನು ಉದ್ದಕ್ಕೂ ಎಸೆದು. ತನ್ನ ಜೊತೆಗೆ ಓಡಲು ಆಕೆಯನ್ನು ಆಹ್ವಾನಿಸಿದನು. ಇಬ್ಬರೂ ಓಡುವುದಕ್ಕೆ ತೊಡಗಿದರು. ಆತನು ಆಕೆಗಿಂತ ಸ್ವಾಭಾವಿಕವಾಗಿ ಹೆಚ್ಚು ದುರ್ಬಲವಾಗಿದ್ದನು. ಆದ್ದರಿಂದ ಆಕೆಯು ಒಂದು ಕ್ಷಣದಲ್ಲಿ ಅವನನ್ನು ಹಿಂದೆ ಹಾಕಿದಳು. ಅವನು ಕಣ್ಣಿಗೆ ಕಾಣದಷ್ಟು ದೂರವಾದೊಡನೆ ಅಟ್ಲಾಂಟಳು ದಾರಿಯಲ್ಲಿದ್ದ ಬಂಗಾರದ ಇಟ್ಟಿಗೆಗಳನ್ನು ಕಂಡು, ಅವುಗಳನ್ನು ಆರಿಸಿಕೊಳ್ಳಲು ನಿಂತಕೂಡಲೇ ಆ ಗುರುಭಕ್ತನು ಆಕೆಯನ್ನು ಮೀರಿ ಮುಂದೆ ಓಡುತ್ತಿದ್ದನು. ಅನಂತರ ಸುಮಾರು ಒಂದು ನಿಮಿಷದಲ್ಲಿ ಅಟ್ಲಾಂಟಳು ಅವನನ್ನು ಓಟದಲ್ಲಿ ಹಿಂದೆ ಹಾಕುತ್ತಿದ್ದಳು. ಆಗ ಪುನಃ ಜಾಡಿನಲ್ಲಿ ಎಡಕ್ಕೆ ಒಂದು ಬಂಗಾರದ ಇಟ್ಟಿಗೆಯನ್ನು ಕಂಡು ಆಕೆ ಅದನ್ನು ತೆಗೆದುಕೊಳ್ಳಲು ಹೋದಳು. ಆಗ ಮತ್ತೆ ಆ ಬೃಹಸ್ಪತಿ ಭಕ್ತನು ಆಕೆಯನ್ನು ಹಿಂದೆ ಹಾಕಿ ಮುಂದೆ ಓಡಿದನು. ಸ್ವಲ್ಪ ಹೊತ್ತಿನಲ್ಲಿ ಅಟ್ಲಾಂಟಳು ಮುಂದೋಡಿದಳು. ಆದರೆ ಅಲ್ಲಿ ಬಿದ್ದಿರುವ ಇನ್ನೂ ಕೆಲವು ಬಂಗಾರದ ಇಟ್ಟಿಗೆಗಳನ್ನು ಕಂಡು, ಅವನ್ನು ತೆಗೆದುಕೊಳ್ಳಲು ಆ ವಧುವು ಮತ್ತೆ ಬಗ್ಗಿದಳು, ಅಷ್ಟರಲ್ಲಿ ಆ ವರನು ಮುಂದೋಡಿದನು. ಇಬ್ಬರಿಗೂ ಹೀಗೆಯೇ ಬಹಳ ಹೊತ್ತು ಸ್ಪರ್ಧೆಯು ನಡೆಯಿತು. ಕೊನೆಕೊನೆಯಲ್ಲಿ. ಅಟ್ಲಾಂಟಳ ಕೈಯಲ್ಲಿದ್ದ ಇಟ್ಟಿಗೆಗಳ ಹೊರೆಯ ಭಾರ ಹೆಚ್ಚಾಯಿತು. ಆ ಹೊರೆಯನ್ನೂ ಹೊತ್ತುಕೊಂಡು ಓಡುವುದೂ ಅವನನ್ನು ಹಿಂದೆ ಹಾಕುವುದೂ ಆಕೆಗೆ ಕಷ್ಟವಾಯಿತು. ಅಂತ್ಯದಲ್ಲಿ ಅಟ್ಲಾಂಟಳನ್ನು ಸೋಲಿಸಿ ಬೃಹಸ್ಪತಿ ಭಕ್ತನೇ ಜಯಶಾಲಿಯಾದನು. ಆಕೆಯೂ ಆಕೆಯ ಎಲ್ಲಾ ಬಂಗಾರವೂ ಅವನ ವಶವಾದವು. ಆಕೆಯೇ ಅವನನ್ನು ಲಗ್ನವಾದಳು. ಎಲ್ಲ ಲಾಭವೂ ಅವನಿಗಾಯಿತು.

ಸತ್ಯ ಧರ್ಮಗಳ ಪಥದಲ್ಲಿ ನಡೆಯಬೇಕೆನ್ನುವ ಬಹುಜನರ ಪರಿಸ್ಥಿತಿಯೂ ಪ್ರವೃತ್ತಿಯೂ ಹೀಗೆಯೇ ಇರುತ್ತದೆ. ನೀವು ಸತ್ಯಮಾರ್ಗದಲ್ಲಿ ನಡೆಯುವದಕ್ಕೆ ತೊಡಗಿದೊಡನೆ ಅನೇಕ ವಿಧವಾದ ಕ್ಷುದ್ರ ಲಾಭಗಳೂ ಪ್ರಲೋಭನೆಗಳೂ ನಿಮ್ಮ ಸುತ್ತಲೂ ಸೇರಿ ನಿಮ್ಮನ್ನು ಮರುಳು ಮಾಡುತ್ತವೆ. ಅವುಗಳ ಸೆಳೆತಕ್ಕೆ ಮನ ಸಿಕ್ಕು ಆ ಪ್ರಾಪಂಚಿಕ ಸುಖವನ್ನೂ ಮನೋರಂಜನೆಗಳನ್ನೂ ಭೋಗಿಸುವದಕ್ಕೆ ಸೋತ ಕೂಡಲೇ ನೀವು ಹಿಂದೆ ಬೀಳುವದನ್ನು ಕಾಣಬಹುದು. ನೀವು ಸ್ಪರ್ಧೆಯಲ್ಲಿ ಸೋಲುತ್ತೀರಿ; ಸುಮ್ಮನೆ ಕಾಲಹರಣ ಮಾಡುತ್ತೀರಿ. ನಿಮ್ಮ ಮಾರ್ಗವನ್ನು ನೀವು ಉತ್ಸಾಹ ಶೂನ್ಯವಾಗಿಯೂ ಕಷ್ಟಕರವಾಗಿಯೂ ಮಾಡಿಕೊಳ್ಳುತ್ತೀರಿ. ಎಲ್ಲವನ್ನೂ ಕಳೆಕೊಳ್ಳುತ್ತೀರಿ. ಆದ್ದರಿಂದ ಪ್ರಾಪಂಚಿಕ ಬಂಧ-ಸಂಬಂಧಗಳ ವಿಷಯದಲ್ಲಿಯೂ

ವಿಷಯಾಸಕ್ತಿಯಲ್ಲಿಯೂ ಬಹಳ ಹುಷಾರಾಗಿರಬೇಕು, ಎಚ್ಚರವಾಗಿರಬೇಕು. ಪ್ರಾಪಂಚಿಕ ಸುಖವನ್ನು ಭೋಗಿಸುತ್ತಾ ನೀವು ಸತ್ಯವನ್ನು ಕಾಣಲಾರಿರಿ. ಸತ್ಯವನ್ನು ಅನುಭವಿಸಿದರೆ ಪ್ರಾಪಂಚಿಕ ಸುಖವನ್ನು ಅನುಭವಿಸಲಾರಿರಿ ಎಂದು ಸಜ್ಜನರು ಹೇಳುತ್ತಾರೆ. ವಿಷಯಸುಖವನ್ನು ಅನುಭವಿಸುವದಕ್ಕೆ ನಿಂತ ಕೂಡಲೇ ಸತ್ಯವು ನಿಮ್ಮ ಗ್ರಹಿಕೆಯನ್ನು ತಪ್ಪಿಸಿಕೊಂಡು ನಿಮ್ಮನ್ನು ಮೀರಿ ದೂರವಾಗುತ್ತದೆ. ರಾಮನು ಇವತ್ತು ನಿಮಗೆ ಸತ್ಯವನ್ನು ಹೇಳುತ್ತಿದ್ದಾನೆ. ಅನೇಕ ಜನರು ರಾಮನಲ್ಲಿಗೆ ಬಂದು ತಮಗೆ ಸತ್ಯದ ಅನುಭವವಾಗಬೇಕೆಂದು ಮತ್ತೆ ಮತ್ತೆ ಹೇಳುತ್ತಾರೆ. ಈ ನಿಮಿಷ ದಲ್ಲಿಯೇ ನಿಮಗೆ ತತ್ತ್ವಾನುಭವದ ಲಾಭವಾಗಬಹುದು. ಆದರೆ, ಎಲ್ಲಾ ಆಸಕ್ತಿ ಗಳನ್ನೂ ಕಳೆದುಕೊಳ್ಳಿರಿ; ಎಲ್ಲಾ ದ್ವೇಷಾಸೂಯೆಗಳನ್ನೂ ಅಂತಃಕರಣದಿಂದ ಜಾಡಿಸಿ ಕೊಡವಿ ಹಾಕಿರಿ. ಅಸೂಯೆ ಎಂದರೆ ಏನು? ದ್ವೇಷ ಎಂದರೆ ಏನು? ಆಸಕ್ತಿ ತಲೆಕೆಳಗಾದುದೇ ದ್ವೇಷಾಸೂಯೆ. ನಾವು ಒಬ್ಬರನ್ನು ದ್ವೇಷಿಸುವುದು ಏಕೆಂದರೆ, ನಮ್ಮ ಆಸಕ್ತಿಯು ಬೇರೊಂದರಲ್ಲಿ ಅಥವಾ ಬೇರೊಬ್ಬರಲ್ಲಿ ಇರುವದೇ ಕಾರಣ. ಇಲ್ಲಿ ನೀವು ಒಂದು ಪ್ರಶ್ನೆಯನ್ನು ಕೇಳಬಹುದು. ಅಭಿಮಾನವನ್ನೂ ಆಸಕ್ತಿ ಯನ್ನೂ ಎಲ್ಲವನ್ನೂ ತ್ಯಾಗಮಾಡಬೇಕೆಂದರೆ ಅಭಿಮಾನಾದಿಗಳಿಗೆ ಕಾರಣರಾದಂಥ ಹೆಂಡತಿಯನ್ನೂ ಗಂಡನನ್ನೂ ಮಕ್ಕಳನ್ನೂ ತಂದೆತಾಯಿಗಳನ್ನೂ ಅಣ್ಣತಮ್ಮಂದಿರು ಮೊದಲಾದವರನ್ನೂ ಬಿಡುವುದು ಹೇಗೆ?—ಎಂದು. ಒಳ್ಳೆಯದು. ಅವರನ್ನೆಲ್ಲಾ ಹೇಗೆ ಬಿಡಬೇಕೆಂಬುದೂ ಬಿಡಬೇಕೋ ಬಿಡಬಾರದೋ ಎಂಬುದೂ ನಿಮಗೆ ಸಂಬಂಧಪಟ್ಟದ್ದು. ಆದರೆ, ಸತ್ಯವೇನೆಂದರೆ, ಸತ್ಯವೇ ಅಥವಾ ದೇವರೇ ನಿಮಗೆ ತಂದೆಯಾಗಬೇಕು; ಸತ್ಯವೇ ಅಥವಾ ದೇವರೆ ನಿಮಗೆ ತಾಯಿಯಾಗಬೇಕು. ದೇವರೇ ಅಥವಾ ಸತ್ಯವೇ ನಿಮಗೆ ಹೆಂಡತಿಯಾಗಬೇಕು. ನಿಮಗೆ ಅಜ್ಜನೂ ಗುರುವೂ ಮನೆಯೂ ಆಸ್ತಿಯೂ ಎಲ್ಲವೂ ದೇವರೇ ಆಗಲಿ. ಪ್ರತಿಯೊಂದು ವಿಷಯದಿಂದಲೂ ನಿಮ್ಮ ಎಲ್ಲಾ ಆಸಕ್ತಿ ಗಳನ್ನೂ ಕತ್ತರಿಸಿ ಹಾಕಿ. ನಿಮ್ಮ ದೇವತ್ವವೆನ್ನುವ ಒಂದೇ ಸತ್ಯದ ಮೇಲೆ ಎಲ್ಲಾ ಪ್ರೀತಿ ಆಸಕ್ತಿಗಳನ್ನೂ ಕೇಂದ್ರೀಕರಿಸಿರಿ. ಆ ಕ್ಷಣದಲ್ಲಿಯೇ ಅಲ್ಲಿಯೇ ಸತ್ಯದ ಅನುಭವ ವನ್ನು ಪಡೆಯುತ್ತೀರಿ.

ಭಾರತೀಯ ಭಾಷೆಯಲ್ಲಿ ಒಂದು ಸೊಗಸಾದ ಗೀತೆಯಿದೆ, ಪದ್ಯವಿದೆ. ಇಲ್ಲಿ ಅದನ್ನೇನೂ ಹಾಡುವ ಅವಶ್ಯವಿಲ್ಲ. ಆ ಗೀತೆಯ ಸಾರಾಂಶವೇನೆಂದರೆ, ಸತ್ಯವನ್ನು ಅನುಭವ ಮಾಡುವದಕ್ಕೆ ನಿಮ್ಮ ತಂದೆಯು ದಾರಿಯಲ್ಲಿ ಅಡ್ಡಲಾಗಿ ನಿಂತರೆ,—ಇಂಡಿಯಾ ದೇಶದಲ್ಲಿಯ ಮಹಾಭಕ್ತ ಶಿರೋಮಣಿಯಾದ ಪ್ರಹ್ಲಾದನು, ಸತ್ಯ—ಧರ್ಮಗಳ ಸಾಧನೆಗೆ ಅಡ್ಡಿಯಾದಂಥ ತನ್ನ ತಂದೆಯನ್ನು ಪರಿತ್ಯಜಿಸಿದಂತೆ—ಆ ತಂದೆಯನ್ನೂ ದಾಟಿಹೋಗಿ. ನಿಮ್ಮ ತಾಯಿಯು ಹಾಗೆ ಸತ್ಯಸಾಧನೆಗೆ ವಿರೋಧಿಯಾದರೆ, ಆಕೆ ಯನ್ನೂ ತೊರೆಯಿರಿ. ಹೊಸ ಒಡಂಬಡಿಕೆಯು (New Testament) ಇದನ್ನೇ

ಹೇಳುವದು. ಹಿಂದೂ ಶಾಸ್ತ್ರವೂ ಹೀಗೇ ಹೇಳುವದು. ನಿಮ್ಮ ತಂದೆ ತಾಯಿ ಸಲುವಾಗಿ ಸತ್ಯವನ್ನು ಪ್ರೀತಿಸಿರಿ. ಸತ್ಯಕ್ಕೆ ಅಭಿಮುಖವಾದ ನಿಮ್ಮ ಅಭಿವೃದ್ಧಿಗೆ ಎಲ್ಲಿಯವರೆಗೆ, ಎಷ್ಟರ ಮಟ್ಟಿಗೆ, ನಿಮ್ಮ ಮಾತಾಪಿತೃಗಳು ತಡೆಯಾಗುವುದಿಲ್ಲವೋ ಹಿಮ್ಮೆಟ್ಟಿಸುವುದಿಲ್ಲವೋ ಅಲ್ಲಿಯವರೆಗೆ ಅಷ್ಟರ ಮಟ್ಟಿಗೆ ಅವರನ್ನು ಪ್ರೀತಿಸಿರಿ, ಗೌರವಿಸಿರಿ. ಸತ್ಯದ ಮಾರ್ಗದಲ್ಲಿ ನಿಮ್ಮ ಸಹೋದರರು ಏನಾದರೂ ವಿರೋಧಿಗಳಾದರೆ ವಿಭೀಷಣನಂತೆ ಅವರನ್ನು ಕೊಡವಿ ಹಾಕಿರಿ, ಕೈ ಬಿಡಿರಿ. ಸತ್ಯಸಾಧನೆಗೆ ನಿಮ್ಮ ಹೆಂಡತಿ ಯೇನಾದರೂ ಪ್ರತಿಕೂಲಳಾದರೆ ಭರ್ತೃಹರಿಯಂತೆ ಆಕೆಯನ್ನೂ ಹೊರಚೆಲ್ಲಿ. ನಿಮ್ಮ ಗಂಡನೇನಾದರೂ ಸತ್ಯಕ್ಕೆ ವಿರೋಧಿಯಾದರೆ ಮೀರಾಬಾಯಿಯಂತೆ ಅವನನ್ನು ಆಚೆ ಎಸೆಯಿರಿ. ನಿಮ್ಮ ಗುರುವೇನಾದರೂ ಸತ್ಯಾನುಭವಕ್ಕೆ ಭಂಗಕಾರಿಯಾದರೆ, ಬಲಿಚಕ್ರ ವರ್ತಿಯಂತೆ ಅವನನ್ನು ಎತ್ತಿ ಎಸೆಯಿರಿ; ಏಕೆಂದರೆ, ನಿಮ್ಮ ನಿಜವಾದ ಬಂಧುವೂ ಗುರುವೂ ಪರಮಮಿತ್ರನೂ ಸತ್ಯವೇ, ಕೇವಲ ಸತ್ಯವೊಂದೇ ಆಗಿದೆ. ಮಿಕ್ಕ ಎಲ್ಲಾ ಸಂಬಂಧಗಳೂ ಸಂಗಾತಿಗಳೂ ತೋರಿ ಅಡಗತಕ್ಕವು, ಕಾಣದೆ ಹೋಗತಕ್ಕವು; ಅನಂತ ಕಾಲದ ದೃಷ್ಟಿಯಿಂದ ಎಲ್ಲಾ ಒಂದೇ ದಿನದ ಬಾಳಿನವು; ಆದರೆ ಸತ್ಯವು ಎಂದೆಂದೂ ನಿಮ್ಮ ಜೊತೆಗೇ ಇರತಕ್ಕದು. ಸತ್ಯವೇ ನಿಮ್ಮ ನಿಜವಾದ ಆತ್ಮ. ನಿಮ್ಮ ತಂದೆತಾಯಿ ಗಳಿಗಿಂತಲೂ ಸತ್ಯವು ನಿಮಗೆ ಹೆಚ್ಚು ಸಮೀಪ. ನಿಮ್ಮ ಹೆಂಡತಿ, ಮಕ್ಕಳು, ಸ್ನೇಹಿತರು ಮೊದಲಾದ ಎಲ್ಲರಿಗಿಂತಲೂ ಸತ್ಯವು ನಿಮಗೆ ಹೆಚ್ಚು ಸಮೀಪವಾಗಿದೆ. ರಾಜರು ಗಳಿಗಿಂತಲೂ ತಂದೆತಾಯಿಗಳಿಗಿಂತಲೂ ಮಕ್ಕಳಿಗಿಂತಲೂ ಯಾರಿಗಿಂತಲೂ ಸತ್ಯವನ್ನು ಹೆಚ್ಚಾಗಿ ಗೌರವಿಸಬೇಕು.

ಭಾರತ ದೇಶದಲ್ಲಿ ಒಬ್ಬ ರಾಜನ ಜೀವನದಿಂದ ತಿಳಿಯಬಲ್ಲ ಒಂದು ಸೊಗ ಸಾದ ದೃಷ್ಟಾಂತವಿದೆ. ಅವನು ಸತ್ಯಪಥದಲ್ಲಿ ನಡೆದನು. ಅವನು ತನ್ನ ದೇಹವನ್ನು ಹಿಮಾಲಯದ ಮಂಜಿನಲ್ಲಿ ಕರಗಿಸಿ ಬಿಡುವದಕ್ಕಾಗಿ ಹಿಮಾಲಯ ಪರ್ವತವನ್ನು ಹತ್ತಿ ಹೋಗುತ್ತಿದ್ದನಂತೆ. ಅದರ ವಿಷಯದಲ್ಲಿ ಉದ್ದವಾದೊಂದು ಕಥೆಯೇ ಇದೆ. ರಾಮನು ನಿಮಗೆ ಅದನ್ನೆಲ್ಲಾ ಹೇಳಬೇಕಾದುದಿಲ್ಲ. ಏನೋ ಒಂದು ಕಾರಣಕ್ಕಾಗಿ ಒಂದು ಮಹತ್ವದ ಕಾರಣಕ್ಕಾಗಿಯೇ ಆ ರಾಜನು ತನ್ನ ಹೆಂಡತಿಯೊಡನೆಯೂ ತನ್ನ ನಾಲ್ಕುಜನ ಸೋದರರೊಡನೆಯೂ ಹಿಮಾಲಯ ಪರ್ವತ ಶಿಖರಗಳನ್ನು ಏರುತ್ತಾ ಹೋಗುತ್ತಿದ್ದನು. ಅವನು ಸತ್ಯಾನ್ವೇಷಕನಾಗಿ ಸತ್ಯ—ಧರ್ಮಗಳ ಪಥದಲ್ಲಿ ನಡೆಯುತ್ತಿದ್ದನು. ಎಲ್ಲರಿಗಿಂತಲೂ ಮುಂದಿದ್ದ ಅವನು ಮುಂದೆ ಮುಂದೆ ಹೋಗುತ್ತಿದ್ದನು. ಆ ರಾಜನ ಹಿಂದೆ ಅವನ ಮೊದಲನೆಯ ತಮ್ಮನಿದ್ದನು; ಆ ಮೊದಲನೆಯ ತಮ್ಮನ ಹಿಂದೆ ಎರಡನೆಯ ತಮ್ಮನಿದ್ದನು; ಅವನ ಹಿಂದೆ ಅವನ ತಮ್ಮನಿದ್ದನು; ಅವನ ಹಿಂದೆ ಕೊನೆಯ ತಮ್ಮನಿದ್ದನು. ಹೀಗೆ ಸರಿಯಾದ ಕ್ರಮದಲ್ಲಿ ನಡೆಯುತ್ತಿದ್ದ ಆ ರಾಜನ ಎಲ್ಲಾ ಸಹೋದರರ ಹಿಂದೆ ಅವನ ಪತ್ನಿಯು ಅವರೆಲ್ಲರನ್ನೂ

ಅನುಸರಿಸಿ ಹೋಗುತ್ತಿದ್ದಳು. ಎಲ್ಲರ ಮುಂದಿದ್ದ ರಾಜನು, ಒಮ್ಮೆಯೂ ಹಿಂದೆ ನೋಡದೆ, ತನ್ನ ಗುರಿಯಾದ ಸತ್ಯದಲ್ಲಿಯೇ ದೃಷ್ಟಿಯಿಟ್ಟು ಸತ್ಯಕ್ಕೆ ಮುಖವಾಗಿಯೇ ನಡೆಯುತ್ತಿದ್ದನು. ಹಿಮಾಲಯದ ಪರ್ವತಗಳನ್ನು ಏರುತ್ತಾ ಬಹಳ ದೂರ ಹೋದ ಮೇಲೆ, ಕೋಮಲಾಂಗಿಯಾದ ಮಹಾರಾಣಿಗೆ ಬಹಳ ಶ್ರಮವಾದುದರಿಂದ ಅವರ ಜೊತೆಗೆ ನಡೆಯಲು ಸಾಧ್ಯವಾಗದೆ ಹಿಂದೆ ಹಿಂದೆ ದೂರ ಬಿದ್ದು, ಅಳುತ್ತಾ ಗೋಳಿಡುತ್ತಾ ತನ್ನನ್ನೂ ಜೊತೆಗೆ ಕರೆದುಕೊಂಡು ಹೋಗಬೇಕೆಂದು ತನ್ನ ಮುಂದಿದ್ದವರಿಗೂ ರಾಜನಿಗೂ ಅಂಗಲಾಚಿ ಮೊರೆಯಿಟ್ಟಳು. ಆಗ ರಾಜನು ತನ್ನ ಪ್ರತಿಜ್ಞೆಯಂತೆ ಮುಂದಿದ್ದ ಸತ್ಯದಲ್ಲಿಯೇ ಲಕ್ಷ್ಯವಿಟ್ಟಿದ್ದರಿಂದ ಹಿಂದಿರುಗಿ ನೋಡಲಿಲ್ಲ. ಆಕೆ ಬೇಡುವುದಕ್ಕೆ ತೊಡಗಿದ ಮೊದಲು, ಮೊದಲು ಮೂರು ಮಾರು ತನ್ನೊಡನೆ ಓಡಿ ಬಂದರೆ ತಾನು ಕರೆದೊಯ್ಯುವದಾಗಿ ರಾಜನು ಆಕೆಗೆ ಆಶ್ವಾಸನೆ ಕೊಡುತ್ತಿದ್ದನೇ ಹೊರತು ತಿರುಗಿ ನೋಡುತ್ತಿರಲಿಲ್ಲ. ಆದರೆ ಆಕೆಗೆ ಅದು ಸಾಧ್ಯವಾಗಲಿಲ್ಲ. ತಮ್ಮಂದಿರೆಲ್ಲರೂ ಅಣ್ಣನಿಗೆ ವಿಧೇಯರಾಗಿ ಆ ಸತ್ಯಪಥದಲ್ಲಿಯೇ ನಡೆಯುತ್ತಿದ್ದುದರಿಂದ ಅವರೂ ತಿರುಗಿ ನೋಡುವಂತಿರಲಿಲ್ಲ. ತಮ್ಮ ಅಣ್ಣನನ್ನು ಅನುಸರಿಸುವದೊಂದೇ ಅವರಿಗೆ ಧರ್ಮವಾಗಿತ್ತು. ಗುರಿಯನ್ನು ಬಿಟ್ಟು ಹಿಂತಿರುಗಿ ನೋಡುವದಾಗಲಿ ಒಂದು ಹೆಜ್ಜೆ ಹಿಮೆಟ್ಟುವದಾಗಲೀ ಧರ್ಮ ಸಮ್ಮತವಾಗಿರಲಿಲ್ಲ. ಆ ಯುಧಿಷ್ಠಿರ ರಾಜನು ಎಂದೂ ಒಂದು ಹೆಜ್ಜೆಯೂ ಹಿಮ್ಮೆಟ್ಟತಕ್ಕವನಾಗಿರಲಿಲ್ಲ. ಹೆಂಡತಿಯು ನಡಯಲಾರದೆ ಬಿದ್ದು ಹೋಗುತ್ತಾಳೆ. ಆದರೆ ಆಕೆಗಾಗಿ ರಾಜನು ಸತ್ಯದಿಂದ ಹೊರಳಿ, ತಿರುಗಿಯೂ ನೋಡತಕ್ಕವನಲ್ಲ. ನಿಮ್ಮ ಹಿಂದಿನ ಅನೇಕ ಜನ್ಮಗಳಲ್ಲಿ ನಿಮಗೆ ಸಹಸ್ರಾರು ಹೆಂಡಿರಿದ್ದರು; ಮುಂದೇನಾದರೂ ನಿಮಗೆ ಜನ್ಮ ಬಂದರೆ, ನೀವು ಎಷ್ಟು ಸಲ ಮದುವೆಯಾಗುತ್ತೀರೆಂಬುದೂ ನಿಮಗೆ ಹಿಂದೆಷ್ಟು ಜನ ಬಂಧುಗಳಿದ್ದರು, ಮುಂದೆಷ್ಟು ಜನ ಬಂಧುಗಳಾಗುತ್ತಾರೆ—ಎಂಬುದೂ ನಿಮಗೆ ತಿಳಿಯದು. ಈ ಬಂಧುಗಳಿಗಾಗಿಯೂ ಸಂಬಂಧಗಳಿಗಾಗಿಯೂ ನೀವು ಸತ್ಯದಿಂದ ಹಿಂತಿರುಗಬೇಕಾಗಿಲ್ಲ. ಯಾವಾಗಲೂ ಮುಂದೆ ಮುಂದೆಯೇ ನಡೆಯುತ್ತಿರಬೇಕು. ಯಾವುದೂ ನಿಮ್ಮನ್ನು ಹಿಂದಕ್ಕೆ ಜಗ್ಗಬಾರದು. ನಿಮಗೆ ಹೆಂಡತಿಯಲ್ಲಿ ಇರುವ ಗೌರವಕ್ಕಿಂತಲೂ ಹೆಚ್ಚು ಗೌರವವು ಸತ್ಯದಲ್ಲಿಯೂ ದೇವರಲ್ಲಿಯೂ ಇರಲಿ. ಸತ್ಯವು ಇಡೀ ಮಾನವ ಜನಾಂಗಕ್ಕೇ ಸಂಬಂಧಪಟ್ಟುದು. ಸತ್ಯವು ಅಥವ ದೇವರು ಸರ್ವ ಕಾಲಕ್ಕೂ ಸಂಬಂಧಪಟ್ಟುದು, ಅದು ಶಾಶ್ವತವಾದುದು. ಆದರೆ ನಿಮ್ಮ ಪ್ರಾಪಂಚಿಕ ಸಂಬಂಧಗಳು ಹಾಗಿಲ್ಲ. ಅವು ಕ್ಷಣಿಕವಾದುವು. **"ಅಧ್ಯಾತ್ಮ ದೃಷ್ಟಿಯಿಂದ, ನಿಮಗೆ ನಿಜವಾಗಿಯೂ ಒಳ್ಳೆಯದಾವುದೋ ಅದು ನಿಮ್ಮ ಹೆಂಡತಿಗೂ ಸಂಗಾತಿಗಳಿಗೂ ನಿಜವಾಗಿಯೂ ಒಳ್ಳೆಯದಿರಬೇಕೆಂಬ ನಿಯಮವನ್ನು ಯಾವಾಗಲೂ ನೆನಪಿಡಿ."** ನಿಮ್ಮ ಪತ್ನಿಯಿಂದ ನೀವು ದೂರವಿರುವುದು ನಿಮಗೆ ಹಿತವೆಂದು ತೋರಿದರೆ ನಿಮ್ಮಿಂದ ದೂರವಿರುವುದು ಆಕೆಗೂ ಹಿತವೆಂದು ನೆನಪಿನಲ್ಲಿಡಿ. ಇದೇ ನಿಯಮ. ಮಹಮ್ಮ

ವ್ಯಕ್ತಿತ್ವಕ್ಕೆ ಆಧಾರವಾದ ಸತ್ಯವೇ ದೇವತ್ವವೇ ನಿಮ್ಮ ಪತ್ನಿಯ ವ್ಯಕ್ತಿತ್ವಕ್ಕೂ ಆಧಾರವಾಗಿದೆ. ಕೊನೆಗೆ ಯುಧಿಷ್ಠಿರ ರಾಜನ ಹೆಂಡತಿಯು ಬಿದ್ದುಹೋದಳು. ಆದರೆ ರಾಜನು, ತನ್ನನ್ನು ಹಿಂಬಾಲಿಸಲು ತನ್ನ ತಮ್ಮಂದಿರಿಗೆ ಹೇಳಿ ನೇರಾಗಿ ಮುಂದೆ ಹೋದನು. ಕೆಲವು ಹೊತ್ತಿನವರೆಗೆ ಅವರು ಅವನೊಡನೆ ಓಡಿದರು; ಆದರೆ ಕೊನೆಯ ತಮ್ಮನು ಮಿಕ್ಕವರೊಡನೆ ನಡೆಯಲಾಗಲಿಲ್ಲ. ಅವನೂ ಅತಿ ಕಷ್ಟದಿಂದ ಓಲಾಡುತ್ತಾ ಮುಗ್ಗರಿಸುತ್ತಾ "ಅಣ್ಣ, ಅಣ್ಣ ಯುಧಿಷ್ಠಿರ! ನಾನು ಸಾಯಲಾಗಿದ್ದೇನೆ; ನಾನು ನಡೆಯಲಾರೆ; ರಕ್ಷಿಸು; ರಕ್ಷಿಸು." ಎಂದು ಬೇಡಿದನು. ಆದರೆ ಯುಧಿಷ್ಠಿರನು ತನ್ನ ಮುಂದಿರುವ ಗುರಿಯಾದ ಸತ್ಯದಿಂದ ದೃಷ್ಟಿಯನ್ನು ತಿರುಗಿಸಲಿಲ್ಲ; ಮುಂದೆ ಮುಂದೆ ಹೋಗುತ್ತಲೇ ಇದ್ದನು. ಆದರೆ ಧೈರ್ಯಮಾಡಿ ಕಷ್ಟಪಟ್ಟು ತನ್ನೊಡನೆ ಸ್ವಲ್ಪದೂರ ಬಂದರೆ ಕರೆದುಕೊಂಡು ಹೋಗುವದಾಗಿ ಆ ತಮ್ಮನಿಗೆ ರಾಜನು ಅಭಯ ಪ್ರದಾನ ಮಾಡುತ್ತಿದ್ದನೇ ಹೊರತು, ಅವನನ್ನು ಸ್ವಲ್ಪವಾದರೂ ಎಳೆದುಕೊಳ್ಳುವುದಕ್ಕೆ ಒಮ್ಮೆಯೂ ಹಿಂದಿರುಗಲಿಲ್ಲ. ಆ ಕೊನೆಯ ತಮ್ಮನೂ ಸತ್ತನು. ಅನಂತರ ಆ ಸಹೋದರರ ಸರಪಳಿಯ ಕೊನೆಯಲ್ಲಿದ್ದ ತಮ್ಮನ ಗತಿಯೂ ಹಾಗೇ ಆಯಿತು. ಹೀಗೆ ಯುಧಿಷ್ಠಿರನನ್ನು ಬಿಟ್ಟು ಮಿಕ್ಕೆಲ್ಲರೂ ಒಬ್ಬರಾದ ಮೇಲೆ ಮತ್ತೊಬ್ಬರು ಬಿದ್ದು ಸತ್ತು ಹೋದರು. ಆದರೆ ಯುಧಿಷ್ಠಿರ ರಾಜನು ಒಂದು ಹೆಜ್ಜೆಯೂ ಹಿಂದಿಡದೆ ಸತ್ಯ-ಧರ್ಮಗಳ ಪಥದಲ್ಲಿ ಮುಂದೆ ಮುಂದೆ ಹೋಗುತ್ತಲೇ ಇದ್ದನು.

ಕೊನೆಗೆ ಯುಧಿಷ್ಠಿರ ರಾಜನು ತನ್ನ ಗುರಿಯಾದ ಸತ್ಯರೂಪ ಕೈಲಾಸ ಶಿಖರವನ್ನು ಸೇರಿದಾಗ ಸತ್ಯಸ್ವರೂಪನಾದ ದೇವರೇ ಅವನಿಗೆ ದರ್ಶನವಿತ್ತನು. ದೇವರು ಪಾರಿವಾಳ ರೂಪದಿಂದ ತೋರಿಕೊಂಡನೆಂದು ಬೈಬಲ್‌ನಲ್ಲಿ ಹೇಳಿರುವಂತೆ ದೇವರು ಕೆಲವರಿಗೆ ಒಬ್ಬ ದೇವಪುರುಷನ ಶರೀರದಿಂದ ಅಥವಾ ಸ್ವರ್ಗಾಧಿಪತಿಯಾದ ದೇವೇಂದ್ರನ ರೂಪದಿಂದ ತೋರಿಕೊಂಡನೆಂದು ಹಿಂದೂ ಶಾಸ್ತ್ರಗಳಲ್ಲಿ ಹೇಳಿದೆ. ಶರೀರ ಸಹಿತವಾಗಿ ಸ್ವರ್ಗಕ್ಕೆ ಹೋಗಲು (ಕಾಯ ಸಹಿತ ಕೈಲಾಸಕ್ಕೆ ಹೋಗಲು) ದೇವರು ಯುಧಿಷ್ಠಿರನಿಗೆ ಹೇಳಿದನು. ಕೆಲವರನ್ನು ಜೀವಂತವಾಗಿ ಸ್ವರ್ಗಕ್ಕೆ ಏರಿಸಿದರೆಂದು ಬೈಬಲ್‌ನಲ್ಲಿ ಬರುವಂತೆ ಅಲ್ಲಿಯೂ ಬಂದಿದೆ. ರಾಜನು ತನ್ನ ಬಲಗಡೆಯಲ್ಲಿ ನೋಡಿದಾಗ ಜೊತೆಯಲ್ಲಿ ಒಂದು ನಾಯಿಯನ್ನು ಕಂಡನು. ಅವನು ದೇವರಿಗೆ "ಓ ದೇವ! ಓ ಸತ್ಯಸ್ವರೂಪ! ನನ್ನನ್ನು ನೀನು ಅತ್ಯುನ್ನತ ಸ್ವರ್ಗಕ್ಕೆ ಏರಿಸುವದಾದರೆ, ಈ ನಾಯಿಯನ್ನೂ ನನ್ನ ಜೊತೆಯಲ್ಲಿ ಅಲ್ಲಿಗೆ ಏರಿಸಬೇಕಾಗುತ್ತದೆ" ಎಂದನು. ಅದಕ್ಕೆ ದೇವರು, "ರಾಜಾ ಯುಧಿಷ್ಠಿರ! ಅದು ಸಾಧ್ಯವಿಲ್ಲ. ಸ್ವರ್ಗಾರೋಹಣ ಮಾಡುವುದಕ್ಕೆ ನಾಯಿಗೆ ಅರ್ಹತೆಯಿಲ್ಲ. ನಾಯಿಯು ಇನ್ನೂ ಅನೇಕ ಜನ್ಮಗಳನ್ನೆತ್ತಿ ಕೊನೆಗೆ ಮನುಷ್ಯನಾಗಿ ಹುಟ್ಟಿ, ಪರಿಶುದ್ಧವಾದ ಜೀವನವನ್ನು ನಡೆಸಿ, ನಿಷ್ಕಳಂಕ ಪುರುಷನಾಗಬೇಕು. ಅಷ್ಟೆಲ್ಲಾ ಸಂಸ್ಕಾರವಾಗದಿರುವ ನಾಯಿಯನ್ನು ಹೇಗೆ ಸ್ವರ್ಗಕ್ಕೇರಿಸಲು

ಸಾಧ್ಯ? ನಿನಗೇನೋ ಅಧಿಕಾರವಿದೆಯೇ ಹೊರತು ಆ ನಾಯಿಗಿಲ್ಲ." ಆಗ ಯುಧಿಷ್ಠಿರನು "ಓ ದೇವ! ಓ ಸತ್ಯ! ನಿನಗಾಗಿ ನಾನು ಬಂದೆನೇ ಹೊರತು. ಸ್ವರ್ಗಕ್ಕಾಗಿಯೋ ಕೈಲಾಸಕ್ಕಾಗಿಯೋ ನಾನು ಬರಲಿಲ್ಲ. ಎಲ್ಲಕ್ಕೂ ಮೇಲಿನ ಸ್ವರ್ಗಕ್ಕೆ ನನ್ನನ್ನು ಏರಿಸಿ ಅಲ್ಲಿ ನನಗೆ ಸಿಂಹಾಸನಾರೋಹಣ ಮಾಡಿಸಬೇಕಾದರೆ ನನ್ನೊಡನೆ ಈ ನಾಯಿಯನ್ನೂ ನೀನು ಕರೆದುಕೊಳ್ಳಲೇ ಬೇಕಾಗುತ್ತದೆ. ಏಕೆಂದರೆ, ನನ್ನ ಹೆಂಡತಿಯು ನನ್ನೊಡನೆ ಬರಲಿಲ್ಲ; ಸತ್ಯ-ಧರ್ಮಗಳ ಪಥದಲ್ಲಿ ಆಕೆ ತತ್ತರಿಸಿ ಬಿದ್ದಳು. ಎಲ್ಲಾ ತಮ್ಮಂದಿರೂ ತತ್ತರಿಸಿ ಬಿದ್ದರು. ಯಾರೂ ನನ್ನೊಡನೆ ಬರಲಿಲ್ಲ; ಎಲ್ಲರೂ ದುರ್ಬಲತೆಗೂ ಮೋಹಕ್ಕೂ ಬಲಿಯಾದರು. ಆದರೆ ಈ ನಾಯಿಯೊಂದೇ ನನ್ನ ಜೊತೆಗೆ ಬಂದಿದೆ. ಇದು ನನ್ನ ಕಷ್ಟಗಳಲ್ಲಿಯೂ ಸಂಕಟದಲ್ಲಿಯೂ ಶ್ರಮದಲ್ಲಿಯೂ ಹೋರಾಟಗಳಲ್ಲಿಯೂ ಭಾಗಿಯಾಗಿದೆ; ಆದ್ದರಿಂದ ನನ್ನ ಸ್ವರ್ಗಸುಖದಲ್ಲಿಯೂ ಏಕೆ ಭಾಗಿಯಾಗಬಾರದು? ಆ ಸ್ವರ್ಗ ಸುಖದಲ್ಲಿ ಈ ನಾಯಿಯನ್ನೂ ಸಮಭಾಗಿಯನ್ನಾಗಿ ಮಾಡದಿದ್ದರೆ, ನಾನೆಂದಿಗೂ, ಆ ನಿನ್ನ ಸ್ವರ್ಗಕ್ಕೆ ಹೋಗುವುದೇ ಇಲ್ಲ." ಎಂದನು.

ಪುರುಷಾಕೃತಿಯಿಂದ ತೋರಿದ ಸತ್ಯವು ಅಥವಾ ದೇವರು ಪುನಃ ಯುಧಿಷ್ಠಿರನಿಗೆ "ರಾಜಾ! ನಾಯಿಯನ್ನು ಸ್ವರ್ಗಕ್ಕೆ ನಿನ್ನೊಡನೆ ಒಯ್ಯುವ ವರವನ್ನು ಮಾತ್ರ ಕೇಳಬೇಡ; ಅದೊಂದು ಸಾಧ್ಯವಿಲ್ಲ; ಅದನ್ನು ಬಿಟ್ಟು ಬೇರೆ ಏನಾದರೂ ಕೇಳು" ಎಂದು ಹೇಳಿದನು. ಆದರೆ ಯುಧಿಷ್ಠಿರನು, "ಎಲೈ ಬ್ರಹ್ಮವೆ! ತೊಲಗು ಆಚೆ. ನೀನು ಸತ್ಯವೂ ಅಲ್ಲ; ದೇವರೂ ಅಲ್ಲ. ನೀನು ಯಾವದೋ ದೆವ್ವವಾಗಿ, ಪಿಶಾಚಿಯಾಗಿ ಕಾಣುತ್ತಿ. ನೀನು ದೇವರೇ ನಿಜವಾಗಿದ್ದರೆ, ನಿನ್ನಲ್ಲಿ ಪಕ್ಷಪಾತವೇಕಿರುತ್ತಿತ್ತು? ನಿನ್ನಲ್ಲಿ ಅನ್ಯಾಯವೇಕೆ? ನನ್ನ ಕಷ್ಟಗಳಲ್ಲಿ ಭಾಗಿಯಾದ ನಾಯಿಗೆ ನನ್ನ ಸುಖದಲ್ಲಿಯೂ ಭಾಗ ಕೊಡದಿದ್ದರೆ ನೀನು ನಾಯಿಗೆ ಅನ್ಯಾಯ ಮಾಡಿದಂತಾಗುವದಿಲ್ಲವೆ? ಇದು ದೇವರೆನಿಸಿಕೊಂಡವನಿಗೆ ಅಥವಾ ಸತ್ಯಪುರುಷನಿಗೆ ಸತ್ಯದೇವನಿಗೆ ಇದು ಯೋಗ್ಯವಲ್ಲ" ಎಂದನು. ಆಗ ದೇವರು ತನ್ನ ನಿಜರೂಪದಿಂದ ಪ್ರತ್ಯಕ್ಷವಾಗಿ ದರ್ಶನಕೊಟ್ಟನು. ರಾಜನ ಜೊತೆಗಿದ್ದ ನಾಯಿಯು ಅದೃಶ್ಯವಾಗಿತ್ತು; ಅದು ನಾಯಿಯೇ ಆಗಿರಲಿಲ್ಲ. ಅದು ಸಾಕ್ಷಾತ್ ಸರ್ವಸಮರ್ಥನಾದ ಪರಮಾತ್ಮನೇ ಆಗಿತ್ತು. ರಾಜನು ದೇವರ ಪರೀಕ್ಷೆಗೆ ಗುರಿಯಾಗಿದ್ದನು. ಅಂತಿಮ ಪರೀಕ್ಷೆಯಲ್ಲಿ ಅವನು ಉತ್ತೀರ್ಣನಾದನು.

ನೀವಾದರೂ ಸತ್ಯದ ಪಥದಲ್ಲಿ ಹೀಗೆಯೇ ನಡೆಯಬೇಕು. ಸತ್ಯ–ಧರ್ಮಗಳ ಮಾರ್ಗದಲ್ಲಿ, ನಿಮ್ಮ ಪ್ರಿಯ ಬಂಧುಗಳಿಗೆ ಬಹಳ ಹತ್ತಿರವಿರುವ ಅತ್ಯಂತ ಪ್ರಿಯರೂ ಅತ್ಯಂತ ಸಮೀಪರೂ ಆದ ನಿಮ್ಮ ಜೊತೆಗಾರರಾದರೂ ನಿಮ್ಮೊಡನೆ ನಡೆಯದಿದ್ದರೆ ಅವರನ್ನು ನಿಮ್ಮ ಮಿತ್ರರೆಂದು ಎಣಿಸಬೇಡಿ; ಕೊನೆಗೊಂದು ನಾಯಿಯು ನಿಮ್ಮ ಜೊತೆಗೂಡಿ ನಡೆದರೂ ಅದನ್ನು ಅತ್ಯಂತ ಪ್ರಿಯವೂ ಅತ್ಯಂತ ಸಮೀಪವೂ ಆದ ಜೀವಿಯನ್ನಾಗಿ ಪರಿಗಣಿಸಬೇಕು. ಹೀಗೆ, ನಿಮ್ಮ ಧರ್ಮಮಾರ್ಗಕ್ಕೆ

ಅನುಕೂಲರಾಗಿರತಕ್ಕವರೆಂಬ ನಿಯಮದ ಮೇಲೆ ನೀವು ನಿಮ್ಮ ಮಿತ್ರರನ್ನು ಮಾಡಿ ಕೊಳ್ಳಿ; ನಿಮ್ಮ ಕೆಟ್ಟ ಸ್ವಭಾವಕ್ಕೆ ಪ್ರೋತ್ಸಾಹ ಕೊಡತಕ್ಕವರನ್ನು ನಿಮ್ಮ ಮಿತ್ರರೆಂದು ಆರಿಸಿಕೊಳ್ಳಬೇಡಿ. ನಿಮ್ಮ ಕೆಟ್ಟ ಸ್ವಭಾವದಂಥ ದುಷ್ಟ ಪ್ರವೃತ್ತಿಗಳುಳ್ಳವರನ್ನೇ ನಿಮ್ಮ ಸಂಗಡಿಗರನ್ನಾಗಿ ಆರಿಸಿಕೊಂಡರೆ, ಸಂಕಷ್ಟವೂ, ಅತಿ ಯಾತನೆಯೂ, ದುಃಖಾನು ಭವವೂ. ನಿಮ್ಮ ಹಣೆಯ ಬರಹವೂ, ದುರ್ದೈವವೂ ಆಗುತ್ತದೆ.

ಒಬ್ಬ ಹಿಂದೂ ಮಹಾತ್ಮನು ಒಮ್ಮೆ ಹಸಿವಿನಿಂದ ಬೀದಿಯಲ್ಲಿ ಹೋಗುತ್ತಿದ್ದನು. ಇಂಡಿಯಾದಲ್ಲಿ ಮಹರ್ಷಿಗಳೂ ಮಹಾತ್ಮರೂ ಪರ್ವತಗಳಲ್ಲಿಯೂ ಅರಣ್ಯಗಳಲ್ಲಿಯೂ ಗುಹೆಗಳಲ್ಲಿಯೂ ತಪಸ್ಸು ಮಾಡುತ್ತಿದ್ದು, ಹಸಿವಾದಾಗ ಮಧ್ಯಾಹ್ನ ಒಂದು ಹೊತ್ತು ಮಾತ್ರ ಸಮೀಪವಿರುವ ಹಳ್ಳಿಗಾಗಲೀ ಪಟ್ಟಣಕ್ಕಾಗಲೀ ಹೋಗಿ ಊಟಕ್ಕಾಗಿ ಬೀದಿ ಯಲ್ಲಿ ಭಿಕ್ಷೆ ಬೇಡುತ್ತಾರೆ. ಅವರು ಪಟ್ಟಣಗಳಿಗೂ ನಗರಗಳಿಗೂ ಬಹಳ ಅಪರೂಪ ವಾಗಿ ಹೋಗುತ್ತಾರೆ. ಅವರು ಸಾಮಾನ್ಯವಾಗಿ ನಗರಗಳಿಂದ ದೂರವಾಗಿ ಅರಣ್ಯ ಗಳಲ್ಲಿ ತಮ್ಮ ಎಲ್ಲಾ ಕಾಲವನ್ನೂ ದೇವರ ಚಿಂತನೆಯಲ್ಲಿಯೇ ಕಳೆಯುತ್ತಾರೆ. ಪ್ರಾಣ ಧಾರಣೆಗಾಗಿ ಭಿಕ್ಷೆ ಬೇಡುವ ತಪಸ್ವಿಗಳಿಗೆ ಸಮಾಜದ ಜನರೇ ಊಟಕ್ಕೆ ನೀಡುತ್ತಾರೆ. ಆದ್ದರಿಂದ ರಾಮನೂ ನಿಮ್ಮಲ್ಲಿ ಪ್ರಾಣರಕ್ಷಣೆಗಾಗಿ ಬೇಡಿದರೆ ನೀವು ಅವನನ್ನು ಕ್ಷಮಿಸು ವದು ನ್ಯಾಯವಾದುದು. ಮೊದಲೇ ಹೇಳಿದಂತೆ ಒಬ್ಬ ಮಹಾತ್ಮನು ಬೇಡುವದಕ್ಕೆ ಒಬ್ಬ ಗೃಹಸ್ಥನ ಮನೆಯ ಬಾಗಿಲಿಗೆ ಬಂದಾಗ ಆ ಮನೆಯ ಯಜಮಾನಿಯು ಅವನಿಗೆ ರುಚಿಕರವಾದ ಆಹಾರವನ್ನು ತಂದು ನೀಡಿದಳು. ಆ ಸಾಧುವು ತನ್ನ ವಸ್ತ್ರದಲ್ಲಿ ಅದನ್ನು ತೆಗೆದುಕೊಂಡು ಅಡವಿಗೆ ಹೋಗಿ ಆ ರೊಟ್ಟಿಯನ್ನು ನೀರಿನಲ್ಲಿ ನೆನೆಸಿ ತಿಂದನು. ಮರುದಿನ ಅದೇ ಸಮಯಕ್ಕೆ ಆ ಸಾಧುವು ಪುನಃ ಅಲ್ಲಿಗೆ ಬೇಡುವದಕ್ಕೆ ಬಂದನು ಪುನಃ ಅದೇ ಗೃಹಿಣಿಯು ಪ್ರೀತಿ—ಉತ್ಸಾಹಗಳಿಂದ ಬಂದು ಅವನಿಗೆ ಭಕ್ಷ್ಯ ಭೋಜ್ಯ ಗಳನ್ನೇ ನೀಡಿದಳು. ಆ ಸಾಧುವು ಅದನ್ನು ತೆಗೆದುಕೊಂಡು ಹೋದನು. ಮೂರನೇ ದಿನವೂ ಆಕೆ ಪುನಃ ಸಾಧುವಿಗೆ ಮಧುರವಾದ ಆಹಾರವನ್ನೇ ನೀಡುತ್ತಾ "ನಾನು ನಿಮಗಾಗಿ ಬೆಳಗಿನಿಂದಲೂ ಬಾಗಿಲಲ್ಲಿ ಕಾದುಕೊಂಡು ನಿಂತಿರುತ್ತೇನೆ; ಕಾದು ಕಾದು ಕಣ್ಣುಗಳೆಲ್ಲಾ ಹುಣ್ಣಾದಂತಿವೆ. ನಿಮ್ಮ ಸುಂದರವಾದ ಕಣ್ಣುಗಳು ನನ್ನನ್ನು ಮರುಳು ಮಾಡಿ ಮನಸ್ಸನ್ನು ಸೆರೆ ಹಿಡಿದಿವೆ; ಹೃದಯವನ್ನು ಸೂರೆಗೊಂಡಿವೆ" ಎಂದಳು. ಅನುರಾಗದ ಆವೇಶದಿಂದ ಮುಖವು ಮಿನುಗುತ್ತಾ ಆಡಿದ ಈ ಮಾತು ಗಳನ್ನು ಕೇಳಿ ಆ ಸಾಧುವು ಹೊರಟುಹೋದನು. ಅವನು ಬೇರೊಂದು ಮನೆಗೆ ಹೋಗಿ ಬೇಡಿ ಆಹಾರವನ್ನು ತೆಗೆದುಕೊಂಡು ಹೋದನು. ಕಾಡಿನಲ್ಲಿ ಹೋದಮೇಲೆ ಮೊದಲನೆಯ ಗೃಹಿಣಿಯು ಪ್ರೀತಿಯಿಂದ ಕೊಟ್ಟಿದ್ದ ಆಹಾರವನ್ನು ನದಿಯಲ್ಲಿ ಎಸೆದು, ಎರಡನೆಯ ಮನೆಯಿಂದ ತಂದಿದ್ದ ಆಹಾರವನ್ನು ಭುಂಜಿಸಿದನು. ಮರುದಿನ ಕಾದ ಕಬ್ಬಿಣದ ಸಲಾಕೆಗಳಿಂದ ತನ್ನ ಎರಡು ಕಣ್ಣುಗಳನ್ನೂ ಕಿತ್ತು ತೆಗೆದು ತನ್ನ ಕಿರುವಸ್ತ್ರದಲ್ಲಿ

ಕಟ್ಟಿಕೊಂಡು, ಒಂದು ಕೋಲಿನ ಸಹಾಯದಿಂದ ದಾರಿಯ ಸುಳುವನ್ನು ಹಿಡಿದು ಬಹಳ ಕಷ್ಟದಿಂದ ನಡೆದು ತನ್ನಲ್ಲಿ ಅತಿ ಪ್ರೇಮವನ್ನು ವ್ಯಕ್ತಮಾಡಿದ್ದ ಆ ಪ್ರಮದೆಯ ಮನೆಗೆ ಬಂದನು. ಆ ಕಾಮಿನಿಯು ಅತಿ ಕಾತರದಿಂದ ಇವನಿಗಾಗಿ ಬಾಗಿಲಲ್ಲಿಯೇ ಕಾದು ನಿಂತಿದ್ದಳು. ಅವನು ಮುಖವನ್ನು ಬಗ್ಗಿಸಿದ್ದನು; ಆದ್ದರಿಂದ ಅವನು ಕಣ್ಣುಗಳನ್ನು ಕಿತ್ತುಕೊಂಡಿದ್ದುದು ಆಕೆಗೆ ಕಾಣಲಿಲ್ಲ. ಆ ತರುಣಿಯು ಪುನಃ ಅವನಿಗೆ ಮಧುರವಾದ ಆಹಾರವನ್ನು ತಂದು ನೀಡುವದಕ್ಕೆ ಹೋದ ಕೂಡಲೇ ಆ ಸಾಧುವು ಆಕೆಗೆ ತನ್ನ ಕಣ್ಣು ಗುಡ್ಡೆಗಳನ್ನು ನೀಡುತ್ತಾ "ತಾಯೆ! ತಾಯೆ! ನಿನ್ನನ್ನು ಮರುಳುಮಾಡಿ ನಿನ್ನ ಮನಸ್ಸನ್ನು ಸೂರೆಗೊಂಡು ನಿನಗೆ ಕಷ್ಟಕೊಟ್ಟಿರುವ ಈ ಕಣ್ಣುಗಳನ್ನು ತೆಗೆದುಕೊ. ಇವುಗಳನ್ನು ನೀನು ಇಟ್ಟುಕೊಳ್ಳುವದಕ್ಕೆ ನಿನಗೆ ಎಲ್ಲಾ ಹಕ್ಕೂ ಇದೆ. ತಾಯೆ ನಿನಗೆ ಈ ಕಣ್ಣುಗಳು ಬೇಕಾದವಾದ್ದರಿಂದ ಇವುಗಳನ್ನು ನೀನು ಇಟ್ಟುಕೊಂಡು ಯಥೇಷ್ಟವಾಗಿ ಸುಖಪಡು; ಇವುಗಳನ್ನು ಏನಾದರೂ ಮಾಡು. ಆದರೆ ದೇವರ ದಯದಿಂದ ನನ್ನ ಮೇಲೆ ಕರುಣೆಯನ್ನು ತೋರಿಸಿ, ನನ್ನ ಮೋಕ್ಷ ಸಾಧನೆಗೆ ಅಡ್ಡಿಮಾಡಬೇಡ ಸತ್ಯ—ಧರ್ಮಗಳ ಪಥದಲ್ಲಿ ನಾನು ಮುಗ್ಗರಿಸುವಂತೆ ಮಾಡಬೇಡ" ಎಂದು ಹೇಳಿದನು.

ಇದರಿಂದ ತಿಳಿಯುವದೇನೆಂದರೆ, ಸತ್ಯಮಾರ್ಗದಲ್ಲಿ ನಡೆಯುವದಕ್ಕೆ ನಿಮ್ಮ ಕಣ್ಣುಗಳೇನಾದರೂ ನಿಮಗೆ ತೊಂದರೆ ಕೊಟ್ಟರೆ ಅವುಗಳನ್ನು ಕಿತ್ತುಹಾಕಿ. ನಿಮ್ಮ ಇಡೀ ಜೀವನವೇ ಅಂಧಕಾರದಲ್ಲಿ ನಾಶವಾಗುವದಕ್ಕಿಂತಲೂ ನಿಮ್ಮ ದೇಹವು ಬೆಳಕಿಲ್ಲದಿರುವುದು ಉತ್ತಮ. ನಿಮ್ಮ ಕಿವಿಗಳು ನಿಮ್ಮನ್ನು ಮರುಳುಮಾಡಿ ದಾರಿ ತಪ್ಪಿಸುವದಾದರೆ, ಅವುಗಳನ್ನು ಕತ್ತರಿಸಿ ಹಾಕಿ. ನಿಮ್ಮ ಹೆಂಡತಿಯಾಗಲೀ ಹಣವಾಗಲೀ ಆಸ್ತಿಯಾಗಲೀ ಯಾವದೇ ಆಗಲಿ ನಿಮ್ಮ ದಾರಿಗೆ ಅಡ್ಡ ಬಂದರೆ ಅದನ್ನು ತೊಲಗಿಸಿ. ನೀವು ಹೆಂಡತಿ ಮಕ್ಕಳನ್ನೂ ನೆಂಟರನ್ನೂ ಪ್ರೀತಿಸುವಷ್ಟು ಪ್ರೀತಿಯಿಂದ ಅಥವಾ ಅದರ ಅರ್ಧದಷ್ಟು ಪ್ರಿತಿಯಿಂದಲಾದರೂ ಉತ್ಕಂಠತೆಯಿಂದಲಾದರೂ ಸತ್ಯವನ್ನು, ದೇವರನ್ನು, ಆತ್ಮವನ್ನು ಪ್ರೀತಿಸಿದರೆ ಈ ಕ್ಷಣದಲ್ಲಿಯೇ ಸತ್ಯವಾದ ಆತ್ಮದೇವನನ್ನು ನೀವು ಮನಗಾಣಬಲ್ಲಿರಿ. ನೀವು ಸತ್ಯಧರ್ಮಗಳ ಪಥದಲ್ಲಿ ನಡೆಯುವದಕ್ಕೆ ತೊಡಗಿದಾಗ ಮೊದಲು ಮೊದಲು ತಾವಾಗಿಯೇ ಬಂದೊದಗುವಂತೆ ತೋರುವ ಕೆಲವು ಮೋಹಗಳನ್ನು ಜಯಿಸಿದರೆ ಮುಂದೆ ಆ ಪಥವು ಅಷ್ಟು ಕಠಿಣವಾಗಿಯೂ ಸೌಂದರ್ಯ ಶೂನ್ಯವಾಗಿಯೂ—ಕೊನೆಯವರೆಗೂ—ಆನಂದ ರಹಿತವಾಗಿಯೂ ಕಾಣಲಾರದು. ಸತ್ಯಪಥವು ಸೂಜಿಯ ಕೊನೆಗಿಂತಲೂ ಮೊನಚಾದುದೆಂದು ಹೇಳುತ್ತಾರೆ. ಸತ್ಯಧರ್ಮಗಳ ಮಾರ್ಗವು ಖಡ್ಗಧಾರೆಗಿಂತಲೂ—ಕತ್ತಿಯ ಅಲಗಿಗಿಂತಲೂ—ಹರಿತವಾದುದೆಂದು, ಸೂಕ್ಷ್ಮವಾದುದೆಂದು ವೇದದಲ್ಲಿಯೇ ಹೇಳಿದೆ. ಆದರೆ ಇದು ಪೂರ್ಣಸತ್ಯವಲ್ಲ. ಏಕೆಂದರೆ, ಪ್ರಾರಂಭದಲ್ಲಿ ಆ ಮಾರ್ಗವು ಅತೀವ ಇಕ್ಕಟ್ಟಾಗಿ ತೋರಿದರೂ, ಮೊದಲು ಮೊದಲು

ಒದಗುವ ಕೆಲವು ವ್ಯಾಮೋಹಗಳನ್ನೂ ಪ್ರಲೋಭನಗಳನ್ನೂ ಗೆದ್ದುಕೊಂಡರೆ, ಮುಂದೆ ಮುಂದೆ ಆ ಮಾರ್ಗವು ಆಶ್ಚರ್ಯಕರವಾಗಿ ಸುಂದರವೂ ಸುಲಭವೂ ಆಗಿ ತೋರುವ ದರಲ್ಲಿ ಸಂಶಯವಿಲ್ಲ. ಇಡೀ ಪ್ರಕೃತಿಯೇ ನಿಮಗೆ ಸಹಾಯ ಮಾಡುತ್ತದೆ; ಎಲ್ಲವೂ ನಿಮಗೇ ಬೆಂಬಲವಾಗಿ ನಿಲ್ಲುತ್ತವ. ತೊಂದರೆಗಳೂ ಅಡಚಣೆಗಳೂ ವಿರೋಧಗಳೂ ವ್ಯಾಮೋಹಗಳೂ ಹೋರಾಟಗಳೂ ನಿಮ್ಮನ್ನು ಭಯಪಡಿಸುತ್ತವೆ; ಅಷ್ಟೆ: ಆದರೆ ಅವು ನಿಮಗೆ ನಿಜವಾಗಿಯೂ ಅಪಾಯ ಮಾಡುವುದಿಲ್ಲ. ಇಡೀ ಸೃಷ್ಟಿಯೇ ನಿಮಗೆ ಊಳಿಗ ಮಾಡುತ್ತದೆ, ನಿಮ್ಮನ್ನು ಸೇವಿಸುತ್ತದೆ

ಇಡೀ ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠನಾಯಕನಾದ ಅಥವಾ ಭರತ ಖಂಡದಲ್ಲಿ ಯಾದರೂ ಅತ್ಯಂತ ಶ್ರೇಷ್ಠನಾಯಕನಾದ ಶ್ರೀ ರಾಮನ ಚರಿತ್ರೆಯನ್ನು ಆ ದೇಶದ 'ಇಲಿಯಡ್' ಆದ ರಾಮಾಯಣದಲ್ಲಿ ಹೇಳಿದೆ. ಅವನು ಸತ್ಯಾನ್ವೇಷಣೆಗಾಗಿ, ಸತ್ಯ ವನ್ನು ಹಿಂದಿರುಗಿ ಸಾಧಿಸುವದಕ್ಕಾಗಿ, ಹೊರಟಾಗ ಸಮಸ್ತ ಪ್ರಕೃತಿಯೂ ಅವನಿಗೆ ಸೇವೆಯನ್ನು ಸಲ್ಲಿಸಿತು. ಮಂಗಗಳೇ ಅವನ ಸೈನಿಕರಾದವು. ಅವನು ಸಮುದ್ರದ ಮೇಲೆ ಸೇತುವೆಯನ್ನು ಕಟ್ಟುವುದಕ್ಕೆ ಅಳಿಲುಗಳೂ ಸಹಾಯ ಮಾಡಿದವು. ಅವನು ಶತ್ರು ಗಳನ್ನು ಜಯಿಸುವದಕ್ಕಾಗಿ ಹದ್ದುಗಳು ಸಹ ಅವನಿಗೆ ಸಹಾಯ ಮಾಡಿದವು. ಕಲ್ಲು ಗಳು ಸಹ ತಮ್ಮ ಸ್ವಭಾವವನ್ನು ಮರೆತು ರಾಮನ ಸೇವೆ ಮಾಡಿದವು. ಲಂಕಾ ಪಟ್ಟಣಕ್ಕೆ ಹೋಗಲು ಸಮುದ್ರದಲ್ಲಿ ಸೇತುವೆಯನ್ನು ಕಟ್ಟುವದಕ್ಕಾಗಿ ರಾಮನು (ರಾಮನ ಸೈನ್ಯವು) ಕಲ್ಲುಗಳನ್ನು ಹಾಕಲು, ಅವು ಮುಳುಗುವದಕ್ಕೆ ಬದಲಾಗಿ "ಸತ್ಯ ಸಾಧನೆಗೆ ಸಹಾಯವಾಗಿ ನಾವು ತೇಲೋಣ" ಎಂದು ತೇಲಾಡಿದವು. ವಾಯುವೂ ಅಗ್ನಿಯೂ ಮಾರುತಗಳೂ ಝಂಝಾ ಮಾರುತಗಳೂ ರಾಮನಿಗೆ ಸಹಾಯವಾದವು. ಇಂಗ್ಲಿಷ್‌ನಲ್ಲಿ ಒಂದು ಸುಭಾಷಿತವಿದೆ: "The wind and wave are always for the brave" "ಮಾರುತವೂ ತರಂಗಗಳೂ ಧೀರರಿಗೆ ಸರ್ವದಾ ಸ್ವಂತ ರಂಗಗಳಾಗಿವೆ, ಸ್ವತಂತ್ರ ರಂಗಗಳಾಗಿವೆ." ಸತ್ಯಪಥದಲ್ಲಿ ನಡೆಯತಕ್ಕವರಿಗೆ ಆರಂಭದಲ್ಲಿ ಒದಗುವ ವಿಘ್ನಗಳನ್ನೂ ವಿರೋಧಗಳನ್ನೂ ವ್ಯಾಮೋಹಗಳನ್ನೂ ಅವರು ಎದೆಗುಂದದೆ ಮೀರಿ, ಹಿಡಿದ ಪಟ್ಟನ್ನು ಬಿಡದೆ ಧೃತಿಯಿಂದ ಮುಂದುವರಿದರೆ, ಇಡೀ ಪ್ರಕೃತಿಯೇ ಅವರನ್ನು ಸೇವಿಸುತ್ತದೆ. ನಾವು ಸತ್ಯವನ್ನು ಬಿಡದೆ ಅದರಲ್ಲಿಯೇ ನೆಲೆಯಾಗಿ ನಿಂತರೆ, ನೀವು ಜೀವಿಸುತ್ತಿರುವ ಈ ಪ್ರಪಂಚವು ಸಾಮಾನ್ಯವೇನೂ ಅಲ್ಲವೆಂದು ನಿಮಗೆ ತೋರುತ್ತದೆ. ಈ ಪ್ರಪಂಚವು ನಿಮಗೆ ಆಶ್ಚರ್ಯಕರವೂ ಅದ್ಭುತವೂ ಮಹತ್ತಾದ ಪವಾಡವೂ ಆಗಿ ಕಾಣುವದರಲ್ಲಿ ಸಂಶಯವಿಲ್ಲ. ನಿಮ್ಮ ಸತ್ಯ—ಧರ್ಮದ ಮಾರ್ಗದಲ್ಲಿ ದೇವತೆಗಳು ನಿಮ್ಮನ್ನು ಸೇವಿಸದಿದ್ದರೆ ಅವರಿಗೆ ಮಹಾ ವಿಪತ್ತೇ ಸರಿ. ಪುರುಷೋತ್ತಮನಾದ ಜಗನ್ನಾಥನನ್ನು ಪ್ರಕೃತಿದೇವಿಯು ಸರ್ವದಾ ಕಾತರದಿಂದ ಕಾದಿದ್ದು ಓಲೈಸುತ್ತಾಳೆ. ನೀವೇ ಜಗನ್ನಾಥರು, ಜಗದೀಶ್ವರರು, ವಿಶ್ವೇಶ್ವರರು, ಇಡೀ ವಿಶ್ವಕ್ಕೆ ನೀವೇ ವಲ್ಲಭರು.

ಈಗ ರಾಮನು, ತನ್ನ ದೃಷ್ಟಿಯಿಂದ ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠಪುರುಷರಲ್ಲಿ ಒಬ್ಬರಾದ ಪೌರ್ವಾತ್ಯ ಮಹಾತ್ಮ ಷ್ಯಾಮ್ಸ್ ಟ್ಯಾಬ್ರೆಸ್ (Shams Tabrez) ರ ಜೀವನ ಚರಿತ್ರೆಯನ್ನು ಹೇಳುತ್ತಾನೆ. ಈ ವ್ಯಕ್ತಿಯು ವಿಚಿತ್ರವಾದ ಪರಿಸ್ಥಿತಿಯಲ್ಲಿ ಹುಟ್ಟಿದ್ದನು. ಆ ಕತೆಯು ಸುಳ್ಳಾದರೂ ಇರಲಿ ನಿಜವಾದರೂ ಇರಲಿ. ನಮಗೇನೂ ಅದು ಮುಖ್ಯವಲ್ಲ. ಆದರೂ ಅದರಲ್ಲಿ-ಎಲ್ಲಿಯಾದರೂ ಸತ್ಯವಿರಲೇ ಬೇಕು. ಅವನ ತಂದೆಯು ಒಂದು ಕಾಲದಲ್ಲಿ ನಾಡಿನಲ್ಲಿಯೇ ಅತ್ಯಂತ ಬಡವನಾಗಿದ್ದನು. ಆ ಅತ್ಯಂತ ನಿರ್ಧನ ಮನುಷ್ಯನು ತನ್ನ ಜೀವನವನ್ನು ದೇವರ ಧ್ಯಾನಕ್ಕಾಗಿಯೇ ಮೀಸಲಾಗಿಟ್ಟಿದ್ದನು. ಅವನು ತನ್ನ ದೇಹವು ಎಂದಾದರೂ ಹುಟ್ಟಿದೆಯೆಂಬುದನ್ನೇ ಮರೆತು ಬಿಟ್ಟನು; ಈ ಪ್ರಪಂಚದಲ್ಲಿ ವ್ಯಕ್ತಿರೂಪದಿಂದ ತಾನೊಬ್ಬನಿರುವನೆಂಬುದನ್ನು ಪೂರಾ ಮರೆತುಬಿಟ್ಟನು. ಅವನಿಗೆ ಪ್ರಪಂಚವು ಎಂದೂ ಪ್ರಪಂಚವೇ ಆಗಿರಲಿಲ್ಲ. ಅವನು ದೇವರೇ, ಪೂರಾ ದೇವರೇ ಆಗಿದ್ದನು. ಅಡಿಯಿಂದ ಮುಡಿಯವರಗೆ ಒಬ್ಬ ಮನುಷ್ಯನು ಒಂದೇ ದೃಢ ಭಾವನೆಯಿಂದ ತುಂಬಿದ್ದರೆ ಆ ಭಾವನಾ ರೂಪನೇ ಅವನಾಗುವಂತೆ, ಆ ಮಹಾತ್ಮನ ದೇಹದ ರಂಧ್ರಗಳೆಲ್ಲಾ ಪರಮಾತ್ಮ ಭಾವನೆಯಿಂದ ತುಂಬಿ ತುಳುಕುತ್ತಿದ್ದುದರಿಂದ ಪರಮಾತ್ಮನೇ ಅವನಾಗಿದ್ದನು. ಅವನು ಬೀದಿಗಳಲ್ಲಿ ತಿರುಗುತ್ತಿದ್ದಾಗ ಅವನ ದೇಹದ ರಂಧ್ರಗಳಿಂದೆಲ್ಲಾ "ಹಕ್ ಅನಲ್‌ಹಕ್" "ದೇವರು, ನಾನೇ ದೇವರು" ಎಂಬ ಗಾನವು ಕೇಳುತ್ತಿದ್ದಿತೆಂದು ಜನರು ಹೇಳುತ್ತಿದ್ದರು. ಅವನ ತುಟಿಗಳ ಮೇಲೂ "ಅನಲ್‌ಹಕ್, ಅನಲ್‌ಹಕ್" "ದೇವರು ನಾನು, ದೇವರು ನಾನು" ಎಂಬ ಗಾನವೇ ಯಾವಾಗಲೂ ಕೇಳುತ್ತಿತ್ತು. ಅವನ ಸುತ್ತಲೂ ಸಾಮಾನ್ಯ ಮನುಷ್ಯರು ಸೇರಿ ಕೊಂಡರು. ಅವರು ಅವನನ್ನು ಕೊಲೆಮಾಡಬೇಕೆಂದು ಯೋಚಿಸಿದ್ದರು. ಅವರು ಅವನನ್ನು ನಾಸ್ತಿಕನೆಂದು ಆರೋಪಿಸಿದರು. ಅವನ ಬಾಯಿಂದ "ಅನಲ್‌ಹಕ್" ಎಂಬ ಉಚ್ಚಾರಣೆ ಹೊರಡುತ್ತಿದ್ದಾಗ ಅವನಿಗೆ ಅದರ ಅರಿವೇ ಇರಲಿಲ್ಲ. ಒಬ್ಬ ಮನುಷ್ಯನು ನಿದ್ರಿಸುತ್ತಿರುವಾಗ ಅವನಿಗೇ ಪರವೆಯಿಲ್ಲದೆ ಗೊರಕೆ ಹೊಡೆಯುತ್ತಿರುವಂತೆ ಅವನ "ಅನಲ್‌ಹಕ್" ಉಚ್ಚಾರಣೆ ನಡೆಯುತ್ತಿತು. ಆದರೆ ಜನರು ಅವನನ್ನು ಕೊಲ್ಲ ಬೇಕೆಂದು ಬಯಸಿದರು. ಅದರಿಂದ ಅವನಿಗೇನು? ಯಾರನ್ನು ಕೊಲ್ಲುವುದು? ಜನರು ದೇಹವನ್ನು ಕೊಲ್ಲುತ್ತಿದ್ದರು; ಆದರೆ ಅವನ ದೃಷ್ಟಿಯಿಂದ ಆ ದೇಹವು ಎಂದೂ ಇರಲೇ ಇಲ್ಲ. ಆದ್ದರಿಂದ ಆ ದೇಹವನ್ನು ಕೊಂದರೆ ಯಾರಿಗೆ ನೋವಾಗ ಬೇಕು? ಆಗಿನ ಕಾಲದಲ್ಲಿ ಮರಣ ದಂಡನೆಯನ್ನು ವಿಧಿಸಿದವನನ್ನು ಶೂಲಕ್ಕೆ ಏರಿಸುತ್ತಿದ್ದರು. ಶೂಲವೆಂದರೆ ನಿಮ್ಮ ಕ್ರಿಸ್ತನನ್ನು ಏರಿಸಿದ ಶಿಲುಬೆ (Cross) ಗಿಂತಲೂ ಭಯಂಕರವಾದುದು. ಭೂಮಿಯಲ್ಲಿ ಹೂತು ನಿಲ್ಲಿಸಿದ ಎತ್ತರವಾದ ಕಬ್ಬಿಣದ ಸಲಾಕಿಗೆ ತುದಿಯಲ್ಲಿ ಸೂಜಿಗಿಂತಲೂ ಚೂಪಾದ ಉಕ್ಕಿನ ಶೂಲವಿರುತ್ತದೆ. ಅಪರಾಧಿಯ ಎದೆಯು ಅಥವಾ ಹೊಕ್ಕಳು ಸೂಜಿಯಂಥ ಹರಿತವಾದ ಶೂಲದ

ಮೊನೆಯು ಮೇಲೆ ಚುಚ್ಚಿಕೊಳ್ಳುವಂತೆ ಅವನನ್ನು ಮಲಗಿಸುತ್ತಿದ್ದರು. ಆ ಶಿಕ್ಷೆಯು ನಿಮ್ಮ ಶಿಲುಬೆಯ ಶಿಕ್ಷೆಗಿಂತಲೂ ಕ್ರೂರವೂ ಘೋರವೂ ಆದುದು. ಆಗಿನ ಕಾಲದಲ್ಲಿ ಮರಣ ದಂಡನೆ ಪಡೆದ ಅಪರಾಧಿಯನ್ನು ಈ ರೀತಿಯಲ್ಲಿ ವಧೆ ಮಾಡುತ್ತಿದ್ದರು. ದ್ವೇಷಿಗಳಾದ ಜನರೆಲ್ಲರೂ ಸೇರಿ ಆ ಮಹಾತ್ಮನನ್ನು ಶೂಲಕ್ಕೇರಿಸಿದರು. ಆ ಹರಿತ ವಾದ ಶೂಲವು ಅವನ ಎದೆಯೊಳಗೆ ಚುಚ್ಚಿಕೊಂಡಿದ್ದಾಗ ಆ ಮಹಾಪುರುಷನ ಮುಖವು ಶಾಂತಿ–ಸಂತೋಷಗಳ ದಿವ್ಯ ಪ್ರಭೆಯಿಂದ ಬೆಳಗುತ್ತಿತ್ತು; ಅವನ ಶರೀರದ ಪ್ರತಿಯೊಂದು ರೋಮಕೂಪದಿಂದಲೂ "ಅನಲ್‌ಹಕ್, ಅನಲ್‌ಹಕ್ ನಾನೇ ದೇವರು. ನಾನೇ ದೇವರು, ಅಹಂ ಬ್ರಹ್ಮಾಸ್ಮಿ, ಅಹಂ ಬ್ರಹ್ಮಾಸ್ಮಿ" ಎಂಬ ಮಧುರ ಗಾನವೇ ಕೇಳಿಬರುತ್ತಿತ್ತು. ಸಾಯುವದು ಶರೀರವಾದ್ದರಿಂದ, ಅದರ ಮಹತ್ವವೇನೂ ಅವನಿಗಿರಲಿಲ್ಲ. ಏಕೆಂದರೆ ಸತ್ಯಕ್ಕಾಗಿ ಶರೀರವನ್ನು ಬಲಿಕೊಡಬೇಕಾದರೆ, ಸಂತೋಷದಿಂದ ಕೊಡಬೇಕು. ಕತ್ತರಿಸಿ ಒಗೆಯುವದಕ್ಕೆ ಇದೇ ಕೊನೆಯ ಬಂಧನ, ಆಸಕ್ತಿ, ಸತ್ಯಕ್ಕಾಗಿ ದೇಹವನ್ನೇ ಬಲಿಕೊಡಬೇಕಾದರೆ, ಮಿಕ್ಕ ಪ್ರಾಪಂಚಿಕ ವಿಷಯಗಳ ವಿಚಾರವನ್ನು ಹೇಳುವದೇನು ? ಸತ್ಯಮಾರ್ಗದಲ್ಲಿ ನಡೆಯಬೇಕಾದುದೇ ಹೀಗೆ. ಆ ಬ್ರಹ್ಮಜ್ಞಾನಿಯ ಶರೀರದಲ್ಲಿ ಶೂಲವು ಚುಚ್ಚಿ ತೂರಿಕೊಂಡಿರುವಾಗ ಅವನ ಶರೀರದಿಂದ ರಕ್ತವು ಸುರಿಯುತ್ತಿತ್ತು. ಆ ಮಹಾಗುರುವಿನ ಶಿಷ್ಯಳಾದ ಒಬ್ಬ ತರುಣಿಗೆ ಅದೇ ನಂಬಿಕೆಯೂ ಭಾವನೆಯೂ ಇದ್ದಿತು. ಆಕೆಯು ಶ್ರದ್ಧಾಭಕ್ತಿಯಿಂದ ಆ ಗುರುವಿನ ಶರೀರದ ರಕ್ತವನ್ನೆಲ್ಲಾ ಸಂಗ್ರಹಿಸಿ ಕುಡಿದುದರಿಂದ ಆ ಯುವತಿಯು ಗರ್ಭವತಿಯಾದಳೆಂದು ಆ ಕಥೆಯಲ್ಲಿ ಹೇಳಿದೆ. ಅದು ಸುಳ್ಳೋ ನಿಜವೋ ಅದು ಏನಾದರೂ ಇರಲಿ. ಬೈಬಲ್ಲಿನ ಪ್ರಕಾರ, ಮೇರಿಯು ಪುರುಷ ಸಂಪರ್ಕವಿಲ್ಲದೆ ಕ್ರಿಸ್ತನ ಪವಿತ್ರ ಗರ್ಭವನ್ನು ಧರಿಸಬಹುದಾದರೆ, ಆ ಮಹಾತ್ಮನ ರಕ್ತಪಾನದಿಂದಲೂ ಶ್ರದ್ಧಾಸಂಪನ್ನೆಯಾದ ಭಕ್ತಳು ಗರ್ಭಧಾರಣೆ ಮಾಡುವುದು ಸಾಧ್ಯ. ಆ ಮಹಾತ್ಮನು ಕ್ರಿಸ್ತನಿಗಿಂತಲೂ ಕೀಳಾದವನಲ್ಲ, ನಿಜವಾಗಿ ಅವನಿಗಿಂತಲೂ ಎಷ್ಟೋ ಪಾಲು ಮೇಲಾದವನು. ಆ ತಾಯಿಯು ಒಬ್ಬ ಮಹಾತ್ಮನಿಗೆ ಜನ್ಮಕೊಟ್ಟಳು. ಅವನ ಚರಿತ್ರೆಯನ್ನೇ ಈಗ ರಾಮನು ಹೇಳಬೇಕಾಗಿರುವದು. ಆತನು ಬಾಲ್ಯದಿಂದಲೂ ತನ್ನ ತಂದೆಯನ್ನೂ ಮೀರಿಸುವಂಥ ಬ್ರಹ್ಮಜ್ಞಾನಿಯಾಗಿದ್ದನು. ಈ ಮಹಾಪುರುಷನಿಂದ ಒಂದು ಮಹಾಕಾವ್ಯ ಉದಯವಾಯಿತು. ಅವನು ಲೇಖನಿಯನ್ನು ಹಿಡಿದು ಯಾವದನ್ನೂ ಬರೆಯಲಿಲ್ಲ. ಅವನು ಆಡಿದ ಮಾತೆಲ್ಲಾ ಕಾವ್ಯವಾಯಿತು. ಆತನಿಂದ ಕಾವ್ಯಗಂಗೆಯು ತಾನೇ ತಾನಾಗಿ ಹರಿದುಬಂದಳು. ಅದು ನಿಜವಾದ ಕಾವ್ಯವಾಗಿತ್ತು; ಆದರ್ಶವಾದ ಕಾವ್ಯ ಗುಣದಿಂದ ಕೂಡಿತ್ತು. ಸಮಸ್ತ ವರಕವಿಗಳಿಗೂ ಮಹಾಕವಿಗಳಿಗೂ ಮಹಾಕಾವ್ಯಗಳಿಗೂ ಸ್ಫೂರ್ತಿಯನ್ನು ಕೊಡುವ ಮೂಲಪ್ರೇರಕಶಕ್ತಿಯಾದ ಪರಮಾತ್ಮನೇ ನೈಜವಾದ ವಿಶ್ವಕವಿ ಸಾರ್ವಭೌಮ. ಆ ಮಹಾತ್ಮನು ಬ್ರಹ್ಮವಿದ್ಯಾ ಪಾರಂಗತನಾಗಿದ್ದುದರಿಂದ ಅವನ ವಾಣಿಯೆಲ್ಲಾ ಕವಿವಾಣಿಯಾಗಿದ್ದಿತು. ಅದರ ತುಂಬಾ ದೇವರ ವಿಚಾರವೇ ಇದ್ದುದರಿಂದ ದಿವ್ಯವೂ ಭವ್ಯವೂ

ಇವನ ವಿಷಯವಾಗಿ ಒಂದು ಸ್ವಾರಸ್ಯವಾದ ವಿಚಾರವಿದೆ. ಒಮ್ಮೆ ಅವನಿದ್ದ ರಾಜಧಾನಿಗೆ ಸರ್ಕಸ್ ಆಟದವರು ಬಂದರು. ಅವರು ಆಶ್ಚರ್ಯಕರವಾದ ಪ್ರದರ್ಶನ ಕೊಡುತ್ತಿದ್ದರು. ರಾಜನೆದುರಲ್ಲಿಯೂ ಪ್ರದರ್ಶನವನ್ನು ಕೊಟ್ಟರು. ಅವನು ಅತ್ಯಂತ ಪ್ರೀತನಾಗಿ ಅವರಿಗೆ ಒಂದು ಸಾವಿರ ಡಾಲರುಗಳನ್ನು ಬಹುಮಾನವಾಗಿ ಕೊಟ್ಟನು. ಆದರೆ ಅಷ್ಟು ದೊಡ್ಡ ಬಹುಮಾನವನ್ನು ಕೊಟ್ಟಿದ್ದಕ್ಕೆ ಆ ರಾಜನಿಗೆ ಅನಂತರ ಪಶ್ಚಾತ್ತಾಪವಾಯಿತು. ಪ್ರತಿ ರಾತ್ರಿಯೂ ಆ ಪೊಳ್ಳು ಪ್ರದರ್ಶನಗಳನ್ನು ನೋಡಿ ಸಾವಿರಾರು ಡಾಲರುಗಳನ್ನು ಅವರಿಗ ಕೊಡುವದು ಅವನಿಗೆ ಹುಚ್ಚುತನವಾಗಿ ಕಂಡಿತು. ಆದ್ದರಿಂದ ತಾನು ಅವರಿಗೆ ಕೊಟ್ಟಿದ್ದ ಹಣವನ್ನೆಲ್ಲಾ ವಾಪಸು ಪಡೆಯಲು ಅವನು ಒಂದು ಉಪಾಯವನ್ನು ಮಾಡಿದನು. ಒಂದು ಸಿಂಹದ ವೇಷದಲ್ಲಿ ಬಂದು, ಅವರು ಜೀವಂತ ಸಿಂಹನಂತೆಯೇ ಪ್ರದರ್ಶನ ಕೊಡಬೇಕೆಂದೂ ಅದರಲ್ಲಿ ಯಶಸ್ವಿಗಳಾದರೆ ಇನ್ನೂ ಬಹಳ ಹೆಚ್ಚಿನ ಬಹುಮಾನವನ್ನು ಕೊಡುವದಾಗಿಯೂ, ಒಂದು ವೇಳೆ ಅದರಲ್ಲಿ ಅವರು ಸೋತರೆ ಅವರಲ್ಲಿರುವ ಸಮಸ್ತ ಆಸ್ತಿಯನ್ನೂ ದಂಡವಾಗಿ ತನಗೆ ಕೊಟ್ಟುಬಿಡಬೇಕೆಂದೂ ಪಣವನ್ನಿಟ್ಟು ಆ ಆಟಗಾರರನ್ನು ರಾಜನು ಆಹ್ವಾನಿಸಿದನು. ಆ ಜನರಿಗೆ ಅದು ಸಾಧ್ಯವಾಗಿರಲಿಲ್ಲ. ಆ ವೇಷವನ್ನು ಹಾಕಿಕೊಂಡಾಗಲೀ ಆ ಸಿಂಹದ ರೂಪವನ್ನು ಧರಿಸಿ ಆಗಲಿ ಅಭಿನಯಿಸಿ ರಾಜನನ್ನು ಪ್ರೀತಿಪಡಿಸಲು ಸಾಧ್ಯವಿಲ್ಲದೆ ಆ ಜನರು ಆ ಮಹಾತ್ಮನಲ್ಲಿ ಬಂದು ತಮ್ಮ ಕಷ್ಟವನ್ನು ಹೇಳಿಕೊಂಡು ಏನಾದರೂ ಮಾಡಿ ಸಹಾಯ ಮಾಡಬೇಕಂದು ಗೋಳಿಟ್ಟು ಬೇಡಿಕೊಂಡರು. ಇಂಡಿಯಾದಲ್ಲಿ ಅನೇಕ ವೇಷಗಳನ್ನು ಧರಿಸಿ ಅಭಿನಯಿಸತಕ್ಕವರೂ ಕೆಲವು ಪ್ರಾಣಿಗಳಂತೆ ತೋರಿಕೊಂಡು ಎಲ್ಲಾ ರೀತಿಯಿಂದಲೂ ವಾಸ್ತವವಾಗಿ ಅವುಗಳಂತೆಯೇ ವರ್ತಿಸತಕ್ಕವರೂ ಇದ್ದಾರೆ ; ಆದರೆ ಸಿಂಹವೇ ಆಗಿ ನಡೆದುಕೊಳ್ಳುವದು ಅಥವಾ ನಟಿಸುವದು ಯಾರಿಗೂ ಸುಲಭವಾಗಿರಲಿಲ್ಲ. ವಿಶ್ವಾತ್ಮ ಭಾವನೆಯಲ್ಲಿದ್ದ ಆ ಮಹಾತ್ಮನು ಇಡೀ ಪ್ರಕೃತಿ ಮಂಡಲದಲ್ಲಿ ಸಮರಸಭಾವವುಳ್ಳವನಾಗಿ ಪ್ರತಿಯೊಬ್ಬರನ್ನೂ ತಾನೇ ಎಂದು ಕಾಣುತ್ತಿದ್ದುದರಿಂದ ಅವರ ಪ್ರಾರ್ಥನೆಗೆ ಮನಸ್ಸು ಕರಗಿ, ತಾನೇ ಸಿಂಹನಾಗಿ ರಾಜನೆದುರು ಪ್ರದರ್ಶನ ಕೊಡುವದಾಗಿಯೂ ಸಂತೋಷವಾಗಿರಬೇಕೆಂದೂ ಆ ಆಟಗಾರರಿಗೆ ಆಶ್ವಾಸನೆ ಕೊಟ್ಟನು. ಮರುದಿನ ರಾಜನೂ ಅವನ ದರ್ಬಾರಿನವರೂ ಆಟಗಾರರ ಸಿಂಹರೂಪದ ಪ್ರದರ್ಶನವನ್ನು ನೋಡಲು ಕಾತರದಿಂದ ಕಾದಿದ್ದಾಗ ಒಮ್ಮೆಗೇ ಮಂತ್ರಮಹಿಮೆಯಿಂದಲೋ ಎನ್ನುವಂತೆ ಒಂದು ನಿಜವಾದ ಸಿಂಹವೇ ಆ ಕ್ಷಣದಲ್ಲಿ ಬಂದು ಹಾರಿತು ಎಂದು ಕಥೆಯಲ್ಲಿ ಹೇಳಿದೆ. ಈ ಸಿಂಹವು ಅರಮನೆಯೆಲ್ಲಾ, ರಾಜಧಾನಿಯೆಲ್ಲಾ ಗಡಗುಟ್ಟಿ ನಡಗುವಂತೆ ಭಯಂಕರವಾಗಿ ಗರ್ಜಿಸಿ. ಆರ್ಭಟಿಸಿತು. ರಾಜನ ಪರಿವಾರದವರಲ್ಲಿದ್ದ ರಾಜಕುಮಾರನನ್ನು ಕಚ್ಚಿಸೆಳೆದು ಹರಿದು ಹರಿದು ತುಂಡು ತುಂಡು ಮಾಡಿತು. ಇನ್ನೊಬ್ಬ ಬಾಲಕನ ಮೇಲೂ ಜಿಗಿದು ಕಚ್ಚಿಕೊಂಡೋಡಿ ಗಗನಕ್ಕೆಸೆಯಿತು. ತಾನೇ ನಿಜವಾಗಿ ದೇವರೆಂದೂ ತಾನೇ ಸರ್ವಸ್ವವೆಂದೂ

ಇರುವ ಭಾವನೆಯು ಈ ಪುಣ್ಯಾತ್ಮನಲ್ಲಿ ಅತ್ಯಂತ ದೃಢವಾಗಿದ್ದಿತು. ಈ ಅಲ್ಪವಾದ ಪುಟ್ಟ ಶರೀರವು ತಾನೆಂಬ ಭಾವನೆಯು ಈತನಲ್ಲಿ ಹಿಂದೆ ಕಳೆದುಹೋಗಿದ್ದ ಭ್ರಮೆಯಾಗಿದ್ದಿತು ಅದು ಅವನಿಗೆ ಸಂಪೂರ್ಣ ಅರ್ಥಶೂನ್ಯವಾಗಿತ್ತು. ದೇವರೇ ಅವನಾಗಿದ್ದನು ; ಸರ್ವಶಕ್ತನಾದ ದೇವರೇ ಆ ಸಿಂಹರೂಪದಿಂದ ತೋರಿಕೊಂಡಿದ್ದನು. ಸಿಂಹವೇ ತಾನೆಂದು ಚಿಂತನಮಾಡಿದ ನಿಮಿಷ ಮಾತ್ರದಲ್ಲಿ ಅವನು ಸಿಂಹವೇ ಆಗಿದ್ದನು.

**Just as you think, so you become, and if you have felt and realized yourself as God, all your thoughts and desires are bound to fructify, to be realized on the spot.**

"ನೀವು ಹೇಗೆ ಭಾವಿಸುವಿರೋ ಹಾಗೆ ಆಗುವಿರಿ ; ನೀವು ಏನೆಂದು ಸಂಕಲ್ಪಿಸುವಿರೋ ಅದೇ ಆಗುವಿರಿ. ನಿಮ್ಮನ್ನು ನೀವು ದೇವರೆಂದು ಭಾವಿಸಿ, ಆ ಸರ್ವಲೋಕಗಳಿಗೂ ಕಾರಣನೂ ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನೇ ನೀವೆಂದು ಅನುಭವ ಪಡೆದಿದ್ದರೆ, ನಿಮ್ಮ ಎಲ್ಲಾ ಭಾವನೆಗಳೂ ಬಯಕೆಗಳೂ ಸಂಕಲ್ಪ ಮಾಡಿದ ಸಮಯದಲ್ಲಿಯೇ ಸ್ಥಳದಲ್ಲಿಯೇ ಸಫಲವಾಗುತ್ತವೆ ; ಸಿದ್ಧವಾಗುತ್ತವೆ." ಆದ್ದರಿಂದ ಆ ಮಹಾತ್ಮನು ತಾನು ಸಿಂಹವಾಗಬೇಕೆಂದು ಸಂಕಲ್ಪ ಮಾಡಿದ ಕೂಡಲೇ ಅದು ಸಿದ್ಧಾರ್ಥವಾಗಿ ಅವನು ಸಿಂಹವೇ ಆದನು. ಆ ಘೋರವಾದ ಪ್ರದರ್ಶನವು ಮುಗಿದಿತ್ತು. ಆ ಇಬ್ಬರು ಬಾಲಕರನ್ನು ಕೊಂದ ಮೇಲೆ ಆ ಮಹಾತ್ಮನು—ಯಾವ ಶರೀರದ ಅಭಿಮಾನವೂ ಇಲ್ಲದವನಾದುದರಿಂದ—ಆ ಸಿಂಹರೂಪವನ್ನು ವಿಸರ್ಜಿಸಿ ತನ್ನ ಪೂರ್ವ ರೂಪವನ್ನು ಪಡೆದನು. ಅವನು ವ್ಯಕ್ತಿಗಳನ್ನು ಗೌರವಿಸತಕ್ಕವನಾಗಿರಲಿಲ್ಲ ಆದರೆ, ರಾಜನೂ ಪರಿವಾರದವರೂ ಈ ಸಿದ್ಧಪುರುಷನೇ ಸಿಂಹವಾಗಿ ಬಂದು ತನ್ನ ಬಾಲಕನನ್ನು ಕೊಂದಿರಬೇಕೆಂದು ಊಹಿಸಿ ಅತ್ಯಂತ ದುಃಖಿತರೂ ಉದ್ರಿಕ್ತರೂ ಆಗಿ ಕೋಪವೇ ಮೂರ್ತಿಗೊಂಡಂತೆ ಆದರು. ಅವರು ಇವನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು, ಅವನಲ್ಲಿಗೆ ಬಂದು "ಸ್ವಾಮಿ ! ತಾವು ಮಹಾ ಸಿದ್ಧಪುರುಷರು ; ಕೊಲ್ಲುವ ಶಕ್ತಿಯು ತಮಗೆ ಇದ್ದಮೇಲೆ ಕಾಯುವ ಶಕ್ತಿಯೂ ಇರಬೇಕು ; ಸಂಹಾರ ಶಕ್ತಿಯು ಇರುವಲ್ಲಿ ಸಂಜೀವನ ಶಕ್ತಿಯೂ ಸಂರಕ್ಷಣ ಶಕ್ತಿಯೂ ಇರುವುದು ಸ್ವಾಭಾವಿಕ. ಕ್ರಿಸ್ತನು ಸತ್ತವರನ್ನು (Qum Biyazn Allah) 'ಕ್ವಂ ಬಿಯಾಜನ್ ಅಲ್ಲಾ !' 'ದೇವರ ಹೆಸರಿನಿಂದ ಏಳು ; ದೇವರಿಗೆ ಜಯವಾಗಲಿ ! ದೇವರ ಮಹಿಮೆಯಿಂದ ಜೀವಂತನಾಗು ; ಬದುಕಿ ಏಳು, ನಡಿ,' ಎಂದು ಪ್ರಾರ್ಥಿಸಿ ಬದುಕಿಸುತ್ತಿದ್ದನು. ಹಾಗೆಯೇ ನೀವೂ ಕೂಡ ಆ ಸತ್ತವನನ್ನು ಅಥವಾ ನೀವೇ ಕೊಂದವನನ್ನು ದೇವರ ಹೆಸರಿನಲ್ಲಿ ಬದುಕಿಸಿಕೊಡಿ", ಎಂದರು. ಆ ಮಹಾತ್ಮನು ನಕ್ಕನು, "ಒಳ್ಳೆಯದು, ನಿಮ್ಮ ಮಂತ್ರವನ್ನೇ ಉಚ್ಚರಿಸುತ್ತೇನೆ" ಎಂದು "ಕ್ವಂ ಬಿಯಾಜನ್ ಅಲ್ಲಾ !" "ಕ್ವಂ ಬಿಯಾಜನ್ ಅಲ್ಲಾ !" ಎಂದು ಮತ್ತೆ ಮತ್ತೆ ಉಚ್ಚರಿಸಿದನು. ಆದರೆ ಸತ್ತವನು

ತಿರುಗಿ ಬದುಕಲಿಲ್ಲ. "ದೇವರ ಮಹಿಮೆಯಿಂದ, ದೇವರ ಹೆಸರಿನಲ್ಲಿ, ಬದುಕು, ಏಳು, ನಡಿ.'' ಎಂದು ಪುನಃ ಪುನಃ ಹೇಳಿದನು. ಆದರೆ ಹೆಣಕ್ಕೆ ಜೀವ ಬರಲಿಲ್ಲ. ಆಗ ಅವನು ಪುನಃ ನಕ್ಕು "ಕ್ವಂ ಬಿಯಾಜ್‌ನಿ'' "ನನ್ನ ಅಧಿಕಾರದಿಂದ ಹೇಳುತ್ತೇನೆ, ಬದುಕು ನಾನು ಆಜ್ಞೆ ಮಾಡುತ್ತೇನೆ, ಜೀವಂತನಾಗು, ಎಚ್ಚರಗೊಳ್ಳು, ಎದ್ದೇಳು, ನಡಿ" ಎಂದು ಅಪ್ಪಣೆ ಮಾಡುತ್ತೇನೆ ಎಂದು ಹೇಳಿದ ಕೂಡಲೇ ಆ ಬಾಲಕನಿಗೆ ಜೀವ ಬಂದಿತು. ಆದರೆ ಸುತ್ತಲೂ ಇದ್ದ ಜನರಿಗೆ ಸಹನೆಯಾಗಲಿಲ್ಲ. ಅವರು "ಇವನು ಮಹಾ ಪಾಷಂಡಿ, ನಾಸ್ತಿಕ ; ತಾನೇ ದೇವರ ಸಮಾನನೆನ್ನುತ್ತಾನೆ. ಎಲ್ಲಾ ಖ್ಯಾತಿಯನ್ನೂ ಗೌರವವನ್ನೂ ತಾನೇ ತೆಗೆದುಕೊಳ್ಳುತ್ತಾನೆ. ಇವನನ್ನು ಕೊಲ್ಲಬೇಕು. ಇವನ ಚರ್ಮ ಸುಲಿದು ಕೊಲೆ ಮಾಡಬೇಕು." ಎಂದು ಕೂಗಾಡಿದರು. ಆ ಮಹಾತ್ಮನಿಗೆ ಅವರ ರೇಗಾಟಗಳು ಯಾವ ಮಹತ್ವದ್ದೂ ಆಗಿರಲಿಲ್ಲ. ಜನರಿಗೆ ಅವನ ಮಾತು ಅರ್ಥವಾಗಲಿಲ್ಲ. ಅವನು ಈ ದೇಹವನ್ನು ಈ ಅಲ್ಪ ವ್ಯಕ್ತಿಯನ್ನು ದೇವರೆನ್ನಲಿಲ್ಲ. ಅವನು ತನ್ನ ಮಾಂಸಮಯ ದೇಹವನ್ನು ಎಂದೋ ಶಿಲುಬೆಗೇರಿಸಿ, ಶೂಲಕ್ಕೇರಿಸಿ ಕೊಂದು ಬಿಟ್ಟಿದ್ದನು. ಇದನ್ನು ತಿಳಿಯದೆ ಜನರು ಆ ಮಹಾತ್ಮನ ಜೀವ ಸಹಿತ ಚರ್ಮ ಸುಲಿಯಬೇಕೆಂದು ಕೂಗಾಡುತ್ತಿದ್ದರು. ಇದನ್ನು ತಿಳಿದು ತತ್‌ಕ್ಷಣ ಆ ಮಹಾತ್ಮನು, ಪ್ರಾಣಿಗಳ ಚರ್ಮವನ್ನು ಸುಲಿದು ದೇಹದಿಂದ ಬೇರ್ಪಡಿಸುವಂತೆ, ಉಗುರುಗಳಿಂದ ತನ್ನ ಇಡೀ ದೇಹದ ಚರ್ಮವನ್ನೇ ಮುಡಿಯಿಂದ ಅಡಿಯವರೆಗೂ ಸುಲಿದು ಕತ್ತರಿಸಿ ಒಗೆದನು—ಎಂದು ಆ ಕಥೆಯಲ್ಲಿ ಹೇಳಿದೆ. ಆ ಸಮಯದಲ್ಲಿ ಅವನು ಬರೆದ ಒಂದು ಸೊಗಸಾದ ಉದ್ದವಾದ ಕವಿತೆಯಿದೆ. ಆ ಗೀತೆಯ ತಾತ್ಪರ್ಯವೇನೆಂದರೆ—"ಓ ಆತ್ಮ ! ಓ ಆತ್ಮ ! ನಿನಗೆ ಪ್ರಪಂಚದ ವಿಷವೇ ಅಮೃತವಾಗಿದೆ; ಮತ್ತು ಪ್ರಪಂಚದ ಅಮೃತವೇ (ವಿಷಯ ಸುಖವೇ) ವಿಷವಾಗಿದೆ. ಈ ಜನರಿಗೆ ಏನೋ ಬೇಕಾಗಿದೆ. ಪ್ರಪಂಚವು ಸತ್ತ ಹೆಣವಲ್ಲದೆ ಬೇರಲ್ಲ ; ಪ್ರಪಂಚ ಸುಖವೂ ನಿರ್ಜೀವ ಶವವಲ್ಲದೆ ಬೇರಲ್ಲ. ಅದರ ಬೆನ್ನು ಹತ್ತಿ ಓಡುವ ಜನರು ನಾಯಿಗಳಲ್ಲದೆ ಬೇರಲ್ಲ. ಇಲ್ಲಿ ಈ ನಾಯಿಗಳಿವೆ. ಅವುಗಳಿಗೆ ತಿನ್ನುವದಕ್ಕೆ ಈ ಮಾಂಸವನ್ನು ಕೊಡು." ಎಂದು ತನ್ನನ್ನು ಕುರಿತು ತಾನೇ ಹೇಳಿಕೊಂಡನು. ಈ ಕತೆಯು ಸುಳ್ಳೋ ನಿಜವೋ ಅದು ನಮಗೆ ಮುಖ್ಯವಲ್ಲ. ಆದರೆ ಅದರಲ್ಲಿರುವ ನಿಜವಾದ ಅರ್ಥವನ್ನೂ ಭಾವವನ್ನೂ ನೀತಿಯನ್ನೂ ನಾವು ಮನಸ್ಸಿನಲ್ಲಿ ಧರಿಸಬೇಕು.

ಧರ್ಮ ಮಾರ್ಗದಲ್ಲಿ ನಡೆಯುವುದಕ್ಕಾಗಿ, ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುವದಕ್ಕಾಗಿ ಎಲ್ಲಾ ಆಸಕ್ತಿಗಳನ್ನೂ ಬಿಡಬೇಕು; ಪ್ರಾಪಂಚಿಕ ಆಶೆಗಳನ್ನೂ ಸ್ವಾರ್ಥಕ್ಕಾಗಿ ಅಂಟಿಕೊಂಡಿರುವ ಅಭಿಮಾನಗಳನ್ನೂ ಮೆಟ್ಟಿ ಮೇಲೇರಬೇಕು. ಮನಸ್ಸಿಗೆ ಅಂಟಿಕೊಂಡಿರುವ ಪ್ರಾಪಂಚಿಕ ವಿಷಯಗಳನ್ನೂ ಸ್ವಾರ್ಥದ ಬಯಕೆಗಳನ್ನೂ ಬಿಡುಗಡೆ ಮಾಡಿಕೊಂಡ ಮಾತ್ರಕ್ಕೆ ಸತ್ಯದ ಸಮಾಚಾರವೇನು? ಸತ್ಯವು ಹೇಗೆ ಲಭಿಸುತ್ತದೆ?" ಎಂದು ತೋರಬಹುದು. ಆದರೆ ಅದಕ್ಕಾಗಿ ಹೊಸದಾಗಿ ಏನೂ ಮಾಡಬೇಕಾಗಿಲ್ಲ.

ಈ ಕ್ಷಣವೇ ನೀವು ಸತ್ಯ ಸ್ವರೂಪರಾಗಿದ್ದೀರಿ. "ನನಗೆ ಹೆಚ್ಚು ಬೆಳಕು ಬೇಕು, ಹೆಚ್ಚು ಬೆಳಕು ಬೇಕು" ಎಂದು ಬುದ್ಧಿಹೀನರು ಪ್ರಾರ್ಥಿಸುತ್ತಾರೆ. ನೀವು ಆ ರೀತಿ ಪ್ರಾರ್ಥಿಸ ಬೇಕಾಗಿಲ್ಲ. ಬೆಳಕಿಗಾಗಿ ಒಂದು ಬೇಡಿಕೆಯನ್ನೂ ವ್ಯರ್ಥವಾಗಿ ಖರ್ಚುಮಾಡುವ ಅಗತ್ಯವೇ ಇಲ್ಲ. ನೀವು ಈ ಕ್ಷಣದಲ್ಲಿ ಎಲ್ಲಾ ಆಶೆಗಳನ್ನೂ ಆಸಕ್ತಿಗಳನ್ನೂ ಕಳಚಿ ಕೊಂಡರೆ ಬೆಳಕೇ ನೀವಾಗಿದ್ದೀರಿ. ಪ್ರತಿಯೊಂದು ಬಯಕೆಯೂ ನಿಮ್ಮ ಒಂದು ಭಾಗವನ್ನೇ ಕತ್ತರಿಸಿ ಹಾಕಿದಂತೆ ನಿಮ್ಮ ಒಂದು ಅಂಶವನ್ನು ಮಾತ್ರ ಉಳಿಸುತ್ತದೆ. ಆದ್ದರಿಂದ ಇಡೀ ಮನುಷ್ಯನನ್ನು—ಪೂರ್ಣ ವ್ಯಕ್ತಿಯನ್ನು—ನಾವು ಕಾಣುವದು ಬಹಳ ಅಪರೂಪ. ಇಡೀ ಮನುಷ್ಯನು ಸ್ಫೂರ್ತಿ ಪಡೆದ ಮನುಷ್ಯ; ಪೂರ್ಣ ಪುರುಷನೇ ಸತ್ಯ ಸ್ವರೂಪ ಪ್ರತಿಯೊಂದು ಆಶೆಯೂ ಅಥವ ಆಸಕ್ತಿಯೂ ನಿಮ್ಮನ್ನು ಅದಕ್ಕೆ ಅನುರೂಪವಾದ ಅಂಶವನ್ನಾಗಿ ಮಾಡಿದರೂ ನಿಜವಾಗಿ ಅನನುರೂಪ ಭಾಗ ವನ್ನಾಗಿಯೂ ಕ್ಷುಲ್ಲಕ ಭಾಗವನ್ನಾಗಿಯೂ ಮಾಡುತ್ತದೆ. ಎಲ್ಲಾ ಬಯಕೆಗಳನ್ನೂ ಆಸಕ್ತಿಗಳನ್ನೂ ರಾಗದ್ವೇಷಗಳನ್ನೂ ಕಿತ್ತೆಸೆದು, ಬೆಳಕಿನ ಬಯಕೆಯನ್ನೂ ಬಿಟ್ಟು ಒಂದು ಕ್ಷಣ ಓಂಕಾರವನ್ನು ಉಚ್ಚರಿಸುತ್ತಾ ಕುಳಿತು ನಿನ್ನೊಳಗೆ ನೀನು ಯಾರೆಂದು ವಿಚಾರಿಸು. ನಿನ್ನ ಧಮನಿಗಳಲ್ಲಿ ರಕ್ತ ಹರಿಯುವಂತೆಯೂ ಕೂದಲು ಬೆಳೆಯುವಂತೆಯೂ ಮಾಡು ವದು ನೀನೇ ಅಲ್ಲವೆ? ಈ ದೇಹವನ್ನು ಸೃಷ್ಟಿಸಿದವನು ನಿನ್ನ ಆತ್ಮವೇ ಅಲ್ಲವೆ? ಈ ಆಶ್ಚರ್ಯಕರವಾದ ಪ್ರಪಂಚವೂ ನಿನ್ನ ಕಲಾಕೃತಿಯೇ. ಸತ್ಯವಾಗಿಯೂ ಪರಮ ಸತ್ಯ ವಾಗಿಯೂ ಈ ವಿಶ್ವವೆಲ್ಲಾ ನಿನ್ನ ಸೃಷ್ಟಿಯೇ. ಇದನ್ನು ಚೆನ್ನಾಗಿ ಗಮನಿಸಿ. ನಿಮ್ಮ ಕಿವಿಯಿಂದ ಕೇಳತಕ್ಕವರಾರು? ನಿಮ್ಮ ಕಣ್ಣಿನಿಂದ ನೋಡತಕ್ಕವರಾರು? ಎಲ್ಲಾ ನಿಮ್ಮ ಆತ್ಮನೇ ಅಲ್ಲವೆ? ನಿಮ್ಮ ನರನಾಡಿಗಳಲ್ಲಿ ರಕ್ತ ಹರಿಯುವದು ಯಾರಿಂದ? ನಿಮ್ಮ ಆತ್ಮನಿಂದ ಅಲ್ಲವೆ? ಅಂಥಾ ಅದ್ಭುತಗಳೆಲ್ಲಾ ನಿಮ್ಮ ಆತ್ಮನಿಂದ ಸಾಧ್ಯವಾದರೆ, ಈ ಪ್ರಪಂಚವೆಲ್ಲಾ ನಿಮ್ಮ ಆತ್ಮನ ಸೃಷ್ಟಿಯೇ ಎಂಬುದೇನೂ ಅಸಂಭವವಲ್ಲ. ಅದನ್ನು ಭಾವಿಸಿರಿ, ನಿಮ್ಮ ದಿವ್ಯತೆಯಲ್ಲಿ ನೀವು ಆನಂದ ಪಡಿರಿ ; ನಿಮ್ಮ ಸಂತೋಷವು ನಿಮ್ಮ ಒಳಗಿನಿಂದಲೇ ಉಕ್ಕಿಬರಬೇಕು. ನಿಮ್ಮ ಆತ್ಮ ಸ್ವರೂಪದಲ್ಲಿಯೇ ನೀವು ಆನಂದ ಪಡಬೇಕು. ನಿಮ್ಮ ಸಂತೋಷವು ಹೊರಗಿನ ವಿಷಯಕ್ಕೆ ವಶವಾಗಬಾರದು. ಎಲ್ಲಾ ಮಿತಿಮೀರಿದ ಆಶೆಗಳನ್ನೂ ಅತಿರೇಕದ ಆಕಾಂಕ್ಷೆಗಳನ್ನೂ ಕಿತ್ತೊಗೆದು ಓಂ ಓಂ ಎಂದು ಉಚ್ಚರಿಸಿರಿ. ಕೆಲವು ಹೊತ್ತು ಹೀಗೆ ಮಾಡಿದರೆ ನಿಮ್ಮ ಮಸ್ತಕದಿಂದ ಪಾದದ ವರೆಗೂ ಇಡೀ ನಿಮ್ಮ ಜೀವವೇ ಬೆಳಕಾಗುತ್ತದೆ. ನಿಮ್ಮ ಆತ್ಮನೇ ಬೆಳಕಾಗಿರುವಾಗ ಬೆಳಕಿಗಾಗಿ ಏಕೆ ಬೇಡಬೇಕು? ನನ್ನ ಬೆಳಕಿನಿಂದಲೇ ಸೂರ್ಯ, ಚಂದ್ರ, ನಕ್ಷತ್ರಾದಿಗಳೆಲ್ಲಾ ಬೆಳಗುತ್ತವೆ—ಎಂದು ನೀವು ಚಿಂತಿಸಿದ ಕೂಡಲೇ ಬೆಳಕಿನ ರಾಶಿಯೇ ಆಗುತ್ತೀರಿ. ವಿಷಯಾಸಕ್ತಿಯೇ ಆತ್ಮಾಸಕ್ತಿಯನ್ನು ತಪ್ಪಿಸುತ್ತದೆ. ನೀವು ಮನೆಗೆ ಹೋದ ಮೇಲೆ ನಿಮಗೆ ಯಾವದರಲ್ಲಿ ಆಸಕ್ತಿಯಿದೆಯೆಂಬುದನ್ನು ಕಂಡುಹಿಡಿದುಕೊಳ್ಳಿ. ಹೆಸರನ್ನು ಗಳಿಸಬೇಕೆಂದೋ ಕೀರ್ತಿಯನ್ನು ಸಂಪಾದಿಸಬೇಕೆಂದೋ ಜನಪ್ರಿಯರಾಗಬೇಕೆಂದೋ

ಪರೋಪಕಾರ ಮಾಡಬೇಕೆಂದೋ ನಿಮಗೆ ಬಯಕೆಯಿದ್ದರೆ ಅದನ್ನು ಮೊದಲು ತ್ಯಾಗ ಮಾಡಿ. ಇದು ನಿಮಗೆ ಸ್ವಲ್ಪ ಅತಿರೇಕವಾಗಿ ಕಾಣಬಹುದು. ಆದರೆ ಯೋಚನೆ ಮಾಡಿ. ನಿಮ್ಮಿಂದ ಸರ್ವದಾ ಸಹಾಯವನ್ನು ಬೇಡುವಷ್ಟು ಪ್ರಪಂಚವು ಏಕೆ ದರಿದ್ರ ವಾಗಬೇಕು ?

ನಿಮ್ಮ ಕರ್ತವ್ಯ ಕರ್ಮವನ್ನು ನೀವು ನಿಷ್ಕಾಮ ಬುದ್ಧಿಯಿಂದ ಮಾಡಿ. ಆತ್ಮಾನುಭವಕ್ಕೂ ಆತ್ಮಾನಂದಕ್ಕೂ ಇನ್ನೊಂದು ಹೆಸರೇ ಕರ್ಮ, ಕರ್ಮಯೋಗ-ಎನ್ನಬಹುದು. ಕರ್ಮ ಮಾಡುತ್ತಿರುವುದೇ ಒಂದು ಸಂತೋಷ. ಕರ್ಮ ಮಾಡಿ ಅದರ ಆನಂದವನ್ನು ಅನುಭವಿಸಿ. ನೀವು ಕರ್ಮ ಮಾಡುತ್ತಿರುವದೇ ಕರ್ತವ್ಯವಾದ್ದರಿಂದ ಕರ್ಮ ಮಾಡಿರಿ. "Work leads you to realization" ಕರ್ಮವು ಆತ್ಮಾನುಭವಕ್ಕೆ ಒಯ್ಯುತ್ತದೆ ; ಸಾಧನವಾಗುತ್ತದೆ. ಬೇರೆ ಯಾವ ಭಾವನೆಯಿಂದಲೂ ಕರ್ಮ ದಲ್ಲಿ ತೊಡಗಬೇಡಿ. ಸಂತೋಷವೂ ಸುಖವೂ ಕರ್ಮದ ಪೋಷಾಕಿನಲ್ಲಿ, ಕರ್ಮದ ವೇಷ ದಲ್ಲಿ ಇರುವದರಿಂದ ರಾಜಕುಮಾರನು ಚೆಂಡಾಟವನ್ನೋ ಬೇರೆ ಯಾವದಾದರೂ ಆಟವನ್ನೋ ಆಡುವಂತೆ ಸ್ವತಂತ್ರ ಭಾವದಿಂದಲೂ ಧೋರಣೆಯಿಂದಲೂ ವಿನೋದ ಕ್ಕಾಗಿಯೂ ಕರ್ಮದಲ್ಲಿ ತೊಡಗಿರಿ. ಅದರ ಕಟ್ಟಿನೊಳಗೆ ಸಿಕ್ಕಿರುವಂತೆ ಭಾವಿಸಬಾರದು.

ಕರ್ತವ್ಯ, ಕರ್ತವ್ಯ, ಕರ್ತವ್ಯ– ಎಂದು ಜನರು, ತಾವು ಅದಕ್ಕೆ ಗುಲಾಮರೆಂಬಂತೆ ಹೇಳಿಕೊಳ್ಳುತ್ತಾರೆ. ಕರ್ತವ್ಯವು ನಿಮ್ಮ ಮೇಲೆ ಏಕೆ ಪ್ರಭುತ್ವ ನಡೆಸಬೇಕು ? ದರ್ಬಾರ್ ಮಾಡಬೇಕು ? ನಿಮಗೆ ನೀವೇ ಪ್ರಭುಗಳಾದ್ದರಿಂದ ಯಾರಿಗೂ ನೀವು ಹೊಣೆಗಾರ ರೆಂದು ತಿಳಿಯಬೇಡಿ ; ಯಾರಿಗೂ ನೀವು ಜವಾಬ್ದಾರರೆಂದು ಭಾವಿಸಬೇಡಿ. ಭಯಪಡ ಬೇಡಿ. ನೀವು ನಿರಂತರವಾಗಿ ಕೆಲಸ ಮಾಡುತ್ತಿರಬೇಕೆಂದು ಹೇಳುತ್ತೇವೆ, ಕೆಲಸಮಾಡಿ ಎಂದು ಹೇಳುತ್ತೇವೆ. ಆದರೆ ಯಾವ ಕರ್ಮವನ್ನಾದರೂ ನೀವು ದೇವರ ಪೂಜೆ ಯೆಂದು ಮಾಡಬೇಕು; (Think work to be worship) ಅಂಥಾ ಧಾರ್ಮಿಕ ಭಾವನೆಯಿಂದಲೂ, ದೈವಿಕ ಭಾವನೆಯಿಂದಲೂ, ಪವಿತ್ರ ಭಾವನೆಯಿಂದಲೂ ಎಲ್ಲಾ ಕರ್ಮವನ್ನೂ ಮಾಡಬೇಕು. ನೀವು ಕರ್ಮವನ್ನು ಮಾಡುತ್ತಿದ್ದರೆ ಒಳ್ಳೆಯದೇ. ಆದರೆ ನಿಮ್ಮ ಕೈ, ಕೆಲಸವಿಲ್ಲದೆ ಬಿಡುವಿದ್ದಾಗ, ನಿಮ್ಮ ಕೋಣೆಯಲ್ಲಿ ನೀವೊಬ್ಬರೇ ಕುಳಿತಿರು ವಾಗ ನಿಮ್ಮ ಆತ್ಮಸ್ವರೂಪದ ಆನಂದದಲ್ಲಿ ನೀವು ಮುಳುಗಿರಿ, ನಿಮ್ಮ ದೇವತ್ವವನ್ನು ನೀವು ಸವಿಯಿರಿ. ಇದು ಎಲ್ಲಕ್ಕಿಂತಲೂ ಹೆಚ್ಚಿನ ಕೆಲಸ; ಅತ್ಯಂತ ಶ್ರೇಷ್ಠವಾದ ಕರ್ಮ, ಧರ್ಮ. ಏಕಾಂತದಲ್ಲಿರುವಾಗ ಎಲ್ಲಾ ಆಸಕ್ತಿಗಳನ್ನೂ ತೆಗೆದೊಗೆಯಿರಿ. ನಾವು ಕೆಲಸ ಮಾಡುವದಕ್ಕೆ ಆಸಕ್ತಿಯೂ ಏನಾದರೊಂದು ಉದ್ದೇಶವೂ ಅವಶ್ಯವೆಂದು ಜನರು ಹೇಳುತ್ತಾರೆ. ಆದರೆ ಇದು ತಪ್ಪು ತಿಳಿವಳಿಕೆ. ಎಲ್ಲಾ ಆಶೆಗಳನ್ನೂ ಆಸಕ್ತಿಗಳನ್ನೂ ತ್ಯಾಗಮಾಡಿದ ಕೂಡಲೇ ನೀವು ಬಿಡುಬಿಚ್ಚಾಗಿರುವದನ್ನೂ, ಮುಕ್ತರೂ ಸ್ವತಂತ್ರರೂ ಆಗಿರುವದನ್ನೂ ಮನಗಾಣುತ್ತೀರಿ. ನಿಮ್ಮ ಹೆಗಲ ಮೇಲೆ ಯಾವ ಹೊರೆಯೂ

ತಲೆಯ ಮೇಲೆ ಯಾವ ಹೊಣೆಗಾರಿಕೆಯೂ ಕೂತಿಲ್ಲವೆಂಬುದನ್ನು ಕಂಡುಕೊಳ್ಳುತ್ತೀರಿ. ಹೊರೆಯನ್ನೂ ಹೊಣೆಗಾರಿಕೆಯನ್ನೂ ಹೊತ್ತಿರುವುದಕ್ಕೆ ನೀವೇ ಕಾರಣ, ನಿಮ್ಮ ಭಾವನೆಯೇ ಕಾರಣ. ಆದ್ದರಿಂದ ಅವನ್ನು ಇಳಿಸಿಕೊಳ್ಳುವದಕ್ಕೆ ಬೇರೆಯವರು ಬರಬೇಕಾಗಿಲ್ಲ. ನಿಮ್ಮ ಹೆಗಲ ಮೇಲೆ ಯಾವ ಹೊರೆಯೂ ಇಲ್ಲವೆಂದೂ ನಿಮ್ಮ ಪ್ರೀತಿಯ ಎಲ್ಲಾ ವಸ್ತುಗಳೂ ನಿಮ್ಮೊಡನೆಯೇ ಇವೆಯೆಂದೂ ತಿಳಿದು, ಈ ವೇದಾಂತದಲ್ಲಿ ನೀವು ಜೀವಿಸುವದಾದರೆ ನಿಮ್ಮ ಇಡೀ ಬಾಳೇ ಬೆಳಕಾಗುತ್ತದೆ. ಬೆಳಕುಗಳಿಗೆಲ್ಲಾ ಬೆಳಕಾದ ನೀವು ಬೆಳಕನ್ನು ಕೊಡು—ಎಂದು ಯಾರನ್ನು ಬೇಡ ಬೇಕು ? ಇದೇ ಬಾಳಿನ ಗುಟ್ಟು ; ಇದೇ ಆನಂದ ಜೀವನದ ರಹಸ್ಯ. ನಿನ್ನನ್ನು ಬಂಧನದಲ್ಲಿ ಹಾಕಿರುವವರಾರು ? ನಿನ್ನ ದಾಸ್ಯಕ್ಕೆ ಯಾರು ಕಾರಣ ? ನಿಮ್ಮ ಆಶೆಗಳೇ, ಬೇರೆಯಲ್ಲ. ಪ್ರಪಂಚದಲ್ಲಿರುವ ಎಲ್ಲಾ ಕಾಂತಶಕ್ತಿಯೂ, ವಿದ್ಯುಚ್ಛಕ್ತಿಯೂ ಸಮಸ್ತ ಶಕ್ತಿಗಳೂ, ನಿಮ್ಮಿಂದಲೇ ಪ್ರವಹಿಸುತ್ತವೆ. ಪ್ರಪಂಚದ ಎಲ್ಲಾ ಸಿದ್ಧಿಗಳೂ ಮಹಿಮೆಗಳೂ ಪವಾಡಗಳೂ ನಿಮ್ಮ ದಾಸಾನುದಾಸರು; ಅದಕ್ಕಿಂತಲೂ ಹೆಚ್ಚಲ್ಲ. ಈ ಎಲ್ಲಾ ಆಶೆಗಳನ್ನೂ ಬಿಟ್ಟುಕೂಡಲೇ ನೀವು ಮುಕ್ತರೇ; ಆಹಾ ! ಈ ಸ್ಥಿತಿಯು ನಿಮಗೆ ಎಂಥಾ ಅಪಾರವಾದ ಆನಂದವನ್ನು ತರಲಾರದು ? ಯಾವ ಹೊಣೆಗಾರಿಕೆಯೂ ಯಾವ ಭಯವೂ ಇರಕೂಡದು. ಏಕೆ ಹೆದರಬೇಕು ? ನಿಮಗೆ ಆಸಕ್ತಿಯಿರುವ ಯಾವದೋ ವಸ್ತು ನಿಮ್ಮ ಕೈ ತಪ್ಪುವದೆಂದು ಭಯವೆ ? ಒಳ್ಳೆಯ ಹೆಸರಿನಲ್ಲಿ ನಿಮ್ಮ ಆಸಕ್ತಿ ಇದೆ. ಎಲ್ಲರಿಂದಲೂ ಮೆಚ್ಚುಗೆಯನ್ನು ಪಡೆಯಬೇಕೆಂಬ ಅಭಿಮಾನವಿದೆ, ಅಭಿಲಾಷೆಯಿದೆ ನಿಮಗೆ. ಆದ್ದರಿಂದ ಅದು ಯಾರಿಂದ ತಪ್ಪಿ ಹೋಗುವದೋ ಎಂಬ ಭಯ ನಿಮಗೆ. ಎಲ್ಲಾ ಭಯವೂ, ಚಿಂತೆಯೂ, ವ್ಯಥೆಯೂ ಕಾತರತೆಯೂ, ತಲೆಶೂಲೆಗಳೂ, ಹೃದಯ ಶೂಲೆಗಳೂ ಆಶೆಗಳ ಫಲ. ರಾಷ್ಟ್ರಾಧ್ಯಕ್ಷರ ಅಥವಾ ರಾಜನ ಕರುಣೆಯನ್ನು ನೀವು ಬಯಸುವದರಿಂದ ಅವರೆದುರು ನೀವು ಹಲ್ಲು ಕಿರಿದು ಅಂಗಲಾಚಬೇಕು. ನೀವು ಆಶೆಗಳನ್ನೆಲ್ಲಾ ಬಿಟ್ಟಾಗ ನೀವೇ ರಾಜಾಧಿರಾಜರೂ ದೇವದೇವೋತ್ತಮರೂ ದೇವತಾ ಸಾರ್ವಭೌಮರೂ ಆಗುತ್ತೀರಿ. ಆದ್ದರಿಂದ ಸತ್ಯದ ಪಥವು ಸಾಧನ–ಸಾಧ್ಯವಲ್ಲ, ಕರ್ಮದ ಫಲವಲ್ಲ, ಪ್ರಯತ್ನದಿಂದ ಸಂಪಾದಿಸಬಹುದಾದುದಲ್ಲ—ಎಂದು ರಾಮನು ಹೇಳುತ್ತಾನೆ. ಏಕೆಂದರೆ ಸತ್ಯವು ನಿಮ್ಮಿಂದ ದೂರವಿಲ್ಲ ; ಅದು ನಿಮ್ಮಿಂದ ಬೇರೆಯಲ್ಲ; ಆದ್ದರಿಂದ ಅದಕ್ಕೆ ಪಥವಿಲ್ಲ. ಸತ್ಯವು ನಿಮ್ಮ ಸ್ವರೂಪವೇ ಆಗಿದೆ. ಆದರೆ ಅದು ಅನುಭವಕ್ಕೆ ಬಾರದಂತೆ ಹೃದಯದಲ್ಲಿ ಮುಸುಕಿಕೊಂಡಿರುವ ಆಶಾಪಾಶಗಳನ್ನೂ ವಾಸನಾಜಾಲಗಳನ್ನೂ ಕತ್ತರಿಸಿ, ನೀವಾಗಿಯೇ ಹಾಕಿಕೊಂಡಿರುವ ಕಟ್ಟುಗಳನ್ನು ಬಿಚ್ಚಿಕೊಳ್ಳುವುದಕ್ಕಾಗಿ ಪ್ರಯತ್ನವೂ ಸಾಧನವೂ ಶ್ರಮವೂ ಬೇಕು.

---

# THE SPIRITUAL LAW OF CHARACTER

# ಗುಣಶೀಲಗಳ ಆಧ್ಯಾತ್ಮಿಕ ನಿಯಮ

## ಸ್ಯಾನ್‌ಫ್ರಾನ್‌ಸಿಸ್ಕೋದಲ್ಲಿ 'ಹರ್ಮೆಟಿಕ್ ಬ್ರದರ್‌ಹುಡ್ ಹಾಲ್'ನಲ್ಲಿ ತಾ॥ 17 - 12 - 1902 ರಲ್ಲಿ ಮಾಡಿದ ಉಪನ್ಯಾಸ

ಸಭ್ಯ ಸ್ತ್ರೀ ಪುರುಷರೂಪದಲ್ಲಿರುವ ನನ್ನ ಆತ್ಮವೇ !

ತನ್ನನ್ನು ತಾನು ಒಮ್ಮೆ ತಿಳಿದು ತನ್ನಲ್ಲಿಯೇ ನೆಲೆನಿಂತಿರುವ ಮನುಷ್ಯನು ಮತ್ತೆ ಬಯಸುವದಕ್ಕೆ ಈ ಪ್ರಪಂಚದಲ್ಲಿ ಉಳಿದಿರುವದೇನು? ಸಾಮ್ರಾಜ್ಯದ ಸಮಸ್ತ ಸಂಪತ್ತುಗಳಲ್ಲಿಯಾಗಲೀ, ಸಮಸ್ತ ವಿಶ್ವದಲ್ಲಿ ಆಗಲೀ ಅವನ ಗಮನವನ್ನು ಸೆಳೆಯ ಬಲ್ಲದು ಯಾವದೂ ಇಲ್ಲ. ಈ ಪ್ರಪಂಚದ ಸಕಲ ಸೊಗಸುಗಳಲ್ಲಿಯೂ, ಸೌಂದರ್ಯ ಗಳಲ್ಲಿಯೂ ಅವನ ನೋಟವನ್ನು ಯಾವದೂ ಸೆಳೆಯಲಾರದು ; ಸಮಸ್ತ ಜ್ಞಾನ ಭಂಡಾರಗಳಲ್ಲಿಯೂ ಅವನ ಮನಸ್ಸನ್ನು ಯಾವದೂ ಆಕರ್ಷಿಸಲಾರದು. ಆಹಾ ! ಎಂಥಾ ಸುಖ ! ಎಂಥಾ ಪರಮಾನಂದ ! ಎಂಥಾ ಪೂರ್ಣಾನಂದ ! ಎಷ್ಟು ಅವರ್ಣನೀಯ ! ಅದು ಎಲ್ಲಾ ಭಾಷೆಯನ್ನೂ, ವಿವರಣೆಯನ್ನೂ ಮೀರಿದೆ. ಆ ಅನಂತ ಸಂತೋಷವೇ, ಆ ಪರಮಾನಂದವೇ, ಆ ಅನಂತ ಸುಖವೇ ನೀವಾಗಿದ್ದೀರಿ. ಅದೇ ನಿಮ್ಮ ನಿಜಾತ್ಮ, ಆತ್ಮ !

ನೀವು ಅದನ್ನು ತಿಳಿದರೆ ಎಲ್ಲಾ ಕೊರತೆಗಳನ್ನೂ, ಬಯಕೆಗಳನ್ನೂ ಮೀರಿ ನಿಲ್ಲು ತ್ತೀರಿ. ಇದನ್ನು ನೀವು ಪಡೆದರೆ ಇಡೀ ವಿಶ್ವವೇ ನಿಮ್ಮದಾಗಿರುತ್ತದೆ. ಪ್ರಾಪಂಚಿಕ ವ್ಯಾಮೋಹಗಳಿಗಾಗಿ, ನೆರಳುಗಳಿಗಾಗಿ, ತೋರಿ ಹಾರುವ ಕೊಳ್ಳಿ ದೆವ್ವಗಳಿಗಾಗಿ ಈ ಅನಂತ ಸುಖವನ್ನು, ಈ ಪರಮಾನಂದವನ್ನು ಕೈಬಿಡುವದು ಎಷ್ಟು ದೊಡ್ಡ ತಪ್ಪು ! ಎಂಥಾ ಅಪರಾಧ ! ಈ ಸಂಪೂರ್ಣ ಸುಖವೇ ನಿಮ್ಮದಾಗಿದೆ. ಅದೇ ನೀವಾಗಿದ್ದೀರಿ. ಅದನ್ನೇಕೆ ಹುಡುಕಬಾರದು ? ವಿಚಾರಿಸಬಾರದು ? ಪಡೆಯಲು ಪ್ರಯತ್ನಿಸಬಾರದು ? ಅದನ್ನು ಸಾಧಿಸುವ ನಿಮ್ಮ ಜನ್ಮಸಿದ್ಧವಾದ ಹಕ್ಕನ್ನು ಸ್ವಾಧೀನಪಡಿಸಿಕೊಳ್ಳಿ. ಜನರು ತಮ್ಮ ಜನ್ಮಸಿದ್ಧ ಹಕ್ಕನ್ನು ಕ್ಷುದ್ರ ವಸ್ತುವಿಗಾಗಿ ವಿಕ್ರಯಿಸುತ್ತಾರೆ. ದ್ರೋಹಿಯಾದ ಜೂಡಾಸನು ಮಹಾತ್ಮನಾದ ಯೇಸುಕ್ರಿಸ್ತನನ್ನು ಮೂವತ್ತು ಬೆಳ್ಳಿಯ ನಾಣ್ಯಗಳನ್ನು ತೆಗೆದುಕೊಂಡು ಅವನ ಶತ್ರುಗಳಿಗೆ ಮಾರಿ, ಹಿಡಿದುಕೊಟ್ಟನು. ದೇವಾಧಿ ದೇವನಾದ ನಿಮ್ಮ ನಿಜಾತ್ಮನೆಂಬ ಕ್ರಿಸ್ತನನ್ನು ಮರುಳುಗೊಳಿಸುವ ಪ್ರಾಪಂಚಿಕ ಸುಖಗಳಿ ಗಾಗಿ ಮಾರಿಬಿಡುವ ಆತ್ಮದ್ರೋಹಿ ಜೂಡಾಸ್ ಆಗಬೇಡಿ. ಹೆಚ್ಚು ಜಾಣರಾಗಿರಿ, ಹೆಚ್ಚು ಜಾಣರಾಗಿರಿ.

ನಿಜವಾದ ಸುಖವು ನಿಮ್ಮೊಳಗೇ ಇದೆ. ದಿವ್ಯಾಮೃತದ ಮಹಾ ಸಾಗರವು ನಿಮ್ಮೊಳಗೇ ಇದೆ. ನಿಮ್ಮೊಳಗೇ ಅದನ್ನು ವಿಚಾರಿಸಿ; ಒಳಗೇ ಅದು ಆತ್ಮನಾಗಿದೆಯೆಂದು ಭಾವಿಸಿರಿ ; ಅದು ದೇಹವಲ್ಲ, ಮನಸ್ಸಲ್ಲ, ಬುದ್ಧಿಯಲ್ಲ. ಅದು ಬಯಕೆಗಳಲ್ಲ, ಬಯಸುವಿಕೆಯಲ್ಲ. ಬಯಕೆಯ ವಿಷಯಗಳಲ್ಲ. ಈ ಎಲ್ಲವುಗಳ ಮೇಲೆ ನೀವಿದ್ದೀರಿ. ಇವುಗಳೆಲ್ಲಾ ಸುಮ್ಮನೆ ತೋರಿಕೆಗಳು. ನೀವು ನಗು ನಗುತ್ತಿರುವ ಹೂವುಗಳಾಗಿದ್ದೀರಿ ; ಥಳಥಳಿಸುವ ನಕ್ಷತ್ರಗಳಾಗಿದ್ದೀರಿ. ನೀವು ಯಾವದನ್ನಾದರೂ ಬಯಸುವಂತೆ ಮಾಡುವದಕ್ಕೆ ಈ ಪ್ರಪಂಚದಲ್ಲಿ ಏನಿದೆ ?

ಸುಮ್ಮನೆ ಓಂಕಾರವನ್ನು ಗಾನಮಾಡಿ, ಓಂ ಎಂದು ಉಚ್ಚರಿಸಿರಿ, ಜಪಿಸಿರಿ, ಜಪಿಸುವಾಗ ನಿಮ್ಮ ಪೂರ್ಣ ಹೃದಯವನ್ನೂ ಎಲ್ಲಾ ಶಕ್ತಿಗಳನ್ನೂ ನಿಮ್ಮ ಇಡೀ ಆತ್ಮವನ್ನೂ ಅದರಲ್ಲಿ ತುಂಬಿರಿ. ಅದರ ಅನುಭವ ಪಡೆಯುವದಕ್ಕೆ ನಿಮ್ಮ ಸಕಲ ಶಕ್ತಿಯನ್ನೂ ಉಪಯೋಗಿಸಿರಿ. ಓಂ ಎಂದರೆ "ಅವನೇ ನಾನು" "ನಾನೇ ಅವನು" "ನಾನು ಮತ್ತು ಅವನು ಒಂದೇ" "ನಾನೇ ದೇವರು". (ಓಂ ಓಂ) ಎಂದು. ಓಂ ಉಚ್ಚರಿಸುವಾಗ ಸಾಧ್ಯವಾದರೆ ನಿಮ್ಮ ಎಲ್ಲಾ ದೌರ್ಬಲ್ಯಗಳನ್ನೂ ಎಲ್ಲಾ ಪ್ರಲೋಭನೆಗಳನ್ನೂ ನಿಮ್ಮ ಮನಸ್ಸಿನ ಮುಂದೆ ಐಂದ್ರಜಾಲಿಕನಂತೆ ಸೃಷ್ಟಿಸಿಕೊಳ್ಳಿ. ಚಿತ್ರಿಸಿಕೊಳ್ಳಿ. ನಿಮ್ಮ ಕಾಲುಗಳ ತಳದಲ್ಲಿ ಅವನ್ನು ತುಳಿದಾಡಿರಿ, ಆ ದೌರ್ಬಲ್ಯ—ವ್ಯಾಮೋಹಗಳನ್ನು ಪುಡಿ ಪುಡಿ ಮಾಡಿರಿ, ಅವುಗಳ ಮೇಲೇರಿ ಜಯಶಾಲಿಗಳಾಗಿರಿ.

ಭಾರತ ದೇಶದ ಪುರಾಣಗಳಲ್ಲಿ ಒಂದು ಸೊಗಸಾದ ಕಥೆಯಿದೆ. ಶ್ರೀಕೃಷ್ಣನು ಯಮುನಾ ನದಿಯಲ್ಲಿ ಹಾರಿದ ವಿಷಯವನ್ನು ಅದು ಹೇಳುತ್ತದೆ. ಅವನು ಒಂದು ದಿನ ಯಮುನಾ ನದಿಯ ಮಹಾ ಪ್ರವಾಹದಲ್ಲಿ ಹಾರಿಕೊಳ್ಳುತ್ತಾನೆ. ಅವನ ತಂದೆ ತಾಯಿ, ಬಂಧುಗಳೂ ಮಿತ್ರರೂ ಸಹ ಆ ಯಮುನಾ ನದಿಯ ತೀರದಲ್ಲಿ ಅಲ್ಲಿಯೇ ನಿಂತಿರುತ್ತಾರೆ. ಅವರೆಲ್ಲರೂ ನೋಡುತ್ತಿರುವಂತೆಯೇ ನದಿಯ ಒಂದು ದೊಡ್ಡ ಮಡುವಿನಲ್ಲಿ ಹಾರಿಬಿಡುತ್ತಾನೆ. ಅವರು ಭಯವಿಸ್ಮಯಗಳಿಂದ ಮೂಕರೂ ಸ್ತಬ್ಧರೂ ಆಗುತ್ತಾರೆ ; ಕೃಷ್ಣನೂ ನದಿಯಲ್ಲಿ ಮುಳುಗಿ ಹೋಗಿಯೇ ಬಿಟ್ಟನೆಂದೂ ಮತ್ತೆಂದೂ ಏಳುವದಿಲ್ಲವೆಂದೂ ನಿರಾಶರಾಗುತ್ತಾರೆ. ಅವನು ನದಿಯ ತಳದಲ್ಲಿ ಮುಳುಗಿದನು ; ಅಲ್ಲಿ ಸಹಸ್ರ ಶಿರಗಳಿದ್ದ ಮಹಾ ಸರ್ಪ ಒಂದಿತ್ತು. ಕೃಷ್ಣನು ತನ್ನ ಕೊಳಲನ್ನು ಬಾರಿಸಿ ಓಂಕಾರವನ್ನು ಗಾನ ಮಾಡುವದಕ್ಕೆ ತೊಡಗಿದನು. ಅವನು ಆ ಕಾಳಿಂಗ ಸರ್ಪದ ತಲೆಗಳ ಮೇಲೆ ಕುಣಿದಾಡುತ್ತಾ ಒಂದೊಂದೇ ತಲೆಗಳನ್ನು ತುಳಿ ತುಳಿದು ಜಜ್ಜಿ ಹಾಕುತ್ತಿದ್ದನು. ಒಂದೊಂದು ತಲೆಯನ್ನೇ ಅವನು ಧ್ವಂಸ ಮಾಡುವದರೊಳಗೆ ಮತ್ತೆ ಹೊಸ ಹೊಸ ತಲೆಗಳು ಹುಟ್ಟಿಕೊಳ್ಳುತ್ತಿದ್ದವು. ಕೃಷ್ಣನು ತನ್ನ ಮುರಳಿಯನ್ನು ಬಾರಿಸುತ್ತಾ ಓಂಕಾರ ನಾದದೊಡನೆ ಆ ಸರ್ಪದ ಹೆಡೆಗಳ ಮೇಲೆ ಕುಣಿಯುತ್ತಾ ತುಳಿದಾಡುತ್ತಿದ್ದನು. ಅರ್ಧ ಗಂಟೆಯಲ್ಲಿ ಆ ಸರ್ಪವನ್ನು ಕೊಂದನು. ಓಂಕಾರ ಮಂತ್ರೋಚ್ಚಾರಣೆಯಿಂದಲೂ

ಅವನ ತುಳಿದಾಟದಿಂದಲೂ ಆ ಮಹಾ ಸರ್ಪವು ಸಂಹಾರವಾಗಿದ್ದಿತು. ಸರ್ಪದ ರಕ್ತವು ನದಿಯ ನೀರನ್ನೆಲ್ಲಾ ರಕ್ತಮಯವಾಗಿ ಮಾಡಿದ್ದಿತು. ಕೃಷ್ಣನ ಮಧುರ ಸಾನ್ನಿಧ್ಯದ ಅಮೃತ ರಸವನ್ನು ಪಾನ ಮಾಡುವದಕ್ಕಾಗಿಯೂ ಅವನಿಗೆ ಪೂಜೆ ಸಲ್ಲಿಸುವ ದಕ್ಕಾಗಿಯೂ ಆ ಸರ್ಪನ ಪತ್ನಿಯರೆಲ್ಲಾ ಬಂದರು. ಕೃಷ್ಣನು ನದಿಯಿಂದ ಹೊರಗೆ ಬಂದನು. ಅತ್ಯಂತ ಪ್ರಿಯನಾದ ಕೃಷ್ಣನು ಬದುಕಿ ಬಂದುದನ್ನು ಕಂಡ ಬಂಧು ಮಿತ್ರರ ಆನಂದಕ್ಕೆ ಪಾರವೇ ಇರಲಿಲ್ಲ. ಈ ಕಥೆಗೆ ದ್ವಂದ್ವಾರ್ಥಗಳಿವೆ. ತಮ್ಮೊಳಗಿರುವ ಸತ್ಯ ವನ್ನು ಕಾಣಲು ಬಯಸುವವರಿಗೆ ಇದೊಂದು ನೀತಿ ಪಾಠವೂ ತತ್ತ್ವೋಪದೇಶವೂ ಆಗಿದೆ.

ಆ ನದಿ ಅಥವಾ ಸರೋವರವು ಮಾನಸ ಸರೋವರವೇ ಆಗಿದೆ. ಭಗವಾನ್ ಕೃಷ್ಣನಾಗಬೇಕೆಂದು ಯಾರು ಬಯಸುತ್ತಾರೋ ಕಳೆದುಕೊಂಡಿರುವ ಸ್ವರ್ಗ ಸಾಮ್ರಾಜ್ಯವನ್ನು, ಆತ್ಮ ಸಾಮ್ರಾಜ್ಯವನ್ನು, ಆನಂದ ಸಾಮ್ರಾಜ್ಯವನ್ನು, ಪುನಃ ಸಂಪಾದಿಸಬೇಕೆಂದು ಯಾರು ಹಂಬಲಿಸುತ್ತಾರೋ ಅವರು ತಮ್ಮ ಮನಸ್ಸಿನ ಸರೋವರದಲ್ಲಿಯೇ ತಮ್ಮ ಒಳಗೇ ಆಳವಾಗಿ ಮುಳುಗಬೇಕು ; ಅವರು ತಮ್ಮ ಸ್ವಭಾವದೊಳಗೇ ಆಳವಾಗಿ ಧುಮುಕಿ, ತಳವನ್ನು ಸೇರಿ ಕಾಮ–ಮೋಹಗಳೆಂಬ ವಿಷ ಸರ್ಪವನ್ನು ಮಂತ್ರ ಜಪದಿಂದ ಮರುಳು ಮಾಡಿ ಅದರ ಸಹಸ್ರ ಸಹಸ್ರ ಹೆಡೆಗಳನ್ನು ತುಳಿದು ತುಳಿದು ನಾಶಮಾಡಬೇಕು. ಈ ರೀತಿಯಿಂದ ಅವರು ತಮ್ಮ ಮನಸ್ಸೆಂಬ ಸರೋವರವನ್ನು ನಿರ್ಮಲವಾಗಿ ಮಾಡಿಕೊಳ್ಳಬೇಕು. ಸಾಧನ ಕ್ರಮವು ಕೃಷ್ಣನು ಅನುಸರಿಸಿದ ಕ್ರಮವೇ ಆಗಿದೆ. ಅವರೂ ಕೃಷ್ಣನಂತೆಯೇ ವೇಣುವಾದನದ ಮೂಲಕ ದಿವ್ಯವಾದ ಓಂಕಾರ ಗಾನ ಮಾಡಬೇಕು.

ಈ ಕೊಳಲೆಂದರೆ ಯಾವದು ? ಅದು ಸುಮ್ಮನೆ ಸಾಧಕನಿಗೇ ಸಂಕೇತ. ಕೊಳ ಲನ್ನು ನೋಡಿರಿ. ಭಾರತ ದೇಶದ ಕವಿಗಳು ಅದಕ್ಕೆ ಬಹಳ ಮಹತ್ವವನ್ನು ಕೊಡುತ್ತಾರೆ. ಅಷ್ಟೊಂದು ಗೌರವದ ಸ್ಥಾನಕ್ಕೆ ಏರುವದಕ್ಕೆ ಆ ಕೊಳಲು ಎಷ್ಟು ಪುಣ್ಯ ಮಾಡಿರ ಬಹುದು ? ವಿಶಾಲ ಭಾರತದಲ್ಲಿ ಮಹಾ ಮಹಾ ಚಕ್ರವರ್ತಿ ಸಾರ್ವಭೌಮರುಗಳಿಗೂ ಸಹಸ್ರಾರು ಸುಂದರ ಸ್ತ್ರೀಯರಿಗೂ ಪ್ರೀತಿ ಪಾತ್ರನೂ ಪೂಜ್ಯನೂ ಆಗಿದ್ದರೂ ರಾಜಾಧಿ ರಾಜರನ್ನು ಕರುಣೆಯಿಂದ ಕಣ್ಣೆತ್ತಿಯೂ ನೋಡದಿದ್ದ ಕೃಷ್ಣನು ಆ ಮುರಳಿಯನ್ನು ಮುತ್ತಿಟ್ಟನೇಕೆ ? ಆ ಮುರಳಿಯ ಉತ್ತರವೇನೆಂದರೆ "ನನ್ನಲ್ಲಿ ಒಂದು ಸದ್ಗುಣವಿದೆ ; ನನ್ನಲ್ಲಿರುವ ವಸ್ತುವನ್ನೆಲ್ಲಾ ಕಳೆದುಕೊಂಡು ಖಾಲಿಯಾಗಿದ್ದೇನೆ ; ಪೂರಾ ಪೊಳ್ಳಾಗಿ ಗಿದ್ದೇನೆ; ನಾನು ನಿರ್ವಸ್ತು, ನಿರ್ವಿಷಯವಾಗಿದ್ದೇನೆ."

ಕೊಳಲು ಒಳಗೆಲ್ಲಾ ಪೊಳ್ಳಾಗಿದೆ; "ನನ್ನಲ್ಲಿರುವ ಅನಾತ್ಮವನ್ನೆಲ್ಲ ಖಾಲಿ ಮಾಡಿ ದ್ದೇನೆ" ಎನ್ನುತ್ತದೆ. ಹಾಗೆಯೇ ಕೊಳಲನ್ನು ತುಟಿಗೆ ಹಚ್ಚುವದೆಂದರೆ ಹೃದಯವನ್ನು

ಪರಿಶುದ್ಧಿಗೊಳಿಸುವದು, ಮನಸ್ಸನ್ನು ದೇವರ ಕಡೆಗೆ ತಿರುಗಿಸುವದು. ಭಗವಂತನ ಚರಣಾರವಿಂದದಲ್ಲಿ ಶರಣಾಗತರಾಗಿ ಸರ್ವವನ್ನೂ ಸಮರ್ಪಣ ಮಾಡುವದು. ಸದ್ಯಃ ದೇಹವು ನಾನೆನ್ನುವ ಅಭಿಮಾನವನ್ನೂ ಸ್ವಾರ್ಥವನ್ನೂ ಸ್ವಾರ್ಥ ಸಂಬಂಧಗಳನ್ನೂ ನನ್ನದು–ನಿನ್ನದು ಎಂಬ ಭಾವನೆಗಳನ್ನೂ ನಿಮ್ಮ ಹೃದಯಾಂತರಾಳದಿಂದ ಪರಿತ್ಯಾಗ ಮಾಡಿ ; ಅವುಗಳನ್ನು ಮೆಟ್ಟಿ ಮೇಲೇರಿರಿ. ಪರಮ ಪ್ರೇಮಾಸ್ಪದಳಾದ ತರುಣಿಯನ್ನು ಮೆಚ್ಚಿಸುವದಕ್ಕೂ ಒಲಿಸಿಕೊಳ್ಳುವದಕ್ಕೂ ಪುರುಷನು ಮಾಡಬಹುದಾದ ಪ್ರೇಮದ ಪ್ರಯತ್ನಕ್ಕಿಂತಲೂ ಹೆಚ್ಚಿನ ರೀತಿಯಲ್ಲಿ ದೇವರನ್ನು ಪ್ರೀತಿಸುವ ಮನೋಭಾವವೇ ಕೃಷ್ಣನು ಕೊಳಲನ್ನು ನುಡಿಸುವ ಭಾವ. ಪ್ರಾಪಂಚಿಕ ಜನರು ಬಹುಕಾಲದಿಂದ ಬಯಸುವ ಒಂದು ವಸ್ತುವಿಗಾಗಿ ಹಸಿದು ಬಾಯಾರಿದಂತೆ ಸತ್ಯದರ್ಶನಕ್ಕಾಗಿಯೂ ದೈವೀ ಸ್ಫೂರ್ತಿಗಾಗಿಯೂ ಪರಮ ಸತ್ಯವಾದ ಆತ್ಮನ ಆನಂದಾಮೃತವನ್ನು ಸವಿಯುವದಕ್ಕಾಗಿಯೂ ತೀವ್ರವಾಗಿ ಹಸಿದು ಬಾಯಾರಿ, ಕಾತರಿಸಿ, ಹಲುಬಿ, ಹಂಬಲಿಸುವ ಮನೋಭಾವವೇ ಕೃಷ್ಣನ ವೇಣುವಾದನದ ವೇದನ, ನಿವೇದನ. ಇಂಥಾ ಮನೋಭಾವದಲ್ಲಿ, ಇಂಥಾ ಹೃದಯದ ಶಾಂತಿಯಲ್ಲಿ, ಇಂಥಾ ಪರಿಶುದ್ಧ ಮನಸ್ಸಿನಿಂದ ಓಂ ಎಂಬ ಮಂತ್ರವನ್ನು ಉಚ್ಚರಿಸುವುದಕ್ಕೆ ತೊಡಗಿರಿ, ಪವಿತ್ರವಾದ ಓಂ ಮಂತ್ರವನ್ನು ಗಾನ ಮಾಡಿರಿ. ಇದೇ ನಿಜವಾದ ಮುರಳೀ ಗಾನ. ನಿಮ್ಮ ಇಡೀ ಜೀವನವನ್ನೇ ಕೊಳಲಲನ್ನಾಗಿ ಮಾಡಿರಿ; ನಿಮ್ಮ ಇಡೀ ದೇಹವನ್ನೇ ಕೊಳಲನ್ನಾಗಿ ಮಾಡಿರಿ. ಅದರಲ್ಲಿರುವ ಸ್ವಾರ್ಥವನ್ನೆಲ್ಲಾ ಖಾಲೀ ಮಾಡಿ ದೈವೀ ಶ್ವಾಸದಿಂದ ಅದನ್ನು ತುಂಬಿರಿ.

ಓಂಕಾರವನ್ನು ಉಚ್ಚರಿಸುತ್ತಾ ನಿಮ್ಮ ಮಾನಸ ಸರೋವರದಲ್ಲಿ ಅನೇಕ ಜಿಹ್ವೆಗಳುಳ್ಳ ಆ ವಿಷ ಸರ್ಪಕ್ಕಾಗಿ ಶೋಧಿಸಿರಿ. ಅನಂತವಾದ ಆಶೆಗಳೂ ಪ್ರಾಪಂಚಿಕ ಒಲವುಗಳೂ ಸ್ವಾರ್ಥ ಪ್ರವೃತ್ತಿಗಳೂ ಇವೇ ಆ ವಿಷಸರ್ಪದ ಸಹಸ್ರ–ಸಹಸ್ರ ಹೆಡೆಗಳು, ನಾಲಿಗೆಗಳು ವಿಷದಂತಗಳು. ಅವುಗಳಲ್ಲಿ ಒಂದೊಂದನ್ನೇ ತುಳಿಯಿರಿ, ಸದೆ ಬಡಿಯಿರಿ, ಜಜ್ಜಿ ಜಜ್ಜಿ ಹಾಕಿರಿ. ಒಂದೊಂದನ್ನೇ ಬಿಡಿಸಿ ಬಿಡಿಸಿ ಮೆಟ್ಟಿ ಮೇಲೇರಿ, ಓಂಕಾರವನ್ನು ಉಚ್ಚಾರ ಮಾಡುತ್ತಾ ಗಾನಮಾಡುತ್ತಾ ಪ್ರಾಪಂಚಿಕ ವಾಸನೆಗಳನ್ನು ಧ್ವಂಸ ಮಾಡಿರಿ.

ಒಳ್ಳೆಯ ಗುಣ–ಸ್ವಭಾವ, ನಡೆ–ನುಡಿಗಳನ್ನು ಬೆಳೆಸಿಕೊಳ್ಳಿರಿ. ನಿಮ್ಮ ಮನಸ್ಸಿನ ನದಿಯಿಂದ ಅಥವಾ ಸರೋವರದಿಂದ ಹೊರ ಬಂದಾಗ ಅದರ ನೀರು (ವೃತ್ತಿಗಳು) ವಿಷವಾಗದಿರುವಂತೆ ಅಚಲವಾದ ನಿರ್ಧಾರಗಳನ್ನೂ, ದೃಢ ಸಂಕಲ್ಪಗಳನ್ನೂ ಗಂಭೀರವಾದ ಪ್ರತಿಜ್ಞೆಗಳನ್ನೂ ಕೈಗೊಳ್ಳಿರಿ. ಆ ನೀರನ್ನು ಸೇವಿಸಿದವರಿಗೂ ಅದು ವಿಷವಾಗಬಾರದು. ಆ ಸರೋವರವನ್ನು ಸಂಪೂರ್ಣ ಪರಿಶುದ್ಧಿಗೊಳಿಸಿ ಹೊರ ಬನ್ನಿರಿ, ಜನರ ಭಾವನೆಯೂ ಅಭಿಪ್ರಾಯವೂ ನಿಮ್ಮಿಂದ ಬೇರೆಯಾಗಬಹುದು, ನಿಮಗೆ ಅವರು ಬಗೆ ಬಗೆಯಿಂದ ಕಷ್ಟಕೊಡಬಹುದು. ನಿಮ್ಮನ್ನು ದೂಷಿಸಬಹುದು, ಆದರೆ ಜನರ ಆಗ್ರಹಗಳೂ, ಅನುಗ್ರಹಗಳೂ, ಭಯ ಪ್ರದರ್ಶನಗಳೂ ಭರವಸೆಗಳೂ, ಏನೇ ಇರಲಿ, ನಿಮ್ಮ

ಮಾನಸ ಸರೋವರದಿಂದ ಪರಮ ಪರಿಶುದ್ಧವೂ, ನವನವೀನವೂ, ದಿವ್ಯವೂ ಆದ ಭಾವನೆ ಗಳೂ ವಿಚಾರಗಳೂ ಹರಿದು ಬರಬೇಕೇ ಹೊರತು ಬೇರೆ ಬರಬಾರದು. ನಿಮ್ಮ ಒಳಗಿಂದ ಅಮೃತವೇ ಹರಿದು ಬರಬೇಕು. ನೀರು ಕುಡಿಯ ಬಂದವರಿಗೆ ವಿಷ ಕುಡಿಸು ವದು ಪವಿತ್ರವಾದ ಹೊಸ ಚಿಲುಮೆಗೆ ಎಷ್ಟು ಅಸಾಧ್ಯವೋ ಇನ್ನೊಬ್ಬರಿಗೆ ಕೆಡುಕನ್ನು ಆಲೋಚಿಸುವದೂ ನಿಮಗೆ ಅಷ್ಟು ಅಸಾಧ್ಯವಾಗಬೇಕು. ಹೃದಯವನ್ನು ಶುದ್ಧಿಮಾಡಿ ಕೊಳ್ಳಿ; ಓಂಕಾರವನ್ನು ಗಾನಮಾಡಿ. ದುರ್ಬಲವಾದ ಅಂಶಗಳನ್ನೆಲ್ಲಾ ಹುಡುಕಿ ತೆಗೆದು ಅವನ್ನು ನಿರ್ಮೂಲಮಾಡಿ ಸುಂದರವಾದ ಶೀಲವನ್ನು ರೂಪಿಸಿಕೊಂಡು ಜಯಶಾಲಿ ಗಳಾಗಿ. ಕೃಷ್ಣನು ಆ ಮಹಾ ಸರ್ಪವನ್ನು ಕೊಂದ ಮೇಲೆ ನದಿಯೊಳಗಿನ ಅದರ ಪತ್ನಿಯರು ಬಂದು ಕೃಷ್ಣನಿಗೆ ಪೂಜೆ ಸಲ್ಲಿಸಿದಂತೆ ಮೋಹ ಮಹಾ ಸರ್ಪವನ್ನು ನಾಶ ಮಾಡಿದ ಕೂಡಲೇ ನೀವು ಬಯಸಿದ ವಿಷಯಗಳೆಲ್ಲಾ ತಾವಾಗಿಯೇ ಬಂದು ನಿಮಗೆ ಪೂಜೆ ಸಲ್ಲಿಸುತ್ತಿರುವದನ್ನು ಕಾಣುತ್ತೀರಿ.

ನಿಮ್ಮ ಸ್ವಂತ ಉಪಯೋಗಕ್ಕಾಗಿ ಒಂದು ನಕ್ಷೆಯನ್ನು ಬರೆಯಿರಿ. ಅದರ ಮೇಲೆ ನಿಮ್ಮ ಸಾಮಾನ್ಯ ಪಾಪಗಳ ಹಾಗೂ ಲೋಪದೋಷಗಳ ಪಟ್ಟಿಯನ್ನು ಬರೆಯಿರಿ. ಇವುಗಳು ತಲೆಬರಹದ ಅಡ್ಡ ಮಲಗಿದ ಸಾಲಿನಲ್ಲಿ ( horizontal ) ಬೇರೆ ಬೇರೆ ಇರಲಿ. ಉದ್ದ ನಿಂತಿರುವ ಸಾಲಿನಲ್ಲಿ (along the vertical line) ವಾರದ ದಿನಗಳನ್ನು ಬರೆಯಿರಿ. ಶನಿವಾರ, ನಿಮಗೆ ಯಾವದೊಂದು ದುರಾಶೆಯುಂಟಾದರೆ, ದುಃಖವೂ ಉಂಟಾದರೆ, ಶನಿವಾರ ಎಂದು ಬರೆದಿರುವ ಅಡ್ಡ ರೇಖೆಯ ಮೇಲೆ ತಲೆ ಬರಹದಲ್ಲಿ ಬರೆದಿರುವ ದುರಾಶೆ ಎಂಬುದರ ಕೆಳಗೂ ದುಃಖ ಎಂಬುದರ ಕೆಳಗೂ ಒಂದೊಂದು ಸಣ್ಣ ಕತ್ತರಿಯ ಗುರುತನ್ನು ಹಾಕಿ. ಹೀಗೆ ಪ್ರತಿ ನಿತ್ಯವೂ ನಿಮ್ಮ ಪ್ರತಿ ಯೊಂದು ನ್ಯೂನಾತಿರೇಕಗಳನ್ನೂ ಆ ದಿನಚರಿಯ ಪಟ್ಟಿಯಲ್ಲಿ ಗುರುತಿಸಬೇಕು. ಹೀಗೆ ಮಾಡಿದರೆ ನಿಮ್ಮ ದೋಷಗಳನ್ನೆಲ್ಲಾ ನಿಮ್ಮ ಕಣ್ಣೆದುರಿಗೆ ನಿಮ್ಮ ಮನಸ್ಸಿನ ಎದುರಿಗೆ, ಹಿಡಿದು ನಿಲ್ಲಿಸಿದಂತಾಗುತ್ತದೆ.

ನಿಮ್ಮ ದಿನಚರ್ಯೆಯ ಪಟ್ಟಿಯಲ್ಲಿ ಈ ಗುರುತುಗಳನ್ನೆಲ್ಲಾ ಹಾಗೆಯೇ ಉಳಿ ಸಿರಬೇಕೆಂದು ರಾಮನು ನಿಮಗೆ ಸಲಹೆ ಮಾಡುವದಿಲ್ಲ. ಇವತ್ತು ನೀವು ಯಾವದಾದರೂ ದೌರ್ಬಲ್ಯಕ್ಕೆ ವಶರಾದರೆ, ನಿಮ್ಮನ್ನು ನೀವು ವಂಚಿಸದೆ ಪ್ರಾಮಾಣಿಕವಾಗಿ ಈ ದಿನದ ಸಾಲಿನಲ್ಲಿ ಆ ದೋಷದ ಕೆಳಗೆ ಕತ್ತರಿ ಗುರುತನ್ನು ಹಾಕಿರಿ. ನಾಳೆ ಅಥವಾ ಮರುದಿನ ಬೆಳಿಗ್ಗೆ ಅನುಕೂಲವಾದ ಸಮಯದಲ್ಲಿ ನಿಮ್ಮ ಕೋಣೆಯ ಬಾಗಿಲನ್ನು ಮುಚ್ಚಿ, ಒಬ್ಬರೇ ಕುಳಿತು ಕೊಂಡು ನಿಮ್ಮ ದಿನಚರಿಯ ನಕಾಶೆಯನ್ನು ತೆರೆಯಿರಿ. ಯಾವ ಯಾವ (ಕ್ರಾಸ್ ಮಾರ್ಕ್‌ಗಳು) ಕತ್ತರಿ ಗುರುತುಗಳು ಇವೆ ಎಂಬುದನ್ನು ನೋಡಿ, ಯಾವ ಯಾವ ದೋಷಗಳಿಗೆ ಏಕೆ ಅವಕಾಶ ಕೊಟ್ಟಿರಿ—ಎಂಬುದನ್ನು ಆಳವಾಗಿ ವಿಚಾರಮಾಡಿ. ನಿಮಗೆ ನೀವೇ ಉಪನ್ಯಾಸ ಮಾಡುವದಕ್ಕೆ ಪ್ರಾರಂಭಿಸಿ.

ಈ ದೇಶದಲ್ಲಿ ನಮಗೆ ಎರಡನೆಯವರಿಂದ ಅತಿಯಾದ ಉಪನ್ಯಾಸಗಳಾಗುತ್ತಿವೆ. ಬೇಕಾದರೆ, ಈ ಯುಗದ ಮಹಾ ಮಹಾ ಉಪನ್ಯಾಸಕರೆಲ್ಲಾ ಬಂದು ಉಪನ್ಯಾಸ ಗಳನ್ನು ಮಾಡಲಿ ; ಕ್ರಿಸ್ತನೇ ಬಂದು ಉಪನ್ಯಾಸ ಮಾಡಲಿ, ಅಥವಾ ಪ್ರತ್ಯಕ್ಷ ದೇವರೇ ಬಂದು ಉಪದೇಶ ಮಾಡಲಿ, ನಿಮಗೆ ನೀವು ಉಪನ್ಯಾಸ ಮಾಡುವದಕ್ಕೆ ಸಿದ್ಧರಾದ ಹೊರತು ಇತರರ ಉಪನ್ಯಾಸಗಳಿಂದ ಯಾವ ಪ್ರಯೋಜನವೂ ಇಲ್ಲ. "ಯಾವನು ತನಗೆ ತಾನೇ ಉಪನ್ಯಾಸ ಮಾಡಬಲ್ಲನೋ ಅವನು ತನ್ನನ್ನು ತಾನು ಉದ್ಧಾರ ಮಾಡಿಕೊಳ್ಳ ಬಲ್ಲ ಅಥವಾ ಪ್ರಗತಿಯನ್ನು ಸಾಧಿಸಬಲ್ಲ. ನೀವು ಒಂದು ದಿನ ಶೋಕವೃತ್ತಿಗೆ ಅವಕಾಶ ಕೊಟ್ಟಿದ್ದಿರಿ ಎಂಬುದು ನಿಮಗೆ ಗೊತ್ತಿದೆ. ಆ ಭಾವದ ಲಕ್ಷಣವೇನು? ಸ್ವಭಾವವೇನು? ಕಾರಣವೇನು ? ಅದಕ್ಕೆ ವಶವಾದುದೇಕೆ ? ಮೊದಲಾಗಿ ವಿಚಾರಮಾಡಿ. ಒಂದು ರೋಗದ ಲಕ್ಷಣಾದಿಗಳನ್ನು ಪರೀಕ್ಷೆ ಮಾಡಿದಂತೆ ಶೋಕವೆಂಬ ಈ ಮನೋರೋಗ ವನ್ನು ಪರೀಕ್ಷೆ ಮಾಡಿ. ಅ: ರ ಕಾರಣವನ್ನೂ ಪರಿಣಾಮವನ್ನೂ ಪರಿಹಾರವನ್ನೂ ಆಲೋಚನೆ ಮಾಡಿ. ನೀವು ಶೋಕಗ್ರಸ್ತರಾದ ಸಮಯದಲ್ಲಿ ಭಗವದ್ಗೀತೆಯನ್ನೋ ಬೈಬಲ್ ಗ್ರಂಥವನ್ನೋ ತತ್ತ್ವಜ್ಞಾನಿ ಎಮರ್‌ಸನ್ ಮಹಾಶಯರ ಕೃತಿಗಳನ್ನೊ ಅಥವಾ ನಿಮ್ಮನ್ನು ಶೋಕ ಭೂಮಿಕೆಯಿಂದ ಮೇಲೆತ್ತಬಲ್ಲ ಬೇರಾವುದೋ ಒಂದು ಬೋಧಕ ಪುಸ್ತಕವನ್ನೋ ನೀವು ಓದಬಹುದು. ಅವುಗಳ ಸಹಾಯದಿಂದಲೂ ನಿಮ್ಮ ಸ್ವಂತ ಉಪ ನ್ಯಾಸಗಳ ಸಹಾಯದಿಂದಲೂ ಪರ್ಯಾಲೋಚನೆಯಿಂದಲೂ ಧ್ಯಾನದಿಂದಲೂ ನಿಮ್ಮೊ ಳಗೆ ಶೋಕವ್ಯಕ್ತಿಯು ಮತ್ತೆಂದೂ ತಲೆಯೆತ್ತದಂತೆ ಹೊರಗೋಡಿಸಿರಿ. ಆ ವ್ಯಕ್ತಿಯನ್ನು ನೀವು ಜಯಿಸಿದಿರೆಂದೂ ಕಾಲ ಕೆಳಗೆ ತುಳಿದಾಡಿದಿರೆಂದೂ ಇನ್ನೊಮ್ಮೆ ಅದಕ್ಕೆ ಬಲಿ ಯಾಗುವದಿಲ್ಲವೆಂದೂ ನಿಮಗೆ ಆ ಸಮಯದಲ್ಲಿ ದೃಢನಂಬಿಕೆಯೂ ನಿಶ್ಚಯವೂ ಆದರೆ, ಮುಂದೆ ಏನಾಗುವುದೋ ಎಂಬ ಭಯವೂ ಸಂಶಯವೂ ಇಲ್ಲದೆ, ಶೋಕದ ಕೆಳಗಿರುವ ಕತ್ತರಿ ಗುರುತುಗಳನ್ನು ಅಳಿಸಿರಿ. ಆಗ ನಿಮಗೆ ಬಿಡುಗಡೆಯಾಗುತ್ತದೆ. ಹಿಂದೆ ಕಳೆದು ಹೋದುದಕ್ಕೆ ನಿಮ್ಮನ್ನು ನೀವೇಕೆ ತಿರಸ್ಕರಿಸಬೇಕು ? ಸತ್ತು ಹೋಗಿರುವ ಹಿಂದಿನ ಕಾಲವು ತನ್ನ ಹೆಣವನ್ನು ಹೂತುಕೊಳ್ಳಲಿ.

ನಿಮ್ಮ ದೋಷಗಳನ್ನು ನೀವು ಒಂದೊಂದಾಗಿಯೇ ತೆಗೆದುಕೊಳ್ಳಬೇಕು. ಅವುಗಳ ಸ್ವಭಾವ ಲಕ್ಷಣಗಳನ್ನೂ ಕಾರಣಗಳನ್ನೂ ಪರಿಣಾಮಗಳನ್ನೂ ಪರಿಹಾರಗಳನ್ನೂ ವಿಚಾರಮಾಡಿ ನಿಮಗೆ ನೀವು ಉಪನ್ಯಾಸ ಮಾಡಬೇಕು. ಪ್ರತಿಯೊಬ್ಬರೂ ತಾವು ತಾವೇ ಪ್ರಯತ್ನ ಮಾಡಬೇಕು. ಕುಳಿತು ಕೊಳ್ಳಿ; ನೀವು ಯಾವ ಕಷ್ಟಕ್ಕೆ ಒಳಗಾಗಿದ್ದೀರೋ ಅದರ ಚಿಂತನೆಯನ್ನೇ ಮಾಡಿ. ನೀವು ಧ್ಯಾನ ಮಾಡುವಾಗ ಓಂಕಾರವನ್ನು ಉಚ್ಚರಿಸಿರಿ ಅಥವಾ ಓಂಕಾರವನ್ನು ಗಾನಮಾಡಿ. ನಿಮ್ಮ ತುಟಿಗಳು ಓಂಕಾರ ಜಪ ಮಾಡುತ್ತಿರುವಾಗ, ಈ ಪವಿತ್ರ ಮಂತ್ರವನ್ನು ಧ್ವನಿಯಿಂದ ಗುಂಯ್ ಗುಟ್ಟುತ್ತಿರುವಾಗ ಝೇಂಕರಿಸುತ್ತಿರುವಾಗ, "ದೋಷಗಳನ್ನೆಲ್ಲಾ ತುಳಿದಾಡಿ ನಿರ್ಮೂಲ ಮಾಡಿ ಬಿಟ್ಟೆನು"—ಎಂಬ ನಿರ್ಧಾರವು

ನಿಮ್ಮಲ್ಲಿ ದೃಢವಾಗಿರುವಾಗ ಅನಂತವಾದ ದೈವಾನುಗ್ರಹವು ನಿಮ್ಮ ಮೇಲೆ ಸುರಿಯು ತ್ತಿರುತ್ತದೆ. ನಿಮಗೆ ಒಳಗಿನಿಂದ ಬಲ ಬರುತ್ತದೆ. ನಿಮ್ಮ ಮಾನಸ ಸರೋವರವನ್ನು ವಿಷಮಯವಾಗಿ ಮಾಡಿದ ಸರ್ಪದ ಮಣಿಭೂಷಿತವಾದ ಶಿರಸ್ಸುಗಳಲ್ಲಿ ಕೆಲವು, ಕಾಮಾ ದಿಗಳಾಗಿವೆ ಅವುಗಳನ್ನು ಒಂದೊಂದಾಗಿ ಧ್ವಂಸ ಮಾಡಬೇಕು. ಎಲ್ಲಾ ದೋಷ ಗಳಿಗೂ ಸಮಾನವಾದ ಕಾರಣವೂ ಆಧಾರವೂ ಎಲ್ಲಾ ಕೇಡುಗಳಿಗೂ ಬೇರೂ ಮೂಲವೂ ಅಜ್ಞಾನವೇ ಆಗಿದೆ. ಅಜ್ಞಾನದ ಎಲ್ಲಾ ರೂಪಗಳಲ್ಲಿ ಮುಖ್ಯವಾದುದು ನಮ್ಮ ನಿಜವಾದ ಆತ್ಮನ ಅಜ್ಞಾನ.

ಜನರು ತಮ್ಮ ದೇಹಗಳೇ ತಾವೆಂದು ತಿಳಿದು, ಎಲ್ಲಾ ಬಗೆಯ ಭೋಗ ಸಾಮ ಗ್ರಿಗಳನ್ನೂ ಕೂಡಿಟ್ಟುಕೊಂಡು, ಹೊರಗಿನ ವಿಷಯಗಳಿಂದ ಸುಖ ಪಡಬೇಕೆಂದು ಬಯ ಸುತ್ತಾರೆ. ದೇಹವನ್ನೇ ತಾವೆಂದು ತಿಳಿದಿರುವದರಿಂದ ಅವರಿಗೆ ದುಃಖ ತಪ್ಪುವದೇ ಇಲ್ಲ; ಅವರು ದುಃಖಕ್ಕೆ ಈಡಾಗುವದು ಸ್ವಾಭಾವಿಕ.

ದೇಹವನ್ನು ಮೀರಿ ನಿಲ್ಲಿ ; ನೀವು ಸತ್ಯಂ—ಜ್ಞಾನಂ—ಅನಂತಂ ರೂಪದ ಪರ ಮಾತ್ಮನೇ ಎಂದು ಉತ್ಕಟವಾಗಿ ಭಾವಿಸಿರಿ. ಇದನ್ನು ಅನುಭವ ಪಡೆದರೆ ಕಾಮವೂ ಮೋಹವೂ ದುರಾಶೆಗಳೂ ನಿಮ್ಮನ್ನು ಹೇಗೆ ಬಾಧಿಸುವದು ಸಾಧ್ಯ? ಜನರನ್ನು ಅಸ್ವಸ್ಥ ರನ್ನಾಗಿಯೂ ದುರ್ಬಲರನ್ನಾಗಿಯೂ ಇಟ್ಟಿರುವುದಕ್ಕೆ ಕಾರಣವಾದ ಸಾಮಾನ್ಯ ಪ್ರಕೃತಿ ನಿಯಮಗಳ ಅಜ್ಞಾನವು ನಿಜಾತ್ಮನ ಸಾಮಾನ್ಯವಾದ ಅಜ್ಞಾನದ ಒಂದಂಶವೇ ಆಗಿದೆ. ಇಲ್ಲಿ ಪ್ರಕೃತಿಯ ಒಂದು ಪವಿತ್ರ ನಿಯಮವಿದೆ ; ಇದನ್ನು ಅಲಕ್ಷಿಸುವುದಕ್ಕಾಗಲೀ ಶೂನ್ಯ ಮಾಡುವದಕ್ಕಾಗಲೀ ಸಾಧ್ಯವಿಲ್ಲ. ಅದೇನೆಂದರೆ:

ಎಲ್ಲಿ ನಿಮ್ಮನ್ನು ಯಾರೂ ನಿಶ್ಚಿತವಾಗಿ ಹಿಡಿಯಲಾರರೋ, ಕಾಣಲಾರರೋ, ಪ್ರಶ್ನಿಸಲಾರರೋ ಅಂಥಾ ಸ್ಥಳದಲ್ಲಿ ನೀವು ಯಾವದೇ ಬಗೆಯಾದ ತಪ್ಪನ್ನು—ತುಂಟಾಟ ವನ್ನು—ಪಾಪವನ್ನು ಮಾಡಿದರೂ—ಭದ್ರವಾದ ಕೋಟೆಯಲ್ಲಿ ಈ ಪಾಪದ ಬೀಜಗಳನ್ನು ಬಿತ್ತಿದರೂ—ಗಾಳಿಯನ್ನು ಬಿತ್ತಿದರೂ—ಅತ್ಯಂತ ಕಠಿಣವೂ ಕಠೋರವೂ ನಿರ್ದಯವೂ, ನಿಸ್ಸಂದೇಹವೂ ಆದ ತಪ್ಪಿಸಿಕೊಳ್ಳಲಾಗದ ಪ್ರಕೃತಿ ನಿಯಮದಿಂದ ನೀವು ಬಿರುಗಾಳಿಯ, ಸುಂಟರಗಾಳಿಯ, ಚಂಡ—ಪ್ರಚಂಡ ಮಾರುತದ ಫಲವನ್ನೇ ಪಡೆಯು ತ್ತೀರಿ. ನೀವು ನೋವನ್ನೂ ಕಷ್ಟವನ್ನೂ ಅನುಭವಿಸಲೇ ಬೇಕು. ಪಾಪದ ವೇತನ ಮರಣ.

ಜನರು ಅದನ್ನು ನೈತಿಕ ನಿಯಮವೆಂದು ತಿಳಿಯುತ್ತಾರೆ. ಮತ್ತು ಗಣಿತ ಶಾಸ್ತ್ರದ ನಿಯಮಗಳಲ್ಲಿ ಇರುವಷ್ಟು ಶಕ್ತಿಯೂ ನಿಷ್ಕೃಷ್ಟತೆಯೂ ಅದರಲ್ಲಿ ಇಲ್ಲವೆನ್ನುತ್ತಾರೆ; ಅವರು ಅದರಲ್ಲಿ ಗಣಿತ ಶಾಸ್ತ್ರದ ನಿಶ್ಚಯತೆಯೂ ಭದ್ರತೆಯೂ ಇಲ್ಲವೆನ್ನುತ್ತಾರೆ.

ಹಾಗೆ ಯೋಚಿಸತಕ್ಕವರು ತಪ್ಪು ತಿಳಿವಳಿಕೆಯುಳ್ಳವರಾಗಿದ್ದಾರೆ. ಏಕೆಂದರೆ, ಅತ್ಯಂತ ನಿರ್ಜನವಾದ ಒಂದು ಗುಹೆಯಲ್ಲಿ ಒಂದು ಪಾಪವನ್ನು ಮಾಡಿದರೂ ನಿಮ್ಮ ಕಾಲ ಕೆಳಗಿರುವ ಹುಲ್ಲೇ ನಿಮ್ಮ ವಿರುದ್ಧವಾಗಿ ಸಾಕ್ಷಿಯನ್ನು ಕೊಡುತ್ತದೆಂಬುದನ್ನು ಕಂಡು ನಿಮಗೆ ಆಶ್ಚರ್ಯವಾಗುತ್ತದೆ ನಿಮ್ಮ ಸುತ್ತಲೂ ನೋಡುತ್ತಿರುವ ಗೋಡೆಗಳಿಗೇ ಮರಗಳಿಗೇ ನಾಲಿಗೆ ಇರುವದನ್ನೂ ಅವು ಮಾತನಾಡುವದನ್ನೂ ಸ್ವಲ್ಪ ಕಾಲದಲ್ಲಿಯೇ ಕಾಣುತ್ತೀರಿ. ನೀವು ಪ್ರಕೃತಿಯನ್ನೂ ದೈವವನ್ನೂ ವಂಚಿಸಲಾರಿರಿ. ಇದು ಸತ್ಯ. ಇದೇ ನಿಯಮ. ನಾವು ಪಾಪಕರವಾದ ಆಲೋಚನೆಯನ್ನು ಹೃದಯದಲ್ಲಿ ಮಾತ್ರ ಮಾಡಿದರೂ ಹೊರಗಿನ ಪ್ರಪಂಚದಲ್ಲಿ ಪೇಚಾಟವನ್ನೂ, ಕಿರುಕುಳವನ್ನೂ, ಕಷ್ಟವನ್ನೂ, ಸಂಕಟವನ್ನೂ, ಉಂಟು ಮಾಡುವ ಪರಿಸ್ಥಿತಿಯಲ್ಲಿ ಸಿಕ್ಕು ಬೀಳುತ್ತೇವೆ. ತಮಗೆ ಬಂದ ಕಷ್ಟಕ್ಕೆ ನಿಜವಾದ ಕಾರಣವನ್ನು ತಿಳಿಯದವರು ಹೊರಗಿನ ಪರಿಸ್ಥಿತಿಯನ್ನು ದೂಷಿಸುತ್ತಾರೆ; ಸನ್ನಿವೇಶಗಳ ಜೊತೆಗೆ ಹೋರಾಟಕ್ಕೆ ಹೋಗುತ್ತಾರೆ; ಬಂಧು–ಮಿತ್ರರ ಮೇಲೂ ಸಂಗಡಿಗರ ಮೇಲೂ ನ್ಯಾಯಾಲಯದಲ್ಲಿ ಆರೋಪ ಮಾಡುತ್ತಾರೆ. ಹಳ್ಳಿಗಳಲ್ಲಿಯೂ ಪಟ್ಟಣ–ನಗರಗಳ ಮೂಲೆ ಮೂಲೆಗಳಲ್ಲಿಯೂ ಪೇಟೆಗಳಲ್ಲಿಯೂ ಘೋಷಿಸಬೇಕಾದ ಒಂದು ದೈವೀ ನಿಯಮವಿದೆ: "ದೇವರ ಕಣ್ಣಿನಲ್ಲಿ ಮಣ್ಣೆರಚುವದಕ್ಕೆ ಪ್ರಯತ್ನಪಟ್ಟರೆ ನೀವೇ ಕುರುಡರಾಗುತ್ತೀರಿ."

ನೀವು ಪರಿಶುದ್ಧರಾಗಬೇಕೆಂಬುದೇ ದೈವೀ ನಿಯಮ. ಹೃದಯದಲ್ಲಿ ದೋಷಕ್ಕೆ ಆಶ್ರಯ ಕೊಟ್ಟದ್ದೇ ಆದರೆ, ಅದರ ಕೆಟ್ಟ ಫಲವನ್ನು ಅನುಭವಿಸಲೇ ಬೇಕು. ಈ ಶಿಕ್ಷೆಯಾದರೂ ಇರುವದು, ನಾವು ಶುದ್ಧರಾಗ ಬೇಕೆಂದೇ. ನಾವು ಈ ಆಧ್ಯಾತ್ಮಿಕ ನಿಯಮಗಳನ್ನು ಒಂದೊಂದನ್ನಾಗಿ ತೆಗೆದುಕೊಂಡು ಗಣಿತ ಶಾಸ್ತ್ರದ ನಿಷ್ಕೃಷ್ಟತೆಯೇ ಅವುಗಳಲ್ಲಿರುವದನ್ನು ತೋರಿಸೋಣ. ಒಬ್ಬ ಮನುಷ್ಯನು ಈ ಆಧ್ಯಾತ್ಮಿಕ ನಿಯಮಗಳನ್ನು ಒಮ್ಮೆ ಅರ್ಥ ಮಾಡಿಕೊಂಡರೆ, ಸ್ವಾರ್ಥ ಪರವಾದ ಆಶೆಗಳಿಗೆ ಇಳಿಯುವದು ಅವನಿಗೆ ಅಸಾಧ್ಯವಾಗುತ್ತದೆ. ಈ ಆಶೆಗಳ ಮೇಲೆ ಹತೋಟಿಯನ್ನೂ ಸ್ವಾಮಿತ್ವವನ್ನೂ ಪಡೆದರೆ ಮನಸ್ಸನ್ನು ಎಷ್ಟು ಹೊತ್ತು ಬೇಕಾದರೂ ಏಕಾಗ್ರವಾಗಿ ಮಾಡಬಹುದು. ಒಳ್ಳೆಯ ಗುಣ ಸ್ವಭಾವ ಶೀಲಗಳನ್ನು ಮೊದಲು ರೂಪಿಸಿಕೊಳ್ಳಬೇಕು; ಇದು ಬಹಳ ಅವಶ್ಯ.

ನಮ್ಮ ಮನಸ್ಸನ್ನು ಗೆಲ್ಲುವದಕ್ಕೆ ಉಪವಾಸ ಮಾಡುವದು ಅವಶ್ಯವೇ ?

ಉಪವಾಸದ ವಿಷಯದಲ್ಲಿ ರಾಮನು ಹೇಳುವದೇನೆಂದರೆ, ನೀವು ಹೊಟ್ಟೆಗಿಲ್ಲದೆ ಒರಲುವದೂ ಸರಿಯಲ್ಲ ; ಅತಿಯಾಗಿ ತಿನ್ನುವದೂ ಹಿತವಲ್ಲ. ಎರಡು ಅತಿರೇಕಗಳನ್ನೂ ಬಿಡಬೇಕು. ಕೆಲವು ಸಮಯ ಸ್ವಾಭಾವಿಕವಾಗಿ ಉಪವಾಸವಾಗುತ್ತದೆ. ಒಂದೊಂದುದಿನ ಸ್ವಾಭಾವಿಕವಾಗಿಯೇ ಆಹಾರವನ್ನು ತೆಗೆದುಕೊಳ್ಳಬಾರದೆಂದೆನಿಸುತ್ತದೆ. ಹೃದಯದಲ್ಲಿ ಸಹಜವಾಗಿ ತೋರಿಕೊಳ್ಳುವ ಇಂಥಾ ಸಂವೇದನೆಗಳಿಗೆ ವಿಧೇಯರಾಗಿ

ನಡೆದುಕೊಳ್ಳಬೇಕು. ಆದರೆ ಇನ್ನು ಕೆಲವು ಸಮಯದಲ್ಲಿ ಪುಷ್ಟಿಕರವಾದ ಆಹಾರ ವನ್ನು ತೆಗೆದುಕೊಳ್ಳಬೇಕೆಂದು ಅಂತರಾತ್ಮವು ಹೇಳುತ್ತದೆ. ಈ ಅಂತಸ್ಸ್ಫೂರ್ತಿಯಂ ತೆಯೇ ನಡೆಯಬೇಕು.

ಉಪವಾಸವನ್ನು ನಾವು ಸಹಾಯಕವಾಗಿ ಉಪಯೋಗಿಸಬೇಕೇ ಹೊರತು, ಅದು ನಮ್ಮ ಮೇಲೆ ಪ್ರಭುತ್ವ ನಡೆಸಬಾರದು. ಧಾರ್ಮಿಕವಾಗಿಯೂ ಸಾಮಾಜಿಕ ವಾಗಿಯೂ ತಮ್ಮ ಮೇಲೆ ಒತ್ತಾಯ ಮಾಡಲ್ಪಟ್ಟಿದೆಯೆಂಬ ಭಾವನೆಯಿಂದ ಜನರು ಅನೇಕ ವೇಳೆ ಉಪವಾಸ ಮಾಡುತ್ತಾರೆ. ಆಗ ಅವರು ಉಪವಾಸ ವ್ರತದ ಪದ್ಧತಿಗೆ ಗುಲಾಮರಾಗುತ್ತಾರೆ. ರಾಮನು ಗುಲಾಮಗಿರಿಗೆ ಸಮ್ಮತಿಸುವದಿಲ್ಲ. ಉಪವಾಸದ ವಿಷಯವಾಗಿ ಹೇಳಬೇಕೆಂದರೆ, ಇಂಡಿಯಾದಲ್ಲಿ ಕೆಲವರು ನಿಯಮಬದ್ಧವಾಗಿ ಉಪವಾಸ ಮಾಡುತ್ತಾರೆ. ಕೆಲವು ವಿಶೇಷ ದಿನಗಳಲ್ಲಿ ಕೆಲವು ವಿಶಿಷ್ಟ ಬಗೆಯ ಆಹಾರವನ್ನೇ ತೆಗೆದುಕೊಳ್ಳಬೇಕೆಂದೂ ಇಷ್ಟೇ ತೆಗೆದುಕೊಳ್ಳಬೇಕೆಂದೂ ವ್ರತ ನಿಯಮ ಗಳಿವೆ. ಇವುಗಳು ಪೂರ್ಣಿಮಾ–ಅಮಾವಾಸ್ಯಾ ದಿನಗಳು.

ಕೆಲವು ಜನರು ಇಂಡಿಯಾ ದೇಶದಲ್ಲಿ, ಪೂರ್ಣಿಮಾ ದಿನ, ಹೊಟ್ಟೆಗೆ ಜಡವಾಗ ದಿರುವ, ಸುಲಭವಾಗಿ ಜೀರ್ಣವಾಗುವ ಆಹಾರವನ್ನು ತೆಗೆದುಕೊಂಡು, ಅದು ಧ್ಯಾನಕ್ಕೆ ಅನುಕೂಲವಾದ ದಿನವಾದುದರಿಂದ–ವಿಶೇಷವಾಗಿ ಸಂಯಮವನ್ನು ಅಭ್ಯಾಸಮಾಡು ವರು. ಇದನ್ನು ಬೇಕಾದರೆ, ನೀವು ಪರೀಕ್ಷೆ ಮಾಡಬಹುದು. ಮನಸ್ಸಿನ ಸ್ವಸ್ಥತೆ ಯನ್ನೂ ಸಮತೆಯನ್ನೂ ಏರುಪೇರು ಮಾಡದಿರುವ ಆಹಾರವನ್ನೇ ತೆಗೆದುಕೊಳ್ಳ ಬೇಕು.

ಮನಸ್ಸಿನ ಏಕಾಗ್ರತೆಯನ್ನು ಅಭ್ಯಾಸ ಮಾಡುವದಕ್ಕೆ ಅಮಾವಾಸ್ಯೆಯ ಹಗಲೂ ರಾತ್ರಿಯೂ ಬಹಳ ಸಹಾಯಕವಾದ ಗುಣವುಳ್ಳ ದಿನ.

ಸ್ವಾರ್ಥಪರವಾದ ಯೋಜನೆಗಳನ್ನೂ ಆಶೆಗಳನ್ನೂ ಪೋಷಿಸದೆ ಶೋಧಿಸಿ, ಕಳೆದುಕೊಳ್ಳುವದೇ ನಿಜವಾದ ಉಪವಾಸ.

ಓಂ ! ಓಂ ! ಓಂ !

# THE KINGDOM OF HEAVEN
# ಸ್ವರ್ಗಸಾಮ್ರಾಜ್ಯ

## ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ 'ಹೆರ್ಮೆಟಿಕ್ ಬ್ರದರ್‌ಹುಡ್ ಹಾಲ್'ನಲ್ಲಿ ತಾ|| 19 - 12 - 1902ರಲ್ಲಿ ಮಾಡಿದ ಉಪನ್ಯಾಸ

ಮಹಿಳೆಯರಲ್ಲಿಯೂ ಮಹನೀಯರಲ್ಲಿಯೂ ಇರುವ ನನ್ನ ಆತ್ಮವೇ !

ಸ್ವರ್ಗ ಸಾಮ್ರಾಜ್ಯವು ನಿಮ್ಮೊಳಗೇ ಇದೆ. ನೀವು ಅದರ ಅನುಭವ ಪಡೆಯುವದು ಹೇಗೆ?

ನಮ್ಮೊಳಗಿರುವ ಸ್ವರ್ಗ ಸಾಮ್ರಾಜ್ಯದ ಅನುಭವ ಪಡೆಯುವದು ಹೇಗೆಂಬುದನ್ನು ತೋರಿಸುವದಕ್ಕೆ ಒಂದು ಸ್ವಾರಸ್ಯವಾದ ಕಥೆಯಿದೆ. ಒಂದಾನೊಂದು ಕಾಲದಲ್ಲಿ ಒಬ್ಬ ರಾಕ್ಷಸನು ವೇದಗಳನ್ನೆಲ್ಲಾ ಅಪಹಾರ ಮಾಡಿಕೊಂಡು ಸಮುದ್ರದ ತಳಕ್ಕೆ ಒಯ್ದನೆಂದು ಆ ಕಥೆಯಲ್ಲಿ ಹೇಳಿದೆ.

'ವೇದ' ಎನ್ನುವ ಶಬ್ದಕ್ಕೆ ಎರಡು ಅರ್ಥಗಳಿವೆ. ಜ್ಞಾನ, ಸ್ವರ್ಗ ಸಾಮ್ರಾಜ್ಯ ಎನ್ನುವದು ಮೊದಲನೆಯ ಅರ್ಥ; ಮೂಲವಾದ ಅರ್ಥ. ಎರಡನೆಯ ಅರ್ಥ, ಹಿಂದೂಗಳ ಅತ್ಯಂತ ಪವಿತ್ರವಾದ ಶಾಸ್ತ್ರಗ್ರಂಥಗಳು.

ವೇದಗಳನ್ನು ಸಮುದ್ರದ ತಳಕ್ಕೆ ಒಯ್ದನೆಂದು ಹೇಳಿರುವ ದೈತ್ಯನ ಹೆಸರು ಶಂಖಾಸುರ.—ಎಂದು. ಶಬ್ದ ವ್ಯುತ್ಪತ್ತಿಶಾಸ್ತ್ರದ ಪ್ರಕಾರ ಶಂಖಾಸುರನೆಂದರೆ ಶಂಖದಲ್ಲಿರುವ ದೈತ್ಯ—ಎಂದು. ಅಥವಾ ಶಂಖದಲ್ಲಿ ಹುಟ್ಟಿ ಬೆಳೆಯುವ ಶಂಖದ ಹುಳ—ಎಂದು.

ವೇದಗಳನ್ನು ಉದ್ಧರಿಸುವದಕ್ಕಾಗಿಯೂ ರಕ್ಷಿಸುವದಕ್ಕಾಗಿಯೂ ಜ್ಞಾನಭಂಡಾರವನ್ನು ಹಿಂದಕ್ಕೆ ತರುವದಕ್ಕಾಗಿಯೂ ಪರಮಾತ್ಮನು ಮತ್ಸ್ಯಾವತಾರಮಾಡಿ ಆ ಶಂಖಾಸುರನೊಡನೆ ಯುದ್ಧಮಾಡಿ, ಅವನನ್ನು ಸಂಹರಿಸಿ ವೇದಗಳನ್ನು ಹಿಂತಿರುಗಿ ಪ್ರಪಂಚಕ್ಕೆ ತಂದನು.

ಮಕ್ಕಳೂ ಆ ಕಥೆಯನ್ನು ಓದಿ ಅದಕ್ಕೆ ಅಕ್ಷರಾರ್ಥವನ್ನು ಮಾಡಿಕೊಳ್ಳುವರು. ಸಾಮಾನ್ಯ ಜನರೂ ಓದಿ ಆ ಕಥೆಗೆ ಮಕ್ಕಳಂತೆಯೇ ವಾಚ್ಯಾರ್ಥವನ್ನು ಮಾಡಿಕೊಳ್ಳಬಹುದು. ಆದರೆ ಈ ಕಥೆಯಲ್ಲಿ ಆಳವಾದ ಗೂಢಾರ್ಥವಿದೆ. ಒಂದು ಸಾಮಾನ್ಯವಾದ ಸತ್ಯವನ್ನು ನಿದರ್ಶಿಸುವದಕ್ಕಾಗಿ ಈ ಕಥೆಯಿದೆ.

ಶಂಖದಲ್ಲಿರುವ ಕ್ರಿಮಿಯಿಂದ ವೇದಗಳನ್ನು ಹಿಂತಿರುಗಿ ಪಡೆಯುವದಕ್ಕಾಗಿ ದೇವರು ಮೀನಾಗಿ ಅವತರಿಸುವನು. ದೇವರು ಮತ್ಸ್ಯಾವತಾರಮಾಡಿ ಸಮುದ್ರದ ತಳದಲ್ಲಿದ್ದ ಶಂಖಾಸುರನನ್ನು ಕೊಂದನು. ಇದರ ಉಪಯೋಗವೇನು? ಮೀನು ಸಮುದ್ರದ ಪ್ರಾಣಿ; ಶಂಖದಲ್ಲಿಯೂ ಸಮುದ್ರದ ಪ್ರಾಣಿ ಇದೆ. ಸರ್ವಶಕ್ತನಾದ ಭಗ ವಂತನು ಮೀನಿನ ರೂಪವನ್ನು ತಾಳಿ ಸಮುದ್ರದಲ್ಲಿದ್ದ ಹುಳುವನ್ನು ಹೊಡೆದು ಹಾಕಿದನು. ಖಾಲಿಯಾದ ಆ ಶಂಖವನ್ನು ಸಮುದ್ರದ ಅಲೆಗಳು ಹೊಡೆದುಕೊಂಡು ಬಂದು ದಂಡೆಗೆ ತಂದುಹಾಕಿದವು. ಜನರು ಅದನ್ನು ತೆಗೆದುಕೊಂಡರು; ಆ ಶಂಖ ವನ್ನು ಊದಿದರು. ಅದರಿಂದ ಓಂ ಓಂ ಓಂ ಎಂಬ ಶಬ್ದವು ಪ್ರತಿಧ್ವನಿತವಾಗುತ್ತಾ ಹೊರ ಹೊಮ್ಮಿತು. ಇದೇ ವೇದ. "ಪ್ರಣವಸ್ಸರ್ವ ವೇದೇಷು" (ಗೀ) ಪ್ರಣವವೇ (ಓಂಕಾರವೇ) ಸರ್ವವೇದದ ಸಾರವಾಗಿದೆ. ಸಮುದ್ರದ ತಳದಿಂದ ವೇದರೂಪವಾದ ಶಂಖವು ಈ ಅರ್ಥದಲ್ಲಿ ತರಲ್ಪಟ್ಟಿತು.

ಪವಿತ್ರವಾದ ಓಂ ಮಂತ್ರದ ಮಹತ್ವವನ್ನು ತಿಳಿಸುವದಕ್ಕಾಗಿ ಆ ಕತೆಗಾರನು ಆ ಮಂತ್ರವನ್ನು ವಿಶೇಷವಾಗಿ ಒತ್ತಿ ಹೇಳಿದನು; ಎತ್ತಿ ತೋರಿಸಿದನು. ಸಮಸ್ತ ಪ್ರಪಂಚ ದಲ್ಲಿ ಈ ಪವಿತ್ರವಾದ ಮಂತ್ರ ಓಂಕಾರವೇ ಸಕಲ ಜ್ಞಾನದ ಅಂತ್ಯವೆಂಬುದನ್ನು ತೋರಿಸುವದಕ್ಕೆ ಈ ಕಥೆಯ ಉದ್ದೇಶವಾಗಿದೆ. ಸಕಲ ವೇದಗಳನ್ನೂ ನಿಖಿಲ ಸ್ವರ್ಗ ಸಾಮ್ರಾಜ್ಯವನ್ನೂ ಅತ್ಯಂತ ಸಂಕ್ಷಿಪ್ತ ರೂಪದಲ್ಲಿ ಸಾರಸಂಗ್ರಹ ಮಾಡಿ ಶಂಖದಲ್ಲಿ ತುಂಬಿದ್ದೇ ಪವಿತ್ರ ಓಂಕಾರ. ಇದನ್ನು ತಿಳಿಯ ಪಡಿಸುವದೇ ಕಥೆಯ ಮುಖ್ಯ ಉದ್ದೇಶವಾಗಿತ್ತು.

ಹಿಂದೂಗಳು ಎಲ್ಲಾ ಪವಿತ್ರವೂ ಮುಖ್ಯವೂ ಆದ ಸಂದರ್ಭಗಳಲ್ಲಿ ಶಂಖವನ್ನು ಊದುತ್ತಾರೆ; ಅಂದರೆ ಅವರು ಮರಣ ಕಾಲದಲ್ಲಿಯೂ, ಜನನ ಕಾಲದಲ್ಲಿಯೂ, ಯುದ್ಧಕಾಲದಲ್ಲಿಯೂ, ಪೂಜಾ ಕಾಲದಲ್ಲಿಯೂ ಓಂಕಾರವನ್ನು ಉಚ್ಚಾರಣೆ ಮಾಡುತ್ತಾರೆ. ಓಂಕಾರದಲ್ಲಿಯೇ ಜೀವಿಸುತ್ತಾ, ಓಂಕಾರದಲ್ಲಿಯೇ ಚಲಿಸುತ್ತಾ, ಓಂಕಾರದಲ್ಲಿಯೇ ತನ್ನ ಸರ್ವಸ್ವದ ಇರುವಿಕೆ ಉಳ್ಳವನೇ ಸುಖಿಯು, ಧನ್ಯನು !

ನಮ್ಮ ಅಂತರಂಗದಲ್ಲಿರುವ ಐಶ್ವರ್ಯಭಂಡಾರವನ್ನೂ ಸ್ವರ್ಗ ಸಾಮ್ರಾಜ್ಯದ ಮಹಾದ್ವಾರವನ್ನೂ ಬಿಚ್ಚಿ ತೆರೆಯುವದಕ್ಕೆ ಓಂಕಾರವೇ ಬೀಗದ ಕೈ. ಯೂರೋಪ್ ಮತ್ತುಅಮೆರಿಕಾದ ಜನರು ತಮ್ಮ ಬುದ್ಧಿಗೆ ಒಪ್ಪಿಗೆಯಾಗದ ಹೊರತು ಯಾವುದನ್ನೂ ಅಂಗೀಕರಿಸುವದಿಲ್ಲ. ಲೌಕಿಕ ಯುಕ್ತಿಯಿಂದ ಈ ಮಂತ್ರದ ಮಹಿಮೆಯನ್ನು ಸಿದ್ಧಪಡಿಸಿ ತೋರಿಸುವದಕ್ಕೆ ಒಂದು ವೇಳೆ ಸಾಧ್ಯವಾಗದಿದ್ದರೂ ಸರಿಯಾದ ಕ್ರಮದಲ್ಲಿ ಈ ಮಂತ್ರ ವನ್ನು ಉಚ್ಚಾರಣೆ ಮಾಡಿದರೆ ಒಂದು ವ್ಯಕ್ತಿಯ ಶೀಲದ ಮೇಲೆ ಅದು ಉಂಟು ಮಾಡುವ ಪ್ರಬಲ ಪರಿಣಾಮವನ್ನು ಅಲ್ಲಗಳೆಯುವದು ಸಾಧ್ಯವಲ್ಲ; ಅಥವಾ

ನಮ್ಮೆಲ್ಲರ ಒಳಗಿರುವ ಗೂಢ ಶಕ್ತಿಗಳನ್ನು ಬಿಚ್ಚಿಡುವದರಲ್ಲಿಯೂ ಜಗತ್ತಿನ ಎಲ್ಲಾ ಶಕ್ತಿಭಂಡಾರಗಳನ್ನೂ ನಮ್ಮ ವಶಪಡಿಸುವದರಲ್ಲಿಯೂ ಆ ಮಂತ್ರಕ್ಕೆ ಇರುವ ಪ್ರಭಾವ ವನ್ನು ಇಲ್ಲವೆನ್ನುವದೂ ಸಾಧ್ಯವಲ್ಲ. ಹಿಂದೂಗಳ ಪವಿತ್ರ ಶಾಸ್ತ್ರಗಳ ಲೇಖಕರು ಓಂಕಾರ ಜಪಮಾಡುತ್ತಾ ಪರಮಾನಂದ ಪರವಶರಾಗಿದ್ದರಿಂದಲೇ ಅವರಿಗೆ ಆ ವೇದ ಶಾಸ್ತ್ರಗಳ ಸಮಸ್ತ ಜ್ಞಾನವೂ ಲಭಿಸಿತೆಂದು ತೋರಿಸುವುದೂ ಆ ಕತೆಗಾರನ ಒಂದು ಉದ್ದೇಶವಾಗಿದೆ. ಸರ್ವಜ್ಞಾನಕ್ಕೂ ಈ ಮಂತ್ರವೇ ಬೀಜವಾಗಿದೆ. ಈ ಮಂತ್ರದ ಮಹತ್ವವೇನೆಂಬುದನ್ನು ನಿಮಗೆ ಬೇರೆ ಬೇರೆ ದೃಷ್ಟಿಯಿಂದ ತಿಳಿಸುತ್ತೇನೆ. ಜನರು ಸಂಪೂರ್ಣ ಹೃದಯದಿಂದ ಈ ಮಂತ್ರವನ್ನು ಸೇವಿಸಿ ಲಾಭ ಪಡೆಯಲೆಂದು ಇದರ ಮಹತ್ವವನ್ನು ತಿಳಿಸುವದು ಅವಶ್ಯವಾಗಿದೆ.

ಮೊಟ್ಟ ಮೊದಲನೆಯ ಮುಖ್ಯ ವಿಚಾರವೇನೆಂದರೆ, ಓಂ ಎಂಬ ಮಂತ್ರವು ಯಾವದೊಂದು ವಿಶಿಷ್ಟ ಭಾಷೆಗೆ ಸೇರಿದ್ದಲ್ಲ ಅದು ಸಂಸ್ಕೃತ ಭಾಷೆಗೆ ಸೇರಿದ್ದೆಂದೂ ಬೇರೆ ಭಾಷೆಗೆ ಸೇರಿದ್ದಲ್ಲವೆಂದೂ ಅದನ್ನು ತಿರಸ್ಕರಿಸಬೇಡಿ ಅದು ದೇವರ ಹೆಸರು. ನಿಮಗೆ ಈ ಶಬ್ದವು ಸ್ವಾಭಾವಿಕವಾಗಿ ನಿಮ್ಮೊಳಗಿನಿಂದ ಬರುತ್ತದೆ ; ಇದನ್ನು ಯಾರೂ ಕಲಿಸಬೇಕಾಗಿಲ್ಲ. ಅದು ನಿಮಗೆ ಜನ್ಮಕಾಲದಲ್ಲಿಯೇ ಬರುತ್ತದೆ. ಸಣ್ಣ ಮಗುವಿನ ಅಳುವು ಓಂ, ಓಂ, ಆಮ್ ಎಂಬ ಶಬ್ದವನ್ನೇ ಹೋಲುತ್ತದೆ. ಅದು ಓಂ ಶಬ್ದದ ವಿಪರ್ಯಸ್ತರೂಪ ; ವಿಲಕ್ಷಣ ರೂಪ. ಪ್ರತಿಯೊಂದು ಮಗುವಿಗೂ ಆ ಓಂಕಾರ ಶಬ್ದವು ಆದರ ಒಳಗಿನಿಂದಲೇ ಬರುತ್ತದೆ.

OM, ಓಂ, ಬರೆಯುವ ಸರಿಯಾದ ರೀತಿ : A-U-M. ಅ—ಉ-ಮ್. ಸಂಸ್ಕೃತ ವ್ಯಾಕರಣ ನಿಯಮಕ್ಕೆ ಅನುಸಾರವಾಗಿ A ಮತ್ತು U, ಅ ಮತ್ತು ಉ ಸೇರಿದರೆ ಓ ಆಗುತ್ತದೆ. ಅ, ಉ ಮತ್ತು ಮ್ ಎಂಬ ಶಬ್ದಗಳನ್ನು ಮೂಕರೂ ಕೂಡ ಉಚ್ಚರಿಸ ಬಹುದು. ಹೀಗೆ ಪ್ರತಿಯೊಬ್ಬನೂ ತಾನಾಗಿಯೇ ಈ ಪ್ರಪಂಚದೊಳಗೆ ಓಂ ಎಂಬುದನ್ನು ಪೂರ್ಣ ರೂಪದಿಂದಲೂ ಅಂಶವಾಗಿಯೂ ತರುತ್ತಾನೆ. ಯಾರಿಗಾದರೂ ತಾನಾಗಿಯೇ ಸ್ಫುರಿಸುವ ಸ್ವಾಭಾವಿಕ ಶಬ್ದವೇ ಓಂ. ಬೀದಿಗಳಲ್ಲಿ ಬಾಲಕರು ಅತಿ ಸಂತೋಷವಾಗಿರುವಾಗ ಮೇಲ್ಬಾಯ್ದು ಹರಿಯುವ ಅವರ ಸಂತೋಷವು 'ಓ' ಎಂಬ ದೀರ್ಘವಾದ ಕೂಗಿನಲ್ಲಿ ವ್ಯಕ್ತವಾಗುತ್ತದೆ. ಅದು ಓಂ ಎಂಬ ಶಬ್ದದ ಹ್ರಸ್ವರೂಪವೇ ಆಗಿದೆ.

ಈ ಶಬ್ದವು ಸಂಸ್ಕೃತ, ಪರ್ಷಿಯನ್, ಇಂಗ್ಲಿಷ್, ಜಪ್ನೀಸ್ ಮೊದಲಾದ ಎಲ್ಲಾ ಭಾಷೆಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಪೂರ್ಣ ರೂಪದಿಂದ ತೋರಿಕೊಂಡಿದೆ. ಜನರು ತಮ್ಮನ್ನು ತಾವು ಮೀರಿ ಆಚೆಗೆ ಹಾರಿದ ಸ್ಥಿತಿಯಲ್ಲಿಯೂ ಅವರು ಅತಿಶಯ ಉಲ್ಲಾಸ ಭಾವದಲ್ಲಿರುವಾಗಲೂ ಅವರಲ್ಲಿ ಸಂತೋಷವು ತುಂಬಿ ತುಳುಕುವಾಗಲೂ

ಅವರಿಗೆ ಓಂ ಶಬ್ದವು ಸ್ವಾಭಾವಿಕವಾಗಿಯೇ ಬರುತ್ತದೆ. ಜನರು ಕಾಹಿಲೆಯಿಂದ ನರಳುತ್ತಿರುವಾಗಲೂ, ಕಷ್ಟದಲ್ಲಿರುವಾಗಲೂ ಅತಿಯಾದ ನೋವನ್ನು ಅನುಭವಿಸುತ್ತಿರುವಾಗಲೂ ಅವರ ಬಾಯಿಯಿಂದ ಹೊರಡುವ ಶಬ್ದವೇನು ? ಅದು ಆ, ಓ, ಅಂ, ಅಮ್ಮಾ ಮೊದಲಾಗಿ. ಇವೆಲ್ಲಾ ಓಂಕಾರದ ವಿಕಾರರೂಪಗಳಲ್ಲದೆ ಮತ್ತೇನು ? ಹಿಬ್ರೂ (ಯಹೂದಿ), ಅರಬ್ಬೀ ಮತ್ತು ಇಂಗ್ಲಿಷ್ ಭಾಷೆಗಳ ಪ್ರಾರ್ಥನೆಗಳು ಮುಕ್ತಾಯವಾಗುವದು 'ಆಮೆನ್' ಎಂಬ ಶಬ್ದದಿಂದ, ಓಂ ಎಂಬ ಶಬ್ದಕ್ಕೆ ಈ 'ಆಮೆನ್', ಎಷ್ಟು ಅಸಾಧಾರಣ ಹೋಲಿಕೆಯುಳ್ಳದ್ದಾಗಿದೆ ! ಗ್ರೀಕ್ ಭಾಷೆಯ ಅಕ್ಷರ ಮಾಲಿಕೆಯಲ್ಲಿ ಕೊನೆಯ ಅಕ್ಷರವು 'ಓಮೀಗಾ' ಎಂದು ಇದರಲ್ಲಿ ಓಂ ಎಂಬ ಶಬ್ದಕ್ಕೆ ಪ್ರಧಾನ ಸ್ಥಾನವಿದೆ.

ಈ ಶಬ್ದವು ಪ್ರತಿಯೊಬ್ಬನಿಗೂ ಏಕೆ ಸ್ವಾಭಾವಿಕವಾಗಬೇಕು ? ಕಾಹಿಲೆಯಿಂದ ನರಳುತ್ತಿರುವವನು ಯೂರೋಪಿಯನ್, ಅಮೆರಿಕನ್, ಹಿಂದು, ಪರ್ಷಿಯನ್ ಅಥವಾ ಜಪ್ನೀಸ್ ಯಾರೇ ಆಗಲೀ ಈ ಓಂ ಶಬ್ದವೇ ಏಕೆ ಅವರ ಬಾಯಿಂದ ಬರಬೇಕು ? ಇದಕ್ಕೆ ಹಿಂದುಗಳ ಉತ್ತರವೇನೆಂದರೆ :

ಮಟ ಮಟ ಮಧ್ಯಾಹ್ನದಲ್ಲಿ ಬೆಂಕಿಯಂತೆ ಉರಿಯುತ್ತಿರುವ ಬಿಸಿಲಿನಿಂದ ಬೆಂದು ಬಳಲಿರುವ ರೋಗಿಗೆ ವಿಶಾಲವೂ ನಿಬಿಡವೂ ಆದ ಒಂದು ಸುಂದರ ವೃಕ್ಷವು (ಬೇವಿನ ಮರ, ಹೊಂಗೆಯ ಮರ ಮೊದಲಾದುವು)ಹೇಗೆ ಶಾಂತ—ಶೀತಲವೂ ಆಪ್ಯಾಯನಕರವೂ ಆದ ನೆರಳಿನ ಆಶ್ರಯವನ್ನು ಕೊಡುವದೋ ಹಾಗೆ ಭವರೋಗದಿಂದಲೂ ದೈಹಿಕವ್ಯಾಧಿಯಿಂದಲೂ ನರಳುತ್ತಿರುವವರಿಗೆ ಪವಿತ್ರ ಓಂಕಾರದ ಸ್ವಾಭಾವಿಕವಾದ ಉಚ್ಚಾರಣೆಯು ಸಮಾಧಾನವನ್ನು ಕೊಡುತ್ತದೆ. ಎಲ್ಲಾ ಬಗೆಯ ಸಂದರ್ಭಗಳಲ್ಲಿಯೂ ಸ್ವಾಭಾವಿಕವಾಗಿಯೋ ಪ್ರಯತ್ನ ಪೂರ್ವಕವಾಗಿಯೋ ಮಾಡುವ ಓಂಕಾರದ ಉಚ್ಚಾರಣೆಯಿಂದಲೂ ಗಾನದಿಂದಲೂ ತಿಳಿಯದವರಿಗೆ ಕೂಡ ಸಮಾಧಾನವಾಗುತ್ತದೆ. ಹೀಗಿರುವಾಗ ಶಾಸ್ತ್ರ ಗುರುಗಳಿಂದ ಕ್ರಮವನ್ನು ತಿಳಿದು ಸರಿಯಾದ ರೀತಿಯಿಂದ ಓಂಕಾರವನ್ನು ಗಾನ ಮಾಡತಕ್ಕವರಿಗೆ ಶಾಂತಿಯೂ ಸರಸ—ಸಮರಸ ಭಾವವೂ ಅಳವಡಲಾರದೆ ? ಓಂಕಾರವನ್ನು ಪ್ರಣವ ಎನ್ನುತ್ತೇವೆ; ಇದರ ಅರ್ಥ ಜೀವನವನ್ನೂ ಪ್ರಾಣವನ್ನೂ ಅಥವಾ ಉಸಿರನ್ನೂ ವ್ಯಾಪಿಸಿಕೊಂಡಿರುವ ತತ್ತ್ವ ಅಥವಾ ಶಕ್ತಿ—ಎಂದು. ಮನುಷ್ಯನೇ ಏಕೆ, ಪ್ರತಿಯೊಂದು ಪ್ರಾಣಿಯೂ ಪ್ರಣವ ಶಬ್ದವನ್ನು ಹೊರಹೊಮ್ಮಿಸುತ್ತದೆ. ಅದು ಅದರ ಉಸಿರಿನಲ್ಲಿಯೇ ಸೇರಿಕೊಂಡಿರುತ್ತದೆ, ಉಸಿರಾಟವು ಚೆನ್ನಾಗಿ ಕೇಳುವಂತೆ, ಮೂಗಿನಿಂದ ಗಟ್ಟಿಯಾಗಿ ಜೋರಾಗಿ ಉಸಿರು ಬಿಟ್ಟು, ಉಸಿರನ್ನು ತೆಗೆದುಕೊಂಡರೆ, ಅದು ಸ್ಪಷ್ಟವಾದ ಶಬ್ದದಿಂದ 'ಸೋಹಂ' ಎಂದಾಗುತ್ತದೆ. ಈ ಶಬ್ದವು ಪ್ರತಿಯೊಬ್ಬರ ಉಸಿರಿನಲ್ಲಿಯೂ ಇದೆ. ಇದು 'S-O-H-A-M'. 'ಸೋಹಂ' ಎಂದು.

ಪ್ರಪಂಚದಲ್ಲಿ ಬೇರೆ ಎಲ್ಲಾ ಭಾಷೆಗಳ ವ್ಯಾಕರಣಗಳಿಗಿಂತಲೂ ಸಂಸ್ಕೃತ ಭಾಷೆಯು ವ್ಯಾಕರಣವು ಹೆಚ್ಚು ಅಭಿವೃದ್ಧಿಯನ್ನು ಹೊಂದಿದೆ. ಅದು ಎಲ್ಲಾ ಧ್ವನಿಗಳನ್ನೂ ಶಬ್ದ ಗಳನ್ನೂ ಪದಗಳನ್ನೂ ಪರಿಪೂರ್ಣವಾಗಿ ವಿಶ್ಲೇಷಣೆ ಮಾಡಿದೆ; ವಿಭಜನೆ ಮಾಡಿದೆ ; ಚೆನ್ನಾಗಿ ಬಿಡಿಸಿ ಬಿಡಿಸಿ ಪರೀಕ್ಷಿಸಿದೆ. ಮ್ (M) ಎಂಬುದು ವ್ಯಂಜನ ; ಇದು ಮೂಗಿ ನಿಂದ ಹೊರಡುವ ಅನುನಾಸಿಕ ವ್ಯಂಜನ; ಆದರೆ ಇದರ ಧ್ವನಿಯು ವ್ಯಂಜನಗಳಿ ಗಿಂತಲೂ ಸ್ವರಗಳಿಗೆ ಹೆಚ್ಚು ಸಮೀಪವಾಗಿದೆಯೆಂದು ತೋರಿಸಲ್ಪಟ್ಟಿದೆ. ಓ (O) ಮತ್ತು ಅ (A) ಇವು ಎಲ್ಲಾ ವ್ಯಾಕರಣಗಳ ದೃಷ್ಟಿಯಿಂದಲೂ ಸ್ವರಗಳು ಎನಿಸಿವೆ; ಸ್ (S) ಮತ್ತು ಹ್ (H) ವ್ಯಂಜನಗಳಾಗಿವೆ. ಸೋಹಂ (S-O-H-A-M) ಎಂಬ ಪದದಲ್ಲಿರುವ ಸ್ (S) ಮತ್ತು ಹ್ (H) ಎಂಬ ವ್ಯಂಜನಗಳನ್ನು ತೆಗೆದುಹಾಕಿದರೆ (ಸ್+ಓ+ಹ್+ಅ+ಮ್), ಓ+ಅ+ಮ್ (O, A, M.) ಅಥವಾ ಓಮ್–ಓಂ (OM) ಉಳಿಯುತ್ತದೆ.

ಯಾವಾಗಲೂ ಸ್ವರಗಳು ಸ್ವತಂತ್ರ ಶಬ್ದಗಳು. ವ್ಯಂಜನಗಳು ಸ್ವತಂತ್ರ ಗಳಲ್ಲ. ಅವು ತಮ್ಮಷ್ಟಕ್ಕೆ ತಾವೇ ನಿರಾಧಾರವಾಗಿ ನಿಲ್ಲಲಾರವು. ಏಕೆಂದರೆ ಕ್, ಚ್, ಸ್, ಹ್ ಮೊದಲಾದ ವ್ಯಂಜನಗಳನ್ನು ಮಾತ್ರ ಉಪಯೋಗಿಸಿದರೆ ಅದು ಭಾಷೆಯಾ ಗುವದಿಲ್ಲ, ಅರ್ಥವಾಗುವದಿಲ್ಲ, ಉಚ್ಚಾರ ಮಾಡುವದಕ್ಕೆ ಅವು ಸುಲಭವಲ್ಲ. ವ್ಯಂಜ ನಗಳಿಗೆ ಅ, ಆ, ಇ, ಈ, ಮೊದಲಾದ ಸ್ವರಗಳು ಸೇರಿದಾಗಲೇ ಅವು ಉಪಯೋಗಕ್ಕೆ ಯೋಗ್ಯವಾಗುತ್ತವೆ; ಉಚ್ಚಾರಣೆಗೂ ಅನುಕೂಲವಾಗುತ್ತದೆ. ಸ್ವರಸಹಿತವಾದ ವ್ಯಂಜನಗಳನ್ನು ಸರಿಯಾಗಿ ಜೋಡಿಸುವದರಿಂದ ಅರ್ಥವನ್ನು ಕೊಡುವ ಪದ ಅಥವಾ ಶಬ್ದಗಳಾಗುತ್ತವೆ.

ವ್ಯಂಜನಗಳು ಈ ಪ್ರಪಂಚದಲ್ಲಿ ನಾಮರೂಪಗಳನ್ನು ತೋರಿಸುತ್ತವೆ. ಎಲ್ಲಾ ನಾಮರೂಪಗಳೂ ಈ ಜಗತ್ತಿನಲ್ಲಿ ವ್ಯಂಜನಗಳಂತೆ ಪರತಂತ್ರಗಳು ; ಇನ್ನೊಂದರ ಆಧಾರದ ಮೇಲೆ ಆಶ್ರಯದ ಮೇಲೆ, ತೋರತಕ್ಕವು. ಹಿನ್ನೆಲೆಯಲ್ಲಿ ಪರಮಾತ್ಮನ ಆಧಾ ರವಿಲ್ಲದೆ, ಆಶ್ರಯವಿಲ್ಲದೆ ಯಾವ ನಾಮರೂಪವಾದರೂ ಸ್ವತಂತ್ರವಾಗಿ ಇರಬಲ್ಲದೆ? ತೋರಿಕೊಳ್ಳಬಲ್ಲದೆ? ಪ್ರಕೃತಿ ವಿಲಾಸವೆಲ್ಲ ನಾಮರೂಪಾತ್ಮಕವಾದುದು. ಬುದ್ಧಿಯ ಅರಿವಿಗೆ ನಿಲುಕದಿರುವ ಸತ್ಯಸ್ವರೂಪವಾದ ಚೈತನ್ಯದ ಅಥವಾ ದೇವರ (ಪುರುಷನ) ಆಧಾರವಿಲ್ಲದೆ ಪ್ರಕೃತಿ ವಿಲಾಸವಾದ ನಾಮರೂಪಗಳು ಸ್ವತಂತ್ರವಾಗಿ ತೋರಿಕೊಳ್ಳ ಲಾರವು. ಸಕಲ ನಾಮರೂಪಗಳಿಗೂ ಅಧಿಷ್ಠಾನವಾದ ಕೇವಲ ಸತ್ ರೂಪವೂ ಕೇವಲ ಚಿತ್ ರೂಪವೂ ಕೇವಲ ಆನಂದ ರೂಪವೂ ಆದ ಪರಬ್ರಹ್ಮವು ಓಂಕಾರದ ಅ—ಉ—ಮ (A-U-M) ಗಳಿಂದ ಕ್ರಮವಾಗಿ ಸೂಚಿಸಲ್ಪಟ್ಟಿವೆ, ನಿರ್ದೇಶಿಸಲ್ಪಟ್ಟಿವೆ. ಹೀಗೆ ಸೋಹಂ ಶಬ್ದದಲ್ಲಿರುವ ವ್ಯಂಜನಗಳಾದ ಸ್ (S) ಮತ್ತು ಹ್ (H) ಅಕ್ಷರಗಳು

ತೋರಿಕೆಯ ನಾಮರೂಪಗಳನ್ನೂ ಆ ಶಬ್ದದಲ್ಲಿ ಸಾರಭೂತವಾಗಿ ಅಡಗಿರುವ ಓಂ ಎಂಬ ಶಬ್ದವು ಅಧಿಷ್ಠಾನವಾದ ಇರುವಿಕೆಯನ್ನೂ, ಸದ್ರೂಪವನ್ನೂ ನಿರೂಪಿಸುತ್ತವೆ.

ಸಕ್ಕರೆಯ ಪಾಕದಿಂದ ನಾಯಿ, ಎತ್ತು, ಸಿಂಹ, ಮನುಷ್ಯ ಮೊದಲಾದ ಬೇರೆ ಬೇರೆ ನಾಮರೂಪಗಳುಳ್ಳ ಆಟದ ಸಾಮಾನುಗಳನ್ನು ಮಾಡಿದರೆ ಹೆಸರುಗಳೂ ಆಕೃತಿಗಳೂ ಬೇರೆ ಬೇರೆಯಾದರೂ ಒಂದೇ ವಸ್ತುವಿನಿಂದ ಮಾಡಲ್ಪಟ್ಟಿರುವದರಿಂದ ಎಲ್ಲವೂ ಸಕ್ಕರೆಯೇ ಆಗಿರುವಂತೆ ನಾಮರೂಪ ವಿಶ್ವವೆಲ್ಲಾ ಸಚ್ಚಿದಾನಂದ ರೂಪ ಬ್ರಹ್ಮವೇ ಆಗಿದೆ.

ಸಮುದ್ರಕ್ಕೆ ಹೋಗಿರಿ. ಸಮುದ್ರದಲ್ಲಿ ಸಣ್ಣ ಸಣ್ಣ ಅಲೆಗಳು, ಅಲ್ಲಲ್ಲಿ ದೊಡ್ಡ ದೊಡ್ಡ ಅಲೆಗಳೂ ಇವೆ. ಅಲೆಗಳು ರೂಪದಲ್ಲಿಯೂ ಗಾತ್ರದಲ್ಲಿಯೂ ಚಲನೆಯಲ್ಲಿಯೂ ಬೇರೆ ಬೇರೆಯೇ ಹೊರತು ವಸ್ತುವಿನಲ್ಲಿ ಬೇರೆಯಲ್ಲ. ಎಲ್ಲವೂ ನೀರೇ.

ಪ್ರಕಾಶಮಾನವಾಗಿಯೂ ಥಳಥಳಿಸುತ್ತಲೂ ಕಣ್ಣು ಕೋರೈಸುತ್ತಲೂ ಇರುವ ವಜ್ರವನ್ನು ತೆಗೆದುಕೊಳ್ಳಿ. ಅದು ಕಬ್ಬಿಣವನ್ನೂ ಸುಲಭವಾಗಿ ಕತ್ತರಿಸುವಷ್ಟು ಕಠಿಣವಾಗಿದೆ. ಇದ್ದಿಲನ್ನು ತೆಗೆದುಕೊಳ್ಳಿ. ಅದು ಕಾಗದದ ಮೇಲೆ ಕಪ್ಪು ಗುರುತು ಬಿಡುವಷ್ಟು ಮೃದುವಾಗಿದೆ. ಆದರೆ ಬಹಳ ಕೊಳೆಯಾಗಿಯೂ ಕುರೂಪಿಯಾಗಿಯೂ ಅಸಹ್ಯವಾಗಿಯೂ ನಿಷ್ಪ್ರಯೋಜಕವಾಗಿಯೂ ಇದೆ. ಅಮೌಲ್ಯವಾದ ವಜ್ರಕ್ಕೂ ಕೆಲಸಕ್ಕೆ ಬಾರದ ಇದ್ದಿಲಿಗೂ ವಸ್ತು ಭೇದವೇ ಇಲ್ಲವೆಂದು ರಸಾಯನ ಶಾಸ್ತ್ರಜ್ಞರು ಹೇಳುತ್ತಾರೆ. ಎರಡೂ ಇದ್ದಿಲಿನ ಮೂಲ ಧಾತುವೇ, ಇಂಗಾಲವೇ ಎಂದು ಅವರು ಹೇಳುತ್ತಾರೆ. ಹಾಗಾದರೆ ಅವೆರಡೂ ಬೇರೆ ಬೇರೆಯಾಗಿ ತೋರುವುದಕ್ಕೆ ಕಾರಣ ವೇನು ?– ಎಂದರೆ, ರಚನೆ ಮತ್ತು ರೂಪವೇ ಕಾರಣ. ಇದ್ದಲಿನಲ್ಲಿರುವ ಇಂಗಾಲದ ಪರಮಾಣುಗಳ ಸ್ಥಿತಿಯೂ ರಚನೆಯೂ ವಜ್ರದಲ್ಲಿರುವ ಇಂಗಾಲದ ಪರಮಾಣುಗಳ ಸ್ಥಿತಿಯಿಂದಲೂ ರಚನೆಯಿಂದಲೂ ಬೇರೆಯೇ. ಅಂದರೆ, ಭೇದವಿರುವದೆಲ್ಲಾ ಕೇವಲ ನಾಮರೂಪಗಳಲ್ಲಿ ; ವಸ್ತುವಿನಲ್ಲಿ ಅಲ್ಲ.

ಹೀಗೆಯೇ ಹಿಂದೂ ವೇದಾಂತದ ಪ್ರಕಾರ, ಎಲ್ಲಾ ವಿಭಾಗಗಳಿಗೂ ಭೇದ ಭಾವಗಳಿಗೂ ನಾಮರೂಪಗಳೇ ಕಾರಣ. ನೀವು ಆಳವಾಗಿ ವಸ್ತುಗಳ ಇರುವಿಕೆಯ ತಳಕ್ಕೆ ಮುಳುಗಿ ನಾಮರೂಪಗಳಲ್ಲಿರುವ ತತ್ತ್ವವೇನೆಂದು ಬಿಡಿಸಿ ನೋಡಿದರೆ, ಎಂದೆಂದೂ ಬದಲಾಗದಿರುವ ಶಾಶ್ವತವೂ ನಿರ್ವಿಕಾರವೂ ಆದ ಒಂದು ತತ್ತ್ವವೇ ಎಲ್ಲಾ ಭೇದಭಾವಗಳಿಗೂ ಆಧಾರವಾಗಿದೆ ಎಂಬುದನ್ನು ಕಾಣುತ್ತೀರಿ. ಎಲ್ಲಕ್ಕೂ ಆಧಾರವಾಗಿರುವ ಇರುವಿಕೆಗೆ ಬೇರೆ ಆಧಾರವಿಲ್ಲ. ಅದು ತನಗೆ ತಾನೇ ಆಧಾರ; ಅದು ಸರ್ವತಂತ್ರ ಸ್ವತಂತ್ರ. ಅದನ್ನು ಸ್ವರಗಳಿಗೆ ಹೋಲಿಸಬಹುದು; ನಾಮ ರೂಪಗಳನ್ನು ವ್ಯಂಜನಗಳಿಗೆ ಹೋಲಿಸಬಹುದು. ಸೋಹಂ ಶಬ್ದದಲ್ಲಿರುವ ಸಾರಸತ್ಯವೇ ಓಂ. ಸೋಹಂ

ನಲ್ಲಿರುವ ಪರತಂತ್ರವಾದ ಸ್ ಮತ್ತು ಹ್ ಗಳನ್ನು ಬಿಟ್ಟರೆ ನಮಗೆ ಉಳಿಯುವದು ಓಂ ಎಂಬ ಒಂದೇ ಸತ್ಯ. ಹೀಗೆ ನಿಮ್ಮ ಉಸಿರಿನಲ್ಲಿ ಹರಿಯುತ್ತಿರುವ ನಿಜ ತತ್ತ್ವವೇ ಓಂ. ಪ್ರಪಂಚದ ಎಲ್ಲಾ ಉಸಿರಿನಲ್ಲಿಯೂ ಓಂಕಾರ ಒಂದೇ ಇದೆ. ಸಮಸ್ತ ಭೇದ ಭಾವ ಗಳಿಗೂ ವಿಭಾಗಗಳಿಗೂ ವಿಭಿನ್ನತೆಗಳಿಗೂ ಪ್ರತ್ಯೇಕತೆಗಳಿಗೂ ಹಿಂದೆ ಆಧಾರವಾಗಿರುವ ಶಕ್ತಿಗೂ ತತ್ತ್ವಕ್ಕೂ ಅತ್ಯಂತ ಸ್ವಾಭಾವಿಕವಾದ ಹೆಸರೇ—ವಾಚಕವೇ—ಓಂ. "ತಸ್ಯ ವಾಚಕಃ ಪ್ರಣವಃ".

ಒಂದು ನಾಣ್ಯದ ಮುಮ್ಮುಖವೂ ಹಿಮ್ಮುಖವೂ ಇರುವಂತೆ ಭಾವನೆಯೂ ಭಾಷೆಯೂ ಸಂಬಂಧಪಟ್ಟಿವೆಯೆಂದು ಮ್ಯಾಕ್ಸ್ ಮುಲ್ಲರ್ ಮೊದಲಾದ ತತ್ತ್ವವೇತ್ತರು ಸಿದ್ಧಪಡಿಸಿ ತೋರಿಸಿದ್ದಾರೆ. ಒಂದು ಇನ್ನೊಂದರ ಸಹಾಯವಿಲ್ಲದೆ ಇರಲಾರದು. ಎರಡೂ ಅನ್ಯೋನ್ಯ ಅವಲಂಬಿಗಳು. ಭಾವನೆಯಿಲ್ಲದೆ ಭಾಷೆಯಿಲ್ಲ; ಭಾಷೆಯಿ ಲ್ಲದೆ ಭಾವನೆಯಿಲ್ಲ. ಈ ವಸ್ತುವನ್ನು, ಈ ಮೇಜನ್ನು ಅದರ ವಿಷಯವಾಗಿ ಆಲೋಚಿ ಸದೆ, ಭಾವಿಸದೆ ನೋಡುವದು ಸಾಧ್ಯವೆ? ಬೇರೆ ಯಾವ ವಸ್ತುವನ್ನೇ ಆಗಲಿ ಆ ವಸ್ತುವನ್ನು ಭಾವಿಸದೆ ಗ್ರಹಿಸುವದು ಸಾಧ್ಯವೆ? ಗ್ರಹಿಸು, (perceive) ಇಂದ್ರಿಯ ದಿಂದ ಗ್ರಹಿಸು, ನೋಡು, ಅವಲೋಕಿಸು ಎಂಬುದು ಮನೋವ್ಯಾಪಾರವನ್ನೇ, ಆಲೋಚನೆಯನ್ನೇ ಭಾವನೆಯನ್ನೇ ಸೂಚಿಸುತ್ತದೆ.

**Again, thought and language are the same; you cannot think without language. The infant knows no language and has no thought.**

ಪುನಃ, ಭಾವನೆಯೂ ಭಾಷೆಯೂ ಒಂದೇ. ವಿಚಾರವೂ ಆಲೋಚನೆಯೂ ಕಲ್ಪನೆಯೂ ಭಾಷೆಯೂ ಒಂದೇ. ಭಾಷೆಯಿಲ್ಲದೆ ಭಾವನೆ ಮಾಡುವದು (ಭಾವಿಸು ವದು) ಸಾಧ್ಯವಲ್ಲ; ಭಾಷೆಯಿಲ್ಲದೆ ವಿಚಾರಮಾಡುವದೂ ಆಲೋಚನೆ ಮಾಡುವದೂ ಕಲ್ಪನೆ ಮಾಡುವದೂ ಸಾಧ್ಯವಿಲ್ಲ. ಸಣ್ಣ ಮಗುವಿಗೆ, ಶಿಶುವಿಗೆ, ಹಸುಳೆಗೆ ಭಾಷೆಯು ಬರುವದಿಲ್ಲ. ಆದ್ದರಿಂದ ಅದಕ್ಕೆ ಭಾವನೆಯಾಗಲಿ, ವಿಚಾರವಾಗಲಿ, ಕಲ್ಪನೆಯಾಗಲಿ ಇಲ್ಲ. ಮಗುವು ಆಲೋಚಿಸುವುದಕ್ಕೆ ಪ್ರಾರಂಭಿಸಲಿ, ನೋಡೋಣ. ಅದು ಭಾಷೆ ಯನ್ನು ಕಲಿತ ಹೊರತು ಆಲೋಚಿಸುವದು ಅದಕ್ಕೆ ಸಾಧ್ಯವೇ ಇಲ್ಲ ಎಂಬ ಅನುಭವ ಬರುತ್ತದೆ. ಮಗುವಿನ ಕಿವಿಗಳಲ್ಲಿ ಮಾತೆಯು ಹೆಸರುಗಳನ್ನು ಉಸಿರಿಸುತ್ತಾಳೆ, ಊದು ತ್ತಾಳೆ, ನುಡಿಯುತ್ತಾಳೆ. ಆದರೆ ತಾಯಿಯು ಆ ಹೆಸರುಗಳ ಅರ್ಥವನ್ನು ಮಗುವಿನ ಮನಸ್ಸಿನಲ್ಲಿ ಉಸಿರಿಸುತ್ತಾಳೆ, ಊರುತ್ತಾಳೆ. ಶಬ್ದಕ್ಕೂ ಅದರ ಅರ್ಥಕ್ಕೂ ಇರುವ ಸಂಬಂಧವು ಕುದುರೆಗೂ ಅದರ ಸವಾರನಿಗೂ ಇರುವ ಸಂಬಂಧದಂತೆಯೇ ಇದೆ. ಶಬ್ದಗಳ ಕುದುರೆಯ ಮೇಲೆ ಅರ್ಥದ ಸವಾರನು ಹತ್ತಿ ಮಗುವಿನ ಮನಸ್ಸಿನೊಳಗೆ ಸವಾರಿ ಮಾಡಿಕೊಂಡು ಹೋಗುತ್ತಾನೆ.

ನಾವು ಭಾಷೆಯಿಲ್ಲದೆ ಆಲೋಚಿಸುವದಕ್ಕೆ ಆಗುವದಿಲ್ಲ. ಭಾವನೆಯೂ ಭಾಷೆಯೂ ಒಂದೇ. ಪ್ರಪಂಚವೆಲ್ಲಾ ಭಾವನಾಮಯ; ಪ್ರಪಂಚವೂ ಭಾವನೆಯೂ ಒಂದೇ ಎಂಬುದನ್ನು ನಾವಾಗಲೇ ವಿಚಾರ ಮಾಡಿದ್ದೇವೆ. ಮನಸ್ಸಿನಲ್ಲಿ ಒಂದು ವಸ್ತುವಿನ ಭಾವನೆಯು ಮೂಡದೆ ಆ ವಸ್ತುವಿನ ಅನುಭವ ನಮಗೆ ಆಗುವದಿಲ್ಲ. ಯಾವುದರ ಅನುಭವವು ನಮಗೆ ಆಗುವದಿಲ್ಲವೋ ಅದು ನಮ್ಮ ಭಾಗಕ್ಕೆ ಇಲ್ಲದಂತೆಯೇ ಆಗುತ್ತದೆ. ಆದ್ದರಿಂದ ಭಾವನೆಯ ಮೂಲಕವೇ ನಮಗೆ ಪ್ರಪಂಚದ ಅನುಭವವು ಬರುವದರಿಂದ ಭಾವನೆಯಿಲ್ಲವಾದರೆ ನಮಗೆ ಪ್ರಪಂಚವಿಲ್ಲ. ಗಾಢ ನಿದ್ರೆಯಲ್ಲಿ ಭಾವನೆಯಿಲ್ಲವಾದುದರಿಂದ ನಮಗೆ ಪ್ರಪಂಚವೇ ಇಲ್ಲ. ಎಚ್ಚರ, ಕನಸುಗಳಲ್ಲಿ ಭಾವನೆಯೇಳುವದರಿಂದ ಜೊತೆಗೆ ಪ್ರಪಂಚವೂ ಏಳುತ್ತದೆ. ಆದ್ದರಿಂದ ಭಾವನೆಯೇ ಅಥವಾ ಕಲ್ಪನೆಯೇ ಪ್ರಪಂಚ ; ಪ್ರಪಂಚವೇ ಕಲ್ಪನೆ. ಆದ್ದರಿಂದ ಭಾಷೆಯೂ ಭಾವನೆಯೂ ಒಂದಾಗಿರುವರಿಂದಲೂ, ಭಾವನೆಯೂ ಪ್ರಪಂಚವೂ ಒಂದಾಗಿರುವದರಿಂದಲೂ, ಭಾಷೆಗೂ ಅಥವಾ ಶಬ್ದಕ್ಕೂ ಪ್ರಪಂಚಕ್ಕೂ ಸಂಬಂಧವಿದೆ. ಭಾವನೆಯಿಲ್ಲವಾದರೆ ಈ ಪ್ರಪಂಚದಲ್ಲಿ ಯಾವ ವಸ್ತುವೂ ಕಾಣುವದಿಲ್ಲ. ಒಂದು ವಸ್ತುವನ್ನು ನೋಡುವದಕ್ಕೆ ಪ್ರಯತ್ನ ಮಾಡಿ; ಆದರೆ ಅದರ ಕಲ್ಪನೆಯು ನಿಮ್ಮ ಮನಸ್ಸಿನೊಳಗೆ ಪ್ರವೇಶಿಸುವದಕ್ಕೆ ಬಿಡಬೇಡಿ; ಅದು ಅಸಾಧ್ಯವೆಂಬುದನ್ನು ಮನಗಾಣುತ್ತೀರಿ. ವಾಸ್ತವವಾಗಿ ಆ ಪುಸ್ತಕವನ್ನು ನೋಡುವದೆಂದರೆ ಅದನ್ನು ಭಾವಿಸುವದೇ ಆಗಿದೆ.

ಈ ಪ್ರಪಂಚದ ಎಲ್ಲಾ ವಸ್ತುಗಳೂ ಅವುಗಳ ಸಂಬಂಧವಾದ ಭಾವನೆಗಳ ಪ್ರತಿರೂಪಗಳೇ ಆಗಿವೆ. ಪ್ರಪಂಚವು ಭಾಷೆಗೆ ಒಂದು ನಾಣ್ಯದ ಎರಡು ಮುಖಗಳಂತೆ ಸಂಬಂಧಪಟ್ಟಿದೆ. ಈ ದೃಷ್ಟಿಯಿಂದ ವಿಚಾರಮಾಡಿದರೆ,

"In the beginning there was the Word, the Word was with God and the Word was God."

"ಆದಿಯಲ್ಲಿ (ಸೃಷ್ಟಿಗೆ ಮೊದಲು) ಶಬ್ದ ಒಂದೇ ಇತ್ತು, ಆ ಶಬ್ದವು ದೇವರಲ್ಲಿತ್ತು; ಆ ಶಬ್ದವೇ ದೇವರಾಗಿತ್ತು."

ಈಗ ನಮಗೆ ಇಡೀ ಪ್ರಪಂಚವನ್ನೇ ಸೂಚಿಸತಕ್ಕ, ಪ್ರತಿನಿಧಿಸತಕ್ಕ ಒಂದು ಪದ ಅಥವಾ ಶಬ್ದ ಬೇಕು. ವಿಶ್ವವನ್ನೇ ಆಳುತ್ತಾ ವಿಶ್ವವನ್ನು ಎತ್ತಿ ಹಿಡಿದಿರುವ ವಸ್ತುವನ್ನೂ ಶಕ್ತಿಯನ್ನೂ ಬಲವನ್ನೂ ವೀರ್ಯವನ್ನೂ ಸಾಮರ್ಥ್ಯವನ್ನೂ ಚೈತನ್ಯವನ್ನೂ ಸೂಚಿಸತಕ್ಕ ಯಾವದೊಂದು ಶಬ್ದವು ನಮಗೆ ಬೇಕು.

ಲೋಕದಲ್ಲಿರುವ ಎಲ್ಲಾ ಭಾಷೆಗಳನ್ನೂ ತೆಗೆದುಕೊಂಡರೆ, ಕೆಲವು ಶಬ್ದಗಳು ಅಥವಾ ಅಕ್ಷರಗಳು ಕಂಠದಲ್ಲಿ ಹುಟ್ಟುತ್ತವೆ; ಕೆಲವು ತುಟಿಗಳಿಂದಲೂ ಇನ್ನು ಕೆಲವು ಬಾಯೊಳಗೆ ಹಿಂದುಗಡೆ ಮೇಲಿನ ಅಂಗಳದಲ್ಲಿಯೂ (ತಾಲು—ತಾಲವ್ಯ) ಉಚ್ಚಾರವಾಗುತ್ತವೆ. ಯಾವ ಭಾಷೆಯಲ್ಲಿಯೂ ಕಂಠದ ಕೆಳಗಿನಿಂದ ಹುಟ್ಟುವ ಯಾವದೊಂದು

ಶಬ್ದವೂ ಇಲ್ಲ. ವಾಗಿಂದ್ರಿಯಕ್ಕೆ ಕಂಠವು ಒಂದು ಗಡಿಯಾದರೆ, ತುಟಿಗಳೇ ಇನ್ನೊಂದು ಗಡಿ, ವೇರೆ. ತುಟಿಗಳ ಹೊರಗಿನಿಂದಲೂ ಯಾವ ಶಬ್ದವೂ ಅಕ್ಷರವೂ ಬರುವುದಿಲ್ಲ.

ನಮ್ಮ ಓಂಕಾರದಲ್ಲಿ ಅ (A) ಎಂಬ ಶಬ್ದವು ಅಥವಾ ಅಕ್ಷರವು ಕಂಠದಲ್ಲಿ ಹುಟ್ಟುವದು; ವಾಗಿಂದ್ರಿಯದ ಒಂದು ಸೀಮಾಂತದಿಂದ ಇದು ಬರುತ್ತದೆ.

ಉ (U) ಎಂಬ ಅಕ್ಷರ ಶಬ್ದವು ವಾಗಿಂದ್ರಿಯ ವ್ಯಾಪ್ತಿಯಲ್ಲಿ ಅಂಗಳಿನ ಸಮೀಪದಿಂದ ಸರಿಯಾಗಿ ನಡುವೆ ಉದಿಸಿ ಉರುಳಿ ಬರುತ್ತದೆ.

ಮ್ (M) ಅಥವಾ ಮ ಅಕ್ಷರವು ತುಟಿಗಳಿಂದಲೂ (ಓಷ್ಠ್ಯ) ಮೂಗಿನಿಂದಲೂ (ಅನುನಾಸಿಕ) ಹುಟ್ಟಿ ವಾಗಿಂದ್ರಿಯ ಪ್ರದೇಶದ ತುಟ್ಟ ತುದಿಯಲ್ಲಿ ಉಚ್ಚಾರವಾಗುತ್ತದೆ. ಹೀಗೆ ಅ ಎಂಬ ಸ್ವರವು ಶಬ್ದದ ಉತ್ಪತ್ತಿಸ್ಥಾನದ ಆದಿಯನ್ನೂ, ಉ ಎಂಬ ಅಕ್ಷರವು ಮಧ್ಯಭಾಗವನ್ನೂ, ಮ್ ಎಂಬುದು ಅಂತ್ಯ ಸೀಮೆಯನ್ನೂ (ಸೀಮಾಂತವನ್ನೂ) ಸೂಚಿಸುತ್ತವೆ. ಈ ಮೂರು ಇಡೀ ವಾಗಿಂದ್ರಿಯ ಕ್ಷೇತ್ರವನ್ನೇ ಪೂರ್ತಿಯಾಗಿ ಆವರಿಸುತ್ತವೆ. ಓಂ, ಓಂ ಇದು ಅತ್ಯಂತ ಸ್ವಾಭಾವಿಕವಾದ ನಾಮ. ಇದು ಎಲ್ಲಾ ಭಾಷೆಗಳಿಗೂ, ಆದ್ದರಿಂದ ಎಲ್ಲಾ ಜಗತ್ತಿಗೂ ಪ್ರತೀಕವಾಗಿದೆ. ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಕಂಠದಲ್ಲಿ ಅ ಎಂಬ ಅಕ್ಷರದಂತೆಯೇ ಬೇರೆ ಅಕ್ಷರಗಳೂ ಇವೆ. ಹಾಗೆಯೇ ಉ ಮತ್ತು ಮ್ ಉತ್ಪತ್ತಿಯಾಗುವ ಸ್ಥಾನಗಳಲ್ಲಿಯೂ ಬೇರೆ ಅಕ್ಷರಗಳು ಉತ್ಪತ್ತಿಯಾಗುತ್ತವೆ. ಆದ್ದರಿಂದ ಕಂಠದಲ್ಲಿ ಹುಟ್ಟುವ ಬೇರೆ ಯಾವದಾದರೂ ಅಕ್ಷರವನ್ನು ಸ್ವೇಚ್ಛೆಯಾಗಿ ತೆಗೆದುಕೊಂಡು ಉಕಾರದ ಸ್ಥಾನದಲ್ಲಿ ಹುಟ್ಟುವ ಬೇರೆ ಯಾವದಾದರೂ ಅಕ್ಷರದೊಂದಿಗೂ ಮಕಾರದಂತೆ ತುಟಿಗಳಿಂದ ಉಚ್ಚಾರವಾಗುವ ಬೇರೊಂದು ಅಕ್ಷರದೊಂದಿಗೂ ಸೇರಿಸಿ, ಎಲ್ಲಾ ಭಾಷೆಗಳಿಗೂ ಸಂಕೇತವೆಂದು ಬೇರೊಂದು ಶಬ್ದವನು ಏಕೆ ರಚಿಸಬಾರದು?

ಅ—ಉ—ಮ ಈ ಅಕ್ಷರಗಳ ಅಸಾಧಾರಣ ಮಹತ್ವವನ್ನು ವಿಚಾರಮಾಡಬೇಕು. ಕಂಠದಲ್ಲಿ ಹುಟ್ಟುವ ಸ್ವರಗಳಲ್ಲೆಲ್ಲಾ —ಅ— ಅಕ್ಷರವೇ ಆರಂಭ, ಮೊದಲನೆಯದು; ಹೆಚ್ಚು ಸ್ವಾಭಾವಿಕವಾದುದು. . . . .

ಉ ಎಂಬ ಸ್ವರವು ಉತ್ಪತ್ತಿಯಾಗುವ ಸ್ಥಾನದಲ್ಲಿ ಹುಟ್ಟುವ ಮಿಕ್ಕ ಎಲ್ಲಾ ಶಬ್ದಗಳಲ್ಲಿಯೂ ಉ ಎಂಬುದೇ ಪ್ರಭು, ನಾಯಕ. ಸಾರ್ವಭೌಮ ಎನ್ನಬಹುದು. ಪ್ರತಿಯೊಂದು ಮಗುವೂ ಇದನ್ನು ಸ್ವಾಭಾವಿಕವಾಗಿಯೂ ಸುಲಭವಾಗಿಯೂ ಉಚ್ಚಾರಣೆ ಮಾಡುತ್ತದೆ. ಈ ಅಕ್ಷರವನ್ನು ಅಥವಾ ಶಬ್ದವನ್ನು ಮೂಕನೂ ಸ್ವಾಭಾವಿಕವಾಗಿ ಉಚ್ಚರಿಸುತ್ತಾನೆ. ಯಾರೂ ಕಲಿಸದಿದ್ದರೂ ಇದು ತಾನಾಗಿಯೇ ಬರುವದರಿಂದ ಅದರ

ಜಾತಿಯ ಮಿಕ್ಕೆಲ್ಲಾ ಶಬ್ದಗಳಿಗೂ ಉ ಎನ್ನುವದೇ ಉತ್ತಮೋತ್ತಮವಾದ ಪ್ರತಿನಿಧಿಯಾಗಿದೆ.

ತುಟಿಗಳಿಂದ ಉಚ್ಚಾರವಾಗುವ ಎಲ್ಲಾ ಅಕ್ಷರಗಳಲ್ಲಿ 'ಮ' ಎಂಬ ಅಕ್ಷರವೇ ಶ್ರೇಷ್ಠವಾದುದು. ಅದರಲ್ಲಿ ಇನ್ನೊಂದು ವಿಶೇಷವಿದೆ. 'ಮ' ಎನ್ನುವದು ಅನುನಾಸಿಕವೂ ಆಗಿದೆ. ಉಸಿರಾಡುವ ಮಾರ್ಗವಾದ ಮೂಗಿನೊಳಗಿನ ಪೂರ್ಣಪ್ರದೇಶವನ್ನು 'ಮ' ಅಕ್ಷರವು ವ್ಯಾಪಿಸುತ್ತದೆ. ಆದ್ದರಿಂದ ತುಟಿಗಳಿಂದ ಉಚ್ಚಾರವಾಗುವ ಅಕ್ಷರಗಳಲ್ಲಿ 'ಮ' ಎಂಬುದೇ ಅಸಾಧಾರಣವೂ ರಾಜವೂ ಆದುದು.

ಆದ್ದರಿಂದ ಯಾವುದಾದರೂ ಪರಿಪೂರ್ಣ ಗುಣವುಳ್ಳ ನಾಮವಿದ್ದರೆ ಅದು ಓಂಕಾರವೇ ಸರಿ. ಇದು ಎಲ್ಲಾ ಭಾಷೆಗಳ ಮತ್ತು ಭಾವನೆಗಳ ಪ್ರತೀಕವಾಗಿದೆ, ಪ್ರತಿನಿಧಿಯಾಗಿದೆ, ಸಂಕೇತವೂ ಸೂಚಕವೂ ರೂಪಕವೂ ಆಗಿದೆ. ಇದು ಇಡೀ ಜಗತ್ತಿನ ಪ್ರತಿನಿಧಿಯಾಗಿದೆ, ಪಡಿಯಚ್ಚಾಗಿದೆ.

ಎಲ್ಲಾ ವೇದಾಂತವೂ, –ಅಲ್ಲ– ಹಿಂದುಗಳ ಎಲ್ಲಾ ತತ್ತ್ವ ಶಾಸ್ತ್ರವೂ ಓಂಕಾರದ ವಿವರಣೆಯೇ ಸ್ಪಷ್ಟೀಕರಣವೇ ಆಗಿದೆ. ಓಂಕಾರವು ಇಡೀ ವಿಶ್ವವನ್ನೇ ವ್ಯಾಪಿಸಿದೆ. ಸಮಸ್ತ ಜಗತ್ತಿನಲ್ಲಿಯೂ ಓಂಕಾರವನ್ನು ಒಳಗೊಳ್ಳದಿರುವ, ಓಂಕಾರದಿಂದ ವ್ಯಾಪ್ತವಾಗದಿರುವ ಯಾವ ವಸ್ತುವೂ ಯಾವ ಶಕ್ತಿಯೂ ಯಾವ ನಿಯಮವೂ ಇಲ್ಲ. ಇರುವಿಕೆಯ ಎಲ್ಲಾ ಭೂಮಿಕೆಗಳಲ್ಲಿಯೂ ಎಲ್ಲಾ ಲೋಕಗಳಲ್ಲಿಯೂ ಅಸ್ತಿತ್ವದ (ಇರುವಿಕೆಯ) ಎಲ್ಲಾ ಸ್ಥಿತಿಗಳಲ್ಲಿಯೂ ಅವಸ್ಥೆಗಳಲ್ಲಿಯೂ ಓಂಕಾರವೇ ಆವರಿಸಿದೆ.

ಶಬ್ದಗಳಲ್ಲಿ ಎರಡು ಬಗೆಯಿದೆ, ಒಂದು ಸ್ಪಷ್ಟೋಚ್ಚಾರಣೆಯದು ; ಇನ್ನೊಂದು ಅಸ್ಪಷ್ಟೋಚ್ಚಾರಣೆಯದು. ಒಂದು ವರ್ಣಾತ್ಮಕ; ಇನ್ನೊಂದು ಧ್ವನ್ಯಾತ್ಮಕ. ಈ ಸಂಸ್ಕೃತ ಶಬ್ದಗಳು ತುಂಬಾ ಅರ್ಥವುಳ್ಳದ್ದಾಗಿವೆ. ವರ್ಣಾತ್ಮಕ ಎಂದರೆ ಬರೆಯುವದಕ್ಕೆ ಸಾಧ್ಯವಾದ ಶಬ್ದಗಳು; ಅಕ್ಷರಗಳಿಂದ ಬರೆಯಲ್ಪಡಬಹುದಾದ ಶಬ್ದಗಳು. ಧ್ವನ್ಯಾತ್ಮಕ ಎಂದರೆ ಬರವಣಿಗೆಯಲ್ಲಿ ತೋರಿಸಲು ಸಾಧ್ಯವಿಲ್ಲದ ಶಬ್ದಗಳು. ಎಲ್ಲಾ ಸಾಮಾನ್ಯವಾದ ಭಾಷೆಗಳೂ ವರ್ಣಾತ್ಮಕಗಳೇ. ಭಾವನೆಯ ಭಾಷೆಯು ಧ್ವನ್ಯಾತ್ಮಕ. ಅಕ್ಷರಗಳ ಮತ್ತು ಪದಗಳ ರೂಪದಲ್ಲಿರುವ ಭಾಷೆಗಳಿಂದ ಬರೆದು ಅದನ್ನು ವ್ಯಕ್ತಮಾಡುವದಕ್ಕೆ ಸಾಧ್ಯವಿಲ್ಲ.

ಒಬ್ಬ ಮನುಷ್ಯನು ಒಮ್ಮೆ ನಗುತ್ತಾನೆ; ಇನ್ನೊಮ್ಮೆ ಅಳುತ್ತಾನೆ. ಬರವಣಿಗೆಯ ಭಾಷೆಯಲ್ಲಿ ಇವನ್ನು ಕಾಗದದ ಮೇಲೆ ಬರೆದು ತೋರಿಸುವದಕ್ಕೆ ಸಾಧ್ಯವೆ? ಇವೆಲ್ಲಾ ಧ್ವನ್ಯಾತ್ಮಕ. ಇವು ಸ್ವಾಭಾವಿಕವಾದ ಭಾವನೆಗಳು; ವಿಶಿಷ್ಟವಾದ ಉದ್ದೇಶವುಳ್ಳ ಧ್ವನಿಗಳು ಮಾತ್ರ. ವರ್ಣಾತ್ಮಕ ಶಬ್ದವು ಇದನ್ನು ಸಾಧಿಸಲಾರದು. ನಿಮ್ಮಲ್ಲಿ

ಕೆಲವರು ಪರದೇಶಕ್ಕೆ ಹೋಗಬಹುದು ; ಅಥವಾ ಪರದೇಶದವರು ನಿಮ್ಮಲ್ಲಿಗೆ ಬರ ಬಹುದು. ಅವರ ಭಾಷೆ ನಿಮಗೆ ಅರ್ಥವಾಗುವದಿಲ್ಲ; ನಿಮ್ಮ ಭಾಷೆ ಅವರಿಗೆ ಅರ್ಥ ವಾಗುವದಿಲ್ಲ. ಅವರಿಗೇನೋ ಬೇಕಾಗಿದೆ ; ಏನನ್ನೋ ಕೊಂಡುಕೊಳ್ಳಬೇಕಾಗಿದೆ; ಆದರೆ ಅವರ ಭಾಷೆ ನಿಮಗೆ ಅರ್ಥವಾಗುವದಿಲ್ಲ. ಪ್ರಾಯಶಃ ಅವನಿಗೆ ಹಸಿವಾಗಿರ ಬಹುದು ; ಆಹಾರವು ಬೇಕಾಗಿದೆ; ನಿಮಗೆ ಅವನ ಭಾಷೆಯು ತಿಳಿಯದಿರುವದರಿಂದ ಅವನನ್ನು ಗಮನಿಸುವುದಿಲ್ಲ. ಅವನು ಅಳುವದಕ್ಕೆ ತೊಡಗುತ್ತಾನೆ. ಆಗ ಅದು ನಿಮಗೆ ಅರ್ಥವಾಗುತ್ತದೆ. ಈ ಭಾವನೆಯ ಭಾಷೆಯನ್ನು ಎಲ್ಲರೂ ಅರ್ಥಮಾಡಿ ಕೊಳ್ಳಬಹುದು. ಆದರೆ ವರ್ಣಾತ್ಮಕವಾದ, ಮನುಷ್ಯನಿಂದ ನಿರ್ಮಿತವಾದ ಭಾಷೆಯು ಅದನ್ನು ಕಲಿತವರಿಗೆ ಮಾತ್ರ ಅರ್ಥವಾಗುತ್ತದೆ. ಮನುಷ್ಯನಿಂದ ರಚನೆಯಾದ ಭಾಷೆಯು ಎಲ್ಲ ದೇಶಗಳಲ್ಲಿಯೂ ಅರ್ಥವಾಗುವದಿಲ್ಲ.

ನೀವು ನಕ್ಕರೆ, ನಿಮ್ಮ ಹೊರಗೆ ಅಥವಾ ಒಳಗೆ ಏನೋ ತಮಾಷೆಯೋ ನಿಮಗೆ ಪ್ರಿಯವಾದುದೋ ನಡೆದಿದೆಯೆಂದು ಎಲ್ಲರೂ ತಿಳಿಯುತ್ತಾರೆ. ಇಲ್ಲಿ ಒಬ್ಬ ಮನು ಷ್ಯನು ಒಂದು ವಾದ್ಯವನ್ನು ಬಾರಿಸುತ್ತಾನೆ; ಪಿಟೀಲನ್ನು ಬಾರಿಸುತ್ತಾನೆಂದು ಇಟ್ಟು ಕೊಳ್ಳೋಣ. ಅದರ ಇಂಪು ನಿಮಗೆ ತಿಳಿಯುತ್ತದೆ. ಸಂಗೀತದ ಭಾಷೆಯು ಧ್ವನ್ಯಾತ್ಮಕ. ಆದ್ದರಿಂದ ಅದನ್ನು ಎಲ್ಲಾ ದೇಶದವರೂ ಅರ್ಥಮಾಡಿಕೊಳ್ಳಬಹುದು.

ಷೇಕ್ಸ್‌ಪಿಯರ್ ಮಹಾ ಕವಿಯ 'ಮರ್ಚಂಟ್ ಆಫ್ ವೆನಿಸ್'ನಲ್ಲಿ .........

But music for the time doth change his nature

......ಆದೊಡೆ, ತತ್ಕಾಲದಲಿ ಸಂಗೀತ ಮಾರ್ಪಡಿಪುದವನ ಸ್ವಭಾವವ;

ಸಂಗೀತದ ಭಾಷೆಯು ನಮ್ಮ ಭಾವನೆಯ ಭಾಷೆಯಂತಲ್ಲ. ಅದರಿಂದ ವಿಶಿಷ್ಟವಾದ ಉಪಯೋಗವಿದೆ. ಅದರಲ್ಲಿ ಸೊಗಸು, ಸಮ್ಮೋಹ, ರಂಜನೆ, ಆಕರ್ಷಣೆ ಇದೆ. ನಿಮ್ಮ ಮೇಲೆ ಸಂಗೀತವು ಅಂಥ ಮೋಹಕ ಪರಿಣಾಮವನ್ನು ಏಕೆ ಮತ್ತು ಹೇಗೆ ಮಾಡುತ್ತದೆ ಯೆಂಬುದನ್ನು ವಿಜ್ಞಾನವು ತೋರಿಸುವದಕ್ಕೂ ವಿವರಿಸುವದಕ್ಕೂ ಸಾಧ್ಯವಾಗಬಹುದು; ಅಥವಾ ಆಗದಿರಬಹುದು; ಆದರೆ ಉಂಟಾಗುವ ಪರಿಣಾಮವೇನೋ ವಾಸ್ತವ ವಾದುದು. ಒಂದು ವೇಳೆ ವಿಜ್ಞಾನವು ತೋರಿಸಲಾರದಾದರೆ, ಅದು ವಿಜ್ಞಾನದ ದೋಷವೇ ಹೊರತು ಸಂಗೀತದ ದೋಷವಲ್ಲ. ಹಾಗೆಯೇ ಓಂಕಾರದಲ್ಲಿ ಒಂದು ರಂಜನೆ ಇದೆ. ಅದರಲ್ಲಿ ಆ ಸದ್ಗುಣವೂ ಆ ಪ್ರಭಾವವೂ ಇರುವದರಿಂದಲೇ ಅದನ್ನು ಉಚ್ಚಾ ರಣೆ ಮಾಡುವವರ ಮನಸ್ಸನ್ನು ಅದು ಒಂದು ಹತೋಟಿಗೆ ತರುತ್ತದೆ; ಇದರಿಂದ ಎಲ್ಲಾ ಭಾವನೆಗಳೂ ವಿಚಾರಗಳೂ ನೇರವಾಗಿ ಸಾಮರಸ್ಯವನ್ನು ಪಡೆಯುತ್ತವೆ. ದೇವರಲ್ಲಿ ಒಂದಾಗಿರುವ ಸ್ಥಿತಿಯಲ್ಲಿ ಮನಸ್ಸನ್ನು ಇರಿಸಿ ಓಂಕಾರವು ಅಂತರಾತ್ಮನಿಗೆ ಶಾಂತಿಯನ್ನೂ ವಿಶ್ರಾಂತಿಯನ್ನೂ ನೀಡುತ್ತದೆ. ಇದನ್ನು ವಿವರಿಸುವದಕ್ಕೆ ವಿಜ್ಞಾನಕ್ಕೆ ಸಾಧ್ಯವಿಲ್ಲದಿರಬಹುದು. ಆದರೆ ಪರೀಕ್ಷಾ ಪ್ರಯೋಗಗಳಿಂದ ಸಿದ್ಧಪಡಿಸಿ

ತೋರಿಸಬಹುದಾದ ವಾಸ್ತವ ವಿಷಯ ಇದು. ಪವಿತ್ರವಾದ ಓಂಕಾರದ ಸತ್ತ್ವಭಾವಕ್ಕೆ ಸಂಬಂಧಪಟ್ಟ ಸತ್ಯಕ್ಕೆ ವಿಜ್ಞಾನವೇನಾದರೂ ವಿರುದ್ಧವಾಗಿ ತೀರ್ಮಾನ ಕೊಟ್ಟರೆ ಅದಕ್ಕೆ ವಿನಾಶವೇ ಖಂಡಿತ.

ಓಂ ! ಓಂ ! ಓಂ !

# TRUE SPIRITUALITY AND THE PSYCHIC POWERS

# ನಿಜವಾದ ಅಧ್ಯಾತ್ಮ ಮತ್ತು ಅಭೌತ ಶಕ್ತಿಗಳು

## ಸ್ಯಾನ್‌ಫ್ರ್ಯಾನ್‌ಸಿಸ್ಕೋದಲ್ಲಿ "ಹೆರ್ಮೆಟಿಕ್ ಬ್ರದರ್‌ಹುಡ್ ಹಾಲ್"ನಲ್ಲಿ ತಾ|| 15-12-1902ರಲ್ಲಿ ಮಾಡಿದ ಉಪನ್ಯಾಸ

[ಸ್ಯಾನ್‌ಫ್ರ್ಯಾನ್‌ಸಿಸ್ಕೋ (ಕ್ಯಾಲಿಫೋರ್ನಿಯಾ)ದ ವಾನ್ ನೆಸ್ ಅವೆನ್ಯೂ (at 509 Vane ness Avenue) 509ರಲ್ಲಿ ಸ್ವಾಮಿ ರಾಮತೀರ್ಥರು ನೀಡಿದ ಪ್ರಶ್ನೋತ್ತರ ಪರವಾದ ಉಪನ್ಯಾಸಗಳ ಮಾಲಿಕೆಯಲ್ಲಿ ಇದು ಮೊದಲಿನದು ]

ಸಭ್ಯ ಸ್ತ್ರೀ ಪುರುಷರೂಪದಿಂದಿರುವ ನನ್ನ ಆತ್ಮವೇ !

ಪ್ರಶ್ನೆ: ಭೌತಿಕ ಶಕ್ತಿಗಳಿಗೆ ಮೀರಿದ (ಮಾನಸ) ಶಕ್ತಿ–ಪ್ರಭಾವಗಳನ್ನು (psychic powers) ಬೆಳೆಸಿಕೊಂಡು, ಸತ್ತಿರುವ (ಪ್ರೇತ) ಜೀವರೊಡನೆ ಸಂಬಂಧವನ್ನು ಇಟ್ಟುಕೊಳ್ಳುವದು ಯೋಗ್ಯವೆ? ಉಚಿತವೆ? ಹಾಗಿದ್ದರೆ ಅನುಸರಿಸಬಹುದಾದ ನಿಶ್ಚಿತ ಸಾಧನಸೋಪಾನಗಳು ಏನಾದರೂ ಇವೆಯೆ? ಅವು ಯಾವವು?

ಉತ್ತರ: ಈ ಪ್ರಶ್ನೆಗೆ ಪೂರ್ಣವಾಗಿ ಉತ್ತರ ಕೊಡುವದಕ್ಕಾಗಿ ಅಂಥಾ ವಿಷಯುಗಳ ಸಂಬಂಧವಾಗಿ ವೇದಾಂತವು ಯಾವ ಮನೋಭಾವವನ್ನು ಹೊಂದಿದೆ ಎಂಬುದನ್ನು ವಿವರವಾಗಿ ವಿಚಾರಮಾಡಬೇಕು.

ವೇದಾಂತ ಶಾಸ್ತ್ರದ ಪ್ರಕಾರ ಪ್ರವೃತ್ತಿ–ನಿವೃತ್ತಿ ಎಂಬ ಎರಡು ಮಾರ್ಗಗಳಿವೆ. ಪ್ರವೃತ್ತಿಯೇ ಕರ್ಮಮಾರ್ಗ; ನಿವೃತ್ತಿಯೇ ಜ್ಞಾನಮಾರ್ಗ ಅಥವಾ ತ್ಯಾಗ–ವಿರಾಗಗಳ ಮಾರ್ಗ. ಆ ಕರ್ಮ ಮಾರ್ಗವು ಕ್ರೈಸ್ತ ಮತದವರ (salvation by Acts) "ಕರ್ಮದಿಂದ ಮೋಕ್ಷ" ಎಂಬುದನ್ನು ಹೋಲುತ್ತದೆ. ಜ್ಞಾನಮಾರ್ಗವು ಕ್ರೈಸ್ತ ಮತ ಧರ್ಮ ಶಾಸ್ತ್ರದ (salvation by Faith) 'ನಂಬಿಕೆಯಿಂದಲೂ ಶ್ರದ್ಧಾ ಭಕ್ತಿ ನಿಷ್ಠೆಗಳಿಂದಲೂ ಮೋಕ್ಷ,' ಎನ್ನುವದನ್ನು ಹೋಲುತ್ತದೆ. ಈ ಎರಡಕ್ಕೂ ಇರುವ ವ್ಯತ್ಯಾಸವೇನು?

ಹಿಂದುಗಳ ವಿವರಣೆಯಂತೆ, ಪ್ರವೃತ್ತಿ ಮಾರ್ಗಕ್ಕೆ ಸ್ವಾರ್ಥಮಯವಾದ ವೈಯಕ್ತಿಕ ಶಕ್ತಿ ಸಂಗ್ರಹವೂ ಪ್ರಭುತ್ವದ ವಿಸ್ತರಣೆಯೂ ಆಸ್ತಿ–ಪಾಸ್ತಿ–ಸ್ವತ್ತು ಸಂಪತ್ತುಗಳ ಸಂಗ್ರಹಣ–ವಿಸ್ತರಣಗಳೂ ಗುರಿಯಾಗಿವೆ. ಇದೇ ಕರ್ಮ ಮಾರ್ಗದ ಉದ್ದೇಶ,

ಧ್ಯೇಯ. ಸಂಸ್ಕೃತಿಯ ವಿಕಾಸದ ಯಾವದೋ ಒಂದು ಘಟ್ಟದಲ್ಲಿ ಪ್ರತಿಯೊಬ್ಬರಿಗೂ ಇದು ಅವಶ್ಯವೂ ಸ್ವಾಭಾವಿಕವೂ ಆಗಬಹುದು. ಆದರೆ ಇದರಿಂದ ಅಮೃತತ್ವವಾಗಲೀ ನಿಜ ಜೀವನವಾಗಲೀ ಲಭಿಸುವದಿಲ್ಲ. ಪ್ರತಿಯೊಬ್ಬರೂ ಪ್ರವೃತ್ತಿ ಮಾರ್ಗದಲ್ಲಿ ತಮ್ಮ ತಮ್ಮ ಅನುಭವಕ್ಕಾಗಿ ಪರೀಕ್ಷಾ ಪ್ರಯೋಗಗಳನ್ನು ನಡೆಸಬಹುದು. ಆದರೆ ಈ ಸಂಗ್ರಹವನ್ನೂ ಉತ್ಕಟವಾದ ಇಚ್ಛೆಯನ್ನೂ ಲಾಲಸೆಯನ್ನೂ ಆಶಾಮಯ ಅಜ್ಞಾನ ವನ್ನೂ ಪರಿತ್ಯಜಿಸಿ ಪ್ರವೃತ್ತಿ ಪಥದಿಂದ ಹಿಮ್ಮೆಟ್ಟಿ ತ್ಯಾಗಮಾರ್ಗವನ್ನು ಅನುಸರಿಸತಕ್ಕ ಒಂದು ಕಾಲವು ಪ್ರತಿಯೊಬ್ಬನಿಗೂ ಬರಲೇಬೇಕು. ನಮ್ಮ ಪರಮ ಸುಖ ಪ್ರಾಪ್ತಿಗೆ ಈ ಮಾರ್ಗವು ಅತ್ಯವಶ್ಯವಾಗಿದೆ. ಕರ್ಮ ಮಾರ್ಗವು ಮೂರು ಬಗೆಯಾಗಿದೆ. ಇದು ಕೇವಲ ಪ್ರಾಪಂಚಿಕವಾದುದು. ಸೂಕ್ಷ್ಮ ವಿಭಾಗಗಳನ್ನು ಬಿಟ್ಟರೂ ಲೋಕಗಳು ಮೂರು ಬಗೆಯಾಗಿವೆ.

ಮೊದಲನೆಯದು: ಪ್ರತ್ಯಕ್ಷ ಸಂಸಾರ – ಸ್ಥೂಲ ಭೌತಿಕ ಪ್ರಪಂಚ.
ಎರಡನೆಯದು: ಮಾನಸಿಕ ಸಂಸಾರ– ಸೂಕ್ಷ್ಮ ಲೋಕ.
ಮೂರನೆಯದು: ಅವಿಜ್ಞಾತ ಸಂಸಾರ – ಅರಿಯಲಾಗದ ಲೋಕ.

ಇವುಗಳೇ ಮುಖ್ಯವಾದ ಲೋಕಗಳು. ಇವು ಕೆಲವು ಮಟ್ಟಿಗೆ ಒಂದನ್ನು ಬಿಟ್ಟು ಒಂದು ಇವೆ. ನಾವು ಸ್ವಪ್ನಲೋಕದಲ್ಲಿ ಅಥವಾ ಸೂಕ್ಷ್ಮ ಲೋಕದಲ್ಲಿ ಅಥವಾ ಮಾನಸ ಲೋಕದಲ್ಲಿ ಇರುವಾಗ ಈ ಸ್ಥೂಲ ಪ್ರಪಂಚವು ಹೊರಗೆಳೆಯಲ್ಪ ಟ್ಟಂತೆ ಆಗಿರುತ್ತದೆ. ಮೂರನೆಯ ಲೋಕವಾದ ಅವಿಜ್ಞಾತ ಸಂಸಾರದ ವಿಷಯವೂ ಹಾಗೆಯೇ. ನಮ್ಮ ಗಾಢ ನಿದ್ರಾ ಸ್ಥಿತಿಯನ್ನು ವಿಚಾರಮಾಡಿದರೆ ಆ ಮೂರನೆಯ ಲೋಕದ ಸ್ವಭಾವವೇನು ಎನ್ನುವದು ಸ್ವಲ್ಪ ಮಟ್ಟಿಗೆ ತಿಳಿಯುತ್ತದೆ. ಆ ಸ್ಥಿತಿಯಲ್ಲಿ ದ್ದಾಗ ನೀನು ನಾನು ಎನ್ನುವ ಯಾವ ಸಂಬಂಧವೂ ಇಲ್ಲದ ಅರಿವಿಗೆ ನಿಲುಕದಿರುವ ಲೋಕದಲ್ಲಿರುತ್ತೇವೆ.

ಕ್ರೈಸ್ತರ ಸ್ವರ್ಗ ನರಕಗಳೂ, ಮಹಮ್ಮದೀಯರ ಸ್ವರ್ಗವೂ ಸುಖಧಾಮವೂ, ಹಿಂದುಗಳ ಸ್ವರ್ಗವೂ, ಎಲ್ಲವೂ ಮಾನಸಿಕ ಸಂಸಾರದ ಎರಡನೆಯ ಸೂಕ್ಷ್ಮ ಲೋಕಕ್ಕೆ ಸೇರಿವೆ. ಈ ಎರಡನೆಯ ಲೋಕದಲ್ಲಿ ಅನೇಕ ಸೂಕ್ಷ್ಮ ವಿಭಾಗಗಳಿವೆ. ಅವುಗಳಲ್ಲಿ, ಕೆಲವು ಸೂಕ್ಷ್ಮ ವಿಭಾಗಗಳಲ್ಲಿ ಭೂತ–ಪ್ರೇತ-ಪಿಶಾಚಗಳೂ ಇವೆಯೆಂದು ಕಲ್ಪಿಸುತ್ತೇವೆ. ಈಗ ಈ ವಿವರಗಳಲ್ಲಿ ನಾವು ಪ್ರವೇಶ ಮಾಡಬೇಕಾಗಿಲ್ಲ. ಈ ಪ್ರವೃತ್ತಿ ಮಾರ್ಗವು ಅಥವಾ ಕರ್ಮ ಮಾರ್ಗವು ಕೇವಲ ಪ್ರಾಪಂಚಿಕವಾದುದು. ನಮ್ಮ ಸ್ವಂತ ವೈಯಕ್ತಿಕ ಶಕ್ತಿಯನ್ನೂ ಅಧಿಕಾರವನ್ನೂ ಬೆಳೆಸುವ ಬಯಕೆಗಳೆಲ್ಲಾ ಪ್ರಾಪಂಚಿಕವಾದುದೇ, ಲೌಕಿಕ ವಾದುದೇ, ಸಾಂಸಾರಿಕವಾದುದೇ ಆಗಿದೆ.

ಒಬ್ಬ ಮಹಾ ವಿಜ್ಞಾನಿಯು ಆವಿ ಮತ್ತು ವಿದ್ಯುಚ್ಛಕ್ತಿಗಳ ಮೇಲೆ ಪರೀಕ್ಷಾ ಪ್ರಯೋಗಗಳನ್ನು ನಡೆಸಿ ಆಶ್ಚರ್ಯಕರವಾದ ಸಂಶೋಧನೆಗಳನ್ನು ಮಾಡುತ್ತಾನೆ. ಇದರಿಂದ ಅವನ ವೈಯಕ್ತಿಕ ಶಕ್ತಿಯನ್ನೂ ಬೆಳೆಸಿಕೊಳ್ಳುತ್ತಾನೆ. ಅವನು ಪಂಚಭೂತಗಳ ಮೇಲಿನ ನಮ್ಮ ಪ್ರಭುತ್ವವನ್ನೂ ಬೆಳೆಸುತ್ತಾನೆ, ವಿಸ್ತಾರಗೊಳಿಸುತ್ತಾನೆ. ಅವನಿಗೆ ನಾವು ಕೃತಜ್ಞರಾಗಿದ್ದೇವೆ; ಅವನನ್ನು ಗೌರವಿಸುತ್ತೇವೆ; ಸನ್ಮಾನ ಮಾಡುತ್ತೇವೆ; ಪೂಜ್ಯ ಭಾವದಿಂದಲೂ ಕಾಣುತ್ತೇವೆ. ಆದರೂ ಮೋಕ್ಷಕ್ಕಾಗಿ ಅವನಲ್ಲಿಗೆ ನಾವು ಹೋಗುವುದಿಲ್ಲ. ನಾವು ಅವನಲ್ಲಿಗೆ ಹೋಗಬಹುದು; ಅವನ ಸಂಶೋಧನೆಗಳಿಗೆ ಕೊಡಬೇಕಾದ ಬೆಲೆಯನ್ನೂ ಗೌರವವನ್ನೂ ನಾವು ಕೊಡಬಹುದು; ಆದರೆ ಅವನಲ್ಲಿಗೆ ನಾವು ಪೂರ್ಣಾನಂದಕ್ಕಾಗಿಯೂ ಸರ್ವಸ್ವವಾದ ಪರಮಾತ್ಮನ ಪ್ರಾಪ್ತಿಗಾಗಿಯೂ ಹೋಗುವದಿಲ್ಲ.

ಹಾಗೆಯೇ ಪ್ರಯೋಗವಾದಿಯೂ ಅನುಭವವಾದಿಯೂ ಆದ ಒಬ್ಬ ತತ್ತ್ವಜ್ಞಾನಿ ಇರಬಹುದು. ಮನೋ ವ್ಯಾಪಾರಗಳ ಶಕ್ತಿಯ ಜ್ಞಾನವು ಅವನಿಂದ ನಮಗೆ ಬೆಳೆಯುತ್ತಿರಬಹುದು. ಮನಸ್ಸಿನ, ಬುದ್ಧಿಯ, ಭಾವಗಳ, ರಾಗಭಾವಗಳ ಸ್ವಭಾವಗಳನ್ನೂ ಕ್ರಿಯಾ ಶಕ್ತಿಗಳನ್ನೂ ಅವನಿಂದ ನಾವು ತಿಳಿದಿದ್ದಕ್ಕಾಗಿ ಅವನಿಗೆ ಕೃತಜ್ಞರಾಗಿರಬಹುದು. ಆದರೆ ನಮ್ಮ ಹೃದಯಕ್ಕೆ ಶಾಂತಿಯು ಬೇಕಾದರೆ, ಮಹಾ ಪ್ರಸಿದ್ಧ ತತ್ತ್ವಜ್ಞಾನಿಗಳಾದ ಮಿಲ್ (Mill), ಸ್ಪೆನ್ಸರ್ (Spencer) ಮೊದಲಾದವರಲ್ಲಿ ಕೂಡ ನಾವು ಹೋಗಲಾರೆವು. ಅವರು ಪ್ರತಿಯೊಬ್ಬರೂ ಅವರವರ ಕ್ಷೇತ್ರಗಳಲ್ಲಿಯೂ ಸಾಧನೆಗಳಲ್ಲಿಯೂ ಶ್ಲಾಘ್ಯರೇ, ಗೌರವನೀಯರೇ. ಆದರೆ ಪರಮಾರ್ಥಿಗೆ ಮುಖ್ಯವಾಗಿ ಬೇಕಾದ ವಸ್ತುವನ್ನು ಅವರು ಕೊಡಲಾರರು.

ಮೃತ ಜೀವರೊಡನೆ ಅಥವಾ ಭೂತ—ಪ್ರೇತಗಳೊಡನೆ ಸಂಬಂಧ ಬೆಳೆಸುವದರಲ್ಲಿ ಆಸಕ್ತಿಯುಳ್ಳವರು ಅನೇಕರು ಇಂಡಿಯಾದಲ್ಲಿ ಇದ್ದಾರೆ. ಈ ಭೂಲೋಕ ಮೊದಲನೆಯದಾದರೆ ಎರಡನೆಯ ಲೋಕವೆನಿಸುವ ಪರಲೋಕದ (ಅಥವಾ ಭುವರ್ಲೋಕದ) ಜ್ಞಾನವು ಅವರಿಗೆ ಹೆಚ್ಚಾಗಿದೆ. ಈ ಮೊದಲನೆಯ ಸ್ಥೂಲ ಭೌತಿಕ ಲೋಕದ ವಿಚಾರವಾಗಲೀ ಎರಡನೆಯ ಸೂಕ್ಷ್ಮ ಭೌತಿಕ ಲೋಕದ (ಮಾನಸ ಲೋಕದ) ವಿಚಾರವಾಗಲೀ ಲೌಕಿಕವು ಲೌಕಿಕವೇ, ಸಾಂಸಾರಿಕವೇ ಸರಿ. ಆದರೆ ಸತ್ಯವು ಈ ಎಲ್ಲಾ ಲೋಕಗಳಿಗೂ ಆಧಾರವಾಗಿಯೂ (ಅಧಿಷ್ಠಾನವಾಗಿಯೂ) ಅತೀತವಾಗಿಯೂ ಇದೆ. ಆ ಸತ್ಯದ ನಿಜವಾದ ಜ್ಞಾನ ಅಥವ ಸತ್ಯ ಒಂದೇ ನಮಗೆ ಬೇಕಾದುದು. ಪರಲೋಕದ ಪ್ರೇತ ಜೀವಿಗಳೊಡನೆ ಸಂಬಂಧ ಕಲ್ಪಿಸಿಕೊಂಡಿರುವ ಮಾಂತ್ರಿಕರನ್ನೂ ವಿಜ್ಞಾನಿಗಳನ್ನೂ ತತ್ತ್ವಜ್ಞಾನಿಗಳನ್ನೂ ನಾವು ಸ್ವಾಗತಿಸಬಹುದು, ಗೌರವಿಸಬಹುದು. ಆದರೆ ನಾವು ನಿಜವಾದ ಶಾಂತಿಗಾಗಿಯೂ ನಿಜ ಸುಖಕ್ಕಾಗಿಯೂ ಅವರ ಮುಂದೆ ಮಂಡಿಯೂರಿ ನಮಸ್ಕರಿಸುವುದಿಲ್ಲ, ಬೇಡುವುದಿಲ್ಲ, ಏಕೆಂದರೆ ಅದು ಅವರಿಂದ ದೊರಕುವುದಿಲ್ಲ.

ಒಂದೊಂದು ವೇಳೆ ವಿಜ್ಞಾನಿಯೂ (scientist), ಪ್ರಯೋಗವಾದಿ ತತ್ತ್ವಜ್ಞಾನಿಯೂ (empirical philosopher), ಹಾಗೆಯೇ ಪ್ರೇತ ವಿಜ್ಞಾನಿಯೂ (spiritualist) ನಿಜವಾದ ಪರಮಾತ್ಮ ಜ್ಞಾನವನ್ನೂ ಪಡೆದಿರಬಹುದು. ಅವರವರ ವಿಶಿಷ್ಟ ವಿಜ್ಞಾನಗಳು ಅವರ ನಿಜವಾದ ಪರಮಾತ್ಮ ವಿಜ್ಞಾನಕ್ಕೆ, ರಾಮನ ಗಣಿತ ಶಾಸ್ತ್ರ ವಿಜ್ಞಾನವು ಅವನ ವೇದಾಂತಕ್ಕೆ ಸಂಬಂಧಪಟ್ಟಿರುವಂತೆಯೇ ಸಂಬಂಧಪಟ್ಟಿರುತ್ತವೆ. ರಾಮನು ಲಾಹೋರಿನಲ್ಲಿ ಗಣಿತ ಶಾಸ್ತ್ರದ ಪ್ರಾಧ್ಯಾಪಕ (ಮ್ಯಾಥಮ್ಯಾಟಿಕ್ಸ್ ಪ್ರೊಫೆಸರ್) ನಾಗಿದ್ದನು. ಆದರೆ ಅವನೀಗ ಉಪದೇಶಿಸುತ್ತಿರುವ ವೇದಾಂತಕ್ಕೂ ಅವನ ಗಣಿತ ಶಾಸ್ತ್ರದ ಪರಿಣತಿಗೂ ಏನೂ ಸಂಬಂಧವಿಲ್ಲ. ನಾವು ಎರಡನ್ನೂ ಕಲಬೆರಕೆ ಮಾಡಿ ಗೊಂದಲದಲ್ಲಿ ಬೀಳಬಾರದು.

ಭಾರತ ದೇಶದಲ್ಲಿ ರಾಮನ ಆಪ್ತ ಮಿತ್ರನೊಬ್ಬ ಪ್ರೇತ ವಿಜ್ಞಾನಿ (spiritualist) ಆಗಿದ್ದನು. ಅವನ ಕಣ್ಣುಗಳನ್ನು ಬಲವಾಗಿ ಕಟ್ಟಿ, ಅವನನ್ನು ಬೇರೊಂದು ಸ್ಥಳಕ್ಕೆ ಕರೆದುಕೊಂಡು ಹೋಗಿ ಅವನೆದುರಿನಲ್ಲಿ ಒಂದು ಗಣಿತ ಶಾಸ್ತ್ರದ ಪುಸ್ತಕವನ್ನಿಟ್ಟರು. ಈ ಪುಸ್ತಕವನ್ನು ಅವನೆಂದೂ ನೋಡಿರಲಿಲ್ಲ. ಆದರೆ ಕಣ್ಣುಗಳನ್ನು ಕಟ್ಟಿದ ಆ ಸ್ಥಿತಿಯಲ್ಲಿಯೇ ಅವನು ಆ ಪುಸ್ತಕವನ್ನು ಓದಬಲ್ಲವನಾದ. ಆದರೆ ಆ ಪುಸ್ತಕದಲ್ಲಿ ಅವನಿಗೆ ತಿಳಿಯದಿದ್ದ ಗಣಿತ ಶಾಸ್ತ್ರದ ಅನೇಕ ಸಾಂಕೇತಿಕ ಚಿಹ್ನೆಗಳಿದ್ದುವು. ಆದ್ದರಿಂದ ಅವನು ಒಂದು ಖಾಲಿ ಕಾಗದವನ್ನು ತರಿಸಿಕೊಂಡು ಆ ಪುಸ್ತಕದಲ್ಲಿದ್ದ ಆ ಎಲ್ಲವನ್ನೂ ಬರೆದಿಟ್ಟನು. ಆ ಗುರುತುಗಳ ಸರಿಯಾದ ಹೆಸರುಗಳನ್ನು ಅವನು ಹೇಳಲಾರದವನಾಗಿದ್ದನಾದ್ದರಿಂದ ಅವುಗಳನ್ನೇ ನಕಲು ಮಾಡಿ ಇಟ್ಟನು. ಅವನು ನಿಮ್ಮ ಮನಸ್ಸಿನಲ್ಲಿ ಇರುವದನ್ನೆಲ್ಲಾ ಹೇಳಬಲ್ಲವನಾಗಿದ್ದನು; ಅವನಿಗೆ ತಿಳಿಯದಂತೆ ನೀವು ಪ್ರತ್ಯೇಕವಾಗಿ ನಿಮ್ಮ ಕೈಯಿಂದಲೇ ಏನನ್ನು ಬರೆದಿಟ್ಟರೂ ಅವನು ಅದನ್ನು ಬರೆದಿಡುತ್ತಿದ್ದನು. ಇವನೊಬ್ಬ ಮಂತ್ರವಾದಿಯು ಅಥವಾ ಪ್ರೇತ ವಿಜ್ಞಾನಿ (spiritualist) ಆಗಿದ್ದನು. ಆದರೆ ಇವನು ಪವಿತ್ರ ಮನುಷ್ಯನಾಗಿರಲಿಲ್ಲ ; ಸಂತನಾಗಿರಲಿಲ್ಲ. ಭಕ್ತನೂ ತತ್ತ್ವಜ್ಞಾನಿಯೂ ಆಗಿರಲಿಲ್ಲ; ಪರಮಾರ್ಥ ಮಾರ್ಗದಿಂದ ಅವನು ಬಹಳ ದೂರನಾಗಿದ್ದ. ಅವನಲ್ಲಿ ಎಳ್ಳಷ್ಟೂ ಅದರ ಸಂಸ್ಕಾರವಿರಲಿಲ್ಲ. ಅವನು ಕೇವಲ ಲೌಕಿಕ ಮನುಷ್ಯನಾಗಿದ್ದನು; ಸಂಸಾರಿಯಾಗಿದ್ದನು. ಅವನು ಪವಿತ್ರನಾಗಿರಲಿಲ್ಲ. ಪ್ರೇತ ಸಂಬಂಧವಾದ ವ್ಯವಹಾರ ಜ್ಞಾನವೂ ಒಂದು ವಿಜ್ಞಾನವೆಂದು ಪರಿಗಣಿಸಲ್ಪಟ್ಟಿದೆ. ಅಷ್ಟರ ಮಟ್ಟಿಗೆ ಅದನ್ನು ಗೌರವಿಸಬಹುದು. ಆದರೆ ಎಲ್ಲಾ ಲೋಭ ಮೋಹಗಳನ್ನೂ ನೀವು ಮೆಟ್ಟಿ ಮೇಲೇರುವಂತೆ ಮಾಡಬಲ್ಲ ನಿಜ ಸುಖಕ್ಕೂ ಪೂರ್ಣಾನಂದಕ್ಕೂ ಆ ಕ್ಷುದ್ರ ವಿಜ್ಞಾನಕ್ಕೂ ಯಾವ ಸಂಬಂಧವೂ ಇಲ್ಲ. ಒಂದನ್ನು ಇನ್ನೊಂದನ್ನಾಗಿ ತಪ್ಪು ತಿಳಿಯಬಾರದು.

ಇಂಡಿಯಾದಲ್ಲಿ ಒಬ್ಬ ಮನುಷ್ಯನು ಆರು ತಿಂಗಳ ಕಾಲ, ನೋಡತಕ್ಕವರಿಗೆ ಎಲ್ಲಾ

ಬಗೆಯಿಂದಲೂ ಸತ್ತವನಾಗಿಯೇ ಇದ್ದನೆಂಬುದು ನಮಗೆ ಗೊತ್ತಿದೆ. ಹೀಗೆ ತಾತ್ಕಾಲಿಕ ವಾಗಿ ಪ್ರಾಣ ಶಕ್ತಿಯ ವ್ಯಾಪಾರವನ್ನು ತಡೆದು ನಿಲ್ಲಿಸುವದನ್ನು 'ಖೇಚರಿಮುದ್ರಾ' ಎನ್ನುತ್ತಾರೆ. ಹಠಯೋಗ ಶಾಸ್ತ್ರದಲ್ಲಿ ಈ ಸಾಧನ ಕ್ರಮದ ಪೂರ್ಣ ವಿವರಣೆಯನ್ನು ಕೊಟ್ಟಿದೆ. ಅವನ ದೇಹದಲ್ಲಿ ಜೀವವಿದೆಯೆಂಬ ಯಾವ ಲಕ್ಷಣವೂ ಚಿಹ್ನೆಯೂ ಇರಲಿಲ್ಲ, ಆ ದೇಹದಲ್ಲಿ ಉಸಿರಾಟವಿರಲಿಲ್ಲ, ರಕ್ತ ಸಂಚಾರವಿರಲಿಲ್ಲ, ನಾಡೀ ಸ್ಪಂದನವಿರಲಿಲ್ಲ. ಹೀಗಿದ್ದರೂ ಆ ದೇಹವು ಕೆಡಲಿಲ್ಲ ; ಆರು ತಿಂಗಳ ಮೇಲೆ ಅದರಲ್ಲಿ ಪುನಃ ಪ್ರಾಣ ಸಂಚಾರವಾಯಿತು; ಜೀವದ ಎಲ್ಲಾ ವ್ಯಾಪಾರವೂ ನಡೆಯಿತು. ಈ ಮನುಷ್ಯನು ಆಶ್ಚ ರ್ಯಗಳಲ್ಲೆಲ್ಲಾ ಆಶ್ಚರ್ಯ ಪುರುಷನೆಂದು ಯಾರಾದರೂ ಎಣಿಸಬಹುದು. ಇವನು ಇನ್ನೊಬ್ಬ ಕ್ರಿಸ್ತನಾಗಿದ್ದನು; ಕ್ರಿಸ್ತನಂತೆ ಮೂರು ದಿನಗಳ ಮೇಲೆ ಬದುಕದೆ ಆರು ತಿಂಗಳುಗಳ ಮೇಲೆ ಪುನಃ ಜೀವಂತನಾಗಿದ್ದನು. ಆದರೆ ಈ ಮನುಷ್ಯನು ಸುಖಿಯಾಗಿರುವದಕ್ಕೂ ಮುಕ್ತನಾಗಿರುವದಕ್ಕೂ ಬಹಳ ದೂರವಾಗಿದ್ದನು. ಅವನು ಮಾಡಿದ ಅಪರಾಧಗಳನ್ನೂ ಪಾಪಗಳನ್ನೂ ರಾಮನು ಇಲ್ಲಿ ತಿಳಿಸಬೇಕಾಗಿಲ್ಲ. ಯಾವ ರಾಜನ ಆಸ್ಥಾನದಲ್ಲಿ ಈ ಮನುಷ್ಯನಿದ್ದು ಈ ಸಾಧನವನ್ನು ಮಾಡಿ ಪ್ರದರ್ಶನ ನಡೆಸಿ ದನೋ ಆ ರಾಜನು ಇವನ ಅಪರಾಧಗಳಿಗಾಗಿ ಇವನನ್ನು ತನ್ನ ಸಂಸ್ಥಾನದಿಂದಲೇ ಹೊರಗೋಡಿಸಿದನು.

ನೀರಿನ ಮೇಲೆ ನಡೆಯುತ್ತಿದ್ದ ಇನ್ನೊಬ್ಬ ಮನುಷ್ಯನಿದ್ದನು. ಒಬ್ಬ ನಿಜವಾದ ಸತ್ಪು ರುಷನು ಇದನ್ನು ತಿಳಿದು ನಕ್ಕು, ಈ ಸಿದ್ಧಿಯನ್ನು ಪಡೆಯಲು ಎಷ್ಟು ಕಾಲವು ಹಿಡಿಯಿತೆಂದು ಅವನನ್ನು ಕೇಳಿದನು. ಹದಿನೇಳು ವರ್ಷಗಳು ಬೇಕಾಯಿತೆಂದು ಆ ಯೋಗಿಯು ನುಡಿದನು. ಆ ಸಂತನು ಬಹಳ ವಿಷಾದದಿಂದ "ನಾವು ಎರಡು ಆಣೆ ಗಳನ್ನು ಕೊಟ್ಟರೆ ಅಂಬಿಗನು ದೋಣಿಯನ್ನು ನಡೆಸಿ ನದಿಯನ್ನು ದಾಟಿಸುತ್ತಾನೆ. ಅಯ್ಯೋ ! ಹದಿನೇಳು ವರ್ಷಗಳು ಉಪವಾಸ–ವನವಾಸಗಳಿಂದ ಕಷ್ಟಪಟ್ಟು ತಪಸ್ಸು ಮಾಡಿ, ಕೇವಲ ಎರಡಾಣೆ ಬೆಲೆಯ ಸಿದ್ಧಿಯನ್ನು ಸಂಪಾದಿಸಿದಂತಾಯಿತಲ್ಲ; ಎಷ್ಟು ಶೋಚನೀಯ !" ಎಂದು ಉದ್ಗಾರ ಮಾಡಿದನು.

ವ್ಯಕ್ತಿಯು ಸಂಪಾದಿಸಬಹುದಾದ ಎಲ್ಲಾ ಶಕ್ತಿಗಳಿಗೂ ಮಿತಿಯಿದೆ. ಪ್ರಾಪಂಚಿಕ ವಾದ ಎಲ್ಲಾ ಆಸ್ತಿ–ಪಾಸ್ತಿಗಳೂ ಸಂಪತ್ತೂ ಬಂಧಿಸುವಷ್ಟೇ ಈ ಶಕ್ತಿಗಳೂ ಸಿದ್ಧಿಗಳೂ ಬಂಧಿಸುತ್ತವೆ. ಕಬ್ಬಿಣದ ಸರಪಳಿಯಾದರೇನು ಬಂಗಾರದ ಸರಪಳಿಯಾದರೇನು, ಸರಪಳಿಯು ಸರಪಳಿಯೇ. ಬಂಧಿಸುವದರಲ್ಲಿ ಎರಡೂ ಸಮಾನವೇ.

ವಿಶೇಷ ಶಕ್ತಿಗಳೇ ಒಬ್ಬ ಮನುಷ್ಯನನ್ನು ವಿಶೇಷ ಪವಿತ್ರನನ್ನಾಗಿ ಮಾಡುವದಾಗಿದ್ದರೆ ನಾಯಿಗಳು ಪವಿತ್ರ ಪ್ರಾಣಿಗಳೆನಿಸಬಹುದಾಗಿತ್ತು. ಏಕೆಂದರೆ ಅವುಗಳಿಗೆ ವಾಸನಾ ಗ್ರಹಣಶಕ್ತಿಯು ವಿಶೇಷವಾಗಿದೆ. ದೂರದಲ್ಲಿ ಮರೆಯಲ್ಲಿರುವ ಜಿಂಕೆಗಳನ್ನಾದರೂ

ಅವು ವಾಸನೆಯಿಂದಲೇ ಕಂಡುಹಿಡಿಯುತ್ತವೆ. ಆ ಶಕ್ತಿಯು ಮನುಷ್ಯನಿಗಿಲ್ಲ. ಆದ್ದರಿಂದ ಅವು ಹೆಚ್ಚು ಪವಿತ್ರವಾದವುಗಳೇ ಸರಿ.

ಯಾವನನ್ನಾದರೂ ರಾಜನನ್ನಾಗಿ ಮಾಡಬಲ್ಲ ಒಬ್ಬ ಫಕೀರನಿದ್ದ. ಅವನು ಈ ಶಕ್ತಿಯನ್ನು ಹೇಗೆ ಸಂಪಾದಿಸಿದ್ದನೆಂದು ಅವನನ್ನು ಕೇಳಿದರೆ, ಅನೇಕ ದಿನಗಳು ಉಪ ವಾಸಮಾಡಿ ಅನಂತರ ದನಗಳ ಸಗಣಿಯನ್ನು ತಿನ್ನುತ್ತಿದ್ದುದಾಗಿ ಹೇಳಿದನು. ಅವನು ಯಾವದೋ ರೀತಿಯಲ್ಲಿ ಜೀವನವನ್ನು ನಡೆಸಿ, ಸಾಧನ ಮಾಡಿ ಈ ವಿಶೇಷ ಶಕ್ತಿಯನ್ನು ಪಡೆದಿದ್ದನು. ಒಬ್ಬ ವಿಚಾರಶೀಲ ಮನುಷ್ಯ ಅವನಿಗೆ ಹೇಳಿದ: "ನೀನು ಯಾರಿಗಾ ದರೂ ರಾಜಪದವಿಯನ್ನೂ ರಾಜಭೋಗವನ್ನೂ ಕೊಡಬಲ್ಲೆ; ಆದರೆ ನಿನಗೆ ಮಾತ್ರ ಆಕಳ ಸಗಣಿಯೇ ಗತಿಯಾಯಿತು" ಎಂದನು. ಹೀಗೆ ಭಾರತೀಯರು ವಿಶೇಷ ಶಕ್ತಿಯುಳ್ಳವರನ್ನು ಗೌರವಿಸುತ್ತಾರೆ; ಅಷ್ಟೆ. ಆದರೆ ಎಲ್ಲಾ ಆಶೆಗಳನ್ನೂ ಕೊರತೆ ಗಳನ್ನೂ ಮೀರುವ ಶಕ್ತಿಯು ನಮಗೆ ಆತ್ಮಜ್ಞಾನದಿಂದಲೇ ಬರುತ್ತದೆಯೆಂಬುದನ್ನು ಅವರುಬ ಲ್ಲರು.

ಇಂಡಿಯಾ ದೇಶದಲ್ಲಿ ಒಬ್ಬ ರಾಜನಲ್ಲಿಗೆ ಒಬ್ಬ ಹಠಯೋಗಿಯು ಬಂದನು. ತನ್ನ ವಿಶೇಷ ಸಿದ್ಧಿಯನ್ನು ತೋರಿಸುವದಕ್ಕಾಗಿ ಅವನು ದೀರ್ಘಕಾಲ ಸಮಾಧಿ ಸ್ಥಿತಿ ಯನ್ನು ತಂದುಕೊಂಡನು. ಅವನ ದೇಹದಲ್ಲಿ ಪ್ರಾಣವಿರುವದರ ಚಿಹ್ನೆಯೇ ತೋರು ತ್ತಿರಲಿಲ್ಲ. ಅವನ ದೇಹವನ್ನು ಮಳೆಗಾಳಿಗಳಿಂದ ರಕ್ಷಣೆ ಮಾಡುವದಕ್ಕಾಗಿ ಜನರು ಅವನ ದೇಹದ ಮೇಲೆ ಒಂದು ಕುಟೀರವನ್ನು ಕಟ್ಟಿದರು. ಒಂದು ರಾತ್ರಿ ಭಯಂಕರ ವಾದ ಬಿರುಗಾಳಿ ಬೀಸಿದ್ದರಿಂದ ಯೋಗಿಯ ತಲೆಯ ಮೇಲೆ ಇಟ್ಟಿಗೆಗಳು ಬಿದ್ದು ಪುನಃ ಚೇತನಗೊಂಡನು. ಜೀವ ಬಂದು ಎಚ್ಚರವಾದ ಕೂಡಲೇ ಅವನಾಡಿದ ಮೊದಲ ಮಾತುಗಳೆಂದರೆ, "ಓ ರಾಜ! ನನ್ನ ಸಿದ್ಧಿಯ ಪ್ರದರ್ಶನಕ್ಕಾಗಿ ನೀನು ನನಗೆ ಒಂದು ಕುದುರೆಯನ್ನು ಬಹುಮಾನವಾಗಿ ಕೊಡಬೇಕು. ಒಂದು ಕುದುರೆ, ಒಂದು ಕುದುರೆ, ರಾಜ!" ಅವನು ಹೀಗೆ ಕೂಗಲು ತೊಡಗಿದನು. ಹೀಗೆ, ಇಂಥಾ ಜನರು ಆ ಸಮಾಧಿ ಸ್ಥಿತಿಯಲ್ಲಿರುವವರೆಗೂ ಚೆನ್ನಾಗಿರುತ್ತಾರೆ; ಸುಖವಾಗಿರುತ್ತಾರೆ. ಆದರೆ ಅವರು ಎಚ್ಚರಗೊಂಡು ಸಾಮಾನ್ಯ ಸ್ಥಿತಿಗೆ ಬಂದ ಕೂಡಲೇ ಎಲ್ಲರಂತೆ ಸಂಸಾರಿಗಳೂ ದುಃಖಿ ಗಳೂ ಆಗುತ್ತಾರೆ—ಎಂದು ಭಾರತೀಯರು ಬಲ್ಲರು.

ಒಂದು ಕಠಾರಿಯನ್ನೋ ಖಡ್ಗವನ್ನೋ ಅಥವಾ ಒಂದು ದೊಡ್ಡ ಚಾಕುವನ್ನೋ ಬಾಯಿಯಿಂದ ನುಂಗುವದು, ಚರ್ಮದ ಮೂಲಕ ಸೂಜಿಗಳನ್ನು ಎಳೆಯುವದು ಇನ್ನೂ ಅನೇಕ ಬಗೆಯ ಆಶ್ಚರ್ಯ ಚರ್ಯೆಗಳನ್ನು ತೋರಿಸುವದು ಇಂಡಿಯಾದಲ್ಲಿ ಅತಿಸಾಮಾನ್ಯವಾಗಿವೆ.

**Again, keeping the mind in a state of trance for three or four hours is not a state of trance necessarily brought about by divine wisdom.**

ಮತ್ತೇನೆಂದರೆ, ಮನಸ್ಸನ್ನು ಮೂರು ನಾಲ್ಕು ಗಂಟೆಗಳ ಕಾಲ ಸಮಾಧಿಸ್ಥಿತಿಯಲ್ಲಿ ಇಟ್ಟಿರುವದು, ದಿವ್ಯವಾದ ಆತ್ಮಜ್ಞಾನದಿಂದ ಅವಶ್ಯವಾಗಿ ತರಲ್ಪಟ್ಟ ಸಮಾಧಿ ಸ್ಥಿತಿ (ತನ್ಮಯತಾವಸ್ಥೆ) ಏನಲ್ಲ. ಇಂಡಿಯಾದಲ್ಲಿ ಸಾವಿರಾರು ಜನರು ಅಂಥಾ ಸಮಾಧಿಯನ್ನು ಅಭ್ಯಾಸಮಾಡುತ್ತಾರೆ. ಆದರೆ ಅನೇಕ ಸಂದರ್ಭಗಳಲ್ಲಿ ಅದು ಕೇವಲ "ಪ್ರೊಮೆಥಿಯಸ್ಸನು ಸ್ವರ್ಗದಿಂದ ಬೆಂಕಿಯನ್ನು ಕದ್ದು ತಂದಂತೆ" ವಂಚನೆಯಾಗಿರುತ್ತದೆ. ಸತ್ಯವನ್ನು ಮರೆಮಾಡಿರುವ ಪರದೆಯನ್ನು—ಆವರಣವನ್ನು—ಶಾಶ್ವತವಾಗಿ ತೆಗೆದೊಗೆಯದೆ, ತಾತ್ಕಾಲಿಕವಾಗಿ ಮಾತ್ರ ಸ್ವಲ್ಪ ಸರಿಸಿದಂತೆ ಆಗುತ್ತದೆ—ಅದು.

ಸರೋವರದಲ್ಲಿ ನೀರಿನ ಮೇಲೆ ಹಚ್ಚನೆಯ ಪಾಚಿಯೂ ಎಲೆಗಳೂ ಕಶ್ಮಲಗಳೂ ವಸ್ತ್ರದಂತೆ ಮುಸುಕಿರುತ್ತವೆ. ಈ ಹಸುರು ಮುಸುಕನ್ನು ಸ್ವಲ್ಪ ಸರಿಸಿದರೆ ಸಾಕು, ಕೆಳಗಿನಿಂದ ಸೊಗಸಾದ, ನಿರ್ಮಲವಾದ ನೀರು ಥಳಥಳಿಸುತ್ತದೆ. ಕೊಳೆಯನ್ನು ಸರಿಸಿದ ನಿಮ್ಮ ಕೈಯನ್ನು ಅತ್ತಲಾಗಿ ಸ್ವಲ್ಪ ತೆಗೆದರೆ ಸಾಕು; ಸ್ಫಟಿಕದಂತೆ ಹೊಳೆದ ನೀರನ್ನು ಆ ಹಸುರುಮುಸುಕು ಮತ್ತೆ ಬಂದು ಆವರಿಸುತ್ತದೆ. ಮನಸ್ಸಿನ ಸರೋವರವನ್ನು ನಿರ್ಮಲ ಮಾಡುವದು ಸಮಂಜಸವಾಗಿಯೂ ಸಾಧ್ಯವಾಗಿಯೂ ಇದೆ. ಮನಸ್ಸಿನ ಮೇಲೆ ಮುಚ್ಚಿಕೊಂಡಿರುವ ಹಸುರು ಮುಸುಕನ್ನು ಕೆಲವು ನಿಮಿಷಗಳು ಸರಿಸಿದರೆ ನಮಗೆ ಏಕಾಗ್ರತೆ ಉಂಟಾಗಬಹುದು; ಆದರೆ ಮಾಲಿನ್ಯ, ಚಾಂಚಲ್ಯರೂಪವಾದ ಮನಸ್ಸಿನ ರೋಗಕ್ಕೆ ಇದೇನೂ ಸ್ಥಿರವಾದ ಚಿಕಿತ್ಸೆಯಲ್ಲ. ಆದರೆ ಸರೋವರದ (ಮನಸ್ಸಿನ) ಕೊಳೆಯನ್ನು ಬೇಸರವಿಲ್ಲದಂತೆ ಬಾರಿಬಾರಿಗೂ ತೆಗೆದು ತೆಗೆದು ಹೊರಗೆ ಒಗೆಯುತ್ತಿದ್ದರೆ, ಆ ಹಸುರು ಮುಸುಕು ತೆಳುವಾಗುತ್ತಾ ಹೋಗಿ, ಅಂತ್ಯದಲ್ಲಿ ಇಡೀ ಸರೋವರವೇ ಸ್ವಚ್ಛವಾಗುತ್ತದೆ. ವೇದಾಂತದ ಉದ್ದೇಶವೇ ಅದು ; ಧ್ಯೇಯವೇ ಅದು.

ಮುಟ್ಟಿದರೆ ಕಚ್ಚುವ ವಿಷ ಸರ್ಪವು ಅತಿಶೀತದಲ್ಲಿ ಚೇತನವಿಲ್ಲದೆ, ಸಪ್ಪೆಯಾಗಿ ಸೆಟೆದು ಮಂಡಲ ಹಾಕಿಕೊಂಡು ಚೆಂಡಿನಂತಾಗಿ ಮಲಗಿರುತ್ತದೆ. ಆಗ ಅದನ್ನು ಕೈಯಲ್ಲಿ ಹಿಡಿದರೂ ಕಚ್ಚುವದಿಲ್ಲ ; ಕಚ್ಚಲಾರದು. ಅದನ್ನು ಮನೆಗೆ ತಂದು ಬೆಂಕಿಯ ಹತ್ತಿರ ಸ್ವಲ್ಪ ಬೆಚ್ಚಗೆ ಮಾಡಿದ ಕೂಡಲೇ ಅದು ಚೇತನಗೊಂಡು ಮೈ ನೀಡಿ ಚಾಚಿಕೊಂಡು ಆಗಲೇ ಕಚ್ಚುತ್ತದೆ. ವಿಷವೂ ಕಚ್ಚುವ ಪ್ರವೃತ್ತಿಯೂ ಒಳಗೇ ಇವೆ. ಕಾರಣಾಂತರದಿಂದ ಕೆಲವು ಕಾಲ ಆ ಚಟಕ್ಕೆ ತಡೆಯಾದ ಮಾತ್ರಕ್ಕೆ ಒಳಗಿರುವ ವಿಷವೂ ಕೆಟ್ಟ ಒಲವೂ ನಾಶವಾಗಿರುವುದಿಲ್ಲ. ಕೆಲವರು ಯೋಗಿಗಳು ಅನುಸರಿಸುವ ಏಕಾಗ್ರತೆಗೂ ಸಮಾಧಿ ಸಾಧನೆಗೂ ಆ ಸರ್ಪದ ಸ್ವಭಾವವು ಸರಿಯಾದ ನಿದರ್ಶನವಾಗಬಹುದು. ಅನೇಕ ಜನರು ಸಾಧಿಸುವ ಏಕಾಗ್ರತೆಯಲ್ಲಿ ಮನಸ್ಸಿನ ಸರ್ಪವು ಕೆಲವು ಹೊತ್ತು ಸುಮ್ಮನೆ ಸುತ್ತಿಕೊಂಡು ಬಿದ್ದಿರುತ್ತದೆ. ಈ ಸರ್ಪದ ವಿಷದಂತಗಳೆಂಬ ಆಶೆಗಳು ಕೆಲವು ಹೊತ್ತು ಸತ್ತಂತೆ ತೋರುತ್ತವೆ. ಈ ಪುಟ್ಟ ಮನಸ್ಸು ಸ್ವಲ್ಪ ಹೊತ್ತು ನಿದ್ರಿಸುತ್ತದೆ; ಅಥವಾ ಸಮಾಧಿಯ ಸ್ಥಿತಿಯಲ್ಲಿ ಎಸೆಯಲ್ಪಡುತ್ತದೆ. ಸರ್ಪವು ಶೀತಾಧಿಕ್ಯದಿಂದ ಸೆಟೆದು ಸಿಂಬೆ

ಸುತ್ತಿಕೊಂಡು ನೋಡುವದಕ್ಕೆ ಸತ್ತಂತೆ ಬಿದ್ದಿರುತ್ತದೆ– ಇದೇ ಆಗಿನ ಮನಸ್ಸಿನ ಸ್ಥಿತಿ. ಆದರೆ ಅದು ನಿಜವಾಗಿ ಸತ್ತಿರುವುದಿಲ್ಲ. ಆ ಹಾವನ್ನೇ ಇನ್ನೊಂದು ರೀತಿಯಲ್ಲಿ ಉಪಾಯ (ಯೋಗ)ದಿಂದ ವಶಪಡಿಸಿಕೊಳ್ಳಬಹುದು. ನಾವು ಪುಂಗಿಯನ್ನು ಊದಿ, ಮಂತ್ರಹಾಕಿ, ನಾಗಸ್ವರವನ್ನು ಬಾರಿಸಿ ಸರ್ಪವನ್ನು ಮರುಳು ಮಾಡಬಹುದು, ಮೋಹಗೊಳಿಸ ಬಹುದು. ಅನಂತರ ಜಾಣತನದಿಂದ ಹಾವನ್ನು ಹಿಡಿದು ಅದರ ವಿಷದ ಹಲ್ಲುಗಳನ್ನು ಕಿತ್ತು ಹಾಕಬೇಕು. ದಂತಹೀನವೂ ವಿಷಶೂನ್ಯವೂ ಆದ ಸರ್ಪವನ್ನು ನಿರ್ಭಯವಾಗಿ ಆಡಿಸಿ ವಿನೋದಪಡಬಹುದು. ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುವ ವೇದಾಂತ ಸಾಧನ ಕ್ರಮವೇ ಇದು.

ಕೆಲವರು ಯೋಗಿಗಳು (spiritualists) ತಮ್ಮ ಮನಸ್ಸನ್ನು ಶೀತ ಬಾಧೆ ಯಿಂದ ಸ್ತಬ್ಧವಾದ ಅಥವಾ ಮೂರ್ಛೆಹೊಂದಿದ ಸರ್ಪದ ಸ್ಥಿತಿಯಲ್ಲಿ ಇಟ್ಟುಕೊಂಡಿ ರುತ್ತಾರೆ. ಆಗ ಮನಸ್ಸು ಕೆಲವು ಹೊತ್ತು ಕೃತ್ರಿಮವಾಗಿ ತೆಪ್ಪಗಿರುವದರಿಂದ ಅವರಿಗೆ ಏಕಾಗ್ರತೆಯ ಫಲವಾಗಿ ಆನಂದವೂ ಆಗಬಹುದು. ಆದರೆ ಅವರ ನಿತ್ಯ ಜೀವನದಲ್ಲಿ ಸಹೋದರ–ಸಹೋದರಿಯರೂ, ಬಂಧು ಮಿತ್ರರೂ, ಶತ್ರುಗಳೂ ಬಂದು ಆಶಾ– ಮೋಹಗಳ ಸರ್ಪವನ್ನು ಬಿಸಿ ಮಾಡುತ್ತಾರೆ. ಒತ್ತಾಯದಿಂದ ತೆಪ್ಪಗಿದ್ದ ಸರ್ಪವು ಮತ್ತೆ ಎಚ್ಚರಗೊಂಡು ಹೆಡೆಯೆತ್ತುತ್ತದೆ. ಅದರ ವಿಷದ ಹಲ್ಲನ್ನು ಕಿತ್ತುಹಾಕಿರಲಿಲ್ಲ ; ವಿಷವನ್ನು ನಾಶಮಾಡಿರಲಿಲ್ಲ; ಆದ್ದರಿಂದ ಒಳಗಿರುವ ಮನಸ್ಸು ಪುನಃ ತುಂಟಾಟಕ್ಕೆ ತೊಡಗುತ್ತದೆ. ವಿಷವು ಮೊದಲಿನಂತೆಯೇ ಇರುವದರಿಂದ ಅದರ ಅಪಾಯವು ತಪ್ಪುವದಿಲ್ಲ. ಕೇವಲ ಯಮ–ನಿಯಮಗಳಿಗೆ ಸಂಬಂಧಪಟ್ಟ ಯೋಗ್ಯವಾದ ಶೀಲವೇ ನಿರ್ಮಾಣವಾಗಲಿಲ್ಲ. ನಿಜವಾದ ಪರಮಾರ್ಥವನ್ನೇನೂ ಸಾಧಿಸಲಿಲ್ಲ.

ಅವರಲ್ಲಿ ಅನೇಕ ಜನರು ತಮ್ಮ ವಿಶೇಷ ಶಕ್ತಿಗಳನ್ನು ಮಾರಾಟಕ್ಕಿಟ್ಟು ಹಣ ಸಂಪಾದಿಸಲು ಬಯಸುತ್ತಾರೆ. ಮನಸ್ಸಿನ ಸಂಯಮವು, ಏಕಾಗ್ರತೆಯು, ಧ್ಯಾನ ಯೋಗವು ಸರಿಯಾದ ಸಾಧನವೇ. ಆದರೆ ಎಲ್ಲಾ ಲೋಭ–ಮೋಹಗಳನ್ನು ಮೆಟ್ಟಿ ಮೀರಿ ಮನಸ್ಸಿನ ಸರ್ಪದ ವಿಷದ ಹಲ್ಲನ್ನು ಕಿತ್ತುಹಾಕಬೇಕು. ನಿಮ್ಮ ವಿಚಾರ ಗಳನ್ನೂ ಭಾವನೆಗಳನ್ನೂ ನಡೆನುಡಿಗಳನ್ನೂ ಗುಣ–ಸ್ವಭಾವಗಳನ್ನೂ (ಶೀಲವನ್ನು) ಉತ್ತಮಪಡಿಸಿಕೊಳ್ಳಿ ; (Build your character) : ಇವುಗಳನ್ನು ಮುಖ್ಯವಾಗಿ ಗಮನಿಸಿ, ನೆನಪಿನಲ್ಲಿಟ್ಟುಕೊಂಡು ಸಾಧಿಸಬೇಕು. ಈ ಒಂದೊಂದು ದೌರ್ಬಲ್ಯವನ್ನು ಕಳೆದುಕೊಂಡು ಚಿತ್ತವು ಪೂರಾ ನಿರ್ಮಲವಾದರೆ, ನೀವು ವಿಷದ ಹಲ್ಲುಗಳು ಇಲ್ಲದ ಸರ್ಪವಾಗುತ್ತೀರಿ. ಆಗಲೂ ಅತಿಶೀತದಿಂದ ಸೆಟೆದು ಸುರುಳಿ ಸುತ್ತಿಕೊಂಡು ಮನಸ್ಸು ಸಮಾಧಿಸ್ಥಿತಿಯಲ್ಲಿ ಬಿದ್ದುಕೊಂಡಿರಬಹುದು. ಆದರೆ ನಿಮ್ಮಲ್ಲಿ ಅಜ್ಞಾನ ಮತ್ತು ಲೋಭ—ಮೋಹಗಳ ವಿಷವಿಲ್ಲವಾದುದರಿಂದ ಆ ಸಮಾಧಿ ಸ್ಥಿತಿಯಲ್ಲಿಯೇ ಇರಬೇಕಾದ ಅಗತ್ಯವಿಲ್ಲ. ಈಗ ನಿಮ್ಮ ಕೊಂಡಿಗಳಲ್ಲಿ ವಿಷವಿಲ್ಲ

ವಾದುದರಿಂದಲೂ ನಿಮ್ಮ ಶೀಲವು ಶುದ್ಧವೂ ಭದ್ರವೂ ಇರುವದರಿಂದಲೂ ನಿತ್ಯ ಜೀವನದ ಕಾರ್ಯಕ್ಷೇತ್ರದಲ್ಲಿ ನಿಮಗೆ ಯಾವ ಅಪಾಯವೂ ಒದಗುವುದಿಲ್ಲ.

ಒಬ್ಬ ಮನುಷ್ಯನು ಅಮಲು ಹತ್ತುವ ವರೆಗೂ ಮದ್ಯಪಾನ ಮಾಡುತ್ತಾನೆ. ಆ ಸ್ಥಿತಿಯಲ್ಲಿರುವಾಗ ಅವನು ಐದು ಸಾವಿರ ರೂಪಾಯಿ ಬೆಲೆಬಾಳುವ ತನ್ನ ಮನೆಯನ್ನು ಐದು ನೂರು ರೂಪಾಯಿಗಳಿಗೆ ಮಾರಾಟಮಾಡಿ ಕ್ರಯಪತ್ರವನ್ನು ಬರೆಯುತ್ತಾನೆ. ಇದನ್ನು ಅವನ ಹೆಂಡತಿಯು ತಿಳಿದು, ಕೂಡಲೇ ಅವನಿಗೆ ಹುಳಿ ರಸವನ್ನು (vinegar) ಕುಡಿಯಲು ಕೊಡುತ್ತಾಳೆ. ಇದನ್ನು ಕುಡಿದ ಕೂಡಲೇ ಅವನ ಅಮಲು ಇಳಿಯುತ್ತದೆ. ಇದರಿಂದ, ತನ್ನ ಅಷ್ಟು ದೊಡ್ಡ ಮನೆಯನ್ನು ಅತ್ಯಲ್ಪ ಬೆಲೆಗೆ ಮಾರಿದ ಹುಚ್ಚುತನಕ್ಕಾಗಿ ಅವನಿಗೆ ವಿಷಾದವಾಗುತ್ತದೆ. ಅಮಲಿನ ನೆಪದಿಂದ ಮನೆಯ ಮಾರಾಟವನ್ನು ರದ್ದುಪಡಿಸಬಹುದೆಂದು ಕೋರ್ಟಿಗೆ ಹೋಗುತ್ತಾನೆ. ಕೆಲವು ಯೋಗಸಾಧಕರ ಸ್ಥಿತಿಯೂ ಹೀಗೆಯೇ ಇದೆ. ಧ್ಯಾನಾನಂದದ ಮದವೇರಿದ ಕಾಲದಲ್ಲಿ ತಮ್ಮ ತಂದೆ–ತಾಯಿಗಳನ್ನೂ ಸಹೋದರ–ಸಹೋದರಿಯರನ್ನೂ ಬಂಧು–ಮಿತ್ರರನ್ನೂ ಪತ್ನೀ–ಪುತ್ರರನ್ನೂ ಎಲ್ಲಾ ಹಣವನ್ನೂ ಆಸ್ತಿ–ಪಾಸ್ತಿಗಳನ್ನೂ ಸಮಸ್ತವನ್ನೂ ದೇವರಿಗೆ ಮಾರುತ್ತಾರೆ, ದಾನ ಮಾಡುತ್ತಾರೆ; ಅರ್ಪಣ ಮಾಡುತ್ತಾರೆ. ಅವರು ದೇವರಿಗಾಗಿ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ. ಇದು ಒಳ್ಳೆಯದೇ. ಅವರು ಆಗ ಏಕಾಗ್ರತೆಯಲ್ಲಿ ಏಕೀಭಾವದಲ್ಲಿ ಇರುತ್ತಾರೆ. ಆದರೆ ಸ್ವಲ್ಪ ಕಾಲದ ಮೇಲೆ ಆ ಅಮಲು ಇಳಿದಾಗ, ಪ್ರಾಪಂಚಿಕ ಅಗತ್ಯಗಳೂ ಕೊರತೆಗಳೂ ಆಶೆಗಳೂ ಯೋಗ ಕ್ಷೇಮದ ಚಿಂತೆಗಳೂ ಕರ್ತವ್ಯದ ಒತ್ತಡಗಳೂ ತಮ್ಮ ಇರುವಿಕೆಯನ್ನು ತೋರ್ಪಡಿಸಿಕೊಳ್ಳುತ್ತವೆ. ಅವರಿಗೆ ಹುಳಿರಸವನ್ನು ಕುಡಿಸಿದಂತೆ ಆಗಿ ಈಶ್ವರ ಧ್ಯಾನ ಮತ್ತು ಈಶ್ವರಾರ್ಪಣಗಳ ಅಮಲು ಇಳಿದು, ಅವರು ಪುನಃ ಎಲ್ಲವನ್ನೂ ದೇವರಿಂದ ಹಿಂದಿರುಗಿ ಕಸಿದುಕೊಳ್ಳುತ್ತಾರೆ. ದೇಹವೂ ಮನೆಯೂ ಎಲ್ಲವೂ ತಮ್ಮದೇ ಎಂದು ಅವರು ಭಾವಿಸುತ್ತಾರೆ. ಇದು ಬೇಕು, ಅದು ಬೇಕು ಎಂದು ಬಯಸುತ್ತಾ ನೆರೆಹೊರೆಯವರ ವಸ್ತುಗಳು ಸಹ ಅವರಿಗೆ ಬೇಕಾಗುತ್ತವೆ. ಆದರೆ ನಿಜವಾದ ಶಾಂತಿಯೂ ಸುಖವೂ ದೊರಕಬೇಕಾದರೆ, ಸಕಲವನ್ನೂ ಶಾಶ್ವತವಾಗಿ ದೇವರಿಗೆ ಒಪ್ಪಿಸಿ ಯಾವ ಆಶೆಗೂ ವಶವಾಗದಂತಹ ಅಭೇದ್ಯವಾದ ಶೀಲವನ್ನು ರಚಿಸಿರುವ ಪರಿಪೂರ್ಣತೆಗೇರಬೇಕು. ಆ ಸ್ಥಿತಿಯಲ್ಲಿ ಯಾವ ಚಿಂತೆಯೂ ಇಲ್ಲ; ಯಾವ ಭಯವೂ ಇಲ್ಲ; ಪ್ರಾಪಂಚಿಕವಾದ ಯಾವ ಭರವಸೆಯೂ ಇಲ್ಲ. ನೀವು ಈ ಎಲ್ಲವನ್ನೂ ಮೀರಿ ನಿಲ್ಲುತ್ತೀರಿ.

ವೇದಾಂತದ ಪ್ರಕಾರ, ಒಂದು ಕ್ಷಣ ಪರಮಾತ್ಮನ ಧ್ಯಾನಮಾಡಿದರೆ ಕೆಲವು ಸಿದ್ಧಿಗಳನ್ನು ಪಡೆಯಬಹುದು. ನೀವು ಕ್ರಮವಾಗಿ ತ್ಯಾಗದ ಉನ್ನತ ಶಿಖರಕ್ಕೆ ಏರಿದರೆ, ಸರ್ವವನ್ನೂ ಮನಃಪೂರ್ವಕವಾಗಿ ಸಮರ್ಪಣ ಮಾಡುವದರಲ್ಲಿ ನೀವು ಯಶಸ್ವಿಗಳಾದರೆ, ಇಡೀ ಜಗತ್ತೇ ನಿಮ್ಮದಾಗುವದಿಲ್ಲವೇ?

ನಾವು ಒಬ್ಬ ರಾಜನಲ್ಲಿರುವ ಅಧಿಕಾರಿಯೊಬ್ಬನ ಒಲವನ್ನು ಬಯಸಿದರೆ, ಅವನೊಬ್ಬನ ಸ್ನೇಹವು ಮಾತ್ರ ನಮಗೆ ಲಭಿಸಬಹುದು. ಅವನ ಮೂಲಕ ಮಿಕ್ಕ ಉನ್ನತಾಧಿಕಾರಿಗಳ ಮತ್ತು ರಾಜನ ಪರಿಚಯವು ಆದರೆ ಆಗಬಹುದು ಇಲ್ಲವಾದರೆ ಇಲ್ಲ. ಆದರೆ ನಾವು ಮೊದಲು ರಾಜನನ್ನೇ ಆಶ್ರಯಿಸಿದರೆ ಮಿಕ್ಕ ಅಧಿಕಾರಿಗಳೆಲ್ಲ ತಾವಾಗಿಯೇ ನಮ್ಮನ್ನು ಆಶ್ರಯಿಸಿ ಸ್ನೇಹ ಬೆಳೆಸುತ್ತಾರೆ.

ಇಂಡಿಯಾ ದೇಶದಲ್ಲಿ ಕೆಲವರು ಸಿದ್ಧಿಗಳನ್ನು ಬಯಸಿ ಅವನ್ನು ಸಾಧಿಸುತ್ತಾರೆ. ಇನ್ನು ಕೆಲವರು ಅವುಗಳನ್ನು ತಿರಸ್ಕರಿಸುತ್ತಾರೆ. ಅವರು ವೀತರಾಗಿಗಳಾಗಿ ತ್ಯಾಗ ಜೀವನವನ್ನು ನಡೆಸುತ್ತಾರೆ. ಅವರಿಗೆ ದೇವರೊಬ್ಬನೇ ಬೇಕು. ಈ ಜಗತ್ತಿನಲ್ಲಿ ತ್ಯಾಗವಿಲ್ಲದೆ ಯಾವ ಸಿದ್ಧಿಯೂ ದೊರಕುವುದಿಲ್ಲ. ಆದರೆ ವಿಶಿಷ್ಟ ಸಿದ್ಧಿಗಳನ್ನು ಪಡೆಯುವದರಲ್ಲಿ ತ್ಯಾಗವು ಅಪೂರ್ಣವಾಗಿದೆ. ತ್ಯಾಗವು ಪೂರ್ಣವಾದರೆ ಪ್ರಭುತ್ವವೂ ಪರಿಪೂರ್ಣವಾಗುತ್ತದೆ; ಇಡೀ ಜಗತ್ತೇ ನಿಮ್ಮದಾಗುತ್ತದೆ. ಜ್ಞಾನ–ವೈರಾಗ್ಯಗಳ ನಿವೃತ್ತಿ ಮಾರ್ಗವನ್ನು ಹಿಡಿದವರು ಸಾರ್ವಭೌಮನನ್ನೇ ಆಶ್ರಯಿಸಿದಂತೆ. ನಮ್ಮ ಹೃದಯದಲ್ಲಿಯೇ ಇರುವ ಸಾರ್ವಭೌಮನು ನಮ್ಮ ಸ್ವಾಧೀನವಾದರೆ ಮಿಕ್ಕ ಎಲ್ಲಾ ಅಧಿಕಾರಿಗಳೂ ನಮ್ಮ ಸೇವಕರಾಗುತ್ತಾರೆ. ಇದೇ ಸ್ವಾಭಾವಿಕವಾದ ಮಾರ್ಗ. ಈ ಸಿದ್ಧಿಗಳು ನಿಮ್ಮನ್ನು ಆಶ್ರಯಿಸಬೇಕೇ ಹೊರತು, ನೀವು ಅವನ್ನು ಬಯಸಬಾರದು; ಆಶ್ರಯಿಸಬಾರದು.

ಸೂಕ್ಷ್ಮವಾದ ಮಾನಸ ಶಕ್ತಿಗಳನ್ನು (psychic powers) ಬೆಳೆಸಿಕೊಳ್ಳುವುದು ನ್ಯಾಯವೆ?– ಎಂಬ ಮೂಲ ಪ್ರಶ್ನೆಗೆ, ಇದುವರೆಗೆ ಮಾಡಿರುವ ವಿಚಾರದಲ್ಲಿ ಉತ್ತರ ಸಿಕ್ಕಿರಬಹುದು. ಅಷ್ಟಕ್ಕಾಗಿಯೇ ಮಾಡುವ ಪ್ರಯತ್ನವು ಕೇವಲ ಪ್ರಾಪಂಚಿಕವಾದುದು; ಕ್ಷುದ್ರವಾದುದು. ಸತ್ತು ಹೋಗಿರುವ (ಪ್ರೇತ) ಜೀವರೊಡನೆ ಸಂಪರ್ಕ ಬೆಳೆಸಬಹುದೆಂದು ವೇದಾಂತವು ಹೇಳುತ್ತದೆ; ಅದು ಸಾಧ್ಯ; ಸಂದೇಹವಿಲ್ಲ. ಆದರೆ, ಬದುಕಿರುವ ಜೀವರೊಡನೆ ಸ್ನೇಹ ಸಂಬಂಧ ಬೆಳೆಸುವದು ಅಷ್ಟೇ ವಿಹಿತವಾದುದು ಅಥವಾ ಹೆಚ್ಚು ಹಿತವೂ ವಿಹಿತವೂ ಆದುದು ಅಲ್ಲವೆ? ಮೃತ ಜೀವರು ನಮ್ಮಲ್ಲಿಗೆ ಬರುತ್ತಾರೋ ಅಥವಾ ನಮ್ಮ ಆತ್ಮವೇ ಈ ರೂಪಗಳನ್ನು ಧರಿಸುತ್ತದೆಯೋ ಎಂಬುದು ಒಂದು ಪ್ರಶ್ನೆ, ಒಂದು ಸಮಸ್ಯೆ. ಸ್ಥೂಲ ಭೌತಿಕ ಜಗತ್ತಿನ ದೃಷ್ಟಿಯಿಂದ ಸೂಕ್ಷ್ಮವಾದ ಮಾನಸ ಲೋಕವನ್ನು ನೋಡಿದರೆ ಸತ್ತಿರುವ ಜೀವರೇ (ಅಥವಾ ಇಲ್ಲಿ ಸ್ಥೂಲ ದೇಹವನ್ನು ಬಿಟ್ಟು ಇನ್ನೊಂದು ಜನ್ಮವನ್ನು ಎತ್ತದಿರುವ) ನಿಮ್ಮಲ್ಲಿಗೆ ಬರುತ್ತಾರೆ–ಎನ್ನಬಹುದು. ಆದರೆ ಸತ್ಯದ ದೃಷ್ಟಿಯಿಂದ ಅಥವಾ ಪರಮಾರ್ಥದ ದೃಷ್ಟಿಯಿಂದ, ಸ್ಥೂಲ ಭೌತಿಕವೆನ್ನುವ ಜಗತ್ತಿನಲ್ಲಿ ಕೂಡ "ಇಂಥಾ ವ್ಯಕ್ತಿಯು ನನ್ನನ್ನು ನೋಡಲು ಬಯಸಿದರು" ಎನ್ನುವ ಮಾತು ಸರಿಯಲ್ಲ. ಪರಮಾರ್ಥ ದೃಷ್ಟಿಯಿಂದ ಇದು ತಪ್ಪು. ಏಕೆಂದರೆ ನಿಮ್ಮ ಮುಂದೆ ಆಗಲಿ ಹಿಂದೆ ಆಗಲಿ ಕೆಳಗಾಗಲೀ ಮೇಲಾಗಲೀ

ನಿಂತಿರುವ ವ್ಯಕ್ತಿಯು ನಿಮ್ಮ ಆತ್ಮನೇ, ನೀವೇ ಬೇರೆ ಅಲ್ಲ. ತೋರಿಕೆಯು ಈ ಎಲ್ಲಾ ಭಿನ್ನ ಭಿನ್ನ ರೂಪಗಳಲ್ಲಿ ನೀವೇ ವ್ಯಕ್ತವಾಗಿದ್ದೀರಿ. ಇದೇ ವೇದಾಂತ ಸಿದ್ಧಾಂತ. ವೇದಾಂತದ ದೃಷ್ಟಿಯಿಂದ ಸಹೋದರ, ಮಿತ್ರ, ಶತ್ರು ಎಲ್ಲಾ ನೀವೇ ಆಗಿದ್ದೀರಿ. ಸತ್ತ ಜೀವರು ಬರುತ್ತಾರೆ ಎನ್ನುವದು ನಿಜದ ದೃಷ್ಟಿಯಿಂದ ಸತ್ಯವಲ್ಲ. ಬೇರೆ ರೂಪಗಳಲ್ಲಿಯೂ ಛಾಯೆಗಳಲ್ಲಿಯೂ ತೋರುತ್ತಿರುವದು ನೀವೇ, ಹೊರತು ಬೇರೆಯಲ್ಲ.

ಅಸಾಧಾರಣವಾದ ಮಾನಸ ಶಕ್ತಿಗಳನ್ನೂ ಸಿದ್ಧಿಗಳನ್ನೂ ಸಂಪಾದಿಸುವದಕ್ಕೆ ನಿಶ್ಚಿತವಾದ ಸಾಧನ ಕ್ರಮಗಳಿವೆಯೆ? ಆ ಹಾದಿಯಲ್ಲಿ ಗೊತ್ತಾದ ಹೆಜ್ಜೆಗಳಿವೆಯೆ? – ಇದೇ ಪ್ರಶ್ನೆ. ಹೌದು, ಇವೆ ಎಂಬುದೇ ಉತ್ತರ. ಒಬ್ಬನು ಇಂಜನಿಯರ್ ಆಗಬೇಕಾದರೆ ಅದಕ್ಕೆ ವಿಶಿಷ್ಟವಾಗಿರುವ ಶಿಕ್ಷಣ ಪಡೆಯಬೇಕು. ಒಬ್ಬನು ವೈದ್ಯನಾಗಬೇಕಾದರೆ, ವೈದ್ಯ ಶಾಸ್ತ್ರವನ್ನು ಕಲಿಸುವ ಮೆಡಿಕಲ್ ಕಾಲೇಜ್‌ಗೆ ಹೋಗಬೇಕು. ಇದೇ ರೀತಿಯಲ್ಲಿ ಅಸಾಮಾನ್ಯವಾದ ಮಾನಸ ಶಕ್ತಿಯ ಪ್ರಬಲ ವಿಲಾಸವನ್ನು ನೋಡಬೇಕಾದರೆ ಅದಕ್ಕಾಗಿ ಇರುವ ಸಾಧನ ಕ್ರಮಗಳನ್ನು ಅನುಸರಿಸುವದು ಅತ್ಯವಶ್ಯವೇ ಸರಿ. ಆದರೆ ಅದನ್ನೆಲ್ಲಾ ತಿಳಿಸುವದಕ್ಕೆ ಇದು ಸಮಯವಲ್ಲ. ವಸ್ತುಗಳನ್ನು ಬಿಟ್ಟು ನೆರಳುಗಳನ್ನೂ ಜೀವಂತ ಮಹಾಂತರನ್ನು ಬಿಟ್ಟು ಭೂತ–ಪ್ರೇತ–ಪಿಶಾಚಿಗಳನ್ನೂ ಬೆನ್ನು ಹತ್ತಿ ಓಡಿರೆಂದು ಅಥವಾ ಬೇಟೆಯಾಡಿರೆಂದು ರಾಮನು ಎಂದೂ ಸಲಹೆ ಮಾಡುವದಿಲ್ಲ, ಶಿಫಾರಸು ಮಾಡುವದಿಲ್ಲ, ಪ್ರೋತ್ಸಾಹಿಸುವದಿಲ್ಲ. ಪವಿತ್ರ ಮನುಷ್ಯನಿರುವಲ್ಲಿ ಅವನನ್ನು ಸಮೀಪಿಸಲೂ ಇಣಿಕಿ ನೋಡಲೂ ಅವಕ್ಕೆ ಧೈರ್ಯವಿಲ್ಲ.

ಪಿಶಾಚಿಗಳಿವೆಯೆಂದು ಪ್ರಸಿದ್ಧವಾಗಿದ್ದ ಹಿಮಾಲಯದ ಗುಹೆಯೊಂದರಲ್ಲಿ ರಾಮನು ವಾಸಮಾಡುತ್ತಿದ್ದನು. ಆ ಗುಹೆಯಲ್ಲಿ ಒಂದು ರಾತ್ರಿ ಉಳಿದಿದ್ದರಿಂದಲೇ ಹಲವು ಸಾಧು ಸಂನ್ಯಾಸಿಗಳು ಸತ್ತು ಹೋಗಿರುವರೆಂದು ಸುತ್ತಲಿದ್ದ ಹಳ್ಳಿಯ ಜನರು ಹೇಳುತ್ತಿದ್ದರು. ಕೆಲವರು ಆ ಗುಹೆಯಲ್ಲಿ ಪ್ರವೇಶ ಮಾಡಿದ ಮಾತ್ರಕ್ಕೇ ಭೂತಗಳು ಭಯಪಡಿಸಿದ್ದರಿಂದ ಮೂರ್ಛೆ ಹೊಂದಿದ್ದರೆಂದೂ ಹೇಳುತ್ತಿದ್ದರು. ಆ ಗುಹೆಯಲ್ಲಿಯೇ ವಾಸಮಾಡಬೇಕೆಂಬ ಇಚ್ಛೆಯನ್ನು ರಾಮನು ವ್ಯಕ್ತ ಮಾಡಿದ ಕೂಡಲೇ ಎಲ್ಲರಿಗೂ ಆಶ್ಚರ್ಯವಾಯಿತು. ರಾಮನು ಆ ಗುಹೆಯಲ್ಲಿ ಹಲವು ತಿಂಗಳು ವಾಸ ಮಾಡಿದನು. ಯಾವದೊಂದು ದೆವ್ವವೂ ಅದರ ನೆರಳೂ ಸಹ ಅಲ್ಲಿಗೆ ಬರಲಿಲ್ಲ. ಅವೆಲ್ಲಾ ಪಲಾಯನ ಮಾಡಿರಬೇಕೆಂದು ತೋರುತ್ತದೆ. ನೆರೆಯಲ್ಲಿಯೇ ಹಾವು ಚೇಳುಗಳು ಹೇರಳವಾಗಿದ್ದವು. ಆದರೆ ಅವು ರಾಮನ ಶರೀರಕ್ಕೆ ಯಾವ ಅಪಾಯವನ್ನೂ ಮಾಡಲಿಲ್ಲ.

ಈ ದೇಹವನ್ನು ಬಿಟ್ಟ ಮೇಲೆ ಜೀವನ್ಮುಕ್ತರು ಎಂದೂ ದೆವ್ವ–ಪಿಶಾಚಿಗಳಾಗುವದಿಲ್ಲವೆಂದು ವೇದಾಂತವು ಸಿದ್ಧ ಮಾಡಿ ತೋರಿಸಿದೆ. ತಮ್ಮ ತಮ್ಮ ಚಿತ್ತಭ್ರಾಂತಿಗಳಿಗೆ ಗುಲಾಮರಾಗಿರತಕ್ಕವರೇ ಭೂತ–ಪ್ರೇತಗಳ ರೂಪವನ್ನು ಧರಿಸತಕ್ಕವರು.

ಕೇವಲ ಬದ್ಧಜೀವರೇ ಅಂಥಾ ಛಾಯಾರೂಪಗಳಲ್ಲಿ ವಾಸನಾ ಸರಪಳಿಯಿಂದ ಸೆರೆ ಹಾಕಲ್ಪಡುತ್ತಾರೆ.

ಡಾಕ್ಟರ್ ಜಾನ್‌ಸನ್ನನು ವಾಗ್ಮಿಗಳಲ್ಲೆಲ್ಲಾ ರಾಜನಾಗಿದ್ದನು. ಅವನು ಮಾತಿನಲ್ಲಿ ಆಗಲಿ ವಾದದಲ್ಲಿ ಆಗಲಿ ಯಾರಿಗೂ ಸೋಲುವದೆಂಬುದೇ ಇರಲಿಲ್ಲ. ಯುಕ್ತಿಯಿಂದಲೋ ಕುಯುಕ್ತಿಯಿಂದಲೋ ಯಾವಾಗಲೂ ಜಯವು ಅವನದೇ ಆಗುತ್ತಿತ್ತು.

"If his pistol misses fire he knocks you down with the butt end of it." "ಅವನ ಪಿಸ್ಟಲಿನ ಗುಂಡಿನೇಟು ಒಂದು ವೇಳೆ ತಪ್ಪಿದರೆ, ಅದರ ಹಿಂದಿನ ತುದಿಯಿಂದ ಅವನು ನಿಮ್ಮನ್ನು ಹೊಡೆದು ಕೆಡವುತ್ತಾನೆ." ಎಂದು ಅವನ ವಿಷಯದಲ್ಲಿ ಹೇಳುತ್ತಿದ್ದರು. ಯಾವ ವಾದದಲ್ಲಿ ಆಗಲಿ ಕೊನೆಯ ತೀರ್ಮಾನವನ್ನು ಅವನು ತಾನೇ ಉಳಿಸಿಕೊಳ್ಳುತ್ತಿದ್ದನು. ಆದರೆ ಅಂಥವನು ಒಂದು ದಿನ ಕನಸಿನಲ್ಲಿ ತನ್ನ ವಿರೋಧಿಯಾದ ಬರ್ಕ್ ಮಹಾಶಯನಿಂದ ವಾದದಲ್ಲಿ ಸೋಲಿಸಲ್ಪಟ್ಟಂತೆ ಕಂಡನು. ಜಾನ್‌ಸನ್ನನ ಗುಣ ಸ್ವಭಾವವುಳ್ಳ ಯಾರಿಗಾಗಲೀ ಅದೊಂದು ಭಯಂಕರ ದುಸ್ಸ್ವಪ್ನವೇ ಎಂದು ತೋರುತ್ತಿತ್ತು. ಎಂದೂ ಸೋಲನ್ನು ಕನಸಿನಲ್ಲಿಯೂ ಕಾಣದಿದ್ದ ಜಾನ್‌ಸನ್‌ನಿಗೆ ಇದರಿಂದ ಆಘಾತವೇ ಆಯಿತು. ಕೂಡಲೇ ಅವನು ಎದ್ದು ಕುಳಿತನು; ಸಮಾಧಾನವಿಲ್ಲದೆ ಇತ್ತಿಂದತ್ತ ಗುಡುಗಾಡಿದನು. ಸೋಲಿನ ಕಲ್ಪನೆಯನ್ನೂ ಸಹಿಸಲಾರದ ಮನಸ್ಸಿಗೆ ಹುಚ್ಚೇ ಹಿಡಿದಂತಾಯಿತು. ಅವನಿಗೆ ನಿದ್ರೆ ಬರಲಿಲ್ಲ. ಇನ್ನೂ ಮಧ್ಯರಾತ್ರಿ. ಎಂದೂ ಊಹಿಸದಿದ್ದ ಅವಮಾನವನ್ನು ಅನುಭವಿಸಿದನು. ಆದರೆ ಮನಸ್ಸು ತನ್ನ ಸ್ವಂತ ಸ್ವಭಾವದಲ್ಲಿ –ದೈವೀ ಸ್ವಭಾವದಲ್ಲಿ –ಬಹಳ ಹೊತ್ತು ವಿಶ್ರಾಂತಿಯಿಲ್ಲದೆ ಅಶಾಂತವಾಗಿ ಇರಲಾರದು. ಅವನು ಹೇಗಾದರೂ ತನ್ನನ್ನು ತಾನು ಸಂತೈಸಿಕೊಳ್ಳಲೇಬೇಕಾಗಿತ್ತು; ಸಮಾಧಾನವನ್ನು ತಂದುಕೊಳ್ಳಲೇಬೇಕಾಗಿತ್ತು. ಅವನು ಹೀಗೇಕಾಯಿತೆಂದು ಬಹಳ ಆಲೋಚನೆ ಮಾಡಿದನು. ಕೊನೆಗೆ ಅವನಿಗೆ ನಿಜವು ಹೊಳೆದು ವಿಸ್ಮಯವೂ ಸಂತೋಷವೂ ಆಯಿತು. ಅವನು ತನ್ನ ಕನಸಿನಲ್ಲಿ, ಬರ್ಕ್‌ನಿಂದ ಮಾಡಲ್ಪಟ್ಟ ವಾದವೂ ತನ್ನ ಮನಸ್ಸಿನಿಂದಲೇ ಹೂಡಲ್ಪಟ್ಟವಾದವೆಂದು ಕಂಡುಕೊಂಡನು. ನಿಜವಾದ ಬರ್ಕ್‌ನಿಗೆ ಇದು ಯಾವದೂ ಗೊತ್ತಿರಲಿಲ್ಲ. ಹೀಗೆ ಕನಸಿನಲ್ಲಿ ತಾನೇ ಬರ್ಕ್‌ನಾಗಿಯೂ ತೋರಿಕೊಂಡು ತನ್ನನ್ನು ತಾನು ಜಯಿಸಿದ್ದನು. ಅಲ್ಲಿ ತನ್ನ ಹೊರತು, ತನ್ನ ಮನಸ್ಸಿನ ಹೊರತು ಬೇರೆ ಯಾವದೂ ಇರಲಿಲ್ಲ. ತಾನೇ ಎಲ್ಲವದೂ ಆಗಿದ್ದನು. ಆದ್ದರಿಂದ ನಿಮಗೆ ನೀವೇ ಭೂತ ಪ್ರೇತಗಳಾಗಿಯೂ ಪಿಶಾಚಿಗಳಾಗಿಯೂ ಶತ್ರುಗಳಾಗಿಯೂ ಮಿತ್ರರಾಗಿಯೂ ನೆರೆಹೊರೆಯವರಾಗಿಯೂ ನದೀ–ಸರೋವರ–ಪರ್ವತಗಳಾಗಿಯೂ ನಿಮ್ಮ ಕನಸಿನಲ್ಲಿ ನದಿಗಳನ್ನೂ ಪರ್ವತಗಳನ್ನೂ ಕಾಣುತ್ತೀರಿ. ಅವು ನಿಮ್ಮ ಹೊರಗೆ ನಿಜವಾಗಿ ಇದ್ದರೆ ನದಿಯಿಂದ ಹಾಸಿಗೆಯೆಲ್ಲಾ ನೆನೆದು ಹೋಗಬೇಕಾಗಿತ್ತು ; ಪರ್ವತ ಭಾರದಿಂದ ನೀವೂ ನಿಮ್ಮ ಶಯ್ಯಾ

ಗೃಹವೂ ಎಲ್ಲಾ ಪುಡಿಪುಡಿಯಾಗಬೇಕಾಗಿತ್ತು. ಉಕ್ಕಿ ಹರಿಯುವ ಹೊಳೆಗಳೂ ದೈತ್ಯ ಪರ್ವತಗಳೂ ಎಲ್ಲಾ ನಿಮ್ಮೊಳಗೇ ಇವೆ. ನಿಮ್ಮನ್ನು ನೀವು ಒಂದು ಕಡೆ ಹೊರಗಿನ ವಿಲಾಸದ ಜ್ಞೇಯ ವಿಷಯವಾಗಿಯೂ ಇನ್ನೊಂದು ಕಡೆ ಜ್ಞಾತೃವಾದ ವಿಷಯಿಯಾಗಿಯೂ ಒಡೆದುಕೊಳ್ಳುತ್ತೀರಿ. ನಿಜವಾಗಿ ನೋಡಿದರೆ ವಿಷಯವೂ ನೀವೇ ವಿಷಯಿಯೂ ನೀವೇ. ಆತ್ಮನೂ ನೀವೇ ಅನಾತ್ಮವೂ ನೀವೇ, ಸುಂದರವಾದ ಗುಲಾಬಿಯೂ ನೀವೇ ಅದನ್ನು ಪ್ರೀತಿಸುವ ಬುಲ್‌ಬುಲ್ ಹಕ್ಕಿಯೂ ನೀವೇ. ಪುಷ್ಪವೂ ನೀವೇ ಅದರ ಪರಾಗ ಪಾನಮಾಡುವ ದುಂಬಿಯೂ ನೀವೇ. ಎಲ್ಲವೂ ನೀವೇ. ಭೂತ–ಪ್ರೇತಗಳೂ ನೀವೇ, ದೇವಾಧಿದೇವತೆಗಳೂ ನೀವೇ. ಪಾಪಿಗಳೂ ನೀವೇ, ಪುಣ್ಯವಂತ ಸಂತ ಮಹಾಂತರೂ ನೀವೇ. ಎಲ್ಲಾ ನೀವೇ ಎನ್ನುವದನ್ನು ಅರಿಯಿರಿ, ಭಾವಿಸಿರಿ, ಅನುಭವ ಮಾಡಿರಿ. ನೀವು ಮುಕ್ತರಾಗುತ್ತೀರಿ; ಮುಕ್ತರಾಗಿದ್ದೀರಿ. ಇದೇ ಜ್ಞಾನ–ವೈರಾಗ್ಯಗಳ ತ್ಯಾಗಮಾರ್ಗ, ನಿವೃತ್ತಿ ಮಾರ್ಗ. ನಿಮ್ಮ ಗುರುತ್ವ ಕೇಂದ್ರವನ್ನು ನಿಮ್ಮ ಹೊರಗೆ ಬೀಳಿಸಿದರೆ ನೀವೂ ಬೀಳುತ್ತೀರಿ. ನಿಮ್ಮ ಎಲ್ಲಾ ವಿಶ್ವಾಸವನ್ನೂ ನಂಬಿಕೆಯನ್ನೂ ನೆಚ್ಚಿಕೆಯನ್ನೂ ನಿಮ್ಮೊಳಗೇ ಇಟ್ಟುಕೊಳ್ಳಿ. ಆತ್ಮ ವಿಶ್ವಾಸವನ್ನು ದೃಢವಾಗಿ ಬೆಳೆಸಿರಿ. ನಿಮ್ಮ ಆತ್ಮ ಕೇಂದ್ರದಲ್ಲಿ ನೀವಿದ್ದರೆ ನಿಮ್ಮನ್ನು ಯಾವದೂ ಎಂದೂ ಅಲ್ಲಾಡಿಸಲಾರದು.

# THE SACRED SYLLABLE OM.

## ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ 'ಹೆರ್ಮೆಟಿಕ್ ಬ್ರದರ್‌ಹುಡ್ ಹಾಲ್'ನಲ್ಲಿ ತಾ|| 22 - 12 - 1902 ರಲ್ಲಿ ಮಾಡಿದ ಉಪನ್ಯಾಸ.

My own self in the form of Ladies and Gentlemen,

ಸಭ್ಯ ಸ್ತ್ರೀ ಪುರುಷ ರೂಪದಲ್ಲಿರುವ ನನ್ನ ಆತ್ಮವೇ !

ಹಿಂದೆ ಒಂದು ದಿನ ಪವಿತ್ರವಾದ ಓಂಕಾರ ಮಂತ್ರದ ವಿಷಯವಾಗಿ ಕೆಲವು ವಿಚಾರಗಳನ್ನು ಹೇಳಿತು. ಮತ್ತು ಏಳೆಂಟು ಪಾರಗಳಲ್ಲಿ ಆ ವಿಷಯವನ್ನು ಪೂರೈಸುವದಕ್ಕೆ ಸಾಧ್ಯವಾಗಲಾರದೆಂದೂ ವಿವರಿಸಿತ್ತು. ಈ ಪವಿತ್ರ ಮಂತ್ರದ ಮೇಲೆ ಸಂಸ್ಕೃತ ಭಾಷೆಯಲ್ಲಿ ಅನೇಕ ಗ್ರಂಥಗಳು ಬರೆಯಲ್ಪಟ್ಟಿವೆ; ಇವತ್ತಿಗೂ ಇನ್ನೂ ಬರೆಯಲ್ಪಡುತ್ತಿವೆ. ವಾಸ್ತವವಾಗಿ, ಎಲ್ಲಾ ವೇದಗಳೂ ಎಲ್ಲಾ ವೇದಾಂತಗಳೂ ಹಿಂದೂಗಳ ಎಲ್ಲಾ ಪವಿತ್ರ ಶಾಸ್ತ್ರಗಳೂ ಈ ಓಂಕಾರದಲ್ಲಿಯೇ ಅಡಗಿವೆ.

ಇಂಡಿಯಾದಲ್ಲಿ ಅನೇಕ ಭಿನ್ನ ಭಿನ್ನ ಮತಗಳಿವೆ. ಆದರೆ ಆ ಎಲ್ಲಾ ಮತಗಳವರೂ ಓಂಕಾರಕ್ಕೆ ಹೃತ್ಪೂರ್ವಕವಾದ ಗೌರವವನ್ನು ಸಲ್ಲಿಸುತ್ತಾರೆ. ಹಿಬ್ರೂ (ಯೆಹೂದಿ)ಗಳೂ ಮುಹಮ್ಮದೀಯರೂ ಕ್ರೈಸ್ತರೂ ಎಲ್ಲರೂ ತಮ್ಮ ಪ್ರಾರ್ಥನೆಯನ್ನು ಮುಗಿಸುವಾಗ "Amen" "ಆಮೆನ್" ಎನ್ನುತ್ತಾರೆ. ಮುಹಮ್ಮದೀಯರೂ ಹಾಗೇ ಮಾಡಿದರೂ 'ಆಮೆನ್' ಎನ್ನದೆ "ಅಮೀನ್" ಎನ್ನುತ್ತಾರೆ.

ನಿಮ್ಮ ಸಾಮಾನ್ಯವಾದ ಪ್ರಾರ್ಥನೆಯಲ್ಲಿ "ಆಮೆನ್"ಯಾವಾಗ, ಯಾವ ಉದ್ದೇಶಕ್ಕಾಗಿ ಬರುತ್ತದೆ? ನಿಮ್ಮ ಪ್ರಾರ್ಥನೆಯೆಲ್ಲಾ ಮುಗಿದು, ದೇವರಲ್ಲಿ ಮನಸ್ಸು ಕರಗಿ, ಮಾತು ನಿಲ್ಲುವಾಗ "ಆಮೆನ್" ಎಂದು ಕಣ್ಣು ಮುಚ್ಚಿ ಸುಮ್ಮನಾಗುತ್ತೀರಿ. ದೇವರಲ್ಲಿ ಪೂರಾ ಮನಸ್ಸು– ನಿಮ್ಮ ಇಡೀ ಇರುವಿಕೆಯೇ–ಕರಗಿ ಹೋಗುವ ಸುಮಾರಿನವರೆಗೂ ನಿಮ್ಮ ಹೃದಯದ ಭಾಷೆಯನ್ನೆಲ್ಲಾ ದೇವರ ಸನ್ನಿಧಿಯಲ್ಲಿ ಸುರಿಯುತ್ತ ಹೋಗುತ್ತೀರಿ. ಅವರ್ಣನೀಯವನ್ನೂ ಅನಿರ್ವಚನೀಯವನ್ನೂ ಸೇರುವಲ್ಲಿ "ಆಮೆನ್" ಇದೆ. ಹಾಗಾದರೆ, ಆಮೆನ್ ಎಂದರೆ ಯಾವದು? ಅದು ಓಂ ಹೊರತು ಬೇರೆಯಲ್ಲ. ನಿಮ್ಮ ಎಲ್ಲಾ ಪವಿತ್ರ ಪ್ರಾರ್ಥನೆಗಳಲ್ಲಿಯೂ ಮಾತಿನ ಕೊನೆ ಎಂಬ ವೇದಾಂತದ ಅರ್ಥವನ್ನೇ ಕೊಡುವ ಸ್ಥಾನದಲ್ಲಿ ಆಮೆನ್ ಬರುತ್ತದೆ. ಅದು ಬಹಳ ಮಟ್ಟಿಗೆ ವೇದಾಂತದ ಸಾರವಾದ ಓಂಕಾರದ ಪ್ರತೀಕವೇ ಪ್ರತಿನಿಧಿಯೇ ಆಗಿದೆ.

ಜ್ಞಾನದ ಕೊನೆ, ಮಾತಿನ ಕೊನೆ ಎಂಬುದು ವೇದಾಂತದ ವಾಚ್ಯಾರ್ಥ. ಎಲ್ಲಾ ಭಾವನೆಯೂ ಎಲ್ಲಾ ವಿಚಾರವೂ ಎಲ್ಲಾ ಮಾತೂ ನಿಂತ ಸ್ಥಿತಿಯೇ ವೇದಾಂತ. ಹಿಂದೂಗಳಲ್ಲಿ ಓಂ ಎಂಬ ಮಂತ್ರವು ಸಂಪೂರ್ಣ ವೇದಾಂತವನ್ನು ಸೂಚಿಸುತ್ತದೆ. ಅ—ಉ—ಮ ಅಕ್ಷರಗಳ ಸಂಯುಕ್ತ ಶಬ್ದವಾದ ಓಂಕಾರವನ್ನು ವೇದದಲ್ಲಿ ಯಾವ ಅರ್ಥದಲ್ಲಿ ಉಪಯೋಗಿಸಿದೆ ಎಂಬುದನ್ನು ಈಗ ನಿಮ್ಮ ಗಮನಕ್ಕೆ ತರುತ್ತದೆ.

ತಂತ್ರ ಶಾಸ್ತ್ರಜ್ಞರು ಓಂಕಾರವನ್ನು ತಮ್ಮ ರೀತಿಯಲ್ಲಿ ವಿವರಿಸುತ್ತಾರೆ. ಶೈವರೂ ವೈಷ್ಣವರೂ ಮಿಕ್ಕ ಎಲ್ಲಾ ಹಿಂದೂ ಮತದವರೂ ತಮ್ಮ ತಮ್ಮ ವಿಶಿಷ್ಟ ರೀತಿಯಿಂದ ಓಂಕಾರವನ್ನು ವ್ಯಾಖ್ಯಾನ ಮಾಡುತ್ತಾರೆ. ಆದರೆ ಈಗ ನಿಮಗೆ ತಿಳಿಸುವ ಅರ್ಥ ವಿವರಣೆಯು ಸರ್ವಸಮ್ಮತವಾದುದು. ವೇದಾಂತದ ಮಹಾ ಉಗಮವೇ ಓಂಕಾರ.

ಓಂ ಎಂಬ ಶಬ್ದದಲ್ಲಿ ಅ—ಉ—ಮ ಗಳು ಇವೆ. ವೇದಾಂತದ ಬೋಧೆಯ ಪ್ರಕಾರ 'ಅ' ಎನ್ನುವ ಶಬ್ದವು ಅಥವಾ ಅಕ್ಷರವು ಜಾಗ್ರದವಸ್ಥೆಯಲ್ಲಿ ಸ್ಥೂಲವಾದ ಇಂದ್ರಿಯಗಳಿಗೆ ಗೋಚರವಾಗುವ ಸ್ಥೂಲ ಭೌತಿಕ ವೆನ್ನುವ ವಿಶ್ವಕ್ಕೆ ಪ್ರತಿನಿಧಿಯಾಗಿದೆ. ಪ್ರತೀಕವಾಗಿದೆ. ಕನಸಿನ ಎಲ್ಲಾ ಅನುಭವಗಳನ್ನೂ 'ಉ' ಎಂಬ ಶಬ್ದವು ಸೂಚಿಸುತ್ತದೆ. ಕನಸಿನಲ್ಲಿ ಕಾಣುವ ದ್ರಷ್ಟೃವಾದ ವಿಷಯಿಯೂ ದೃಶ್ಯವಾದ ವಿಷಯವೂ 'ಉ' ಎಂಬ ಶಬ್ದದಿಂದ ಸೂಚಿಸಲ್ಪಡುತ್ತದೆ. 'ಉ' ಎಂಬದು ಮಾನಸಿಕವಾದ ಸೂಕ್ಷ್ಮ ಭೂಮಿಕೆಯನ್ನು ಭೂತಪ್ರೇತಗಳ ಲೋಕವನ್ನೂ ಸ್ವರ್ಗ ನರಕಗಳನ್ನೂ ನಿರ್ದೇಶಿಸುತ್ತದೆ. ಗಾಢ ನಿದ್ರೆಯಲ್ಲಿಯೂ ಎಚ್ಚರದಲ್ಲಿಯೂ ಅರಿವಿಗೆ ನಿಲುಕದಿರುವ (ಅಜ್ಞೇಯವಾದ) ಎಲ್ಲವನ್ನೂ 'ಮ್' ಎಂಬ ಶಬ್ದವು ಸೂಚಿಸುತ್ತದೆ; ಬುದ್ಧಿಯ ಗ್ರಹಿಕೆಯನ್ನು ಮೀರಿದ ಎಲ್ಲವನ್ನೂ ಇದು ಧ್ವನಿಸುತ್ತದೆ.

ಹೀಗೆ ಓಂ ಎಂಬ ಶಬ್ದವು ಅಥವಾ ಆ ಮಂತ್ರದಲ್ಲಿರುವ "ಅ—ಉ—ಮ"ಗಳು ಮನುಷ್ಯನ ಎಚ್ಚರ—ಕನಸು—ನಿದ್ರೆ ಎಂಬ ಮೂರು ಬಗೆಯ ಅನುಭವಗಳನ್ನೂ ಸ್ಥೂಲ ಸೂಕ್ಷ್ಮಾದಿಗಳೆಂಬ ಮೂರು ಬಗೆಯ ಲೋಕಗಳನ್ನೂ ವ್ಯಾಪಿಸಿವೆ ಓಂಕಾರದಲ್ಲಿ ಅಮಾತ್ರ ಎನ್ನುವ ಸಾಮಾನ್ಯ ತತ್ತ್ವವಿದೆ. ಮೂರು ಬಗೆಯ ದೃಶ್ಯ ವಿಲಾಸಗಳನ್ನೂ ವ್ಯಾಪಿಸಿ ಅಂತರ್ಯಾಮಿಯಾಗಿ ವಿಕಾರ—ವಿನಾಶಗಳಿಲ್ಲದ ಸರ್ವಾಧಾರವಾದ ಪರಮಾರ್ಥ ತತ್ತ್ವವೇ ಅಮಾತ್ರವು. ಇನ್ನೊಂದು ಉಪನ್ಯಾಸದಲ್ಲಿ ಈ ಅಮಾತ್ರವನ್ನು ಪೂರ್ಣವಾಗಿ ವಿಚಾರಮಾಡುತ್ತದೆ. ಓಂ ಎಂಬದು ಸಮಸ್ತವನ್ನೂ ಸೂಚಿಸುತ್ತದೆ ಎಂದು ಮಾತ್ರ ಈಗ ಹೇಳಿದರೆ ಸಾಕು.

ಯೂರೋಪ್—ಅಮೆರಿಕಾ ದೇಶಗಳ ಎಲ್ಲಾ ತತ್ವಶಾಸ್ತ್ರಗಳೂ ಎಚ್ಚರವೆಂಬ ಒಂದು ಅವಸ್ಥೆಯ ಅನುಭವವನ್ನು ಮಾತ್ರ ಆಧರಿಸಿವೆ. ಅವು ಕನಸು ಮತ್ತು ಗಾಢ ನಿದ್ರೆಯ ಅನುಭವಗಳನ್ನು ಅತ್ಯಲ್ಪವಾಗಿ ವಿಚಾರ ಮಾಡುತ್ತವೆ; ಅಥವಾ

ವಿಚಾರ ಮಾಡುವದೇ ಇಲ್ಲ. ನೀವು ಅಪೂರ್ಣವಾದ ಆಧಾರಾಂಶಗಳಿಂದ ವಿಚಾರವನ್ನು ಪ್ರಾರಂಭಿಸುವದರಿಂದ ವಿಶ್ವ ಸಮಸ್ಯೆಗೆ ದೊರಕುವ ನಿಮ್ಮ ಉತ್ತರವು ಹೇಗೆ ಸರಿಯಾಗಬೇಕು ? ಸಮಂಜಸವಾಗಬೇಕು ?

ತತ್ವಶಾಸ್ತ್ರಜ್ಞರು ತಮ್ಮ ವಿಚಾರ ಕ್ರಮವನ್ನು ಜಾಗ್ರದವಸ್ಥೆಯ ಅನುಭವಕ್ಕೇ ಸೀಮಿತ ಮಾಡಿಕೊಂಡಿದ್ದಾರೆ. ಮಿಲ್, ಹೆಮಿಲ್‌ಟನ್, ಬರ್ಕ್ಲೀ ಮತ್ತು ಸ್ಪೆನ್ಸರ್ ಕೂಡ–ಎಲ್ಲರೂ, ಎಚ್ಚರದಲ್ಲಿ ಪಡೆಯುವ ಅನುಭವವನ್ನು ಮಾತ್ರ ಆಧರಿಸಿ ತಮ್ಮ ಪರೀಕ್ಷೆಗಳನ್ನೂ ಶೋಧನೆಗಳನ್ನೂ ನಡೆಸಿದ್ದಾರೆ. ಅಷ್ಟರಿಂದಲೇ ಅವರು ಎಲ್ಲಾ ಶಕ್ತಿ–ಬಲಗಳ ಉಗಮವನ್ನೂ ಕಂಡು ಓಡಿಯಬೇಕೆಂದು ಪ್ರಯತ್ನ ಪಡುತ್ತಾರೆ. ಆದರೆ ನಿಮಗೆ ಗಣಿತ ಶಾಸ್ತ್ರದ ಒಂದು ಪ್ರಶ್ನೆಯನ್ನು ಕೊಟ್ಟು, ಅದಕ್ಕೆ ಉತ್ತರವನ್ನು ಕಂಡು ಹಿಡಿಯಲು ಹೇಳಿದರೆ, ಅದಕ್ಕೆ ಆಧಾರವಾಗಿರುವ ಪೂರ್ವ ಕಲ್ಪಿತಗಳನ್ನು (hypothesis) ಅನುಮಾನಗಳನ್ನೂ ಪ್ರಮಿತಿಗಳನ್ನೂ (Premises) ಎಲ್ಲವನ್ನೂ ಪೂರ್ಣವಾಗಿ ವಿಚಾರ ಮಾಡಬೇಕು. ಅವುಗಳಲ್ಲಿ ಒಂದು ಭಾಗವನ್ನು ಮಾತ್ರ ಗಣನೆಗೆ ತೆಗೆದುಕೊಂಡರೆ ಒಂದು ಸಮಸ್ಯೆಯನ್ನು ಸರಿಯಾಗಿ–ಸಮಂಜಸವಾಗಿ ಬಿಡಿಸಲು ಹೇಗೆ ಸಾಧ್ಯ ? ವೇದಾಂತವು ಅಗತ್ಯವಾದ ಪ್ರಮಾಣಗಳನ್ನೆಲ್ಲಾ ವಿಚಾರಮಾಡುತ್ತದೆ. ನಮ್ಮ ವಿಚಾರಕ್ಕೆ ಅವಶ್ಯವಾದ ಆಧಾರಾಂಶಗಳು ಮೂರು ಬಗೆಯಾಗಿವೆ. ನಿಮ್ಮ ಪ್ರಪಂಚಾನುಭವವೂ ಮೂರು ಬಗೆಯಾಗಿವೆ. ಇವೆಲ್ಲವನ್ನೂ ವಿಚಾರ ಮಾಡಬೇಕು. ಎಚ್ಚರದ ಜಗತ್ತು ಕನಸು–ನಿದ್ರೆಗಳಲ್ಲಿ ಪೂರಾ ಕಾಣದಾಗುತ್ತದೆ. ಆದರೂ ನೀವೇನೂ ಸತ್ತಿರುವದಿಲ್ಲ. ಕನಸು ನಿದ್ರೆಗಳಲ್ಲಿ ನೀವು ಇದ್ದೇ ಇರುತ್ತೀರಿ, ಅಥವಾ ನಿಮ್ಮ ಆತ್ಮನು ಇದ್ದೇ ಇರುತ್ತದೆ. ಗಾಢ ನಿದ್ರೆಯಲ್ಲಿ ಮನಸ್ಸೂ ಬುದ್ಧಿಯೂ ವ್ಯಕ್ತಿತ್ವದ ಕಲ್ಪನೆಯೂ ಪೂರ್ಣವಾಗಿ ಹಾರಿಹೋಗುತ್ತವೆ. ಆದರೂ ನಿಜವಾದ ನೀವು ಇರುತ್ತೀರಿ; ನಿಮ್ಮ ಆತ್ಮನು ಒಂದೇ ಸಮನಾಗಿ ಇರುತ್ತದೆ. ಈ ಮೂರು ಲೋಕಗಳಲ್ಲಿಯೂ ಯಾವ ಬದಲಾವಣೆಯನ್ನೂ ಹೊಂದದೆ ಮಣಿಗಳಲ್ಲಿ ಸೂತ್ರದಂತೆ ಪೋಣಿಸಿಕೊಂಡು ಆಧಾರವಾಗಿರುವ ಸತ್ಯವು ನಿರ್ವಿಕಾರವಾದ ನಿಮ್ಮ ಆತ್ಮವೇ. ಇದೇ ಓಂಕಾರವು. ಮನಸ್ಸು ಬುದ್ಧಿಗಳನ್ನಾಗಲೀ ಮೆದುಳನ್ನಾಗಲೀ ನೀವೆಂದು ತಿಳಿಯುವದಕ್ಕೆ ನಿಮಗೆ ಅಧಿಕಾರವೇ ಇಲ್ಲ. ಈ ಪ್ರಪಂಚವಿದೆಯೆಂದು ನಿಮಗೆ ಹೇಗೆ ಗೊತ್ತು ? ನೀವು ವಸ್ತುಗಳನ್ನು ಮುಟ್ಟುವದರಿಂದಲೂ ವಸ್ತುಗಳನ್ನು ನೋಡುವದರಿಂದಲೂ ಕೇಳುವದರಿಂದಲೂ ರುಚಿ ನೋಡುವದರಿಂದಲೂ ಗಂಧವನ್ನು ಗ್ರಹಿಸುವದರಿಂದಲೂ ಪ್ರಪಂಚವಿದೆಯೆಂದು ಹೇಳುತ್ತೀರಿ. ಆದ್ದರಿಂದ ಪ್ರಪಂಚವಿದೆಯೆಂಬುದಕ್ಕೆ ಇಷ್ಟೇ ಪ್ರಮಾಣ, ಸಾಕ್ಷಿ, ರುಜುವಾತು ಅಲ್ಲವೆ ? ವಿಕ್ಟರ್ ಹ್ಯೂಗೋ ರಾಬರ್ಟ್ ಇಂಗರ್‌ಸಾಲ್, ಎಮರ್‌ಸನ್ ಮೊದಲಾದ ಮಹಾ ಮಹಾ ವಿಚಾರಶಾಲಿಗಳೆಲ್ಲಾ ಪ್ರಪಂಚದ ವಿಷಯದಲ್ಲಿಯೇ ಎಷ್ಟೊಂದು ಬರೆದಿದ್ದಾರೆ; ಆದ್ದರಿಂದ ಪ್ರಪಂಚ

ವಿರಲೇ ಬೇಕು. ಪ್ರಪಂಚವಿರದಿದ್ದರೆ ಅವರೇಕೆ ಬರೆಯುತಿದ್ದರು?— ಎಂದು ನೀವು ಕೇಳಬಹುದು. ಆದರೆ, ವಿಕ್ಟರ್ ಹ್ಯೂಗೋ ಮೊದಲಾದವರೆಲ್ಲಾ ಇದ್ದಾರೆ. ಅವರು ಬರೆದ ಗ್ರಂಥಗಳಿವೆ—ಎಂಬುದು ನಿಮಗೆ ಹೇಗೆ ಗೊತ್ತು? ಎಂದು ನಾವು ಕೇಳುತ್ತೇವೆ. ನೀವು ಪ್ರಪಂಚವಿದೆಯೆಂಬುದಕ್ಕೆ ನಿಮ್ಮ ಇಂದ್ರಿಯಗಳೇ ಪ್ರಮಾಣವಲ್ಲವೆ? ನೇರವಾಗಿಯೋ ಕೋರೆಯಾಗಿಯೋ ಇಂದ್ರಿಯಗಳೇ ಸಾಕ್ಷಿ. (ನಿಮ್ಮ ದೇಹೇಂದ್ರಿಯಾದಿಗಳೂ ಪ್ರಪಂಚದೊಳಗೇ ಸೇರಿವೆ. ಹಸುರು ಗಾಜಿನ ಕನ್ನಡಕದ ಮೂಲಕ ನೋಡತಕ್ಕವರಿಗೆ ಎಲ್ಲಾ ವಸ್ತುಗಳೂ ಹಚ್ಚಗೇ ಕಾಣುವಂತೆ ಪ್ರಾಪಂಚಿಕವಾದ ಇಂದ್ರಿಯಗಳ ಮೂಲಕ ನೋಡತಕ್ಕವರಿಗೆ ಪ್ರಪಂಚವಿರುವಂತೆ ಕಾಣುವದು ಸ್ವಾಭಾವಿಕ. ಇಂದ್ರಿಯಗಳನ್ನು ಅವುಗಳಿಂದ ಉಂಟಾದ ಸಂಸ್ಕಾರವನ್ನೂ ಬಿಟ್ಟು ನೋಡಿರಿ.)

ಎಲ್ಲಾ ಬಗೆಯ ಇಂದ್ರಿಯಗಳ ಗ್ರಹಿಕೆಗೂ (perception, intellection, etc.) ಅರಿವಿಗೂ ಅನುಭವಕ್ಕೂ ಹೊರಗಿನ ಸಂವೇದನೆಯೇ (sensation) ಮೂಲ ಕಾರಣವಾಗಿದೆ. ಸಂವೇದನೆಯು ಎಚ್ಚರಕ್ಕೆ ಮಾತ್ರ ಸೀಮಿತವಲ್ಲ. ಎಚ್ಚರದಲ್ಲಿ ಇಂದ್ರಿಯಗಳು ಸ್ಥೂಲ ರೂಪದಲ್ಲಿವೆ; ಆದರೆ ನಿಮ್ಮ ಕನಸಿನಲ್ಲಿ ಗ್ರಹಿಸುವದಿಲ್ಲವೆ? ನೋಡುವದಿಲ್ಲವೆ? ಅರಿಯುವದಿಲ್ಲವೆ? ಆ ಅವಸ್ಥೆಗೆ ಸಂಬಂಧಪಟ್ಟ ವಿಶಿಷ್ಟವಾದ ಇಂದ್ರಿಯಗಳು ನಿಮಗೆ ಕನಸಿನಲ್ಲಿ ಇಲ್ಲವೆ? ನಿಮ್ಮ ಹೊರಗಿನ ಕಣ್ಣುಗಳು, ಹೊರಗಿನ ಕಿವಿಗಳು ಕನಸಿನಲ್ಲಿ ಕೆಲಸ ಮಾಡುವದಿಲ್ಲ, ವ್ಯಾಪಾರ ಮಾಡುವದಿಲ್ಲ. ಕನಸಿನ ರಾಜ್ಯದಲ್ಲಿ ನೀವು ಹೊರಗಿನ ವಿಷಯಗಳನ್ನೂ ಅವುಗಳನ್ನು ಗ್ರಹಿಸುವ ಇಂದ್ರಿಯಗಳನ್ನೂ ಏಕ ಕಾಲದಲ್ಲಿ ಸೃಷ್ಟಿಸಿಕೊಳ್ಳುತ್ತೀರಿ. ಹೀಗೆ ಸ್ವಪ್ನ ಲೋಕದಲ್ಲಿ ಇಂದ್ರಿಯಗಳೂ ಮತ್ತು ಅವುಗಳಿಂದ ಗ್ರಹಿಸಲ್ಪಡುವ ವಿಷಯಗಳೂ ಒಂದೇ ಶಕ್ತಿಯ ಧನ ಮತ್ತು ಋಣ ಧ್ರುವಗಳಂತೆ ಇವೆ; ಅಥವಾ ಒಂದೇ ನಾಣ್ಯದ ಮುಮ್ಮುಖ—ಹಿಮ್ಮುಖದಂತೆ ಇವೆ. ಕನಸಿನಲ್ಲಿ ವಿಷಯಿಯೂ (subject) ಮತ್ತು ವಿಷಯವೂ (object) ಒಮ್ಮೆಗೇ ಚಿಮ್ಮಿ ತೋರಿಕೊಳ್ಳುತ್ತವೆ. ಓಂಕಾರದಲ್ಲಿರುವ "ಉ" ಅಕ್ಷರವು ಇದನ್ನು ಸೂಚಿಸುತ್ತದೆ. ಈ ವಿಷಯಿ—ವಿಷಯಗಳು ಎರಡೂ ನೀರಿನಲ್ಲಿ ಅಲೆಗಳಂತೆ ಎದ್ದು ತೋರಿಕೊಳ್ಳುವದಕ್ಕೆ ಆಧಾರವಾಗಿರುವ ಸತ್ಯವೇ ಆತ್ಮ ಅಥವಾ ಓಂ. ಹೀಗೆಯೇ ವೇದಾಂತ ದೃಷ್ಟಿಯಿಂದ ನಿಮ್ಮ ಎಚ್ಚರದಲ್ಲಿ ಕೂಡ ನಿಮ್ಮ ಇಂದ್ರಿಯಗಳೂ ಮತ್ತು ವಿಷಯಗಳೂ ಪರಸ್ಪರ ಒಂದೇ ಶಕ್ತಿಯ ಧನ ಮತ್ತು ಋಣ ಧ್ರುವಗಳ ಸಂಬಂಧವನ್ನು ಹೊಂದಿವೆ.

In dreams even though the objects are produced instantaneously, they appear to have a long past of their own. Similarly in the wakeful state the objects of the world together with their past history make their appearance simultaneously with the percipient subject. And when you say that this world is real, this is

the solid, rigid world, the statement is entirely founded on the evidence of the perceiving senses or subject which is equivalent to the dreaming ego calling the objects of the dream real or to the man calling his dog in the picture on canvas real whereas in reality both are unreal.

ಕನಸುಗಳಲ್ಲಿ ವಿಷಯಗಳು (ಅಥವಾ ವಸ್ತುಗಳು) ಕ್ಷಣ ಮಾತ್ರದಲ್ಲಿ ಉತ್ಪತ್ತಿಯಾದರೂ ನೋಡುತ್ತಿರುವಾಗಲೇ ಕಾಣುವುದಕ್ಕೆ ತೊಡಗಿದರೂ—ಅವು ಬಹಳ ಹಿಂದಿನ ಕಾಲದಿಂದಲೂ ಸ್ವತಃ ಇದ್ದಂತೆ ತೋರುತ್ತವೆ. ಹೀಗೆಯೇ ಜಾಗ್ರದವಸ್ಥೆಯಲ್ಲಿ ಜ್ಞೇಯವಾದ (ಅರಿಯಲ್ಪಡುವ) ಪ್ರಾಪಂಚಿಕ ವಸ್ತುಗಳು ತಮ್ಮ ಹಿಂದಿನ ಚರಿತ್ರೆಯೊಡನೆ ಜ್ಞಾತೃವಾದ (ಅರಿಯುವ) ವಿಷಯಿಯ ಜೊತೆಗೇ ಒಂದೇ ಸಮಯದಲ್ಲಿ ತೋರಿಕೊಳ್ಳುತ್ತವೆ. ಈ ಪ್ರಪಂಚವು ಘನವಾಗಿಯೂ ಕಠಿಣವಾಗಿಯೂ ಎಲ್ಲರ ಕಣ್ಣಿಗೂ ಕಾಣಿಸುತ್ತಾ, ಎಲ್ಲರ ಕೈಗೂ ಸಿಕ್ಕುತ್ತಾ ಇರುವದರಿಂದ ಇದು ಸತ್ಯ—ಸತ್ಯವಾದುದು— ಎಂದು ನೀವು ಹೇಳುವದಾದರೆ ಆ ಮಾತು ಪೂರ್ಣವಾಗಿ ಗ್ರಾಹಕವಾದ ಇಂದ್ರಿಯಗಳ ಅಥವಾ ಜ್ಞಾತೃವಿನ ಅನುಭವವನ್ನು ಅವಲಂಬಿಸಿರುವದಾಗಿದೆ. ಕನಸನ್ನು ಕಾಣುತ್ತಿರುವ ಜೀವನು ತನಗೆ ಕಾಣುವ ಕನಸಿನ ವಸ್ತುಗಳನ್ನೆಲ್ಲಾ ಸತ್ಯವೆಂದು ಹೇಳಿದಂತೆಯೇ ಎಚ್ಚರದ ಆ ಮಾತೂ ಆಗುತ್ತದೆ. ಮತ್ತು ಬಟ್ಟೆಯ ಮೇಲೆ ಬರೆದಿರುವ ಚಿತ್ರವೂ ನಾಯಿಯೂ ಸುಳ್ಳಾಗಿರುವಾಗ ಚಿತ್ರದಲ್ಲಿರುವ ನಾಯಿಯನ್ನು ನಿಜವೆಂದು ಹೇಳಿದಂತೆಯೇ ಆಗುತ್ತದೆ.

ಇಂದ್ರಿಯಗಳ ಉತ್ಪತ್ತಿಯು ಏತರಿಂದಾಯಿತು? ಪಂಚ ಭೂತಗಳಿಂದ ಆಯಿತು. ಈ ಪಂಚ ಭೂತಗಳು ಇವೆಯೆಂದು ನಿಮಗೆ ಹೇಗೆ ತಿಳಿಯಿತು? ಇಂದ್ರಿಯಗಳಿಂದ ತಿಳಿಯಿತು. ಈ ವಿಚಾರಸರಣಿಯು ಒಂದು ವೃತ್ತದಲ್ಲಿ ಇಲ್ಲವೆ? ಇದು ಜಾಗ್ರದವಸ್ಥೆಯಲ್ಲಿರುವ ಜಗತ್ತಿನ ಮಾಯಾಮಯವಾದ (ಅಥವಾ ಮಿಥ್ಯಾ) ಸ್ವರೂಪವನ್ನು ತೋರಿಸುತ್ತದೆ. ಸ್ವಪ್ನಲೋಕದಲ್ಲಿ ಸ್ವಪ್ನವನ್ನು ಕಾಣುತ್ತಿರುವವರೆಗೂ ಅಲ್ಲಿಯ ವಿಷಯಗಳು ನಿಜವಾಗಿಯೇ ತೋರುತ್ತಿರುತ್ತವೆ. ಎಚ್ಚರಗೊಂಡ ಕೂಡಲೇ ಆ ವಸು ಗಳು ಉಳಿಯುವದೇ ಇಲ್ಲ. ಜಾಗ್ರತವಸ್ಥೆಯಲ್ಲಿ ಎಲ್ಲಾ ವಸ್ತುಗಳೂ ಘನವಾಗಿವೆ; ವಾಸ್ತವವಾಗಿವೆ. ಆದರೆ ನಾವು ಗಾಢ ನಿದ್ರೆಯಲ್ಲಿರುವಾಗ ಆ ವಸ್ತುಗಳೆಲ್ಲಾ ಎಲ್ಲಿವೆ? ಆ ಪ್ರಪಂಚ ಎಲ್ಲಿದೆ? ಇಲ್ಲವೇ ಇಲ್ಲ; ಹೋಗಿಯೇ ಹೋಯಿತು; ಮಾಯವಾಯಿತು. ಇಲ್ಲಿ, ಇರುವದೆಂದರೆ ಒಂದು ಕ್ಷಣವೂ ಇಲ್ಲವಾಗದಂತೆ ಎಂದೆಂದಿಗೂ ಇರುವದು— ಎಂಬ ಇರುವಿಕೆಯ ವಿವರಣೆಯು ಎಚ್ಚರ—ಕನಸುಗಳಲ್ಲಿಯ ವಿಶ್ವವಿಲಾಸಕ್ಕೆ ಹೊಂದಿಕೆಯಾಗುವದಿಲ್ಲವೆಂಬುದನ್ನು ನಾವು ಕಾಣುತ್ತೇವೆ.

ಯಾವ ಕಾಲದಲ್ಲಿಯೂ ಯಾವ ಸಂದರ್ಭದಲ್ಲಿಯು ಇಲ್ಲವಾಗದೆ, ಎಲ್ಲಾ ಕಾಲಗಳಲ್ಲಿಯೂ ಸಂದರ್ಭಗಳಲ್ಲಿಯೂ ಇರುವದನ್ನೇ ಓಂದುಗಳು ಇದ್ದೆ, ಎನ್ನುತ್ತಾರೆ. ಒಂದುಕಾಲದಲ್ಲಿ ಇರುವಂತೆ ತೋರಿ, ಸ್ವಲ್ಪ ಕಾಲದ ಮೇಲೆ ನೆರಳಿನಂತೆ ಇಲ್ಲವಾಗುವದು ಭ್ರಾಂತಿ ವಿಲಾಸವಿರಬೇಕು; ಅದು ಮಾಯಾ ವಿಲಾಸವಿರಬೇಕು. ಇರುವಿಕೆಗೆ ಹರ್ಬರ್ಟಸ್ಪೆನ್ಸರ್ ಕೂಡ ಇದೇ ವಿವರಣೆಯನ್ನೇ ಕೊಟ್ಟಿದ್ದಾನೆ.

ಸ್ವಪ್ನ ರಾಜ್ಯವನ್ನು ನೀವೇಕೆ ನಿಜವಲ್ಲ ಎನ್ನುತ್ತೀರಿ? ನೀವು ಎಚ್ಚರವಾದಾಗ ಅದಿರುವದಿಲ್ಲವಾದ್ದರಿಂದ ಅದನ್ನು ಸುಳ್ಳು, ನಿಜವಲ್ಲ, ಎನ್ನುತ್ತೀರಿ. ಹಾಗಾದ ಮೇಲ ಸುಳ್ಳು ಎನ್ನುವ ಈ ವಿವರಣೆಯೇ ಜಾಗ್ರದವಸ್ಥೆಗೆ ಏಕೆ ಅನ್ವಯಿಸುವದಿಲ್ಲ? ಗಾಢ ನಿದ್ರೆಯಲ್ಲಿಯೂ ಕನಸಿನಲ್ಲಿಯೂ ಎಚ್ಚರದ ಜಗತ್ತೂ ಇರುವದೇ ಇಲ್ಲ.

ಜಾಗ್ರದವಸ್ಥೆಯ ಜ್ಞಾತೃ (ಅಥವಾ ಪ್ರಮಾತೃ) Subject — ಅರಿಯುವವ) ಮತ್ತು ಜ್ಞೇಯ ವಿಷಯುಗಳು (ಅಥವಾ ಪ್ರಮೇಯ, Objects — ಅರಿಯಲ್ಪಡತಕ್ಕವು) ಸರ್ವಾಧಾರವಾದ 'ನಾನು' ಎಂಬ ಸತ್ಯದ ತೋರಿಕೆ ಮಾತ್ರ ಎಂಬುದನ್ನು ಓಂಕಾರದಲ್ಲಿರುವ 'ಅ' ಎನ್ನುವದು ಸೂಚಿಸುತ್ತದೆ.

ಆಹಾ! ಎಂಥಾ ದುರಭಿಪ್ರಾಯವು—ಭ್ರಾಂತಿಯು—ಮನುಷ್ಯನ ಹೃದಯವನ್ನು ವಶಪಡಿಸಿಕೊಂಡಿದೆ! "ನಮ್ಮಲ್ಲಿ ಗಟ್ಟಿ ವರಹವಿದೆ; ಬಂಗಾರದ ಗಟ್ಟಿಗಳಿವೆ, ಗಟ್ಟಿ ಹಣ (Hard cash) ಇದೆ. ಈ ಸ್ಥೂಲವಾದ, ಘನವಾದ, ಗಟ್ಟಿಯಾದ ಜಗತ್ತು ಮಾತ್ರ ವಾಸ್ತವ, ನಿಜ" ಎನ್ನುತ್ತೇವೆ. ಅಯ್ಯೋ ಮೂರ್ಖ! ಒಂದೇ ಗಟ್ಟಿಯಾದ ಘನವಾದ ಸತ್ಯವೆಂಬುದು ನಿರ್ವಿಕಾರಿಯಾದ ನೀನೇ. ಚೈತನ್ಯ ಸ್ವರೂಪನಾದ ನೀನೊಬ್ಬನೇ ಸತ್ಯ. ನಿಮ್ಮ ಆತ್ಮ ಒಂದೇ ಶಾಶ್ವತ, ಅದೊಂದೇ ಗಟ್ಟಿಯಾದುದು, ಭದ್ರವಾದುದು. ಮಿಕ್ಕ ಎಲ್ಲವೂ ಇಂದ್ರಿಯಗಳ ಚಮತ್ಕಾರ, ವಂಚನೆ, ತಂತ್ರ. ಜಾಗ್ರದವಸ್ಥೆಗೆ ಸ್ವಪ್ನ ಮತ್ತು ಗಾಢ ನಿದ್ರಾ ಅವಸ್ಥೆಗಳನ್ನು ವಿವೇಚಿಸಿ ವಿರುದ್ಧಗಳೆಂದು ಮಾಡಿದ ನಿರ್ಣಯ ಇದಾದ್ದರಿಂದ ಕೆಲವರು ಅನಾತ್ಮವಾದ ಪ್ರಪಂಚವೆಲ್ಲಾ ಇಂದ್ರಿಯಗಳ ಮೋಸವಾದ್ದರಿಂದ ಸುಳ್ಳು ಎನ್ನುವ ಸಿದ್ಧಾಂತವನ್ನು ಒಪ್ಪುವುದಿಲ್ಲ. ಅಂಥವರು ಆಳವಾಗಿ ವಿಚಾರ ಮಾಡಲೆಂದು ಇಲ್ಲಿ ಕೆಲವು ವಿಷಯಗಳನ್ನು ಹೇಳಬೇಕಾಗಿದೆ: ದೊಡ್ಡದೊಂದು ಸೊನ್ನೆಯಂತಿರುವ ಈ ಭೂಮಂಡಲದ ಅರ್ಧಕ್ಕಿಂತಲೂ ಹೆಚ್ಚು ಭಾಗದಲ್ಲಿ (ಎರಡರ್ಧಗಳ ಯಾವದಾದರೊಂದು ಭಾಗದಲ್ಲಿ) ಯಾವಾಗಲೂ ರಾತ್ರಿ ಇರುವದರಿಂದ ಭೂಲೋಕದ ಸುಮಾರರ್ಧದಷ್ಟು ಜನರು ಯಾವಾಗಲೂ ಕನಸಿನಲ್ಲಿಯೋ ಗಾಢ ನಿದ್ರಾ ಸ್ಥಿತಿಯಲ್ಲಿಯೋ ಇರುತ್ತಾರೆ. ಪ್ರತಿಯೊಬ್ಬರೂ ಎಚ್ಚರವಾಗಿರುವಂತೆಯೇ ನಿದ್ರೆಯನ್ನೂ ಮಾಡುತ್ತಾರೆ. ಪ್ರತಿಯೊಬ್ಬರಿಗೂ ಶೈಶವಾವಸ್ಥೆಯೆಲ್ಲಾ ಪೂರಾ ದೀರ್ಘ ನಿದ್ರೆಯೇ ಅಲ್ಲವೆ? ಪುನಃ ಪ್ರತಿಯೊಬ್ಬರ ಸಾವೂ ನಿದ್ರೆಯೇ.

ಒಳ್ಳೆಯದು, ನೀವೆಲ್ಲರೂ ಹುಟ್ಟಿದ ಮೇಲೆ ಮೊದಲು ಮೂರು ನಾಲ್ಕು ವರ್ಷಗಳು ಪೂರಾ ನಿದ್ರೆಯಲ್ಲಿಯೇ ಇದ್ದಿರಿ. ನಿಮ್ಮ ಕಾಯಿಲೆಗಳಲ್ಲಿ ಹೆಚ್ಚು ಕಾಲ ನಿದ್ರೆಯಿಂದ ಕಳೆಯುತ್ತದೆ. ಮುಪ್ಪಿನಲ್ಲಿ ದೇಹೇಂದ್ರಿಯಗಳೂ ಮನಸ್ಸೂ ದುರ್ಬಲವಾಗಿರುವಾಗ ಕೆಲವು ವರ್ಷಗಳು ನಿದ್ರಾವಸ್ಥೆಯಲ್ಲಿಯೋ ನಿದ್ರಾ ಸಮಾನವಾದ ಅವಸ್ಥೆಯಲ್ಲಿಯೋ ಕಳೆಯಬಹುದು. ನೀವು ಎಷ್ಟೋ ಸಮಯಗಳಲ್ಲಿ, ಎಚ್ಚರವಾಗಿದ್ದೀರೆಂದು ತಿಳಿದಿರುವಾಗಲೇ ವಾಸ್ತವ ಜಗತ್ತಿಗೆ ನೇರ ಸಂಬಂಧ ವಿಲ್ಲದಂತೆ ಸ್ವಪ್ನ ಸಮಾನವಾದ ಕಲ್ಪನಾ ಲೋಕದಲ್ಲಿ ಭ್ರಮಾ ಕುದುರೆಯ ಬೆನ್ನು ಹತ್ತಿ ಕಾಲ ಕಳೆಯುತ್ತೀರಿ. ಇದನ್ನೆಲ್ಲಾ ವಿಚಾರ ಮಾಡಿ, ನಿಮ್ಮ ಇಡೀ ಜೀವಮಾನದಲ್ಲಿ ಎಷ್ಟು ದಿನಗಳು—ಗಂಟೆಗಳು, ನೀವು ನಿಜ ವಾಗಿಯೂ ಎಚ್ಚರವಾಗಿರುತ್ತೀರಿ, ಎಷ್ಟು ಕಾಲ ನಿದ್ರೆ ಮಾಡುತ್ತೀರಿ ಎಂಬುದನ್ನು ಸರಿಯಾಗಿ ಲೆಕ್ಕ ಹಾಕಿದರೆ, ಅರ್ಧ ಜೀವಮಾನಕಾಲವೆಲ್ಲಾ ನೀವು ನಿದ್ರೆ ಮಾಡುತ್ತೀರೆಂದೂ ಉಳಿದ ಅರ್ಧದಲ್ಲಿಮಾತ್ರ ಎಚ್ಚರವಾಗಿರುತ್ತೀರೆಂದೂ ತಿಳಿದು ಆಶ್ಚರ್ಯ ಪಡಬಹುದು. ಆದ್ದರಿಂದ ನಿದ್ರೆಯಲ್ಲಿ ನಿಮಗೆ ಏನಾಯಿತು ಎಂಬುದನ್ನು ವಿಚಾರಮಾಡದೆ ಎಚ್ಚರದಲ್ಲಿ ಕಂಡದ್ದನ್ನು ಮಾತ್ರ ಹೆಚ್ಚು ಅಭಿಮಾನದಿಂದ ವಿಚಾರದಲ್ಲಿ ತೆಗೆದುಕೊಳ್ಳುವದಕ್ಕೆ ಏನು ಅಧಿಕಾರ? ನೀವು ನಿದ್ರಿಸುತ್ತಿರುವಾಗ ಸತ್ತು ಹೋಗಿರುತ್ತೀರಾ? ಇಲ್ಲ; ನಿಮ್ಮ ಸ್ವಪ್ನಾವಸ್ಥೆಯ ಅನುಭವವೂ ನಿಮ್ಮ ಅನುಭವವೇ ಅಲ್ಲವೆ? ಹಾಗಿದ್ದರೆ ಅದನ್ನೇಕೆ ವಿಚಾರಿಸುವದಿಲ್ಲ? ಎಚ್ಚರವೇ ಹೆಚ್ಚು ಪ್ರಬಲವಾದುದೆಂದು ನೀವು ಹೇಳುವದಾದರೆ ಅತ್ಯಂತ ಬಲಿಷ್ಠರಾದವರೂ ಮತ್ತು ಅತ್ಯಂತ ಬುದ್ಧಿಶಾಲಿಗಳೂ ಸಹ ನಿದ್ರಾವಶರಾಗಿ ಕೈಕಾಲುಗಳನ್ನು ಕಟ್ಟಿಹಾಕಿದಂತೆ ಸೋಫಾದ ಮೇಲೋ ಸುಪ್ಪತ್ತಿಗೆಯ ಮೇಲೋ ಪ್ರತಿ ರಾತ್ರಿಯೂ ನಿದ್ರಾದೇವಿಗೆ ಶರಣಾಗತರಾದಂತೆ ಬಿದ್ದುಕೊಳ್ಳುವದು ಏಕೆ? ತಾನು ನಿದ್ರೆಗೆ ಅಧೀನವಾಗದೆ ಎಚ್ಚರವಾಗಿಯೇ ಇರಬೇಕೆಂಬ ಉತ್ಕಟೇಚ್ಛೆಯುಳ್ಳ ಅಂಥಾ ವ್ಯಕ್ತಿಗಳನ್ನು ಸಹ ನಿರ್ದಯವಾದ ನಿದ್ರಾಶಕ್ತಿಯು ಲೆಕ್ಕಿಸುವದೇ ಇಲ್ಲ. ಜಾಗ್ರದವಸ್ಥೆಯಲ್ಲಿ ಹೇಗೆ ಅದಕ್ಕೆ ಸಂಬಂಧಪಟ್ಟ ಪ್ರಪಂಚವಿದೆಯೋ ಸ್ವಪ್ನಾವಸ್ಥೆಯಲ್ಲಿಯೂ ಹಾಗೆಯೇ ಅದಕ್ಕೆಸಂಬಂಧಿಸಿದ ಪ್ರಪಂಚವಿದ್ದೇ ಇದೆ. ಹಾಗಾದರೆ ನಮ್ಮ ಗಮನವನ್ನು ಸೆಳೆಯುವ ಹಕ್ಕು ಎಚ್ಚರದ ಪ್ರಪಂಚಕ್ಕೆ ಇರುವಷ್ಟೇ ಸ್ವಪ್ನ ಪ್ರಪಂಚಕ್ಕೂ ಇದೆ; ಅದನ್ನೂ ಸಾಕಷ್ಟು ವಿಚಾರಮಾಡಬೇಕು.

ಅಮೇರಿಕೆಯವರೂ ಯೂರೋಪಿಯನ್‌ರೂ ಪ್ರತಿಯೊಂದನ್ನೂ ಬಹುಮತದ ಆಧಾರದ ಮೇಲೆ ನಿರ್ಣಯ ಮಾಡುತ್ತಾರೆ. ಒಳ್ಳೆಯದು, ಹಾಗಾದರೆ ಸ್ವಪ್ನವೂ ನಿದ್ರೆಯೂ ಸಹ, ಸಮಾನವಾದ ಅಥವಾ ಸ್ವಲ್ಪ ಹೆಚ್ಚಿನ ಮತವನ್ನೇ ಪಡೆಯಬೇಕು. ಎಚ್ಚರದ ಅನುಭವದ ಆಧಾರದ ಮೇಲೆ,ಅಧಿಕಾರದ ಮೇಲೆಸ್ವಪ್ನದ ಅನುಭವವು ಸುಳ್ಳಾದರೆ, ಸ್ವಪ್ನ ಮತ್ತು ನಿದ್ರೆಗಳ ಅನುಭವದ ಅಧಿಕಾರದ ಮೇಲೆ ಎಚ್ಚರದ ಅನುಭವವೂ ಸುಳ್ಳೇ ಆಗಿದೆ. ಇನ್ನೂ ವಿಶಾಲವಾಗಿಯೂ ಆಳವಾಗಿಯೂ ವಿಚಾರಮಾಡಿದರೆ,

ಸತ್ಯಲೋಕವೆಲ್ಲಾ ನಿರಂತರ ನಿದ್ರಾಸ್ಥಿತಿಯಲ್ಲಿಯೂ ಮತ್ತು ಪ್ರಾಣಿಲೋಕವೆಲ್ಲಾ ಕೇವಲ ಸ್ವಪ್ನ ಸ್ಥಿತಿಯಲ್ಲಿಯೂ ಇರುವಂತೆ ತೋರುತ್ತಿವೆ. ನಿಮಗೆ ಪ್ರಪಂಚವು ಕಾಣುವುದಕ್ಕಿಂತ ಬೇರೆ ರೀತಿಯಲ್ಲಿ ಅದು ಇತರ ಪ್ರಾಣಿಗಳಿಗೆ ಕಾಣಬಹುದು. ಅವುಗಳ ಅನುಭವಗಳನ್ನು ಏಕೆ ವಿಚಾರಕ್ಕೆ ತೆಗೆದುಕೊಳ್ಳಬಾರದು? ಇರುವೆಯ ಕಣ್ಣಿಗೂ, ಕಪ್ಪೆಯ ಕಣ್ಣಿಗೂ, ಗೂಬೆಯ ಕಣ್ಣಿಗೂ, ಆನೆಯ ಕಣ್ಣಿಗೂ, ವಸ್ತುಗಳು ನಿಮಗೆ ಕಾಣುವದಕ್ಕಿಂತಲೂ ಬೇರೆ ರೀತಿಯಲ್ಲಿಯೇ ಕಾಣುತ್ತವೆ. ಆದರೆ ಮನುಷ್ಯರ ಅನುಭವವನ್ನು ಮಾತ್ರ ವಿಚಾರಮಾಡಬೇಕೆಂದೂ ಜಾಗ್ರದವಸ್ಥೆಯನ್ನೂ ಅಥವಾ ಆ ಅವಸ್ಥೆಯ ಪ್ರಪಂಚವನ್ನೂ ನಿಜವೆಂದು ತಿಳಿಯಬೇಕೆಂದೂ ನೀವು ಹೇಳುತ್ತೀರಿ. ಆದರೆ, ಪೂರ್ಣತೆಯನ್ನು ಪಡೆದ ಎಲ್ಲಾ ಮಹಾಪುರುಷರ ಅನುಭವವನ್ನೂ ಸರಿಯಾಗಿ ತೆಗೆದುಕೊಂಡರೆ, ಬಹಳ ನಿಜವಾಗಿ ಕಾಣುವ ಈ ಜಗತ್ತು ಹಸಿಯಾಗಿ ಕಾಣದೆ ಇರುವುದಿಲ್ಲ. ಇದು ಹೇಗೆಂದು ಕೇಳುತ್ತೀರಿ. ಇಲ್ಲಿ ನಮ್ಮ ವಿಜ್ಞಾನಿಗಳೂ ತತ್ತ್ವಜ್ಞಾನಿಗಳೂ ಹಕ್ಸ್ಲೀಗಳೂ ಸ್ಪೆನ್ಸರ್‌ಗಳೂ ಇದ್ದಾರೆ. ಅವರೆಲ್ಲರೂ ಎಚ್ಚರದ ಪ್ರಪಂಚವನ್ನು ಮಹಾ ಸತ್ಯವೆಂದು ಸಾರುತ್ತಿದ್ದಾರೆ. ಅವರ ಅನುಭವವು ಪ್ರಪಂಚವು ಮಿಥ್ಯೆಯೆಂದು ಹೇಗೆ ತೋರಿಸಬೇಕು? ಸ್ವಲ್ಪ ಆಲೋಚನೆ ಮಾಡಿ. ಈ ಮಹನೀಯರೆಲ್ಲಾ ತಮ್ಮ ತಮ್ಮ ಅತ್ಯಂತ ಶ್ರೇಷ್ಠಸ್ಥಿತಿಯಲ್ಲಿದ್ದಾಗ ನೀವವರನ್ನು ನಂಬುತ್ತೀರ? ಅಥವಾ ಅವರು ಅತ್ಯಂತ ಕನಿಷ್ಠ ಸ್ಥಿತಿಯಲ್ಲಿದ್ದಾಗ ಅವರನ್ನು ನಂಬುತ್ತೀರಾ? ಅವರು ನಿದ್ರಿಸುತ್ತಿರುವಾಗ ಅಥವಾ ಗೊರಕೆ ಹೊಡೆಯುತ್ತಿರುವಾಗ ಆಡಿರಬಹದಾದ ಮಾತನ್ನು ನೀವೇನೂ ಲೆಕ್ಕಕ್ಕೆ ತೆಗೆದುಕೊಳ್ಳಲಾರಿರಿ. ಈ ಮಹಾ ಲೇಖಕರು ಯಾವ ಸ್ಥಿತಿಯಲ್ಲಿ ತಮ್ಮ ಅತ್ಯಂತ ಶ್ರೇಷ್ಠ ಭಾವದಲ್ಲಿರುತ್ತಾರೆ? ಜ್ಞಾನವು ಅವರಿಂದ ಯಾವಾಗ ಪುಟಿದು ಹೊರಗೆ ಹರಿಯುತ್ತಿರುವಂತೆ ತೋರುವದೋ ಆಗ ಅವರು ಅತ್ಯಂತ ಶ್ರೇಷ್ಠ ಭೂಮಿಕೆಯಲ್ಲಿರುವದರಿಂದ ಎಲ್ಲಾ ಶ್ಲಾಘನೆಗೂ ಗೌರವಕ್ಕೂ ಅರ್ಹತೆಯುಳ್ಳವರಾಗಿರುತ್ತಾರೆ. ಅವರು ಆ ಪರಮೋಚ್ಚ ಸ್ಥಿತಿಯಲ್ಲಿರುವಾಗ ಅವರಲ್ಲಿಗೆ ಹೋಗಿರಿ. ಅವರ ದೇಹದಲ್ಲಿರುವ ಪ್ರತಿಯೊಂದು ರೋಮ ಕೂಪವೂ ಜಗತ್ತು ನಿಜವಲ್ಲವೆಂದೂ ದ್ವೈತವಿಲ್ಲವೆಂದೂ ಉಪದೇಶ ಮಾಡುತ್ತಿಲ್ಲವೆ? ಘೋಷಿಸುತ್ತಿಲ್ಲವೆ? ಎಂಬುದನ್ನು ನೋಡಿರಿ. ಆ ಸ್ಥಿತಿಯಲ್ಲಿ ನಾನು—ನೀನು ಎಂಬುದಿಲ್ಲ; ಎರಡಿಲ್ಲ; ಅನೇಕವಿಲ್ಲ, ವ್ಯಕ್ತಿಯಿಲ್ಲ; ಪ್ರಪಂಚವಿಲ್ಲ. ಸಮಸ್ತ ದೃಶ್ಯ ವಿಲಾಸವೂ ಕರಗಿ ಶೂನ್ಯವಾಗುತ್ತದೆ. ಅಲ್ಲಿ ವಿಚಾರಕರು ಏಕಾಗ್ರತೆಯಲ್ಲಿರುವದರಿಂದ ಅತ್ಯಂತ ಸೂಕ್ಷ್ಮ ಅರೂಪ ಸ್ಥಿತಿಯಲ್ಲಿರುತ್ತಾರೆ. ಅದೊಂದು ಪೂರ್ಣಸ್ಥಿತಿ. ಸೂರ್ಯನಿಂದ ಪ್ರಕಾಶವು ಪ್ರವಹಿಸಿದಂತೆ ಸಕಲ ಜ್ಞಾನವೂ ಅವನಿಂದ ಆಗ ಸಹಜವಾಗಿ ಹೊರಹೊಮ್ಮುತ್ತಿರುತ್ತದೆ. ಆ ಸ್ಥಿತಿಯಲ್ಲಿರುವಾಗ ಅವನು ಮಾತನಾಡುವುದಿಲ್ಲ. ಆ ಸ್ಥಿತಿಯಿಂದ—ಆ ಭೂಮಿಕೆಯಿಂದ—ಹೊರ ಚಿಮ್ಮುತ್ತಿರುವಾಗ ಮಾತೂ ಹೊರಡುತ್ತದೆ. ನೂತನ ಶೋಧಗಳೂ ದಿವ್ಯ ಭಾವಗಳೂ ವಿಚಾರಗಳೂ ಅವನಿಂದ ಹೊರಗೆ ಹರಿದು ಬರುತ್ತವೆ. ಹೀಗೆ ಎಲ್ಲಾ ಶ್ರೇಷ್ಠ ವಿಚಾರ

ಕರ ವಾಸ್ತವಾನುಭವವೂ ಅವರ ಪರಮೋಚ್ಚ ಸ್ಥಿತಿಯಲ್ಲಿರುವಾಗ ಪ್ರಪಂಚವು ಹುಸಿ ಯೆಂಬುದನ್ನೇ ಸಾರುತ್ತದೆ. ಇದನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸಬಹುದು. ನೀವು ಆಲೋಚಿಸುವಾಗ ಅಥವಾ ವಿಚಾರಿಸುವಾಗ ಒಂದು ವಿಷಯವನ್ನು ತೆಗೆದುಕೊಂಡು ಮುಂದುವರಿಯುತ್ತೀರಿ. ಮಿಕ್ಕ ಎಲ್ಲಾ ವಿಷಯಗಳನ್ನೂ ಹೊರಗೆಳೆದು ಒಂದೇ ವಿಷಯದ ಮೇಲೆ ಪೂರ್ಣ ಮನಸ್ಸಿನಿಂದ ಸಂಯಮ ಮಾಡುತ್ತೀರಿ. ನಿಮ್ಮ ಎಲ್ಲಾ ಶಕ್ತಿಗಳನ್ನೂ ಯುಕ್ತಿಗಳನ್ನೂ ಆ ಒಂದು ವಿಷಯದ ಮೇಲೇ ಕೇಂದ್ರೀಕರಣ ಮಾಡುತ್ತೀರಿ.

**The mind becomes saturated with that idea. The result is that the idea disappears and absolute super Consciousness results, absolute Consciousness which is the fountain head of all knowledge.**

ಮನಸ್ಸು ಆ ಒಂದು ವಿಚಾರದಿಂದ–ಭಾವನೆಯಿಂದ ಪೂರ್ಣ ತನ್ಮಯವಾಗುತ್ತದೆ. ಇದರ ಫಲಿತಾಂಶವೇನೆಂದರೆ ಆ ಒಂದು ಭಾವನೆಯು ತೋರದಂತಾಗುತ್ತದೆ; ಆಗ ಕೇವಲ ವೃತ್ತಿರಹಿತವಾದ ಶುದ್ಧ ಪ್ರಜ್ಞಾನವು, ಶುದ್ಧವಾದ ಅರಿವು ಮಾತ್ರ ಉಳಿಯುತ್ತದೆ. ನಿರಪೇಕ್ಷವೂ ಸ್ವತಂತ್ರವೂ ಪರಿಶುದ್ಧವೂ ಆದ ಅರಿವೇ ಸಕಲ ಜ್ಞಾನಕ್ಕೂ ಮೂಲ ಉಗಮಸ್ಥಾನ.

ಮನಶ್ಶಾಸ್ತ್ರದ ಸುಭದ್ರವಾದ ಒಂದು ನಿಯಮದಂತೆ ನಮಗೆ ಒಂದು ವಸ್ತುವಿನ ಅರಿವಾಗಬೇಕಾದರೆ, ಅದರಿಂದ ಬೇರೆಯಾದ ಇನ್ನೊಂದು ವಸ್ತುವು ಇರಬೇಕು. ಮನಸ್ಸಿನಲ್ಲಿ ಎರಡನೆಯ ಕಲ್ಪನೆ ಇಲ್ಲದಾಗ ಎಲ್ಲಾ ವಿಷಯದ ಅರಿವೂ ಅಡಗಿರುವುದರಿಂದ ಸ್ಫೂರ್ತಿಯ ನೆಲೆಯನ್ನು ಸೇರುತ್ತೇವೆ.

ಟೆನಿಸನ್‌ನು ತಾನು ಲಾರ್ಡ್ ಟೆನಿಸನ್ ಎಂಬ ಭಾವವನ್ನು ಮೀರಿದಾಗ ಮಾತ್ರವೇ ಅವನು ಮಹಾ ಕವಿ ಟೆನಿಸನ್ ಆಗಬಲ್ಲನು. ಬರ್ಕ್ಲೆಯು (Berkeley) ತನ್ನ ಗ್ರಂಥಗಳಿಗೆಲ್ಲಾ ಹಕ್ಕನ್ನು ಕಾದಿಟ್ಟುಕೊಂಡು, ಅವುಗಳನ್ನು ಸ್ವಂತ ಸಂಪತ್ತನ್ನಾಗಿ ಮಾಡಿಕೊಳ್ಳುವ ಧರ್ಮಾಧಿಕಾರಿ (ಬಿಷಪ್) ಅಲ್ಲದಿರುವಾಗ ಮಾತ್ರವೇ ಅವನು ಉದ್ದಾಮ ವಿಚಾರಶಾಲಿ ಬರ್ಕ್ಲೆ ಆಗುತ್ತಾನೆ. ಹ್ಯೂಂ (Hume) ಮಹಾಶಯನ ಚರಿತ್ರಕಾರನು ಘೋಷಿಸಿರುವ ವ್ಯಕ್ತಿತ್ವವನ್ನು ಅವನು ಮೀರಿದಾಗಲೇ ತತ್ತ್ವಜ್ಞಾನಿ ಹ್ಯೂಂ ಅವನಾಗಬಲ್ಲ. ಹಕ್ಸ್ಲೀ (Huxley) ಇತಿಹಾಸಕಾರನ ಹಕ್ಸ್ಲೀ ಅಲ್ಲದೆ, ಸರ್ವವೂ ತಾನೇ ಎಂಬಂತೆ ಆದಾಗಲೇ ವಿಜ್ಞಾನಿ ಹಕ್ಸ್ಲೀ ಆಗುತ್ತಾನೆ.

ನಮ್ಮ ಮೂಲಕವಾಗಿ ಯಾವದಾದರೂ ಭವ್ಯವೂ ಆಶ್ಚರ್ಯಕರವೂ ಆದ ಮಹಾ ಕಾರ್ಯವಾದಾಗ ಅದಕ್ಕಾಗಿ ಪ್ರಶಂಸೆಯನ್ನೂ ಪ್ರಶಸ್ತಿಯನ್ನೂ ನಾವು ತೆಗೆದುಕೊಳ್ಳುವದು ತಪ್ಪು ಮತ್ತು ಅವಿವೇಕ; ಏಕೆಂದರೆ ಆ ಕಾರ್ಯವು ನಡೆಯುತ್ತಿದ್ದಾಗ ಆ ಮೆಚ್ಚಿಕೆಯನ್ನು ಬಯಸುವ ಖ್ಯಾತಿಕಾಮಿಯಾದ ಅಹಂಕಾರವು ಪೂರಾ ಅಭಾವವಾಗಿತ್ತು. ಆಗ

ಅಹಂಕಾರವಿದ್ದಿದ್ದರೆ ಆ ಕಾರ್ಯದ ಸೌಂದರ್ಯವೇ ಕೆಟ್ಟು ಹೋಗುತ್ತಿತ್ತು. ಆಗ "ನಾನು ಮಾಡುತ್ತಿದ್ದೇನೆ" ಎಂಬ ಭಾವನೆಯು ಸ್ವಲ್ಪವೂ ಇರಲಿಲ್ಲ ಆ ಕ್ರಿಯಾ ಶಕ್ತಿಯು ತಾನಾಗಿಯೇ ದೇವರಿಂದ ಬಂದಿತು. ಹೀಗೆ ನಾವು ಈ ಉನ್ನತ ವಿಚಾರ ಧುರೀಣರೂ ಅಥವಾ ಮಹಾ ಲೇಖಕರೂ ತಮ್ಮ ತಮ್ಮ ಪರಮೋಚ್ಚಸ್ಥಿತಿಯಲ್ಲಿದ್ದಾಗ ವ್ಯಕ್ತಮಾಡಿದ ಅಭಿಪ್ರಾಯವನ್ನೂ ನಿರ್ಣಯವನ್ನೂ ತೆಗೆದುಕೊಂಡರೆ, ಈ ಪ್ರಪಂಚವು ಎಷ್ಟು ಮಾತ್ರವೂ ನಿಜವಲ್ಲವೆಂದು ಅವರ ಕೃತಿಯಿಂದಲೇ ಉಪದೇಶ ಮಾಡುತ್ತಿರುವದೂ ಇಲ್ಲ, ಅಷ್ಟೇ ಅಲ್ಲ, ತಮ್ಮ ದೇಹದ ಪ್ರತಿಯೊಂದು ರೋಮ ಕೂಪದಿಂದಲೂ ಸಾರುತ್ತಿರುವದೂ ಕಂಡುಬರುತ್ತದೆ. ಮಾತುಗಳಿಗಿಂತಲೂ ಕಾರ್ಯಗಳು ಹೆಚ್ಚು ಗಟ್ಟಿಯಾಗಿ ಬೋಧಿಸುತ್ತವೆ. ಯುದ್ಧ ಭೂಮಿಯಲ್ಲಿ ಮಹಾ ಯೋಧರೂ ಮಹಾ ಮಹಾ ವೀರರೂ ತಮ್ಮ ಪರಮಾವಧಿಯ ಶೌರ್ಯದಿಂದ ದೇಹಾಭಿಮಾನವಿಲ್ಲದೆ, ಮೃತ್ಯು ಭಯವಿಲ್ಲದೆ, ಪ್ರಪಂಚದ ಎಚ್ಚರವಿಲ್ಲದೆ ಹೋರಾಡುತ್ತಿರುತ್ತಾರೆ. ಅವರ ಸುತ್ತಮುತ್ತಲೂ ಗುಂಡುಗಳು ದಟ್ಟವಾಗಿ, ಭಯಂಕರ ವೇಗದಿಂದ ಹಾರುತ್ತಿರುತ್ತವೆ. ಅವರ ಮೈತುಂಬಾ ಗಾಯಗಳಾಗಿ ರಕ್ತವು ಚಿಮ್ಮಿ ಹರಿಯುತ್ತಿರುತ್ತದೆ. ಅವರ ಶರೀರಗಳೆಲ್ಲಾ ಛಿನ್ನ ಛಿನ್ನವಾಗುತ್ತವೆ. ಆದರೂ ಅವರು ಮುಂದೆ ಮುಂದೆ ಒತ್ತುತ್ತಾ ನುಗ್ಗುತ್ತಲೇ ಇರುತ್ತಾರೆ ಅಂಥಾ ಸ್ಥಿತಿಯಲ್ಲಿ ಆ ವೀರರ ದೃಷ್ಟಿಯಲ್ಲಿ ನೋವು ನೋವಲ್ಲ—ಸಾವಿಲ್ಲ, ಏಕೆ? ಏಕೆಂದರೆ, ವಾಸ್ತವವಾಗಿಯೂ ದೇಹವು ದೇಹವಲ ಪ್ರಪಂಚವು ಪ್ರಪಂಚವಲ್ಲ. ಶಕ್ತಿಯ ಭಾಷೆಯಲ್ಲಿ ಶೂರರು ತಮ್ಮ ದೇಹವನ್ನೂ ಜಗತ್ತನ್ನೂ ಹುಲ್ಲಿಗಿಂತಲೂ ಕಡೆಯಾಗಿ ನಿರಾಕರಿಸಿದಂತಾಗುತ್ತದೆ. ಬುದ್ಧಿಯು ವಿಶ್ವದೊಡನೆ ವ್ಯಕ್ತಿಯನ್ನು ಹೋಲಿಸಿ ವ್ಯಕ್ತಿಯು ಅತ್ಯಂತ ಕ್ಷುದ್ರವೆಂದು ಜರಿಯುತ್ತಿದ್ದರೂ ಶಕ್ತಿಯ ಸರ್ವಸ್ವವಾದ ವ್ಯಕ್ತಿಯ ನಿಜವಾದ ಆತ್ಮವು ವಿಜೃಂಭಿಸುವಾಗ ಪ್ರಪಂಚವು ಸರ್ವಶೂನ್ಯವಾಗುವದೆಂದು (ಇಲ್ಲವೇ ಇಲ್ಲವಾಗುವದೆಂದು) ನಿಮ್ಮ ನೆಪೋಲಿಯನ್, ವಾಷಿಂಗ್‌ಟನ್, ವೆಲ್ಲಿಂಗ್‌ಟನ್ ಮೊದಲಾದವರ ವೀರ ಚರಿತ್ರೆಯು ಸಾರಿ ಹೇಳುತ್ತಿದೆ. ಪರಮಜ್ಞಾನವೂ ಪರಮ ಶಕ್ತಿಯೂ ಆದ ನಿಜಾತ್ಮವು ಒಂದೇ ಪರಮಸತ್ಯ. ಪ್ರಗಾಢ ಸತ್ಯವಾದ ಆತ್ಮನ ಎದುರಿಗೆ ಪ್ರಪಂಚದ ತೋರಿಕೆಯ ಸತ್ಯವು ಕರಗಿಯೇ ಹೋಗುವದು.

ಯೋಧನ ಕೈಗಳನ್ನು ಶಕ್ತಿ ಸಂಪನ್ನವಾಗಿ ಮಾಡುವದು ಯಾವುದು? ಸರ್ವಶಕ್ತನಾದ ಆತ್ಮನ ದೃಢವೂ ಘನವೂ ಕಠಿಣವೂ ಆದ ಸತ್ಯದಲ್ಲಿ ಯೋಧನು ತಾತ್ಕಾಲಿಕವಾಗಿ ಒಂದಾಗುವದರಿಂದಲೇ ಆ ಶಕ್ತಿಯು ಅವನಲ್ಲಿ ವ್ಯಕ್ತವಾಗುತ್ತದೆ.

ವಿಜ್ಞಾನಿಗಳ ಮನಸ್ಸಿಗೆ ಎಷ್ಟೋ ಸಂಶೋಧನೆಗಳೂ (Discoveries) ಮತ್ತೂ ನೂತನ ನಿರ್ಮಾಣಗಳೂ (Inventions) ಸೂಚನೆಯಾಗುವದಕ್ಕೆ ಏನು ಕಾರಣ? ವಿಜ್ಞಾನಿಯ ಮನಸ್ಸೂ ಬುದ್ಧಿಯೂ ಸ್ವಲ್ಪ ಹೊತ್ತು ನಿಜಾತ್ಮನ ಅಥವಾ ದೇವರ ಗಾಢವಾದ ಸತ್ಯತೆಯಲ್ಲಿ ಹೀರಿಹೋಗುವುದೇ, ಕರಗಿಹೋಗುವದೇ ಕಾರಣ.

ನೀವೇ ಅದು; ಆ ಸತ್ಯವೇ ನೀವು. ನೀವೇ ವಿಶ್ವದ ಬೆಳಕು; ಪ್ರಭುಗಳಿಗೆಲ್ಲಾ ಪ್ರಭು; ಪವಿತ್ರಾತ್ಮರಿಗೆಲ್ಲಾ ಪವಿತ್ರಾತ್ಮ, ಉನ್ನತಗಳಲ್ಲೆಲ್ಲಾ ಅತ್ಯುನ್ನತ.

ಓಂ ಎಂಬ ಮಂತ್ರದಲ್ಲಿರುವ ಅ ಎಂಬ ಅಕ್ಷರವು ಎಚ್ಚರದ ಜಗತ್ತಿನ ಮಾಯಾಮಯವಾದ ತೋರಿಕೆಗೆ ಆಧಾರವಾಗಿರುವ ಕಠೋರ ಸತ್ಯವಾದ ನಿಮ್ಮ ಆತ್ಮನಿಗೆ ಪ್ರತೀಕವಾಗಿದೆ. 'ಉ' ಎಂಬದು ಸೂಕ್ಷ್ಮ ಮಾನಸಲೋಕವನ್ನೂ 'ಮ' ಎಂಬದು ಗಾಢನಿದ್ರೆಯ ಶೂನ್ಯಾವಸ್ಥೆಗೆ ಆಧಾರವಾಗಿದ್ದು ಅಜ್ಞೇಯವಾಗಿ ತೋರಿಕೊಳ್ಳುವ ಪರಮಾತ್ಮನಿಗೆ ಸೂಚಕವಾಗಿದೆ.

ಓಂಕಾರವನ್ನು ಉಚ್ಚರಿಸುವಾಗ ಜಾಣರು ಅಥವಾ ಯೋಗಯುಕ್ತರು ತಮ್ಮ ಲಕ್ಷ್ಯವನ್ನು ಕೇಂದ್ರೀಕರಿಸಿ, ಉದಯಕಾಲದಲ್ಲಿ ಸೂರ್ಯನು ಸಪ್ತವರ್ಣಗಳನ್ನೂ ಹೊರ ಚೆಲ್ಲಿ ಮಧ್ಯಾಹ್ನ ಕಾಲಕ್ಕೆ ಮುಂಚೆ ಎಲ್ಲವನ್ನೂ ತಿರುಗಿ ಹೀರಿಕೊಳ್ಳುವಂತೆ ಮೂರು ಲೋಕಗಳನ್ನೂ ಹೊರತೋರಿ ಪುನಃ ತನ್ನೊಳಗೆ ಅಡಗಿಸಿಕೊಳ್ಳುವ ನಿಮ್ಮ ಆತ್ಮನೇ ಕಠೋರ ಸತ್ಯವೆಂದು ಅನುಭವ ಪಡೆಯಲು ಭಾವನೆಗಳನ್ನು ಬೆಳೆಸಿಕೊಳ್ಳಿರಿ.

ಈ ಲೋಕಗಳೆಲ್ಲಾ ಕೇವಲ ದೃಶ್ಯ ವಿಲಾಸ. ನಿಮ್ಮ ಕನಸಿನಲ್ಲಿ ನೀವು ಒಂದು ತೋಳವನ್ನು ನೋಡಿ, ಅದು ನಿಮ್ಮನ್ನು ತಿನ್ನುವದೆಂದು, ನುಂಗಿ ಬಿಡುವದೆಂದು ಹೆದರುತ್ತೀರಿ. ಆದರೆ ಅದು ನಿಜವಾದ ತೋಳವಲ್ಲ; ನೀವೇ ತೋಳವಾಗಿ ನಿಮ್ಮನ್ನು ನೀವು ಭಯಪಡಿಸಿದಿರಿ— ಎಂಬದು ಎಚ್ಚರವಾದ ಮೇಲೆ ನೀವು ವಿಚಾರಮಾಡಿದರೆ ತಿಳಿಯುತ್ತದೆ. ಹಾಗೆಯೇ ಎಚ್ಚರದಲ್ಲಿ ಕೂಡ ನಿಮಗೆ ನೀವೇ ಶತ್ರುಗಳು, ನಿಮಗೆ ನೀವೇ ಮಿತ್ರರು—ಎಂದು ವೇದಾಂತವು ಹೇಳುತ್ತಿದೆ. ನೀವೇ ಸೂರ್ಯ; ಮತ್ತು ಸೂರ್ಯನನ್ನು ಪ್ರತಿಫಲಿಸುವ ಸರೋವರವೂ ನೀವೇ. ನೀವೇ ದೀಪ; ಅದರಲ್ಲಿ ಬಿದ್ದು ಸಾಯುವ ದೀಪದ ಹುಳುವೂ ನೀವೇ. ನಿಮಗೆ ಅತ್ಯಂತ ದ್ವೇಷಿಯಾದ ಶತ್ರು ಇರಬಹುದು; ಅವನೂ ನೀವೇ ಹೊರತು ಬೇರೆಯಲ್ಲ. ನೀವು ಓಂಕಾರವನ್ನು ಉಚ್ಚರಿಸುವಾಗ ನಿಮ್ಮ ಮನಸ್ಸಿನಿಂದ ದ್ವೇಷಾಸೂಯೆಗಳೆಲ್ಲಾ ನಿರ್ಮಲವಾಗುವಷ್ಟು ಉತ್ಕಟಾವಸ್ಥೆಗೆ ಎಲ್ಲವೂ ನಾನೇ ಎನ್ನುವ ಸರ್ವಾತ್ಮಭಾವನೆಯನ್ನು ಬೆಳೆಸಿಕೊಳ್ಳಬೇಕು ನಾನು-ಇನ್ನೊಂದು ಬೇರೆ ಎಂಬ ದ್ವೈತ ಭಾವನೆಯನ್ನು ಬೆಳೆಯಿಂದ ಕಳೆಯನ್ನು ಕಿತ್ತೊಗೆದಂತೆ ಕಿತ್ತೊಗೆಯಿರಿ. ಮಿತ್ರ ಅಥವಾ ಶತ್ರು ಎಂಬವನ ಮೂರ್ತಿಯೂ ರೂಪವೂ ನಿಮ್ಮ ಕನಸು ಮಾತ್ರ ನೀವೇ ಮಿತ್ರ, ನೀವೇ ಶತ್ರು, ನಿನ್ನೆ ನೀವು ಮಾಡಿದ ಕಾರ್ಯವೆಲ್ಲಾ ಇವತ್ತು ನಿಮ್ಮೊಡನೆ ಇವೆಯೇ? ಅವು ಕೇವಲ ನೆನಸಲ್ಲವೆ? ಕನಸಲ್ಲವೆ? ಅವೆಲ್ಲ ಹೊರಟುಹೋದವು. ನಿನ್ನೆಯ ವಸ್ತುಗಳು—ಅವೆಲ್ಲಿವೆ? ಅವು ಕಳೆದು ಹೋಗಿಲ್ಲವೆ? ಈ ದೃಷ್ಟಿಯಿಂದ ಎಚ್ಚರದ ಅನುಭವಗಳು ಕೂಡ ಒಂದು ಕನಸೆ. ಕನಸಿನ ಅನುಭವ ಹೇಗೂ ಕನಸೆ. ನಿಜವಾದ ಗಟ್ಟಿ—ನಾಣ್ಯವೂ ಕಠೋರ ಸತ್ಯವೂ ತೋರಿ ಹಾರುವ ಈ ಎಲ್ಲವುಗಳ ಹಿಂದೆ ಇದೆ; ಅದು ಎರಡನೆಯದೇನೂ ಇಲ್ಲದ ಒಂದಾಗಿದೆ. ಅದೇ ನೀವು. ಅದನ್ನು ಅನುಭವಕ್ಕೆ ತಂದುಕೊಳ್ಳಿರಿ.

ತಮ್ಮ ಇಚ್ಛೆಗಳನ್ನೂ ಭಾವನೆಗಳನ್ನೂ ಭೌತಿಕ ಭೂಮಿಕೆಯಲ್ಲಿ ಇಳಿಸಿ ಪುನೀ ಭೂತ ವಸ್ತುಗಳಾಗಿ ಪರಿವರ್ತಿಸಬೇಕೆಂಬ ಹುಚ್ಚು. ಸಮಸ್ತ ಭೌತಿಕ ವಸ್ತುಗಳೂ ನಮ್ಮ ಭಾವನಾ ಮಾತ್ರವೇ ಎನ್ನುವದನ್ನು ಮನಗಾಣದೇ ಅವರು ಹೀಗೆ ಭ್ರಮಿಸು ತ್ತಾರೆ. ಅವರು ಭಾವನಾ ಲೋಕದೊಡನೆ ಅಥವಾ ಸೂಕ್ಷ್ಮ ಭೌತಿಕ ಲೋಕದೊಡನೆ ಹೋಲಿಸಿ ಸ್ಥೂಲ ಭೌತಿಕ ಲೋಕವೇ ಸತ್ಯ ಅಥವಾ ಹೆಚ್ಚು ಸತ್ಯ ಎಂದು ತಿಳಿಯುತ್ತಾರೆ. ವೇದಾಂತದ ದೃಷ್ಟಿಯಿಂದ ಈ ಸ್ಥೂಲ ಭೌತಿಕ (ಭೂ) ಲೋಕವೂ ಸೂಕ್ಷ್ಮ ಭೌತಿಕ (ಭುವರ್) ಲೋಕವೂ ಎರಡೂ ಸುಳ್ಳೇ. ಇವೆರಡನ್ನೂ ಮೀರಿ ನಾವು ಮೇಲೇರ ಬೇಕು. ಏಕೆಂದರೆ, ವಿಶ್ರಾಂತಿಯೂ ನಿಜವಾದ ಶಾಂತಿಯೂ ಸುಖವೂ ಈ ಎಲ್ಲಾ ದೃಶ್ಯ ವಿಲಾಸಗಳ ಹಿಂದಿರುವ ಗಟ್ಟಿ ನಾಣ್ಯವಾದ (Hard cash) ಕಠೋರ ಸತ್ಯವನ್ನು ಅನುಭವಕ್ಕೆ ತಂದುಕೊಂಡಾಗಲೇ ಲಭಿಸುತ್ತವೆ.

ಓಂಕಾರದಲ್ಲಿರುವ 'ಅ' ಎಂಬ ಅಕ್ಷರವು ಕೆಲವು ಸಮಯ (ಮಾತ್ರ)ಅಥವಾ ರೂಪ ಎನಿಸುತ್ತದೆ. 'ಉ' ಎನ್ನುವದೂ (ಮಾತ್ರ) 'ಮ' ಎನ್ನುವದೂ (ಮಾತ್ರ) ಎನಿಸುತ್ತವೆ. ಆದರೆ ಓಂಕಾರವು ಮಾತ್ರ, (ಮಾತ್ರ) ಅಥವಾ ರೂಪದಲ್ಲಿಯೇ ನಿಲ್ಲುವದಿಲ್ಲ. ಈ ಎಲ್ಲಾ (ಮಾತ್ರ)ಗಳಿಗೆ ಆಧಾರವಾಗಿಯೂ ವ್ಯಾಪಕವಾಗಿಯೂ ಇರುವ ಗಟ್ಟಿ ನಾಣ ವಾದ ಸತ್ಯವನ್ನು ಇರುವಿಕೆಯನ್ನು–ಓಂಕಾರವು ಸೂಚಿಸುತ್ತದೆ, ತಿಳಿಸುತ್ತದೆ,– "ನಮಗೆ ವಾಸ್ತವವಾದ ಜೀವನ ಬೇಕು; ಬರಿ ಭಾವನೆಗಳೂ, ವಿಚಾರಗಳೂ, ಕಲ್ಪನೆಗಳೂ, ಅಭಿ ಪ್ರಾಯಗಳೂ ನಮಗೆ ಬೇಕಾಗಿಲ್ಲ". ಎಂದು ಈಗಿನ ಜನರು ಹೇಳುತ್ತಾರೆ. ಆಹಾ ! ಆಗಬಹುದು. ಜೀವನ ವೆಂದರೆ ಏನು ? ನಿಮಗೆ ಬೇಕಾಗಿರುವದು ಸ್ವಪ್ನಾವಸ್ಥೆಯ ಜೀವನವೋ ಗಾಢ ನಿದ್ರೆಯ ಜೀವನವೋ ? ಅಥವಾ ಜಾಗ್ರದವಸ್ಥೆಯ ಜೀವನವೋ ? ಇವೆಲ್ಲಾ ಕೇವಲ ತೋರಿಕೆ ಮಾತ್ರ. ನಿಜವಾದ ಜೀವನವು ಸತ್ಯವಾದ ಜೀವನವು ನೀವೇ, ನಿಮ್ಮ ಆತ್ಮನೇ !

"There are stern laws which will not allow you, enjoyments of pleasure for ever through the senses"

"ನೀವು ಇಂದ್ರಿಯಗಳಿಂದ ನಿರಂತರವಾಗಿ ವಿಷಯ ಸುಖವನ್ನು ಅನುಭವಿಸುತ್ತಲೇ ಇರುವದಕ್ಕೆ ಅವಕಾಶ ಕೊಡದಿರುವ ಕಠೋರ ನಿಯಮಗಳು ಪ್ರಕೃತಿಯಲ್ಲವೆ."ನಿಮ್ಮನ್ನು ನೀವು ಇಂದ್ರಿಯಗಳಿಗೆ ಮಾರಾಟ ಮಾಡಿಕೊಂಡು ಅದರಲ್ಲಿಯೇ ಸಂತೃಪ್ತರಾಗಿರುವದು ಸಾಧ್ಯವೆ ? ಇಲ್ಲ, ಎಂದಿಗೂ ಸಾಧ್ಯವಲ್ಲ.

There are most unrelenting unrestrainable laws which cannot allow you to be happy in sensual pleasures

"ಇಂದ್ರಿಯ ಸುಖಗಳಲ್ಲಿಯೇ ಸಂತೋಷವಾಗಿರುವದಕ್ಕೆ ಅವಕಾಶ ಕೊಡಲಾರ ದಿರುವ ಅತ್ಯಂತ ನಿರ್ದಯವಾದ, ತಡೆಗಟ್ಟಲಿಕ್ಕೆ ಸಾಧ್ಯವಲ್ಲದ ಕಠಿಣವಾದ ಪ್ರಕೃತಿ ನಿಯಮಗಳಿವೆ."

ಆತ್ಮನೇ ನಿಜವಾದ ಜೀವನ; ಗಟ್ಟಿ ನಾಣ್ಯ. ಇದನ್ನು ಅನುಭವಕ್ಕೆ ತೆಗೆದು ಕೊಂಡರೆ ಈ ಭೌತಿಕ ಸುಖಗಳೆಲ್ಲಾ ನಿಮ್ಮನ್ನೇ ಹುಡುಕಿಕೊಂಡು ಬರುತ್ತವೆ. ಬೆಂಕಿಗೆ ಪತಂಗಗಳೂ ಸಮುದ್ರವನ್ನು ಕುರಿತು ನದಿಗಳೂ ಮಹಾ ಚಕ್ರವರ್ತಿಗೆ ಸಾಮಾನ್ಯ ಅಧಿಕಾರಿಗಳೂ (ಗೌರವ ಸಲ್ಲಿಸುವದಕ್ಕೆ) ಬರುವಂತೆ—ಮಹಿಮಾ ಪೂರ್ಣನೂ ದೇವತಾ ಸಾರ್ವಭೌಮನೂ ಆದ —ಆತ್ಮನನ್ನು ಅರಿತ ನಿಮ್ಮನ್ನು ವಿಷಯ ಸುಖಗಳೇ ಹುಡುಕಿಕೊಂಡು ಬರುತ್ತವೆ. ಈ ಆತ್ಮನಿಗೇ ಓಂಕಾರವು ಪ್ರತಿನಿಧಿಯಾಗಿದೆ, ಪ್ರತೀಕವಾಗಿದೆ.

ಓಂಕಾರದ ಅ—ಉ—ಮ ಮಾತ್ರಗಳ ಮೂಲಕ (ಹಿಂದುಗಳು ಅಥವಾ) ವೇದಗಳು ನಿಮಗೆ ಸರ್ವಧಾರವಾದ ಸತ್ಯ ಸ್ವರೂಪವೇ ನೀವೆಂಬ ಸೂಚನೆಯನ್ನು ಕೊಡುತ್ತವೆ ಎಂದು ತಿಳಿಸಿದ್ದಾಗಿದೆ. ಓಂ ಎಂದರೆ ದೃಶ್ಯ ವಿಲಾಸಗಳ ಹಿನ್ನೆಲೆಯಲ್ಲಿ ಆಧಾರವಾಗಿರುವ ನಾಶರಹಿತವಾದ ನಿತ್ಯ ಸತ್ಯ—ಆತ್ಮ ; ಅದೇ ನೀವು. ಹೀಗೆ ಈ ಪವಿತ್ರ ಮಂತ್ರವಾದ ಓಂಕಾರವನ್ನು ಗಾನ ಮಾಡುವಾಗ ನಿಮ್ಮ ದೇಹವನ್ನೂ ಬುದ್ಧಿಯನ್ನೂ ನಿಮ್ಮ ನಿಜಾತ್ಮನಲ್ಲಿ ಕರಗಿಹೋಗುವಂತೆ ಎಸೆದು ಬಿಡಬೇಕು. ಈ ಮರ್ಮವನ್ನು ಮನಗಂಡು, ಓಂಕಾರವನ್ನು ಭಾವನೆಯ ಭಾಷೆಯಲ್ಲಿ ಗಾನಮಾಡಿರಿ; ಓಂಕಾರವನ್ನು ನಿಮ್ಮ ಕೃತಿಗಳ ಮೂಲಕ ಗಾನಮಾಡಿರಿ: ನಿಮ್ಮ ದೇಹದ ಪ್ರತಿಯೊಂದು ರೋಮಕೂಪದಿಂದಲೂ ಗಾನ ಮಾಡಿರಿ ನಿಮ್ಮ ನರ ನಾಡಿಗಳಲ್ಲೆಲ್ಲಾ ಓಂಕಾರ ಝೇಂಕಾರವೇ ತುಂಬಿ ಹರಿಯಲಿ; ನಿಮ್ಮ ಎದೆಯಲ್ಲಿ ಅದೇ ಸ್ಪಂದನವಾಗಲಿ. ನೀವೇ ಪ್ರಕಾಶಗಳಿಗೆಲ್ಲಾ ಪ್ರಕಾಶವೆಂದೂ ಸೂರ್ಯರಿಗೆಲ್ಲಾ ಸೂರ್ಯನೆಂದೂ ವಿಶ್ವಪ್ರಭುಗಳೆಂದೂ ದೇವಾಧಿದೇವನಾದ ಆತ್ಮನೆಂದೂ ನಿಮ್ಮ ದೇಹದಲ್ಲಿಯ ಪ್ರತಿಯೊಂದು ರೋಮವೂ ಪ್ರತಿಯೊಂದು ರಕ್ತ ಬಿಂದುವೂ ಸ್ಪಂದನವಾಗಲಿ. ಸೂರ್ಯ— ಚಂದ್ರ—ನಕ್ಷತ್ರಗಳು ನಿಮ್ಮ ಕಲಾಸೃಷ್ಟಿ; ದ್ಯಾವಾ ಪೃಥ್ವಿಗಳು (ಸ್ವರ್ಗ ಭೂಮಿಗಳು) ನಿಮ್ಮ ಕುಶಲ ನಿರ್ಮಾಣವಾಗಿವೆ. ನಿಮ್ಮ ಮಹಿಮಾ ವೈಭವವನ್ನೇ ಸಮಸ್ತವೂ ಸಾರುತ್ತಿವೆ. ಸಕಲ ಪ್ರಕೃತಿಯೂ ನಿಮಗೆ ಗೌರವವನ್ನು ಸಲ್ಲಿಸುತ್ತದೆ.

ಓಂ ! ಓಂ ! ಓಂ!

# (GOD WITHIN)
# ಒಳಗಿನ ದೇವರು

**ತಾ|| 24-12-1902 ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಹೆರ್ಮೆಟಿಕ್ ಬ್ರದರ್‌ಹುಡ್ ಹಾಲ್‌ನಲ್ಲಿ ಮಾಡಿದ ಉಪನ್ಯಾಸ.**

ಸ್ತ್ರೀ ಪುರುಷ ರೂಪದಲ್ಲಿರುವ ನನ್ನ ಆತ್ಮವೇ !

ಮೋಸೆಸ್‌ನ ಗ್ರಂಥದಲ್ಲಿ, ದೇವರು ಪ್ರಪಂಚವನ್ನು ಸೃಷ್ಟಿ ಮಾಡಿದನೆಂದು ಓದುತ್ತೇವೆ. ಅವನು ತನ್ನ ಕೈಕುಶಲತೆಯನ್ನು ತಾನೇ ನೋಡಿದ; ಓ ! ಅದು ದಿವ್ಯವೂ ಭವ್ಯವೂ ಸುಂದರವೂ ಆಗಿದ್ದಿತು. ಅದನ್ನು ನಾವು 'ಜೆನೆಸಿಸ್' ಎಂಬ ಗ್ರಂಥದಲ್ಲಿ ಓದುತ್ತೇವೆ; ಅದು ಹಾಗೆಯೇ ಇದೆ. "Thy will be done, Lord !" "ಪ್ರಭುವೇ ! ನಿನ್ನ ಇಚ್ಛೆಯಂತೆ ನಡೆಯುತ್ತದೆ. ಪ್ರಭುವೇ ! ನಿನ್ನ ಇಚ್ಛೆಯಂತೆ ನಡೆಯಲಿ" ಎನ್ನುವ ಮಾತಿನಲ್ಲಿ ತೋರುವ ಮನೋಭಾವವು ವೇದಾಂತದಿಂದ ಹೆಚ್ಚು ಬಲವತ್ತರವಾದ ಅರ್ಥವನ್ನು ಪಡೆಯುತ್ತದೆ. ಇದನ್ನೇ ಹಿಂದುಗಳು "My will is being done ; My will is being done" "ನನ್ನ ಇಚ್ಛೆಯಂತೆ ನಡೆಯುತ್ತದೆ; ನನ್ನ ಇಚ್ಛೆಯಂತೆಯೇ ಎಲ್ಲಾ ನಡೆಯುತ್ತಿದೆ." ಹೆಂಡತಿಯು ತನ್ನ ಇಚ್ಛೆಯನ್ನು ತನ್ನ ಗಂಡನ ಇಚ್ಛೆಯೊಡನೆ ಒಂದಾಗಿ ಎಣಿಸಿದಾಗ "ನನ್ನ ಇಚ್ಛೆಯೇ ನಡೆಯುತ್ತಿದೆ" ಎಂದು ಸಂತೋಷವಾಗಿ ಹೇಳಬಹುದು. ಆಕೆ "ನಿನ್ನ ಇಚ್ಛೆಯಂತೆ ನಡೆಯಲಿ" ಎಂದು ಪ್ರಾರ್ಥಿಸಬೇಕಾಗಿಲ್ಲ. ಏಕೆಂದರೆ, ಅವರು ಇಬ್ಬರಾಗಿಲ್ಲ; ಒಬ್ಬರೇ. ಆಕೆಯು ತನ್ನ ಇಚ್ಛೆಯನ್ನು ತನ್ನ ಗಂಡನ ಇಚ್ಛೆಗೆ ಬಗ್ಗಿ ವಶವಾಗುವಂತೆ ಮಾಡಲು ಮಹತ್ತಾದ ಪ್ರಯತ್ನ ಮಾಡಬೇಕಾಗಿ ಬಂದಿತು; ಆದರೆ, ಪುನಃ ಪುನಃ ಮಾಡಿದ ಅಭ್ಯಾಸದ ಬಲದಿಂದ ನಿಷ್ಠಾವಂತಳಾದ ನೆಚ್ಚಿನ ಪತ್ನಿಯು ತನಗೂ ತನ್ನ ಪತಿಗೂ ಮೊದಲಿದ್ದ ಭೇದಭಾವವನ್ನು ಜಯಿಸಿದ ಮೇಲೆ ತನ್ನ ಪತಿಯ ಕಾರ್ಯಗಳನ್ನೆಲ್ಲಾ ತನ್ನ ಕಾರ್ಯವೆಂದೇ ಭಾವಿಸಿ ಸಂತೋಷಪಡುತ್ತಾಳೆ. ಹಾಗೆಯೇ ವೇದಾಂತಿಯು ಪ್ರಪಂಚದಲ್ಲಿರುವ ಪ್ರತಿಯೊಂದನ್ನೂ ತನ್ನ ಕೃತಿಯೆಂದೇ ತಿಳಿದು ಆನಂದ ಪಡುತ್ತಾನೆ.

ತಿಳಿದಂಥವರಿಗೆ—

ಕಲ್ಲು ಗೋಡೆಗಳು ಸೆರೆಮನೆಯ ಮಾಳ್ಪುದಿಲ್ಲ,<br>
ಕಬ್ಬಿಣದ ಕಂಬಿಗಳು ಪಂಜರವ ಗೈವುದಿಲ್ಲ,

ನಿಷ್ಕಳಂಕ ಮನಸ್ಕರೂ, ಶಾಂತಗುಣದವರು
ತಸ್ಕರಾದಿಗಳ ಹಿಂಸಾಶ್ರಯವನೆ ಸುಧಾರಣಾಶ್ರಮವೆನಿಪರು.

ಅಜ್ಞ ಜನರು ಇದಕ್ಕೆ ವಿರುದ್ಧವಾಗಿ ತಮ್ಮ ನಿಜಾತ್ಮನನ್ನು ತಿಳಿಯದಿರುವದರಿಂದ ಅಹಂಕಾರಿಗಳೂ ಸ್ವಾರ್ಥಿಗಳೂ ಆಗಿ, ತಮ್ಮ ಹರ್ಮ್ಯಗಳನ್ನೂ ಅರಮನೆಗಳನ್ನೂ ಸೆರೆಮನೆಗಳಿಗಿಂತಲೂ ಗೋರಿಗಳಿಗಿಂತಲೂ ನರಕಗಳಿಗಿಂತಲೂ ಕಡೆಯಾಗಿ ಮಾಡಿಕೊಳ್ಳುತ್ತಾರೆ. ಅವರ ಕ್ಷುದ್ರವಾದ ಚಿಂತೆಗಳಿಂದಲೂ ಕ್ಷುಲ್ಲಕವಾದ ಬಯಕೆಗಳಿಂದಲೂ ಕಾಲ್ಪನಿಕವಾದ ಭಯಗಳಿಂದಲೂ ತಮ್ಮ ಸಂಕೋಲೆಗಳನ್ನು ತಾವೇ ಬಿಗಿದುಕೊಳ್ಳುತ್ತಾರೆ

ನಿಮ್ಮ ಸುಖಕ್ಕೆ ನೀವೇ ಕಾರಣರು, ಹೊಣೆಗಾರರು, ನಿಮ್ಮ ಸುಖವನ್ನು ನೀವೇ ಸಂಪಾದಿಸಿಕೊಳ್ಳಬೇಕು; ಅದು ನಿಮ್ಮ ಕಾರ್ಯ. ಕರ್ತವ್ಯ— ಎಂದು ವೇದಾಂತವು ತಿಳಿಸುತ್ತದೆ. ಹೀಗಿರುವಾಗ ಪ್ರಾಪಂಚಿಕ ಬಯಕೆಗಳೇಕೆ ನಡುವೆ ತಲೆಹಾಕಿ ನಮ್ಮ ಸುಖಕ್ಕೆ ಅಡ್ಡಿಯಾಗಬೇಕು? ಸತ್ಯವನ್ನು ಮನಗಂಡರೆ, ನೀವು ಮುಕ್ತರು. ಯುರೋಪ್ ಅಮೆರಿಕಾಗಳಲ್ಲಿ ಬಹು ಜನರು, ತಾವು ದೇವರಾಗಿ ಬದಲಾವಣೆ ಹೊಂದಬೇಕೆಂದೂ ಯಾವದೋ ರೂಪದಿಂದ ಪರಿಣಾಮ ಹೊಂದಿ ದೇವರಾಗಬೇಕೆಂದೂ ಅಥವಾ ದೇವತ್ವವನ್ನು ತಮ್ಮೊಳಗೆ ಸೃಷ್ಟಿಸಿಕೊಳ್ಳಬೇಕೆಂದೂ ತಿಳಿದಿರುವವರಿಂದ ವೇದಾಂತವನ್ನು ಅನುಭವಕ್ಕೆ ತಂದುಕೊಳ್ಳುವದು ಕಠಿಣವಾಗುತ್ತದೆ. ವೇದಾಂತದ ಪ್ರಕಾರ ನೀವು ಈಗಲೇ ದೇವರಾಗಿಯೇ ಇದ್ದೀರಿ; ನೀವು ದೇವರ ಹೊರತು ಬೇರೆಯಲ್ಲ ಎಂಬುದು ಸ್ವತಃ ಪ್ರಮಾಣವಾದ ಸತ್ಯ. ನಿಮ್ಮ ದೇವತ್ವವನ್ನು ನೀವು ಸಾಧಿಸಬೇಕಾದ್ದಿಲ್ಲ. ಅದನ್ನು ಸುಮ್ಮನೆ ಅರಿಯಬೇಕು, ಭಾವಿಸಬೇಕು; ಮತ್ತು ಅನುಭವಿಸಬೇಕು. ನೀವು ಅದನ್ನು ಆಚರಣೆಯಲ್ಲಿ ತರಬೇಕು; ಉಪಯೋಗ ಮಾಡಿಕೊಳ್ಳಬೇಕು. ಒಬ್ಬ ಮನುಷ್ಯನ ಮನೆಯಲ್ಲಿ ನೆಲದೊಳಗೆ ಮಹಾನಿಧಿ ಇದೆ; ಆದರೆ ಅವನು ಮರೆತಿದ್ದಾನೆ; ಇನ್ನೊಬ್ಬನ ಮನೆಯಲ್ಲಿ ನಿಧಿಯಿಲ್ಲ. ಆದರೆ ಇಬ್ಬರೂ ನಿಧಿಯ ಆಶೆಯಿಂದ ತಮ್ಮ ತಮ್ಮ ಮನೆಗಳಲ್ಲಿ ಅಗೆಯ ತೊಡಗಿದರು. ಹಣವಿದ್ದೂ ಮರೆತಿದ್ದವನ ಮನೆಯಲ್ಲಿ ಅಗೆದಿದ್ದರಿಂದ ಅವನಿಗೇನೋ ಹಣವು ಸಿಕ್ಕಿತು. ಆದರೆ ಹಣವೇ ಇಲ್ಲದಿದ್ದವನ ಮನೆಯಲ್ಲಿ ಎಷ್ಟು ಅಗೆದರೂ ಸ್ವಾಭಾವಿಕವಾಗಿಯೇ ಸಿಕ್ಕಲಿಲ್ಲ. ನಿಮ್ಮಲ್ಲಿ ಅಪಾರವಾದ ಐಶ್ವರ್ಯವಿದೆ; ಮರೆತಿದ್ದೀರಿ, ಅಷ್ಟೆ. ಅದನ್ನು ಅರಿತು, ಉಪಯೋಗಮಾಡಿಕೊಳ್ಳಬೇಕು; ಲೋಭಿಗಳಾಗಬಾರದು. ಇಲ್ಲದಿದ್ದ ನಿಧಿಯನ್ನೇನೂ ನೀವು ಅಲ್ಲಿ ತಂದಿಡಬೇಕಾಗಿಲ್ಲ; ಇರುವದನ್ನೇ ಉಪಯೋಗಿಸಿಕೊಳ್ಳಿ. ಸ್ವಭಾವದಿಂದ ನಿಮ್ಮ ಆತ್ಮನು ಅಪವಿತ್ರನೂ ಪಾಪಿಯೂ ಅಲ್ಲ. ಯಾವನೊಬ್ಬ ಮನುಷ್ಯನ (ಆದಿ ಮಾನವನ — ಆದಿಮನ—Adam?) ಪಾಪದಿಂದ ಆತನು ಪತನ ಹೊಂದಿಲ್ಲ; ಅದನ್ನು ಉದ್ಧಾರ

ಮಾಡುವದಕ್ಕೆ ಇನ್ನೊಬ್ಬ (ಮಹಾ) ಪುರುಷನ ಮಹಿಮೆಯಾಗಲೀ ದಯೆಯಾಗಲೀ ಕಾರಣವಾಗಿಲ್ಲ.

ಇಲ್ಲಿ ಒಂದು ಕಪ್ಪು ಹಲಗೆ ಇದೆ. ಅದು ಕಠಿಣವಾದ ಘನವಾದ ವಸ್ತು. ಅದನ್ನು ನೀವು ಬೇಕಾದಷ್ಟು ಸಲ ತಿಕ್ಕಬಹುದು; ಉಜ್ಜ ಬಹುದು. ಅದನ್ನು ನೀವು ಕನ್ನಡಿಯಂತೆ ಪಾರದರ್ಶಕ ಮಾಡುವದು ಸಾಧ್ಯವೆ? ಸಾಧ್ಯವಲ್ಲ. ಆದರೆ ಒಂದು ಕನ್ನಡಿಯನ್ನು ತೆಗೆದುಕೊಳ್ಳಿ. ಅದರ ಮೇಲೆ ಮಣ್ಣು ಹತ್ತಿರಬಹುದು, ಧೂಳು ಬಿದ್ದಿರಬಹುದು, ಅದು ಕೊಳೆಯಾಗಿರಬಹುದು. ಆದರೆ ನೀವದನ್ನು ಶುದ್ಧಿ ಮಾಡಿದರೆ ಪಾರದರ್ಶಕವಾಗುತ್ತದೆ. ನಿಮ್ಮ ಪ್ರಯತ್ನದಿಂದೇನೂ ನೀವದನ್ನು ಪಾರದರ್ಶಕ ಮಾಡಲಿಲ್ಲ; ಅಲ್ಲಿರುವದನ್ನೇ ಬೆಳಗುವಂತೆ ಮಾಡಿದಿರಿ. ಆದರೆ ಆ ಕಪ್ಪು ಹಲಗೆಯು ಆ ಸ್ವಭಾವದ್ದೇ ಅಲ್ಲವಾದ್ದರಿಂದ ಅದನ್ನು ಏನು ಮಾಡಿದರೂ ಪಾರದರ್ಶಕ ಮಾಡುವದು ಸಾಧ್ಯವಲ್ಲ. ತನಗೆ ಎಂದಾದರೂ ಮೋಕ್ಷವು ಸಾಧ್ಯವೆಂಬ ನಂಬಿಕೆಯು ಪ್ರತಿಯೊಬ್ಬನಲ್ಲಿಯೂ ಪ್ರಬಲವಾಗಿ ಒಳಗೇ ಅಡಗಿರುವದನ್ನು ನೋಡಿದರೆ, ತಾತ್ಕಾಲಿಕವಾಗಿ ಕಲುಷಿತವಾದಂತೆ ತೋರುವ ಆತ್ಮನ ಸಹಜವಾದ ಪರಿಶುದ್ಧತೆಯನ್ನೂ ಪಾಪಶೂನ್ಯತೆಯನ್ನೂ ಸ್ಪಷ್ಟಪಡಿಸುತ್ತದೆ. ಸಾರ್ವತ್ರಿಕವಾಗಿರುವ ಈ ಆತ್ಮೀಯ ವಿಶ್ವಾಸ್ವವು ನಿಜವಾದ ಆತ್ಮನು ಸ್ವಭಾವತಃ ಪಾಪಮಯನು—ಎಂಬ ಅಸ್ವಾಭಾವಿಕವಾದ ಸಿದ್ಧಾಂತವನ್ನು ಸುಳ್ಳುಮಾಡುತ್ತದೆ. ಮತ್ತು ಆತ್ಮನು ಸ್ವಭಾವದಿಂದ ಅಪವಿತ್ರನೆಂದಾದರೆ, ಕಪ್ಪು ಹಲಗೆಯನ್ನು ಪಾರದರ್ಶಕ ಮಾಡುವದು ಹೇಗೆ ಸಾಧ್ಯವಿಲ್ಲವೋ ಹಾಗೆ ಅವನನ್ನು ಪರಿಶುದ್ಧಗೊಳಿಸುವದಕ್ಕೂ ಪಾರದರ್ಶಕ ಮಾಡುವದಕ್ಕೂ ಎಂದೂ ಸಾಧ್ಯವಲ್ಲವೆಂಬ ತೀರ್ಮಾನಕ್ಕೆ ಒಯ್ಯುತ್ತದೆ. ಮನುಷ್ಯನ ನಿಜ ಸ್ವ[illegible] ದೇವರೇ. ಪರಮಾತ್ಮನೇ ಮನುಷ್ಯನ ನಿಜಾತ್ಮನಲ್ಲವಾಗಿದ್ದರೆ, ಈ ಪ್ರಪಂಚದಲ್ಲಿ [illegible]ಕಾತ್ಮರ ಅವತಾರವಾಗುವದು ಎಂದೂ ಸಾಧ್ಯವಿರುತ್ತಿರಲಿಲ್ಲ.

"ಹೆದರಬೇಡಿ; ನಿಮ್ಮ ಎಲ್ಲಾ ಬಲವನ್ನೂ ಶಕ್ತಿಯನ್ನೂ ಒಟ್ಟುಗೂಡಿಸಿ ಧೈರ್ಯವಾಗಿ 'ಅವನೇ ನಾನು' ಎನ್ನುವ ಜನ್ಮಸಿದ್ಧವಾದ ಭಾವನೆಯ ಹಕ್ಕನ್ನು ವಶಪಡಿಸಿಕೊಳ್ಳಿ. ಭಯಪಡಬೇಡಿ; ನಡುಗಬೇಡಿ" ಎಂದು ರಾಮನು ನಿಮಗೆ ಹೇಳುತ್ತಾನೆ.

ಮೋಸೆಸ್ಸನು (ಯಹೂದಿಗಳ ಗುರು) ಸಿನಾಯಿ (Sinai) ಪರ್ವತದ ಮೇಲೆ ಹೋಗುತ್ತಿದ್ದಾಗ ಗಿಡಗಳ ಒಂದು ಪೊದೆಯು ಉರಿಯುತ್ತಿದ್ದುದನ್ನು ಕಂಡನು. ಅವನು "ಅಲ್ಲಿರುವ ನೀನು ಯಾರು?" ಎಂದು ಕೇಳಿದ. ಅವನು ಬಾಯಿ ಬಿಟ್ಟು ಗಟ್ಟಿಯಾಗಿ ಕೇಳದೆ ಇದ್ದಿರಬಹುದು. ಆದರೆ ಆ ಪೊದೆಯಲ್ಲಿ ಪ್ರಕಾಶವಾಗಿ ಉರಿಯುತ್ತಿದ್ದರೂ ಅದನ್ನು ಸುಡದಿರುವದನ್ನು ನೋಡಿ, ಅದು ಏನೆಂದು ತಿಳಿಯಬೇಕೆಂದು ಅವನಿಗೆ ಸ್ವಾಭಾವಿಕವಾಗಿ ಆಶ್ಚರ್ಯವೂ ಕುತೂಹಲವೂ ಆಗಿರಬಹುದು. ಆ

ಪೊದೆಯಿಂದ ಉತ್ತರ ಬಂದಿತು: "I am what I am" "ನಾನು ನಾನೇ ಆಗಿದ್ದೇನೆ." ಈ ಪರಿಶುದ್ಧವಾ "I am" ನಾನಿದ್ದೇನೆ; "ಅಹಮಸ್ಮಿ, ಅಸ್ಮಿ" ನೀನಾಗಿದ್ದಿ.

ನಿಮ್ಮ ಆತ್ಮವು, ನಿಮ್ಮ ನಿಜ ಸ್ವಭಾವವು ಪಾರದರ್ಶಕವಾದ ವಜ್ರದಂತಿದೆ, ಉಜ್ವಲವಾದ ರತ್ನದಂತಿದೆ. ಕಪ್ಪಾದ ಒಂದು ವಸ್ತುವನ್ನು ಅದರ ಸಮೀಪದಲ್ಲಿ ಇಟ್ಟರೆ, ಆ ಹರಳೂ ಕಪ್ಪಾಗಿಯೇ ಕಾಣುತ್ತದೆ. ಆ ನಿರ್ಮಲ ಹರಳಿನ ಪಕ್ಕದಲ್ಲಿ ಕೆಂಪು ವಸ್ತುವೊಂದನ್ನು ಇಟ್ಟರೆ ಆ ಹರಳೂ ಕೆಂಪಗೇ ಕಾಣುತ್ತದೆ. . . . ಇತ್ಯಾದಿ. ನಿಜವಾಗಿ ನೋಡಿದರೆ, ಆ ಶುದ್ಧವಾದ ಹರಳಿನಲ್ಲಿ ಯಾವ ಬಣ್ಣವೂ ಇಲ್ಲ. ಅದು ಕಪ್ಪು ಕೆಂಪು ಮೊದಲಾದ ಎಲ್ಲಾ ಬಣ್ಣಗಳಿಗೂ ಆಚೆ ತಾನೇ ತಾನಾಗಿದೆ. "ಅದು ಇದ್ದಂತೆ ಇದೆ." ಅದು ತಾನೇ ಹೇಳುವದಾದರೆ, "ನಾನಿದ್ದೇನೆ" ಎಂದು ಮಾತ್ರ ಹೇಳಬಹುದು. ಏಕೆಂದರೆ, ಅದು "ನಾನು ಹಾಗಿದ್ದೇನೆ, ಹೀಗಿದ್ದೇನೆ" ಎನ್ನುವದಕ್ಕೆ ಅದರಲ್ಲಿ ಯಾವ ಗುಣದ ಆರೋಪವೂ ಇಲ್ಲ.

ಇಂಡಿಯಾದಲ್ಲಿರುವ ಮನುಷ್ಯನು ತನ್ನ ಪರಿಶುದ್ಧವಾದ ಆತ್ಮನ ಸಮೀಪದಲ್ಲಿ ಒಂದು ಕೆಂದು ಬಣ್ಣದ ಹರಕು ಬಟ್ಟೆಯನ್ನು —ಹಿಂದೂ ಬಣ್ಣವನ್ನು—ಇಟ್ಟುಕೊಳ್ಳುತ್ತಾನೆ. ಆತ್ಮನು ನಿರ್ಮಲವಾದ ಹರಳಿನಂತೆ ಇರುವದರಿಂದ ಆ ಬಣ್ಣದಿಂದ ರಂಜಿತನಾದಂತೆ ತೋರುತ್ತಾನೆ. ಇದರಿಂದ ಪರಿಶುದ್ಧವಾದ 'ನಾನಿದ್ದೇನೆ' ಎನ್ನುವದು "ನಾನು ಹಿಂದುವಾಗಿದ್ದೇನೆ" ಎಂಬ ಭಾವನೆಯಾಗುತ್ತದೆ. ಅಮೆರಿಕಾದಲ್ಲಿ ವರ್ಣರಹಿತವೂ ನಾಮರೂಪ ರಹಿತವೂ ಆದ ನಿರ್ಮಲ ರತ್ನದಂಥಾ ಆತ್ಮನ ಸಮೀಪದಲ್ಲಿ ಒಂದು ಹಳದಿಯ ಹರಕು ಬಟ್ಟೆಯನ್ನು ಇಟ್ಟಂತೆ, ಅಮೆರಿಕದವನು "ನಾನು ಒಬ್ಬ ಅಮೆರಿಕನ್" ಎಂದು ಭಾವಿಸುತ್ತಾನೆ. ನಿಷ್ಕಳಂಕವಾದ "ನಾನಿದ್ದೇನೆ" ಎನ್ನುವದು "ನಾನು ಅಮೆರಿಕನ್ ಆಗಿದ್ದೇನೆ" ಎಂದು ಭಾವನೆಯಾಗುತ್ತದೆ. ಇನ್ನೊಂದು ವ್ಯಕ್ತಿಯು ಪರಿಶುದ್ಧವಾದ ಪಾರದರ್ಶಕ ರತ್ನವಾದ ಆತ್ಮನ ಸಮೀಪದಲ್ಲಿ ಕೆಂಪು ಬಟ್ಟೆಯನ್ನೋ ಕೆಂಪು ಕಾಗದವನ್ನೋ ಇಟ್ಟರೆ ಆ ಹರಳು ಕೆಂಪಾಗಿ ಕಂಡಂತೆ 'ನಾನಿದ್ದೇನೆ' ಎನ್ನುವದು ನಾನು 'ಹೆಂಗಸಾಗಿದ್ದೇನೆ' ಎಂದಾಗುತ್ತದೆ. ಇನ್ನೊಬ್ಬನು ಆತ್ಮನ ಸಮೀಪದಲ್ಲಿ ಬೇರೊಂದು ಬಗೆಯ ಬಣ್ಣವನ್ನು ಇಡುತ್ತಾನೆ; ಇದರಿಂದ ಕೇವಲ 'ನಾನಿದ್ದೇನೆ' ಎನ್ನುವ ಆತ್ಮನು 'ನಾನು ಮಾಸ್ಟರ್ ಆಫ್ ಆರ್ಟ್ಸ್' ಆಗಿದ್ದೇನೆ,—ಎಂದಾಗುತ್ತಾನೆ. ಹೀಗೆ ನೋಡಿದರೆ ಒಬ್ಬನು 'ನಾನು ಕ್ರೈಸ್ತನಾಗಿದ್ದೇನೆ' ಎಂದೂ. ಎರಡನೆಯವನು 'ನಾನು ಹಿಂದು ಆಗಿದ್ದೇನೆ', ಎಂದೂ ಮೂರನೆಯವನು 'ನಾನೊಬ್ಬ ಯಾಂಕಿ, ಅಮೆರಿಕನ್ ಆಗಿದ್ದೇನೆ' ಎಂದೂ ನಾಲ್ಕನೆಯವನು 'ನಾನೊಬ್ಬ ಆಂಗ್ಲ ಜಾನ್ ಬುಲ್' ಆಗಿದ್ದೇನೆ ಎಂದೂ ಐದನೆಯ ವ್ಯಕ್ತಿ 'ನಾನೊಂದು ಮಗುವಾಗಿದ್ದೇನೆ' ಎಂದೂ ಆರನೆಯದು 'ನಾನೊಂದು

'ಹೆಂಗಸು' ಎಂದೂ ಏಳನೆಯದು 'ನಾನೊಂದು ಸಿಂಹ' ಎಂದೂ ಎಂಟನೆಯದು 'ನಾನೊಂದು ಹುಲಿ' ಎಂದೂ ಇತ್ಯಾದಿಯಾಗಿ ಭಾವಿಸುತ್ತಾರೆ. ಈ ಬೇರೆ ಬೇರೆ ನಾಮ ರೂಪಗಳಲ್ಲಿ ಯಾವ ಬಣ್ಣವೂ ಕೊಳೆಯೂ ಇಲ್ಲದೆ ಥಳಥಳಿಸುತ್ತಿರುವ 'ನಾನಿದ್ದೇನೆ' ಎನ್ನುವ ಓಂಕಾರ ರೂಪ ಆತ್ಮನೇ ಸರ್ವ ಸಮಾನವಾಗಿಯೂ ಸಾಮಾನ್ಯವಾಗಿಯೂ ತುಂಬಿದ್ದಾನೆ. ಅವನು ಯಾವ ಬದಲಾವಣೆಯನ್ನೂ ಬಣ್ಣವನ್ನೂ ಹೊಂದತಕ್ಕವ ನಲ್ಲ. ನಿಮ್ಮ ಅಜ್ಞಾನದಿಂದಲೇ ಆತ್ಮನಲ್ಲಿ ಆ ಬಗೆ ಬಗೆಯ ಬಣ್ಣಗಳು ಆರೋಪಿತ ವಾಗುತ್ತವೆ. ಪಾರದರ್ಶಕವಾದ ಕನ್ನಡಿಯನ್ನು ತೆಗೆದುಕೊಂಡು ಅದರ ಸಮೀಪ ದಲ್ಲಿ ಯಾವ ಬಣ್ಣವನ್ನಾದರೂ ಇಟ್ಟರೆ, ಬಣ್ಣವೇನೂ ಅದರಲ್ಲಿ ಇಳಿಯುವದಿಲ್ಲ; ಆ ಬಣ್ಣವು ಆ ಕನ್ನಡಿಯಲ್ಲಿ ಸುಮ್ಮನೆ ಪ್ರತಿಫಲನವಾಗುತ್ತದೆ; ಅದು ಅದಕ್ಕೆ ಅಂಟಿ ಕೊಂಡಿರುವದಿಲ್ಲ. ಹರಳು ಯಾವಾಗಲೂ ವರ್ಣರಹಿತವೂ ನಿರ್ಮಲವೂ ಆಗಿರು ತ್ತದೆ. "ನಾನಿದ್ದೇನೆ" ಎನ್ನುವದು ಸರ್ವ ವ್ಯಾಪಕವೂ ಸಾರ್ವತ್ರಿಕವೂ ಆಗಿದೆ. ಹುಲಿ ಯೂ ಸಿಂಹವೂ ಸಹಿತ 'ನಾನಿದ್ದೇನೆ' ಎನ್ನುವ ಭಾವವನ್ನೇ ತೋರಿಸುತ್ತದೆ. ಈ ಕೇವಲ ಶುದ್ಧವಾದ 'ನಾನಿದ್ದೇನೆ' ಎನ್ನುವದೇ ನೀವಾಗಿದ್ದೀರಿ. ನಿಮ್ಮ ಆತ್ಮನ ಸಮೀಪ ದಲ್ಲಿರುವ ಈ ಬಣ್ಣದ ಬಟ್ಟೆಯನ್ನೋ ಬಣ್ಣದ ಕಾಗದವನ್ನೋ ನೀವೆಂದು ತಿಳಿಯುವ ದಕ್ಕೆ ನಿಮಗೆ ಅಧಿಕಾರವಿಲ್ಲ. ಏಕೆಂದರೆ, ಹಿಂದೆ ಈ ನಿರ್ವಿಕಾರಿಯಾದ ಆತ್ಮನು ಬೇರೆ ರೂಪಗಳಲ್ಲಿ ವಾಸಮಾಡುತ್ತಿದ್ದನು. ಈ 'ನಾನಿದ್ದೇನೆ' ಎನ್ನುವ ಆತ್ಮನು ಬೇರೆ ಬೇರೆ ಶರೀರಗಳಲ್ಲಿ ಇದ್ದನು. ನೀವು ನಿಮ್ಮ ಹಿಂದಿನ ಯಾವದೋ ಜನ್ಮಗಳಲ್ಲಿ 'ನಾನು ಸಿಂಹ' 'ನಾನು ಹುಲಿ' 'ನಾನು ಎತ್ತು' 'ನಾನು ಕತ್ತೆ' ಎಂದು ಭಾವಿಸಿರಬಹುದು. ನಿಜವಾದ 'ನಾನಿದ್ದೇನೆ'ಎಂಬ ನಿಜಾತ್ಮನನ್ನು ಅರಿಯುವದರಿಂದಲೇ ನೀವು ಸುಖವನ್ನೂ ಸ್ವಾತಂತ್ರ್ಯ ವನ್ನೂ ಪಡೆಯುತ್ತೀರಿ. ಅದು ನಿನ್ನೆಯೂ ಇವತ್ತೂ ನಾಳೆಯೂ ಎಂದೆಂದೂ ಒಂದೇ ಬಗೆಯಾಗಿದೆ. ಕಾಲವು ಅದನ್ನು ರೂಪಾಂತರ ಗೊಳಿಸಲಾರದು. ಹಿಂದಿನ ಜನ್ಮಗಳಲ್ಲಿಯೂ ಮುಂದಿನ ಜನ್ಮಗಳಲ್ಲಿಯೂ 'ನಾನಿದ್ದೇನೆ' ಎನ್ನುವದು ಒಂದೇ ಬಗೆಯಾಗಿರುತ್ತದೆ. ಅದನ್ನು ದೇಶವೂ ಬಾಧಿಸಲಾರದು; ಏಕೆಂದರೆ ಈ ಎಲ್ಲಾ ಶರೀರ ಗಳಲ್ಲಿಯೂ 'ನಾನಿದ್ದೇನೆ' ಎನ್ನುವದೇ ತುಂಬಿದೆ. ಅದಕ್ಕೆ ಎಲ್ಲಾ ಕಾಲಗಳೂ ಸುಮ್ಮನೆ 'ಈಗ' ಎಂದೂ ಎಲ್ಲಾ ದೇಶವೂ ಅದಕ್ಕೆ 'ಇಲ್ಲಿ' ಎಂದೂ ಆಗಿದೆ. ಈ ಶುದ್ಧವಾದ 'ನಾನಿದ್ದೇನೆ' ಎನ್ನುವದು ನಿತ್ಯವಾದ ಇರುವಿಕೆಯನ್ನೂ ಎಂದೂ ಬದಲಾವಣೆ ಹೊಂದ ದಿರುವ ಸತ್ಯವನ್ನೂ ಸೂಚಿಸುತ್ತದೆ. ಈ 'ನಾನಿದ್ದೇನೆ' ಎನ್ನುವದು ಓಂಕಾರದಿಂದ ಸೂಚಿತವಾಗುತ್ತದೆ. 'ನಾನಿದ್ದೇನೆ' 'ನಾನು ಅವನಾಗಿದ್ದೇನೆ' ಎನ್ನುವದನ್ನೇ ಓಂಕಾರವು ತಿಳಿಸುತ್ತದೆ.

ಪರ್ಷಿಯನ್ ಭಾಷೆಯಲ್ಲಿ ಓಂ ಎಂದರೆ **'O-am'** 'ಓ ನಾನಾಗಿದ್ದೇನೆ' 'ನಾನೇ ಅವನು' 'ನಾನು ಬ್ರಹ್ಮನಾಗಿದ್ದೇನೆ'—ಎಂದು.

ಮೋಸೆಸ್‌ನ ವಿಷಯದಲ್ಲಿ ರಾಮನು ಕೆಲವು ಮಾತುಗಳನ್ನು ಹೇಳಬಯಸುತ್ತಾನೆ. ಮೋಸೆಸ್ಸನು ಆ ಪೊದೆಯಲ್ಲಿ ಆ ಉರಿಯನ್ನು ನೋಡಿ ಆ ವಾಣಿಯನ್ನು ಕೇಳಿದಾಗಲೇ ಅವನ ಸಮೀಪದಲ್ಲಿ ಬುಸುಗುಟ್ಟುವ ಒಂದು ಹಾವನ್ನೂ ಕಂಡನು. ಮೋಸೆಸ್ಸನು ಹೌಹಾರಿ ದಿಗ್ಭ್ರಾಂತನಾದನು; ಅವನು ನಡುಗಿದನು, ಅವನ ಎದೆ ಬಡಿದುಕೊಳ್ಳುತ್ತಿತ್ತು. ಅವನ ನರನಾಡಿಗಳಲ್ಲಿದ್ದ ರಕ್ತವೆಲ್ಲಾ ಹೆಪ್ಪುಗಟ್ಟಿ ಕೊಂಡಿತು. 'ಅಯ್ಯೋ! ನನ್ನ ಬಾಳೇ ಮುಗಿಯಿತು' ಎಂದುಕೊಂಡನು. ಆಗ ಅವನಿಗೆ ಒಂದು ವಾಣಿಯು ಕೂಗಿ ಹೇಳಿತು: "ಓ ಮೋಸೆಸ್! ಭಯ ಪಡಬೇಡ. ಆ ಸರ್ಪವನ್ನು ಹಿಡಿ. ಅದನ್ನು ಗಟ್ಟಿಯಾಗಿ ಹಿಡಿದುಕೋ. ಅದನ್ನು ಹಿಡಿದುಕೊಳ್ಳಲು ಧೈರ್ಯ ಮಾಡು; ಧೈರ್ಯ ಮಾಡು." ಆದರೂ ಮೋಸೆಸ್ಸನು ನಡುಗಿದನು; ಪುನಃ ಆ ವಾಣಿಯು ಅವನನ್ನು ಕುರಿತು "ಮೋಸೆಸ್! ಧೈರ್ಯವಾಗಿ ಮುಂದೆ ಬಾ. ಆ ಹಾವನ್ನು ಹಿಡಿದುಕೋ" ಎಂದು ಕೂಗಿತು. ಆಗ ಅವನು ಬಹಳ ಧೈರ್ಯಮಾಡಿ ಅದನ್ನು ಹಿಡಿದುಕೊಂಡನು. ಆಹಾ! ಅದು ಅತ್ಯಂತ ಸುಂದರವೂ ದಿವ್ಯವೂ ಆದ ದಂಡವಾಗಿದ್ದಿತು; ದೊಣ್ಣೆಯಾಗಿದ್ದಿತು. ಇದಿಷ್ಟು ಆ ಕಥೆ; ಅಥವಾ ಪ್ರಸಂಗ. ಈಗ, ಇದರ ಅರ್ಥವೇನು? ಅದರಲ್ಲಿ ಸತ್ಯವನ್ನೇ (ಸಚ್) ಸರ್ಪ (ಸರ್ಪ್) ಎಂದು ಹೇಳಿದೆ. ಹಿಂದೂಗಳೂ ಮತ್ತು ಬೇರೆ ಪೌರ್ವಾತ್ಯರೂ ಆತ್ಯಂತಿಕ ಸತ್ಯಕ್ಕೆ ಸರ್ಪವನ್ನೇ ಆದಿಶೇಷನನ್ನೇ ಸಂಕೇತವಾಗಿ ಹೇಳುತ್ತಾರೆ. ಸರ್ಪವು ವೃತ್ತಗಳೊಳಗೆ ವೃತ್ತಗಳನ್ನು ಇರಿಸಿದಂತೆ ಮಂಡಲದೊಳಗೆ ಮಂಡಲ ಹಾಕಿ ಸುರುಳಿ ಸುತ್ತಿಕೊಂಡು ಬಾಲದ ತುದಿಯನ್ನು ಬಾಯಿಯಲ್ಲಿ ಇಟ್ಟುಕೊಂಡಿರುತ್ತದೆ. ಹೀಗೆ ಪ್ರತಿಯೊಂದೂ ಪುನಃ ಪುನಃ ಉಚ್ಚರಿತವಾಗಿ ಸುತ್ತು ಸುತ್ತು ಹಾಕಿ ಅಂತಿಮಗಳು ಸೇರುವದರಿಂದ ಈ ಪ್ರಪಂಚದಲ್ಲಿ ಎಲ್ಲವೂ ವೃತ್ತಗಳೊಳಗೆ ವೃತ್ತಗಳಾಗಿವೆ. ಇದು ಇಡೀ ವಿಶ್ವದಲ್ಲಿ ವ್ಯಾಪಕವಾಗಿರುವ ಸಾರ್ವತ್ರಿಕ ನಿಯಮ ಅಥವಾ ತತ್ತ್ವ. ಹಾವನ್ನು ಹಿಡಿದು ಕೊಳ್ಳುವದೆಂದರೆ, ದೈವೀ ನಿಯಮವನ್ನು ಚಲಾಯಿಸತಕ್ಕ ವಿಶ್ವ ಪ್ರಭುವಿನ ಸ್ಥಾನದಲ್ಲಿ ನೀವು ಧೈರ್ಯವಾಗಿ ನಿಲ್ಲುವದು. ನೀವು ಹಾಗೆ ಮಾಡಿ, ನೀವೇ ದೇವರೆಂಬುದನ್ನು ಮನಗಾಣಿರಿ.

ಮೋಸೆಸ್ಸನು ಗುಲಾಮಗಿರಿಯಲ್ಲಿದ್ದ ಜನರ ಕುಲಕ್ಕೆ ಸೇರಿದವನಾಗಿದ್ದನು. ಆಗಿನ ಕಾಲದಲ್ಲಿ ಯಹೂದಿಗಳು ಬಹಳ ಕಷ್ಟ ಸ್ಥಿತಿಯಲ್ಲಿದ್ದರು. ಅವರ ತೌರುನಾಡಿನಿಂದ ಅವರು ಹೊರ ಓಡಿಸಲ್ಪಟ್ಟಿದ್ದರಿಂದ ಅಲೆದಾಟದವರಾಗಿದ್ದರು. ಅವರು ಅನೇಕ ಪೀಡೆಗಳಿಗೂ ಹಿಂಸೆಗಳಿಗೂ ಗುರಿಯಾಗಿದ್ದರಿಂದ ದೇವರನ್ನೂ ಸಂಪೂರ್ಣ, ನಿರಂಕುಶ ಪೀಡಕ ಪ್ರಭುವಿರಬೇಕೆಂದು ನಂಬಿದ್ದುದು ಸ್ವಾಭಾವಿಕವೇ ಆಗಿದೆ.

ಹೋರಿಗಳು ಸೇರಿ ವಿಶ್ವಧರ್ಮ ಸಮ್ಮೇಳನವನ್ನು ನಡೆಸಿದರೆ, ದೇವರ ವಿಷಯ ಅವುಗಳ ಕಲ್ಪನೆಯೂ ವಿವರಣೆಯೂ ಹೇಗಿರಬಹುದು? ದೇವರೆಂದರೆ ಬೇರೆ ಏ

ಹೋರಿಯಾನ್ನಾದರೂ ಹೆದರಿಸಿ ಸಾಯಿಸಿ ಬಿಡುವಷ್ಟು ಮಹಾ ಬಲಿಷ್ಠವೂ ಭಯಂಕರವೂ ಆದ ಗೂಳಿ, ಮಹಾ ವೃಷಭ, ವೃಷಭರಾಜ ಎಂದೇ ವಿವರಿಸಬಹುದು. ಅಥವಾ ವರ್ಣಿಸಬಹುದು. ಸಿಂಹಗಳೆಲ್ಲಾ ಒಂದು ವೇಳೆ ಒಟ್ಟುಸೇರಿ ತಮ್ಮದೇ ಆದ ಧಾರ್ಮಿಕ ಸಮ್ಮೇಳನವನ್ನು ನಡೆಸುವದಾದರೆ ತಮ್ಮೊಳಗೆಲ್ಲಾ ಅತ್ಯಂತ ದೊಡ್ಡದೂ ಅತ್ಯಂತ ಬಲಿಷ್ಠವೂ ಅತ್ಯಂತ ಭಯಂಕರವೂ ಆದ ಸಿಂಹವೇ ದೇವರೆಂದು ತಿಳಿಯುತ್ತಿದ್ದವು. ನಿಮ್ಮಗಿರುವ ಭಾವನಾಶಕ್ತಿಗಿಂತಲೂ, ಹೆಚ್ಚಾಗಿ ಅದನ್ನೂ ಮೀರಿ ಏನಾದರೂ ಭಾವಿಸಬಲ್ಲಿರಾ? ನಿಮ್ಮನ್ನು ಎಲ್ಲ ಕಡೆಯಿಂದಲೂ ಸುತ್ತಿಕೊಂಡಿರುವ ದೇಹದ ಚರ್ಮದಿಂದ ಹೊರಗೆ ಹಾರಬಲ್ಲಿರಾ? ಇಲ್ಲ; ಸಿಂಹಗಳೆಲ್ಲಾ ಸೇರಿ ಬೇಕಾದಷ್ಟು ವಿಚಾರಮಾಡಲಿ, ಅವುಗಳು ಒಂದು ಮಹಾದ್ಭುತ ಸಿಂಹವನ್ನೇ ದೇವರೆಂದು ಶೀರ್ಮಾನಿಸುವದು ಖಂಡಿತ. ಹಾಗೆಯೇ ಭಯಗ್ರಸ್ತ ಜನರು ದೇವರನ್ನು ಭಾವಿಸುವದಕ್ಕೆ ತೊಡಗಿದರೆ, ಅವನು ಗುಲಾಮರಿಗೆಲ್ಲಾ ಗುರುವೆಂದೂ ಮಹಾ ಭೂತವೆಂದೂ ಮಹಾ ಪ್ರಭುವೆಂದೂ ಘೋರ ರುದ್ರನೆಂದೂ ಅವರು ಭಾವಿಸದಿರಲು ಸಾಧ್ಯವೇ ಇಲ್ಲ. ಆದ್ದರಿಂದಲೇ ಯಹೂದಿಗಳು ದೇವರನ್ನು ಅದ್ಭುತವೂ ಭವ್ಯವೂ ಆದ ಪ್ರಭುವೆಂದೂ ಗುರುವೆಂದೂ ಸ್ವಾಭಾವಿಕವಾಗಿ ವರ್ಣಿಸಿದರು, ಚಿತ್ರಿಸಿದರು.

ಅನೇಕ ಪೌರ್ವಾತ್ಯ ಭಾಷೆಗಳಲ್ಲಿ, ಅದರಲ್ಲಿಯೂ ಮುಖ್ಯವಾಗಿ ಸೆಮೆಟಿಕ್ (Semetic); ಯೆಹೂದ್ಯ, ಆರಮಿಯನ್, ಫಿನಿಷಿಯನ್, ಅರಬ್, ಅಸ್ಸೀರಿಯನ್ ಮೊದಲಾದ ಭಾಷೆಗಳಲ್ಲಿ ದೇವರಿಗೆ ಮಲಿಕ್ ಎನ್ನುತ್ತಾರೆ. ಮಲಿಕ್ ಎನ್ನುವದನ್ನು ಗುರು ಎಂದು ಭಾಷಾಂತರಿಸುತ್ತಾರೆ. ಈ ನಾಮದ ಮೂಲವೇನು? ಉತ್ಪತ್ತಿ ಹೇಗೆ ಎನ್ನುವ ವಿಷಯದಲ್ಲಿ ಕೆಲವು ಮಾತುಗಳು ಅಪ್ರಸಕ್ತವಾಗಲಾರದು.

ಯಹೂದಿಗಳಲ್ಲಿ ಅನೇಕ ವಂಶಗಳಿದ್ದವು. ಪ್ರತಿಯೊಂದು ಕುಲಕ್ಕೂ ಸಂಬಂಧಪಟ್ಟ ಒಂದು ದೇವರಿತ್ತು. ಒಂದು ವಂಶದ ದೇವರನ್ನು ಒಂದಾನೊಂದು ಕಾಲದಲ್ಲಿ 'Moloch' ಮೊಲಕ್ ಎನ್ನುತ್ತಿದ್ದರು. ಈ ಬೇರೆ ಬೇರೆ ವಂಶಗಳಿಗೆ ಪರಸ್ಪರವಾಗಿ ನಡೆಯುತ್ತಿದ್ದ ಯುದ್ಧಗಳಲ್ಲಿ ಮೊಲಕ್ ದೇವರುಳ್ಳ ಇಸ್ರೇಯಿಲ್ ವಂಶಕ್ಕೆ ವಿಜಯವಾದುದರಿಂದ ಈ ಮೊಲಕ್ ದೇವರು ಮಿಕ್ಕೆಲ್ಲಾ ದೇವರುಗಳನ್ನೂ ಜಯಿಸಿ, ಎಲ್ಲಾ ಯಹೂದಿಗಗಳಿಗೂ ದೇವರಾಯಿತು. ಆದ್ದರಿಂದ ಸೆಮೆಟಿಕ್ ಜನಾಂಗದ ಸಗುಣ–ಸಾಕಾರನಾದ ಏಕೋ ದೇವನ (ಮಾಲಿಕ್) (Malick or Master) ಎಂಬ ಹೆಸರಿನ ಮೂಲವು ಇದೇ ಆಗಿದೆ. ಏಕೋ ದೇವನಾದ ಗುರುವಿನ (ಅಥವಾ ಲೋಕಕ್ಕೆಲ್ಲಾ ಗುರುವಾದ ದೇವರು ಒಬ್ಬನೇ ಎಂಬ) ಭಾವನೆಯೇ ಆಗಿನ ಕಾಲಕ್ಕೆ ದೊಡ್ಡ (Science, ಸೈನ್ಸ್) ವಿಜ್ಞಾನವಾಗಿತ್ತು. ಅವರು ಅಜ್ಞೇಯದ (ಅರಿವನ್ನು ಮೀರಿದ ತತ್ತ್ವದ) ಮಹಾ ಖಾರಿಯ (ಕಂದರದ) ಒಳಕ್ಕೆ ತೂರಿ ನೋಡಲು ಮಾಡಿದ ಮಹಾ ಪ್ರಯತ್ನವೇ

ಅದು. ಅದೇನೋ ಆಗ ಅವರಿಗೆ ಒಪ್ಪಾಗಿತ್ತು. ಆದರೆ ಈಗ ಸನ್ನಿವೇಶ–ಸಂದರ್ಭ ಗಳೇ ಬದಲಾಗಿವೆ. ಈಗ ಅತ್ಯಂತ ಹೆಚ್ಚಿನ ಸಂಖ್ಯೆಯ ಜನರಿಗೆ ಚಕ್ರಾಧಿಪತ್ಯವು ಬೇಕಾ ಗಿಲ್ಲ. ಈಗ ಸ್ವರಾಜ್ಯವು–ಸ್ವಯಂಪ್ರಭುತ್ವವು – ಬೇಕಾಗಿದೆ. ಅಮೆರಿಕಾದಲ್ಲಿಯೂ ಇಂಗ್ಲೆಂಡಿನಲ್ಲಿಯೂ ಎಲ್ಲೆಲ್ಲಿಯೂ ಸ್ವಾತಂತ್ರ್ಯವೂ ವಿಮೋಚನೆಯೂ ಬೇಕಾಗಿವೆ. ವಿಜ್ಞಾನವು ಮುಂದುವರಿದಿದೆ; ಅಭಿವೃದ್ಧಿಯನ್ನು ಹೊಂದಿದೆ, ಪ್ರಗತಿ ಪಡೆದಿದೆ. ಪ್ರತಿ ಯೊಂದೂ ವಿಕಾಸವನ್ನೂ ಉತ್ಕರ್ಷವನ್ನೂ ಹೊಂದಿದೆ. ದರ್ಪ–ಉದ್ಧಟ ಭಾವ ಗಳಿಂದ ಪ್ರಬಲವಾಗಿ ಪ್ರಭುತ್ವ ನಡೆಸುತಿದ್ದ ಹಳೆಯ ದೇವರ ಭಾವನೆಯು ವೇದಾಂತ ದಿಂದ ಉಪದಿಷ್ಟವಾದ 'ನಾನೇ ದೇವರು' ಎಂಬ ಸ್ವಾತಂತ್ರ್ಯ ಪ್ರೇರಕವಾದ ಭಾವನೆಯೊ ಳಗೆ ವಿಕಾಸವಾಗಲು ಈಗ ಮೀರಿ ಬರುತ್ತಿರುವ ಕಾಲವಾಗಿದೆ, ಅತ್ಯುತ್ತಮ ಕಾಲವಾಗಿದೆ. ಹೇಗೆ ಇಂಗ್ಲೆಂಡಿನ ಹಳೆಯ ನಿರಂಕುಶ ಪ್ರಭುತ್ವವನ್ನು ಹಂತಹಂತವಾಗಿ –ಕ್ರಮ ಕ್ರಮ ವಾಗಿ–ಪರಿಮಿತಗೊಳಿಸುತ್ತಾ ಬಂದರೋ ಹಾಗೆ ಹಳೆಯ ದೇವರ ವ್ಯಕ್ತಿತ್ವದ ದರ್ಪ ದೌರ್ಜನ್ಯಗಳ ಸ್ವಭಾವದಿಂದ (ನಿಮ್ಮಿಂದಲೇ ಕಲ್ಪಿತವಾದ) ಎಲ್ಲಾ ಅಧಿಕಾರ ಗಳನ್ನೂ ಆಧಿಪತ್ಯಗಳನ್ನೂ ಕಿತ್ತುಕೊಂಡು ನೀವು ಧಾರ್ಮಿಕ–ಆಧ್ಯಾತ್ಮಿಕ ಸ್ವಾತಂತ್ರ್ಯ ವನ್ನು ಸಾಧಿಸುವದಕ್ಕೆ ಇದು ಸಕಾಲವಾಗಿದೆ.

ಯುಹೂದಿಗಳು ರಾಜಕೀಯ ದಾಸ್ಯದಲ್ಲಿ ಜೀವಿಸಿದ್ದುದರಿಂದ ಅವರ ದೇವರು ಅವರಿಂದ ಬೇರೆಯಾದ ಪ್ರಭುವಾಗಿರಬೇಕಾಯಿತು. ನೀವು ರಾಜಕೀಯ ಹಾಗೂ ಸಾಮಾಜಿಕ ಸ್ವಾತಂತ್ರ್ಯ ಸುಖವನ್ನು ಅನುಭವಿಸುತ್ತಿರುವದರಿಂದ ನಿಮ್ಮ ದೇವರು ನಿಮ್ಮ ಆತ್ಮನೇ ಆಗಬೇಕಾಗಿದೆ. ಜನರಿಗೆ ಈಗ ಗುಲಾಮಗಿರಿಯು ಬೇಕಾಗಿಲ್ಲ. ಬಂಧ ನವೂ ದಾಸ್ಯವೂ ಈಗ ವೇಗವಾಗಿ ದೂರವಾಗುತ್ತಿದೆ. ವಿಕಾಸವು ಕಾರ್ಯಶೀಲವಾಗಿದೆ; ಪ್ರತಿಯೊಂದೂ ಮೇಲು ಮೇಲೂ ಮುಂದು ಮುಂದೂ ಪ್ರಗತಿಯನ್ನು ಹೊಂದಬೇಕಾ ಗಿದೆ. ನಿಮ್ಮ ದೇವರ ವ್ಯಕ್ತಿತ್ವವು ಮಾತ್ರ ವಿಕಾಸವಾಗಿದೆ. ತಟಸ್ಥ–ಜಡವಾಗಿರಬೇಕೆ ? ಕೂಡದು.

ಒಂದು ಕಾಲದಲ್ಲಿ ದೇವರಿಗೆ ಶತ್ರುವಾದ ಸೈತಾನನಿದ್ದನು. ಮತ್ತು ದೇವರ ಇರು ವಿಕೆಯನ್ನು ಪರಿಮಿತಗೊಳಿಸುವದಕ್ಕೆ ಅವನಿಗೆ ದೇವತೆಗಳೂ ಸೇವಕರೂ ಇದ್ದರು. ಅವನು ಏಳು ದಿನಗಳಲ್ಲಿ ಜಗತ್ತನ್ನು ಸೃಷ್ಟಿ ಮಾಡಿದನು. ಅದು ಯಾವಾಗ? ಅದು ಮೋಸೆಸ್ಸನು ತನ್ನ ಗ್ರಂಥಗಳನ್ನು ಬರೆದಾಗ ಆಗಿತ್ತು. ಮೋಸೆಸ್ಸನು ಆ ದಿನ ಗಳಿಂದ ಈಗ ಸಹಸ್ರಾರು ವರ್ಷಗಳು ಕಳೆದು ಹೋಗಿವೆಯೆಂದು ನಿಮಗೆ ಗೊತ್ತಿದೆ. ಪ್ರಪಂಚವು ಕ್ರಾಂತಿಗೊಳಗಾಗಿದೆ. ಎಲ್ಲಾ ಬೆಳೆಯುತ್ತಿದ್ದರೂ ತಾನು ಮಾತ್ರಬೆಳೆಯ ದಿರುವವನು ಎಂಥಾ ದೇವರು ? ಎಲ್ಲಾ ವಸ್ತುಗಳೂ ಬೆಳೆಯಬೇಕು; ವಿಕಾಸವಾಗ ಬೇಕು ಎನ್ನುವದೇ ಪ್ರಕೃತಿ ನಿಯಮ. ಇಷ್ಟರೊಳಗೆ ಅವನೊಡನೆ ಸೈತಾನನಂಥ

ಶತ್ರು ಇರಬಾರದಾಗಿತ್ತು. ದೇವರ ಇರುವಿಕೆಯನ್ನು ಪರಿಮಿತಗೊಳಿಸುವದಕ್ಕೆ ಬೇರಾವುದೂ ಇರಬಾರದು. ಅವನು ಪ್ರಪಂಚದ ನಿರ್ಮಾಪಕ ಅಥವಾ ಸೃಷ್ಟಿಕರ್ತಾ ಎನ್ನುವ ಶಿಲ್ಪ ವೃತ್ತಿಯನ್ನು ಅಥವಾ ಶಿಲ್ಪಿಯ ಕಸುಬನ್ನು ಮೀರಿ ಬಹಳ ಮೇಲಿರಬೇಕು. ಇಡೀ ಜಗತ್ತೇ ವೇದಾಂತವನ್ನು ತಿಳಿದು ಅಭ್ಯಾಸ ಮಾಡುವದಕ್ಕೆ ಇದು ಹೆಚ್ಚಿನ ಕಾಲವಾಗಿದೆ. ಬುಸುಗುಟ್ಟುವ ಭಯಂಕರ ಸರ್ಪದಂತೆ ತೋರುವ "ನಾನೇ ದೇವರು" ಎಂಬುವ ವೇದಾಂತ ಸತ್ಯವನ್ನು ಗ್ರಹಿಸುವದಕ್ಕೆ (ಹಿಡಿದುಕೊಂಡು ಅರ್ಥಮಾಡಿಕೊಳ್ಳುವದಕ್ಕೆ) ಇಡೀ ಜಗತ್ತೇ ಧೈರ್ಯ ಮಾಡಲು ಇದು ಉನ್ನತಕಾಲವಾಗಿದೆ. ವೇದಾಂತದ ಕೇವಲ ಸತ್ಯವು ಪೂರ್ಣ ನಿರವಲಂಬ ಸತ್ಯವು ನಿಮ್ಮಲ್ಲಿಗೆ ಬಂದು "ನೀವೇ ದೇವರು" ಎಂದು ಹೇಳುತ್ತದೆ; ದೇವರು ನಿಮ್ಮಿಂದ ಬೇರೆಯಲ್ಲವೆಂದೂ ದೇವರು ಈ ಸ್ವರ್ಗದಲ್ಲಿಯೋ ಆ ನರಕದಲ್ಲಿಯೋ ಇಲ್ಲವೆಂದೂ ನಿಮ್ಮ ಸ್ವರೂಪವೇ ಆಗಿದೆಯೆಂದೂ ವೇದಾಂತವು ಹೇಳುತ್ತದೆ. ಈ ಭಾವವನ್ನು ನಿಮ್ಮ ಅನುಭವಕ್ಕೆ ತಂದುಕೊಂಡರೆ, ಈ ಸತ್ಯವನ್ನು ನೀವು ಮನಗಂಡರೆ ನೀವು ಪೂರ್ಣ ವಿಮುಕ್ತರಾಗುತ್ತೀರಿ.

ಭಯದಿಂದ ನಿಮ್ಮ ಮನಸ್ಸನ್ನೂ ಮೆದುಳನ್ನೂ ಏಕೆ ಕುಗ್ಗಿಸಬೇಕು ? ದೈನ್ಯಾವಸ್ಥೆಯ ಪ್ರಾರ್ಥನೆಗಳಿಂದ ನಿಮ್ಮ ಶಕ್ತಿಗಳನ್ನೆಲ್ಲಾ ಏಕೆ ಹಿಗ್ಗಿ ಮುಗಿಲಿಗೇರಿಸಬೇಕು ? ನಿಮ್ಮ ನಿಜ ಸ್ವಭಾವವನ್ನು ಪ್ರಕಾಶ ಪಡಿಸಿರಿ. ಸತ್ಯವನ್ನು ನುಗ್ಗು ಬಡಿಯಬೇಡಿ. ಧೈರ್ಯವಾಗಿ ಹೊರಬನ್ನಿ; ನಿಮ್ಮ ಧ್ವನಿಯ ಅತ್ಯುಚ್ಚ ಸ್ವರದಲ್ಲಿ "ನಾನೇ ದೇವರು, ನಾನೇ ದೇವರು" ಎಂದು ನಿರ್ಭಯವಾಗಿ ಕೂಗಿರಿ; ಕಿರಿಚಿರಿ. ಅದು ನಿಮ್ಮ ಜನ್ಮಸಿದ್ಧವಾದ ಹಕ್ಕು.

ಮೋಸೆಸ್ಸನು ಆ ದೈವೀ ವಾಣಿಯನ್ನು ಕೇಳಿದಾಗ ಯಾವಮನಸ್ಸಿನ ಸ್ಥಿತಿಯಲ್ಲಿ ಇದ್ದನೋ ಆ ಸ್ಥಿತಿಯಲ್ಲಿಯೇ ಸಾಮಾನ್ಯ ಜನರೆಲ್ಲಾ ಇರುವದು. ಮೋಸೆಸ್ಸನು ದಾಸ್ಯದಲ್ಲಿದ್ದನು; ಅವನು ಸರ್ಪವನ್ನು ಕಂಡೊಡನೆ ನಡುಗಿದನು. "ನಾನಿದ್ದೇನೆ; ನಾನು ದೇವರಾಗಿದ್ದೇನೆ" ಎನ್ನುವ ಶುದ್ಧವಾದ ಜ್ಞಾನವನ್ನೂ ಶುದ್ಧವಾದ ಸತ್ಯವನ್ನೂ ಈ ಓಂಕಾರವನ್ನು ಪ್ರಕಟ ಮಾಡಿದ್ದನ್ನು ಕೇಳಿದೊಡನೆ ಜನರು ಮೆಟ್ಟಿ ಬೀಳುತ್ತಾರೆ; ಹೌಹಾರಿ ನಡಗುತ್ತಾರೆ. ಅದನ್ನು ಹಿಡಿದುಕೊಳ್ಳುವ ಧೈರ್ಯವು ಅವರಿಗಿಲ್ಲ; ಶಂಕಿಸಿ ಹಿಂಜರಿಯುತ್ತಾರೆ. ಆ ಮಾತುಗಳು ಅವರಿಗೆ ಘೋರ ಸರ್ಪದ ಬುಸುಗುಟ್ಟುವ ಭಯಾನಕ ಶಬ್ದದಂತೆ ಕೇಳಿಸುತ್ತದೆ. "ಅಯ್ಯಾ ! ನೀವೇಕೆ ಹೆದರುತ್ತೀರಿ ? ನೀವೇ ದೇವರು; ಪವಿತ್ರಗಳಿಗೆಲ್ಲಾ ನೀವೇ ಪವಿತ್ರ. ಪ್ರಪಂಚವು ಪ್ರಪಂಚವೇ ಅಲ್ಲ; ಅದೂ ದೇವರೇ. ಪ್ರಪಂಚವೂ ದೇವರೇ; ದೇವರೇ ಪ್ರಪಂಚವಾಗಿ ತೋರುತ್ತಿದ್ದಾನೆ. ಅದು ದೇವರ ರೂಪದಿಂದ ಸತ್ಯ; ಪ್ರಪಂಚವಾಗಿ ತೋರುವ ರೂಪದಿಂದ ಮಿಥ್ಯಾ, ಹುಸಿ. ನೀವು ಸಕಲದರಲ್ಲಿಯೂ ಸಕಲವಾಗಿದ್ದೀರಿ. ನೀವೇ ಪರಮಾಧಿಕವಾದ ಶಕ್ತಿ; ಅದನ್ನು

ಯಾವ ಮಾತೂ ಮನಸ್ಸೂ ಯಾರೂ ವರ್ಣಿಸಲಾರರು. ಆ ಶುದ್ಧವಾದ "ನಾನಿದ್ದೇನೆ" ಎನ್ನುವದೇ ನೀವು.

ನಿಮ್ಮ ಆತ್ಮ ರತ್ನದ, ಆತ್ಮವೆಂಬ ಸ್ಫಟಿಕ ಮಣಿಯ ಸಮೀಪದಲ್ಲಿಟ್ಟಿರುವ ಕ್ಷುದ್ರವಾದ, ಹಳದಿ, ಕೆಂಪು, ಕಪ್ಪು ಬಣ್ಣದ ಕಾಗದಗಳನ್ನು ತೆಗೆದೊಗೆಯಿರಿ. ನಿಮ್ಮ ನಿಜ ಸ್ವರೂಪವೇನೆಂಬುದರಲ್ಲಿ ಎಚ್ಚರಗೊಳ್ಳಿರಿ. "ನಾನೇ ಅವನು; ನಾನೇ ಸರ್ವವೂ" ಎಂಬ ನೈಜವನ್ನು ತಿಳಿಯಿರಿ. ಜನರು ಭಯದಿಂದ ಅದನ್ನು ದೂರವಿಡಬೇಕೆಂದು ಬಯಸುತ್ತಾರೆ. ಅವರಿಗೆ ಆ ತೋರಿಕೆಯ ಸರ್ಪದ ಭಯ. ಓ! ಹೆದರಬೇಡಿ, ಆ ಸರ್ಪವನ್ನು ಹಿಡಿಯುವ ಸಾಹಸ ಮಾಡಿರಿ. ಆಗ ನೋಡಿ. ಆಶ್ಚರ್ಯವೋ ಆಶ್ಚರ್ಯ! ನಿಮ್ಮ ಕೈಯಲ್ಲಿ ಆ ಸರ್ಪವು ಮಹಾ ರಾಜದಂಡವಾಗಿ ಪರಿಣಮಿಸುತ್ತದೆ, ಶೋಭಿಸುತ್ತದೆ. ಆ ಬುಸ್ ನಾಗರವು ನೀವು ಹಸಿದು ಕೊಂಡಾಗ ನಿಮಗೆ ಉಣಿಸುತ್ತದೆ; ನೀವು ನೀರಡಿಸಿದಾಗ ನಿಮ್ಮ ದಾಹ ಶಮನ ಮಾಡುತ್ತದೆ; ನಿಮ್ಮ ದಾರಿಯಿಂದ ಎಲ್ಲಾ ಕಷ್ಟಗಳನ್ನೂ ಕ್ಲೇಶಗಳನ್ನೂ ಗುಡಿಸಿ ಹಾಕುತ್ತದೆ.

ಮೋಸೆಸ್ಸನು ಅಡವಿಯಲ್ಲಿದ್ದಾಗ ಆ ಯೋಗದಂಡದಿಂದ ಒಂದು ಬಂಡೆಯನ್ನು ಮುಟ್ಟಿದ ಕೂಡಲೇ ಆ ಬಂಡೆಯಿಂದ ಹೊಚ್ಚ ಹೊಸದಾಗಿ ಥಳಥಳಿಸುವ ನಿರ್ಮಲವಾದ ನೀರು ಉಕ್ಕುಕ್ಕಿ ಬಂದಿತು. ಇಸ್ರೈಲ್ ಯಹೂದಿಗಳು ರಕ್ಷಣೆಗಾಗಿ ಓಡಿ ಹೋಗುತ್ತಿದ್ದಾಗ ಕೆಂಪು ಸಮುದ್ರವನ್ನು ದಾಟಬೇಕಾಯಿತು. ಆ ಘೋರ ಸಾಗರವು ಅವರನ್ನು ನುಂಗಲು ಬಾಯಿ ಕಳೆದುಕೊಂಡಿರುವ ಗೋರಿಯಂತೆ ಅವರೆದುರಿಗೆ ಭೀಕರವಾಗಿದ್ದಿತು. ಮೋಸೆಸ್ಸನು ಆ ದೈವದತ್ತವಾದ ದಂಡದಿಂದ ಆ ಕೆಂಪು ಸಮುದ್ರವನ್ನು ಸ್ಪರ್ಶ ಮಾಡಿದ ಕೂಡಲೇ ಆ ನೀರು ಎರಡು ಭಾಗವಾಯಿತು; ಒಣಗಿದ ನೆಲವು ಕಂಡಿತು; ಆ ಇಸ್ರೈಲ್ ಜನರು ಅದರ ಮೇಲೆ ನಡೆದು ಹೋದರು.

ತೋರಿಕೆಗೆ ಬುಸ್ ಎನ್ನುವ ಈ ಹಾವು, ಈ ಸತ್ಯವು ನೋಡುವದಕ್ಕೆ ಭಯಂಕರವಾಗಿ ಕಾಣುತ್ತದೆ. ಆದರೆ ನೀವು ಮಾತ್ರ ಅದನ್ನು ಕೈಗೆತ್ತಿಕೊಳ್ಳಲು ಧೈರ್ಯ ಮಾಡಿ ಬಲವಾಗಿ ಹಿಡಿದುಕೊಳ್ಳಬೇಕು. ನೀವೇ ವಿಶ್ವದ ಸಾರ್ವಭೌಮರೆಂಬುದನ್ನೂ ಪಂಚ ಭೂತಗಳಿಗೂ ಸ್ವಾಮಿ ಎಂಬದನ್ನೂ ನಕ್ಷತ್ರಾದಿಗಳಿಗೂ ಅಂತರಿಕ್ಷಕ್ಕೂ ಪ್ರಭುವೆಂಬುದನ್ನು ನೀವೇ ಸರ್ವಸ್ವವೆಂಬುದನ್ನೂ ಕಂಡುಕೊಂಡು ಆಶ್ಚರ್ಯ ಪಡುತ್ತೀರಿ. ಈ ಸತ್ಯವನ್ನು ಅನ್ವಯಿಸುವದಕ್ಕೂ ಈ ದಿವ್ಯ ತತ್ವವನ್ನು ಆಲಂಗಿಸುವದಕ್ಕೂ ಜನರಿಗೆ ಲಜ್ಜೆಯಿದೆ. ಬನ್ನಿ, ಬನ್ನಿ, ಸಂಕೋಚ ಪಡಬೇಡಿ. ನಿರ್ಭಯವಾಗಿ ಈ ಸತ್ಯವನ್ನು ಹಿಡಿದುಕೊಳ್ಳಿರಿ. ಸತ್ಯವನ್ನು ಕಂಡುಕೊಳ್ಳಿರಿ; ಅದು ನಿಮ್ಮನ್ನು ಬಿಡು ಬೀಸಾಗಿ ಮಾಡುತ್ತದೆ.

"ನಾನು ದೇವರು" ಎನ್ನದಿದ್ದರೆ ಮಹಾ ಪಾಪ. ಆತ್ಮನನ್ನು (ತಾನೆನ್ನದೆ) ಕದಿಯುವದು ಅತ್ಯಂತ ಕೀಳಾದ ಕಳ್ಳತನ. ನಾನೊಬ್ಬ ಗಂಡಸು ಅಥವಾ ಹೆಂಗಸು ಎನ್ನುವದು, ಅಥವಾ ನಾನೊಂದು ಹರಿದಾಡುವ ಬಡಜೀವಿ ಎನ್ನುವದು ಸುಳ್ಳು ಮತ್ತು ನಾಸ್ತಿಕತೆ. ಕೃಪಣಾಗ್ರೇಸರ ಚಕ್ರವರ್ತಿಯಂತೆ ನಡೆದುಕೊಳ್ಳಬೇಡಿ. ಸಕಲೈಶ್ವರ್ಯಗಳೂ ತನ್ನ ಮನೆಯಲ್ಲಿದ್ದರೂ ಲೋಭಿಯು ಒಂದು ಬಿಡಿ ಕಾಸನ್ನೂ ಕೈ ಬಿಡಲು ಇಷ್ಟ ಪಡುವದಿಲ್ಲ. ಇಡೀ ಜಗತ್ತೇ ನಿಮ್ಮ ಒಳಗಿದೆ; ಇಡೀ ವಿಶ್ವವೇ ನಿಮ್ಮದಾಗಿದೆ. ಅದನ್ನೇಕೆ ಮುಚ್ಚಿಟ್ಟುಕೊಳ್ಳುತ್ತೀರಿ? ಅದನ್ನೇಕೆ ಉಪಯೋಗಿಸಬಾರದು? ಅದನ್ನು ಆಚರಣೆಯಲ್ಲಿ ತನ್ನಿರಿ; ನಿಮ್ಮ ಆತ್ಮನ ಅಮೃತವನ್ನು ಆಳವಾಗಿ ಹೀರಿ. ನಿಮ್ಮ ಸ್ವಾಭಾವಿಕ ಅಂತರ್ನಿಹಿತವಾದ ರಾಜತ್ವದ ಲಾಭವನ್ನೇಕೆ ಪಡೆಯಬಾರದು?

ಈ ಸಂಪೂರ್ಣ ಸತ್ಯವನ್ನು ಪ್ರಾಪ್ತಿ ಮಾಡಿಕೊಳ್ಳುವದೆಂದರೆ, ಮರೆತಿದ್ದ ಕಂಠಾಭರಣವನ್ನು ಪುನಃ ಪ್ರಾಪ್ತಿ ಮಾಡಿಕೊಂಡಂತೆ– ಎಂದು ಇಂಡಿಯಾದ ಜನರು ಅಥವಾ ವೇದಾಂತಿಗಳು ಹೇಳುತ್ತಾರೆ. ತರುಣಿಯೊಬ್ಬಳು ತನ್ನ ಕೊರಳಲ್ಲಿ, ವಕ್ಷಸ್ಥಳದ ಮೇಲೆ ಶೋಭಿಸುತ್ತಿದ್ದ ಒಂದು ರತ್ನದ ಹಾರವನ್ನು ಧರಿಸುತ್ತಿದ್ದಳು. ಆಕೆಯು ಮಲಗಿದ್ದಾಗ ಅದು ಬೆನ್ನ ಹಿಂದೆ ಜಾರಿಕೊಂಡಿದ್ದರಿಂದ ಎದ್ದ ಮೇಲೆ ಮರೆತು ತನ್ನ ಎದೆಯ ಮೇಲೆ ಅದು ನಿತ್ಯದಂತೆ ಜೋಲಾಡದಿದ್ದುದನ್ನು ನೋಡಿ, ಗಾಬರಿಯಾಗಿ, ಮಲಗುವದಕ್ಕೆ ಮೊದಲು ಸ್ನಾನಮಾಡುವಾಗ, ತಾನೆಲ್ಲಿಯೋ ತೆಗೆದಿಟ್ಟು ಮರೆತಿರಬೇಕೆಂದು ಮನೆಯಲ್ಲೆಲ್ಲಾ ಹುಡುಕಿದಳು. ಎಲ್ಲಿಯೂ ಸಿಕ್ಕದಿರಲು ಆ ಅಮೂಲ್ಯವಾದ ರತ್ನಾಭರಣವನ್ನು ಕಳೆದುಕೊಂಡದ್ದಕ್ಕಾಗಿ ಬಹಳ ಅತ್ತು ಗೋಳಾಡಿದಳು. ಅಷ್ಟರಲ್ಲಿ ಅಲ್ಲಿಗೆ ಬಂದ ಆಕೆಯ ಸ್ನೇಹಿತಳಿಗೆ ತನ್ನ ನಷ್ಟವನ್ನೂ ಕಷ್ಟವನ್ನೂ ಹೇಳಿಕೊಂಡು, ತನಗಾಗಿ ಆಕೆಯೂ ಆ ಮನೆಯಲ್ಲಿ ಸ್ವಲ್ಪ ಹುಡುಕಿ ನೋಡಬೇಕೆಂದು ಕೇಳಿಕೊಂಡಳು. ಆ ಗೆಳತಿಯು ಆಕೆಯ ಕಂಠದಲ್ಲಿ ಹಿಂದಕ್ಕೆ ಸರಿದು ಮರೆಯಾಗಿದ್ದ ಆ ಮಾಲಿಕೆಯನ್ನು ತನ್ನ ಕಣ್ಣೆದುರಿಗೇ ಕಂಡಿದ್ದರಿಂದ, "ಒಳ್ಳೆಯದು; ಆ ಹಾರವನ್ನು ನಿನಗಾಗಿ ಹುಡುಕಿಕೊಟ್ಟರೆ, ನನಗೇನು ಕೊಡುತ್ತಿ?" ಎಂದು ಕೇಳಿದಳು. "ನೀನು ಏನನ್ನು ಕೇಳಿದರೂ ಕೊಡುತ್ತೇನೆ" ಎಂದು ಉತ್ಸಾಹದಿಂದ ಆಕೆ ಉತ್ತರಿಸಿದಳು. ಆಗ ಆ ಸಖಿಯು ತನ್ನ ಕೈ ಬೆರಳುಗಳಿಂದ ಆಕೆಯ ಕೊರಳಿನಲ್ಲಿ ಸರಿದು ಆಕೆಗೇ ಕಾಣದಂತಾಗಿದ್ದ ಸರವನ್ನು ಹಿಡಿದೆಳೆದು "ಇಗೋ ನೋಡು, ಆ ಸರವು ನಿನ್ನ ಕೊರಳಲ್ಲಿಯೇ ಇದೆ. ಅದೇನೂ ಕಳೆದಿರಲಿಲ್ಲ. ಅದು ನಿನ್ನ ಕೊರಳಲ್ಲಿಯೇ ಇದ್ದರೂ ನೀನದನ್ನು ಮರೆತಿದ್ದೆ. ಆಹಾ! ಎಂಥಾ ಪ್ರಿಯಕರವಾದ ಆಶ್ಚರ್ಯ!"

ಹೀಗೆಯೇ ನಿಮ್ಮ ದೇವತ್ವವು ನಿಮ್ಮ ಹೊರಗಿಲ್ಲ. ನೀವು ದೇವರಾಗಿಯೇ ಇದ್ದೀರಿ. ನಿಮ್ಮ ಸ್ವರೂಪವನ್ನೇ ನಿಮ್ಮ ದೇವತ್ವವನ್ನೇ ಮರೆಯುವಂತೆ ಮಾಡಿರುವ

ಅವಿದ್ಯೆಯು ಬಹಳ ವಿಲಕ್ಷಣವಾದುದು; ಆಶ್ಚರ್ಯಕರವಾದುದು. ಈ ಅಜ್ಞಾನವನ್ನು ಕಳೆದರೆ, ಈ ಅಂಧಕಾರವನ್ನು ನಾಶ ಮಾಡಿದರೆ, ನೀವು ಆಗಲೇ ದೇವರು. ಸ್ವರೂಪ ದಿಂದ ನೀವು ಮುಕ್ತರೇ ಆಗಿದ್ದೀರಿ. ನಿಮ್ಮ ದಾಸ್ಯ ಸ್ಥಿತಿಯಲ್ಲಿ ನಿಮ್ಮನ್ನು ನೀವು ಮರೆತಿದ್ದೀರಿ.

ಒಬ್ಬ ರಾಜನು ತಾನು ಭಿಕ್ಷುಕನೆಂದು ಕನಸು ಕಾಣಬಹುದು; ಆದರೆ ಅವನ ನಿಜ ವಾದ ರಾಜತ್ವಕ್ಕೇನೂ ಅದರಿಂದ ಬಾಧೆಯಾಗುವದಿಲ್ಲ.

ಓ ! ರಾಜಾಧಿರಾಜರೇ ! ಈ ಎಲ್ಲಾ ದೇಹಗಳಲ್ಲಿರುವ ನನ್ನ ಪ್ರಿಯ ಆತ್ಮವೇ ! ಸಂಪೂರ್ಣ ಸಾರ್ವಭೌಮವೇ ! ಭಗವದನುಗ್ರಹದ ಸಾರಸರ್ವಸ್ವವೇ ! ಓ ಪ್ರೇಮಾತ್ಮ ! ಅಜ್ಞಾನ ನಿದ್ರೆಯ ಮೋಹದ ಕನಸಿನಲ್ಲಿ ನಿಮ್ಮನ್ನು ನೀವು ಗುಲಾಮ ರನ್ನಾಗಿ ಮಾಡಿಕೊಳ್ಳಬೇಡಿ. ಏಳಿರಿ, ಎಚ್ಚರಗೊಳ್ಳಿರಿ, ನೀವೇ ದೇವರು; ನೀವು ಬೇರೆ ಯಾರೂ ಅಲ್ಲ. ನಿಮ್ಮ ಪರಮಾಧಿಕಾರವನ್ನು ಚಲಾಯಿಸಿ ಪ್ರಭುತ್ವ ನಡೆಸಿರಿ. ಎಲ್ಲಾ ಸಂದೇಹಗಳನ್ನೂ ಸಂಕೋಚಗಳನ್ನೂ ಸತ್ತ್ವಹೀನತೆಯನ್ನೂ ದೌರ್ಬಲ್ಯವನ್ನೂ ತೊರೆದು ಬಿಟ್ಟು "ನಾನಿದ್ದೇನೆ" "ನಾನು ದೇವರಾಗಿದ್ದೇನೆ" ಎನ್ನುವ ಪರಿಶುದ್ಧ ಭಾವದಲ್ಲಿ—ಆತ್ಮ ನಲ್ಲಿ—ಒಳಗಿನ ಪೂರ್ಣ ಶಕ್ತಿಯಿಂದ ಪುಟಿದು ಧುಮುಕಿರಿ. ನೀವೇ ದೇವರು; ಅವನು ಮತ್ತು ನಾನು ಒಂದೇ. ಕೇವಲ ಭಾವನೆಯ ದೃಷ್ಟಿಯಿಂದ ನೋಡಿದರೂ ಎಂಥಾ ಉಪಶಾಮಕವೂ ಶಾಂತಿಪ್ರದವೂ ಆದ ಭಾವನೆ ! ಎಂಥಾ ದಿವ್ಯವಾದ ಭಾವನೆ ! ಅದು ಎಲ್ಲಾ ದುಃಖಗಳನ್ನೂ ಕಳೆಯುತ್ತದೆ ; ನಮ್ಮ ಎಲ್ಲಾ ಹೊಣೆಗಳನ್ನೂ ಇಳಿಸುತ್ತದೆ.

ನಿಮ್ಮ ನಿಜವನ್ನು ನೀವು ಬಿಟ್ಟು ಹೊರಗೆ ಹರಿಯಬೇಡಿ. ನಿಮ್ಮ ಕೇಂದ್ರವನ್ನು ನಿಮ್ಮೊಳಗೇ ಇಟ್ಟುಕೊಳ್ಳಿ. "ಪ್ರಪಂಚದ ಹೊರಗೆ, ನನ್ನ ಮೀಟು ಕೋಲಿಗೆ ಸ್ಥಿರ ವಾದೊಂದು ಆಧಾರವು ಸಿಕ್ಕುವದಾದರೆ, ಪ್ರಪಂಚವನ್ನೇ ಅಲ್ಲಾಡಿಸಬಹುದು; ಎತ್ತಿ ಒಗೆಯಬಹುದು."—ಎಂದು ವಿಜ್ಞಾನಿ ಆರ್ಕಿಮಿಡೀಸ್ ಮಹಾಶಯ ಹೇಳಿದ್ದನಂತೆ. ಪಾಪ ! ಆ ಬಡಪಾಯಿಯು ಸ್ಥಿರವಾದ ಆಧಾರವನ್ನು ಕಂಡುಕೊಳ್ಳಲಾರದಾದನು. ಆ ಸ್ಥಿರ ಬಿಂದುವು ನಿಮ್ಮೊಳಗೇ ಇದೆ. ಅದು ನೀವೇ. ಅದನ್ನು ನೀವು ಬಲವಾಗಿ ಹಿಡಿದರೆ, ಇಡೀ ವಿಶ್ವವನ್ನೇ ನೀವು ಅಲ್ಲಾಡಿಸಬಲ್ಲಿರಿ.

ಓಂ ! ಓಂ ! ಓಂ !

# THE WAY TO SELF-REALIZATION
# ಆತ್ಮಾನುಭವಕ್ಕೆ ಮಾರ್ಗ

ವಾಚಕರಿಗೆ : ಆತ್ಮಾನುಭವಕ್ಕೆ ಸಂಬಂಧಪಟ್ಟ ಪ್ರತಿಯೊಂದು ವಾಕ್ಯವನ್ನೂ ಮತ್ತು ಶಬ್ದವನ್ನೂ ಚೆನ್ನಾಗಿ ಅರ್ಥಮಾಡಿಕೊಂಡು ಅನುಸಂಧಾನ ಮಾಡಬೇಕು; ಚಿಂತನ ಮಾಡಬೇಕು; ಮತ್ತು ಮನಸ್ಸು ನಿಜಾತ್ಮನಲ್ಲಿ ಮುಳುಗಿ ನೆನೆಯುವಷ್ಟು–ಇಲ್ಲ– ಅದರಲ್ಲಿ ತನ್ನನ್ನು ತಾನು ಕಳೆದು ಕೊಳ್ಳುವಷ್ಟು ಶ್ರದ್ಧಾ ಭಕ್ತಿಯಿಂದ ಧ್ಯಾನಿಸ ಬೇಕು. ಪ್ರಾರಂಭದಶೆಯಲ್ಲಿರುವ ಸಾಧಕರು ಓಂಕಾರವನ್ನು ಧ್ಯಾನಿಸುವಾಗ ತಮ್ಮ ಮನಶ್ಶಕ್ತಿಯನ್ನು ನಾಭೀ ಚಕ್ರದಲ್ಲಿ ಅಥವಾ ಮಣಿಪುರ ಚಕ್ರದಲ್ಲಿ ಕೇಂದ್ರೀಕರಿಸ ಬಹುದು. (ಈ ಉಪನ್ಯಾಸವನ್ನು ಅಮೆರಿಕಾದಲ್ಲಿ ಸಣ್ಣ ಪುಸ್ತಕ ರೂಪದಲ್ಲಿ ಪ್ರಕಟಿಸ ಲಾಗಿತ್ತು.)

ವೇದಾಂತ ಸಾಧನೆಯಲ್ಲಿ ಅಥವಾ ಉಪಾಸನೆಯಲ್ಲಿ ಮನಸ್ಸನ್ನು ಸಂಯಮ ಮಾಡುವಾಗ, ನಮ್ಮ ನಿಜಾತ್ಮನೇ ಸೂರ್ಯರಿಗೆಲ್ಲಾ ಸೂರ್ಯನೆಂದೂ ಪ್ರಕಾಶಗಳಿ ಗೆಲ್ಲಾ ಪ್ರಕಾಶವೆಂದೂ ಚಿಂತಿಸಿ, ಭಾವಿಸಿ, ಅನುಭವ ಪಡೆಯುವದೇ ಮುಖ್ಯವಾದ ಅಂಶವಾಗಿದೆ. ಈ ದೇಹವೂ ಮನಸ್ಸೂ ನೀವೆಂದು ಉಂಟಾಗಿರುವ ಮೋಹವನ್ನು ಅಲ್ಲಗಳೆದು, ದೇಹವನ್ನೂ ಮನಸ್ಸನ್ನೂ ಮೀರಿ, ನೀವೇ ಪ್ರಕಾಶಗಳಿಗೆಲ್ಲಾ ಪ್ರಕಾಶ ವೆಂದೂ ಸೂರ್ಯರಿಗೆಲ್ಲಾ ಸೂರ್ಯರೆಂದೂ ಭಾವಿಸುವ ಸ್ಥಿತಿಯಲ್ಲಿ (ಅರಿತ ಸ್ಥಿತಿ ಯಲ್ಲಿ ತನ್ನ ಮನಸ್ಸನ್ನು) ತನ್ನನ್ನು ತಾನು ಎತ್ತುದುಕೊಳ್ಳಬೇಕು. ಹಾಗಾದರೆ, ಆಗ ನಿಮ್ಮೆದುರಿಗೆ (ನಿಮ್ಮ ಒಳಗಣ್ಣಿಗೆ) ಇಡೀ ಜಗತ್ತೇ ತನ್ನ ವಿಸ್ತಾರವಾದ ದೃಶ್ಯ ಪರಂಪರೆ ಯನ್ನು ಬಿಚ್ಚಿ ತೋರಿಸುವದನ್ನು ಅಥವಾ ಸೂರ್ಯನೆದುರು ಮೋಡದಂತೆ ಕರಗಿ ಹೋಗುವದನ್ನು ಕಾಣುತ್ತೀರಿ. ಎಲ್ಲವೂ ನಿಮ್ಮೆದುರಿಗೆ ಅತ್ಯಂತ ದೀನವಾಗಿಯೂ ನಮ್ರವಾಗಿಯೂ ಬರುತ್ತವೆ.

ನಿಮಗೆ ಅನಾನುಕೂಲವಿಲ್ಲವಾದರೆ, ಬೆಳಿಗ್ಗೆ ಮುಂಚೆ ಏಳಿರಿ. ಸೂರ್ಯನು ಇನ್ನೂ ಕ್ಷಿತಿಜದ ಕೆಳಗೆ ಇರುವಾಗಲೇ ಉದಯವಾಗುತ್ತಿರುವ ಸೂರ್ಯನ ಸಂದರ್ಶನ ಮಾಡಿರಿ. ಸೂರ್ಯನ ತೇಜೋ ಮಂಡಲದ ದಿವ್ಯ ಪ್ರಭೆಯನ್ನು ನೋಡಿರಿ. ಆ ಅತ್ಯಂತ ಸುಂದರವೂ ಪ್ರಕಾಶಮಾನವೂ ಸ್ವಾಗತಕರವೂ ಶುಭಪ್ರದವೂ ಆದ ದೃಶ್ಯವು ಮನಸ್ಸನ್ನು ಸಚೇತನಗೊಳಿಸಿ ಕೆಲವು ಮಟ್ಟಿಗೆ ಮೇಲೆತ್ತುತ್ತದೆ. ಮನಸ್ಸು ಕೆಲವು ದೂರ ಉನ್ನತಿಯನ್ನೂ ಉತ್ತೇಜನವನ್ನೂ ಪಡೆದರೆ ಅತ್ಯಂತ ಉನ್ನತವೂ ಆನಂದ ಮಯವೂ ಆದ ಆಧ್ಯಾತ್ಮಿಕ ಕೈಲಾಸ ಶಿಖರವನ್ನು ಏರಬಹುದು.

ಇಂಡಿಯಾ ದೇಶದಲ್ಲಿ ನಾವು "ಚಿನ್ನೀ ಅಟ"ವನ್ನು ಆಡುತ್ತೇವೆ. ಸುಮಾರು ಆರು ಅಂಗುಲ ಉದ್ದವೂ ಒಂದು ಅಂಗುಲ ದಪ್ಪವೂ ಇರುವ ಕೋಲಿನ ತುಂಡು, ಎರಡು ತುದಿಗಳಲ್ಲಿಯೂ ಒಂದು ಅಂಗುಲದಷ್ಟು ಚೂಪಾಗಿರುತ್ತದೆ. ದುಂಡಾದ ಇದನ್ನು 'ಚಿನ್ನಿ' ಎನ್ನುತ್ತೇವೆ. ಇದನ್ನು ಅಟದ ಮೈದಾನದಲ್ಲಿ ನೆಲದ ಮೇಲೆ ಎರಡು ಕೊನೆಗಳೂ ನೆಲವನ್ನು ಸೋಂಕದಂತೆ ಇಡುತ್ತೇವೆ. ನಾವು ಸುಮಾರು ಒಂದು ಮೊಳ ಉದ್ದವಿರುವ ದಾಂಡಿನಿಂದ (ದಂಡ) ಆ ಚಿನ್ನಿಯ ಒಂದು ತುದಿಯನ್ನು ಹೊಡೆಯುತ್ತೇವೆ. ಕೂಡಲೇ ಅದು ಮೇಲಕ್ಕೆ ಗಾಳಿಯಲ್ಲಿ ಸ್ವಲ್ಪ ಎಗರುತ್ತದೆ. ತತ್‌ಕ್ಷಣ ಆ ಚಿನ್ನಿಗೆ ನಮ್ಮ ಕೈದಾಂಡಿನಿಂದ ಬಲವಾಗಿ ಹೊಡೆಯುತ್ತೇವೆ. ಚಿನ್ನಿಯು ಬಹಳ ದೂರ ಅಂತರದಲ್ಲಿಯೇ ಹಾರಿಹೋಗುತ್ತದೆ. ಈ ಆಟದಲ್ಲಿ ಎರಡು ಹಂತಗಳಿವೆ. ಮೊದಲನೆಯದರಲ್ಲಿ ಅದನ್ನು ಮೇಲಕ್ಕೆ ಎಗರಿಸಬೇಕು; ಏರಿಸಬೇಕು; ಎರಡನೆಯ ಘಟ್ಟದಲ್ಲಿ ಅದನ್ನು ದೂರ ಹಾರಿಸಬೇಕು. ಮನಸ್ಸಿಗೆ ದೇವರ ಸಂಪರ್ಕವನ್ನು ಹಚ್ಚಬೇಕಾದರೆ ಮೊದಲು ಅದನ್ನು ಸ್ವಲ್ಪ ಮೇಲೇರಿಸಬೇಕು; ಉಲ್ಲಾಸ ಪಡಿಸಬೇಕು; ಉನ್ನತಿಗೊಳಿಸಬೇಕು. ಅನಂತರ ಎರಡನೆಯ ಕ್ರಮದಲ್ಲಿ ಅದನ್ನು ಆಧ್ಯಾತ್ಮಿಕ ವಾತಾವರಣದಲ್ಲಿ ದೂರ ಹಾರಿಸಬೇಕು.

ಉಲ್ಲಾಸಕರವಾದ ವಾತಾವರಣ, ರಮಣೀಯವಾದ ಭೂದೃಶ್ಯಗಳು, ಮನೋಹರವಾದ ಪ್ರಕೃತಿ ದೃಶ್ಯಗಳು ಮನಸ್ಸನ್ನು ಮೊದಲ ಹಂತಗಳಲ್ಲಿ ಮೇಲೆತ್ತುವದಕ್ಕೆ ಬಹಳ ಸಹಾಯವಾಗುತ್ತವೆ. ಅನಂತರ ಮನಸ್ಸನ್ನು ದೇವರ ಧ್ಯಾನದಲ್ಲಿ ತೊಡಗಿಸಿ ಮುಂದು ಮುಂದುವರಿಸುವದಕ್ಕೂ ಅದು ದೇಹ ಭಾವನೆಯನ್ನು ಕಳೆದು ಕೊಂಡು, ದೇವರೇ ಆಗಿ ನಿಲ್ಲುವದಕ್ಕೂ ಸುಲಭವಾಗುತ್ತದೆ. ಮನಸ್ಸಿಗೆ ಪ್ರಾಥಮಿಕ ಉನ್ನತಿಯನ್ನೂ ಉತ್ಸಾಹವನ್ನೂ ಪಡೆಯಲು ಅನುಕೂಲವಾದ ದೇಶಕಾಲಗಳು ನೀಡುವ .ಸ್ವಾಭಾವಿಕ ಸ್ಫೂರ್ತಿಯನ್ನು ಹೀಗೆ ಉಪಯೋಗ ಮಾಡಿಕೊಳ್ಳಬಹುದು. ಉದಯಕ್ಕೆ ಸ್ವಲ್ಪ ಮುಂಚೆ ಉಷಃಕಾಲದಲ್ಲಿ ಹಕ್ಕಿಗಳ ಕಲಕಲರವ, ಸುವಾಸಿತವಾದ ಗಾಳಿ, ಪೂರ್ವ ದಿಗಂತದಲ್ಲಿ ಕಾಣುವ ಅತ್ಯಂತ ಸುಂದರವೂ ಮನೋಜ್ಞವೂ ಆದ ಬಗೆ ಬಗೆಯ ಬಣ್ಣಗಳು ಮನಸ್ಸಿಗೆ ಅವಶ್ಯವಾದ ಮೂಲ ಸ್ಫೂರ್ತಿಯನ್ನು ಕೊಡುತ್ತವೆ.

ಮನಸ್ಸನ್ನು ದಿವ್ಯ ಭೂಮಿಕೆಗಳಲ್ಲಿ ಮೇಲೆ ಮೇಲೆ ಏರುವಂತೆ ಮಾಡುವದು ಹೇಗೆ? ಆತ್ಮನು ಪರಮಾತ್ಮನ ಸಿಂಹಾಸನದ ಸನ್ನಿಧಿಗೆ ಏರುವಂತೆ ಮಾಡುವದು ಹೇಗೆ? ಅರ್ಧ ತೆರೆದ ಕಣ್ಣುಗಳ ಮುಂದ ಪಾರದರ್ಶಕವಾದ ರೆಪ್ಪೆಗಳ ಮೇಲೆ ಉದಯ ಸೂರ್ಯನ ಅಥವಾ ಅಸ್ತ ಸೂರ್ಯನ ದಯಾಪರವಾದ ಕಿರಣಗಳು ಬೀಳುತ್ತಿರುವಾಗ ನಾವು ಓಂಕಾರವನ್ನು ಉಚ್ಚರಿಸುವದಕ್ಕೆ ಪ್ರಾರಂಭಿಸುತ್ತೇವೆ. ನಾವದನ್ನು ಭಾವನಾಪೂರ್ಣ ಭಾಷೆಯಲ್ಲಿ ಗಾನಮಾಡುತ್ತೇವೆ.

ಓಂಕಾರದ ಅರ್ಥವು ಬೇರೆ ಬೇರೆ ಜನರಿಗೆ ಬೇರೆ ಬೇರೆ ರೀತಿಯಲ್ಲಿ ಆಗುತ್ತದೆ. ಪ್ರತಿಯೊಬ್ಬರೂ ತಮ್ಮ ತಮ್ಮ ಆಧ್ಯಾತ್ಮಿಕ ಬೆಳವಣಿಗೆಯ ಭೂಮಿಕೆಗೆ ಸರಿಹೊಂದುವಂತೆ ಓಂಕಾರಕ್ಕೆ ಅರ್ಥ ಮಾಡಬೇಕು. ಈ ಓಂಕಾರವು ಸಹಸ್ರ ಸಹಸ್ರ ಸೂರ್ಯರಿಗೆ ಪ್ರಕಾಶವನ್ನೀಯುವ ಮಹಾ ಸೂರ್ಯನಿಗೆ ಪ್ರತೀಕವೆಂದು ಕೆಲವರು ತಿಳಿಯುತ್ತಾರೆ. ಸ್ತ್ರೀಯರು ತಮ್ಮ ಕನ್ನಡಿಯನ್ನು ನೋಡಿಕೊಂಡಂತೆ ಇವರು ಉದಯವಾಗುತ್ತಿರುವ ಸೂರ್ಯ ಮಂಡಲವನ್ನು ನೋಡುತ್ತಾರೆ. ಇಂಡಿಯಾ ದೇಶದಲ್ಲಿ ಹೆಂಗಸರು ತಮ್ಮ ಹೆಬ್ಬೆರಳುಗಳ ಮೇಲೆ ಸಣ್ಣ ಕನ್ನಡಿಯನ್ನು ಧರಿಸುತ್ತಾರೆ. ಅವರು ಸ್ವಲ್ಪ ದೊಡ್ಡ ಬಂಗಾರದ ಉಂಗುರದಂತಿರುವ ಚೌಕಟ್ಟಿನಲ್ಲಿ ಪುಟಾಣಿ ಕನ್ನಡಿಯನ್ನು ತಮ್ಮ ಹೆಬ್ಬೆರಳ ಮೇಲೆ ಧರಿಸಿರುತ್ತಾರೆ. ಸ್ತ್ರೀಯರಿಗೆ ವಾಸ್ತವವಾಗಿ ಕನ್ನಡಿಯಷ್ಟು ಪ್ರಿಯವಾದ ವಸ್ತುವು ಯಾವದೂ ಇಲ್ಲ. ಆಕೆಯು ಕನ್ನಡಿಯಲ್ಲಿ ನೋಡಿಕೊಂಡಾಗ ತನ್ನ ಮುಖವು ಬೇರೆ ಹೊರಗಿದ್ದಂತೆ ಕಂಡರೂ ತನ್ನ ಮುಖವು ತನ್ನೊಡನೆಯೇ ಇದೆಯೆಂಬ ನಿಶ್ಚಿತಾನುಭವವುಳ್ಳವಳಾಗಿದ್ದಾಳೆ. ಹೊರಗೆ ಕಾಣುತ್ತಿರುವದು ತಾನೇ ಎಂಬ ನಿಶ್ಚಯಜ್ಞಾನವನ್ನು ಹೊಂದಿದ್ದಾಳೆ. ಹಾಗೆಯೇ ವೇದಾಂತಿಯು ಸೂರ್ಯನನ್ನು ಹೊರಗಿರುವಂತೆ ಕಂಡರೂ ನಿಜವಾದ ಸೂರ್ಯನು ತಾನೇ ಎಂಬ ನಿಶ್ಚಿತವಾದ ಅರಿವೂ ಅನುಭವವೂ ಉಳ್ಳವನಾಗಿದ್ದಾನೆ. ಹೊರಗಿನ ಭೌತಿಕ ಸೂರ್ಯನು ಕೇವಲ ತನ್ನ ಪ್ರತೀಕವೆಂದೂ ಪ್ರತಿಫಲನ (ಪ್ರತಿಬಿಂಬ)ವೆಂದೂ ತನ್ನ ಛಾಯೆಯೆಂದೂ ಕಾಣುತ್ತಾನೆ.

ಚಂದ್ರನು ಸೂರ್ಯನಿಗೆ ಹೇಗೆ ಸಂಬಂಧ ಪಟ್ಟಿದ್ದಾನೋ ಸೂರ್ಯನು ತನಗೆ ಹಾಗೆ ಸಂಬಂಧ ಪಟ್ಟಿದ್ದಾನೆಂದು ವೇದಾಂತಿಯು ತಿಳಿಯುತ್ತಾನೆ. ಚಂದ್ರನು ತನ್ನ ಸ್ವಂತ ಬೆಳಕಿನಿಂದ ಬೆಳಗುವಂತೆ ಕಂಡರೂ ವೈಜ್ಞಾನಿಕ ದೃಷ್ಟಿಯಿಂದಲೂ ನೈಜವಾಗಿಯೂ ಚಂದ್ರನು ಎಲ್ಲಾ ಬೆಳಕನ್ನೂ ಸೂರ್ಯನಿಂದಲೇ ಪಡೆಯುತ್ತಾ ಇದ್ದಾನೆ. ಹಾಗೆಯೇ ಸೂರ್ಯನು ತನ್ನ ಸ್ವಂತ ಬೆಳಕಿನಿಂದಲೇ ಬೆಳಗುತ್ತಿರುವಂತೆ ತೋರುತ್ತಿದ್ದರೂ ವೇದಾಂತಿಯು ತನ್ನ ಆತ್ಮ ಚೈತನ್ಯದಿಂದಲೇ ಸೂರ್ಯನು ಪ್ರಕಾಶಿಸುತ್ತಿರುವನೆಂದು ತಿಳಿಯುತ್ತಾನೆ; ಸೂರ್ಯನ ಎಲ್ಲಾ ವೈಭವವೂ ಮಹಿಮೆಯೂ ತನ್ನದೇ ಎಂದು ಅವನು ಅರಿತಿದ್ದಾನೆ.

ವಾಸ್ತವವಾಗಿ ಭೂಗ್ರಹವೇ ಸುತ್ತುತಿದ್ದರೂ ಸೂರ್ಯನೇ ಸುತ್ತುತ್ತಿರುವಂತೆ ನಮಗೆ ಕಾಣುತ್ತದೆ ; ಹಾಗೆಯೇ ತಿಳಿಯುತ್ತೇವೆ. ಆದರೆ ನಾವು ಖಗೋಳ ಶಾಸ್ತ್ರವನ್ನು ಅಭ್ಯಾಸ ಮಾಡಿದರೆ, ನಿಜವನ್ನು ತಿಳಿಯುತ್ತೇವೆ; ಬರಿ ತೋರಿಕೆಯಿಂದ ಮೋಸ ಹೋಗುವದಿಲ್ಲ. ಸೂರ್ಯನು ಸುತ್ತುವದಿಲ್ಲವೆಂದು ಭೂಮಿಯ ಭ್ರಮಣೆಯನ್ನೇ ಸೂರ್ಯನ ಮೇಲೆ ಆರೋಪಮಾಡಿ ನೋಡುತ್ತಿದ್ದೇವೆಂದೂ ನಮಗೆ ನಿಶ್ಚಯವಾಗುತ್ತದೆ. ಹಾಗೆಯೇ ಮಹಿಮಾ ಪೂರ್ಣ ಸೂರ್ಯನಿಗೆ ಸೇರಿದ್ದೆಂದು ಕಾಣುವ ಭವ್ಯ

ತೆಯೂ ಶೋಭೆಯೂ ವೈಭವವೂ ಶಕ್ತಿಯೂ ನಿಜವಾಗಿ ತನ್ನದೇ ಎಂದೂ, ಸೂರ್ಯ ನದೆಂದು ತಪ್ಪಾಗಿ ತಿಳಿಯಲ್ಪಟ್ಟಿದೆಯೆಂದೂ, ವೇದಾಂತಿಯು ಉದಯವಾಗುತ್ತಿರುವ ಸೂರ್ಯನನ್ನು ನೋಡಿದಾಗ ತಿಳಿಯುತ್ತಾನೆ. ಇನ್ನೊಂದರಲ್ಲಿ ಇದೆಯೆಂದು ತೋರುವ ಎಲ್ಲಾ ಮಹಿಮೆಯೂ ವೈಭವವೂ ಶೋಭೆಯೂ ನಿಜವಾಗಿ ನೋಡಿದರೆ ನನ್ನದೇ ನನ್ನದೇ ನನ್ನದೇ !

ಭೌತಿಕ ಜಗತ್ತಿನಲ್ಲಿ ಸೂರ್ಯನು ಪ್ರಕಾಶಕ್ಕೂ ಜ್ಞಾನಕ್ಕೂ ಸಂಕೇತವಾಗಿದ್ದಾನೆ. ಸೂರ್ಯನು ಶಕ್ತಿಗೂ ಪ್ರತೀಕವಾಗಿದ್ದಾನೆ. ಮಿಕ್ಕ ಎಲ್ಲಾ ಗ್ರಹಗಳೂ ತಿರುಗುವಂತೆ ಸೂರ್ಯನು ಮಾಡುತ್ತಾನೆ. ಇರುವಿಕೆಗೂ ಪ್ರಾಣಕ್ಕೂ ಅದು ಸಂಕೇತವಾಗಿದೆ: ಎಲ್ಲಾ ಪ್ರಾಣಕ್ಕೂ ಮೂಲವೇ ಸೂರ್ಯ ; ಸಮಸ್ತ ಪ್ರಾಣವೂ ಸೂರ್ಯನಿಗೇ ಋಣಿಯಾಗಿದೆ. ಸೂರ್ಯನು ಸೌಂದರ್ಯದ ಸಂಕೇತ. ಅದು ಭೂಮಿಯನ್ನೂ ಸರ್ವವನ್ನೂ ಆಕರ್ಷಿಸುತ್ತದೆ. ಅದರ ಪ್ರಕಾಶವು ಕಣ್ಣು ಕೋರೈಸುವಂತಿದೆ. ಸೂರ್ಯನಿಂದ ಸೂಚಿಸಲ್ಪಡುವ ಜ್ಞಾನವೂ ಪ್ರಕಾಶವೂ ಪ್ರಾಣವೂ ಶಕ್ತಿಯೂ ಇರುವಿಕೆಯೂ ಸೌಂದರ್ಯವೂ ಆಕರ್ಷಣೆಯೂ—ಈ ಎಲ್ಲವೂ ತನ್ನದೆಂದೇ—ತಾನೇಂದೇ—ವೇದಾಂತಿಯು ತಿಳಿಯುತ್ತಾನೆ. ಇವೆಲ್ಲವೂ ತನ್ನ ಹೊರಗೇ ಕಂಡರೂ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡ ತರುಣಿಯು ಅದು ತನ್ನದೆಂದೇ ತಾನೆಂದೇ ತಿಳಿಯುವಂತೆ ಎಲ್ಲವನ್ನೂ ವೇದಾಂತಿಯು ತಾನೆಂದೇ ತಿಳಿಯುತ್ತಾನೆ. ನಿಜವಾಗಿ ನೋಡಿದರೆ ಪ್ರಾಣವೂ ಪ್ರಜ್ಞೆಯೂ ಪ್ರಕಾಶವೂ ಸೌಂದರ್ಯವೂ ಎಲ್ಲವೂ ನಾನೇ ಆಗಿದ್ದೇನೆ; ನೀವೇ ಆಗಿದ್ದೀರಿ.

ಈ ವಿಚಾರವನ್ನು ಅನುಭವದಲ್ಲಿ ತಂದುಕೊಳ್ಳುವದಕ್ಕಾಗಿಯೂ ದೇಹೇಂದ್ರಿಯ ಮನಸ್ಸುಗಳು ತಾನೆಂಬ ವ್ಯಾಮೋಹವನ್ನು ಕಳೆದುಕೊಂಡು, ನಿಜವಾದ ಆತ್ಮನೇ ತಾನೆಂಬ ನಿಶ್ಚಯವನ್ನು ಪಡೆಯುವದಕ್ಕಾಗಿಯೂ ಪ್ರಾರಂಭ ದೆಶೆಯಲ್ಲಿರುವ ಸಾಧಕನು ಓಂಕಾರದ ಉಪಾಸನೆಯಿಂದ ಮಹತ್ತಾದ ಸಹಾಯವನ್ನು ಪಡೆಯುತ್ತಾನೆ. ಓಂಕಾರ ವನ್ನು ಉಚ್ಚಾರಣೆ ಮಾಡುವಾಗ ವೇದಾಂತಿಯು ಭಾವಿಸುವ ಅರ್ಥವೇನೆಂದರೆ:—

ಪ್ರಕಾಶಗಳಿಗೆಲ್ಲಾ ಪ್ರಕಾಶವು ನಾನೇ; ನಾನೇ ಸೂರ್ಯ; ನಿಜವಾದ ಸೂರ್ಯ ನಾನೇ; ಹೊರಗಿನ ತೋರಿಕೆಯ ಸೂರ್ಯನು ನನ್ನ ಪ್ರತೀಕ ಮಾತ್ರ. ಸೂರ್ಯ ನಾದ ನನ್ನ ಸುತ್ತಲೂ ಎಲ್ಲಾ ಗ್ರಹತಾರೆಗಳೂ ವಸ್ತುಗಳೂ ದೇಹಗಳೂ ತಿರುಗು ತ್ತಿವೆ. ಎಲ್ಲಾ ಸ್ವರ್ಗೀಯ ಶರೀರಗಳೂ ಮರ್ತ್ಯ ಶರೀರಗಳೂ ಚಲಿಸುತ್ತಿರುವದೂ ಎಲ್ಲಾ ಕಾರ್ಯ ಮಾಡುತ್ತಿರುವದೂ ನನಗಾಗಿಯೇ. ನಾನು ಅಚಲನೂ ಅನಂತನೂ ಆಗಿ ದ್ದೇನೆ; ನಾನು ಹಿಂದೂ, ಇಂದೂ, ಮುಂದೂ, ಎಂದೆಂದೂ ಒಂದೇ ರೂಪದಿಂದಿರುವ

ಚೈತನ್ಯವಾಗಿದ್ದೇನೆ. ನನ್ನ ಎದುರಿಗೆ ಈ ಇಡೀ ಭೂಮಂಡಲವೇ ಇಡೀ ವಿಶ್ವವೇ ತನ್ನಿಂದ ತಾನೇ ಬಿಚ್ಚಿಕೊಳ್ಳುತ್ತಿದೆ; ವ್ಯಕ್ತವಾಗುತ್ತಿದೆ. ಅದು ತನ್ನ ಎಲ್ಲಾ ಭಾಗಗಳನ್ನೂ ನನ್ನ ಎದುರಿಗೆ ಬಿಚ್ಚಿ ತೋರಿಸುವುದಕ್ಕಾಗಿ, ತನ್ನದಾಗಿರುವ ಸಮಸ್ತವನ್ನೂ ನನಗೆ ಪರಿಚಯ ಮಾಡಿ ಕೊಡುವುದಕ್ಕಾಗಿ ನನ್ನ ಸುತ್ತಲೂ ತಿರುಗುತ್ತಿದೆ. ಭೂಮಂಡಲವು ತನ್ನ ರಹಸ್ಯಗಳನ್ನೆಲ್ಲಾ ನನ್ನೆದುರಿಗೆ ಬಯಲಿಗಿಡುವದಕ್ಕಾಗಿ ದಿನ ದಿನವೂ ತನ್ನ ಅಕ್ಷದ ಮೇಲೆ ಸುತ್ತುತ್ತಿದೆ. ವಿಶ್ವವು ತನ್ನ ಎಲ್ಲಾ ಬಗೆಯ ಚಟುವಟಿಕೆಗಳನ್ನೂ ನನಗಾಗಿ ನಡೆಸುತ್ತಿದೆ. ಸೂರ್ಯನು ನನಗಾಗಿ ಬೆಳಕನ್ನು ಚೆಲ್ಲುತ್ತಿದ್ದಾನೆ. ಚಂದ್ರನು ನನ್ನೆದುರಿಗೆ ನನಗಾಗಿ ಬೆಳಗುತ್ತಿದ್ದಾನೆ. ಈ ಪ್ರಪಂಚದ ಸಮಸ್ತ ವ್ಯಾಪಾರವೂ ನನ್ನ ಸಾನ್ನಿಧ್ಯಮಾತ್ರದಿಂದ ನನ್ನ ಆಜ್ಞಾವಶವಾಗಿಯೇ ನಡೆಯುತ್ತದೆ. ಸೂರ್ಯನ ಶಾಖ–ಪ್ರಕಾಶಗಳ ಇರುವಿಕೆಯೇ ಸಸ್ಯ ಜಾತಿಯನ್ನು ಬೆಳೆಯುವಂತೆಯೂ ಪ್ರಾಣಿಗಳ ಮಾಂಸ ಖಂಡಗಳನ್ನು ಚಲಿಸುವಂತೆಯೂ ಮನುಷ್ಯರನ್ನು ಆಲೋಚಿಸುವಂತೆಯೂ ಮಾಡುವಂತೆ ನನ್ನ ಸನ್ನಿಧಿಮಾತ್ರವೇ ಎಲ್ಲರನ್ನೂ ಎಚ್ಚರಗೊಳಿಸಿ ಎಲ್ಲವನ್ನೂ ಚೇತನಗೊಳಿಸುತ್ತದೆ. ನಿಜವಾದ ಚೈತನ್ಯವೂ ನಿಜವಾದ ದೇವರೂ ಆದ ನನ್ನ ಇರುವಿಕೆಯಿಂದಲೇ ಪ್ರಪಂಚದ ಸೃಷ್ಟಿ–ಸ್ಥಿತಿ–ಲಯಗಳೆಲ್ಲಾ ನಡೆಯುತ್ತಿವೆ. ಸ್ವರ್ಗ–ಮರ್ತ್ಯಗಳ ಎಲ್ಲಾ ದೇಹಗಳೂ ಎಲ್ಲಾ ಬಗೆಯ ವಸ್ತುಗಳೂ ಈ ಎಲ್ಲಾ ಜಂತುಗಳೂ ಅವುಗಳ ಚೇತನಗಳೂ ಮತ್ತು ದೇವತೆಗಳೂ ಇರುವುದು ನನ್ನ ಇರುವಿಕೆಯ ಆಧಾರದ ಮೇಲೆಯೇ, ಸೂರ್ಯರ ಸೂರ್ಯನಿಂದ ನನ್ನಲ್ಲಿಯೇ ಇವುಗಳೆಲ್ಲಾ ಜೀವಿಸಿರುವದು.

ನಾನು ಪ್ರಕಾಶಗಳ ಪ್ರಕಾಶ. ನಮ್ಮ ಕನಸಿನಲ್ಲಿ ಸೂರ್ಯ ಚಂದ್ರರಾಗಲೀ ನಕ್ಷತ್ರಗಳಾಗಲೀ ದೀಪವಾಗಲೀ ಇಲ್ಲವಾದರೂ ನಾವು ವಸ್ತುಗಳನ್ನು ನೋಡಿ ವ್ಯವಹರಿಸುತ್ತೇವೆ. ಪ್ರಕಾಶವಿಲ್ಲದೆ ವಸ್ತುಗಳು ಕಾಣುವದಿಲ್ಲವೆಂಬುದನ್ನು ತಿಳಿದಿದ್ದರೂ ನಾವು ಅಲ್ಲಿ ವಸ್ತುಗಳನ್ನು ನೋಡುತ್ತೇವೆ. ಬೆಳಕಿಲ್ಲದೆ ಪದಾರ್ಥಗಳನ್ನು ನೋಡಲಾರೆವೆಂಬದೂ ನಿಜ. ಹಾಗಾದರೆ, ನಮ್ಮ ಕನಸಿನಲ್ಲಿ ತೋರುವ ಬೆಳಕು ಯಾವದು ? ಅಲ್ಲಿ ನಾವು ವಸ್ತುಗಳನ್ನು ನೋಡುವದಕ್ಕೆ ಯಾವ ಬೆಳಕು ಸಹಾಯವಾಗುತ್ತದೆ? ಕನಸಿನಲ್ಲಿ ಎಲ್ಲವೂ ಕಾಣುವಂತೆ ಮಾಡುವದು ನಮ್ಮ ಆತ್ಮನ ಬೆಳಕೇ; ನಮ್ಮ ಬೆಳಕೇ. ನಾನು ಕನಸಿನಲ್ಲಿ ಒಂದು ವಜ್ರವನ್ನು ಕಂಡರೆ, ನನ್ನ ಬೆಳಕಿನಿಂದಲೇ ಅದನ್ನು ಕಾಣುತ್ತೇನೆ. ಆ ವಜ್ರದ ಕಾಂತಿಯು ಸಹ ನನ್ನ ಬೆಳಕಿನ ಕಡಲಿನಲ್ಲಿ ತೋರುವ ಸಣ್ಣ ಅಲೆಯು ಮಾತ್ರ. ನನ್ನ ಕನಸಿನಲ್ಲಿ ನಾನು ಚಂದ್ರನನ್ನು ಕಂಡರೆ ಚಂದ್ರನೂ ಬೆಳದಿಂಗಳೂಕೂಡ ನನ್ನ ಚೈತನ್ಯ ಪ್ರಕಾಶದಲ್ಲಿ ತೋರುವ ಒಂದು ತೆರೆ. ನಾನು ಪ್ರಕಾಶಮಾನನಾದ ಸೂರ್ಯನನ್ನು ನನ್ನ ಕನಸಿನಲ್ಲಿ ಕಂಡರೆ, ಅದು ಸುಮ್ಮನೆ, ನನ್ನ ಮಹಿಮಾ ಸಾಗರದಲ್ಲಿ ತೋರುವ ಒಂದು ಸುಳಿಯು ಮಾತ್ರ. ಎಚ್ಚರದ ಸ್ಥಿತಿಯಲ್ಲಿಯೂ ಹಾಗೆಯೇ; ಸೂರ್ಯ–ಚಂದ್ರ – ನಕ್ಷತ್ರಗಳೂ ಸಕಲವೂ ನನ್ನ ಚೈತನ್ಯ ಜ್ಯೋತಿಸ್ಸಾಗರದಲ್ಲಿ ಕೇವಲ

ತರಂಗಗಳು. ನಾನು ವಿಶ್ವವನ್ನೆಲ್ಲಾ ಬೆಳಗುತ್ತೇನೆ. ನನ್ನ ಸಾನ್ನಿಧ್ಯಸಮುದ್ರದಲ್ಲಿ ಪ್ರತಿಯೊಂದು ಪದಾರ್ಥವೂ ಸೂರ್ಯ–ಚಂದ್ರ–ನಕ್ಷತ್ರಾದಿಗಳೂ ದೇವತೆಗಳೂ ಎಲ್ಲವೂ ಎಲ್ಲರೂ ಅಲೆಗಳೂ ಸುಳಿಗಳೂ ಆಗಿವೆ.

ನಾನೇ ಚಕ್ರವರ್ತಿಗಳಿಗೆಲ್ಲಾ ಚಕ್ರವರ್ತಿ; ಈ ಪ್ರಪಂಚದಲ್ಲಿ ಎಲ್ಲಾ ರಾಜರುಗಳಾಗಿ ತೋರತಕ್ಕವನು ನಾನೇ. ಬೇರೆ ಬೇರೆ ತೋಟಗಳಲ್ಲಿ ಸುಂದರವಾದ ಹೂವುಗಳಾಗಿ ತೋರತಕ್ಕವನು ನಾನೇ. ಎಲ್ಲಾ ಮೋಹಿನಿಗಳ ಮರುಳು ಮಾಡುವ ಮುಖಗಳಿಂದ ನಾನೇ ಮುಗುಳು ನಗುತ್ತೇನೆ. ಎಲ್ಲಾ ಯೋಧರ ಮಾಂಸಖಂಡಗಳನ್ನೂ ನಾನೇ ಚಲಿಸುವಂತೆ ಮಾಡುತ್ತೇನೆ. ಇಡೀ ಜಗತ್ತು ನನ್ನಲ್ಲಿಯೇ ಇದ್ದು, ಚಲಿಸಿ, ಜೀವಿಸುತ್ತದೆ. ಎಲ್ಲೆಲ್ಲಿಯೂ ನನ್ನ ಇಚ್ಛೆಯೇ ನಡೆಯುತ್ತಿದೆ. ಎಲ್ಲೆಲ್ಲಿಯೂ ನನ್ನ ಸಾಮ್ರಾಜ್ಯವೇ ಸಾರ್ವಭೌಮ ಅಧಿಕಾರವನ್ನು ಪಡೆದಿದೆ. ಎಲ್ಲೆಲ್ಲಿಯೂ ನಾನೇ ಪ್ರಕಟವಾಗಿದ್ದೇನೆ. ಅತ್ಯಂತ ಸೂಕ್ಷ್ಮವಾದ ಅಣು ಪ್ರಾಣಿಯಿಂದ ಹಿಡಿದು ಅತ್ಯಂತ ದೊಡ್ಡ ಸೂರ್ಯನ ವರೆಗೂ ಎಲ್ಲವನ್ನೂ ನಾನೇ ಪೋಷಿಸುತ್ತೇನೆ. ಪ್ರತಿಯೊಂದು ಪ್ರಾಣಿಗೂ ನಿತ್ಯವೂ ಆಹಾರವನ್ನು ನಾನೇ ಕೊಡುತ್ತೇನೆ. ಸೂರ್ಯನ ಸುತ್ತಲೂ ಭೂಮಿಯು ತಿರುಗುವಂತೆ ನಾನೇ ಮಾಡಿದೆ. ಪ್ರಪಂಚವು ಪ್ರಾರಂಭವಾಗುವದಕ್ಕೆ ಮೊದಲೇ ನಾನು ಅಲ್ಲಿದ್ದೆ.

ಕೆಟ್ಟ ಆಲೋಚನೆಗಳೂ ಪ್ರಾಪಂಚಿಕ ಆಶೆಗಳೂ ಸುಳ್ಳು ದೇಹಕ್ಕೂ ಸುಳ್ಳು ಮನಸ್ಸಿಗೂ ಸಂಬಂಧಪಟ್ಟವುಗಳು; ಅವು ಕತ್ತಲೆಯ ವಸ್ತುಗಳು. ನನ್ನ ಸನ್ನಿಧಿಯಲ್ಲಿ ಅವು ತೋರಿಕೊಳ್ಳುವದಕ್ಕೆ ಅಧಿಕಾರವೇ ಇಲ್ಲ. ಎಲ್ಲಾ ವಿಶ್ವಗಳೂ ಎಲ್ಲಾ ಭೌತಾಕಾಶ ದ್ರವ್ಯಗಳೂ ತೇಲಾಡುತ್ತಿರುವ ಪರಮಾಕಾಶವೇ ನಾನು. ಪ್ರಕಾಶದಂತೆ ನಾನು ಪ್ರತಿಯೊಂದು ಅಣುವಿನಲ್ಲಿಯೂ ವಸ್ತುವಿನಲ್ಲಿಯೂ ಒಳ ಹೊರಗೆಲ್ಲಾ ತುಂಬಿಕೊಂಡಿದ್ದೇನೆ. ಅತ್ಯಂತ ಕೀಳಾದುದೂ ನಾನೇ ಅತ್ಯಂತ ಮೇಲಾದುದೂ ನಾನೇ· ನನ್ನ ಜೊತೆಗೆ, ಅತ್ಯಂತ ಕೀಳಾದುದಾಗಲೀ ಅತ್ಯಂತ ಮೇಲಾದುದಾಗಲೀ ಇನ್ನೊಂದಿಲ್ಲ. ಮಾನವ ದೃಷ್ಟಿ ಬಿದ್ದಲ್ಲೆಲ್ಲಾ ನಾನಿದ್ದೇನೆ. ಪಾತ್ರಧಾರಿಯೂ ಸೂತ್ರಧಾರಿಯೂ ಪ್ರದರ್ಶಕನೂ ಪ್ರೇಕ್ಷಕನೂ ಎಲ್ಲಾ ನಾನೇ. ಯೇಸು ಕ್ರಿಸ್ತನಾಗಿ ನಾನು ಕಾಣಿಸಿ ಕೊಂಡೆ; ಮಹಮ್ಮದನಲ್ಲಿ ನನ್ನನ್ನುನಾನು ಪ್ರಕಾಶಪಡಿಸಿದೆ. ಪ್ರಪಂಚದಲ್ಲಿ ಅತ್ಯಂತ ಪ್ರಖ್ಯಾತ ಪುರುಷರೂ ಅತ್ಯಂತ ಅಪಖ್ಯಾತ ಪುರುಷರೂ ಅತ್ಯಂತ ಕಲಂಕಿತರೂ ಅತ್ಯಂತ ಪತಿತರೂ ನಾನೇ ಆಗಿದ್ದೇನೆ. ನಾನೇ ಎಲ್ಲಾ, ಎಲ್ಲಾ. ನಿಮ್ಮ ಬಯಕೆಯ ವಸ್ತು ಯಾವದೋ ಅದೇ ನಾನು. ಓ ನಾನೆಷ್ಟು ಸುಂದರ ! ಮಿಂಚಿನಲ್ಲಿ ಹೊಳೆಯುತ್ತೇನೆ; ಗುಡುಗಿನಲ್ಲಿ ಗರ್ಜಿಸುತ್ತೇನೆ; ಎಲೆಗಳಲ್ಲಿ ಕಂಪಿಸುತ್ತೇನೆ; ಗಾಳಿಯಲ್ಲಿ ಸುಯ್ಗುಟ್ಟುತ್ತೇನೆ; ಭೋರ್‌ಗುಟ್ಟಿ ಉಕ್ಕೇರುತ್ತಿರುವ ಸಮುದ್ರದಲ್ಲಿ ತೂಗಿ ತೂಗಿ ಉರುಳಾಡುತ್ತೇನೆ. ಮಿತ್ರರೂ ನಾನೇ ಶತ್ರುಗಳೂ ನಾನೇ. ನನಗೆ ಶತ್ರುವೂ ಮಿತ್ರರೂ ಇಲ್ಲ.

ಈ ಪ್ರಪಂಚದ ಕ್ಷಣಿಕವೂ ಮಾಯಾಮಯವೂ ಆದ ಕೀರ್ತಿಗೂ ಐಶ್ವರ್ಯಕ್ಕೂ ಸಂಬಂಧಪಟ್ಟ ಆಶೆಗಳೇ ಆಲೋಚನೆಗಳೇ ಓಡಿ, ತೊಲಗಿರಿ. ಈ ಶರೀರವು ಏನಾದರೂ ಆಗಲಿ; ನನಗೆ ಸಂಬಂಧವಿಲ್ಲ. ಎಲ್ಲಾ ದೇಹಗಳೂ ನನ್ನವೇ. ಫ್ರ್ಯಾಂಕ್ಲಿನ್ ನಾನಾಗಿದ್ದೆ; ನ್ಯೂಟನ್ ನಾನಾಗಿದ್ದೇನೆ; ಲಾರ್ಡ್ ಕೆಲ್ವಿನ್ ನಾನೇ. ಮಹಾ ಪ್ರಚಂಡ ರಾಮನೂ ಮಹಾ ಸುಂದರ ಕೃಷ್ಣನೂ ನಾನೇ. ಕ್ಯಾಂಟಿನ ಮೆದುಳಿನಲ್ಲಿ ನಾನೇ ಇದ್ದು ಕೆಲಸ ಮಾಡಿದೆ. ಬುದ್ಧನ ಹೃದಯಕ್ಕೂ ಪ್ರಸಿದ್ಧ ಶಂಕರನ ಬುದ್ಧಿಗೂ ನಾನೇ ಸ್ಫೂರ್ತಿಯನ್ನು ಕೊಟ್ಟೆ. ಎಲ್ಲಾ ಷೇಕ್ಸ್‌ಪಿಯರ್‌ಗಳಿಗೂ, ಪ್ಲೇಟೋಗಳಿಗೂ ಬೆಳಕನ್ನು ನೀಡತಕ್ಕವನು ನಾನೇ. ಅವರೆಲ್ಲರೂ ಮೂಲ ಉಗಮವಾದ ನನ್ನಲ್ಲಿಗೆ ಬಂದು ತುಂಬಿಕೊಳ್ಳುತ್ತಾರೆ; ದೀಪ್ತಿಯನ್ನು ಪಡೆದು ಬೆಳಗುತ್ತಾರೆ. ಈ ಎಲ್ಲಾ ಪ್ರಾಪಂಚಿಕ ಆಶೆಗಳೂ ನಿಜವಾದ ಮನುಷ್ಯನನ್ನು ಕಟ್ಟಿಹಾಕಿ, ಕೆಳಗೆಳೆಯುತ್ತವೆ. ಓ ನಲಿವಿನ–ಗೆಲುವಿನ ಗುಲಾಬಿ ತೋಟಗಳೇ, ಚೆಲುವಿನ ಭೂ ದೃಶ್ಯಗಳೇ ತೊಲಗಿರಿ. ನೀವೆಲ್ಲರೂ ನನ್ನಲ್ಲಿಯೇ ಇದ್ದೀರಿ; ನಿಮ್ಮಲ್ಲಿ ಯಾರೊಬ್ಬರೂ ನನ್ನನ್ನು ನಿಮ್ಮೊಳಗೆ ಇಟ್ಟುಕೊಳ್ಳಲಾರಿರಿ. ಈ ವಿಶ್ವವಿರುವದು ನನ್ನಲ್ಲಿಯೇ; ನನ್ನಲ್ಲಿಯೇ ಎಲ್ಲವೂ ಇವೆ. ಯಾವದೂ ನನ್ನನ್ನು ಒಳಗೊಳ್ಳಬಲ್ಲುದು? ನನ್ನನ್ನು ಯಾವದು ಪರಿಮಿತಿಗೂಳಿಸಬಲ್ಲುದು? ಪ್ರಪಂಚ, ಪ್ರಪಂಚವೇ ನನ್ನೊಳಗಿದೆ; ವಿಶ್ವ ವಿಶ್ವವೇ ನನ್ನೊಳಗಿದೆ! ಆದರೂ ಪ್ರತಿಯೊಂದರಲ್ಲಿಯೂ ಎಲ್ಲದರಲ್ಲಿಯೂ ನಾನಿದ್ದೇನೆ. ನಾನು ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಆಲೋಚನೆಗಳಲ್ಲಿಯೂ ಇದ್ದೇನೆ. ಪ್ರೇಮೋದ್ವೇಗದಿಂದ ಸ್ಪಂದಿಸುತ್ತಿರುವ ಪ್ರಿಯನ–ನಲ್ಲನ–ಎದೆಯಲ್ಲಿಯೂ ಮದಿಸಿದ ನಲ್ಲೆಯ–ಪ್ರೇಯಸಿಯ–ನಗುವಿನ ಕಣ್ಣುಗಳಲ್ಲಿಯೂ ನಾನೇ ಇದ್ದೇನೆ. ಪ್ರತಿಯೊಬ್ಬರ ಹಾಗೂ ಎಲ್ಲರ ನರ–ನಾಡಿಗಳಲ್ಲಿಯೂ ನಾನೇ ಮಿಡಿಯುತ್ತಿದ್ದೇನೆ. ನಿಮ್ಮಲ್ಲಿ ನಾನಿದ್ದೇನೆ, ನಾನು ನಿಮ್ಮಲ್ಲಿಯೇ ಇದ್ದೇನೆ! ಇಲ್ಲ, ಅಲ್ಲ, ನೀವು ಮತ್ತು ನಾನು ಎಂಬ ಎರಡು ಇರಲು ಸಾಧ್ಯವಿಲ್ಲ; ಭೇದವೇ ಇಲ್ಲ. ನಾನು ನಾನೇ!

---

# SOME OBJECTIONS IN THE WAY OF SELF - REALIZATION

## ಆತ್ಮಾನುಭವದ ಹಾದಿಯಲ್ಲಿರುವ ಕೆಲವು ಆಕ್ಷೇಪಗಳು

### (ಸ್ಯಾನ್‌ಫ್ರಾನ್ಸಿಸ್ಕೋ ಗೋಲ್ಡನ್ ಹಾಲ್‌ನಲ್ಲಿ ತಾ|| 18–1–1903ರಲ್ಲಿ ಮಾಡಿದ ಉಪನ್ಯಾಸ.)

ಸಂಭಾವಿತ ಸ್ತ್ರೀ ಪುರುಷರಲ್ಲಿರುವ ನನ್ನ ಆತ್ಮವೇ !

ಈ ಸಣ್ಣ ಪುಸ್ತಕದಲ್ಲಿ ನಿರ್ದೇಶಿಸಲ್ಪಟ್ಟ ಧ್ಯಾನ ರೀತಿಗೆ ತೋರಿಸಲಾದ ಕೆಲವು ಆಕ್ಷೇಪಗಳನ್ನು ವಿಚಾರಮಾಡೋಣ. ನಿಮ್ಮಲ್ಲಿ ಅನೇಕರು ಈ ಪುಸ್ತಕವನ್ನು ಓದಿರಬಹುದು.

ಮೊದಲನೆಯ ಆಕ್ಷೇಪ:—ನೀವು ಹೇಳುವ ಅನುಭವ ವಿಧಾನವು ಕೇವಲ ಕಾಲ್ಪನಿಕವಾಗಿದೆ. ಅದು ನಮ್ಮ ಭಾವನೆಗೂ ವಿಚಾರ ಸಾಧನೆಗೂ ಹೆಚ್ಚು ಸಂಬಂಧಪಡುವದೇ ಹೊರತು ಬೇರೇನೂ ಇಲ್ಲ.

ಈ ಅಕ್ಷೇಪವನ್ನು ಎತ್ತುತಕ್ಕವರಿಗೆ ವೇದಾಂತವು ಹೇಳುವದೇನೆಂದರೆ;

ಪ್ರೇಮಾತ್ಮ ! ಸ್ವಲ್ಪ ಆಲೋಚನೆ ಮಾಡು ; ಪ್ರಿಯ ಆತ್ಮ ! ಸ್ವಲ್ಪ ವಿಚಾರ ಮಾಡು. ಈ ಎಲ್ಲಾ ಪ್ರಪಂಚವೂ ಈ ಎಲ್ಲಾ ವಸ್ತುಗಳೂ ದೇಹಗಳೂ ತೋರುವದಕ್ಕೆ ಕಲ್ಪನೆಯ ಹೊರತು, ಭಾವನೆಯ ಹೊರತು, ಬೇರೆ ಕಾರಣವಿಲ್ಲ. ನಿಮ್ಮ ಎಲ್ಲಾ ದುಃಖಗಳಿಗೂ, ತೊಂದರೆಗಳಿಗೂ, ಚಿಂತೆಗಳಿಗೂ, ಕಷ್ಟಗಳಿಗೂ, ನೋವುಗಳಿಗೂ, ನಿಮ್ಮ ಭಾವನೆಯ ಹೊನಲೂ ವಿಚಾರದ ಹರಿವೂ ತಪ್ಪು ದಿಶೆಯನ್ನು ಹಿಡಿದಿರುವದೇ ಕಾರಣ. ನಿಮ್ಮನ್ನು ಬಂಧಿಸಿರುವುದು ತಪ್ಪು ದಿಕ್ಕಿನಲ್ಲಿ ಹರಿಯುತ್ತಿರುವ ನಿಮ್ಮ ಭಾವನೆಯೂ ಊಹೆಯೂ ಕಲ್ಪನೆಯೂ ಆಗಿವೆ. ಆದ್ದರಿಂದ ಸರಿಯಾದ ಹರಿಯಲ್ಲಿ ತಿರುಗಿಸಲ್ಪಡುವ ನಿಮ್ಮ ಊಹಾ ಕಲ್ಪನೆಗಳೇ ನಿಮ್ಮನ್ನು ಬಿಡುಗಡೆ ಮಾಡುತ್ತವೆ. ಸಮಾನ ಗುಣಧರ್ಮಗಳುಳ್ಳ ವಸ್ತುಗಳು ಒಂದಕ್ಕೊಂದು ಗುಣಕಾರಿಯಾಗುತ್ತವೆ.

ಯಾವ ಏಣಿಯಿಂದ ನೀವು ಕೆಳಗೆ ಬಿದ್ದಿದ್ದೀರೋ ಆ ಏಣಿಯೇ ನಿಮ್ಮನ್ನು ಮೇಲೊಯ್ಯುತ್ತದೆ. ಯಾವ ರಸ್ತೆಯೊಳಗಿಂದ ನೀವು ಚಿಂತಾತಂಕಗಳಲ್ಲಿಯೂ ವಿಪತ್ತುಗಳಲ್ಲಿಯೂ ಬಿದ್ದಿರೋ ಆ ರಸ್ತೆಯಿಂದಲೇ ನೀವು ಹಿಂದಿರುಗಿ ನಡೆಯಬೇಕು.

ವೇದಾಂತವು ನಿಮ್ಮ ವಿಮೋಚನೆಗೆ ಯಾವ ಬಗೆಯ ಭಾವನೆಯನ್ನು ಉಪದೇಶಿಸಿ ಸಲಹೆ ಮಾಡುತ್ತಿದೆಯೋ ಅದು ನಿಮ್ಮನ್ನು ಕೆಳಗೆ ತಂದ ಭಾವನಾರೂಪಕ್ಕೆ ವಿರುದ್ಧವಾದುದು. ವಿರುದ್ಧ ಗುಣ ಸ್ವಭಾವಗಳು ವಿರುದ್ಧ ಗುಣ ಧರ್ಮಗಳನ್ನು ಗುಣಪಡಿಸುತ್ತವೆ. (Like cures like and the contrary cures the contrary.) ನಿಮ್ಮ ಭಾವನೆಯೇ ನಿಮ್ಮ ಕಲ್ಪನೆಯೇ ನಿಮ್ಮ ಆಲೋಚನೆಯೇ ಈ ಎಲ್ಲಾ ಪ್ರಪಂಚ ವಾಗಿದೆಯೇ ಹೊರತು ಬೇರೆಯಲ್ಲ ಎಂಬುದನ್ನು ವೇದಾಂತವು ತೋರಿಸಿ ಕೊಡು ತ್ತದೆ. ಈಗ ಈ ಭಾವನಾ ಆಲೋಚನೆಗಳನ್ನೇ ಶುದ್ಧಮಾಡಿ, ಉನ್ನತಗೊಳಿಸಿ, ವಿಹಿತ ವಾಗಿ ನಿರ್ದೇಶಿಸಿದರೆ, ನೀವೇ ಪ್ರಕಾಶಗಳಿಗೆಲ್ಲಾ ಪ್ರಕಾಶವಾಗಿಯೂ ವಿಶ್ವದಲ್ಲಿಯ ಸರ್ವವಾಗಿಯೂ ಆಗುತ್ತೀರಿ.

ಅತಿಸಾರದಿಂದ, ಅತಿ ಭೇದಿಯಿಂದ ನರಳುತ್ತಿರುವವನಿಗೆ ವೈದ್ಯರು ಭೇದಿಯಾಗು ವದಕ್ಕೇ ಔಷಧಿಯನ್ನು ಕೊಡುತ್ತಾರೆ. ಅದರಿಂದ ಆ ಕಾಯಿಲೆಯು ಗುಣವಾಗುತ್ತದೆ. ಅತಿಸಾರವಾದಾಗ ಪುನಃ ಪುನಃ ಪಾಯಿಖಾನೆಗೆ ಹೋಗುವಂತೆ ಮಾಡುತ್ತಿತ್ತು. ಈಗ ಇಷ್ಟ ಪಟ್ಟು ತೆಗೆದುಕೊಂಡ ವಿರೇಚಕ (ಭೇದಿ) ಔಷಧಿಯು ಅದೇ ಪರಿಣಾಮವನ್ನು ಉಂಟು ಮಾಡಿದರೂ ಎರಡು ಪ್ರವೃತ್ತಿಗಳಿಗೂ—ವಿಶ್ವದಷ್ಟು ವ್ಯತ್ಯಾಸವಿದೆ. ಎರಡೂ ಒಂದೇ ರೀತಿಯಾದ ಪರಿಣಾಮವನ್ನುಂಟು ಮಾಡಿದರೂ ಅತಿಸಾರವು ರೋಗವೂ ವಿರೇಚಕವು ಔಷಧಿಯೂ ಆಗಿವೆ. ಪ್ರಾಪಂಚಿಕ ಭಾವನೆಯು ನಿಮ್ಮನ್ನು ದಾಸ್ಯದಲ್ಲಿ ಕೆಡವುತ್ತದೆ; ಅದು ನಿಮ್ಮನ್ನು ಬಂಧಿಸುತ್ತದೆ; ಎಲ್ಲಾ ಬಗೆಯ ಸನ್ನಿವೇಶಗಳ ಕರು ಣೆಗೂ ಗುರಿಪಡಿಸುತ್ತದೆ; ಅದು ರೋಗ; ಪ್ರತಿಯೊಂದು ಗಾಳಿಯೂ ಬಿರುಗಾಳಿಯೂ ನಿಮ್ಮನ್ನು ಉರುಳಿಸಿ ತಲೆಕೆಳಗು ಮಾಡುತ್ತದೆ. ಸಾಮಾನ್ಯ ಮಾನವ ಭಾವನೆಯೇ ಭಾವನೆಯ ಅತಿಸಾರ. ವೇದಾಂತವು ಒದಗಿಸುವ, ಸೂಚಿಸುವ ವಿರೇಚಕವೇ (ಭೇದಿಯ ಔಷಧಿಯೇ) ವಿಮೋಚಕವಾಗಿದೆ. ಅದನ್ನು ತೆಗೆದುಕೊಳ್ಳಿ. ಇದನ್ನೂ ಒಂದು ಬಗೆಯ ಕಲ್ಪನೆಯೆಂದೇ ತಿಳಿಯಬಹುದು. ಜಗತ್ತಿನ ಎಲ್ಲಾ ಭಾವನೆಗಳೂ ಹೀಗೆಯೇ ಇವೆ ಆದರೆ ಪ್ರಾಪಂಚಿಕ ಭಾವನೆಗಳೂ ಮಾನಸ ಕಲ್ಪನೆಗಳೂ ಅತಿಸಾರವೇ ಸರಿ; ವೇದಾಂತವು ಪ್ರತಿಪಾದಿಸುವ ಕಲ್ಪನೆಗಳೂ ವಿಚಾರಗಳೂ ಭೇದಿಯ ಔಷಧಿಯಂತೆ ಇವೆ. ಈ ವಿರೇಚಕವನ್ನು ತೆಗೆದುಕೊಂಡರೆ ನಿಮ್ಮ ರೋಗವು ಪರಿಹಾರವಾಗುತ್ತದೆ. ನಿಮ್ಮ ಎಲ್ಲಾ ವ್ಯಥೆಯೂ ಚಿಂತೆಯೂ ತೊಂದರೆಯೂ ನಿವಾರಣೆಯಾಗುತ್ತವೆ.

ಇಂಡಿಯಾದಲ್ಲಿ ಕೆಲವರು ಕೈತೊಳೆಯುವದಕ್ಕೆ ಸಾಬೂನನ್ನು ಉಪಯೋಗಿಸದೆ ಬೂದಿಯನ್ನು ಉಪಯೋಗಿಸುತ್ತಾರೆ. ಬೂದಿಯು ಒಂದು ಬಗೆಯ ಕೊಳೆ, ನಿಮ್ಮ ಕೈಗೆ ಹತ್ತಿ, ನಿಮ್ಮ ಕೈಯನ್ನು ಅಪವಿತ್ರಗೊಳಿಸುತ್ತಿರುವದೂ ಇನ್ನೊಂದು ಬಗೆಯ ಕೊಳೆ, ಹೊಲಸು, ಕೈಗಳಿಗೆ ಬೂದಿಯನ್ನು ಹಚ್ಚಿ ನೀರಿನಿಂದ ತೊಳೆಯುವಾಗ ಕೈಗೆ ಮೊದಲು ಹತ್ತಿದ್ದ ಕೊಳೆಯು ಹೋಗುವದಲ್ಲದೆ ಬೂದಿಯೂ ಹೋಗುತ್ತದೆ.

ಹಾಗೆಯೇ ವೇದಾಂತವು ಉಪದೇಶಿಸುವ ಭಾವನೆಯೂ ವಿಚಾರವೂ ಕಲ್ಪನೆಯೂ ಬೂದಿಯಂತೆ ಇವೆ. ಅವು ನಿಮ್ಮಲ್ಲಿರುವ ಎಲ್ಲಾ ಮಾಲಿನ್ಯವನ್ನೂ ದೌರ್ಬಲ್ಯವನ್ನೂ ತೊಳೆದು ಕಳೆಯುತ್ತವೆ.

ಒಬ್ಬನು ಕನಸಿನಲ್ಲಿ ಅನೇಕ ಬಗೆಯ ವಸ್ತುಗಳನ್ನು ನೋಡುತ್ತಾನೆ. ಕನಸಿನ ಆ ವಸ್ತುಗಳೆಲ್ಲಾ ಕೇವಲ ಕಲ್ಪನೆಗಳು, ಭಾವನೆಗಳು. ಕನಸಿನಲ್ಲಿ ಸಿಂಹವನ್ನೋ ಹುಲಿಯನ್ನೋ ಹಾವನ್ನೋ ನೀವು ಕಂಡರೆ, ಕೂಡಲೇ ಹೌಹಾರಿ ಎಚ್ಚರಗೊಳ್ಳುತ್ತೀರಿ. ಈ ಭಯಂಕರ ಸ್ವಪ್ನದಲ್ಲಿ ಈ ಹುಲಿ—ಹಾವುಗಳು ನಿಮ್ಮ ಕಲ್ಪನೆಗಳೇ ಆದರೂ ಮಿಕ್ಕ ಎಲ್ಲಾ ಕಲ್ಪನೆಗಳನ್ನೂ ನುಂಗಿ ನಿಮ್ಮನ್ನು ಎಚ್ಚರ ಗೊಳಿಸತಕ್ಕಂಥ ವಿಲಕ್ಷಣ ಕಲ್ಪನೆ. ಹುಲಿಯಾಗಲೀ ಸಿಂಹವಾಗಲೀ ಹುಲ್ಲನ್ನೋ ಕಲ್ಲನ್ನೋ ತಿನ್ನುವದಿಲ್ಲ. ಆದರೆ ನಿಮ್ಮ ಸ್ವಪ್ನ ಸಿಂಹವು ಆ ಸ್ವಪ್ನಲೋಕದ ಮನೋಹರ ದೃಶ್ಯಗಳನ್ನೂ ಸುಂದರವಾದ ನೆಲನೋಟಗಳನ್ನೂ ಹರಿಯುವ ನದಿಗಳನ್ನೂ ಭವ್ಯವಾದ ಪರ್ವತಗಳನ್ನೂ ಘನವಾದ ಅರಣ್ಯಗಳನ್ನೂ ತಿಂದು, ಕನಸಿನ ಜೀವನನ್ನು ಕಳವಳಗೊಳಿಸಿ ತನ್ನನ್ನು ತಾನೇ ನುಂಗಿ ಹಾಕಿದ ಆಶ್ಚರ್ಯಕರವಾದ ಸೃಷ್ಟಿ. ಏಕೆಂದರೆ ಎಚ್ಚರವಾದ ಕೂಡಲೇ ಕನಸಿನಲ್ಲಿ ಅಷ್ಟೆಲ್ಲಾ ಅನಾಹುತ ಮಾಡಿದ ಆ ಭಯಾನಕ ಸಿಂಹವೂ ಇರುವದಿಲ್ಲ.

ಇದೇ ಪ್ರಕಾರ, ಈ ಪುಸ್ತಕದಲ್ಲಿ ಮನಸ್ಸಿಗೆ ನಾಟುವಂತೆ ಪುನಃ ಪುನಃ ಬೋಧಿಸಿರುವ ಭಾವನೆಗಳೂ ಕಲ್ಪನೆಗಳೂ ಸ್ವಪ್ನದಲ್ಲಿ ಕಾಣುವ ಸಿಂಹದಂತೆ ಇವೆ. ಇಡೀ ಪ್ರಪಂಚವೇ ಒಂದು ಕನಸು. ಕನಸಿನ ಸಿಂಹವೋ ಹುಲಿಯೋ ಎಲ್ಲಾ ಸುಳ್ಳು ಕಲ್ಪನೆಗಳನ್ನೂ ಭಾವನೆಗಳನ್ನೂ ಅಜ್ಞಾನವನ್ನೂ ಕಳೆದು, ತಾನೂ ಅಳಿಯುತ್ತದೆ. ಎಲ್ಲಾ ಕಲ್ಪನೆಗಳೂ ಮಾತೂ ನಿಲ್ಲುವ ಅವರ್ಣನೀಯವಾದ ಇರುವಿಕೆಯಲ್ಲಿ ನಮ್ಮನ್ನು ನೆಲೆಗೊಳಿಸುತ್ತದೆ.

ಎರಡನೆಯ ಆಕ್ಷೇಪ:—

ಎಲ್ಲಾ ಭಾವನೆಗಳೂ ವಿಚಾರಗಳೂ ಆಲೋಚನೆಗಗಳೂ ಕಲ್ಪನೆಗಳೂ ನಿಂತು ಹೋಗುವ ಶುದ್ಧವಾದ ಅರಿವಿನಲ್ಲಿ ನೆಲೆಗೊಂಡರೆ ಆ ಸ್ಥಿತಿಯು ಬರಿ ಖಾಲಿ ಸ್ಥಿತಿಯಲ್ಲವೆ? ಬರಿ ಪೊಳ್ಳಲ್ಲವೆ? ಅದು ಯಾವ ಸಂವೇದನೆಯೂ ಇಲ್ಲದ ಸ್ಥಿತಿಯಲ್ಲವೆ? ಯಾವ ಅರಿವೂ ಇಲ್ಲದ ಆ ಶೂನ್ಯ ಸ್ಥಿತಿಯ ಸಂಪಾದನೆಗಾಗಿ ಇಷ್ಟೆಲ್ಲಾ ಕಷ್ಟ ಪಡುವದು ಏನು ಪ್ರಯೋಜನ ? ನಮಗೆ ಅದು ಬೇಕಾಗಿಲ್ಲ.

ಈ ಆಕ್ಷೇಪಣೆಗೆ ವೇದಾಂತವು ಹೇಳುವದೇನೆಂದರೆ,

"ಪ್ರಿಯ ಸಹೋದರ! ತಮ್ಮ! ಅಲ್ಲ—ಅಲ್ಲ; ನನ್ನ ಆತ್ಮವೇ! ಸ್ವಲ್ಪ ಆಲೋಚನೆ ಮಾಡು; ದುಡುಕಬೇಡ. ಯಾವ ಕಲ್ಪನೆಯೂ ಭಾವನೆಯೂ ಇಲ್ಲದ ಆ ನಿರ್ಮಲ ಉಜ್ವಲವಾದ ಅರಿವಿನ ಸ್ಥಿತಿಗೂ ಮೂರ್ಛಾವಸ್ಥೆಯ ಶೂನ್ಯ ಸ್ಥಿತಿಗೂ

ಇಡೀ ಪ್ರಪಂಚದಷ್ಟೇ ಎನ್ನುವಂಥ ಮಹತ್ತಾದ ಅಂತರವಿದೆ, ವ್ಯತ್ಯಾಸವಿದೆ. ಆದರೆ ಎಲ್ಲಾ ಭಾವನೆಗಳೂ ಆಲೋಚನೆಗಳೂ ವಿಚಾರಗಳೂ ನಿಲ್ಲುತ್ತವೆ—ಎನ್ನುವದು ಎರಡೂ ಅವಸ್ಥೆಗಳಿಗೂ ಸಮಾನವಾದುದು; ಆದರೂ ಎರಡಕ್ಕೂ ಮಹದಂತರವಿದೆ.

ಮೂರ್ಛೆಯಲ್ಲಿ ಮನಸ್ಸು ಆಲೋಚಿಸುವದನ್ನು ನಿಲ್ಲಿಸಿತು. ಈ ಆಲೋಚನಾ ಶೂನ್ಯಸ್ಥಿತಿಯೇ ಅತಿಶಯವಾದ ಕ್ರಿಯಾಶೂನ್ಯ ಸ್ಥಿತಿಗೆ ಕಾರಣವಾಯಿತು. ಇದರಿಂದ ಮೂರ್ಛೆ ಉಂಟಾಯಿತು. ಮೂರ್ಛೆಯಲ್ಲಿ ಚಟುವಟಿಕೆ ಸಾಲದೆ ಆಲೋಚನೆ ನಿಲ್ಲುತ್ತದೆ, ಅದು ಮರಣವನ್ನು ಹೋಲುತ್ತದೆ. ಆದರೆ ಸಮಾಧಿ ಸ್ಥಿತಿಯಲ್ಲಿಯೂ ಅನುಭವ ಸ್ಥಿತಿಯಲ್ಲಿಯೂ ಇರುವದು ಸರ್ವವೂ ಶಕ್ತಿಯೇ ಸರ್ವವೂ ಸತ್ತ್ವವೇ, ಸಾಮರ್ಥ್ಯವೇ, ವೀರ್ಯವೇ, ಬಲವೇ, ಸರ್ವವೂ ಜ್ಞಾನವೇ, ಸರ್ವವೂ ಆನಂದವೇ.

ಬೆಳಕೇ ಇಲ್ಲದಿದ್ದರೆ ಕತ್ತಲೆಯಾಗುತ್ತದೆ; ಒಂದು ಕೋಣೆಯಲ್ಲಿ ಬೆಳಕು ಬಹಳ ಕಡಿಮೆ ಇದ್ದರೂ ಯಾವ ವಸ್ತುವೂ ಕಾಣುವದಿಲ್ಲ. ಬೆಳಕು ಅತಿ ಹೆಚ್ಚಾಗಿದ್ದರೂ—ಅತಿ ಸಮೃದ್ಧಿಯಾಗಿದ್ದರೂ—ಕಣ್ಣಿಗೆ ವಾಸ್ತವವಾಗಿ ಕತ್ತಲೆಯೇ ಆಗುತ್ತದೆ. ಮಟಮಟ ಮಧ್ಯಾಹ್ನದಲ್ಲಿ ಜಾಜ್ವಲ್ಯವಾಗಿ ಉರಿಯುತ್ತಿರುವ ಪ್ರಚಂಡ ಮಾರ್ತಾಂಡನನ್ನು ಯಾರೂ ನೋಡಲಾರರು. ಇವತ್ತಿನ ಸೂರ್ಯ ಪ್ರಕಾಶಕ್ಕಿಂತಲೂ ಬಹಳ ಹೆಚ್ಚಾಗಿದ್ದರೆ, ಅಥವಾ ಹತ್ತರಷ್ಟು ಹೆಚ್ಚಾಗಿದ್ದರೆ, ಯಾರೂ ನೋಡಲು ಸಾಧ್ಯವಾಗುವದಿಲ್ಲ. ಭೌತ ವಿಜ್ಞಾನವು (Phenomenon of the Polorization of light) ಬೆಳಕಿನ ಧ್ರುವೀಕರಣ ವಿಲಾಸವನ್ನು ಹೇಳುತ್ತದೆ. ಬೆಳಕಿನ ಎರಡು ಕಿರಣಗಳು ಪರಸ್ಪರ ವಿರುದ್ಧ ದಿಶೆಯಲ್ಲಿ ಹರಿಯುತ್ತಿರುವಾಗಮನುಷ್ಯನ ಕಣ್ಣು ನೋಡಲಾರದು; ಅಲ್ಲಿ ಕತ್ತಲೆ ಇರುತ್ತದೆ. ಮನುಷ್ಯನ ಕಣ್ಣಿಗೆ ಅತಿಶಯ ಪ್ರಕಾಶವೂ ಕತ್ತಲೆಯೇ; ಪ್ರಕಾಶದ ಕೊರತೆಯೂ ಕತ್ತಲೆಯೇ. ಆದರೆ ಪ್ರಕಾಶದ ನ್ಯೂನತೆಯಿಂದ ಆಗುವ ಕತ್ತಲೆಯೇ ಒಂದು; ಪ್ರಕಾಶದ ಅತಿರೇಕದಿಂದ ಆಗುವ ಕತ್ತಲೆಯೇ ಇನ್ನೊಂದು ಬೇರೆ.

ಹೀಗೆಯೇ ಆತ್ಮಾನುಭವದಿಂದ ಉಂಟಾಗುವ ಭಾವ ಶೂನ್ಯತೆಯು (ನಿರ್ವಿಕಲ್ಪವು), ಆಲೋಚನಾ ವೃತ್ತಿಯೇ ನಿಂತುಹೋಗುವದೆಂಬದು, ಮೂರ್ಛೆಯಲ್ಲಿಯೂ ಗಾಢ ನಿದ್ರೆಯಲ್ಲಿಯೂ ಆಲೋಚನಾ ಪ್ರವಾಹವು ನಿಂತಿದ್ದಕ್ಕೆ ವಿರುದ್ಧವಾಗಿರುವದು. ಈ ಎರಡರಿಂದಲೂ ಉಂಟಾಗುವ ಅನಂತರದ ಪರಿಣಾಮದಿಂದ ಇವೆರಡರ ವ್ಯತ್ಯಾಸವನ್ನು ಗುರುತಿಸುತ್ತೇವೆ.

ಮಲರೋಗದಿಂದ ನರಳುತ್ತಿರುವವನಿಗೆ ಆ ಅಪಸ್ಮಾರದ ಆಘಾತಗಳಾದಾಗ ಅವನು ಸಂಜ್ಞಾ ಶೂನ್ಯನೂ ಆಲೋಚನಾ ಶೂನ್ಯನೂ ವೇದನಾ ಶೂನ್ಯನೂ ಆಗಿ ಬಿದ್ದಿರುತ್ತಾನೆ. ಅವನು ಅತ್ಯಂತ ನಿರ್ಬಲನೂ ನಷ್ಟನೂ ಸತ್ತ್ವಹೀನನೂ ಆಗಿರುತ್ತಾನೆ.

ಇನ್ನೊಬ್ಬ ಯೋಗಿಯು ಚೈತನ್ಯದ ಅನುಭವದಲ್ಲಿಯೋ ಚಿತ್ತೈಕಾಗ್ರತೆಯಲ್ಲಿಯೋ ಸಮಾಧಿಯಲ್ಲಿಯೋ ಇರುತ್ತಾನೆ. ಇವನಲ್ಲಿಯೂ ತಾತ್ಕಾಲಿಕವಾಗಿ ಮನೋವೃತ್ತಿಗಳು ಅಥವಾ ಮನೋವ್ಯಾಪಾರಗಳು ನಿಂತಿರುತ್ತವೆ. ಅಥವಾ ನಿಂತಿರುವಂತೆ ಆಗಿರುತ್ತದೆ. ಮಲರೋಗ ಬಂದವನಿಗೆ ಆಲೋಚನಾ ಶಕ್ತಿಯು ಕುಂಠಿತವಾದಂತೆ ಸಮಾಧಿಸ್ಥಿತಿಯಲ್ಲಿ ಇದ್ದರೂ ಎರಡಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸಬೇಕು. ಅಪಸ್ಮಾರದ ಆಘಾತವಾದ ಮೇಲೆ ರೋಗಿಯು ನಿರ್ಬಲನೂ ನಿರುತ್ಸಾಹಿಯೂ ನಷ್ಟ ಚೇತನನೂ ಆಗಿರುತ್ತಾನೆ. ಆದರೆ ಆತ್ಮಾನುಭವದ ಮನೋಹರವಾದ ಕೈಲಾಸ ಶಿಖರದಿಂದ—ಪರಮಾನಂದ ಪರವಶತೆಯಿಂದ—ಕೆಳಗಿಳಿದ ಮೇಲೆ ಶಕ್ತಿಯಿಂದಲೂ ಉತ್ಸಾಹದಿಂದಲೂ ಆನಂದದಿಂದಲೂ ಜ್ಞಾನದಿಂದಲೂ ತುಂಬಿ ತುಳುಕಾಡುತ್ತಿರುತ್ತಾನೆ; ಅವನು ಇತರರ ರೋಗವನ್ನು ಗುಣಪಡಿಸಬಲ್ಲನು; ಇತರರಿಗೆ ಶಕ್ತಿಯನ್ನು ಕೊಡಬಲ್ಲನು; ಇತರರನ್ನು ಉನ್ನತಿಗೊಳಿಸಬಲ್ಲನು; ಭಾವದಲ್ಲಿಯೂ ವಿಚಾರದಲ್ಲಿಯೂ ಮೇಲೆತ್ತಬಲ್ಲನು; ಆದ್ದರಿಂದ ಅವನು ಸ್ವತಃ ಶಕ್ತಿಹೀನತೆಯನ್ನು ಪಡೆಯುವ ದುಸ್ಥಿತಿಯಿಂದ ಬಹಳ ದೂರ, ದೂರವಾಗಿರುತ್ತಾನೆ. ಆದ್ದರಿಂದ ವೇದಾಂತಾನುಭವದಲ್ಲಿ ಸಾಧಿಸುವ ಸಂಕಲ್ಪ ಶೂನ್ಯತೆಯೇ— ನಿರ್ವಿಕಲ್ಪವೇ— ಬೇರೆ, ಮೂರ್ಛೆಯಲ್ಲಿ ಉಂಟಾಗುವ ಸಂವೇದನಾ ಶೂನ್ಯತೆಯೇ ಬೇರೆ. ಒಂದಕ್ಕೊಂದು ದಕ್ಷಿಣೋತ್ತರ ಧ್ರುವದಷ್ಟು ಪೂರ್ಣ ವಿರುದ್ಧ".

ಮೂರನೆಯ ಆಕ್ಷೇಪ:—

ನಮಗೆ ಜೀವನ ಬೇಕು; ತುಂಬು ಜೀವನ ಬೇಕು; ನಿಷ್ಕ್ರಿಯರಾಗುವದು, ಕ್ರಿಯಾ ಶೂನ್ಯರಾಗುವದು ನಮಗೆ ಬೇಡ.

ಸರಿ; ವೇದಾಂತ ಹೇಳುವದೇನೆಂದರೆ, "ನಿಷ್ಕ್ರಿಯರಾಗಬೇಡಿ, ಬಯಸುತ್ತಾ ಹೋಗಿ, ಬಿಡಬೇಡಿ; ನಿಲ್ಲಬೇಡಿ. ಸತ್ಯವು ಬಹಳ ವಿರೋಧಾಭಾಸವಾಗಿ ಕಾಣುತ್ತದೆ. ಉಭಯ ಪಕ್ಷಗಳನ್ನೂ ವಿಚಾರಕ್ಕೆ ತೆಗೆದುಕೊಳ್ಳಬೇಕು. ಪ್ರಪಂಚದಲ್ಲಿ ದೋಷವನ್ನೂ ದುಃಖವನ್ನೂ ತೋರಿಸಿ ವೇದಾಂತವು ನಿರಾಶೆಯನ್ನೇ ಬೋಧಿಸುವದೆಂದು ಕೆಲವರು ತಿಳಿದಿದ್ದಾರೆ. ಆದರೆ ಇದು ತಪ್ಪು ತಿಳಿವಳಿಕೆ. ಇಡೀ ಜಗತ್ತನ್ನು ನಿಮ್ಮ ವಶದಲ್ಲಿಟ್ಟು ಕೊಳ್ಳುವದಕ್ಕೆ ನೀವು ಹೇಗೆ ನಡೆದು ಕೊಳ್ಳುವದು ಯೋಗ್ಯವೆಂಬುದನ್ನು ವೇದಾಂತವು ಬೋಧಿಸುತ್ತದೆ.

ಈಗ ಆಶೆಯ ಪ್ರಶ್ನೆಯನ್ನು ತೆಗೆದುಕೊಳ್ಳೋಣ.

ನೀವು ಕೆಲಸ ಮಾಡದೆ ಮೈಗಳ್ಳರಾಗಿ ಸೋಮಾರಿತನದ ಬಾಳುವೆಯನ್ನು ನಡೆಸಬೇಕೆಂದು ವೇದಾಂತವು ಎಂದೆಂದೂ ಹೇಳುವದಿಲ್ಲ; ಶ್ರಮಪಟ್ಟು ಸಂಪಾದನೆಮಾಡದೆ, ಯಾವ ರೀತಿಯ ಉತ್ಪಾದನೆಯನ್ನೂ ಮಾಡದೆ, ಕುಟುಂಬಕ್ಕೂ ಸಮಾಜಕ್ಕೂ ದೇಶಕ್ಕೂ

ಹೊರೆಯಾಗಿ, ತನಗೆ ತಾನೇ ಭಾರವಾಗಿ, ಪರೋಪ ಜೀವಿಯೂ ಪರಾವಲಂಬಿಯೂ ಆಗಬೇಕೆಂದು ವೇದಾಂತವು ಯಾರಿಗೂ ಹೇಳಿಲ್ಲ. ಆದರೆ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ। ......... ಮಾ ಗೃಧಃ ಕಸ್ಯ ಸ್ವಿದ್ಧನಮ್॥" (ಈ.ಉ.)

"ಕರ್ಮವನ್ನು ಮಾಡುತ್ತಲೇ ನೂರು ವರ್ಷಗಳು ಇಲ್ಲಿ ಬದುಕುವದಕ್ಕೆ ಬಯಸ ಬೇಕು...... (ಬೇರೆ) ಯಾರ ಧನವನ್ನೂ ಬಯಸಬೇಡ". ವೇದಾಂತವು ಹೀಗೆ ಹೇಳಿದೆ. ಯಾವಾಗಲೂ ಕ್ರಿಯಾಶೀಲವಾಗಿ ಚಟುವಟಿಕೆಯಿಂದಿರುವ ಜೀವನವನ್ನೇ ಹೇಳಿದೆ.

ವೇದಾಂತದ ಪ್ರಕಾರ ಒಮ್ಮೆಗೇ ಆಶೆಯನ್ನು ನಿರ್ಮೂಲ ಮಾಡುವದು ಸಾಧ್ಯ ವಲ್ಲ; ಅದರ ಅಗತ್ಯವೂ ಇಲ್ಲ. ಆಶೆಯಲ್ಲಿ ತಪ್ಪಿಲ್ಲ. ಆದರೆ ಅದನ್ನು ಸರಿಯಾಗಿ ಉಪಯೋಗಮಾಡಿಕೊಳ್ಳಬೇಕು. ಆಶೆ ಎಂದರೆ ಏನು? ಆಶೆಯು ಪ್ರೀತಿಯ ಹೊರತು ಬೇರೆ ಅಲ್ಲ. ಸಾಮಾನ್ಯವಾಗಿ ಪ್ರೀತಿಯೆಂದರೆ, ಯಾವದೊಂದು ವಿಷಯುವನ್ನು ನಾವು ಉತ್ಕಟವಾಗಿ ಬಯಸುವ ರಾಗವೇ—ಅನುರಾಗವೇ—ಆಗಿದೆ. ಒಂದು ವಿಷಯುವನ್ನು ನಾವು ಉತ್ಕಟವಾಗಿ ಬಯಸುವದೇ ಪ್ರೀತಿಯಾದರೆ, ಎಲ್ಲಾ ಆಶೆಯೂ ಪ್ರೀತಿಯಲ್ಲದೆ ಬೇರೆ ಅಲ್ಲ. ದೇವರು ಪ್ರೇಮ ಸ್ವರೂಪವೆಂದು ಹೇಳುತ್ತಾರೆ; ಆದ್ದರಿಂದ ಎಲ್ಲಾ ಆಶೆಗಳೂ ದೇವರೆ! (ಆಶೆ—ಪ್ರೇಮ—ದೇವರು ; ಆದ್ದರಿಂದ ಆಶೆ—ದೇವರು.) ಸತ್ಯವು ಹೀಗಿರುವಾಗ, ಸಮಸ್ತ ಕಾಮಗಳೊಡನೆ ತನ್ನ ಜೀವನವನ್ನು ಒಂದಾಗಿ ಕಂಡು, ಕಾಮ ರೂಪದಿಂದ ತಾನೇ—ತನ್ನ ನಿಜಾತ್ಮನೇ—ಇಡೀ ಜಗತ್ತಿನಲ್ಲೆಲ್ಲಾ ವ್ಯಾಪಿಸಿ ಎಲ್ಲವನ್ನೂ ಆಳುತ್ತಿರುವನೆಂದು ಭಾವಿಸುವ ಸತ್ಪುರುಷನು ಎಷ್ಟು ಸುಖಿ! "ಎಲ್ಲಾ ಕಾಮಗಳ ಮೂಲವೇ ನಾನು; ಎಲ್ಲಾ ಕಾಮಗಳಿಗೂ ಕಾರಣನೇ ನಾನು" "ಈ ಪ್ರಪಂಚದಲ್ಲಿರುವ ಎಲ್ಲಾ ಆಶೆಗಳ ಸತ್ವವೂ ನಾನೇ! ಎಲ್ಲಾ ಆಶೆಗಳ ಜನಕನೂ ಮೂಲವೂ ಉಗ ಮವೂ ನಾನೇ, ಆದ್ದರಿಂದ ಆಶೆಯ ಲಗಾಮಿನಿಂದ ಇಡೀ ಜಗತ್ತನ್ನೇ ನಾನು ಆಳು ತ್ತಿದ್ದೇನೆ. ಲಗಾಮು ನನ್ನ ಕೈಯಲ್ಲಿದೆ." ಹೀಗೆ ಭಾವಿಸಿದೊಡನೆ ಎಲ್ಲಾ ದ್ವೇಷಾಸೂಯೆ ಗಳೂ ನಿಂತುಹೋಗುತ್ತವೆ. ಮಿತ್ರರ ಆಶೆಗಳೇ ಆಗಲಿ, ಶತ್ರುಗಳ ಆಶೆಗಳೇ ಆಗಲಿ, ಅವು ನನ್ನ ಆಶೆಗಳೇ. ಆ ಆಶೆಗಳನ್ನೆಲ್ಲಾ ಆಳುವ ಅನಂತ ಶಕ್ತಿಯೇ ನಾನು. ಅವ ರಿವರ ಹಂಬಲಗಳೆಲ್ಲಾ ನಾನೇ. ಸಮಸ್ತ ವಿಶ್ವದ ಪ್ರಭುವಾದ ನಾನೇ ಸುಖಿ.

ಜನರು ಆಶೆಯ ದುರುಪಯೋಗ ಮಾಡುತ್ತಾರೆ. ಅವರು ಎಲ್ಲಾ ವಿಷಯ ಗಳನ್ನೂ ತಲೆ ಕೆಳಗು ಮಾಡುತ್ತಾರೆ. ಕಾಮವೇ ಪ್ರೇಮವೂ ಪ್ರೇಮವೇ ಭೂಮವೂ (ಅನಂತಾಪಾರವೂ) ಆದರೆ, ಸಮಸ್ತ ಕಾಮವೂ ನೀವೇ ಎನ್ನುವದನ್ನು ತಿಳಿಯಬೇಕೆಂದು ವೇದಾಂತವು ಹೇಳುತ್ತದೆ. ಕಾಮದ ದುರುಪಯೋಗವನ್ನು ಮಾಡಬಾರದು ಅಷ್ಟೆ. ನಿಮ್ಮ ಮನಸ್ಸಿನಲ್ಲಿ ಹೊಕ್ಕಿರುವ ಬಯಕೆಯನ್ನು ಮಾತ್ರ ನಿಮ್ಮದೆಂದೂ ಬೇರೆಯವ ರಲ್ಲಿರುವ ಬಯಕೆಗಳನ್ನು ನಿಮ್ಮದಲ್ಲವೆಂದೂ ತಿಳಿಯುವ ತಪ್ಪನ್ನು ಮಾತ್ರ ಮಾಡಬೇಡಿ.

ಕಾಮನೆಗಳು ಒಂದಕ್ಕೊಂದು ವಿರುದ್ಧವಾಗಿ ಪ್ರವರ್ತಿಸಿದರೆ ಅಪಾಯಕರಗಳಾಗುತ್ತವೆ. ಎಲ್ಲಾ ಆಶೆಗಳೂ ಒಂದು ಪ್ರೇಮ ಸಾಗರದಲ್ಲಿ ಎದ್ದು ತೋರುವ ಅಲೆಗಳಂತೆಯೂ ಸುಳಿಗಳಂತೆಯೂ ಇವೆ. ಇಡೀ ವಿಶ್ವವೇ ಕಾಮವೆಂದು ಕರೆಯಬಹುದಾದ ಅನಂತ ವಾದ ಪ್ರೇಮ ಸಾಗರವೇ ಆಗಿದೆ. ಎಲ್ಲಾ ಗ್ರಹತಾರೆಗಳನ್ನೂ ಗುರುತ್ವಾಕರ್ಷಣ ಶಕ್ತಿಯೇ ನಿರ್ದಿಷ್ಟವಾದ ಪಥಗಳಲ್ಲಿ ನಿಯಮಿತವಾದ ವೇಗದಿಂದ ಸಂಚರಿಸುವಂತೆ ಅಂತರಾಳದಲ್ಲಿಯೇ ಹಿಡಿದಿಟ್ಟಿದೆ. ಆಕರ್ಷಣ ಶಕ್ತಿ ಎಂದರೆ ಪ್ರೇಮ ಶಕ್ತಿ; ಗುರುತ್ವಾ ಕರ್ಷಣ ಶಕ್ತಿ ಎಂದರೆ ಮಹತ್ವಾದ ಪ್ರೇಮ ಶಕ್ತಿ. ಪ್ರೇಮವಿರುವಲ್ಲಿ ಪರಸ್ಪರ ಆಕ ರ್ಷಣೆಯಿರುತ್ತದೆ ; ಪ್ರೇಮವಿಲ್ಲವಾದರೆ ಆಕರ್ಷಣೆಯೂ ಇಲ್ಲ. ಸಕಲ ರಾಸಾ ಯನಿಕ ಸಂಯೋಗಗಳೂ ರಾಸಾಯನಿಕ ಸ್ನೇಹ ಸಾದೃಶ್ಯದ (Affinity) ಸತ್ತ್ವದಿಂದ ಸಂಭವಿಸುತ್ತವೆ. ಅಂದರೆ, ಪರಮಾಣುಗಳ ಪರಸ್ಪರ ಪ್ರೇಮದಿಂದಲೇ ಅವುಗಳ ಸಂಯೋಗವಾಗುವದು. ಆ ಪ್ರೇಮವೇ ಅವುಗಳ ಸ್ವಭಾವಸಾದೃಶ್ಯದ (Affinity) ಸ್ನೇಹಾಕರ್ಷಣೆಯಾಗುತ್ತದೆ. ಗ್ರಹಗಳ ಅನ್ಯೋನ್ಯ ಪ್ರೇಮವೇ ಗುರುತ್ವಾಕರ್ಷಣೆ (Gravitation) ಎನಿಸುತ್ತದೆ. ಅಣುಗಳಿಗಿರುವ ಅನ್ಯೋನ್ಯ ಪ್ರೇಮವು 'ಅಫಿನಿಟಿ' ಆಕರ್ಷಣೆ ಎನಿಸುತ್ತದೆ. ಈ ಪುಸ್ತಕವು, ಇದರಲ್ಲಿರುವ ಪರಮಾಣುಗಳ ಮತ್ತು ಅಣುಗಳ ಪರಸ್ಪರ ಸಂಘಟನೆಯ ಬಲದಿಂದ ಈ ವಸ್ತು ರೂಪದಲ್ಲಿ ಭದ್ರವಾಗಿದೆ. ಈ ಅಂಟಿಕೊಳ್ಳುವ, ಸಂಯೋಜಿಕವಾದ (Cohesion) ಶಕ್ತಿಯೇ ಪ್ರೇಮ.

ಇಡೀ ಜಗತ್ತೇ ಏಕಾಖಂಡವಾದ ಪ್ರೇಮ ಮಹಾಸಾಗರದಲ್ಲಿ ತೋರಿಕೊಳ್ಳು ತ್ತಿರುವ ತರಂಗಗಳಂತೆ ಇದೆ. ಮತ್ತು ಎಲ್ಲಾ ವಸ್ತುಗಳೂ ಶಕ್ತಿಯೇ ಹೊರತು ಬೇರೆ ಯಲ್ಲ– ಎಂದು ಭೌತಿಕ ವಿಜ್ಞಾನವು ತೋರಿಸಿದೆ; ಲಾರ್ಡ್ ಕೆಲ್ವಿನ್ ಮೊದಲಾದವರೂ ತೋರಿಸಿದ್ದಾರೆ. ಈ ಪ್ರಪಂಚದಲ್ಲಿ ಶಕ್ತಿಯು ಮುಖ್ಯವಾಗಿ ಗುರುತ್ವಾಕರ್ಷಣ (Gravitation) ರೂಪದಿಂದಲೂ ಸಂಯೋಜಿಕ–ಸಂಸಕ್ತ (Cohesion) ರೂಪ ದಿಂದಲೂ ರಾಸಾಯನಿಕ ಸ್ನೇಹ–ಆಕರ್ಷಣ (Chemical Affinity)ರೂಪದಿಂದಲೂ ವಿದ್ಯುತ್ತಿನ (Electricity) ರೂಪದಿಂದಲೂ ಕಾಂತ ಶಕ್ತಿ (Magnetism) ರೂಪ ದಿಂದಲೂ ಪ್ರಕಾಶ (Light) ರೂಪದಿಂದಲೂ ಉಷ್ಣ (Heat) ರೂಪದಿಂದಲೂ ಶಬ್ದ, ಮೊದಲಾದ ರೂಪಗಳಿಂದಲೂ ವ್ಯಕ್ತವಾಗುತ್ತಿದೆ.

ಕಾಂತ ಶಕ್ತಿಯಲ್ಲಿಯೂ ವಿದ್ಯುಚ್ಛಕ್ತಿಯಲ್ಲಿಯೂ ಆಕರ್ಷಣೆಯೇ ಇದೆ. ಉಷ್ಣವು ಕಣಗಳನ್ನು ಬೇರ್ಪಡಿಸುವಂತೆ ತೋರುತ್ತದೆ. ಆದರೆ ಒಂದು ದೃಷ್ಟಿಯಿಂದ ವಿಯೋಗ (ವಿಸಂಯೋಗ)ವಾಗಿ ತೋರುವದು ಇನ್ನೊಂದು ದೃಷ್ಟಿಯಿಂದ ನೋಡಿ ದಾಗ ಸಂಯೋಗವಾಗಿಯೇ ಕಾಣುವದೆಂದು ವಿಜ್ಞಾನವು ಸಿದ್ಧಪಡಿಸಿ ತೋರಿಸುತ್ತದೆ. ಸಂಯೋಗವೇ ಆಕರ್ಷಣೆಯೂ ಪ್ರೇಮವೂ ಆಗಿದೆ.

ಇಡೀ ಜಗತ್ತೇ ಶಕ್ತಿಯ ಸಾಗರದಲ್ಲಿ ಅಲೆಗಳೂ ಸುಳಿಗಳೂ ಆಗಿದೆ. ವೇದಾಂತದ ಪ್ರಕಾರ ಆ ಶಕ್ತಿಯೇ ನಿಮ್ಮ ನಿಜವಾದ ಆತ್ಮ; ನೀವೇ. ಅದನ್ನು ಅನುಭವಮಾಡಿರಿ. ಆ ಶಕ್ತಿಯೇ ಪ್ರೇಮವೆನಿಸುತ್ತದೆ. ಹೇಗಾದರೂ ಮಾಡಿ ಏನಾದರೂ ಪ್ರಯತ್ನಮಾಡಿ, ತಾನು ಬದುಕಿರಬೇಕು, ತಾನು ನೋಯಬಾರದು, ಸಾಯಬಾರದು—ಎಂಬ ಉದ್ದೇಶ ದಿಂದ ಜೀವನದಲ್ಲಿ ನಿರಂತರವಾಗಿ ಹೋರಾಟ ನಡೆಸುವ ಪ್ರವೃತ್ತಿಯೇ ಪ್ರತಿಯೊಂದು ಪ್ರಾಣಿಯಲ್ಲಿಯೂ ಇರುವ ಮೂಲ ಭೂತವಾದ ಸ್ವಾಭಾವಿಕ ಪ್ರೇರಣೆ—ಎನ್ನುವದೇ ಡಾರ್ವಿನ್ ಮೊದಲಾದ ವಿಕಾಸವಾದಿಗಳು ಪ್ರತಿಪಾದಿಸಿರುವ ವಿಕಾಸ ವಾದಕ್ಕೆ ಆಧಾರ ವಾದತತ್ತ್ವ. ಡ್ರಮ್ಮೊಂಡ್ (Drummond) ಮೊದಲಾದ ಮಹಾ ವಿಚಾರಶಾಲಿಗಳ ವಾದಗಳೂ ಆ ವಿಕಾಸವಾದಕ್ಕೆ ಪೂರಕವೂ ಪೋಷಕವೂ ಆಗಿವೆ. ಜೀವನ ಶಕ್ತಿಯು ಹಾಗೂ ಸಂಸ್ಕೃತಿಯು ವಿಕಾಸವಾಗುವದಕ್ಕೆ ಹೋರಾಟವೂ ಯುದ್ಧವೂ ಮಾತ್ರ ಕಾರಣವಾಗದೆ ಅತ್ಯಂತವಾಗಿ (ಅಥವಾ ಬಹಳ ಮಟ್ಟಿಗೆ) ಪ್ರೇಮವೂ ಶೀಲವೂ ಆಕರ್ಷಣೆಯೂ ಕಾರಣವಾಗುತ್ತವೆ—ಎಂಬುದನ್ನು ಅವರು ತೋರಿಸಿದ್ದಾರೆ.

ಎಲ್ಲಾ ಕಾಮವೂ ಪ್ರೇಮವೇ ; ಪ್ರೇಮವೇ ದೇವರು; ಆ ದೇವರೇ ನೀವು. ಇದನ್ನು ನೀವು ಅನುಭವದಿಂದ ಮನಗಂಡರೆ, ನೀವು ಎಲ್ಲವನ್ನೂ ಮೀರಿ ಮೇಲೆ ನಿಲ್ಲು ತ್ತೀರಿ. ಈ ಅಲೆಗಳೂ ಸುಳಿಗಳೂ ಅಥವಾ ಕಾಮದ ಸುಳಿಗಳೂ-ಯಾವಸಮುದ್ರದಲ್ಲಿ ತೋರಿ ಅಡಗುವವೋ ಅದರಿಂದ ಅವುಗಳನ್ನು ಜನರು ಬೇರೆಯಾಗಿ ಕಾಣುತ್ತಾರೆ.

ಇಲ್ಲಿ ಒಂದು ಸರೋವರವು ಇದೆಯೆಂದು ಇಟ್ಟುಕೊಳ್ಳೋಣ. ನಾವು ಒಂದು ಮಗುವನ್ನು ಕರೆದು, "ಬಾ ಮಗು, ನೋಡಿಲ್ಲಿ, ಇಲ್ಲಿ ಒಂದು ಸುಂದರವೂ ಶಾಂತವೂ ಆದ ಸರೋವರವಿದೆ". ಎನ್ನುತ್ತೇವೆ. ಸ್ವಲ್ಪ ಹೊತ್ತಿನ ಮೇಲೆ ಒಂದು ಭಯಂಕರ ವಾದ ಬಿರುಗಾಳಿ ಬೀಸುತ್ತದೆ. ಆಗ, ಅದುವರೆಗೆ ಸ್ವಲ್ಪವೂ ಕಲಕದಿರುವ ನಯವಾದ ಸರೋವರದ ನೀರಿನ ಮೇಲೆ ಸಣ್ಣ ಅಲೆಗಳೂ ದೊಡ್ಡ ಅಲೆಗಳೂ ಸುಳಿಗಳೂ ಏಳು ತ್ತವೆ. ಅದನ್ನು ತೋರಿಸಿ "ಮಗು ! ನೋಡು, ಇಲ್ಲಿ ಅಲೆಗಳೂ ಸುಳಿಗಳೂ ಇವೆ". ಎನ್ನುತ್ತೇವೆ. ಹೀಗೆ ಹೇಳುವಾಗ ನಾವು ಹಿಂದಿನ ಪ್ರಶಾಂತವೂ ನಿಶ್ಚಲವೂ ಆದ ನೀರಿನ ಸ್ಥಿತಿಯನ್ನು ಮರೆಯುತ್ತೇವೆ ; ಅದರ ಹೊಸ ರೂಪವನ್ನೇ ಚಿಂತಿಸುತ್ತೇವೆ. ಆದರೆ, ಈಗಲೂ ಕೂಡ ಆ ಪ್ರಕ್ಷುಬ್ಧ ಸರೋವರದಲ್ಲಿ ಅಲೆಗಳೂ ಸುಳಿಗಳೂ ತುಂಬಿ ರುವಾಗ ಆ ಸರೋವರವು ನೀರೇ ಆಗಿದೆ; ಆ ಅಲೆಗಳೂ ಸರೋವರದಂತೆ ನೀರೆ ಆಗಿವೆ.

ಸರೋವರವು ಶಾಂತವಾಗಿದ್ದಾಗಲೂ ನೀರೇ ಇತ್ತು ; ಈಗ ಅಶಾಂತವಾಗಿರು ವಾಗಲೂ ಇರುವದು ನೀರೇ. ಆದರೆ, ನಾವು ಮಗುವಿಗೆ ಪ್ರಕ್ಷುಬ್ಧವಾದ ಸರೋ ವರದ ಅಲೆಗಳನ್ನೇ ತೋರಿಸುತ್ತೇವೆ. ಇಲ್ಲಿ ಅಲೆಗಳೂ ಸುಳಿಗಳೂ ಜಲವನ್ನು ಮರೆಸಿ

ಬಿಟ್ಟಿವೆ. ಸರೋವರವನ್ನು ಮುಸುಕಿರುವ ಅಲೆಗಳ ಭಾವನೆಯು ಸರೋವರದ ಮತ್ತು ನೀರಿನ ಭಾವನೆಯ ಮೇಲೆ ನೆರಳನ್ನು ಕೆಡವುತ್ತದೆ. ಮನುಷ್ಯರ ವಿಷಯ ದಲ್ಲಿಯೂ ಹೀಗೆಯೇ. ನಮ್ಮಲ್ಲಿರುವ ಕಾಮಗಳು ಒಂದು ಬಗೆಯ ಅಲೆಗಳು, ಸುಳಿಗಳು; ಇವುಗಳ ಭಾವನೆಯು ನಿಜವಾದ ಇರುವಿಕೆಯನ್ನು ಮರೆಮಾಡುತ್ತದೆ. ತೋರಿಕೆಯು ಇರುವಿಕೆಯನ್ನು ಮುಸುಕಿ ಮರೆಮಾಡಿ ಬಿಡುತ್ತದೆ; ಅಡಗಿಸಿಡುತ್ತದೆ. ನಾಮರೂಪಗಳನ್ನು ಕಡೆಗಣಿಸಬೇಕೆಂದು ವೇದಾಂತವು ಹೇಳುವದಿಲ್ಲ. ವ್ಯವಹಾರಕ್ಕೆ ಅವಶ್ಯವಾದಷ್ಟು ಅವಕ್ಕೆ ಗಮನ ಕೊಡಬೇಕೆಂದೇ ಅದು ಹೇಳುತ್ತದೆ. ಆದರೆ ಅಲೆಗಳಿಗೂ ಸುಳಿಗಳಿಗೂ ಅತಿಯಾದ ಲಕ್ಷ್ಯವನ್ನು ಕೊಟ್ಟು ಅವಕ್ಕೆ ಆಧಾರವಾಗಿರುವ ನಿಜವನ್ನು (ನೀರನ್ನು) ಮರೆಯಬಾರದೆಂದು ಮಾತ್ರ ಹೇಳುತ್ತದೆ. ಯಾರಾದರೂ ನಿಮಗೆ ಪ್ರತೀಕಾರ ಮಾಡಿದರೆ ನೀವು ಅಪಮಾನಿತರಾದಂತೆ ಭಾವಿಸುತ್ತೀರಿ; ನಿಮಗೆ ಭಯಂಕರವಾದ ಕೋಪ ಬರುತ್ತದೆ. ವಿಶ್ವನಿಯಮವೇನೆಂಬುದನ್ನು ವಿಚಾರಿಸಿರಿ. ವಿ ಶ್ವ ವ್ಯಾ ಪ ಕ ವಾ ದ ಪ್ರಕೃತಿ ನಿಯಮಕ್ಕೆ ನಿಮ್ಮ ಮನಸ್ಸು ಸಮಶ್ರುತಿ ಗೂಡದೆ, ಸಮಸ್ವರವಾಗದೇ ಸಮರಸ ಹೊಂದದೆ ಹೊರಬಿದ್ದರೆ, ಕ್ಲೇಶವನ್ನು ಅನು ಭವಿಸಬೇಕಾಗುತ್ತದೆ—ಎಂಬದೇ ಅಬಾಧಿತವಾದ ಪ್ರಕೃತಿ ನಿಯಮ; ನಿಮ್ಮ ಮೇಲೆ ಸೇಡು ತೀರಿಸಿಕೊಂಡ ಆ ಮನುಷ್ಯನು ನಿಮ್ಮಲ್ಲಿಗೆ ಬಂದು ಅದನ್ನೇ ನೆನವುಗೊಡು ತ್ತಾನೆ. ನಿಮ್ಮ ರೋಗಕ್ಕೆ ನೀವು ಚಿಕಿತ್ಸೆ ಮಾಡಿಕೊಂಡರೆ ಆ ಮನುಷ್ಯನು ನಿಮ್ಮನ್ನು ಅವಮಾನಿಸುವದಿಲ್ಲ. ಇದೇ ಪ್ರಕೃತಿ ನಿಯಮ. ಧರ್ಮ ಶ್ರದ್ಧೆಯುಳ್ಳವರು ಇದನ್ನು ಅರ್ಥಮಾಡಿಕೊಳ್ಳಬೇಕು. ನಿರಾಶಾಸ್ಥಿತಿಯಲ್ಲಿ ನಿಮ್ಮ ಮನಸ್ಸು ಇದ್ದ ಕೂಡಲೇ ಅಥವಾ ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ನೀವು ಹೋರಾಡಿದ ಕೂಡಲೇ ಇಡೀ ಜಗತ್ತೇ ನಿಮ್ಮ ವಿರುದ್ಧವಾಗಿ ನಿಲ್ಲುತ್ತದೆ.

ಮನಸ್ಸಿನ ಶಾಂತಿಯನ್ನು ಅಭ್ಯಾಸ ಮಾಡಿರಿ; ಶುದ್ಧವಾದ ಭಾವನೆಯಿಂದ ಮನ ಸ್ಸನ್ನು ತುಂಬಿರಿ. ಹಾಗಾದರೆ ಯಾರೂ ನಿಮ್ಮನ್ನು ವಿರೋಧಿಸಲಾರರು. ಅದೇ ಪ್ರಕೃತಿ ನಿಯಮ. ಬೇರೆಯವರ ಆಶೆಗಳನ್ನಾಗಲೀ ನಿಮ್ಮ ಆಶೆಗಳನ್ನೇ ಆಗಲಿ ದುರು ಪಯೋಗ ಮಾಡಬೇಡಿ—ಎಂದು ವೇದಾಂತವು ಹೇಳುತ್ತದೆ. ಮನಸ್ಸಿನ ಸಮತೆ ಯನ್ನು ನೀವು ಕಾದುಕೊಂಡರೆ, ನಿಮ್ಮ ಮನಸ್ಸಿನಲ್ಲಿ ತೋರಿಕೊಳ್ಳುವ ಆಶೆಗಳನ್ನು ನೀವು ಮೀರಬಹುದು ; ಆಶೆಗಳೆಲ್ಲಾ ಅಡಗಿ ಹೋಗುತ್ತವೆ. ಅವುಗಳ ವಿಷಯದಲ್ಲಿ ಸರಿಯಾದ ಮನೋಭಾವವನ್ನು ನೀವು ಬೆಳೆಸಿಕೊಂಡರೆ, ಅವು ಸಕಾಲದಲ್ಲಿ ಆಶ್ಚರ್ಯ ಕರವಾದ ರೀತಿಯಿಂದ ಸಫಲವಾಗುತ್ತವೆ. ನಿಮ್ಮ ಸ್ವಂತ ಆಶೆಗಳ ವಿಷಯದಲ್ಲಿಯೇ ನೀವು ತಪ್ಪಾದ ಮನೋವೃತ್ತಿಯನ್ನು ಇಟ್ಟುಕೊಳ್ಳುವದರಿಂದ ಪ್ರಸಂಗಗಳೂ ಪರಿ ಸ್ಥಿತಿಯೂ ವಕ್ರವೂ ವ್ಯತಿರೇಕವೂ ಅನಿಷ್ಟಕರವೂ ಆಗುತ್ತವೆ.

ಮನಸ್ಸಿನಲ್ಲಿ ತೋರಿಕೊಳ್ಳುವ ಆಶೆಗಳನ್ನು ಸದುಪಯೋಗ ಪಡಿಸಿಕೊಳ್ಳುವದು ಹೇಗೆ? ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಮನುಷ್ಯನು

ಸ್ವಲ್ಪ ದೂರ ಹೋಗುವದಕ್ಕಾಗಿ ಒಂದು ಕುದುರೆಯನ್ನು ಸವಾರಿ ಮಾಡುತ್ತಿದ್ದಾನೆ. ಆ ಕುದುರೆಗೆ ಹಸಿವಾಗಿರುವಂತೆಯೂ ಆಯಾಸವಾಗಿರುವಂತೆಯೂ ತೋರುತ್ತದೆ. ಆದ್ದರಿಂದ ಆ ಕುದುರೆಗೆ ಆಹಾರವನ್ನೂ ವಿಶ್ರಾಂತಿಯನ್ನೂ ಕೊಡುತ್ತಾನೆ. ಆದರೆ ಅವನು ಆ ಹಸಿವನ್ನೂ ಆಯಾಸವನ್ನೂ ತನ್ನ ಧರ್ಮವೆಂದು ತಿಳಿಯುವದಿಲ್ಲ. ಅಂದರೆ, ಆ ಸವಾರನು ಕುದುರೆಯ ಹಸಿವು—ಆಯಾಸಗಳನ್ನು ತನ್ನ ಹಸಿವು—ಆಯಾಸಗಳೆಂದು ತಿಳಿಯುವದಿಲ್ಲ; ಆದಕ್ಕಾಗಿ ಅವನು ಗಡಿಬಿಡಿಯನ್ನೂ ಅಸಮಾಧಾನವನ್ನೂ ಹೊಂದುವದಿಲ್ಲ.

ಆತ್ಮಾನುಭವಿಯು ಅಥವಾ ನಿಜವಾದ ವೇದಾಂತಿಯು, ಸವಾರನು ತನ್ನ ಕುದುರೆಯನ್ನು ಕಂಡಂತೆ, ತನ್ನ ದೇಹವನ್ನು ಕಾಣುತ್ತಾನೆ. ಅವನು ತನ್ನ ದೇಹಕ್ಕೆ ಆಯಾಸವಾದರೆ, ಸಕಾಲದಲ್ಲಿ ಸಾಕಷ್ಟು ವಿಶ್ರಾಂತಿಯನ್ನು ಕೊಡುತ್ತಾನೆ; ಹೊಟ್ಟೆಗೆ (ಅಥವಾ ಪ್ರಾಣಕ್ಕೆ) ಹಸಿವು—ಬಾಯಾರಿಕೆಗಳಾದರೆ, ಅವನು ತನಗೆ ಅನುಕೂಲವಿರುವಷ್ಟು ಆಹಾರ ಪಾನೀಯಗಳನ್ನು ಕೊಡುತ್ತಾನೆ. ಆದರೆ ವೇದಾಂತಿಯು ಯಾವಾಗಲೂ ಎಚ್ಚರವುಳ್ಳ ವಿವೇಕಿಯಾದುದರಿಂದ ದೇಹೇಂದ್ರಿಯಗಳ ಸ್ವಾಭಾವಿಕವಾದ ಆಯಾಸ—ವಿಶ್ರಾಂತಿಗಳನ್ನು ತನ್ನದೆಂದು ಭಾವಿಸುವದಿಲ್ಲ; ಪ್ರಾಣ ಧರ್ಮಗಳಾದ ಹಸಿವು—ಬಾಯಾರಿಕೆಗಳನ್ನೂ ಅವುಗಳ ತೃಪ್ತಿಯನ್ನೂ ತನ್ನ ಗುಣ—ಧರ್ಮಗಳೆಂದು ಭಾವಿಸುವದಿಲ್ಲ. ಚೈತನ್ಯ ಸ್ವರೂಪಿಯಾದ ತನ್ನ ನಿಜಾತ್ಮನು (ತಾನು) ಇವುಗಳನ್ನೆಲ್ಲಾ ಯಾವಾಗಲೂ ಮೀರಿದ್ದಾನೆಂದು ಅವನು ನಿಶ್ಚಿತವಾಗಿ ತಿಳಿದಿರುತ್ತಾನೆ. ಈ ಭಾವನೆಯೂ ತಿಳಿವಳಿಕೆಯೂ ಬಹಳ ವಿಲಕ್ಷಣವಾಗಿ ತೋರಬಹುದು. ಆದರೆ ಇದನ್ನು ಅಭ್ಯಾಸಮಾಡುವದಕ್ಕೆ ಪ್ರಾರಂಭಿಸಿದರೆ, ತಡವಿಲ್ಲದೆ ನಿಮ್ಮ ಅನುಭವದಲ್ಲಿ ಬರಬಹುದು. ಇದು ಅಸಾಧ್ಯವೇನೂ ಅಲ್ಲ.

ಹಸಿವು ಬಾಯಾರಿಕೆಗಳು ಪ್ರಾಣಿ ಶರೀರದ ಧರ್ಮಗಳು. ಇದರ ತಾಪವೂ ತೃಪ್ತಿಯೂ ಮನಸ್ಸಿಗಾಗುತ್ತವೆ. ಆದರೆ ಶುದ್ಧವಾದ ಅರಿವಿನ ರೂಪವಾದ ನಮ್ಮ ನಿಜಾತ್ಮನಿಗೆ ಅದರ ನೋವೂ ನಲಿವೂ ಕೂಡ ಇಲ್ಲ. ತಾನೇ ದೇವರೆಂದು ತನ್ನ ದೇವತ್ವವನ್ನು ಅರಿತವನಿಗೆ ದೇಹಧರ್ಮಗಳ ಬಾಧೆ ಇರುವದಿಲ್ಲ. ಕುದುರೆಯ ಹಸಿವನ್ನೂ, ಆಯಾಸವನ್ನೂ ಸವಾರನು ಅರಿತರೂ ಅವು ಅವನನ್ನು ಬಾಧಿಸುವದಕ್ಕೆ ಕಾರಣವಾಗುವದಿಲ್ಲ. ಹಾಗೆಯೇ ದೇಹದ ಸನ್ನಿವೇಶಗಳೂ ಸಂದರ್ಭಗಳೂ ಭೋಗಗಳೂ ಆತ್ಮಜ್ಞನನ್ನು ಅಥವಾ ವೇದಾಂತಿಯನ್ನು ಬಾಧಿಸುವದಿಲ್ಲ. ಭೋಗಾದಿಗಳಿಗೆ ವಿಷಯಗಳ ಅಪೇಕ್ಷೆಯಿದೆ. ಮನೋಬುದ್ಧಿಗಳ ವ್ಯಾಪಾರಕ್ಕೆ ವಿಷಯಗಳ ಆವಶ್ಯಕತೆ ಇದೆ; ಅವು ಆಶೆಗಳಂತೆ ಇವೆ. ಮನಸ್ಸಿನ ಈ ಬಯಕೆಗಳನ್ನು ವೇದಾಂತಿಯು ನೋಡುತ್ತಾನೆ. ಈ ಕಾಮಗಳನ್ನು ಮನಸ್ಸು ನೋಡುತ್ತಿರುವಾಗಲೂ, ನೀರಿನಲ್ಲಿಯೇ ಈಜುತ್ತಿರುವವನು ತನ್ನ ತಲೆಯನ್ನು ಮಾತ್ರ ಯಾವಾಗಲೂ ನೀರಿನ ಮೇಲೆಯೇ ಎತ್ತಿಕೊಂಡಿರುವಂತೆ

ಆತ್ಮಾನುಭವಿಯು ಕಾಮಗಳನ್ನೂ, ಅದನ್ನು ನೋಡುತ್ತಿರುವ ಮನಸ್ಸನ್ನೂ ಮೀರಿರುತ್ತಾನೆ. ಯಾವ ಬಯಕೆಯೂ ಅವನ ನೋವಿಗೆ ಕಾರಣವಾಗುವದಿಲ್ಲ . ಒಂದು ಹಕ್ಕಿಯು ಒಂದು ಮರದ ಸಣ್ಣ ರೆಂಬೆಯ ಮೇಲೆ ಕುಳಿತುಕೊಂಡಾಗ, ಆ ರೆಂಬೆಯು ಬಳುಕುತ್ತಾ ತೂಗಾಡುತ್ತಿರುತ್ತದೆ. ಆದರೂ ಅದು ಆ ಹಕ್ಕಿಗೆ ವಿನೋದವೇ ಆಗಿರುತ್ತದೆ; ಭಯವಾಗುವದಿಲ್ಲ. ಏಕೆಂದರೆ ಆ ಪುಟ್ಟ ಕೊಂಬೆಯು ಒಂದು ವೇಳೆ ಮುರಿದು ಭೂಮಿಗೆ ಬಿದ್ದರೂ ತನಗೆ ರೆಕ್ಕೆ ಇರುವದೆಂದು ಆ ಹಕ್ಕಿಗೆ ಭರವಸೆ, ಧೈರ್ಯ. ಆ ಹಕ್ಕಿಯು ಕೊಂಬೆಯ ಮೇಲೆ ಕುಳಿತಿದ್ದರೂ ಅದನ್ನು ಮೀರಿ ಬಹಳ ಮೇಲೆ ಸುರಕ್ಷಿತವಾಗಿದೆ. ತೋರಿಕೆಗೆ ಕೊಂಬೆಯು ಆಧಾರವಾಗಿದ್ದರೂ, ಹಕ್ಕಿಯು ನಿಜವಾಗಿ ಅದನ್ನು ನಂಬಿಕೊಂಡಿಲ್ಲ. ಹಾಗೆಯೇ ಸಾಮಾನ್ಯ ಜನರಲ್ಲಿರುವ ಆಶೆಗಳೇ ವೇದಾಂತಿಯಲ್ಲಿ ಇರುವಂತೆ ಕಂಡರೂ ಅವನು ಅವುಗಳನ್ನು ಮೀರಿದ್ದಾನೆ. ವೇದಾಂತಿಯು ಬಯಸಿದ ವಸ್ತುಗಳನ್ನು ಕಳೆದುಕೊಂಡರೂ ದುಃಖಪಡುವದಿಲ್ಲ. ಹಲವು ಬಯಕೆಗಳುಳ್ಳ ಸಾಮಾನ್ಯ ಜನರು ತಮ್ಮ ಇಷ್ಟ ವಸ್ತುವನ್ನು ಕಳೆದುಕೊಂಡಾಗ ನಿಟ್ಟುಸಿರುಬಿಟ್ಟು ಗೋಳಾಡುತ್ತಾರೆ. ಏಕೆಂದರೆ, ಅವರ ಸುಖಸಂತೋಷಗಳು ಆ ವಿಷಯಗಳನ್ನೇ ಅವಲಂಬಿಸಿರುತ್ತವೆ. ಆದರೆ, ವೇದಾಂತಿಯು ಮಾತ್ರ ತನ್ನ ಸುಖಕ್ಕಾಗಿ ಯಾವ ವಿಷಯವನ್ನೂ ಅವಲಂಬಿಸಿರುವದಿಲ್ಲ.

ಇಲ್ಲೊಂದು ಪೆನ್ಸಿಲ್ ಇದೆ; ಇದು ಬೇರೊಂದು ವ್ಯಕ್ತಿಗೆ ಸೇರಿದ್ದು. ಒಂದು ವೇಳೆ ಅದು ಕಳೆದುಹೋದರೆ ನಿಮಗೆ ವ್ಯಸನವಾಗುತ್ತದೆಯೇ ? ಇಲ್ಲ. ನೀವು ಅದನ್ನು ಹುಡುಕಬಹುದು; ಅದು ಸಿಕ್ಕದಿದ್ದರೆ, ನಿಮಗೆ ವ್ಯಥೆಯಾಗಲಾರದು. ಆದರೆ, ನಿಮ್ಮದೇ ಆದ ಐದು ಸಾವಿರ ರೂಪಾಯಿಗಳು ಕಳೆದರೆ, ಓ ! ಅದರಿಂದ ನಿಮ್ಮ ಎದೆಯೇ ಒಡೆಯಬಹುದು; ನೀವು ಇನ್ನೊಬ್ಬರ ಆ ಪೆನ್ಸಿಲ್ಲನ್ನು ಹುಡುಕಿದಂತೆ ಆ ಹಣವನ್ನೂ ಹುಡುಕಬಹುದು. ಆದರೆ ಆ ಎರಡು ಬಗೆಯ ಶೋಧದಲ್ಲಿ ಎಷ್ಟು ಅಂತರವಿದೆ ? ಒಡೆದ ಹೃದಯದಿಂದ ಹಣವನ್ನು ಹುಡುಕಿದಂತೆ ಪೆನ್ಸಿಲ್ಲನ್ನು ಹುಡುಕುವದಿಲ್ಲ. ವೇದಾಂತಿಗೆ ಐದು ಸಾವಿರ ರೂಪಾಯಿಗಳ ನಷ್ಟವು ಒಂದು ಪೆನ್ಸಿಲನ್ನು ಕಳೆದುಕೊಂಡದ್ದಕ್ಕೆ ಸಮಾನ. ಇದನ್ನು ಒಂದು ಕಥೆಯ ದೃಷ್ಟಾಂತದಿಂದ ತಿಳಿಯಪಡಿಸಬಹುದು.

ಇಂಡಿಯಾ ದೇಶದಲ್ಲಿ ಒಮ್ಮೆ ಒಂದು ದೊಡ್ಡ ನಗರದ ಬೀದಿಯಲ್ಲಿ ಮಹಾತ್ಮರೊಬ್ಬರು ಹೋಗುತ್ತಿದ್ದರು. ಸಾಧ್ವಿಯೊಬ್ಬಳು ಅವರನ್ನು ನೋಡಿ ತನ್ನ ಮನೆಗೆ ದಯಮಾಡಿ ಬಂದು ಹೋಗಬೇಕೆಂದು ಆಹ್ವಾನಿಸಿ ಪ್ರಾರ್ಥಿಸಿದಳು. ಅದರಂತೆ ಆ ಸಾಧುಗಳು ಆಕೆಯ ಜೊತೆಗೆ ಮನೆಗೆ ಹೋದರು. ಆಕೆಯು ಅವರಿಗೆ ಒಂದು ಲೋಟ ಹಾಲನ್ನು ತಂದು ಕೊಟ್ಟಳು. ದೊಡ್ಡದೊಂದು ಪಾತ್ರೆಯಲ್ಲಿ ಹಾಲು ಕುದಿಯುತ್ತಿತ್ತು; ಆದ್ದರಿಂದ ಅದರಲ್ಲಿ ಹಾಲಿನ ಮೇಲೆ ದಪ್ಪವಾಗಿ ಕೆನೆ ಕಟ್ಟಿತ್ತು. ಆ

ಹಾಲನ್ನು ದೊಡ್ಡ ಪಾತ್ರೆಯಿಂದ ಸಣ್ಣ ಪಾತ್ರೆಗೆ ಹಾಕುವಾಗ ಕೆನೆಯೆಲ್ಲಾ ಲೋಟ ದೊಳಗೇ ಬಿದ್ದು ಬಿಟ್ಟಿತು. ಆಕೆಗೆ ಅದು ಇಷ್ಟವಿರಲಿಲ್ಲ; ಬರಿಯ ಹಾಲನ್ನು ಕೊಡಬೇಕೆಂದಿದ್ದಳು. ಆದರೆ ಕೆನೆಯೂ ಹಾಲಿನ ಜೊತೆಗೆ 'ಕಪ್'ನಲ್ಲಿ ಬಿದ್ದ ಕೂಡಲೇ ಆಕೆ ವಿಷಾದದಿಂದ "ಚ್‌ಚ್‌ಚ್! ಅಯ್ಯೋ ನನ್ನ ಕೆನೆಯೆ! ನನ್ನ ಕೆನೆಯೆ! ಬಿದ್ದೇ ಬಿಟ್ಟೆಯ?" ಎಂದು ಮುಖವನ್ನು ಗಂಟಿಕ್ಕಿ ಉದ್ಗಾರಮಾಡಿದಳು. ಕೆನೆಯನ್ನು ತೆಗೆಯಲು ಸಂಕೋಚವಾದುದರಿಂದ ಅನಿವಾರ್ಯವಾಗಿ ಆ ಹಾಲನ್ನೇ ಆ ಅಂದವಾದ ಬಟ್ಟಲ ತುಂಬ ಆ ಸಾಧುಗಳಿಗೆ ಕೊಟ್ಟಳು. ಅವರು ಅದನ್ನು ತೆಗೆದುಕೊಂಡು ಮೇಜಿನ ಮೇಲಿಟ್ಟು ಬೇರೆ ವಿಷಯಗಳನ್ನೆತ್ತಿ ಮಾತನಾಡುತ್ತಿದ್ದರು. ಹಾಲು ಬಹಳ ಬಿಸಿಯಿ ದ್ದುದರಿಂದ ಕುಡಿಯಲಿಲ್ಲವೇನೋ ಎಂದು ಆಕೆ ತಿಳಿದುಕೊಂಡಳು. ಸ್ವಲ್ಪ ಹೊತ್ತಿನ ಮೇಲೆ ಆ ಹಾಲನ್ನು ಕುಡಿಯದೆ ಸಾಧುಗಳು ಹೊರಟಾಗ "ಓ ಸ್ವಾಮೀಜೀ! ತಾವು ಹಾಲನ್ನು ಕುಡಿಯುವ ಅನುಗ್ರಹ ಮಾಡುವದಿಲ್ಲವೆ?" ಎಂದು ಬೇಡಿದಳು. ಅದಕ್ಕೆ ಅವರು "ಓ ಮಹಾದೇವಿ! ಸಂನ್ಯಾಸಿಯ ಕೈಯಿಂದ ಮುಟ್ಟಲ್ಪಡುವದಕ್ಕೆ ಸಹ ಅದಕ್ಕೆ ಅರ್ಹತೆಯಿಲ್ಲ." ಎಂದರು. ಆಕೆ "ಏಕೆ ಸ್ವಾಮಿ!" ಎಂದಳು. ಅದಕ್ಕೆ ಅವರು "ನೀನು ದೊಡ್ಡ ಪಾತ್ರೆಯಿಂದ ಲೋಟಕ್ಕೆ ಹಾಲನ್ನು ಸುರಿಯುವಾಗ ಸಕ್ಕರೆಯನ್ನೂ ಕೆನೆ ಯನ್ನೂ ಸೇರಿಸುತ್ತಾ ಅನಿಷ್ಟವಾದ ಮತ್ತೇನನ್ನೋ ಸೇರಿಸಿದೆ. ನೀನು 'ಅಯ್ಯೋ! ನನ್ನ ಪ್ರೀತಿಯ ಕೆನೆಯೆ!' ಎಂಬ ಅಪ್ರಿಯವಾದ ಮಾತನ್ನೂ ಭಾವನೆಯನ್ನೂ ಈ ಹಾಲಿಗೆ ಸೇರಿಸಿವೆ. ಆದ್ದರಿಂದ ಅಂಥಾ ಹಾಲನ್ನು ನಾನೆಂದೂ ಕುಡಿಯುವದಿಲ್ಲ." ಎಂದು ಹೇಳಿ ಹೊರಟುಹೋದರು. ಆಕೆಗೆ ನಾಚಿಕೆಯಾಯಿತು.

ಸಂನ್ಯಾಸಿಗಳಿಗೆ ಪ್ರೀತಿಯಿಂದ ಹಾಲನ್ನು ಕೊಟ್ಟಿದ್ದೇನೋ ಸರಿಯಾಗಿತ್ತು. ಆದರೆ ತಾನು ಉಳಿಸಿಕೊಳ್ಳಬೇಕೆಂದಿದ್ದ ಕೆನೆಯು, ತನ್ನ ಕೈಮೀರಿ, ಅವರಿಗೆ ಕೊಡ ಬೇಕಾದಹಾಲಿನಲ್ಲಿ ಬಿದ್ದಾಗ ಆಕೆ ವಿಷಾದದ ವಿಷವನ್ನು ಅದರಲ್ಲಿ ಸೇರಿಸಿದುದು ವಿಷ ಮಯವಾಯಿತು. ಆದ್ದರಿಂದ ವೇದಾಂತವು ಹೇಳುವದೇನೆಂದರೆ, "ಕರ್ಮವನ್ನು ನಿರಂತರ ವಾಗಿ ಮಾಡಿರಿ; ಅದಕ್ಕೆ ಪ್ರೇರಕವೂ ಅವಶ್ಯಕವೂ ಆದ ಕಾಮವನ್ನೂ ಹೊಂದಿರಿ. ಆದರೆ ಫಲದ ವಿಷಯದಲ್ಲಿ ಎದೆಯೊಡಿಕೆಯನ್ನೇಕೆ ಸೇರಿಸಿಕೊಳ್ಳುತ್ತೀರಿ? ಕಾಮ— ಕರ್ಮಗಳಿಗೆ ಆ ವಿಷವನ್ನು ಸೇರಿಸಿಕೊಳ್ಳಬೇಡಿ. ಕರ್ಮವನ್ನು ಮಾಡಿ, ಆದರೆ ನಿರ್ಲಕ್ಷ್ಯ ವಾಗಿಯೂ ಅನಾಸಕ್ತವಾಗಿಯೂ ಶ್ರದ್ಧೆಯಿಂದ ಮಾಡಿ, ಮನಸ್ಸಿನ ಸಮತೆಯನ್ನು ಕಳೆದು ಕೊಳ್ಳಬೇಡಿ. ಯಾವಾಗಲೂ ಬದಲಾವಣೆಹೊಂದುತ್ತಿರುವ ಹೊರಗಿನ ಸನ್ನಿವೇಶ ಗಳಿಗೆ ಮತ್ತೆ ಮತ್ತೆ ಹೊಂದಿಕೊಳ್ಳುತ್ತಿರಿ. ನ್ಯಾಯವೂ ಧರ್ಮ ಸಮ್ಮತವೂ ಆದ—ಸರಿಯಾದ ಮನೋಭಾವದಿಂದ ಕಾರ್ಯ ಮಾಡಿದರೆ, ನಿಮ್ಮ ಎಲ್ಲಾ ಕಾರ್ಯ ಗಳಿಗೂ ಆಶ್ಚರ್ಯಕರವಾಗಿ ಯಶಸ್ಸಿನ ಕಿರೀಟಧಾರಣೆಯಾಗುತ್ತದೆ.

ಈಗ, ಬದಲಾಗುತ್ತಿರುವ ಸನ್ನಿವೇಶಗಳಿಗೆ ನಿಮ್ಮ ಸ್ಥಾನಮಾನಗಳನ್ನು ಹೊಂದಿಸಿ ಕೊಳ್ಳುತ್ತಿದ್ದರೂ ಮನಸ್ಸಿನ ಸಮತೆಯನ್ನು ಕಾದುಕೊಳ್ಳುವದು ಹೇಗೆ? ಜನರ ಎಲ್ಲಾ

ಬಗೆಯ ಸಂಬಂಧಗಳೂ ಸಂಪರ್ಕಗಳೂ ಅಶಾಸ್ತ್ರೀಯವೂ ಅವೈಜ್ಞಾನಿಕವೂ ಮಲಿನವೂ ನಡಿಲವೂ ಆಗಿವೆ—ಎನ್ನುವದೇ ಅವರ ಮಹಾಕಷ್ಟವಾಗಿದೆ. ನಿಮ್ಮ ಎಲ್ಲಾ ಸಂಬಂಧಗಳೂ ಸಂಪರ್ಕಗಳೂ ನಿಮಗೆ ಸಾಧಕವಾಗಬೇಕೇ ಹೊರತು ಬಾಧಕವಾಗಬಾರದು—ಎಂದು ವೇದಾಂತವು ಹೇಳುತ್ತದೆ. ಈ ಪ್ರಪಂಚದಲ್ಲಿ ನಿಮಗೆ ಎದಿರಾಗುವ ಪ್ರತಿಯೊಂದೂ ನೀವು ಮೆಟ್ಟಿ ನಿಂತು ದಾಟಬಹುದಾದ ಸಾಧನ ಸೋಪಾನವಾಗಬೇಕೇ ಹೊರತು ಉರುಳಿ ಬೀಳಿಸುವ ಜಾರುಬಂಡೆಯಾಗಬಾರದು. ನಾವು ಜಾರುಬಂಡೆಯನ್ನೇ ಏರುವ ಭೂಮಿಕೆಯಾಗಿ ಮಾಡಿಕೊಳ್ಳಬೇಕು.

ನಾವು ಒಂದು ಕತ್ತಲೆಯ ಕೋಣೆಯೊಳಗೆ ಪ್ರವೇಶ ಮಾಡಿದ ಕೂಡಲೇ ಮೊದಲು ನಮಗೆ ಅಲ್ಲಿರುವ ಯಾವ ವಸ್ತುವೂ ಕಾಣುವದಿಲ್ಲ. ಆದರೆ ಸ್ವಲ್ಪ ಹೊತ್ತು ಆ ಕತ್ತಲೆಯಲ್ಲಿಯೇ ಕಣ್ಣಿಟ್ಟು ಬಿಡದೆ ನೋಡುತ್ತಿದ್ದರೆ, ಆ ಕತ್ತಲೆಯ ಕೋಣೆಯೊಳಗಿರುವ ವಸ್ತುಗಳೆಲ್ಲಾ ಕಾಣುವದಕ್ಕೆ ತೊಡಗುತ್ತವೆ. ಆದರ ಪೂರ್ವಕವಾಗಿ ಏಕಾಗ್ರದೃಷ್ಟಿಯಿಂದ ನೋಡುತ್ತಿದ್ದರೆ ಎಲ್ಲವೂ ಕಾಣುತ್ತವೆ.

ನಿಮ್ಮ ದೃಷ್ಟಿಯನ್ನು ಕುರುಡಾಗಿ ಮಾಡಿ, ನಿಜವಾದ ಇರುವಿಕೆಯನ್ನು ಅಥವಾ ದೇವರನ್ನು ಕತ್ತಲೆಯಿಂದ ಮುಸುಕಿ ಕಾಣದಂತೆ ಮಾಡಿರುವ, ನಿಮ್ಮ ಪ್ರಾಪಂಚಿಕ ಸಂಬಂಧಗಳನ್ನು ಆದರದಿಂದ ಕಣ್ಣಿಟ್ಟು ತೀಕ್ಷ್ಣವಾಗಿ ಒಳಗೆ ತೂರಿ ನೋಡಿದರೆ, ಅವುಗಳು ಪಾರದರ್ಶಕವಾದಂತೆ ಆಗಿ, ಅವುಗಳಲ್ಲಿ ಅಡಗಿರುವ ದೇವತ್ವವನ್ನು ಅವು ಸ್ಪಷ್ಟವಾಗಿ ತೆರೆದು ತೋರಿಸುತ್ತವೆ. ಈ ವಿಷಯವು ಮೊದಲು ವಿಚಿತ್ರವಾಗಿ ತೋರುತ್ತದೆ; ಆದರೆ ಇದು ಮುಂದೆ ಕ್ರಮೇಣ ಅನುಭವಗಮ್ಯವಾಗುತ್ತದೆ. ನಿಮ್ಮ ಸ್ಥಾನಮಾನಗಳನ್ನು ವಿರೋಧ—ವಿರಸಗಳಿಗೆ ಅವಕಾಶವಿಲ್ಲದಂತೆ ಹೊಂದಿಕೆಯಾಗಿ ಮಾಡಿಕೊಳ್ಳುವದರಿಂದಲೂ ವಸ್ತುಗಳನ್ನೂ ವ್ಯಕ್ತಿಗಳನ್ನೂ ಸಂಬಂಧಗಳನ್ನೂ ಸರಿಯಾದ ನೋಟದಿಂದ ನೋಡುವದರಿಂದಲೂ ಅವುಗಳು ನಿಮ್ಮ ನೋಟವನ್ನು ತಡೆಯದೆ, ಕನ್ನಡಿಯಂತೆ, ತಮ್ಮೊಳಗಿರುವ ತಮ್ಮ ತಿರುಳಾದ ದೇವತ್ವವನ್ನು ತೋರಿಸುತ್ತವೆ—ಎಂದು ವೇದಾಂತವು ಹೇಳುತ್ತದೆ. ವೇದಾಂತ ಬೋಧೆಯನ್ನು ನೀವು ಸರಿಯಾಗಿ ಅರ್ಥಮಾಡಿಕೊಂಡರೆ, ಬರಿಯ ಕಲ್ಲನ್ನು ಪಾರದರ್ಶಕ ಕನ್ನಡಿಯನ್ನಾಗಿ ಮಾತ್ರವಲ್ಲದೆ, ಸೂಕ್ಷ್ಮದರ್ಶಕ (ಲೆನ್ಸ್) ಕನ್ನಡಿಯನ್ನಾಗಿಯೂ ವಸ್ತು ದರ್ಶಕ ಕನ್ನಡಕವನ್ನಾಗಿಯೂ ಮಾಡಿಕೊಂಡಂತೆ ಜಡವಾದ ಭೌತಿಕ ವಸ್ತುಗಳನ್ನು, ಒಳಗಿರುವ ಚೈತನ್ಯವನ್ನು ನೋಡುವದಕ್ಕೆ ಕನ್ನಡಿಯನ್ನಾಗಿಯೂ ಕನ್ನಡಕವನ್ನಾಗಿಯೂ ಮಾಡಿಕೊಳ್ಳಬಹುದು.

ಒಂದು ಟನ್ ಅಥವಾ ಅದಕ್ಕಿಂತಲೂ ಹೆಚ್ಚು ಭಾರವಾದ ಮೋವನ್ನು ಒಂದು ಆನೆಯು ತನ್ನ ಬೆನ್ನಮೇಲೆ ಬಹಳ ಶ್ರಮದಿಂದಲೂ ತನ್ನಶಕ್ತಿಯನ್ನು ವಿನಿಯೋಗಿಸಿಯೂ ಹೊತ್ತುಕೊಂಡು ನಡೆಯಬಹುದು. ಆದರೆ ಆ ಹೊರೆಯನ್ನು ಹೊತ್ತು ಒಯ್ಯುವದು

ಅದಕ್ಕೆ ತುಂಬಾ ತೊಂದರೆಯೂ ಅನಾನುಕೂಲವೂ ಆಯಾಸವೂ ಆಗಬಹುದು. ಆದರೆ ಆ ಆನೆಯು ಅದೇ ಮೇವನ್ನು ತಿಂದು ಅರಗಿಸಿಕೊಂಡು ತನ್ನ ದೇಹರೂಪದಿಂದ ಒಯ್ಯುವಾಗ ಅದೇ ಒಂದು ಟನ್ ಭಾರವನ್ನು ರಕ್ತಮಾಂಸಾದಿಗಳ ರೂಪದಿಂದ ಹೊತ್ತಿದ್ದರೂ ಅದು ಬಾಧಕವಾದ ಹೊರೆಯಾಗದೆ ಅದಕ್ಕೆ ಸಾಧಕ ಶಕ್ತಿಯೇ ಆಗುತ್ತದೆ; ಅಲ್ಲವೆ?

ಆದ್ದರಿಂದ ಪ್ರಪಂಚದ ಕರ್ತವ್ಯಕರ್ಮಗಳ ಹೊರೆಯನ್ನೆಲ್ಲಾ ನಿಮ್ಮ ಹೆಗಲ ಮೇಲೆ ಹೊತ್ತುಕೊಂಡು ಒಯ್ಯಬೇಕೆಂದು ವೇದಾಂತವು ಹೇಳುತ್ತದೆ. ನಿಮ್ಮ ತಲೆಯ ಮೇಲೆ ಆ ಭಾರವನ್ನು ಹೊತ್ತರೆ ನಿಮ್ಮ ಕುತ್ತಿಗೆಯು ಮುರಿಯುತ್ತದೆ. ನೀವು ಆ ಹೊರೆಯನ್ನೆಲ್ಲಾ ನುಂಗಿ ಅರಗಿಸಿಕೊಂಡು, ಆತ್ಮಭೂತವಾಗಿ ಮಾಡಿಕೊಂಡು, ಅದನ್ನು ನೀವೆಂದು ತಿಳಿದು ನಡೆದುಕೊಂಡರೆ, ನೀವು ವೇಗವಾಗಿ ಆಯಾಸವಿಲ್ಲದೆ ಚಲಿಸಬಹುದು; ನಿಮ್ಮ ನಡೆಗೆ ಅದು ತಡೆಯಾಗದೆ, ಆಶ್ಚರ್ಯಕರವಾದ ಪ್ರಗತಿಗೆ ಸಾಧಕವಾಗುತ್ತದೆ.

ವೇದಾಂತ ತತ್ತ್ವವು ನಿಮ್ಮ ಅನುಭವಕ್ಕೆ ಬಂದರೆ, ಆಶ್ಚರ್ಯವೋ ಆಶ್ಚರ್ಯ! ದೇವರನ್ನು ನೀವು ನೋಡುತ್ತೀರಿ. ನೀವು ದೇವರನ್ನು ತಿನ್ನುತ್ತೀರಿ; ದೇವರನ್ನು ಕುಡಿಯುತ್ತೀರಿ; ದೇವರೇ ನಿಮ್ಮಲ್ಲಿ ವಾಸಿಸುತ್ತಾನೆ. ನೀವು ದೇವರನ್ನು ಕಂಡರೆ ದೇವರು ಎಲ್ಲವಾಗಿ ಕಾಣುತ್ತಾನೆ. ನಿಮ್ಮ ಆಹಾರ–ವ್ಯವಹಾರಗಳೆಲ್ಲಾ ದೇವರಾಗಿ ಕಾಣುತ್ತವೆ. ದೇವರ ಕಣ್ಣಿನಿಂದಲೇ–ದೃಷ್ಟಿಯಿಂದಲೇ, ನೋಟದಿಂದಲೇ–ಎಲ್ಲವೂ ಹೊರ ಚಿಮ್ಮಿರುವದರಿಂದ ವೇದಾಂತಿಯ ಕಣ್ಣಿಗೆ ಎಲ್ಲವೂ ದೇವರಾಗಿ ಕಾಣುತ್ತವೆ. ಇಲ್ಲಿರುವ ಪ್ರತಿಯೊಂದು ವಸ್ತುವೂ ನಮ್ಮ ಅತ್ಯಂತ ಪ್ರಿಯತಮನಾದ ದೇವರು. ಸುತ್ತಲೆಲ್ಲ ಕಡೆಗಳಿಂದಲೂ ಮೂಲೆ ಮೂಲೆಗಳಿಂದಲೂ ದೇವರೇ ನಮ್ಮನ್ನು ನೋಡುತ್ತಿದ್ದಾನೆ. ಹೀಗೆ ನಮ್ಮ ಅನುಭವವಾದರೆ ಈ ಇಡೀ ಮರ್ತ್ಯಲೋಕವೇ ಅಮರ್ತ್ಯವಾದ ಸ್ವರ್ಗವಾಗಿ ಕಾಣುತ್ತದೆ. ಈ ರೀತಿಯಿಂದ ನೋಡಿದರೆ, ವೇದಾಂತವು ನಿಮ್ಮ ಕಾಮಗಳನ್ನೆಲ್ಲಾ ಕಳೆದು–ಕಸಿದುಕೊಂಡು—ನಿಮ್ಮನ್ನು ಅಸುಖಿಗಳನ್ನಾಗಿ ಮಾಡುವದಿಲ್ಲ. ಆದರೆ ಆಶೆಗಳನ್ನೆಲ್ಲಾ ಅನುಕೂಲವಾಗಿ ಹೊಂದಿಸಿಕೊಂಡು, ಆಶೆಯು ನಿಮಗೆ ದಾಸವಾಗುವಂತೆ ಅದು ಮಾಡುತ್ತದೆ. ಆಶೆಗಳ ದರ್ಪ ದೌರ್ಜನ್ಯಗಳಿಗೆ ನೀವು ಒಳಗಾಗದೆ ಅವುಗಳ ಸ್ವಾಮಿ ನೀವಾಗುವಂತೆ ವೇದಾಂತವು ಮಾಡುತ್ತದೆ.

ಕುದುರೆಯ ಬಾಲವನ್ನು ಒಬ್ಬ ಮನುಷ್ಯನು ಹಿಡಿದುಕೊಂಡರೆ, ಅದು ಅವನನ್ನು ಒದೆಯುತ್ತಾ ನೆಗೆಯುತ್ತಾ ಮುಂದೆ ಮುಂದೆ ವೇಗವಾಗಿ ಎಳೆದುಕೊಂಡು ಹುಚ್ಚೆದ್ದು ಹಾರಾಡುತ್ತಾ ಓಡುತ್ತದೆ. ಇಂಥಾ ಭಯಂಕರ ಪರಿಸ್ಥಿತಿಯು ಯಾರಿಗಾದರೂ ಇಷ್ಟವೆ? ಪ್ರಾಪಂಚಿಕ ಜನರ ಅವಸ್ಥೆ–ದುರವಸ್ಥೆ ಹೀಗೇ ಆಗಿದೆ. ಆಶೆಗಳೇ–

ಅಶ್ವಗಳು. ಜನರು ಅವುಗಳ ಬಾಲಗಳನ್ನು ಹಿಡಿದುಕೊಂಡಿರುವದರಿಂದ ಅವು ಅವರನ್ನು ಸ್ವೇಚ್ಛೆಯಾಗಿ ಎಳೆದುಕೊಂಡು ಹೋಗಿ ದುಃಖದಲ್ಲಿಯೂ ಮರವಸ್ಥೆಯಲ್ಲಿಯೂ ಎಸೆಯುತ್ತವೆ. ವೇದಾಂತವು ಹೇಳುವದೇನೆಂದರೆ, "ಕಾಮವೆಂಬ ಕುದುರೆಯ ಬಾಲವನ್ನು ಹಿಡಿದುಕೊಂಡು ಕೆಡಬೇಡಿ; ಅದರ ಬೆನ್ನ ಮೇಲೆ ಸ್ವಾಮಿಯಾಗಿ ಹತ್ತಿ ಸವಾರಿ ಮಾಡಿ. ನೀವು ಆತ್ಮಜ್ಞಾನವನ್ನು ಪಡೆದಾಗ ನಿಮ್ಮ ದೇಹವನ್ನು ಕುದುರೆಯನ್ನಾಗಿ ಮಾಡಿಕೊಳ್ಳುತ್ತೀರಿ. ಒಳಗಿರುವ ದೇವತ್ವವನ್ನು ಅರಿತಾಗಲೇ ನೀವು ಸಮಸ್ತಕ್ಕೂ ಪ್ರಭುಗಳಾಗುತ್ತೀರಿ.

ಇನ್ನೂ ಒಂದು ಆಕ್ಷೇಪಣೆ ಇದೆ:

ಈ ಪುಸ್ತಕದಲ್ಲಿ ತೋರಿಸಿರುವ ರೀತಿಯಿಂದ ನಮ್ಮ ಮನಸ್ಸನ್ನೂ ಭಾವನೆಯನ್ನೂ ಆಲೋಚನೆಯನ್ನೂ ಮತ್ತು ಶಕ್ತಿಯನ್ನೂ ಕೇಂದ್ರೀಕರಿಸುವದಕ್ಕೆ ತೊಡಗಿದರೆ ಪ್ರತಿಕ್ರಿಯೆ ಉಂಟಾಗುವದಿಲ್ಲವೆ? ಅದು ಮೆದುಳಿನ ಮೇಲೆ ವಿಪರೀತ ಪರಿಣಾಮವನ್ನು—ಕೆಟ್ಟ ಪರಿಣಾಮವನ್ನು ಉಂಟು ಮಾಡುವದಿಲ್ಲವೆ? ಅದು ಮೆದುಳನ್ನು ದುರ್ಬಲ ಗೊಳಿಸುವದಿಲ್ಲವೆ?

ಸಮಾಧಾನ: ಇಲ್ಲ, ಇಲ್ಲ; ರಾಮನು ತನ್ನ ಸ್ವಂತ ಅನುಭವದಿಂದ ನಿಮಗೆ ಹೇಳುತ್ತಾನೆ. ದುರ್ಬಲತೆ ಉಂಟಾಗುವದಿಲ್ಲ; ದಿನದಿನಕ್ಕೆ ನಿಮ್ಮ ಶಕ್ತಿಯು ಹೆಚ್ಚು ಹೆಚ್ಚು ವೃದ್ಧಿಯಾಗುವದೇ ಹೊರತು ದುರ್ಬಲತೆಯು ಬೆಳೆಯುವದಿಲ್ಲ. ನಿಮ್ಮಲ್ಲಿ ಅಪಾರ ಶಕ್ತಿಯೂ ಸತ್ತ್ವವೂ ವೀರ್ಯವೂ ಬೆಳೆಯುವದೇ ಹೊರತು ದೌರ್ಬಲ್ಯವಲ್ಲ. ಸಾಧನ ಕ್ರಮದ ವಿಷಯದಲ್ಲಿ ಕೆಲವು ಮಾತನ್ನು ಹೇಳಬೇಕಾಗಿದೆ.

ಈ ಪುಸ್ತಕದಲ್ಲಿ ಹೇಳಿರುವ ಕ್ರಮದಲ್ಲಿ ಮುಂಜಾನೆ ಅಥವಾ ನಿಮಗೆ ವಿರಾಮವಾದಾಗ ಸಾಧನೆ ಮಾಡುತ್ತಿದ್ದರೆ ನಿಮ್ಮ ಮನಸ್ಸು ವೃತ್ತಿಜ್ಞಾನವನ್ನು ಮೀರಿದ ಶುದ್ಧವಾದ ಅರಿವಿನಲ್ಲಿ, ಆ ಅರಿವಿನ ಆನಂದದ ದಿವ್ಯವಾದ ಸ್ಥಿತಿಯಲ್ಲಿ ಮುಳುಗುತ್ತದೆ. ಆ ಸ್ಥಿತಿಯನ್ನು ಮುಟ್ಟಿದ ಮೇಲೆ ಓಂಕಾರ ಜಪವನ್ನು ಮುಂದುವರಿಸಬೇಡಿ; ಓಂಕಾರದ ಉಚ್ಚಾರಣೆಯನ್ನು ನಿಲ್ಲಿಸಿ ಬಿಡಿ. ಆ ಶುದ್ಧವಾದ ಬಚ್ಚಬರಿ ಅರಿವಿನ ಸ್ಥಿತಿಯು ಎಷ್ಟು ಹೊತ್ತು ಬೇಕಾದರೂ ಇರಲಿ. ಮನಸ್ಸು ಕ್ರಮೇಣ ಪ್ರಪಂಚದ ಅರಿವಿಗೆ ಅಥವಾ ದೇಹದ ಅರಿವಿಗೆ ತಾನಾಗಿಯೇ ಬರುತ್ತದೆ. ಯಾವದನ್ನೂ ಬಲಾತ್ಕಾರ ಮಾಡಬಾರದು; ಓಂಕಾರದ ಉಚ್ಚಾರಣೆಯನ್ನೂ ಒತ್ತಾಯದಿಂದ ನಡೆಸಬಾರದು. ನಿಮ್ಮಲ್ಲಿ ಹಲವರು ಆ ನಿರ್ಮಲವಾದ ಅರಿವಿನ ಬಯಲಿನಲ್ಲಿ ಅರ್ಧ ಗಂಟೆಯ ಕಾಲ, ಮನಸ್ಸಿನ ಯಾವ ಚಟುವಟಿಕೆಯೂ ವೃತ್ತಿಯೂ ವ್ಯಾಪಾರವೂ ಇಲ್ಲದೆ ನಿಶ್ಚಲವಾಗಿ ಮೌನವಾಗಿರಲು ಶಕ್ತರಾಗಿರಬಹುದು; ಅಥವಾ ಒಂದು ಗಂಟೆ, ಎರಡು ಗಂಟೆ, ಮೂರು ಗಂಟೆಗಳ ಕಾಲವಾದರೂ ಅಥವಾ ಇನ್ನೂ ಹೆಚ್ಚಾಗಿಯೂ ಆ ಸ್ಥಿತಿಯಲ್ಲಿರಲು

ಸಾಧ್ಯವಾಗಬಹುದು. ದಿವಸ ದಿವಸಕ್ಕೆ ಆ ಸಾಧನವು ಬೆಳೆದು ಕ್ರಮೇಣ ಹೆಚ್ಚು ಹೆಚ್ಚು ಕಾಲ ಆ ಸ್ಥಿತಿಯಲ್ಲಿ ಉಳಿಯುವದರಿಂದ ನಿಮ್ಮ ಆತ್ಮ ಶಕ್ತಿಯು ವೃದ್ಧಿಯಾಗುತ್ತದೆ.

ಆರಂಭದಶೆಯಲ್ಲಿದ್ದವರು ಅರ್ಧ ಗಂಟೆಗಿಂತಲೂ ಹೆಚ್ಚು ಹೊತ್ತು ಸಾಧನೆ ಮಾಡಲು ರಾಮನು ಸಲಹೆ ಮಾಡುವದಿಲ್ಲ. 20–25 ನಿಮಿಷಗಳೇ ಮೊದಲು ಮೊದಲು ಧ್ಯಾನಮಾಡಿದರೂ ಸಾಕಾಗಬಹುದು. ಆದರೆ ಬಹಳ ಕಾಲದಿಂದ ಅಭ್ಯಾಸ ಮಾಡುತ್ತಿದ್ದವರು ತಾವಾಗಿಯೇ ಹೆಚ್ಚು ಹೆಚ್ಚು ಕಾಲವನ್ನು ಸಾಧನೆಯಲ್ಲಿ ಬೆಳೆಸ ಬಹುದು.

ಸಾಧನದ ಆರಂಭದಶೆಯಲ್ಲಿದ್ದವರಿಗಿಂತಲೂ ಅತ್ಯಂತ ಆಧ್ಯಾತ್ಮಿಕ ಮನೋಭಾವ ವುಳ್ಳವರೂ ಹೆಚ್ಚು ಕಾಲ ಆ ದಾರಿಯಲ್ಲಿ ಪರಿಶ್ರಮ ಪಟ್ಟವರೂ ಹೆಚ್ಚು ಅನುಭವ ವುಳ್ಳವರಾಗಿರುತ್ತಾರೆಂಬದು ಸಾಮಾನ್ಯ ನಿಯಮ. ಮೊದಲೇ ನಿಮಗೆ ಇದರಲ್ಲಿ ಹೆಚ್ಚು ಆಸಕ್ತಿಯೂ ಹೆಚ್ಚು ಉತ್ಕಟ ಭಾವವೂ ಇದ್ದರೆ ಬುದ್ಧಿಯ ಅರಿವನ್ನು ಮೀರಿದ ಸ್ಥಿತಿಯಲ್ಲಿ ನೀವು ಹೆಚ್ಚು ಕಾಲ ಉಳಿಯಲು ಇಷ್ಟ ಪಡುತ್ತೀರಿ.

ಇನ್ನೊಂದು ವಿಷಯವೇನೆಂದರೆ: ನೀವು ಸಂಯಮ ಮಾಡಿ ದೇವರ ಅರಿವನ್ನು ಅನುಭವದಲ್ಲಿ ತಂದುಕೊಳ್ಳುವದಕ್ಕೆ ತೊಡಗಿದರೆ, ನಿಮ್ಮ ಮನಸ್ಸಿನ ಮುಂದೆ ಕೆಲವು ಭಾವನೆಗಳು ಅಥವಾ ವಿಚಾರಗಳು ತಾವಾಗಿಯೇ ಎದ್ದು ತೋರಬಹುದು. ಆಗ ಓಂಕಾರವನ್ನು ಉಚ್ಚಾರಮಾಡುತ್ತಾ ಹೋಗಿರಿ, ಮತ್ತು ತಾನಾಗಿಯೇ ತೋರಿ ಕೊಂಡ ಆ ವಿಚಾರಧಾರೆಯನ್ನು ಹಿಡಿದು ತುದಿಮುಟ್ಟಿ ಮುಗಿಸಿರಿ.

ಒಬ್ಬ ಸಾಧಕನು ಓಂಕಾರವನ್ನು ಉಚ್ಚರಿಸುತ್ತಾ ಅವನ ಸುತ್ತಲೂ ಪವಿತ್ರ ಅನಂತತೆಯೇ ತುಂಬಿ, ತಾನು ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಬೇಕೆಂದು ನಿಶ್ಚಯಿ ಸಿರುವಾಗ, ಒಂದು ವೇಳೆ ಅವನ ಮನಸ್ಸಿನಲ್ಲಿ ಒಂದು ಪ್ರಾಪಂಚಿಕ ಭಾವನೆಯು ಬಂದರೆ, ಮುಂದಿನ ತನ್ನ ಬಾಳಿನಲ್ಲಿ ಅದು ಸದ್ವರ್ತನೆಗೆ ಕಾರಣವಾಗುವ ರೀತಿಯಲ್ಲಿ ಅದನ್ನು ಕೊನೆಗಾಣಿಸಬೇಕು. ಈಗ ಇದರ ಕಡೆ ಗಮನ ಕೊಡಿ. ನಿಮಗೆ ಎಂದಾ ದರೂ ಇದರ ಅನುಭವವು ಬಂದಿದೆಯೋ ಇಲ್ಲವೋ. ಅಂತು ಸಾಧಕನ ಧ್ಯಾನಾ ಭ್ಯಾಸಕಾಲದಲ್ಲಿ ಇಂಥ ವಾಸನೆಗಳು ಎದ್ದುಕೊಳ್ಳುವದುಂಟು. ಅವು ನಿಮಗೆ ಬಾಧಕ ವಾಗಿರುವದರಿಂದ ರಾಮನ ಮಾತುಗಳು ನಿಮಗೆ ಸಾಧಕವಾಗಬಹುದು.

ನೀವು ಓಂಕಾರವನ್ನು ಉಚ್ಚರಿಸುತ್ತಾ ಧ್ಯಾನ ಮಾಡುವಾಗ ಯಾವದಾದ ರೊಂದು ವಿಷಯದಲ್ಲಿ ಪ್ರೀತಿಯ ಭಾವನೆಯೋ ಹಗೆತನದ ಭಾವನೆಯೋ ತೋರಿ ಕೊಳ್ಳಬಹುದು. ಆತ್ಮ ಚಿಂತನೆಗೆ ಅಡ್ಡಿಯಾದ ಈ ಭಾವನೆಯು ಬರಬಾರದಾಗಿತ್ತು. ಆದರೆ ಮನಸ್ಸಿನಲ್ಲಿ ಎದ್ದುಬಿಟ್ಟಿದೆ. ಏನು ಮಾಡಬೇಕು? ಆ ಭಾವನೆಯನ್ನೇ

ತೆಗೆದುಕೊಳ್ಳಿ. ಅದು ಮುಂದೆಂದೂ ತಲೆಯೆತ್ತದ ರೀತಿಯಲ್ಲಿ ಅದನ್ನು ಬೇರು ಸಹಿತವಾಗಿ ಕಿತ್ತು ಹಾಕಿ. ಹೇಗೆ? ಎಂದು ಕೇಳಬಹುದು. ರಾಗ ದ್ವೇಷಾದಿ ವೃತ್ತಿಗಳಿಗೆ ಅಜ್ಞಾನವೇ ಕಾರಣವಾದ್ದರಿಂದ ಆ ವಾಸನೆಗಳನ್ನು ಜ್ಞಾನದಿಂದಲೇ ಕಳೆಯಬೇಕು. ನಿಮಗೆ ಒಂದು ವಿಷಯದಲ್ಲಿರುವ ರಾಗವನ್ನೋ—ಅನುರಾಗವನ್ನೋ—ದ್ವೇಷವನ್ನೋ ತೆಗೆದುಕೊಳ್ಳಿ. ಆ ಭಾವನೆಯನ್ನು ಚೆನ್ನಾಗಿ ಕೆದಕಿ—ಬೆದಕಿ ನೋಡಿ; ಬಿಡಿಸಿ ನೋಡಿ. ಅದರ ನಿಜವಾದ ಕಾರಣವನ್ನು ಹುಡುಕಿ. ಹಾಗೆ ಶ್ರದ್ಧಾದರಗಳಿಂದ ಶೋಧಿಸಿದರೆ ಅಜ್ಞಾನವೇ – ಅಹಂಕಾರವೇ – ಕಾರಣವೆಂದು ತಿಳಿಯಬರುತ್ತದೆ. ನಿಜವಾಗಿರುವದು ಆತ್ಮನೊಬ್ಬನೇ—ತಾನೊಬ್ಬನೇ—ಎರಡನೆಯ ಯಾವ ವಸ್ತುವೂ ಇಲ್ಲ—ಎನ್ನುವ ತಿಳಿವಳಿಕೆ ಇಲ್ಲದಿರುವದೇ ಅಜ್ಞಾನ. ಆದ್ದರಿಂದ ನಾನಾ ರೂಪವಾದ ಪ್ರಪಂಚವು ತೋರಿಕೊಳ್ಳುತ್ತದೆ. ಒಂದೊಂದು ವಸ್ತುವಿನಲ್ಲಿ ಅನುರಾಗವೂ ಒಂದೊಂದು ವಸ್ತುವಿನಲ್ಲಿ ದ್ವೇಷವೂ ಉಂಟಾಗುತ್ತದೆ. ಈ ದೇಹವೂ ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ನಾನು—ಎನ್ನುವದೇ ಅಹಂಕಾರ. ಅಜ್ಞಾನವೇ ಅಹಂಕಾರವಾಗಿದೆ. ಮನಸ್ಸನ್ನು ಸಂಯಮ ಮಾಡುವಾಗ ಅದಕ್ಕೆ ವಿರೋಧವಾಗಿ ಏಳುವ ಎಲ್ಲಾ ವೃತ್ತಿಗಳಿಗೂ ಅಜ್ಞಾನ—ಅಹಂಕಾರಗಳೇ ಕಾರಣ. ಆ ಅಡ್ಡಿಯಾದ ಭಾವನೆಗಳನ್ನೂ ವಾಸನೆಗಳನ್ನೂ ವಿಶ್ಲೇಷಣೆ ಮಾಡಿ, ಜ್ಞಾನಬಲದಿಂದ ಅವುಗಳನ್ನು ನಿರ್ಮೂಲನ ಮಾಡಿ. ಓಂಕಾರವನ್ನು ಉಚ್ಚರಿಸುತ್ತಲೇ ಇರಿ. ಮುಂದೆಂದೂ ಈ ಭಾವನೆಗಳೂ ವಾಸನೆಗಳೂ ಸ್ವಾರ್ಥಪರವಾದ ಉದ್ದೇಶಗಳೂ ಮನಸ್ಸಿನಲ್ಲಿ ತಲೆಯೆತ್ತಲೇ ಬಾರದೆಂದು ದೃಢವಾದ ನಿಶ್ಚಯಮಾಡಿ. ಇಂಥಾ ದೃಢವಾದ ನಿಶ್ಚಯವೂ ಪ್ರಬಲ ನಿರ್ಧಾರಗಳೂ ನಿಮ್ಮಲ್ಲಿ ಉತ್ತಮವಾದ ಶೀಲವನ್ನು ರಚಿಸುವದಕ್ಕೂ ನೈತಿಕ ದೃಷ್ಟಿಯನ್ನು ಬಲಗೊಳಿಸುವದಕ್ಕೂ ಸಹಾಯವಾಗುತ್ತವೆ. ಪ್ರಪಂಚ ವ್ಯವಹಾರದಲ್ಲಿ ನೀವು ಯಶಸ್ವಿಗಳಾಗಿ ಜನಾನುರಾಗವನ್ನು ಸಂಪಾದಿಸುವದಕ್ಕೆ ನಿಮ್ಮ ನೈತಿಕ ಶಕ್ತಿಯು ಉತ್ತಮ ಸಂಪತ್ತಾಗುತ್ತದೆ.

ಧ್ಯಾನಕ್ಕೆ ಕುಳಿತಾಗ ಮನಸ್ಸಿನಲ್ಲಿ ಸುಳಿಯಬಹುದಾದ ವಾಸನೆಗಳನ್ನೂ ಭಾವನೆಗಳನ್ನೂ ನಿರ್ಮೂಲ ಮಾಡುವದಕ್ಕೇ ಅರ್ಧ ಗಂಟೆಯೋ ಹೆಚ್ಚು ಹೊತ್ತೋ ವಿನಿಯೋಗವಾಗಬಹುದು ; ಆದ್ದರಿಂದ ಮನೋವ್ಯಾಪಾರವನ್ನು ಮೀರಿದ ಅರಿವಿನ ಸ್ಥಿತಿಯಲ್ಲಿ ನೆಲೆಸುವದಕ್ಕೆ ಹೊತ್ತು ಉಳಿಯದೆ ಹೋಗಬಹುದು. ಆದರೂ ಅಡ್ಡಿಯಿಲ್ಲ; ಪರವಾಯಿಲ್ಲ. ಆ ದಿನ ಶುದ್ಧವಾದ ಅರಿವಿನ ತುರೀಯ ಸ್ಥಿತಿಯನ್ನು ಸೇರದಿದ್ದರೆ ಇನ್ನೆಂದಾದರೂ ಒಂದು ದಿನ ಅದು ಬರುತ್ತದೆ. ಆ ದಿನ ಮನಸ್ಸಿನಲ್ಲಿ ಏಳುವ ಒಂದು ಕೆಟ್ಟ ಭಾವನೆಯನ್ನು ಕಳೆದುಕೊಂಡರೆ ನಿಮ್ಮ ಶೀಲವು ಅಷ್ಟು ಬಲಗೊಳ್ಳುತ್ತದೆ. ಜೀವನದಲ್ಲಿ ಬಂದೆರಗುವ ಲೋಭಮೋಹಗಳನ್ನು ಎದುರಿಸಿ ಮೆಟ್ಟಿ ಮೀರುವ ಶಕ್ತಿಯು ಬಂದರೆ, ಮುಂದಿನ ಭವ್ಯವಾದ ಜೀವನಕ್ಕೆ ಸುಂದರವಾದ ಶೀಲವನ್ನು ಸಂಪಾದಿಸಿ

ದಂತಾಗುತ್ತದೆ. ಅಷ್ಟೇ ಸಾಕು, ಅದೇನೂ ಸಾಮಾನ್ಯ ಸಾಧನೆಯಾಗುವದಿಲ್ಲ. ಮಹತ್ವಾದ ಸಾಧನೆಯೇ ಆಗುತ್ತದೆ. ಹೀಗೆ ದಿನ ದಿನಕ್ಕೆ ನಿಮ್ಮ ಶೀಲವು ರೂಪ ಗೊಳ್ಳುವದಲ್ಲದೆ ಆತ್ಮಶಕ್ತಿಯು ಬೆಳೆಯುತ್ತದೆ. ನಿಮ್ಮ ಚಿತ್ತದ ಏಕಾಗ್ರತೆ ಯಾದರೋ ಬಂದರೆ ಬರಲಿ, ಬಾರದಿದ್ದರೆ ಇಲ್ಲ. ಕೆಲವು ಸಮಯ್ಕ ಆತ್ಮಾನುಭವಕ್ಕೆ ಅಥವಾ ಸತ್ಯವನ್ನು ಅರಿಯುವದಕ್ಕೆ ಅತಿಯಾಗಿ ಹಂಬಲಿಸುವದು ಸಹ ಕೊರತೆಯೇ— ದೌರ್ಬಲ್ಯವೇ ಆಗುತ್ತದೆ; ಆ ಸ್ಥಿತಿಯನ್ನು ಸಾಧಿಸುವದಕ್ಕೆ ಅಡ್ಡಿಯೇ ಆಗುತ್ತದೆ.

ಕೆಲ ಜನರು ಹೇಳುವದುಂಟು: "ಸ್ವಾಮೀ! ಮನಸ್ಸನ್ನು ಏಕಾಗ್ರ ಮಾಡುವದಕ್ಕೂ ಆತ್ಮಾನುಭವವನ್ನು ಪಡೆಯುವದಕ್ಕೂ ಏನಾದರೊಂದು ಸಾಧನ ಕ್ರಮವು ನಮಗೆ ಬೇಕು. ನಮಗೆ ಈ ಉಪನ್ಯಾಸಗಳೆಲ್ಲಾ ಬೇಕಾಗಿಲ್ಲ; ಪುಸ್ತಕಗಳನ್ನು ಓದುವದೂ ನಮಗೆ ಬೇಡ." ಪಾಪ! ಈ ಜನರ ತಿಳಿವಳಿಕೆ ತಪ್ಪಾದುದು. ಏಕೆಂದರೆ, ಈ ದಿವ್ಯತೆಯನ್ನೂ ಈಶ್ವರ ಪ್ರಜ್ಞೆಯನ್ನೂ ಆತ್ಮಾನು ಭವವನ್ನೂ ಪಡೆಯುವ ದಾರಿಯನ್ನು ಮುಸುಕಿರುವ ಮೋಡವೇನು? ನಿಮ್ಮನ್ನು ಅದರಿಂದ ದೂರವಾಗಿಟ್ಟಿರುವ ಅಡ್ಡಿ ಯಾವದು?— ಎಂಬಿದನ್ನು ವಿಚಾರ ಮಾಡ ಬೇಕು. ನಿಮ್ಮ ಅಜ್ಞಾನವೇ ಅಡ್ಡಿಯಾಗಿದೆ. ಅಜ್ಞಾನವೆಂದರೇನು? ಸಂಶಯಗಳು. ಭಯ ಶಂಕೆಗಳು, ತಪ್ಪು ತಿಳಿವಳಿಕೆಗಳು, ಇವುಗಳೇ ಅಜ್ಞಾನ. ಸುಳ್ಳು ಕಲ್ಪನೆಗಳು, ಪ್ರಾಪಂಚಿಕ ಭಾವನೆಗಳು, ದುಷ್ಟ ವಾಸನೆಗಳು—ಇವೇ ಅಜ್ಞಾನ. ನಿಮ್ಮ ಪ್ರಗತಿಗೆ ಪ್ರತಿ ಬಂಧಕವಾಗಿ ಮುಸುಕಿರುವ ಮೋಡಗಳೇ ಇವು. ಶ್ರದ್ಧಾದರಗಳ ಕೊರತೆಯೇ ಅಜ್ಞಾನ. ದೇವರೇ ತಾನೆಂಬದರಲ್ಲಿ ಯಾವನಿಗೆ ಸ್ವಲ್ಪವೂ ಸಂಶಯವಿಲ್ಲವೋ ಅವನು ಸಂತತವೂ ಸಮಾಧಿಯಲ್ಲಿಯೇ ಇರುತ್ತಾನೆ. ನಿಮ್ಮ ಮನಸ್ಸು ಚಪಲವಾಗಿ ತೊಳಲಾಡುತ್ತಿರುವದಕ್ಕೆ ನಿಮ್ಮ ಸಂಶಯಗಳೇ — ಶಂಕೆಗಳೇ — ಕಾರಣ. ನಿಮ್ಮ ಗುರಿಯನ್ನೂ ದಾರಿಯನ್ನೂ ಬಿಟ್ಟು ನಿಮ್ಮ ಮನಸ್ಸು ಅಲೆದಾಡುತ್ತಿರುವದಕ್ಕೆ ನಿಮ್ಮ ಸಂಶಯಭಾವನೆ, ವಿಪರೀತ ಭಾವನೆಗಳೇ ಕಾರಣ. ಈ ಅಧ್ಯಾತ್ಮ ವಿಷಯಗಳ ನ್ನೆಲ್ಲಾ ವಿಚಾರ ಮಾಡುತ್ತಿರುವವನೂ ಶೋಧಿಸುತ್ತಿರುವವನೂ ಅದಕ್ಕೆ ಸಾಧಕವಾದ ಸಾಹಿತ್ಯವನ್ನೂ ಶಾಸ್ತ್ರವನ್ನೂ ಓದುತ್ತಿರುವವನೂ ಅಭ್ಯಾಸ ಮಾಡುತ್ತಿರುವವನೂ ಮೆಲ್ಲಮೆಲ್ಲನೆ ಕ್ರಮೇಣ ತನ್ನ ಸಂಶಯಗಳನ್ನೆಲ್ಲಾ ಮೀರಿ ನಿಲ್ಲುತ್ತಾನೆ; ತನ್ನ ತಪ್ಪು ತಿಳಿವಳಿಕೆಗಳನ್ನೆಲ್ಲಾ ಜಯಿಸುತ್ತಾನೆ. ಸಾಮಾನ್ಯ ಸಾಧಕನು ಕಣ್ಣು ಮುಚ್ಚಿಕೊಂಡು, ಸುಮ್ಮನೆ ಕುಳಿತು, ಧ್ಯಾನ ಮಾಡುತ್ತಿರುವಾಗ ಯಾವ ಸ್ಥಿತಿಯಲ್ಲಿರುತ್ತಾನೋ ತತ್ತ್ವ ಜ್ಞಾನಿಯು ನಡೆಯುತ್ತಿರುವಾಗಲೂ ಮಾತನಾಡುತ್ತಿರುವಾಗಲೂ ತಿನ್ನುತ್ತಿರುವಾ ಗಲೂ ಕುಡಿಯುತ್ತಿರುವಾಗಲೂ ಅದೇ ಸ್ಥಿತಿಯಲ್ಲಿರುತ್ತಾನೆ. ಬಹು ಜನರಿಗೆ ಆ ಅಸಾಧಾರಣ ಸ್ಥಿತಿಯಲ್ಲಿರುವದಕ್ಕಿಂತಲೂ ಹೆಚ್ಚಿನ ಶಕ್ತಿಯು ತತ್ತ್ವಜ್ಞಾನಿಯ ಸಾಮಾನ್ಯವಾದ ಸಹಜ ಸ್ಥಿತಿಯಲ್ಲಿರುತ್ತದೆ.

ಓಂ! ಓಂ! ಓಂ!

# SOME OBSTACLES IN THE WAY OF SELF-REALIZATION
## (Class lecture delivered in U. S. A.)

# ಆತ್ಮಾನುಭವದ ಹಾದಿಯಲ್ಲಿರುವ ಕೆಲವು ಪ್ರತಿಬಂಧಗಳು
## (ಅಮೆರಿಕಾದಲ್ಲಿ ಬೋಧಿಸಿದ ಪಾಠಕ್ರಮದ ಉಪನ್ಯಾಸಗಳು)

My own self in these forms,

ಈ ಎಲ್ಲಾ ರೂಪಗಳಲ್ಲಿರುವ ನನ್ನ ಆತ್ಮವೇ !

ಈದಿನ ರಾಮನು ಆತ್ಮಾನುಭವದ ಮಾರ್ಗದಲ್ಲಿರುವ ಕೆಲವು ಅಡ್ಡಿ–ಆತಂಕಗಳನ್ನು ವಿಚಾರಮಾಡುತ್ತಾನೆ.

ಪ್ರಶ್ನೆ: ಕರ್ಮಕರ್ತೃವಾದ ಆತ್ಮನು (ಜೀವನು) ಬಾಧಿತನಾಗದೆ ಉಳಿಯುತ್ತಾನೆಯೇ ?

ಉತ್ತರ: ಇಲ್ಲ. ವೇದಾಂತದ ಪ್ರಕಾರ ನಿಜವಾದ ಆತ್ಮನು ಮಾಡತಕ್ಕವನೂ ಅಲ್ಲ, ಅನುಭವಿಸತಕ್ಕವನೂ ಅಲ್ಲ. ಆತ್ಮನು ಕರ್ತೃ–ಭೋಕ್ತೃವೇ ಆಗಿದ್ದರೆ ಬಾಧೆ ಹೊಂದದೇ ಇರುತ್ತಿರಲಿಲ್ಲ. ನಿಮ್ಮಲ್ಲಿರುವ ಕರ್ತೃ–ಭೋಕ್ತೃವು ತೋರಿಕೆಯ ಆತ್ಮನು ಅಥವಾ ಜೀವನು. ನಿಜವಾದ ಆತ್ಮನಲ್ಲ. ಈ ಜೀವನು ತನ್ನ ಎಲ್ಲಾ ಶಕ್ತಿಯನ್ನೂ ಜೀವ ಸತ್ತ್ವವನ್ನೂ ನಿಜವಾದ ಆತ್ಮನಿಂದಲೇ ಪಡೆಯುತ್ತಿದ್ದಾನೆ.

ಇದು ಬಹಳ ತೊಡಕಿನ –ಗಂಟಿನ–ಪ್ರಶ್ನೆ. ಈ ವಿಷಯದ ವಿವರವಾದ ವಿಚಾರದಲ್ಲಿ ತೊಡಗಿದರೆ, ಇದನ್ನು ವಿವೇಚನೆ ಮಾಡಲು ಮೂರು ಗಂಟೆಗಳ ಕಾಲವಾದರೂ ಬೇಕಾಗಬಹುದು. ಆದ್ದರಿಂದ ರಾಮನು ಒಂದು ಉದಾಹರಣೆಯಿಂದ ಅದನ್ನು ನಿರೂಪಿಸಿ ಬಿಡುತ್ತಾನೆ.

ನಿಮ್ಮ ಮನೆಯಲ್ಲಿ ಒಂದು ಮೂಲೆಯಲ್ಲಿ ಸಂಜೆಗತ್ತಲೆಯಲ್ಲಿ ಒಂದು ಹಾವನ್ನು ಕಾಣುತ್ತೀರಿ. ನೀವು ಭಯದಿಂದ ದೀಪವನ್ನು ತಂದು ಅಲ್ಲಿ ನೋಡಿದರೆ, ಅದು ಹಾವಾಗಿ ತೋರುವದಿಲ್ಲ, ಬರೀ ಹಗ್ಗವಾಗಿರುತ್ತದೆ. ಆ ತೋರಿಕೆಯ ಹಾವು ಹಗ್ಗದಲ್ಲಿಯೇ

ಇದ್ದು ತೋರಿರಬೇಕು ಎನಿಸುತ್ತದೆ. ಆದರೆ ನಿಜವಾಗಿ ಹಾವು, ಹಗ್ಗದಲ್ಲಿ ಇದ್ದು ತೋರಲಿಲ್ಲ; ಸುಳ್ಳು ತೋರಿಕೆಯ ಹಾವಿಗೆ ಹಗ್ಗವು ಆಧಾರವಾಗಿದೆ— ಎಂದು ಹೇಳುವದಕ್ಕೂ ಆಗುವದಿಲ್ಲ. ತೋರಿಕೆಯ ದೃಷ್ಟಿಯಿಂದ ಹಾವಿಗೆ ಹಗ್ಗವು ಆಧಾರವಾಗಿತ್ತು. ಆದರೆ ನಿಜವಾಗಿ, ಹಗ್ಗವು ಎಂದೂ ಹಾವಿಗೆ ಆಶ್ರಯ ಕೊಟ್ಟಿರಲಿಲ್ಲ, ಹಾವನ್ನು ಎತ್ತಿ ಹಿಡಿದಿರಲಿಲ್ಲ.

ಹೀಗೆ ಅವಿದ್ಯಾ (ಭ್ರಾಂತಿ) ದೃಷ್ಟಿಯಿಂದ ಹಾವಿಗೆ ಹಗ್ಗದ ಹೊರತು ಬೇರೆ ಆಧಾರವಿಲ್ಲ ; ಹಗ್ಗವೇ ಆಧಾರವಾಗಿದೆ. ಆದರೆ ಪರಮಾರ್ಥ (ಸತ್ಯ) ದೃಷ್ಟಿಯಿಂದ ಹಗ್ಗವು ಎಂದೆಂದೂ ಹಾವಾಗಿರಲಿಲ್ಲ. ಹಗ್ಗವು ಯಾವಾಗಲೂ ಹಗ್ಗವೇ ಆಗಿತ್ತು, ಆಗಿದೆ. ಹಾವು ತ್ರಿಕಾಲದಲ್ಲಿಯೂ ಇರಲಿಲ್ಲ. ಇದೇ ರೀತಿಯಲ್ಲಿ—ಇನ್ನೂ ಭ್ರಮೆಯಲ್ಲಿ ಸಿಕ್ಕಿಕೊಂಡಿರುವ—ಬುದ್ಧಿಯ ಮತ್ತು ವಿಜ್ಞಾನಾತ್ಮನ (ವಿಚಾರಾತ್ಮನ) ದೃಷ್ಟಿಯಿಂದ —ನಿಮ್ಮ ಎಲ್ಲಾ ಕಾರ್ಯಗಳಿಗೂ ವ್ಯಾಪಾರಗಳಿಗೂ ನಿಮ್ಮ ಎಲ್ಲಾ ಜೀವನಕ್ಕೂ ನಮ್ಮ ಎಲ್ಲಾ ಶಕ್ತಿಗಳಿಗೂ ನಿಜವಾದ ಆತ್ಮನೇ, ದೇವರೇ ಆಧಾರವಾಗಿದ್ದಾನೆ. ಪ್ರಾಪಂಚಿಕ ಭ್ರಾಂತಿಯ ದೃಷ್ಟಿಯಿಂದ ಸಮಸ್ತ ಜಗತ್ತಿಗೂ ಆತ್ಮನೇ ಆಧಾರವಾಗಿ ತೋರಿದರೂ ಪರಮಾರ್ಥ ದೃಷ್ಟಿಯಿಂದ ಆತ್ಮನು ಯಾವ ವ್ಯಕ್ತಿಗೂ ಯಾವ ವಸ್ತುವಿಗೂ ಯಾವ ಕಾರ್ಯಗಳಿಗೂ ಆಧಾರವಾಗಿಲ್ಲ. ಈ ಎಲ್ಲ ವಿಚಾರಗಳಿಂದ ಎರಡು ಪ್ರತ್ಯೇಕ ದೃಷ್ಟಿಗಳಿವೆ—ಎಂದು ಮಾತ್ರ ಹೇಳಿದರೆ ಸಾಕಾಗಬಹುದು. ವ್ಯವಹಾರ ದೃಷ್ಟಿಯಿಂದ ಪ್ರಪಂಚದ ಸೃಷ್ಟಿ—ಸ್ಥಿತಿ—ಲಯ ಇತ್ಯಾದಿ ಸಮಸ್ತ ವ್ಯಾಪಾರಗಳಿಗೂ ಆತ್ಮನೇ ಕಾರಣನು; ಎಲ್ಲವನ್ನೂ ನಡೆಸತಕ್ಕವನು ಆತ್ಮನೇ. ನೈಜವಾದ ಪರಮಾರ್ಥ ದೃಷ್ಟಿಯಿಂದ ನಿಷ್ಕ್ರಿಯನೂ ನಿತ್ಯಮುಕ್ತನೂ ಕೇವಲನೂ ಅದ್ವಿತೀಯನೂ ಆದ ಆತ್ಮನು ಏನನ್ನೂ ಮಾಡುವದಿಲ್ಲ; ಯಾವದಕ್ಕೂ ಕಾರಣನಾಗಿಲ್ಲ.

ಈಗ ನಾವು ಆತ್ಮಾನುಭವದ ಮಾರ್ಗದಲ್ಲಿರುವ ಅಂತರಾಯಗಳಲ್ಲಿ ಕೆಲವನ್ನು ತೆಗೆದುಕೊಂಡು ವಿಚಾರ ಮಾಡೋಣ. ನಾವು ಈ ವಿಷಯವನ್ನು ಕೆಲವು ದಿನಗಳಿಂದ ವಿಚಾರ ಮಾಡುತ್ತಿದ್ದೇವೆ. ಇವತ್ತು ರಾಮನು ಅನುಭವ ಮಾರ್ಗದಲ್ಲಿರುವ ಅತ್ಯಂತ ಅಪಾಯಕಾರಿಯಾದ ವಿಘ್ನಗಳಲ್ಲಿ ಒಂದನ್ನು ನಿಮ್ಮೆದುರಿಗೆ ಇಡುತ್ತಾನೆ. ಅದೇ ದೂಷಣೆ ಅಥವಾ ದೋಷಾರೋಪಣೆ; ಒಳಗಿನ ನಿಂದನೆ, ಹೊರಗಿನ ನಿಂದನೆ.

ಮೊದಲು ಹೊರಗಿನ ಟೀಕೆಯನ್ನು ತೆಗೆದುಕೊಳ್ಳೋಣ. ಏಕಾದರೂ ಆಗಲಿ, ಪರನಿಂದೆಯನ್ನು ಮಾಡುವ ಉತ್ಕಟವಾದ ಅಭ್ಯಾಸವು ಬಹಳ ಜನರಿಗೆ ಇದೆ. ಎಲ್ಲಿಯವರೆಗೆ ಇತರರನ್ನು ವಿಮರ್ಶಿಸಿ ಟೀಕಿಸುವ ಅಭ್ಯಾಸವು ನಿಮ್ಮಲ್ಲಿದೆಯೋ, ಇತರರಲ್ಲಿ ತಪ್ಪನ್ನು ಹುಡುಕುವ, ಅವರ ಕತ್ತಲಿನ ಕಡೆಯೇ ನೋಡುವ ಚಾಳಿಯು ನಿಮ್ಮಲ್ಲಿ ಇದೆಯೋ ಅಲ್ಲಿಯವರೆಗೆ ದೇವರನ್ನು ಕಾಣುವದಕ್ಕೆ ನಿಮಗೆ ಬಹಳ ಕಷ್ಟವಾಗುತ್ತದೆ.

ಇಲ್ಲಿ ಒಂದು ಮಗುವಿದೆ ಎಂದು ಇಟ್ಟುಕೊಳ್ಳಿ. ಈ ಮಗುವಿನಲ್ಲಿ ಕಳ್ಳನ ಕಲ್ಪನೆಯಿಲ್ಲ. ಆದ್ದರಿಂದ ಮಗುವಿನಲ್ಲಿ ಕಳ್ಳನು ಬಂದು ಎಲ್ಲವನ್ನೂ ಒಯ್ಯಬಹುದು. ಮಗುವಿನ ಒಳಗೆ ಕಳ್ಳನಿಲ್ಲವಾದ್ದರಿಂದ ಆದಕ್ಕೆ ಹೊರಗೂ ಕಳ್ಳನಿಲ್ಲ. ಆದ್ದರಿಂದ ನೀವು ಹೊರಗಿನ ಕಳ್ಳನನ್ನು ಕಂಡುಹಿಡಿಯಲು ಹೊರಟಾಗ ನಿಮ್ಮೊಳಗೆ ಕಳ್ಳನನ್ನು ಇಟ್ಟುಕೊಳ್ಳುತ್ತೀರಿ.

ಇತರರಲ್ಲಿ ನೀವು ತಪ್ಪುಗಳನ್ನು ಅಥವಾ ದೋಷಗಳನ್ನು ಕಂಡುಹಿಡಿಯಲು ಪ್ರಯತ್ನಮಾಡುವಾಗ ನಿಮ್ಮೊಳಗೇ ಅವುಗಳನ್ನೇ ನಿಮಗಾಗಿ ಕರೆದುಕೊಳ್ಳುತ್ತೀರಿ; ಕಲ್ಪಿಸಿಕೊಳ್ಳುತ್ತೀರಿ. ನೀವು ಇನ್ನೊಬ್ಬನಿಗೆ ಗುಂಡು ಹೊಡೆಯುವದಕ್ಕಾಗಿ ಬಂದೂಕನ್ನು ಹಾರಿಸಿದರೆ, ಬಂದೂಕು ಹಿಂದಕ್ಕೂ ಹೊಡೆಯುವದರಿಂದ ನೀವೂ ಆಘಾತವನ್ನು ಪಡೆಯುತ್ತೀರಿ. ನಿಮ್ಮ ವಿರುದ್ಧವಾದ ಪ್ರತಿಕ್ರಿಯೆಯೂ ಬಂದೂಕಿನಿಂದ ಆಗುತ್ತದೆ. ನೀವು ಇತರರಲ್ಲಿ ದೋಷವನ್ನು ತೋರಿಸಿ ದೂಷಿಸುವಾಗ ಆ ದೋಷದ ಕೆಲವು ಅಂಶವನ್ನು ನೀವೂ ಸ್ವತಃ ಪಡೆಯುತ್ತೀರಿ. ಏಕೆಂದರೆ, ಇದೇ ಪ್ರಕೃತಿ ನಿಯಮ.

Not to find fault with others is not so much to spare others as to spare yourselves.

ಇತರರಲ್ಲಿ ತಪ್ಪನ್ನು ಕಂಡುಹಿಡಿಯದೇ ಇರುವದು, ದೋಷವನ್ನು ತೋರಿಸದೇ ಇರುವದು, ಅಷ್ಟಾಗಿ ಇತರರನ್ನು ಉಳಿಸುವದಕ್ಕಾಗಿ ಇರದೆ, ನಿಮ್ಮನ್ನು ನೀವು ಉಳಿಸಿಕೊಳ್ಳುವದಕ್ಕಾಗಿಯೂ ಕಾಪಾಡಿಕೊಳ್ಳುವದಕ್ಕಾಗಿಯೂ ಇರುತ್ತದೆ. ಈ ಎಲ್ಲಾ ದೂಷಿಸುವ, ಟೀಕಿಸುವ, ಆಕ್ಷೇಪಿಸುವ, ಗುಣ—ದೋಷ ವಿಮರ್ಶನೆ ಮಾಡುವ, ತಪ್ಪನ್ನು ತೋರಿಸುವ ಮನೋಭಾವವನ್ನೂ ಆಸಕ್ತಿಯನ್ನೂ ಉತ್ಸುಕತೆಯನ್ನೂ ಅಭಿರುಚಿಯನ್ನೂ ಅಭಿರತಿಯನ್ನೂ ಮೆಟ್ಟಿ ನೀವು ಮೀರಿ ಮೇಲೇರಿ ನಿಲ್ಲಬೇಕು.

ನಿಮ್ಮ ಸ್ವಂತ ಕಣ್ಣಿನಲ್ಲಿರುವ ಕಳೆಯನ್ನು ಗೊತ್ತು ಹಚ್ಚುವದಕ್ಕಿಂತಲೂ ನಿಮ್ಮ ನೆರೆಯವನ ಕಣ್ಣಿನಲ್ಲಿರುವ ಕಸವನ್ನು ಪತ್ತೆ ಹಚ್ಚುವದು ಹೆಚ್ಚು ಸುಲಭವಾಗಿದೆ.

ದ್ವೇಷಾಸೂಯೆಗಳ ಭಾವನೆಯನ್ನೂ ದೋಷಾರೋಪಣೆಯ ಚಿಂತನೆಯನ್ನೂ ಅಥವಾ ಅವುಗಳ ಗಂಧವಿರುವ ಕಲ್ಪನೆಯನ್ನೂ ಹೊರಗೆ ಹರಿಯಬಿಡುವಾಗ ಅವೇ ಭಾವನೆಗಳನ್ನು ನೀವು ಸ್ವತಃ ವರಿಸುತ್ತೀರಿ ಎಂಬದನ್ನು ಯಾವಾಗಲೂ ನೆನಪಿನಲ್ಲಿಡಿ. ನಿಮ್ಮ ಸೋದರನ ಕಣ್ಣಿನಲ್ಲಿರುವ ಕಸದ ಕಣವನ್ನು ಕಂಡುಹಿಡಿಯುವಾಗಲೆಲ್ಲಾ ನಿಮ್ಮ ಸ್ವಂತ ಕಣ್ಣೊಳಗೆ ನೊಣವನ್ನೇ ಹಾಕಿಕೊಳ್ಳುತ್ತೀರೆಂಬದನ್ನು ಮರೆಯಬೇಡಿ.

ನಿಮ್ಮ ಮೇಲೆ ನಿಮಗೆ ಕರುಣೆಯಿದ್ದರೆ, ಪರನಿಂದೆಯನ್ನೂ ಆಪಾದನೆಯನ್ನೂ ಆಕ್ಷೇಪಣೆಯನ್ನೂ ಟೀಕೆಯನ್ನೂ ಖಂಡನೆಯನ್ನೂ ಬಿಟ್ಟುಬಿಡಬೇಕು. ನಾವು

ಇನ್ನೊಬ್ಬರಲ್ಲಿ ಯಾವ ನಡವಳಿಕೆಯನ್ನು ತಪ್ಪೆಂದು ಭಾವಿಸುತ್ತೇವೋ ಅದು ಅವರಿಗೆ ಒಳ್ಳೆಯದೇ ಆಗಿರಬಹುದು; ನಮಗೆ ಮಾತ್ರ ಅದು ಹಾನಿಕರವಾಗಬಹುದು— ಎಂಬದನ್ನು ಮರೆಯಬಾರದು. ಆದ್ದರಿಂದ ಅನ್ಯರಲ್ಲಿ ತಪ್ಪಾಗಿ ಕಾಣುವದನ್ನು ನಾವು ಬಿಟ್ಟುಬಿಡಬಹುದು; ಆ ತಪ್ಪನ್ನು ನಾವು ಮಾಡಬೇಕಾದುದಿಲ್ಲ. ಆದರೆ ಆ ತಪ್ಪಿಗಾಗಿ ನಾವು ಅವರನ್ನು ದೂಷಿಸಬೇಕಾದುದಿಲ್ಲ.

ಬೇರೆಯವರಲ್ಲಿ ತಪ್ಪನ್ನು ಹುಡುಕುವ ಸ್ವಭಾವವೂ ದೋಷ ವಿಮರ್ಶೆಮಾಡುವ ರೂಢಿಯೂ ಸಾಮಾನ್ಯವಾಗಿ ಎಲ್ಲರಲ್ಲಿಯೂ ಇದೆ. ಇದೇಕೆಂಬದು ನಿಮಗೆ ಗೊತ್ತಿದೆಯೆ? ಅದಕ್ಕೆ ಸ್ವಲ್ಪ ಒಳ್ಳೆಯ ಅಸ್ತಿಭಾರವಿದೆ.

ಜನರು ಏಕೆ ಪರನಿಂದೆ ಮಾಡುತ್ತಾರೆ? ಹಾಗೆ ನಿಂದೆ ಮಾಡತಕ್ಕವರಲ್ಲಿ ಬಹಳ ಹೆಚ್ಚಾಗಿ ನಿಂದಿಸತಕ್ಕವರು ಯಾರು? ದುರ್ಬಲರೂ ತಿಳಿವಳಿಕೆಯಿಲ್ಲದವರೂ ಯಾವಾಗಲೂ ಬಹಳ ಹೆಚ್ಚಾಗಿ ದೂಷಣೆ ಮಾಡುತ್ತಾರೆ. ಇದಕ್ಕೆ ಕಾರಣವೇನೆಂದರೆ, ಇನ್ನೊಬ್ಬರನ್ನು ದೂಷಿಸುವ ಮನೋಭಾವದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕೆಂದು ಬಯಸುತ್ತಾರೆ. ಆತ್ಮ ರಕ್ಷಣೆಯ ತತ್ತ್ವವೇ —ಸ್ವಭಾವವೇ— ಅನ್ಯರ ಗುಣದೋಷ ವಿಮರ್ಶೆಯ ರೂಪದಿಂದಲೂ ಟೀಕೆಯ ರೂಪದಿಂದಲೂ ತೋರಿಕೊಳ್ಳುತ್ತದೆ.

ಯಾವ ಕಾರ್ಯವನ್ನು ತಾನು ಮಾಡಿದರೆ ತನಗೆ ಹಾನಿಯಾಗುವದೋ ಅದನ್ನು ಇನ್ನೊಬ್ಬನು ಮಾಡಿದ್ದನ್ನು ನೋಡಿ ಒಬ್ಬನು ಆ ಕಾರ್ಯವನ್ನು ದ್ವೇಷಿಸುವದಕ್ಕೆ ತೊಡಗುತ್ತಾನೆ. ಆ ಕಾರ್ಯವನ್ನು ಅವನು ದ್ವೇಷಿಸುವದು ಅವಶ್ಯವಾದುದೇ ಸರಿ. ಏಕೆಂದರೆ ಅವನು ಹಾಗೆ ಮಾಡದಿದ್ದರೆ ಅದೇ ಕಾರ್ಯವನ್ನು ಅವನು ಮಾಡದಿರುವದಕ್ಕೆ ಆಗುವದಿಲ್ಲ. ಆ ಕಾರ್ಯವನ್ನು ತಾನು ಮಾಡದಿರಬೇಕಾದರೆ, ಹಾಗೂ ಅದರಿಂದ ಕಳಂಕಿತನೂ ಪೀಡಿತನೂ ವಿನಷ್ಟನೂ ಆಗದಿರಬೇಕಾದರೆ ಅದನ್ನು ತಿರಸ್ಕಾರ ಮಾಡಲೇಬೇಕು. ಆ ಕರ್ಮವನ್ನು ತಾನೂ ಮಾಡಬೇಕೆಂಬ ಪ್ರೇರಣೆಯ ಸೋಂಕು ತನಗೆ ಹಿಡಿಯಬಹುದೆಂಬ ಭಯದಿಂದ ಆ ಕರ್ಮವನ್ನು ಖಂಡಿಸುವ ಆವೇಶದಲ್ಲಿ ಅವನು ಕರ್ತೃವನ್ನೇ ದೂಷಿಸುತ್ತಾನೆ. ಇದರಿಂದ ಅವನು ತಾನು ಸುರಕ್ಷಿತನಾಗಿರುವದಾಗಿ ಭಾವಿಸುತ್ತಾನೆ. ಎಲ್ಲಿಯವರೆಗೆ ತಾನು ಆ ತನ್ನ ಸಹೋದರನನ್ನು ನಿಂದಿಸುತ್ತಿರುತ್ತಾನೋ ಅಲ್ಲಿಯವರೆಗೆ, ಅವನಲ್ಲಿ ಕಂಡ ದುರ್ಗುಣ—ದುಷ್ಕರ್ಮದ ಪ್ರಭಾವಕ್ಕೆ ತಾನು ಒಳಗಾಗದೆ ದೂರ ಉಳಿಯಬಹುದೆಂದು ಧೈರ್ಯಗೊಳ್ಳುತ್ತಾನೆ. ಆದರೆ ಇದು ಆ (ಪರನಿಂದೆಯ) ದುರಭ್ಯಾಸದಲ್ಲಿರುವ ಬೆಳಕಿನ ಭಾಗವನ್ನು ತೋರಿಸುತ್ತದೆ; ಮತ್ತು ಅನ್ಯರಲ್ಲಿರುವ ಗುಣ—ದೋಷ ವಿಮರ್ಶೆಯು ಅಥವಾ ದೋಷಜ್ಞತೆಯು —ಆ ದೋಷಗಳು ನಮ್ಮಲ್ಲಿ ಬರದಿರಲೆಂಬ ಎಚ್ಚರಿಕೆಗೆ ಮಾತ್ರ— ನಮ್ಮ ಅಧ್ಯಾತ್ಮ ಸಾಧನ ಸೋಪಾನಗಳ ಏರಿಕೆಯ ಒಂದು ಹಂತದಲ್ಲಿ ಅನಿವಾರ್ಯವಾಗಿ ಅತ್ಯಾವಶ್ಯಕವೆನ್ನುವಂತೆ ತೋರುತ್ತದೆ.

ಈ ಪರನಿಂದೆಯ ಚಟದಲ್ಲಿರುವ ಅಪಾಯಕರವಾದ ಕತ್ತಲೆಯ ಮುಖವನ್ನು ನಾವು ಕಡೆಗಾಣಬಾರದು. ದುರ್ಬಲ ಜನರು ತಮಗೆ ಒಪ್ಪಾಗದಿರುವ ಕೆಟ್ಟ ಕೆಲಸವನ್ನು ದೂಷಿಸುವದಕ್ಕೆ ಬದಲಾಗಿ, ಅದನ್ನು ಮಾಡುವ ಜನರನ್ನು ತಿರಸ್ಕರಿಸಲು ತೊಡಗುತ್ತಾರೆ. ಆ ಜನರ ದುಷ್ಟ ಮನೋಭಾವವನ್ನು ಆಕ್ಷೇಪಿಸಬಹುದೇ ಹೊರತು ಆ ಜನರನ್ನೇ ದ್ವೇಷಿಸುವದಕ್ಕೂ ಹೀನೈಸುವದಕ್ಕೂ ನಿಮಗೆ ಅಧಿಕಾರವಿಲ್ಲ. "ಪಾಪವನ್ನು ದ್ವೇಷಿಸಬಹುದು, ಆದರೆ ಪಾಪಿಯನ್ನು ದ್ವೇಷಿಸಬಾರದು" ಎಂಬ ಹಳೆಯ ಸೂಕ್ತಿಯಿದೆ.

ಪಾಪವನ್ನು ದ್ವೇಷಿಸಿದರೂ ಪಾಪಿಯನ್ನು ಪ್ರೇಮಿಸುವದು ವ್ಯವಹಾರ ದೃಷ್ಟಿಯಿಂದ ಹೇಗೆ ಸಾಧ್ಯ? ಹೌದು; ಅದು ಬಹಳ ಮಟ್ಟಿಗೆ ಸಾಧ್ಯ; ಚೆನ್ನಾಗಿಯೇ ಸಾಧ್ಯ. ಸರಿಯಾದ ತಿಳಿವಳಿಕೆಯಿಲ್ಲದವರಿಗೆ ಅದು ಸಾಧ್ಯವಾಗದೇ ಇರಬಹುದು. ಅದಕ್ಕೆ ಬೇಕಾಗಿರುವದೆಲ್ಲಾ ಸ್ವಲ್ಪಸರಿಯಾದ ತಿಳಿವಳಿಕೆ. ಸ್ವಲ್ಪ ಗಮನಿಸಿ; ನೀವು ಇನ್ನೊಬ್ಬರಲ್ಲಿ ದೂಷಿಸುವ ಕಾರ್ಯವನ್ನು ನೀವೇ ಮಾಡಿದ್ದರೆ ಅದು ನಿಮ್ಮ ಸಾಧನ ಮಾರ್ಗವನ್ನು ಕೆಡಿಸಿ, ನಿಮ್ಮ ಪ್ರಗತಿಯನ್ನು ತಡೆಹಿಡಿಯಬಹುದಾಗಿದ್ದರೂ ಇನ್ನೊಬ್ಬರಿಗೆ ಅದು ಹಿತವಾಗಿರಬಹುದು. ಪಾಪವು ಯಾವಾಗಲೂ ಪಾಪವೇ ಎಂದು ನೀವು ಹೇಳಬಹುದು. ಭೇದವೆಲ್ಲಿದೆ?– ಎಂದು ನೀವು ಕೇಳಬಹುದು.

ನೀವು ಕೆಲವು ವಿಶಿಷ್ಟ ಕಾರ್ಯಗಳನ್ನು ಪಾಪವೆಂದೂ ಕೆಲವನ್ನು ಪುಣ್ಯವೆಂದೂ ಕರೆಯಲು ತೊಡಗಿದರೆ ನೀವು ಆಗ ತಪ್ಪು ಮಾಡುತ್ತೀರಿ. ಸೊನ್ನೆಗೆ ಸ್ವಂತ ಬೆಲೆಯು ಹೇಗಿಲ್ಲವೋ ಹಾಗೆ ಯಾವ ಕರ್ಮವೂ ತನಗೆ ತಾನು ಪಾಪವಾಗಲೀ ಪುಣ್ಯವಾಗಲೀ ಆಗಿಲ್ಲ. ಆದರೆ ಸೊನ್ನೆಯನ್ನು ದಶಮಾಂಶ (ಸಂಖ್ಯೆಯ) ಬಿಂದುವಿನ ಬಲಗಡೆಯಲ್ಲಿ ಇಟ್ಟರೆ ಅದರ ಮೌಲ್ಯವನ್ನು ಕಡಿಮೆಮಾಡುತ್ತದೆ; ಆ ಬಿಂದುವಿನ ಎಡಗಡ್ಡೆಯಲ್ಲಿ ಇಟ್ಟರೆ, ಅದರ ಮೌಲ್ಯ ಪ್ರಮಾಣವನ್ನು ಹೆಚ್ಚಿಸುತ್ತದೆ. ಆದರೂ ಸೊನ್ನೆಗೆ ಸ್ವಂತ ಬೆಲೆ ಏನೂ ಇಲ್ಲ. ಹಾಗೆಯೇ ಯಾವ ಕರ್ಮವೂ ಸ್ವತಃ ಪುಣ್ಯವೂ ಅಲ್ಲ ಪಾಪವೂ ಅಲ್ಲ.

ಪಾಪದ ಸ್ವಭಾವವನ್ನು ನಾವು ತಪ್ಪಾಗಿ ತಿಳಿದುಕೊಂಡಿರುವದರಿಂದ ಪಾಪವನು ದ್ವೇಷಿಸಿದರೂ ಪಾಪಿಯನ್ನು ಪ್ರೇಮಿಸುವದು ನಮಗೆ ಕಷ್ಟವಾಗಿದೆ. ತಮ್ಮದೇಹವನ್ನೂ ಭೋಗ ಭಾಗ್ಯಗಳನ್ನೂ ಮಹತ್ತಾಗಿ ಭಾವಿಸುವ ಜನರು ಅದರ ವೃದ್ಧಿ–ಸಮೃದ್ಧಿಗಳಿಗಾಗಿ ದೇವರನ್ನು ಸಗುಣ ಸಾಕಾರವಾಗಿ ವರ್ಣಿಸುತ್ತಾರೆ, ಸ್ತುತಿಸುತ್ತಾರೆ. ಜನರ ಈ ಬಗೆಯ ಅಜ್ಞ ಮನೋಭಾವವೇ ಕೆಲವು ಕರ್ಮಗಳನ್ನು ಪಾಪಕರವೆಂದೂ ಕೆಲವನ್ನು ಪುಣ್ಯಮಯವೆಂದೂ ಮುದ್ರೆಹಾಕುವದಕ್ಕೆ ಮುಂದೊಯ್ಯುತ್ತದೆ. ಧರ್ಮವೂ ಪುಣ್ಯವೂ ಹೃದಯಕ್ಕೆ ಸಂಬಂಧ ಪಟ್ಟಿರುವದರಿಂದ ಪಾಪವೂ ಹಾಗೆಯೇ ಎಂಬದನ್ನು ನೆನಪಿನಲ್ಲಿಡಿರಿ. ಪುಣ್ಯಪಾಪಗಳು ಒಟ್ಟಿನ ಮೇಲೆ ಸಮಾಜದಲ್ಲಿಯ ನಿಮ್ಮ ಸ್ಥಾನಕ್ಕೂ ಮನೋಭಾವಕ್ಕೂ ಮುಖ್ಯವಾಗಿ ಸಂಬಂಧಪಟ್ಟಿವೆ.

ಮನಸ್ಸನ್ನು ಸುಧಾರಣೆ ಮಾಡಬೇಕೇ ಹೊರತು ದೇಹವನ್ನಲ್ಲ. ಮನಸ್ಸನ್ನು ಪುನರುಜ್ಜೀವನಗೊಳಿಸಬೇಕಾಗಿದೆ. ನಿಮ್ಮ ಹೊಸ ಬಾಳು ಚೈತನ್ಯದಿಂದ ಹೊರ ಹೊಮ್ಮಬೇಕಾಗಿದೆ. "ನೀನು ಒಂದು ಹಿಡಿ ಮಣ್ಣು ಹುಡಿಯಾದುದರಿಂದ ಮಣ್ಣು ಧೂಳಿಗೇ ಮರಳಬೇಕು"—ಎನ್ನುವ ಮಾತನ್ನು ಆತ್ಮನಿಗೆ ಹೇಳಿಲ್ಲವೆನ್ನುವಂತೆ "ಚೈತನ್ಯ ದಿಂದ ನಿಮ್ಮ ಪುನರ್ಜನ್ಮವಾಗಬೇಕು; ಪುನರುಜ್ಜೀವನವಾಗಬೇಕು". ಎನ್ನುವ ಮಾತನ್ನು ದೇಹದ ವಿಷಯದಲ್ಲಿ ಹೇಳತಕ್ಕದ್ದಲ್ಲ.

ಉದಾಹರಣೆಗೆ, ನಿಮ್ಮ ಮನೆಯಲ್ಲಿ ಒಂದು ಮಗುವು ತಾಯಿಯ ಎದೆಯ ಹಾಲನ್ನು ಕುಡಿಯುತ್ತಿರಬಹುದು; ಆದರೆ ನೀವು ಈ ಪ್ರೌಢವಯಸ್ಸಿನಲ್ಲಿ ತಾಯಿಯ ಸ್ತನ್ಯಪಾನ ಮಾಡಿದರೆ ಹಿತವೂ ವಿಹಿತವೂ ಆಗಬಹುದೆ? ಅದು ತಪ್ಪಾಗುತ್ತದೆ. ಮಗುವಿಗೆ ಅದು ಒಳ್ಳೆಯದೇ, ಅಗತ್ಯವೇ, ಆದರೆ ನಿಮಗಲ್ಲ. ತರುಣರು ತಾಯಿಯ ಹಾಲಿನಿಂದ ಬದುಕಿರುವದು ಪಾಪವೇ ಸರಿ; ಆದರೆ ಮಗುವಿಗೆ ಅದು ಪಾಪವಲ್ಲ. ನಿಮಗೆ ಅನುಚಿತವಾದ ಕಾರ್ಯವನ್ನು ಮಗುವು ಮಾಡಿದ ಮಾತ್ರಕ್ಕೆ ನೀವು ಮಗುವನ್ನು ದ್ವೇಷಿಸುವಂತೆ ಅದು ಮಾಡುತ್ತದೆಯೆ? ನೀವು ಅದನ್ನು ಮಾಡಿದರೆ ಪಾಪವಾಗ ಬಹುದು; ಆದ್ದರಿಂದ ಆ ಪಾಪವನ್ನು—ಬೆಳೆದವರು ಸ್ತನ್ಯಪಾನ ಮಾಡುವದನ್ನು — ದ್ವೇಷಿಸುತ್ತೀರಿ, ಆದರೆ ಆ ಪಾಪಿಯನ್ನಲ್ಲ.

ಮಗುವಿಗೆ ಯಾವದು ಪಾಪವಲ್ಲವೋ ನಿಮಗದು ಪಾಪ; ಆದ್ದರಿಂದ ನಿಮಗೆ ಪಾಪವಾದುದನ್ನು ನೀವು ದ್ವೇಷಿಸಿದರೂ ಮಗವನ್ನು ಪ್ರೀತಿಸುತ್ತೀರಿ. ನಿಮ್ಮ ದೃಷ್ಟಿ ಯಿಂದ ಯಾವದು ಪಾಪವೋ ಮಗುವಿನ ದೃಷ್ಟಿಯಿಂದ ಅದು ಪಾಪವಲ್ಲ. ಪ್ರಪಂಚ ದಲ್ಲಿ ನಾವು ಪಾಪವೆಂದು ತಿಳಿದಿರುವ ಎಲ್ಲಾ ಕ್ರಿಯೆಗಳ ವಿಷಯವೂ ಹೀಗೆಯೇ ಎಂಬ ದನ್ನು ನೆನಪಿನಲ್ಲಿಡಿ. ಯಾವ ಕಾರ್ಯಗಳನ್ನೂ ಕ್ರಿಯೆಗಳನ್ನೂ ನೀವು ಮಾಡಿದರೆ ನಿಮಗೆ ಹಾನಿಕರವೂ ಪಾಪಕರವೂ ಆಗುವದೋ ಅಂಥಾ ಕಾರ್ಯಗಳನ್ನು ಅತ್ಯಂತ ಹೇಯವಾದ ಪಾಪವೆಂದು ಉಪೇಕ್ಷಿಸಿರಿ, ನಿಂದಿಸಿರಿ, ಖಂಡಿಸಿರಿ, ಅವುಗಳನ್ನು ನೀವು ಮಾಡಲು ಹೇಸಿರಿ. ಆದರೆ ಅವೇ ಕಾರ್ಯಗಳನ್ನು ಬೇರೆಯವರು ಮಾಡಿದರೆ ಅವ ರನ್ನು ದ್ವೇಷಿಸಬೇಡಿ, ತಿರಸ್ಕರಿಸಬೇಡಿ. ಅವರ ವಿಷಯದಲ್ಲಿ ತಪ್ಪು ಅಭಿಪ್ರಾಯ ಪಡಲು ನಿಮಗೆ ಅಧಿಕಾರವಿಲ್ಲ.

ಸಾಡಿ (Sadi) ಎನ್ನುವ ಒಬ್ಬ ಮಹಾ ಲೇಖಕನು ಪರ್ಷಿಯನ್ ಭಾಷೆಯಲ್ಲಿ ಪ್ರಸಿದ್ಧನಾಗಿದ್ದನು. ಅವನ ಕೃತಿಗಳನ್ನೆಲ್ಲಾ ವಿಖ್ಯಾತ ಎಮರ್‌ಸನ್‌ನು ಆಂಗ್ಲಭಾಷೆಗೆ ಪರಿವರ್ತನೆ ಮಾಡಿದ್ದಾನೆ. ಅವನು ತಾನು ಬಾಲಕನಾಗಿದ್ದಾಗ ಪೈಗಂಬರ್ ಮಹಮ್ಮದ್‌ನ ಪವಿತ್ರ ಕ್ಷೇತ್ರವಾದ ಮೆಕ್ಕಾ ಪಟ್ಟಣಕ್ಕೆ ತಾನು ಹೋಗುತ್ತಿದ್ದನೆಂದು ಬರೆದಿದ್ದಾನೆ. ಅಂಥ ಯಾತ್ರಿಕರ ಸಂಘದಲ್ಲಿದ್ದ ಪ್ರತಿಯೊಬ್ಬರೂ ಮಧ್ಯರಾತ್ರಿಯಲ್ಲಿ

ನಿದ್ರೆಯನ್ನು ಬಿಟ್ಟೆದ್ದು ಎಚ್ಚರವಾಗಿ ಪ್ರಾರ್ಥನೆ ಮಾಡಬೇಕೆಂಬ ಪದ್ಧತಿಯ ನಿಯಮವೂ ಇತ್ತು. ಒಂದು ರಾತ್ರಿ, ಆ ಪ್ರಕಾರ, ನಾಡಿಯೂ ಅವನ ತಂದೆಯೂ ಅರ್ಧರಾತ್ರಿಯಲ್ಲಿ ಎದ್ದು ಪ್ರಾರ್ಥನೆಯನ್ನು ಸಲ್ಲಿಸಿದರು. ಆದರೆ ಆ ಮಂಡಳಿಯಲ್ಲಿ ಕೆಲವರು ಏಳಲೇ ಇಲ್ಲ. ಅವರು ಮಲಗಿ ನಿದ್ರೆ ಮಾಡುತ್ತಿದ್ದರು. ಸಾಡಿಯು ಅವರನ್ನೆಲ್ಲಾ ತೋರಿಸಿ ತನ್ನ ತಂದೆಯಲ್ಲಿ ಆಕ್ಷೇಪಿಸುತ್ತಾ "ನೋಡಪ್ಪಾ ! ಇವರೆಲ್ಲಾ ಎಷ್ಟು ಸೋಮಾರಿಗಳೂ ಅಪ್ರಯೋಜಕರೂ ಆಗಿದ್ದಾರೆ. ಒಬ್ಬರೂ ಏಳಲಿಲ್ಲ; ಪ್ರಾರ್ಥನೆ ಮಾಡಲಿಲ್ಲ" ಎಂದನು. ಅದಕ್ಕೆ ತಂದೆಯು "ಓ ! ಸಾಡಿ ! ವತ್ಸ ! ನೀನು ಎದ್ದು ಪ್ರಾರ್ಥನೆ ಮಾಡಿಯೂ ಅವರಲ್ಲಿ ತಪ್ಪನ್ನು ತೋರಿಸಿ ಆಕ್ಷೇಪಿಸುವದಕ್ಕಿಂತಲೂ ನೀನೂ ಅವರಂತೆಯೇ ಮಲಗಿ ನಿದ್ರಿಸಿ ಪ್ರಾರ್ಥನೆ ಸಲ್ಲಿಸದೇ ಇದ್ದಿದ್ದರೆ ಹೆಚ್ಚು ಉತ್ತಮವಾಗುತ್ತಿತ್ತು. ಪ್ರಾರ್ಥನೆ ಮಾಡದೆ ದೇವರನ್ನು ಪೂಜಿಸದೇ ಇರುವದಕ್ಕಿಂತಲೂ ಇದು ಕನಿಷ್ಠವಾದ ಪಾಪ" ಎಂದನು.

ನೀವು ಯಾವದಾದರೂ ಬಹಳ ಹೆಚ್ಚಿನ ದಾನಧರ್ಮಗಳನ್ನು ಮಾಡಿರಬಹುದು; ಬೇರೆಯವರು ಮಾಡದಿರುವದನ್ನು ನೀವು ಮಾಡಿರಬಹುದು. ಇದರಿಂದ ನಿಮಗೆ ಬಹಳ ಹೆಮ್ಮೆಯೂ ಉತ್ಸಾಹವೂ ಉಬ್ಬುವಿಕೆಯೂ ಉಂಟಾಗಿ ನಿಮ್ಮ ನೆರೆಹೊರೆಯವರಲ್ಲಿ ನೀವು ದೋಷಾರೋಪಣೆ ಮಾಡಿದರೆ ನೀವು ಪುಣ್ಯವನ್ನು ಸಂಪಾದಿಸಿದಂತೆ ಆಯಿತೆ? ಅಥವಾ ದೇವರಿಗೆ ನೀವು ಹೆಚ್ಚು ಸಮೀಪರಾದಿರಾ? ಇಲ್ಲ; ನೀವು ಸುಮ್ಮನೆ ಒಂದು ಬಗೆಯ ಪಾಪವನ್ನು ಇನ್ನೊಂದು ಬಗೆಯ ಪಾಪಕ್ಕಾಗಿ ಬದಲಾಯಿಸಿಕೊಂಡಂತೆ ಆಗುತ್ತದೆ ಅಷ್ಟೆ. ನೀವು ಬಿಟ್ಟಿರುವ ಕೆಟ್ಟ ಕೆಲಸಗಳನ್ನು ಚಿಲ್ಲರೆ ತಾಮ್ರದ ಪೈಸಾಗಳಿಗೆ ಹೋಲಿಸಬಹುದು. ನಾವು ಕೆಲವು ಸಮಯ ಚಿಲ್ಲರೆ ಪೈಸಾಗಳನ್ನು ಕೊಟ್ಟು ಆ ಬೆಲೆಗೆ ಸರಿಯಾದ ಬೆಳ್ಳಿಯ ನಾಣ್ಯವನ್ನು ತೆಗೆದುಕೊಳ್ಳುತ್ತೇವೆ. ಪರನಿಂದೆಯನ್ನು ಬೆಳ್ಳಿಯ ನಾಣ್ಯಕ್ಕೆ ಹೋಲಿಸಬಹುದು. ಇತರರಲ್ಲಿ ತಪ್ಪನ್ನು ಹುಡುಕುವ, ಆಕ್ಷೇಪಿಸುವ ಮನೋಭಾವವೇ ಇದು. ಮೊದಲು ನಿಮ್ಮಲ್ಲಿ ಒಂದು ನೂರು ದುರ್ವ್ಯಸನಗಳೂ ದುರ್ಗುಣಗಳೂ ದುಷ್ಕೃತಿಗಳೂ ಇದ್ದಿರಬಹುದು; ಆದರೆ ಈಗ ನಿಮ್ಮಲ್ಲಿ ಒಂದೇ ಒಂದು ದುರಭ್ಯಾಸ (ಕೆಟ್ಟ ಚಟ) ಉಳಿದಿದೆ. ಇದೇ ಪರದೂಷಣೆ. ಚಿಲ್ಲರೆಯನ್ನು ಕೊಟ್ಟು ಗಟ್ಟಿಯನ್ನು ತೆಗೆದುಕೊಂಡಂತೆ ಬೇರೆ ಅನೇಕ ಚಿಲ್ಲರೆ ಪಾಪಗಳನ್ನು ನೀವು ಬಿಟ್ಟಿದ್ದರೂ ಆ ಎಲ್ಲವುಗಳಿಗೂ ಸಮಬೆಲೆಯಾಗುವ ಅಥವಾ ತಲೆಬೆಲೆಯಾಗುವ ಪರನಿಂದೆಯೆಂಬ ಗಟ್ಟಿಯಾದ ಒಂದು ಮಹಾ ಪಾಪವನ್ನು ಉಳಿಸಿಕೊಳ್ಳುತ್ತೀರಿ. ಅದರಿಂದ ಅದೇನೂ ನಿಮ್ಮನ್ನು ನಿಜವಾದ ತ್ಯಾಗಕ್ಕೆ ಹೆಚ್ಚು ಸಮೀಪ ಒಯ್ಯಲಾರದು.

ಇದುವರೆಗೆ ಜಗತ್ತು ಇತರರ ಗುಣದೋಷ ವಿಮರ್ಶೆ ಮಾಡುವ, ಆಕ್ಷೇಪಿಸುವ ಮತ್ತು ಖಂಡಿಸುವ ಮನೋಭಾವವನ್ನು ಹೇಯವಾದ ಪಾಪವನ್ನಾಗಿ ಎಣಿಸಿರದಿದ್ದರೆ

ಅಂಥಾ ಜಗತ್ತು ನಿಂದ್ಯವೇ ಸರಿ. ಆದರೆ ಅನುಭವವೂ ತೋರಿಸುವದೇನೆಂದರೆ—ಒಬ್ಬ ಮನುಷ್ಯನು ಮಾಡುವ ಕೆಲಸಗಳು ಲೋಕದೃಷ್ಟಿಯಿಂದ ಧಾರ್ಮಿಕವಾಗಿಲ್ಲ ದಿರಬಹುದು; ಅಥವಾ ತಪ್ಪಾಗಿಯೇ ಇರಬಹುದು. ಆದರೆ ಅವನ ಹೃದಯವು ಪ್ರೇಮಳವಾಗಿಯೂ ಮನಸ್ಸು ಕೋಮಲವಾಗಿಯೂ ಸೌಮ್ಯವಾಗಿಯೂ ಆತ್ಮವು ದಯಾಮಯವಾಗಿಯೂ ಮಾತು ಮೃದು ಮಧುರವಾಗಿಯೂ ಇದ್ದರೆ, ಅವನು ಸ್ವರ್ಗ ಸಾಮ್ರಾಜ್ಯಕ್ಕೂ ದೇವರಿಗೂ ಬೇರೆ ತತ್ತ್ವಜ್ಞಾನಿಗಳಿಗಿಂತಲೂ ಹೆಚ್ಚು ಸಮೀಪ ವಾಗಿರುತ್ತಾನೆ.

ಫಿಲಿಸ್ಟೈನ್ ಜನರು ಧರ್ಮ ಕರ್ಮಗಳಲ್ಲಿ ಬಹಳ ಶ್ರದ್ಧೆಯುಳ್ಳವರಾಗಿದ್ದಾ ರೆಂದು ಬೈಬಲ್‌ನಲ್ಲಿ ಹೇಳಿದೆ. ಇವರು ದಕ್ಷಿಣ ಪ್ಯಾಲೆಸ್‌ಟೈನಿನಲ್ಲಿ ಯೆಹೂದ್ಯರನ್ನು ಕಾಡಿದ ಯುದ್ಧ ಪ್ರಿಯರಾದ ಒಂದು ಅನ್ಯ ಜನಾಂಗದ ಪ್ರಜೆ. ಇವರು ಶುಷ್ಕ ಹೃದಯವುಳ್ಳವರೂ ಸಂಸ್ಕೃತಿ ವೈರಿಗಳೂ ಅರಸಿಕರೂ ಕೇವಲ ಪ್ರಾಪಂಚಿಕರೂ ಆಗಿದ್ದರು. ಆದರೂ ಇವರು, ಧರ್ಮವೆಂದು ಭಾವಿಸಲ್ಪಟ್ಟ ಸಾಂಪ್ರದಾಯಿಕ ಆಚಾರ ವನ್ನು ನಡೆಸುತ್ತಿದ್ದರು. ಆದರೆ ಇವರಲ್ಲಿ ಕೋಮಲವೂ ಪ್ರೇಮಳವೂ ಕರುಣಾ ಮಯವೂ ಆದ ಸ್ವಭಾವವು ಇರಲಿಲ್ಲ. ಇತರರಲ್ಲಿ ತಪ್ಪನ್ನು ಕಂಡು ಹಿಡಿಯುವ, ದೋಷಾರೋಪಣೆ ಮಾಡುವ ಮನೋಭಾವವೂ ಆಸಕ್ತಿಯೂ ಇವರಲ್ಲಿ ಇತ್ತು. ಆದ್ದರಿಂದ ಇವರು, ಮೇರಿ ಮ್ಯಾಗ್‌ಡೆಲೀನ್ (Mary Magdalene) ಳಿಗಿಂತಲೂ ಕ್ರಿಸ್ತನಿಗೆ ಹೆಚ್ಚು ದೂರವಾದರು. ಆಕೆಯು ಪರಿಶುದ್ಧ ಚರಿತ್ರಳಲ್ಲ ವೆಂದೂ ವ್ಯಭಿಚಾರಿಣಿಯೆಂದೂ— ಆ ಕಾಲದ ಆ ಸಮಾಜದ ಪದ್ಧತಿಯ ಪ್ರಕಾರ— ಜನರು ಆಕೆಯನ್ನು ಕೊಲ್ಲಬೇಕೆಂದು ಕಲ್ಲು ಹೊಡೆಯುತ್ತಾ ಅಟ್ಟಿಸಿಕೊಂಡು ಬರಲು ಆಕೆಯು ಓಡಿಹೋಗಿ ಕ್ರಿಸ್ತನಲ್ಲಿ ಶರಣಾಗತಳಾದಾಗ ಕ್ರಿಸ್ತನು ಆಕೆಗೆ ಅಭಯದಾನ ನೀಡಿ ಜನರ ಉಪದ್ರವದಿಂದ ರಕ್ಷಣೆ ಮಾಡಿದ್ದನು. ಕ್ರಿಸ್ತನ ತಾಯಿ (ಮೇರಿ)ಯಂತೆ ಈ ಮೇರಿಯು (ಮ್ಯಾಗ್‌ಡೇಲೀನಳು) ನಿಷ್ಕಳಂಕಳಾಗಿ ( Immaculate ) ಇರ ಲಿಲ್ಲವಾದರೂ ಆಕೆಯಲ್ಲಿ ಪರನಿಂದೆ ಮಾಡುವ ದೋಷವಿರಲಿಲ್ಲವಾದ್ದರಿಂದಲೂ ಪ್ರೇಮಳ ಸ್ವಭಾವದವಳಾಗಿದ್ದರಿಂದಲೂ ಫಾರಿಸೀಗಳಿಗಿಂತಲೂ ಸತ್ಯಕ್ಕೂ ಸ್ವರ್ಗ ಸಾಮ್ರಾಜ್ಯಕ್ಕೂ ಆಕೆಯು ಹೆಚ್ಚು ಸಮೀಪಳಾಗಿದ್ದಳು. ಫಾರಸೀ ಜನರು ಲಿಖಿತ ವಾದ ಧರ್ಮ ಶಾಸ್ತ್ರವನ್ನು ಕಟ್ಟು ನಿಟ್ಟಾಗಿ ಅನುಸರಿಸುತ್ತಿದ್ದ ಕರ್ಮಠರೂ ಸಂಪ್ರ ದಾಯ ಶರಣರೂ ಡಾಂಭಿಕರೂ ಆಚಾರ ಶೀಲ ಪವಿತ್ರತೆಯ ಅಹಂಭಾವವುಳ್ಳವರೂ ಆಗಿದ್ದ ಪುರಾತನ ಯೆಹೂದಿಗಳಾಗಿದ್ದರು. ಪರ ದೂಷಣೆ ಮಾಡುವ ದೋಷವೂ ಇವರಲ್ಲಿದ್ದುದರಿಂದ ಆಚಾರಶೀಲರಾದ ಆ ದುರಭಿಮಾನಿಗಳಿಗಿಂತಲೂ ಮೇರಿಯು ದುರಾಚಾರಿ ಎನಿಸಿದ್ದರೂ ಕೋಮಲ ಸ್ವಭಾವದವಳಾದುದರಿಂದ ಕ್ರಿಸ್ತನ ಅನುಗ್ರಹಕ್ಕೆ ಪಾತ್ರಳಾದಳು.

ಲೀಹಂಟ್ ( Lee Hunt ) ಎಂಬ ಕವಿಯು ಬರೆದಿರುವ ಒಂದ ಪದ್ಯದಲ್ಲಿ ಈ ಭಾವನೆಯು ಬಹಳ ಸ್ಪಷ್ಟವಾಗಿ ಬಂದಿದೆ :

ಅರಬ್ಬೀ ದೇಶದಲ್ಲಿ ಮಹಮ್ಮದೀಯ ಮುಖಂಡನಾದ ಒಬ್ಬ ಷೇಕ್ ಇದ್ದನು. ಅವನಿಗೆ ಒಂದು ರಾತ್ರಿ ಒಂದು ದಿವ್ಯ ದರ್ಶನವಾಯಿತು. ಅದರಲ್ಲಿ ಒಬ್ಬ ದೇವತಾ ಪುರುಷನು ಏನನ್ನೋ ಬರೆಯುತ್ತಿದ್ದುದನ್ನು ಆ ಷೇಕ್ ಅಬುಬೆನ್ ಆದಿಮನು ಕಂಡನು. "ದೇವ ! ಏನನ್ನು ಬರೆಯುತ್ತಿದ್ದಿ ?" ಎಂದು ಷೇಕನು ಕೇಳಿದನು. ಆ ದೇವನು "ದೇವರಿಗೆ ಅತ್ಯಂತ ಸಮೀಪವಾಗಿಯೂ ಪ್ರಿಯವಾಗಿಯೂ ಶ್ರೇಷ್ಠವಾಗಿಯೂ ಇರುವ ಆರಾಧಕರ ಹೆಸರುಗಳನ್ನು ಬರೆಯುತ್ತಿದ್ದೇನೆ" ಎಂದು ಹೇಳಿದನು. ಷೇಕನು ಖಿನ್ನ ನಾಗಿ ತಲೆ ತಗ್ಗಿಸಿ "ಬೇರೆಯವರಂತೆ ನಾನೂ ದೇವರ ಅರ್ಚಕನಾಗಿದ್ದರೆ ಚೆನ್ನಾಗಿತ್ತು. ನಾನೆಂದೂ ಪ್ರಾರ್ಥನೆ ಮಾಡುವದಿಲ್ಲ; ಉಪವಾಸಮಾಡುವದಿಲ್ಲ; ದೇವಾಲಯಕ್ಕೆ ಹೋಗುವದಿಲ್ಲ; ನಾನು ಬಹಿಷ್ಕರಿಸಲ್ಪಡುವದರಿಂದ ಸ್ವರ್ಗ ಸಾಮ್ರಾಜ್ಯವನ್ನು ನಾನೆಂದೂ ಪ್ರವೇಶಿಸುವದಕ್ಕೆ ಆಗುವದೇ ಇಲ್ಲ. ಅಯ್ಯೋ !" ಎಂದನು. ಆ ದೇವನು "ಅದಕ್ಕೆ ನಾನೇನೂ ಮಾಡಲಾರೆ" ಎಂದನು. ಅದಕ್ಕೆ ಷೇಕನು "ದೇವ ರನ್ನು ಪ್ರೀತಿಸದೆ, ಮನುಷ್ಯರನ್ನೂ ಪ್ರಪಂಚವನ್ನೂ ಪ್ರೀತಿಸತಕ್ಕವರ ಹೆಸರುಗಳ ಪಟ್ಟಿಯನ್ನು ನೀನು ಎಂದಾದರೂ ಬರೆಯುವದುಂಟೆ? ಹಾಗಾದರೆ ನನ್ನನ್ನು ಮಾನವನ ಆರಾಧಕನೆಂದು ಹೆಸರಿಸಬಹುದು, ಎಂದು ಆ ದೇವದೂತನನ್ನು ಪುನಃ ಪ್ರಶ್ನೆ ಮಾಡಿ ಬಿನ್ನವಿಸಿದನು. ಆ ದಿವ್ಯ ಪುರುಷನು ಅಂತರ್ಧಾನನಾದನು. ಆ ಷೇಕನಿಗೆ ಆ ರಾತ್ರಿಯೇ ಸ್ವಲ್ಪ ಹೊತ್ತಾದ ಮೇಲೆ, ಇನ್ನೊಂದು ದೃಶ್ಯವು ತೋರಿತು. ಅದರಲ್ಲಿ ಅದೇ ದಿವ್ಯಪುರುಷನು ಆ ಪುಸ್ತಕವನ್ನೇ ಹಿಡಿದು ಬಂದಿದ್ದನು. ಅವನು ಅದರಲ್ಲಿ ಪುಟ ಗಳನ್ನು ತಿರುವಿ ತಿರುವಿ ಹಾಕಿ ಪರಿಶೋಧಿಸಿದ ಮೇಲೆ ಷೇಕನು ಅವನನ್ನು ಪುನಃ ವಿಚಾರ ಮಾಡಿದನು. ಅದಕ್ಕೆ ಆ ದೇವಪುರುಷನು ದೇವರಿಗೆ ಅತ್ಯಂತ ಪ್ರಿಯರಾದ ಭಕ್ತರ ಹೆಸರುಗಳನ್ನು, ಅವರ ಯೋಗ್ಯತೆಯ ತಾರತಮ್ಯದ ಮೇಲೆ ಕ್ರಮವಾಗಿ ಬರೆದು ಪವಿತ್ರವಾದೊಂದು ಪಟ್ಟಿಯನ್ನು ತಯಾರಿಸುತ್ತಿರುವದಾಗಿ ಹೇಳಿ ಅದನ್ನು ಷೇಕನಿಗೆ ತೋರಿಸಿದನು. ಆಹಾ ! ಆಶ್ಚರ್ಯ ! ತಾನು ಕೇವಲ ಮಾನವ ಭಕ್ತ ನೆಂದು ಹೇಳಿಕೊಂಡಿದ್ದ ಷೇಕನ ಹೆಸರು, ದೇವರ ಮಹಾ ಭಕ್ತರ ಹೆಸರುಗಳ ಪಟ್ಟಿಯಲ್ಲಿ ತಲೆಯ ಮೇಲೆ ಮೊಟ್ಟ ಮೊದಲನೆಯದಾಗಿಯೇ ಬರೆದಿದ್ದಿತು.

ಇದು ವಿಲಕ್ಷಣವಲ್ಲವೆ? ಇಲ್ಲ; ಇದು ಬಹಳ ವಾಸ್ತವ. ನೀವು ಮಾನವನನ್ನು ಆರಾಧಿಸಿದರೆ, ಅಥವಾ ಮನುಷ್ಯನನ್ನು ನೀವು ಮನುಷ್ಯನನ್ನಾಗಿ ಕಾಣದೆ, ದೇವರನ್ನಾಗಿ ಕಂಡರೆ, ಪ್ರತಿಯೊಂದನ್ನೂ ನೀವು ದೇವರಾಗಿ ಕಂಡು, ಮನುಷ್ಯನನ್ನು ದೇವರೆಂದು ಪೂಜಿಸಿದರೆ, ಆಗ ನೀವು ದೇವರನ್ನೇ ಪೂಜಿಸಿದಂತಾಗುತ್ತದೆ.

ಮನುಷ್ಯರಲ್ಲಿ ತಪ್ಪನ್ನು ಹುಡುಕುವ, ಟೀಕಿಸುವ, ಖಂಡಿಸುವ, ನಿಂದಿಸುವ ಪ್ರವೃತ್ತಿಯು ದೇವರ ಪೂಜೆಯಲ್ಲ. ದಾನ ಧರ್ಮಗಳು ದೇವರ ಪೂಜೆಯಲ್ಲ. ಹೊರಗೆ ಅವನಿಗಾಗಿ ತಂದೆ ತಾಯಿಗಳು ಕಾದಿದ್ದಾರೆಂದು ಕ್ರಿಸ್ತನಿಗೆ ಜನರು ಹೇಳಿದರು. ಕ್ರಿಸ್ತನು ಜನಸ್ತೋಮದ ಕಡೆ ತೋರಿಸಿ "ಇಗೋ! ನನ್ನ ತಂದೆ ತಾಯಿಗಳನ್ನು ನೋಡಿ, ಅವರನ್ನು ನಿಮ್ಮಂತೆಯೇ ಕಾಣಿರಿ" ಎಂದನು.

ನಿಮ್ಮಲ್ಲಿಯೇ ನಿಮಗೆ ಎಷ್ಟೋ ತಪ್ಪುಗಳು ಕಾಣಬಹುದು. ಆದರೂ ನಿಮ್ಮನ್ನು ನೀವು ದ್ವೇಷಿಸುವದಿಲ್ಲ. ನಿಮ್ಮ ಮಿತ್ರರಲ್ಲಿ ನೀವು ತಪ್ಪುಗಳನ್ನು ಕಂಡರೆ, ಅವುಗಳಿಂದ ದೂರವಿರುವದಕ್ಕೆ ನೀವು ಪ್ರಯತ್ನ ಮಾಡಿ; ಆದರೆ ಅವರನ್ನು ದ್ವೇಷಿಸಬೇಡಿ. ಅವರಲ್ಲಿರುವ ದೇವತ್ವವನ್ನು ಗುರುತಿಸಿ, ಅವರನ್ನು ದೇವರೆಂದೇ ತಿಳಿಯಿರಿ.

ಸರಕಾರದ ಉದ್ಯೋಗದಲ್ಲಿರುವ ಒಬ್ಬ ಮನುಷ್ಯನು ತನ್ನ ಕೆಲಸವನ್ನು ಕೈಬಿಟ್ಟು ರಾಜ್ಯಾಧ್ಯಕ್ಷರ ಸಮೀಪದಲ್ಲಿ ಕಾಲ ಕಳೆದರೆ ಅವನನ್ನು ಆ ಉದ್ಯೋಗದಲ್ಲಿ ಉಳಿಸಿ ಕೊಳ್ಳುತ್ತಾರೆಯೇ? ಎಂದಿಗೂ ಇಲ್ಲ.

ರಾಜ್ಯಾಧಿಕಾರದಲ್ಲಿ ನಿಮಗಿರುವ ಉದ್ಯೋಗವನ್ನೇ ದೇವರೆಂದು ಭಾವಿಸಿ ನಿಮ್ಮ ಕರ್ತವ್ಯ ಪಾಲನೆಯನ್ನೇ ಪೂಜೆಯೆಂದು ತಿಳಿಯಬೇಕು. ಹಾಗಾದರೆ ನೀವು ರಾಜ್ಯದ ಪ್ರಭುವನ್ನೇ ಅಧ್ಯಕ್ಷರನ್ನೇ ಪೂಜಿಸಿದಂತಾಗುತ್ತದೆ. ನಿಮ್ಮ ಕರ್ತವ್ಯ ಕರ್ಮವನ್ನು ಬಿಟ್ಟು ದೇವಾಲಯಕ್ಕೆ ಹೋದರೂ ಪ್ರಾರ್ಥನಾ—ಜಪಗಳನ್ನು ಮಾಡಿದರೂ ಅಧ್ಯಕ್ಷರ ಸಮೀಪದಲ್ಲಿದ್ದು ಸೇವೆ ಮಾಡಿದಂತೆ, ವ್ಯರ್ಥವಾಗುತ್ತದೆ.

ನಿಮ್ಮ ಮಿತ್ರರಲ್ಲಿರುವ ದೇವತ್ವವನ್ನು ದೇವರನ್ನು ಪೂಜಿಸುವದೇ ಅತ್ಯುತ್ತಮ ವಾದ ದೇವರ ಪೂಜೆ. ಅವರ ತಪ್ಪುಗಳೂ ದೋಷಗಳೂ ನಿಮ್ಮ ಮನಸ್ಸನ್ನು ಖೇದ ಗೊಳಿಸಿ, ಅವರಲ್ಲಿರುವ ದೇವತ್ವವನ್ನು ಮರೆಮಾಡಿ ನಿಮ್ಮ ದೃಷ್ಟಿಯನ್ನು ಕುರುಡು ಮಾಡದೆ ಇರಬೇಕು. ನಿಮ್ಮ ಸುತ್ತಲಿರುವವರಲ್ಲಿ ಎಷ್ಟು ದೋಷಗಳಿದ್ದರೂ ಅವರಲ್ಲಿ ದೇವತ್ವವನ್ನು ನೀವು ಕಾಣಬಲ್ಲಿರಾದರೆ ನಿಮ್ಮಲ್ಲಿಯೂ ನೀವು ದೇವರನ್ನು ನೋಡ ಬಹುದು.

ಇದರಲ್ಲಿ ಇಡೀ ಕಷ್ಟವೇನಿದೆ ಎಂಬುದನ್ನು ಸಂಕ್ಷೇಪವಾಗಿ ಹೀಗೆ ತಿಳಿಸಬಹುದು. ನಾವು ಶತ್ರುಗಳಲ್ಲಿ ದೇವರನ್ನೇಕೆ ಕಾಣುವದಿಲ್ಲ? ಏಕೆಂದರೆ ಅವರಲ್ಲಿ ನಾವು ದೋಷ ಗಳನ್ನೇ ನೋಡುತ್ತೇವೆ. ತಪ್ಪುಗಳನ್ನೇ ಹುಡುಕುವ ಕೆಟ್ಟ ಪ್ರವೃತ್ತಿಯನ್ನು ಜನರು ಬಿಟ್ಟು ಸುತ್ತಲೂ ದೇವತ್ವವನ್ನೇ ನೋಡುವದನ್ನು ಕಲಿಯಬೇಕು. ಪ್ರತಿಯೊಬ್ಬ ರಲ್ಲಿಯೂ ಇರುವ ದೇವತ್ವದಲ್ಲಿ ನಂಬಿಕೆ ಇಡಿ; ಪ್ರತಿಯೊಬ್ಬರಲ್ಲಿಯೂ ಸತ್ಯ ಜ್ಞಾನಾನಂತವನ್ನೇ ನೋಡಿ. ನೀರೋ ಅಂಥಾ ಜನರು ತಮ್ಮ ತಾರುಣ್ಯದಲ್ಲಿ

ಬಹಳ ನೀತಿಪರರೂ ಧಾರ್ಮಿಕರೂ ಆಗಿದ್ದರೂ ಅನಂತರ ಅತಿಶಯ ದುಷ್ಟರಾಗುವದನ್ನು ಅನೇಕ ಸಂದರ್ಭಗಳಲ್ಲಿ ಕಾಣುತ್ತೇವೆ. ಆದರೆ, ಇಂಗ್ಲೆಂಡಿನ ಐದನೆಯ ಹೆನ್ರಿಯು ಬಾಲ್ಯದಲ್ಲಿ ಬಹಳ ದುಷ್ಟನಾಗಿದ್ದರೂ ಅವನ ಅನಂತರದ ಜೀವನದಲ್ಲಿ ಬಹಳ ಒಳ್ಳೆಯವನಾದನು. ಹೀಗೆ ಯಾರ ಗುಣಶೀಲಗಳೂ ಎಂದೆಂದೂ ಬದಲಾವಣೆ ಹೊಂದದೆ ಒಂದೇ ಬಗೆಯಾಗಿ ಸ್ಥಿರವಾಗಿರುತ್ತವೆಯೆಂದು ತಿಳಿಯಬಾರದು. ಇವತ್ತು ಬಹಳ ಕೆಟ್ಟವರಾದವರು ನಾಳೆ ಬಹಳ ಒಳ್ಳೆಯವರಾಗಬಹುದು. ಸರ್ ವಾಲ್ಟರ್ ಸ್ಕಾಟ್‌ನು ಬಾಲ್ಯದಲ್ಲಿ ಬಹಳ ದಡ್ಡನಾಗಿದ್ದನು; ಆದರೆ ಅನಂತರದ ಜೀವನದಲ್ಲಿ ಅವನು ಶ್ರೇಷ್ಠ ಪುರುಷನಾದನು. ಗಣಿತ ಶಾಸ್ತ್ರದಲ್ಲಿ ಲೆಕ್ಕಗಳನ್ನು ಮಾಡಲಾರದೆ ಸರ್ ಇಸ್ಸಾಕ್ ನ್ಯೂಟನ್‌ನು ಅನೇಕ ಸಲ ಶಿಕ್ಷೆಯನ್ನು ಪಡೆದನು. ಆದರೆ ಅನಂತರದ ವಯಸ್ಸಿನಲ್ಲಿ ಅವನು ವಿಖ್ಯಾತ ವಿಜ್ಞಾನಿಯಾದನು. ಮೇರಿ ಮ್ಯಾಗ್‌ಡೆಲೀನಳು ಅವಳ ಎಳೆ ಯೌವನದಲ್ಲಿ ಸ್ವೇಚ್ಛಾಚಾರಿಣಿಯಾಗಿದ್ದಳು; ಆದರೆ, ಕ್ರಿಸ್ತನ ಸಮಾಗಮದಲ್ಲಿ ಬಂದ ನಂತರ ಅವಳೇ ಸಾತ್ತ್ವಿಕ ಪ್ರವೃತ್ತಿಯುಳ್ಳವಳಾದಳು. ಆಕೆಯು ಕ್ರಿಸ್ತನ ಭಕ್ತಳಾದಳು. ಇವತ್ತು ಪಾಪಿಷ್ಠನಾಗಿರುವವನು ನಾಳೆ ಪುಣ್ಯತಮನಾದ ಮಹಾತ್ಮನಾಗಬಹುದು. ಒಬ್ಬ ಮನುಷ್ಯನು ತಪ್ಪು ಮಾಡುತ್ತಿದ್ದರೆ, ಅವನಿಗೆ ವಿರುದ್ಧವಾಗಿ ನಿಂತು ಅವನನ್ನು ದ್ವೇಷಿಸುವದಕ್ಕೆ ನಿಮಗೆ ಅಧಿಕಾರವಿಲ್ಲವೆನ್ನುವುದನ್ನು ನೆನಪಿನಲ್ಲಿಡಿ. ಅವನಲ್ಲಿಯೂ ಎಲ್ಲರಲ್ಲಿಯೂ ಎಲ್ಲೆಡೆಯಲ್ಲಿಯೂ ದೇವರನ್ನೇ ನೋಡಿ. ನಿಮ್ಮ ವಿಷಯದಲ್ಲಿಯೂ ಯಾರಾದರೂ ಕೆಟ್ಟ ಆಲೋಚನೆ ಮಾಡುತ್ತಿದ್ದರೂ ನಿಮ್ಮಲ್ಲಿ ತಪ್ಪನ್ನೇ ನೋಡುತ್ತಿದ್ದರೂ ನೀವು ಪ್ರತೀಕಾರ ಮಾಡಬಹುದೇ? ಛೇ ಛೇ, ಎಂದೆಂದಿಗೂ ಕೂಡದು.

ಸಾಕ್ರೆತೀಸನು ಕಾರಾಗೃಹದಲ್ಲಿದ್ದಾಗ, ಅವನಿಗೆ ಹೆಮ್‌ಲಾಕ್ (Hemloc) ವಿಷವನ್ನು ಕೊಡುವದಕ್ಕೆ ಮೊದಲು, ಅವನ ಶಿಷ್ಯರೆಲ್ಲಾ ಅವನ ಸುತ್ತಲೂ ಸೇರಿ, ಪಿತೂರಿಯನ್ನು ನಡೆಸಿ, ಅವನನ್ನು ಆ ಬಂಧನದಿಂದ ಬಿಡುಗಡೆ ಮಾಡಿಸುವದಾಗಿ ಹೇಳಿದರು. ಕಾರಾಗೃಹದ ಮುಖ್ಯಾಧಿಕಾರಿಗೆ ಬೇಕಾದಷ್ಟು ಲಂಚವನ್ನು ಕೊಟ್ಟು, ತಮ್ಮ ಕಾರ್ಯವನ್ನು ಸಾಧಿಸುವದಾಗಿಯೂ ಅದಕ್ಕೆ ಸಾಕ್ರೆತೀಸನು ಒಪ್ಪಬೇಕೆಂದೂ ಅವನನ್ನು ಬಗೆಬಗೆಯಿಂದ ಬೇಡಿಕೊಂಡರು. ಅದಕ್ಕೆ ಸಾಕ್ರೆತೀಸನು, "ಲಂಚದಿಂದ ಕೆಲಸವನ್ನು ಮಾಡಿಕೊಳ್ಳುವದೂ ರಾಜ್ಯದ ಕಾಯಿದೆ, ಕಾನೂನುಗಳನ್ನು ಮುರಿಯುವದೂ ನ್ಯಾಯವಾಗಬಹುದೆ?"—ಎಂದು ಕೇಳಿದನು. "ಖಂಡಿತ, ಎಂದಿಗೂ ಇಲ್ಲ" ಎಂದು ಅವರು ಹೇಳಿದರು. ಆಗ ಸಾಕ್ರೆತೀಸನು "ಇದು ನ್ಯಾಯವಲ್ಲವಾದರೆ, ಶಾಸನಬದ್ಧವಾಗಿ ನನಗೆ ವಿಧಿಸಿರುವ ಶಿಕ್ಷೆಯನ್ನು ನಾನು ತಪ್ಪಿಸಿಕೊಳ್ಳಬೇಕೆಂದು ಏಕೆ ಹೇಳುತ್ತೀರಿ? ನ್ಯಾಯವಲ್ಲದ ಕಾರ್ಯವನ್ನು ಮಾಡಲು ನನ್ನನ್ನು ಏಕೆ ಪ್ರೇರಿಸುತ್ತೀರಿ, ಒತ್ತಾಯ ಪಡಿಸುತ್ತೀರಿ?" ಎಂದು ಕೇಳಿದನು. ಶಿಷ್ಯರು "ನಿಮ್ಮ ನಿಜವಾದ ಯೋಗ್ಯತೆಯನ್ನು ತಿಳಿಯದೆ, ನಿಮ್ಮ ಉಪದೇಶವನ್ನು ಅರ್ಥಮಾಡಿಕೊಳ್ಳದೆ, ನಿಮ್ಮಿಂದ

ದೈವಕ್ಕೂ ಧರ್ಮಕ್ಕೂ ಜನರಿಗೂ ಹಾನಿಯಾಗುವದೆಂದು ಸುಳ್ಳಾದ ಆರೋಪ ಮಾಡಿ ಈ ರಾಜ್ಯದ ಅಧಿಕಾರಿಗಳೇ—ಜನರೇ—ಮಹಾ ಅಪರಾಧಿಗಳಾಗಿದ್ದಾರೆ. ಅವರು ಕಾಯಿದೆಯನ್ನು ದುರುಪಯೋಗ ಪಡಿಸಿದ್ದಾರೆ. ಆದ್ದರಿಂದ ಈ ತಪ್ಪಾದ ಶಿಕ್ಷೆಯಿಂದ ತಪ್ಪಿಸಿಕೊಂಡರೆ ನ್ಯಾಯವಾದ ದೃಷ್ಟಿಯಿಂದ ತಪ್ಪಾಗುವದಿಲ್ಲ" ಎಂದು ಹೇಳಿದರು. ಸಾಕ್ರೆತಿಸನು "ಇತರರು ಕಾಯಿದೆಯನ್ನು ಮುರಿದಿರುವದರಿಂದ ನಾನೂ ಕಾಯಿದೆಯನ್ನು ಭಂಗಪಡಿಸಿ, ನ್ಯಾಯವಲ್ಲದ್ದನ್ನು ನಡೆಸಿ, ಪ್ರತೀಕಾರ ಮಾಡಬೇಕೆಂದು—ಸೇಡು ತೀರಿಸಿಕೊಳ್ಳಬೇಕೆಂದು—ನೀವು ಹೇಳುತ್ತೀರಾ? ನಾನೂ ಕಾನೂನನ್ನು ಮುರಿಯುವದರಿಂದ ಅವರ ತಪ್ಪನ್ನು ನಾವು ತಿದ್ದಿದಂತೆ, ಅವರ ಅನ್ಯಾಯವನ್ನು ನಾವು ಸರಿಪಡಿಸಿದಂತೆ ಆಗುತ್ತದೆಯೇ? ಎಂದೂ ಆಗುವದಿಲ್ಲ. ಶಾಸನ ಭಂಗ ಮಾಡುವದು ಶಾಸನ ಬದ್ಧವಲ್ಲ, ನ್ಯಾಯವಲ್ಲ— ಎಂದು ನೀವೇ ಇದುವರೆಗೆ ಬೋಧಿಸುತ್ತ ಬಂದಿರುವ ತತ್ತ್ವಕ್ಕೆ ವಿರೋಧವಾಗುತ್ತದೆ. ಒಂದು ಕಪ್ಪುಬಣ್ಣಕ್ಕೆ ಇನ್ನೊಂದು ಕಪ್ಪು ಬಣ್ಣವನ್ನು ಸೇರಿಸಿದರೆ ಎಂದೂ ಬೆಳ್ಳಗಾಗುವದಿಲ್ಲ. ಇತರರು ದೋಷಾರೋಪಣೆ ಮಾಡಿ ದೂಷಿಸಿದರೆ, ನಾವೇಕೆ ಹಾಗೆ ಮಾಡಬೇಕು? ಇನ್ನೊಬ್ಬರು ಮಾಡಿದ ತಪ್ಪನ್ನೇ ನಾವು ಮಾಡಿದರೆ ಪರಿಸ್ಥಿತಿಯು ಎಂದೂ ಸುಧಾರಿಸುವದಿಲ್ಲ. ಅವರು ಮೊದಲಿನ ತಪ್ಪಿತಸ್ಥರಾದರೆ. ನಾವು ಎರಡನೆಯ ತಪ್ಪಿತಸ್ಥರಾಗುತ್ತೇವೆ. ಅಂತು ನಾವೂ ತಪ್ಪಿತಸ್ಥರೇ ಆಗುತ್ತೇವೆ, ನಿಮ್ಮ ಎಲ್ಲಾ ಸಾಹಸವೂ ಮರಣವನ್ನು ತಪ್ಪಿಸುವದಕ್ಕಾಗಿ ಅಲ್ಲವೆ? ಆದರೆ ಎಂದಾದರೂ ಮರಣವು ತಪ್ಪಿದ್ದಲ್ಲ. ನಮಗೆ ಜೀವನಕ್ಕಿಂತಲೂ ಮರಣವೇ ಹೆಚ್ಚು ಒಳ್ಳೆಯದಿರಬಹುದು; ಅಲ್ಲವೆಂಬುದನ್ನು ನೀವೇನು ಬಲ್ಲಿರಿ?......" ಎಂದು ಹೇಳಿದನು.

ಇನ್ನೊಬ್ಬರ ದೋಷಾರೋಪಣೆಯಾಗಲೀ ದುಷ್ಟ ಭಾವನೆಗಳಾಗಲೀ ನಿಮಗೆ ಬಾಧಿಸುವದಕ್ಕೆ ಕಾರಣವೇನು? ನೀವು ಅವುಗಳನ್ನು ಸ್ವೀಕರಿಸದಿದ್ದರೆ ಅವಾಗಿಯೇ ನಿಮ್ಮನ್ನು ಬಾಧಿಸುವದಿಲ್ಲ. ನೀವು ಅವುಗಳನ್ನು ಅಂಗೀಕರಿಸಿದಾಗಲೇ ಅವು ನಿಮ್ಮನ್ನು ನೋಯಿಸುತ್ತವೆ. ಯಾರಾದರೂ ಬರೆದಿರುವ ಪತ್ರವನ್ನು ನೀವು ಸ್ವೀಕರಿಸಿ ಓದಿಕೊಂಡರೆ, ಆದರಿಂದ ಒಳ್ಳೆಯ ಪರಿಣಾಮವೋ ಕೆಟ್ಟ ಪರಿಣಾಮವೋ ಉಂಟಾಗುತ್ತದೆ. ಆ ಪತ್ರವನ್ನು ನೀವು ತೆಗೆದುಕೊಳ್ಳದಿದ್ದರೆ, ತೆಗೆದುಕೊಂಡರೂ ಅದನ್ನು ಬಿಚ್ಚಿ ಓದಿಕೊಳ್ಳದಿದ್ದರೆ, ಅಥವಾ ಅಂಚೆಯ ಮನೆಯಲ್ಲಿಯೇ (ಪೋಸ್ಟ್ ಆಫೀಸಿನಲ್ಲಿಯೇ) ಅದನ್ನು ಬಿಟ್ಟರೆ, ಅದು ಬರೆದವನಿಗೇ ತಿರುಗಿ ಕಳಿಸಲ್ಪಡುತ್ತದೆ. ಹಾಗೆಯೇ ಬೇರೆಯವರು ಕಳಿಸಿದ ಕೆಟ್ಟ ಆಲೋಚನೆಗಳನ್ನು ನೀವು ಸ್ವೀಕರಿಸದಿದ್ದರೆ, ಅವು ಹಿಂತಿರುಗಿ ಅವರಿಗೇ ಹೋಗಿ ಸೇರುತ್ತವೆ. ನೀವೇ ಅವುಗಳನ್ನು ಅಂಗೀಕರಿಸಿ ಅನ್ವಯಿಸಿಕೊಂಡರೆ ಆ ವಿಷಯವನ್ನೇ ನೀವು ವಿರೂಪಗೊಳಿಸುತ್ತೀರಿ. ಇನ್ನೊಬ್ಬರ ದೋಷಾರೋಪಣೆಯನ್ನು ನೀವು ಒಪ್ಪಿಕೊಳ್ಳದಿರುವದು ಹೇಗೆ? ನಿಮ್ಮ ದೇವತ್ವವನ್ನು ನೀವು ಕಂಠೋಕ್ತವಾಗಿ ಪ್ರತಿಪಾದಿಸುವದರಿಂದ, ಒತ್ತಿ ಹೇಳುವದರಿಂದ, ಎತ್ತಿ ತೋರಿಸುವದರಿಂದ, ನಿತ್ಯ ಜೀವನದಿಂದ, ನಿಮ್ಮ ಆತ್ಮಚೈತನ್ಯ ಕೇಂದ್ರದಲ್ಲಿಯೇ ಅಲ್ಲಾಡದೆ

ನೆಲೆಸಿರುವದರಿಂದ, ದೇವರನ್ನು ಅನುಭವ ಮಾಡುವದರಿಂದ ಯಾವ ದೋಷಾರೋಪಣೆಗೂ ನಾವು ಲಕ್ಷ್ಯಕೊಡದೆ ಇರಬಹುದು.

ಮನಸ್ಸು ಮನಸ್ಸಲ್ಲದೇ ಇರುವಾಗ ಈ ಪದ್ಯವು ಬರೆಯಲ್ಪಟ್ಟಿತು. ದೇವರ ಸಾನ್ನಿಧ್ಯವನ್ನು ನೀವು ಅನುಭವ ಮಾಡಬೇಕೆಂಬುದೇ, ದೇವರನ್ನು ನಿಮ್ಮ ಸಮೀಪಕ್ಕೆ ತರಬೇಕೆಂಬುದೇ ಆ ಪದ್ಯದ ತಾತ್ಪರ್ಯ. ಈ ಗುಣ ದೋಷ ವಿಮರ್ಶೆಯ ಗೋಡೆಗಳೂ ಪರದೆಗಳೂ ಮುಖವಾಡಗಳೂ ನಿಮ್ಮ ದೇಹದಲ್ಲಿ (ಮನಸ್ಸಿನಲ್ಲಿ) ಇಲ್ಲದಾಗ ಬೇರೆಯವರಲ್ಲಿಯೂ ಅವು ತೊಲಗುತ್ತವೆ; ದೇವರನ್ನು ಕಾಣುತ್ತೀರಿ.

ಅಷ್ಟು ಸಮೀಪ, ಇಷ್ಟು ಸಮೀಪ, ಎಷ್ಟು ಸಮೀಪ ನನಗೆ

ನಾನೇ !—ನೀನೇ ಇಷ್ಟದೇವ !

ಇಷ್ಟ ದೇವನೆಂದರೆ ಸತ್ಯ—ಜ್ಞಾನ—ಅನಂತ ರೂಪನಾದ ಪರಮಾತ್ಮ.

ಎಲ್ಲರಲ್ಲಿ ಕೂದಲು ಬೆಳೆಯುವದಕ್ಕೂ ಎಲ್ಲರ ನರನಾಡಿಗಳಲ್ಲಿ ರಕ್ತವು ಹರಿಯುವದಕ್ಕೂ ನೋಡುವದಕ್ಕೂ ಮಾತನಾಡುವದಕ್ಕೂ ಶಕ್ತಿಯನ್ನು ಕೊಡುವವನು ಪರಮಾತ್ಮನೇ. ನಿಮ್ಮ ಮಾತಿನಲ್ಲಿಯೂ ನಿಮ್ಮ ನೋಟದಲ್ಲಿಯೂ ಕೃತಿಗಳಲ್ಲಿಯೂ ಆಲಿಸುವದರಲ್ಲಿಯೂ ದೇವರಿದ್ದಾನೆ. ಹೀಗೆ ನಿಮ್ಮಲ್ಲಿ ತುಂಬಿರುವ ದೇವರೇ ನಿಮ್ಮ ಮಿತ್ರನಲ್ಲಿಯೂ ನಿಮ್ಮ ಸಹೋದರನಲ್ಲಿಯೂ ಬಂಧುವಿನಲ್ಲಿಯೂ ನಿಮ್ಮ ಶತ್ರುವಿನಲ್ಲಿಯೂ ತುಂಬಿದ್ದಾನೆ. ನೀವು ಎಲ್ಲರಲ್ಲಿಯೂ ದೇವರನ್ನೇ ಭಾವಿಸುತ್ತಿದ್ದರೆ ನಿಮಗೆ ಶತ್ರುಗಳೇ ಕಾಣುವದಿಲ್ಲ. ದೇವರನ್ನು ನೋಡದಂತೆ ನೀವು ಕಣ್ಣು ಮುಚ್ಚಿಕೊಂಡರೆ ಆಗ ಶತ್ರುಗಳು ಬರುತ್ತಾರೆ. ಯಾವ ಪರಮಾನಂದವನ್ನು ನೀವು ಬಯಸುತ್ತೀರೋ ಯಾವದು ನಿಮ್ಮ ಸಾಧನೆಯ ಗುರಿಯಾಗಿದೆಯೋ ಅದನ್ನೇ ಒಳ ಹೊರಗೆಲ್ಲಾ ಭಾವಿಸಿರಿ. ಆನಂದ ಸ್ವರೂಪನಾದ ದೇವರು ನಿಮಗೆ ಬಹಳ ಹತ್ತಿರದಲ್ಲಿಯೇ ಅತ್ಯಂತ ಸಮೀಪದಲ್ಲಿಯೇ ಇದ್ದಾನೆ.

ಸಂತೋಷ ! ಸಂತೋಷ ! ನಿಮಗೆ ತಿಳಿದೋ ತಿಳಿಯದೆಯೋ ನಿಮ್ಮ ಆಶೆಗಳಿಗೆಲ್ಲಾ ದೇವರೇ ಗುರಿ. ಎಲ್ಲಾ ಆಶೆಗಳಿಗೂ ಸುಖವೇ ಗುರಿಯಲ್ಲವೆ ? ಸುಖವೇ ಪರಮಾತ್ಮನಲ್ಲವೆ ? ಓ ! ಅದನ್ನೇ ಅನುಭವದಿಂದ ಕಂಡುಕೊಳ್ಳಿರಿ.

ತೀರ ಬಳಿಯಲೆ, ಪೂರ ಬಳಿಯಲೇ, ಎನ್ನ ಪ್ರಿಯತಮ ! ಎನ್ನಸೇರಿಹೆ !
ಮೇಲು ಕೆಳಗೂ ಹಿಂದು ಮುಂದು, ಹೊರಗೊಳಗು, ನೀನೆ ಇರುತಿಹೆ.
ಎನ್ನ ಸುತ್ತಲು, ಎನ್ನ ಮುತ್ತಲೂ ಎಲ್ಲೆಡೆಯು, ನಾನೆಪ್ರಿಯತಮ ನಾನೆ, ನಾನೆ;
ಎಷ್ಟು ಗಂಭೀರವೋ ಎಷ್ಟೊಂದಪಾರವೋ ! ಎಷ್ಟು ಉತ್ಕಟ ! ನೀನೆ, ನಾನೆ !
ಎನ್ನ ಮುದ್ದುನಗ, ಎನ್ನ ಪ್ರಿಯತಮ ಮನೋಹರನೆ ! ನೀನೆ, ನಾನೆ !

ಸಕಲ ಬಂಧಗಳೂ ಹರಿದಿವೆ; ಸಕಲ ಸಂಬಂಧಗಳೂ ಕಡಿದಿವೆ; ನಾನು–ನೀನು ಎಂಬ ಭಾವನೆಗಳೆಲ್ಲಾ ಹಿಂದೆ ಬಿದ್ದಿವೆ; ಸಮಸ್ತ ಪ್ರಾಪಂಚಿಕ ನೆಂಟು–ಗಂಟುಗಳು ಕಡಿದೊಡೆದು ಹಿನ್ನೆಲೆಗೆ ಸರಿದಿವೆ. ಸ್ವಾರ್ಥ ಪರವಾದ ಗಂಟುಗಳೆಲ್ಲಾ ಕಡಿದು ಹೋಗುವಷ್ಟು ತೀವ್ರತರವಾಗಿ ಆತ್ಮಾನುಭವವಾಗಿದೆ; ದೇವತ್ವವೂ ಸತ್ಯವೂ ಪರಮ ಪ್ರಧಾನವಾಗಿವೆ. ಇದೇ ಅನುಭವವಾಗಿದ್ದಿತು. ಆ ಬಂಧಗಳೂ ಸಂಬಂಧಗಳೂ ಪಾಶಗಳೂ ಪ್ರಾಮುಖ್ಯವಾಗಿರುವವರೆಗೆ ಆತ್ಮಾನುಭವ ಉಂಟಾಗುವದಿಲ್ಲ. ಇದೇ ಅಬಾಧಿತ ನಿಯಮ. ಕ್ರಿಸ್ತನ ಮಾತಿನಲ್ಲಿ ಆಶ್ಚರ್ಯಕರವಾದ ಸತ್ಯವಿದೆ, "Sell all thou hast, give to the poor and follow me "

"ನಿಮ್ಮಲ್ಲಿ ಇರುವದನ್ನೆಲ್ಲಾ ಮಾರಿಬಿಡಿರಿ, ಎಲ್ಲವನ್ನೂ ಬಡವರಿಗೆ ದಾನ ಮಾಡಿರಿ ನನ್ನನ್ನು ಹಿಂಬಾಲಿಸಿರಿ" ಎಂದು ಕ್ರಿಸ್ತನು ಹೇಳಿದನು. ಆದರೆ ಜನರು ಹೆದರಿ ಹಿಂಜರಿಯುತ್ತಾರೆ.

ಓ ಆಧುನಿಕ ನಾಗರಿಕತೆಯೆ ! ಕ್ರಿಸ್ತನ ಮಾತುಗಳಲ್ಲಿಯೂ ಕೃತಿಗಳಲ್ಲಿಯೂ ಸತ್ಯವನ್ನು ನೀನು ಅರಿತು, ಅನುಭವ ಪಡೆಯಬೇಕು. ದೇವನನ್ನೂ ದೈತ್ಯನನ್ನೂ ಒಂದೇ ಕಾಲದಲ್ಲಿ ನೀವು ಸೇವಿಸಿ ಸಂತೋಷಪಡಿಸಲಾರಿರಿ ಎಂದು ವೇದಾಂತವು ವೀರ್ಯವತ್ತರವಾದ ಭಾಷೆಯಲ್ಲಿ ಸಾರುತ್ತಿದೆ. ಎಲ್ಲಾ ಪ್ರಾಪಂಚಿಕ ಸಂಬಂಧಗಳ, ಪ್ರಾಪಂಚಿಕ ಸಂಪರ್ಕಗಳ, ಪಾಶಗಳ ಆಸ್ತಿ–ಪಾಸ್ತಿಗಳ, ಆಶೆಗಳ ಮತ್ತು ಪ್ರಾಪಂಚಿಕ ಆವಶ್ಯಕತೆಗಳ ಎಲ್ಲಾ ಬಗೆಯ ಆಲೋಚನೆಗಳೂ ದೇವರಲ್ಲಿ ಅಥವಾ ಸತ್ಯದಲ್ಲಿ ಕರಗಿ ಬೆರೆತಾಗ ಅನುಭಾವದ ಪವಿತ್ರ ಕ್ಷಣಗಳು ಉದಯವಾಗುತ್ತವೆ.

.....................................

ನಾನೆಂದೂ ಹೊಯಿದಾಡುವದಿಲ್ಲ; ನಾನು ನಿರ್ಲಕ್ಷ್ಯನಾಗಿದ್ದರೆ ನನ್ನ ಪ್ರಿಯತಮನನ್ನು ಪ್ರೀತಿಯಿಂದ ಕಾಡುವದಕ್ಕಾಗಿಯೇ; ಏಕೆಂದರೆ, ನೀನೊಬ್ಬನೇ ಸತ್ಯವಾದುದರಿಂದ ನಾನು–ನಿನ್ನ ಅನುಗ್ರಹಕ್ಕಾಗಿ–ಕಾಡುವದಾದರೂ ಬೇಡುವದಾದರೂ ನಿನ್ನನ್ನೇ.

"ಓ ಮನೆಯೆ ! ಸವಿ ಮನೆಯೆ ! ಸ್ವಂತ ಮನೆಯೆ ! ತಾಯ್ ಮನೆಯೆ ! ನನ್ನ ಸುಖ ಸುಪ್ಪತ್ತಿಗೆಯೆ ! ನನ್ನ ಸರ್ವಾಧಾರವೆ ! ಓ ನನ್ನ ದಿವ್ಯಾತ್ಮವೆ ! ನಿಜಾನಂದ ಮಂದಿರವೆ ! ಸುಂದರಾತ್ಮ ಸದನವೆ ! ಶಾಂತಿ ಸುಖಧಾಮವೆ ! ದೇವತ್ವವೇ ನೀವು ವಿಶ್ರಾಂತಿ ಪಡೆಯುವ ಸುಖ ಸುಪ್ಪತ್ತಿಗೆಯೆಂಬ ಭಾವನೆಯಿಂದ ನಿಮ್ಮ ಆತ್ಮವನ್ನು ತುಂಬಿಕೊಳ್ಳಿ.

ನೀವು • ದೇವರ ಮೇಲೆಯೇ ಮಲಗುತ್ತಿದ್ದೀರೆಂದು ಭಾವಿಸಿರಿ.

ಓ ! ನಿಲ್ಲು, ತಡಿ, ಒಂದೇ ಕ್ಷಣ, ನೋಳ್ಪೆ ಕೊಂಡುದೇನೆಂಬದನು,

ಓ ! ನಾನೆ ಸರ್ವಸಮರ್ಥನೆಂಬದನು ಅರಿತೆ; ಇದುವರೆಗೆ ಮರೆತುದನು.

ನಾ ಕೊಂಡ ಆತ್ಮವು ಎನ್ನ ಆತ್ಮ. ಎಂದೆಂದಿಗೂ ನಿರ್ವಿಕಾರವಿಹ ನಿನ್ನ
ಸ್ವಭಾವವೇ ನೀ ಕೊಂಡ ವಸ್ತು.

ಜಾಜ್ವಲ್ಯ ವೈಭವವೆ, ಎನ್ನ ಸೂರ್ಯರಥವೇ.

ಉಜ್ವಲ ಪರಾತ್ಮನಾರವೆ, ವರದೃಷ್ಟಿ ಪೋಷಕವೆ !

ಓಂ ! ಓಂ ! ಓಂ !

---

# I AM ALL LIGHT

## ಎಲ್ಲ ಬೆಳಕು ನಾನೇ

### ಅಮೆರಿಕಾದ ಕೊಲಂಬಿಯಾ ಡೆನ್ವರ್‌ನಲ್ಲಿ (ತಾ 13-1-1904) ಮಾಡಿದ ಉಪನ್ಯಾಸ.

ಸಭ್ಯ ಸ್ತ್ರೀಪುರುಷರೂಪದಲ್ಲಿರುವ ನನ್ನ ಆತ್ಮವೆ!

ನಿಜವಾದ ಆತ್ಮ ಯಾವದು? ದೇಹವು ನಿಜವಾದ ಆತ್ಮವಲ್ಲ, ಮನಸ್ಸು ನಿಜವಾದ ಆತ್ಮವಲ್ಲ, ಪ್ರಾಣವು ನಿಜವಾದ ಆತ್ಮವಲ್ಲ. ಈ ಪ್ರಪಂಚವು ಇದೆಯೆಂದು ನಿಮಗೆ ಹೇಗೆ ಗೊತ್ತು? ನಿಮ್ಮ ಅರಿವಿನಿಂದ ಪ್ರಪಂಚದ ಅನುಭವವನ್ನು ಪಡೆಯುತ್ತೀರಿ. ಈ ಅರಿವು ಕೂಡ ಮೂರು ಬಗೆಯ ಬದಲಾವಣೆಗಳನ್ನು ಸ್ಥಿತ್ಯಂತರಗಳನ್ನು ಹೊಂದುತ್ತದೆ. ಎಚ್ಚರದ ಅರಿವು, ಕನಸಿನ ಅರಿವು, ಗಾಢ ನಿದ್ರೆಯ ಅರಿವು– ಎಂದು ಮೂರು ಬಗೆಯಾಗಿದೆ. ನಿಮ್ಮ ಅರಿವು ಶಾಖಮಾಪಕ (Thermometer) ಯಂತ್ರದಂತೆ ಅಥವಾ ವಾಯುಭಾರ ಮಾಪಕ (Barometer) ಯಂತ್ರದಂತೆ ಅದು ಪ್ರಪಂಚದ ಉಷ್ಣವನ್ನೂ ಒತ್ತಡವನ್ನೂ ಅಳೆಯುತ್ತದೆ, ಅರಿಯುತ್ತದೆ. ಪ್ರಪಂಚವು ಘನವಾಗಿದೆಯೆಂದೂ ಗಡುಸಾಗಿಯೂ ಕಠಿಣವಾಗಿಯೂ ಇದೆಯೆಂದೂ ನಿಯಮಬದ್ಧವಾಗಿದೆಯೆಂದೂ ಎಚ್ಚರದ ಅರಿವು ಸೂಚಿಸುತ್ತದೆ. ಕನಸಿನಲ್ಲಿರುವ ಅರಿವಿನ ಅಭಿಪ್ರಾಯ ತೀರ್ಮಾನಗಳೇ ಬೇರೆ. ಆದರೆ ಎಚ್ಚರದ ಅವಸ್ಥೆಯಷ್ಟೇ ಕನಸಿನ ಮತ್ತು ನಿದ್ರೆಯ ಸ್ಥಿತಿಗಳೂ ಪ್ರಬಲವಾಗಿವೆ. ಕೇವಲ ಕಾಲದ ದೃಷ್ಟಿಯಿಂದ ನೋಡಿದರೂ ನಮ್ಮ ಎಚ್ಚರದ ಅನುಭವವು ಎಷ್ಟು ಕಾಲವನ್ನು ತೆಗೆದುಕೊಳ್ಳುವದೋ ಅಷ್ಟೇ ಕಾಲವನ್ನು ನಿದ್ರೆಯ (ಅಥವಾ ಕನಸು–ನಿದ್ರೆಗಳ) ಅನುಭವವೂ ತೆಗೆದುಕೊಳ್ಳುತ್ತದೆ. ನಿಮ್ಮ ಜೀವನದಲ್ಲಿ ನೀವು ಎಷ್ಟು ಕಾಲ ಎಚ್ಚರವಾಗಿರುತ್ತೀರೋ ಅಷ್ಟು ಕಾಲ ನಿದ್ರೆ ಮಾಡುತ್ತೀರಿ. ಸಣ್ಣ ಶಿಶುವು ಸರ್ವಕಾಲದಲ್ಲಿಯೂ ನಿದ್ರೆಯಲ್ಲಿಯೇ ಇರುತ್ತದೆ, ಎನ್ನಬಹುದು. ಎಲ್ಲಾ ಜಗತ್ತು ಈ ಅನುಭವವನ್ನು ಪಡೆಯುತ್ತದೆ ಎಚ್ಚರದ ಅವಸ್ಥೆಯಲ್ಲಿರುವ ನಮ್ಮ ಅರಿವಿನ ಅನುಭವವನ್ನು ಗಾಢನಿದ್ರೆಯಲ್ಲಿರುವ ಅರಿವಿನ ಹಾಗೂ ಸ್ವಪ್ನದಲ್ಲಿರುವ ಅರಿವಿನ ಅನುಭವ–ನಿರ್ಣಯಗಳು ಪೂರ್ಣವಾಗಿ ವಿರೋಧಿಸುತ್ತವೆ.

ಹಿಂದೂ ಇಂದೂ ಮುಂದೂ ಎಂದೆಂದೂ ಒಂದೇ ಬಗೆಯಾದ ಸ್ವಭಾವವುಳ್ಳದ್ದಾವದೋ ಅದೇ ಸತ್ಯ ಎಂದು ವೇದಾಂತದಲ್ಲಿ ಹೇಳುತ್ತದೆ. ಸಕಲ ವಿಚಾರಶಾಲಿಗಳೂ ಪರಮಾರ್ಥ ಸತ್ಯದ ಸ್ವರೂಪವನ್ನು ಪರೀಕ್ಷಿಸಿ ನಿರ್ಣಯಿಸುವದಕ್ಕೆ ಒಪ್ಪಿರುವ

ಒರೆಗಲ್ಲೇ ಇದು. ಯಾವ ಕಾರಣದಿಂದಲೂ ಬದಲಾವಣೆ ಹೊಂದದೆ ಎಲ್ಲಾ ದೇಶ ಕಾಲಗಳಲ್ಲಿಯೂ ಏಕರೂಪವಾಗಿರುವದಾವುದೋ ಅದೇ ಸತ್ಯ. ಚಿದಾಭಾಸನ (Subject) ಅಥವಾ ಜ್ಞಾತೃವಿನ ದೃಷ್ಟಿಯಿಂದ ಈ ಅರಿವು ಬೇರೆ ಬೇರೆ ಮೂರು ರೂಪಗಳನ್ನು ತೆಗೆದು ಕೊಳ್ಳುತ್ತದೆ. ಜಾಗ್ರದವಸ್ಥೆಯಲ್ಲಿ ಈ ಅರಿವು ತಾನೇ ದೇಹ ವೆಂದು ಭಾವಿಸುತ್ತದೆ. ಎಚ್ಚರದಲ್ಲಿ 'ನಾನು' ಎನ್ನುವಾಗ ಈ ದೇಹವೆಂದೇ ನೀವು ತಿಳಿ ಯುತ್ತೀರಿ. ಕನಸಿನಲ್ಲಿ ಈ ಅರಿವು ಬೇರೆ ರೂಪವನ್ನೇ ಅವಸ್ಥೆಯನ್ನೇ ಪಡೆಯುತ್ತದೆ. ನೀವು ಬದಲಾವಣೆ ಹೊಂದುತ್ತೀರಿ. ಕನಸಿನ ಜೀವನು ಬೇರೆ, ಎಚ್ಚರದ ಜೀವನು ಬೇರೆ, ಈ ಇಬ್ಬರೂ ಒಂದೇ ಆಗಲಾರರು. ಎಚ್ಚರದಲ್ಲಿ ನೀವು ಶ್ರೀಮಂತರಿರಬಹುದು ಆದರೆ ನಿಮ್ಮ ಕನಸಿನಲ್ಲಿ ನೀವು ಬಡವರಾಗಿ ಬವಣೆ ಪಡುತ್ತಿರಬಹುದು. ನಿಮ್ಮ ಕನಸಿನಲ್ಲಿ ನೀವು ಶತ್ರುಗಳಿಂದ ಸುತ್ತುವರಿಯಲ್ಪಟ್ಟಿರಬಹುದು; ನಿಮ್ಮ ಮನೆಯನ್ನು ಅವರು ಸುಟ್ಟಿರಬಹುದು; ನೀವು ಅದರಿಂದ ಬದುಕಿದ್ದೇ ಕಷ್ಟವಾಗಿರಬಹುದು. ಆದರೆ, ಎಚ್ಚರ ವಾದ ಮೇಲೆ ಇವೆಲ್ಲಾ ಸುಳ್ಳೆನಿಸುತ್ತವೆ. ನಿಮ್ಮ ಕನಸಿನಲ್ಲಿ ನೀವು ಯಥೇಷ್ಟವಾಗಿ ನೀರನ್ನು ಕುಡಿದಿರಬಹುದು. ಆದರೆ ಎಚ್ಚರವಾದ ಮೇಲೆ ನಿಮಗೆ ಅತಿಶಯ ನೀರಡಿಕೆ ಯಾಗಬಹುದು. ಇದರಿಂದ ಕನಸಿನ ಜೀವನೇ ಬೇರೆ, ಎಚ್ಚರದ ಜೀವನೇ ಬೇರೆ ಎನ್ನುವದು ಸ್ಪಷ್ಟವಾಗುತ್ತದೆ. ಆದ್ದರಿಂದ ಅರಿವು, ಕನಸಿನಲ್ಲಿ ಒಂದು ರೂಪವನ್ನೂ ಎಚ್ಚರದಲ್ಲಿ ಇನ್ನೊಂದು ರೂಪವನ್ನೂ ಗಾಢ ಸುಪ್ತಿಯಲ್ಲಿ ಮೂರನೆಯ ಮತ್ತೊಂದು ರೂಪವನ್ನೂ ತಾಳುತ್ತದೆ. ಗಾಢ ನಿದ್ರೆಯಲ್ಲಿ ನಿಮ್ಮ ಅರಿವು ಏನೊಂದೂ ಇಲ್ಲವೆಂಬ ಅವಸ್ತುವಿನಲ್ಲಿ, ನಿರ್ವಿಷಯದಲ್ಲಿ ಒಂದಾಗುತ್ತದೆ. ನೀವು "ನಾನು ಏನೊಂದೂ ಕನ ಸನ್ನು ಕಾಣದಂತೆ ಸುಖವಾಗಿ ನಿದ್ರಿಸಿದೆ" ಎಂದು ಹೇಳುತ್ತೀರಿ. ನಿಮ್ಮ ಗಾಢ ನಿದ್ರೆಯಲ್ಲಿ ತಾನು ಮಾತ್ರ ನಿದ್ರೆಮಾಡದೆ ಹಾಗೆಯೇ ಎಚ್ಚರವಾಗಿರುವ ಏನೋ ಒಂದು ನಿಮ್ಮಲ್ಲಿದೆ. ಅದೇ ನಿಮ್ಮ ನಿಜವಾದ ಆತ್ಮ. ವಿಷಯ ಸಂಬಂಧವಾದ ಅರಿವಿಗಿಂತ ಅದು ಬೇರೆಯೇ ಇರುತ್ತದೆ; ಅದು ಶುದ್ಧವಾದ ಅರಿವು. ಅದೇ ನಿಮ್ಮ ನಿಜವಾದ ಆತ್ಮ.

ನಮ್ಮಲ್ಲಿಗೆ ಒಬ್ಬ ಮನುಷ್ಯ ಬಂದು "ಸ್ವಾಮಿ! ನಿನ್ನೆಯ ಮಧ್ಯರಾತ್ರಿ 12 ಗಂಟೆ ಯಲ್ಲಿ ಆ ದೂರದ ರಸ್ತೆಯಲ್ಲಿ ಹೋಗುತ್ತಿದ್ದೆ; ಆಗ ಅಲ್ಲಿ ಯಾರೂ ಇರಲಿಲ್ಲ; ಅಲ್ಲಿ ಏನನ್ನೂ ಕಾಣಲಿಲ್ಲ" ಎನ್ನುತ್ತಾನೆ. ನಾವು ಅವನನ್ನು "ಆಗ ಅಲ್ಲಿ ನಿಜವಾಗಿಯೂ ಯಾರೊಬ್ಬರೂ ಇರಲಿಲ್ಲವೆ?" ಎಂದು ಕೇಳುತ್ತೇವೆ. ಆಗ ಆ ಮನುಷ್ಯನು "ಸತ್ಯವಾಗಿ ಸ್ವಾಮಿ, ಅಲ್ಲಿ ಯಾರೂ ಇರಲಿಲ್ಲವೆಂಬದನ್ನು ನಾನೇ ಕಣ್ಣಾರೆ ಕಂಡೆ, ನಾನೇ ಅದಕ್ಕೆ ಸಾಕ್ಷಿ" ಎನ್ನುತ್ತಾನೆ. ಆಗ ನಾವು "ಏನಯ್ಯ, ನಿನ್ನ ಮಾತು ತನಗೆ ತಾನೇ ವಿರುದ್ಧ ವಾಗಿದೆ. ಇದನ್ನು ನಂಬುವದು ಹೇಗೆ? ನೀನು ಯಾರಾದರೊಬ್ಬನಲ್ಲವೆ? ನೀನು ಯಾರೂ ಅಲ್ಲದವನು ಎಂದು ಹೇಳುತ್ತೀಯ? ನೀನು ಹೇಳುವ ಮಾತು ನಿಜವೆಂದು ನಂಬಬೇಕಾದರೆ ನೀನು ಅಲ್ಲಿ ಇದ್ದಿರಬೇಕು. ಯಾರೂ ಇಲ್ಲವೆಂಬ ಅಭಾವವನ್ನು

ನೀನು ಸಾಕ್ಷಿಯಾಗಿ ನೋಡಿರಬೇಕು. ಇದರಲ್ಲಿ 'ಯಾರೂ' ಎನ್ನುವದು ನಿನ್ನ ನೆನಪು ಮಾತ್ರ; ನಿನ್ನ ಇರುವಿಕೆಯು ಮಾತ್ರ ನಿನ್ನ ಅನುಭವ" ಎಂದು ಹೇಳುತ್ತೇವೆ.

ಒಬ್ಬನು ಗಾಢ ನಿದ್ರೆಯಿಂದ ಎಚ್ಚರವಾದ ಮೇಲೆ "ನಾನು ಯಾವ ಕನಸನ್ನೂ ಕಾಣಲಿಲ್ಲ" ಎನ್ನುತ್ತಾನೆ. ಅದಕ್ಕೆ ನಾವೆನ್ನುತ್ತೇವೆ "ತಮ್ಮ, ಅಲ್ಲಿ ನೀನು ಏನನ್ನೂ ಕಾಣಲಿಲ್ಲವೆನ್ನುತ್ತೀಯೆ; ಇದು ನಿಜವಾದರೆ, ನೀನದಕ್ಕೆ ಸಾಕ್ಷಿಯಾಗಿ ನಿಂತಿದ್ದೀಯೆ, ನೀನೇ ಅಲ್ಲಿ ಇಲ್ಲದಿದ್ದರೆ ಈ ಅನುಭವವನ್ನು ಹೇಗೆ ಹೇಳುತ್ತಿದ್ದೆ ? ನಿನ್ನ ಗಾಢ ನಿದ್ರೆಯಲ್ಲಿಯೂ ಎಚ್ಚರವಾಗಿರುವ ಏನೋ ಒಂದು ನಿನ್ನಲ್ಲಿ ಇರಬೇಕು. ಅದೇ ನಿನ್ನ ನಿಜವಾದ ಆತ್ಮ; ಅದೇ ಕೇವಲ ಪ್ರಾಜ್ಞತ್ವ ( Absolute will ); ಕೇವಲ ಪ್ರಜ್ಞಾನ ಘನ ( Absolute Consciousness )

ಅದರಿಂದ ಇಡೀ ಜಗತ್ತೇ ಹೇಗೆ ವಿಸ್ತಾರವಾಗುವದೆಂಬುದನ್ನು ನೋಡಿ. ನದಿಗಳನ್ನು ನೋಡಿ. ಅವುಗಳಿಗೆ ಮೂರು ಅವಸ್ಥೆಗಳಿವೆ. ಮೊದಲನೆಯದು ಗಂಗಾ–ಯಮುನಾ–ಬ್ರಹ್ಮಪುತ್ರಾ ನದಿಗಳ ಮೂಲದಲ್ಲಿರುವ ಹಿಮರಾಶಿ. ಹಿಮವು ಕರಗಿ ಗಂಗಾ ಮೊದಲಾದ ನದಿಗಳು ಮೃದುವಾಗಿಯೂ ಸೌಮ್ಯವಾಗಿಯೂ ಶಾಂತವಾಗಿಯೂ ಕೃಶವಾಗಿಯೂ ಹರಿಯುತ್ತಿರುವುದು ಅವುಗಳ ಎರಡನೆಯ ಅವಸ್ಥೆ. ಆ ನದಿಗಳು ಪರ್ವತಗಳಿಂದ ವೇಗವಾಗಿ ಇಳಿದು, ಮೈದಾನದಲ್ಲಿ ಹರಿದು, ಪ್ರಕ್ಷುಬ್ಧವಾಗಿ, ಕೆಸರಿನಿಂದ ತುಂಬಿರುವದು ಮೂರನೆಯ ಅವಸ್ಥೆ. ಇವೇ ಆ ನದಿಯ ಮೂರು ಅವಸ್ಥೆಗಳು.

ನದಿಯ ಮೊದಲನೆಯ ಅವಸ್ಥೆಯಲ್ಲಿ, ಪರ್ವತಗಳ ಹಿಮರಾಶಿಯಲ್ಲಿ ಸೂರ್ಯನ ಪ್ರತಿಬಿಂಬ ಕಾಣುವದಿಲ್ಲ. ಎರಡನೆಯ ಮೂರನೆಯ ಅವಸ್ಥೆಗಳಲ್ಲಿ ನದೀ ಜಲದಲ್ಲಿ ಸೂರ್ಯನ ಪ್ರತಿಬಿಂಬವು ತೋರುತ್ತದೆ. ನದಿಯು ಪರ್ವತಗಳಿಂದ ವೇಗವಾಗಿ ಹರಿದು ಬರುತ್ತಾ, ಕೆಲವೆಡೆಗಳಲ್ಲಿ ಧುಮುಕುತ್ತಿರುವ ಎರಡನೆಯ ಅವಸ್ಥೆಯಲ್ಲಿ ಬಹಳ ಸುಂದರವಾಗಿ ಕಂಡರೂ ದೋಣಿಯ—ಅಥವಾ ನಾವೆಯ ಪ್ರಯಾಣಕ್ಕೂ ಯಾವ ವ್ಯವಹಾರಕ್ಕೂ ಉಪಯೋಗವಿರಲಿಲ್ಲ. ಮೈದಾನದಲ್ಲಿ ಹರಿಯುವ ಮೂರನೆಯ ಅವಸ್ಥೆಯಲ್ಲಿ ನಾವೆಯ ಪ್ರವಾಸಕ್ಕೂ ಉಪಯೋಗವಾಗುತ್ತವೆ; ಅಲ್ಲದೆ ಕಣಿವೆಗಳೂ ಬಹಳ ವಿಶಾಲವಾದ ಭೂಮಿಯೂ ಫಲವತ್ತಾಗುತ್ತವೆ. ಈ ದೃಷ್ಟಾಂತದಲ್ಲಿ ಮೇಲಿರುವ ಸೂರ್ಯನನ್ನು ಕೆಳಗಿರುವ ನದಿಯನ್ನೂ ತೆಗೆದುಕೊಳ್ಳೋಣ.

ನಿಮ್ಮ ಗಾಢ ನಿದ್ರೆಯಲ್ಲಿ ಸೂರ್ಯರ ಸೂರ್ಯನಾದ ಆತ್ಮಸೂರ್ಯನು ಘನೀಭೂತವಾದ ಹಿಮದಂತಿರುವ ಶೂನ್ಯ ಸ್ಥಿತಿಯ ಮೇಲೆ ಬೆಳಗುತ್ತಿದ್ದಾನೆ. ಆತ್ಮಸೂರ್ಯನು ಅಚಲನೂ ಅವ್ಯಕ್ತನೂ ಆದ ಸಾಕ್ಷಿ. ನಿಮ್ಮಲ್ಲಿ ಆ ಆತ್ಮಸೂರ್ಯನು ಸ್ವಲ್ಪ ಕಾಲ ಗಾಢ ನಿದ್ರೆಯಲ್ಲಿ ಪ್ರಕಾಶಿಸುತ್ತಿರುವಾಗ ನಿಮ್ಮಲ್ಲಿರುವ ಕಾರಣ ದೇಹದ ಹಿಮವನ್ನು ತನ್ನ ಶಾಖದಿಂದ ಕರಗಿಸುತ್ತಾನೆ. ಆ ಶೂನ್ಯಾವಸ್ಥೆಯಿಂದ ಹೊರಗೆ

ಸ್ವಪ್ನಾವಸ್ಥೆಯು ಹರಿದು ಬರುತ್ತದೆ. ಬೈಬಲ್ ಹೇಳುವದೇನೆಂದರೆ, "ದೇವರು ಶೂನ್ಯದಿಂದ ಜಗತ್ತನ್ನು ಸೃಷ್ಟಿ ಮಾಡಿದನು". ಸೃಷ್ಟಿಯಾಗುವದಕ್ಕೆ ಮೊದಲು ದೇವರೂ ದೇವರ ಜೊತೆಯಲ್ಲಿ ಅಭಾವವೂ—ಶೂನ್ಯವೂ—ಇದ್ದಿತು. ಸೂರ್ಯನು ಹಿಮವನ್ನು ಕರಗಿಸಿ ನದಿಗಳನ್ನು ಉತ್ಪತ್ತಿಮಾಡುವಂತೆ ನಿಮ್ಮಲ್ಲಿರುವ ಆತ್ಮಸೂರ್ಯನು ತೋರಿಕೆಯ ಅಭಾವದ ಮೇಲೆ ಬೆಳಗುವಾಗ— ಹಿಂದೂಗಳ ಹೇಳಿಕೆಯಂತೆ ಮಾಯೆಯ ಮೇಲೆ ಬೆಳಗುವಾಗ—ವಿಷಯಿ—ವಿಷಯ ರೂಪವಾದ ಜಗತ್ತು, ಜ್ಞಾತೃ—ಜ್ಞೇಯ, ಪ್ರಮಾತೃ—ಪ್ರಮೇಯ ರೂಪವಾದ ಜಗತ್ತು ಹೊರತೋರಿಕೊಳ್ಳುತ್ತದೆ: ವಿಷಯಿಯೇ ಜ್ಞಾತೃ, ದ್ರಷ್ಟಾ, ವಿಷಯವೇ ಜ್ಞೇಯ, ದೃಶ್ಯ.

ಒಂದು ಮಹಾನದಿಗೆ ಒಂದು ಪುಟ್ಟ ನದಿಯು ಹೇಗೆ ಸಂಬಂಧ ಪಟ್ಟಿದೆಯೋ ಹಾಗೆ ಎಚ್ಚರದ ಅನುಭವಕ್ಕೆ ಕನಸಿನ ಅನುಭವವು ಇದೆ. ಮನುಷ್ಯನು ದೇವರ ಪ್ರತಿ ರೂಪವಾಗಿ ಸೃಷ್ಟಿಯಾದನೆಂದು ಹೇಳುತ್ತಾರೆ. ಗಾಢ ನಿದ್ರೆಯಲ್ಲಿ ನಿಮ್ಮಲ್ಲಿ "ನಾನು" ಎಂಬುದು ಇರುವದಿಲ್ಲ. ಎಚ್ಚರ ಕನಸುಗಳಲ್ಲಿ 'ನಾನು' ಇರುತ್ತದೆ. ಕನಸಿನಲ್ಲಿಯೂ ಎಚ್ಚರದಲ್ಲಿಯೂ ನಿಮ್ಮಲ್ಲಿ ದೇವರ ಪ್ರತಿಬಿಂಬವಿದೆ. ನಿಜವಾದ ಆತ್ಮನು ದೇವರೇ ಆಗಿದ್ದಾನೆ; ಅವನು ಸೂರ್ಯನೇ ಹೊರತು ಸೂರ್ಯನ ಪ್ರತಿಬಿಂಬವಲ್ಲ. ಕನಸಿನಲ್ಲಿ ನೀವು ಅನೇಕ ಬಗೆಯ ವಸ್ತುಗಳನ್ನು ನೋಡುತ್ತೀರಿ. ಯಾವ ವಸ್ತುವನ್ನಾದರೂ ನೋಡುವದಕ್ಕೆ ನಮಗೆ ಬೆಳಕಿನ ಸಹಾಯವು ಬೇಕು. ಕನಸಿನಲ್ಲಿ ವಸ್ತುಗಳನ್ನು ನೋಡುವದಕ್ಕೆ ಬೆಳಕು ಯಾವದು? ನಾವು ಕನಸಿನ ಪ್ರಪಂಚವನ್ನು ಕಾಣುವದು ಚಂದ್ರನ ಬೆಳಕಿನಿಂದಲೋ? ನಕ್ಷತ್ರಗಳ ಬೆಳಕಿನಿಂದಲೋ? ದೀಪದ ಬೆಳಕಿನಿಂದಲೋ? ಸೂರ್ಯನ ಬೆಳಕಿನಿಂದಲೋ? ಅದು ಈ ಯಾವ ಬೆಳಕೂ ಅಲ್ಲ. ಅದು ನಿಮ್ಮ ಒಳಗಿನ ಬೆಳಕು ಎಲ್ಲ ವಸ್ತುಗಳ ತೋರಿಕೆಗೂ ಈ ಬೆಳಕೇ ಕಾರಣ. ಕನಸಿನಲ್ಲಿ ನೀವು ಬಗೆಬಗೆಯಾದ ವಸ್ತುಗಳನ್ನು ನೋಡಲು ಸಹಾಯವಾದ ಬೆಳಕೇ ಗಾಢ ನಿದ್ರೆಯಲ್ಲಿ ತಾನೇ ತಾನಾಗಿ ಬಿಡುಬಿಚ್ಚಾಗಿ ಬೆಳಗುತ್ತಿರುತ್ತದೆ. ಕನಸಿನಲ್ಲಿಯೂ ಗಾಢ ನಿದ್ರೆಯಲ್ಲಿಯೂ ಇರುವದು ಆ ಒಂದು ಬೆಳಕೇ. ನೀವು ಕನಸಿನಲ್ಲಿ ಚಂದ್ರನನ್ನು ನೋಡಿದರೆ ಆ ಚಂದ್ರನೂ ಚಂದ್ರನ ಬೆಳಕೂ ಕಾಣುತ್ತಿರುವದು ನಿಮ್ಮ ಒಳಗಿನ ಬೆಳಕಿನಿಂದಲೇ.

ನೀವು ಪೂರಾ ಬೆಳಕೇ ಆಗಿದ್ದೀರೆಂದು ಈ ದಿನ ವಿಚಾರದಿಂದ ಸಿದ್ಧಮಾಡಿ ತೋರಿಸಿದೆ. ನೀವು ಪ್ರಕಾಶಗಳಿಗೆಲ್ಲ ಪ್ರಕಾಶವಾಗಿದ್ದೀರಿ. ನದಿಯ ದೃಷ್ಟಾಂತದಲ್ಲಿ, ನದೀ ಮೂಲದಲ್ಲಿ ಇರುವ ಸೂರ್ಯನೇ (ಅದು ಸಮುದ್ರಕ್ಕೆ ಸೇರುವ) ನದೀ ಮುಖದಲ್ಲಿಯೂ ಇರುವಂತೆ ಎಚ್ಚರ, ಕನಸು, ನಿದ್ರೆ—ಈ ಮೂರು ಅವಸ್ಥೆಗಳಲ್ಲಿಯೂ ನಿಮ್ಮ ನಿಜವಾದ ಆತ್ಮನು ಒಬ್ಬನೇ ಆಗಿದ್ದಾನೆ. ಅದೇ ನೀವಾಗಿದ್ದೀರಿ. ಒಳಗಿರುವ ಆ ಸತ್ಯದೊಡನೆ ನೀವು ಒಂದೆಂದು ಭಾವಿಸಿದರೆ, ಅದೇ ನೀವೆಂದು ತಿಳಿದರೆ, ಆಗ ನೀವು ಸಬಲರೂ ಪ್ರಬಲರೂ ಶಕ್ತಿ ಸಂಪೂರ್ಣರೂ ಆಗುತ್ತೀರಿ. ಚಂಚಲವೂ ವಿಕಾರವೂ ಆದ

ವಸ್ತುಗಳನ್ನೇ ನೀವೆಂದು ಭಾವಿಸಿದರೆ, ಉರುಳುವ ಕಲ್ಲು ಗುಂಡು ಏನನ್ನೂ ಸಂಗ್ರಹಿಸದಿರುವಂತೆ ಆಗುತ್ತೀರಿ.

ಒಂದು ನದಿಯ ಮೂಲದಲ್ಲಿಯೂ ಮಧ್ಯದಲ್ಲಿಯೂ ಮುಖದಲ್ಲಿಯೂ ಇರುವ ಒಬ್ಬ ಸೂರ್ಯನೇ ಪ್ರಪಂಚದಲ್ಲಿರುವ ಎಲ್ಲಾ ನದಿಗಳ ಮೂಲ—ಮಧ್ಯ—ಮುಖದಲ್ಲಿಯೂ ಇದ್ದಾನೆ. ಇದರಂತೆ ನಿಮ್ಮ ಎಚ್ಚರ, ಕನಸು, ನಿದ್ರೆಗಳಲ್ಲಿ ಬೆಳಕಿಗೆ ಬೆಳಕಾಗಿರುವ ಒಬ್ಬ ಆತ್ಮನೇ ಪ್ರಪಂಚದಲ್ಲಿರುವ ಎಲ್ಲ ಜನರ ಎಚ್ಚರ, ಕನಸು, ನಿದ್ರೆಗಳಲ್ಲಿಯೂ ಆತ್ಮನಾಗಿದ್ದಾನೆ. ನಿಜವಾಗಿ ನೋಡಿದರೆ ಆ ಬೆಳಕು, ಅದರಿಂದ ಬೆಳಗಲ್ಪಡುತ್ತಿರುವ ವಸ್ತುಗಳಿಗಿಂತ ಬೇರೆಯಾಗಿಲ್ಲ. ಆ ಬೆಳಕುಗಳ ಬೆಳಕೇ ನೀವಾಗಿದ್ದೀರಿ. ನೀವು ಪ್ರಕಾಶಗಳಿಗೆಲ್ಲಾ ಪ್ರಕಾಶವೆಂಬ ತತ್ತ್ವವನ್ನು ಸಂತತವಾಗಿ ಅನುಸಂಧಾನ ಮಾಡಿ. ನಾನೇ ಅದು; 'ಸೋಹಂ' ನಾನೇ ಪ್ರಕಾಶಗಳಿಗೆಲ್ಲಾ ಪ್ರಕಾಶ. ಅದೇ ನಿಮ್ಮ ನಿಜವಾದ ಸಾರ, ತಿರುಳು. ಭಯವಿಲ್ಲ, ಮುನಿಸಿಲ್ಲ, ಶೋಕವಿಲ್ಲ; ಎಲ್ಲೆಲ್ಲಿಯೂ ಇರುವದು ಅದೇ. ಆ ಪ್ರಕಾಶವು ಹಿಂದೂ ಇಂದೂ ಮುಂದೂ ಎಂದೆಂದೂ ಒಂದೇ ಬಗೆಯಾದ ಸ್ಥಿರವೂ ನಿರ್ವಿಕಾರವೂ ಆದ ಸ್ವಭಾವವಾಗಿದೆ, ತತ್ತ್ವವಾಗಿದೆ. ಪ್ರಕಾಶಗಳಿಗೆಲ್ಲಾ ಪ್ರಕಾಶವಾದ ನನ್ನ ಚಿಜ್ಜ್ಯೋತಿಯ ಸಾಗರದಲ್ಲಿ ಇಡೀ ಜಗತ್ತು ಅಲೆಗಳಾಗಿಯೂ ಸುಳಿಗಳಾಗಿಯೂ ತೆರೆಗಳಾಗಿಯೂ ನೊರೆಗಳಾಗಿಯೂ ಕಾಣುತ್ತಿದೆ.

ಈ ಮುಂದಿನ ಸಾಧನಕ್ರಮವು ಈ "ಸಣ್ಣ ನಾನು" ಎನ್ನುವದನ್ನು ಮುಸುಕಿರುವ ಪರದೆಯನ್ನು ಎತ್ತಲು ಅತ್ಯಂತ ಉಪಯುಕ್ತವಾಗುತ್ತದೆ.

People say 'when you walk, have a friend to talk.'

"ನೀವು ನಡೆದಾಡುವಾಗ ನಿಮ್ಮೊಡನೆ ಮಾತನಾಡುವದಕ್ಕೆ ಮಿತ್ರನೊಬ್ಬನಿರಲಿ" ಎಂದು ಜನರು ಹೇಳುತ್ತಾರೆ. ಈ ಕೆಳಗಿನ ಕಾರಣಗಳಿಗಾಗಿ ಇದು ಕೇವಲ ಭ್ರಾಮಕವೇ ಸರಿ.

1. ನಾವು ಒಬ್ಬರೇ ಅಡ್ಡಾಡುವಾಗ ನಮ್ಮ ಉಸಿರು ಸ್ವಾಭಾವಿಕವಾಗಿರುತ್ತದೆ. ಅದು ಛಂದೋಬದ್ಧವಾಗಿಯೂ ಲಯಬದ್ಧವಾಗಿಯೂ ಆರೋಗ್ಯಕ್ಕೆ ಅನುಕೂಲವಾಗಿಯೂ ಇರುತ್ತದೆ. ಈ ಕಾರಣಕ್ಕಾಗಿಯೇ ಪ್ರಸಿದ್ಧ ತತ್ತ್ವಜ್ಞಾನಿಯಾದ ಕ್ಯಾಂಟ್‌ನು, ತನ್ನ ಜೀವನದ ಕೊನೆಯ ದಿನಗಳಲ್ಲಿ ಉಸಿರಿನ ಸಾಮರಸ್ಯವನ್ನು ಸಾಧಿಸುವದಕ್ಕಾಗಿ ಒಬ್ಬನೇ ವಿಹಾರಾರ್ಥವಾಗಿ ಹೋಗುತ್ತಿದ್ದನು. ಇದರಿಂದ ಅವನು ಬಹಳ ವೃದ್ಧನಾಗುವವರೆಗೂ ಬದುಕಿದ್ದನು. ನಾವು ಒಬ್ಬರೇ ನಡೆದಾಡುವಾಗ ನಾಸಿಕದ ಮೂಲಕವಾಗಿ ಉಸಿರಾಡಬಹುದು; ಆದರೆ ನಾವು ಮಾತನಾಡುತ್ತಿರುವಾಗ ನಮ್ಮ ಬಾಯಿಯಿಂದಲೇ ಉಸಿರಾಡಬೇಕಾಗುತ್ತದೆ. ಅದು ಉತ್ತೇಜಕವೂ ಶ್ವಾಸಕೋಶಗಳಿಗೆ

ಶಕ್ತಿದಾಯಕವೂ ಆಗಿರುತ್ತದೆ. ದೇವರು ಮನುಷ್ಯನ ಮೂಗಿನೊಳಗೆ ಪ್ರಾಣ ವಾಯುವನ್ನು ಊದಿದನೇ ಹೊರತು ಬಾಯಿಯೊಳಗಲ್ಲ. ನಾವು ಮುಖದಿಂದ ಉಸಿರನ್ನು ಬಿಡಬಹುದು, ಆದರೆ ಯಾವಾಗಲೂ ಮೂಗಿನಿಂದಲೇ ಉಸಿರನ್ನು ತೆಗೆದುಕೊಳ್ಳಬೇಕು. ಶ್ವಾಸಕೋಶಗಳೊಳಗೆ ಪ್ರವೇಶಿಸುವ ಗಾಳಿಯು ಮೂಗಿನೊಳಗಿರುವ ಕೂದಲುಗಳಿಂದ ಶೋಧಿಸಲ್ಪಡುತ್ತದೆ.

2. ನಾವೊಬ್ಬರೇ ( Walking alone ) ನಡೆದಾಡುವಾಗ, ಆಲೋಚಿಸುವದಕ್ಕೆ ಅತ್ಯುತ್ತಮವಾದ ಮನೋಭಾವವಿರುತ್ತದೆ; ದಿವ್ಯವಾದ ವಿಚಾರಗಳು ನಮ್ಮನ್ನೇ ಹುಡುಕಿಕೊಂಡು ಬರುತ್ತವೆ. ಅಕಸ್ಮಾತ್ ನಮ್ಮ ಕಾಲಿಗೆ ಏನೋ ತೊಡಕಿ ಬಿದ್ದಾಗ ತಡಕಿ ನೋಡಿದರೆ, ನಾವು ಹುಡುಕುತ್ತಿದ್ದ ವಸ್ತುವಿಗಿಂತಲೂ ಬಹಳ ಹೆಚ್ಚಿನ ನಿಧಿಯೇ ಕೈಗೆ ಸಿಕ್ಕಂತೆ ವಿಜ್ಞಾನಿಗಳ ಅನೇಕ ಅದ್ಭುತ ಶೋಧಗಳಾಗಿವೆ. ಯಾರ ಸಹವಾಸವೂ ಇಲ್ಲದೆ ನಿರ್ಜನವಾದ ಸ್ಥಳದಲ್ಲಿ ಒಬ್ಬರೇ ನಡೆದು ಹೋಗುವಾಗ ಅಸಾಧಾರಣವಾದ ವಿಚಾರಗಳು ತಾವಾಗಿಯೇ ನಮ್ಮನ್ನು ಹುಡುಕಿಕೊಂಡು ಬರುವವೆಂಬ ಮರ್ಮವನ್ನು ಲಾರ್ಡ್ ಕ್ಲೈವನು, – ಅಕಸ್ಮಾತ್ ಆ ರಹಸ್ಯದ ಮೇಲೇ ಎಡವಿ ಬಿದ್ದಂತೆ–ಹೇಗೋ ಕಂಡುಕೊಂಡನು. ಆದ್ದರಿಂದ ಅವನು ಇಂಡಿಯಾದೇಶದ ರಾಜಕಾರಣದಲ್ಲಿ ಅತ್ಯಂತ ಜಟಿಲವಾದ ಸಮಸ್ಯೆಯನ್ನು ಚಿಂತಿಸುವಾಗ ಒಬ್ಬನೇ ಇತ್ತಿಂದತ್ತ ಅತ್ತಿಂದಿತ್ತ ನಡೆದಾಡುತ್ತಿದ್ದನು,–ಅಲಾಯಿಸುತ್ತಿದ್ದನು. ಹೀಗೆ, ಬೌದ್ಧಿಕವಾದ ಬೆಳವಣಿಗೆಯಲ್ಲಿ, ಒಬ್ಬರೇ 'ವಾಕಿಂಗ್' ಹೋಗಿ ಬರುವದು ಅತ್ಯಂತ ಪ್ರಯೋಜನಕರವಾಗುತ್ತದೆ. ಜನರ ಜೊತೆಯಲ್ಲಿ 'ವಾಕಿಂಗ್' ಹೋದರೆ ಅವರು ಹಾಳು ಹರಟೆಗಳನ್ನು ಹೊಡೆದು ಮನಸ್ಸನ್ನು ಹೊಲಸುಮಾಡಬಹುದು, ಕಳೆದು ಹೋಗಿರುವ ಹಳೆಯ ವಿಚಾರಗಳನ್ನು ತೆಗೆದು ರಾಗದ್ವೇಷಗಳನ್ನು ಕೆರಳಿಸಬಹುದು; ಸದಾಕಾಲವೂ ಅವರು ತಮ್ಮ ಅಭಿಪ್ರಾಯವನ್ನೋ ಇನ್ನೊಬ್ಬರ ಅಭಿಪ್ರಾಯವನ್ನೋ ನಮ್ಮ ಮನಸ್ಸಿನ ಮೇಲೆ ಒತ್ತಾಯದಿಂದ ಹೇರುತ್ತಿರಬಹುದು, ಇದರಿಂದ ಹೊಸ ವಿಚಾರಗಳು ಅಥವಾ ತಾತ್ತ್ವಿಕ ವಿಚಾರಗಳು ನಮ್ಮ ಮನಸ್ಸಿನಲ್ಲಿ ಮೂಡುವದಕ್ಕೆ ಅವಕಾಶವೇ ಆಗುವದಿಲ್ಲ. ಹೀಗಾಗಿ, ನಾವು ಒಬ್ಬರೇ 'ವಾಕಿಂಗ್' ಹೋಗಿದ್ದರೆ ಯಾವ ನೂತನವೂ ಭವ್ಯವೂ ದಿವ್ಯವೂ ಆದ ವಿಚಾರಗಳು ನಮ್ಮ ಮನಸ್ಸಿನಲ್ಲಿ ಮೂಡ ಬಹುದಾಗಿತ್ತೋ ಅಥವಾ ನಮ್ಮ ಮನಸ್ಸನ್ನು ಮುಸುಕಬಹುದಾಗಿತ್ತೋ ಅವನ್ನು ಹೊರಗಟ್ಟಿದಂತಾಗುತ್ತದೆ. ಅಲ್ಲದೆ ಮಾತನಾಡುವದರಿಂದ ಆಯಾಸವು ಹೆಚ್ಚಾಗಿ, ಶಕ್ತಿಯು ವ್ಯರ್ಥವಾಗಿ ವ್ಯಯವಾಗುವದೇ ಹೊರತು ವೃದ್ಧಿಯಾಗುವದಿಲ್ಲ.

3. ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರ ಮಾಡಿದರೆ, ಒಬ್ಬರೇ ನಡೆದುಹೋಗುವಾಗ ನಮ್ಮ ಮನಸ್ಸು ವಿಭಾಗಮಾಡುವ ಶಕ್ತಿಯನ್ನೂ ವೈಷಮ್ಯ ವುಂಟುಮಾಡುವ ವಿಷಯಗಳನ್ನೂ ಕೊಡವಿಕೊಂಡು ತನ್ನ ಕೇಂದ್ರ ಬಿಂದುವನ್ನು ತಾನು ಪಡೆಯುತ್ತದೆ.

ಆಗ ಆತ್ಮನ ಆರಾಮಧಾಮವಾದ ಕಲ್ಪನಾ ಸೀಮವು ತನ್ನಲ್ಲಿ ತಾನು ರಮಿಸುವದಕ್ಕೆ ಅವಕಾಶ ಪಡೆಯುತ್ತದೆ. ಇದರಿಂದ ಇಡೀ (ಶರೀರ) ಪ್ರಕೃತಿಯೇ ಚೇತನಗೊಳ್ಳುತ್ತದೆ; ಉತ್ತೇಜಿತವಾಗುತ್ತದೆ.

"ನಾನು ಸಾಕ್ಷಾತ್ ಆನಂದದ ಅವತಾರ" "ನಾನು ಪ್ರಕಾಶಗಳಿಗೆಲ್ಲಾ ಪ್ರಕಾಶ" ಎಂದು ನಿಮಗೆ ನೀವೇ ಸೂಚನೆಯನ್ನು ಕೊಟ್ಟು ಕೊಳ್ಳಿ. ನಮ್ಮ ಹೆಚ್ಚಿನ ಧೀಶಕ್ತಿಗಳನ್ನು ವಿಕಾಸ ಗೊಳಿಸಿಕೊಳ್ಳಬೇಕಾದರೆ ಈ ಬಗೆಯ ಭಾವನೆಗಳನ್ನೇ ಹೆಚ್ಚಾಗಿ ಬೆಳೆಸಿಕೊಳ್ಳಬೇಕು. ಮಧ್ಯರಾತ್ರಿಯ ಬೆಳ್ದಿಂಗಳಲ್ಲಿಯೂ ಮುಂಜಾನೆಯಲ್ಲಿ ಅರುಣೋದಯಕ್ಕೆ ಮುಂಚೆಯೂ ನಿರ್ಜನವೂ ನಿಶ್ಶಬ್ದವೂ ಆದ ಬಯಲಿನಲ್ಲಿ ಮಾಡುವ 'ವಾಕಿಂಗ್' **(Walking)** ನಿಂದ ಅವರ್ಣನೀಯವಾದ ಗುಣವೂ ಒಳಿತೂ ಉಪಯೋಗವೂ ಇವೆ. ನಡೆಯುವಾಗ ಉಸಿರಾಡುವದೂ ಹೆಜ್ಜೆ ಹಾಕುವದೂ ಲಯಬದ್ಧವಾಗಿರಬೇಕು; ಮೈಯೂ ಬೆನ್ನು ಹುರಿಯೂ ಕುತ್ತಿಗೆಯೂ ತಲೆಯೂ ನೆಟ್ಟಗೆ ಸರಳ ರೇಖೆಯಲ್ಲಿರಬೇಕು. 'ಉಡ್ಡಿಯಾನ' ಮಾಡಿದಂತೆ ನಾಭಿಯನ್ನು ಅಥವಾ ಉದರವನ್ನು ಸಾಧ್ಯವಾದಷ್ಟು ಒಳಗೆ ಎಳೆದು ಕೊಂಡಿರಬೇಕು. ಈ ಸಾಧನಕ್ಕೆ ಆಹಾರವನ್ನು ತೆಗೆದುಕೊಂಡು ಮೂರು ನಾಲ್ಕು ಗಂಟೆಗಳ ಕಾಲವಾದರೂ ಆಗಿರಬೇಕು. ಕಾಲುಗಳ ಚಲನೆಯನ್ನು ಅನುಸರಿಸಿ ಕೈಗಳೂ ಛಂದೋಬದ್ಧವಾಗಿ ಚಲಿಸುತ್ತಿರಬೇಕು. ಶರೀರವೂ ಇಷ್ಟು ನಿಯಮಶೀಲವಾಗಿದ್ದರೂ ನಮ್ಮ ಸಚ್ಚಿದಾನಂದ ಸ್ವರೂಪದ ಸ್ಮರಣೆಯಲ್ಲಿ ದೇಹವನ್ನು ಮರೆತಿರಬೇಕು. 'ವಾಕಿಂಗ್'ನಿಂದ ವ್ಯಾಯಾಮವೂ ಮನಸ್ಸಿಗೆ ಉಲ್ಲಾಸವೂ ಉಂಟಾಗುತ್ತವೆ. ಅಸ್ತಂಗತವಾಗುತ್ತಿರುವ ಅಥವಾ ಉದಯವಾಗುತ್ತಿರುವ ಸೂರ್ಯನ ಎದುರಾಗಿ ನಡೆಯಬೇಕು. ನದಿಗಳ ದಂಡೆಗಳಲ್ಲಿಯೂ ತಂಪಾದ ಮಂದಮಾರುತನು ಬೀಸುತ್ತಿರುವ ವನಗಳಲ್ಲಿಯೂ ಸಂಚರಿಸಿದರೆ ಪ್ರಕೃತಿಯೊಡನೆ ಶ್ರುತಿಗೂಡಿದಂತೆಯೂ ವಿಶ್ವದೊಡನೆ ಸಮರಸಭಾವದಲ್ಲಿಯೂ ನಿಮ್ಮನ್ನು ನೀವು ಕಂಡುಕೊಳ್ಳುತ್ತೀರಿ.

ಓಂ ! ಓಂ ! ಓಂ !

---

# BE NOT CENTRE OUT

## ನಿಮ್ಮ ಲಕ್ಷ್ಯದ ಕೇಂದ್ರವು, ನಿಮ್ಮ ಪ್ರೀತಿ ವಿಶ್ವಾಸಗಳ- ಆತ್ಮಶ್ರದ್ಧೆಯ–ಕೇಂದ್ರವು ನಿಮ್ಮೊಳಗೇ ಇರಲಿ; ಅದನ್ನು ಹೊರಗೆಸೆಯ ಬೇಡಿ.

### ತಾ|| 9-6-1903 ಅಮೆರಿಕಾದಲ್ಲಿ 'ಕ್ಯಾಸಲ್ ಸ್ಪ್ರಿಂಗ್ಸ್' ನಲ್ಲಿ ಮಾಡಿದ ಉಪನ್ಯಾಸ.

ಗೌರವಸ್ಥರಾದ ಸ್ತ್ರೀಪುರುಷ ರೂಪದಲ್ಲಿರುವ ನನ್ನ ಆತ್ಮವೇ !

ಊಟಮಾಡುತ್ತಿರುವಾಗ ಮಾತನಾಡುತ್ತಿರುವದು ಇಲ್ಲಿಯ ಜನರ ಪದ್ಧತಿಯು; ಆದರೆ ಇಂಡಿಯಾದಲ್ಲಿರುವ ಪದ್ಧತಿಯೇ ಬೇರೆ. ಅಲ್ಲಿ ಊಟಮಾಡುವಾಗ ಎಂದೂ ಮಾತನಾಡಬಾರದು. ಊಟ ಮಾಡುವಾಗ ಅಥವಾ ತಿನ್ನುವಾಗ ಆ ಕಾರ್ಯವನ್ನು ಪ್ರತಿಯೊಬ್ಬರೂ ಧಾರ್ಮಿಕ ಸಾಧನವನ್ನಾಗಿಯೂ ಪವಿತ್ರವನ್ನಾಗಿಯೂ ಮಾಡಿ ಕೊಳ್ಳಬೇಕು. ಬಾಯಿಯೊಳಗೆ ಹಾಕಿಕೊಳ್ಳುವ ಪ್ರತಿಯೊಂದು ತುತ್ತಿನ ಜೊತೆಗೂ "ಇದು ಹೊರಗಿನ ಜಗತ್ತಿನ ಒಂದು ಪ್ರತೀಕ; ಈ ನಿಮಿತ್ತದಿಂದ ನಾನು ಇಡೀ ವಿಶ್ವ ವನ್ನೇ ನನ್ನೊಳಗೆ ಸಂಯೋಜಿಸುತ್ತಿದ್ದೇನೆ. ಆಹಾರ ಪಿಂಡಗಳ ಸತ್ತ್ವಸಾರದಿಂದ ಉತ್ಪನ್ನ ವಾಗಿ ಜೀವಿಸಿರುವ ಈ ಪಿಂಡಾಂಡವು ಸೇವಿಸುವ ಪ್ರತಿಯೊಂದು ಆಹಾರ ಪಿಂಡವೂ ಬ್ರಹ್ಮಾಂಡದ ಅಂಶವೂ ಪ್ರತಿಬಿಂಬವೂ ಆಗಿರುವದರಿಂದ ತತ್ತ್ವಶಃ ಬ್ರಹ್ಮಾಂಡವೇ ಆಗಿದೆ. ಚೈತನ್ಯ ಸ್ವರೂಪನಾದ ನನ್ನಲ್ಲಿ ಭೋಕ್ತೃ–ಭೋಗ್ಯ–ಭೋಗ ಎಂಬ ತ್ರಿಪುಟಿ ಗಳು ಕಲ್ಪಿತವಾಗಿರುವದರಿಂದ ಚೈತನ್ಯವೇ ಈ ಎಲ್ಲವೂ ಆಗಿ ತೋರಿಕೊಳ್ಳುತ್ತಾ ಎಲ್ಲವೂ ಆಗಿದೆ." ಎಂದು ಭಾವಿಸುತ್ತಾ ಚಿಂತಿಸುತ್ತಿರಬೇಕು. ಭಾರತೀಯರು ಅಥವಾ ಹಿಂದೂಗಳು ತಿನ್ನುವಾಗಲೂ ಉಣ್ಣುವಾಗಲೂ ಈ ಭಾವನೆಯನ್ನೇ ಮನಸ್ಸಿನಲ್ಲಿ ಮೆಲುಕು ಹಾಕುತ್ತಾ ಓಂಕಾರವನ್ನು ಉಚ್ಚರಿಸುತ್ತಾರೆ. "ಓಂ, ಓಂ, ಓಂ, ವಿಶ್ವವೇ ನನ್ನ ಒಳಗಿದೆ; ಪ್ರಪಂಚವೇ ನನ್ನ ದೇಹ. ಚೈತನ್ಯ ಸ್ವರೂಪನಾದ ನನ್ನಿಂದ ಎಲ್ಲವೂ ಚೇತನಗೊಳ್ಳುತ್ತಿವೆ. ಓಂ, ಓಂ, ಓಂ" ಎಂದು ಸಂತತವಾಗಿ ಅವರು ಧ್ಯಾನಿಸುತ್ತಾರೆ. ಹೀಗೆ ಪ್ರತಿಯೊಂದು ತುತ್ತಿನಿಂದಲೂ ಅವರು ತಮ್ಮ ಆಧ್ಯಾತ್ಮಿಕ ಶಕ್ತಿಯನ್ನು ಬೆಳೆಸಿ ಕೊಳ್ಳುತ್ತಾರೆ. ಆಧಿಭೌತಿಕ ಆಹಾರದ ಜೊತೆಗೆ ಆಧ್ಯಾತ್ಮಿಕ ಆಹಾರವೂ ಸೇರಿ ಕೊಳ್ಳುತ್ತದೆ. ಇಡೀ ಜಗತ್ತು ನನ್ನ ರಕ್ತಮಾಂಸಗಳೇ, ನಾನೇ. ಆಹಾರವು ಇಡೀ ಜಗತ್ತಿನ ಪ್ರತೀಕವಾಗಿ ನನ್ನ ರಕ್ತಮಾಂಸಗಳಾಗಿವೆ. ಸಕಲವೂ ಒಂದರಲ್ಲಿದೆ,

ಒಂದಾಗಿದೆ. ಈ ಭಾವನೆಗಳೆಲ್ಲಾ ಹಿಂದೂಗಳ ಮನಸ್ಸಿಗೆ ಚೆನ್ನಾಗಿ ಪರಿಚಿತವಾಗಿರುವದರಿಂದ ಆ ಎಲ್ಲಾ ವಿಚಾರಗಳೂ ಭಾವಗಳೂ ಅವರ ಮನಸ್ಸಿನಲ್ಲಿ ಗುಂಪುಗೂಡಿ ತುಂಬಿಕೊಂಡು ಅವರ ವೇದನೆಗಳೂ ರಾಗಭಾವಗಳೂ ( Feelings and emotions) ಸಂಕಲ್ಪ ಶಕ್ತಿಯೂ—ಅವರಿಗೆ ವಿಶ್ವಾತ್ಮಭಾವವು ಕೂಡಲೇ ಅನುಭವದಲ್ಲಿ ಆಳವಡುವಷ್ಟು ತೀವ್ರವಾಗಿ—ಬಲಗೊಳ್ಳುತ್ತವೆ. ಪಶು ಧರ್ಮವೆನಿಸಿದ ಭೋಜನವೇ ಆಧ್ಯಾತ್ಮ ಸಾಧನವಾಗುತ್ತದೆ.

ಸ್ನಾನಮಾಡುವಾಗ ಜಲಾಧಿದೇವತೆಯನ್ನು ಸ್ತುತಿಸುವ ಮಂತ್ರವನ್ನು ಉಚ್ಚರಿಸಬೇಕು. ಜಲವೆಂದರೆ ಘನವಾದ ಭೂಮಿಯ ಮೇಲಿರುವ ಸಮುದ್ರವು. ವಸ್ತ್ರಗಳನ್ನೆಲ್ಲಾ ಕಳೆದು ಸ್ನಾನ ಮಾಡುವಾಗ ನೀರು ಶರೀರದ ಪ್ರತಿಯೊಂದು ರೋಮಕೂಪದಲ್ಲಿಯೂ ಸೇರಿಕೊಳ್ಳುವದರಿಂದ ನಾವು ಪ್ರಕೃತಿಯೊಡನೆಯೂ ಮೀನು ಮೊದಲಾದ ಜಲಚರಗಳೊಡನೆಯೂ ಒಂದಾಗುತ್ತೇವೆ. ವಿಶ್ವದ ಜಲರಾಶಿಯೊಡನೆ ನಮಗಿರುವ ಸಹೋದರಭಾವವನ್ನು ಹಿಂದಿರುಗಿ ಪಡೆಯುತ್ತೇವೆ. ನೀರು ದೇಹದ ಕೊಳೆಯನ್ನು ತೊಳೆದಂತೆ ಆತ್ಮನ ಮಲವನ್ನೂ ಕಳೆಯುತ್ತದೆ. ಇಡಿಯ ವಿಶ್ವವೇ ನನ್ನ ಆಹಾರ; ನಾನು ಗಾಳಿಯನ್ನೇ ಸೇವಿಸುತ್ತೇನೆ. ಹೀಗೆ ವೇದಾಂತದ ಪ್ರಕಾರ ಬಾಳಿನಲ್ಲಿಯ ಪ್ರತಿಯೊಂದು ಕ್ರಿಯೆಯನ್ನೂ ಪ್ರತಿಯೊಂದು ಸಾಧನವಿಧಾನವನ್ನೂ ಧಾರ್ಮಿಕ ಕ್ರಿಯೆಯನ್ನಾಗಿ ಪರಿವರ್ತನ ಮಾಡಬೇಕು. ರೋಗಗಳನ್ನು ಕೂಡ ದೇವತಾ ಭಾವನೆಯಿಂದ ನೋಡುತ್ತೇವೆ.

ಇಂಡಿಯಾ ದೇಶದಲ್ಲಿ ಒಂದು ಮನೆಯಲ್ಲಿ ಸಿಡುಬು ರೋಗವು ಬಂದರೆ ಆ ಮನೆಯ ಜನರು ಎಂದೂ ಚಿಂತೆ ಮಾಡುವದಿಲ್ಲ; ಏನನ್ನೂ ಮಾಡುವದಿಲ್ಲ. ಅದಕ್ಕೆ ವಿರುದ್ಧವಾಗಿ ಅವರು ಸಂತೋಷ ಪಡುತ್ತಾರೆ. ಅದು ಆಶ್ಚರ್ಯವಲ್ಲವೆ? ಮನೆಯಲ್ಲಿ ಸಂಗೀತವನ್ನೂ ಭಜನೆಯನ್ನೂ ಏರ್ಪಡಿಸುತ್ತಾರೆ. ಅದೊಂದು ಧರ್ಮಾಚರಣೆಯ ಸಂಭ್ರಮದ ಸಮಯವಾಗುತ್ತದೆ. ಆ ಮನೆಯಲ್ಲಿ ಪ್ರತಿಯೊಬ್ಬರೂ ದೇವಿಯನ್ನು ಪೂಜಿಸುತ್ತಾರೆ. ಮಗುವಿಗೆ ಗುಣವಾದಾಗ ದಾನಧರ್ಮಗಳನ್ನು ಮಾಡಿ, ದೇವಿಯನ್ನು ಪೂಜಿಸಿ, ವಾದ್ಯಗಳನ್ನು ಮೊಳಗಿಸಿ, ಜಗಜ್ಜನನಿಯೂ ವಿಶ್ವಾತ್ಮಳೂ ಆದ ದೇವಿಯಲ್ಲಿ ಪ್ರೇಮವನ್ನೂ ಕೃತಜ್ಞತೆಯನ್ನೂ ಭಕ್ತಿಯನ್ನೂ ತೋರಿಸಿ, ಸಂತೋಷವನ್ನು ವ್ಯಕ್ತ ಮಾಡುತ್ತಾರೆ. ಆದರೆ ಇತ್ತೀಚೆಗೆ ಜನತೆಯಲ್ಲಿ ಈ ಬಗೆಯ ಕಾರ್ಯಕಲಾಪಗಳು ತಮ್ಮ ಮಹತ್ವವನ್ನು ಕಳೆದು ಕೊಂಡಿವೆ. ಜನರು ಆ ಆಚರಣೆಗಳ ಅರ್ಥವನ್ನು ಅರಿತಿದ್ದಾರೋ ಇಲ್ಲವೋ ರಾಮನಂತೂ ಅವುಗಳ ಅರ್ಥವನ್ನು ಚೆನ್ನಾಗಿ ಅರಿತಿರುವದರಿಂದ ಅವುಗಳನ್ನು ಅತ್ಯುತ್ತಮವಾದ ಉಪಯೋಗಕ್ಕೆ ಹಚ್ಚುತ್ತಾನೆ.

ನಿಮ್ಮಲ್ಲಿ ಪ್ರತಿಯೊಬ್ಬರಿಗೂ ರಾಮನು ಒಂದು ಸಲಹೆಯನ್ನು ನೀಡುತ್ತಾನೆ. ಮುಂಜಾನೆಯಲ್ಲಿ ನೀವು ಮುಂಚೆ ಎದ್ದಾಗ 'ವಾಕಿಂಗ್' ಹೋಗಬಹುದು; ಅಥವಾ

ಏನನ್ನಾದರೂ ಮಾಡಬಹುದು, ಆದರೆ ನಿಮ್ಮ ಆಲೋಚನೆಗಳನ್ನೆಲ್ಲಾ ಹೃದಯದಲ್ಲಿಯೇ ಅಡಗಿಸಿಟ್ಟು, ಸಮಾಹಿತ ಚಿತ್ತರಾಗಿರಿ. ಯಾವಾಗಲೂ ನಿಮ್ಮ ಆತ್ಮಶ್ರದ್ಧೆಯ ಕೇಂದ್ರವು ನಿಮ್ಮೊಳಗೇ ಇರಲಿ. ಆ ಕೇಂದ್ರವು ಹೊರಗೆ ಬೀಳದಿರಲಿ. ನೀರಿನ ಸಾಗರದಲ್ಲಿ. ಮೀನುಗಳು ಜೀವಿಸುವಂತೆಯೂ ವಾಯುಸಾಗರದಲ್ಲಿ ಹಕ್ಕಿಗಳು ಬಾಳುವಂತೆಯೂ ಪ್ರಕಾಶಸಾಗರದಲ್ಲಿ ನೀವು ಜೀವಿಸುತ್ತಿದ್ದೀರಿ. ಬೆಳಕಿನಲ್ಲಿಯೇ ನೀವು ಜೀವಿಸಿ, ಚಲಿಸಿ, ವ್ಯವಹರಿಸುತ್ತಿದ್ದರೂ ಬೆಳಕಿನ ಕಡೆ ನಿಮ್ಮ ಗಮನವೇ ಹರಿಯುವದಿಲ್ಲ; ಬೆಳಕನ್ನು ನೀವು ನೋಡುವದಿಲ್ಲ; ಅರಿಯುವದಿಲ್ಲ. ವಿಜ್ಞಾನದ ದೃಷ್ಟಿಯಿಂದ ನೋಡಿದರೆ ಕತ್ತಲೆಯಲ್ಲಿ ಕೂಡ ಇರುವದು ಬೆಳಕೇ ಆಗಿದೆ. ಆದರೆ ಆ ಬೆಳಕು ನಮ್ಮ ಕಣ್ಣಿಗೆ ಗ್ರಹಿಸಬಹುದಾದಷ್ಟು ತೀವ್ರವಾಗಿಯೂ ನಿಬಿಡವಾಗಿಯೂ ಇರುವದಿಲ್ಲ. ಹುಲಿ, ಬೆಕ್ಕು, ಗೂಬೆ ಮೊದಲಾದ ಬೇರೆ ಪ್ರಾಣಿಗಳು ಕತ್ತಲೆಯಲ್ಲಿ ವಸ್ತುಗಳನ್ನು ನೋಡಬಲ್ಲವು. ನಮ್ಮ ಕತ್ತಲೆಯು ಅವುಗಳಿಗೆ ಬೆಳಕಾಗುತ್ತದೆ. ಹೊರಗಿನ ಬೆಳಕನ್ನು ಉಪಯೋಗಿಸಿಕೊಳ್ಳುವದಕ್ಕೆ ಬೇಕಾಗುವ ಒಳಗಿನ ಬೆಳಕಂತೂ ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದೇ ಇದೆ. ಗಾಢ ನಿದ್ರೆಯಲ್ಲಿ ಕೂಡ (ಎಲ್ಲಾ ಪ್ರಾಣಿಗಳಿಗೂ) ಬೆಳಕು ಇದ್ದೇ ಇದೆ. ಏಕಾಗ್ರತೆಗೆ ಸಹಾಯವಾಗಿ, ಅನುಭಾವದ ಅತ್ಯುನ್ನತ ಶಿಖರಕ್ಕೆ ಏರುವದಕ್ಕೆ ಸಾಧಕರು ಪ್ರಾರಂಭದಶೆಯಲ್ಲಿ ಜ್ಯೋತಿಯ (ಪ್ರಕಾಶದ) ಉಪಾಸನೆಯನ್ನು ಮಾಡುವದು ಅತ್ಯಂತ ಅವಶ್ಯವಾಗಿ ಕಂಡುಬಂದಿದೆ.

ರೋಮನ್ ಕ್ಯಾಥೋಲಿಕ್ ಕ್ರೈಸ್ತರು ವಿಗ್ರಹವನ್ನು ಪೂಜಿಸುವಂತೆ ಪ್ರಕಾಶವು ಒಂದು ವಸ್ತುವೆಂದು ನಾವು ಅದನ್ನು ಪೂಜಿಸುವದಿಲ್ಲ. ಜಗತ್ತಿನ ಪ್ರಕಾಶವನ್ನು ನೀವೆಂದು ಎಡೆಬಿಡದೆ ಚಿಂತಿಸುವದರಿಂದ ಪ್ರಾರಂಭಿಸಬೇಕೆಂದೂ ಅದರಿಂದ ನಿಮಗೆ ಆತ್ಮಾನುಭವವು ಅತ್ಯಂತ ನಿಶ್ಚಿತವಾಗಿ ಬರುವದೆಂದೂ ಹಿಂದೂ ಶಾಸ್ತ್ರಗಳು ಮೇಲಿಂದ ಮೇಲೆ ಬೋಧಿಸುತ್ತವೆ. ನೀವು ಓಂಕಾರವನ್ನು ಉಚ್ಚರಿಸುವಾಗ "ನಾನು ಪ್ರಕಾಶ ವೈಭವ" ಎಂದು ಧ್ಯಾನಿಸಿರಿ. ನೀವೇ ಪ್ರಕಾಶ. ಹಿಂದೂ ಶಾಸ್ತ್ರಗಳಲ್ಲಿ ಅತಿಶಯ ವೈಜ್ಞಾನಿಕವಾಗಿ ತರಲ್ಪಟ್ಟಿರುವ ಈ ಭಾವನೆಯನ್ನು ಎಲ್ಲಾ ಧರ್ಮೋಪದೇಶಕರೂ ಅಕಸ್ಮಾತ್ ಅದರ ಮೇಲೆ ಎಡವಿ ಬಿದ್ದಂತೆ ಕಂಡು ಹಿಡಿದರು. ಕ್ರಿಸ್ತನು "ನಾನು ಜಗಜ್ಜ್ಯೋತಿ" ಎಂದು ಹೇಳಿದನು. ಮಹಮ್ಮದನೂ ಮತ್ತು ಎಲ್ಲಾ ಮಹಾತ್ಮರೂ ಹೀಗೆಯೇ ಹೇಳಿದ್ದಾರೆ. ಬೆಳಕಾಗಿ ನೀವು ಎಲ್ಲಾ ವಸ್ತುಗಳಲ್ಲಿಯೂ ಒಳಹೊಕ್ಕು ಹರಡಿಕೊಂಡಿದ್ದೀರಿ. ಈ ಭಾವನಾ ವಿಚಾರಗಳನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಂಡಿರಬೇಕು. ಹಾಗಾದರೆ ನೀವು ಯಾವಾಗಲೂ ದೇವರ ಸಂಪರ್ಕದಲ್ಲಿರುತ್ತೀರಿ. ಹೀಗೆ ಹಿಂದುವು ಯಾವಾಗಲೂ ಚೈತನ್ಯದೊಡನೆ ಸಮರಸ ಭಾವದಲ್ಲಿರುವಂತೆ ಪ್ರತಿಯೊಂದು ಕಾರ್ಯವನ್ನೂ ಧರ್ಮದೃಷ್ಟಿಯಿಂದಲೇ ಮಾಡುತ್ತಾನೆ.

ನಮಗೆ ಇಷ್ಟವಿರದಿದ್ದರೂ ಇಷ್ಟವಿದ್ದರೂ ಪ್ರಕೃತಿಯ ಎಲ್ಲಾ ಶಕ್ತಿಗಳೂ ನಮಗೆ ಆತ್ಮಾನುಭವವನ್ನು ತಪ್ಪದೆ ಅವಶ್ಯವಾಗಿ ಕೊಟ್ಟೇ ಕೊಡುವದಕ್ಕೆ ಸಿದ್ಧವಾಗಿವೆ.

ಈ ಕಾರ್ಯ ಸಾಧನೆಗೆ ಅನುಕೂಲ ಪರಿಸ್ಥಿತಿ, ಪ್ರತಿಕೂಲ ಪರಿಸ್ಥಿತಿಗಳು ಯಾವ ವ್ಯತ್ಯಾಸವನ್ನೂ ಮಾಡುವದಿಲ್ಲ. ನಡೆದಾಡುವದರಲ್ಲಿ ನಮ್ಮ ಒಂದು ಕಾಲನ್ನು ಕೆಳಗಿಟ್ಟಾಗ ಇನ್ನೊಂದು ಕಾಲನ್ನು ಮೇಲೆತ್ತುವಂತೆ ಸುಖ ದುಃಖಗಳು ಎಡೆಬಿಡದೆ ಒಂದನ್ನೊಂದು ಹಿಂಬಾಲಿಸುತ್ತವೆ. ಇಡೀ ವಿಶ್ವದ ಆದ್ಯಂತವಾಗಿ ಇದೇ ಕ್ರಮವೇ ಕೆಲಸಮಾಡುತ್ತಿದೆ. ಪ್ರಾಪಂಚಿಕ ನೋವು ನಲವುಗಳ– ಸುಖ ದುಃಖಗಳ–ಸುಳಿಯೊಳಗೆ ಸಿಕ್ಕದೆ, ಆ ಇಚ್ಛಾದ್ವೇಷಗಳ ದ್ವಂದ್ವ ಮೋಹಗರ್ತದ ಆವರ್ತದಲ್ಲಿ ಮುಳುಗದೆ, ಮೇಲೆ ತೇಲ ಬಲ್ಲವರು ನಿಜವಾಗಿಯೂ ಸುಖಿಗಳು. ಆ ಎರಡನ್ನೂ ಬಿಡುವದರಲ್ಲಿ ನಿಜವಾದ ಸುಖವಿದೆ. ನಾವು ಒಂದನ್ನು ಸ್ವಾಗತಿಸುವಂತೆಯೇ ಇನ್ನೊಂದನ್ನೂ ಸ್ವಾಗತಿಸಬೇಕು. ಅವುಗಳನ್ನು ಮೀರಬಲ್ಲವನಿಗೆ ಪ್ರಾಪಂಚಿಕ ಸುಖದುಃಖಗಳು ಬೇರೆ ಬೇರೆಯೆಂದು ತೋರುವದಿಲ್ಲವಾದ್ದರಿಂದ ಒಂದನ್ನು ಒಪ್ಪಿಕೊಳ್ಳುವಂತೆ ಇನ್ನೊಂದನ್ನೂ ಒಪ್ಪಿಕೊಳ್ಳುತ್ತಾನೆ.

In the womb of every pleasure is pain present and in the womb of every pain is pleasure present

ಪ್ರತಿಯೊಂದು ಸುಖದ ಗರ್ಭದಲ್ಲಿಯೂ ದುಃಖವು ಅಡಗಿಕೊಂಡಿದೆ ಮತ್ತು ಪ್ರತಿಯೊಂದು ದುಃಖದ ಬಸಿರಿನಲ್ಲಿಯೂ ಸುಖದ ಬೀಜವು ಹುದುಗಿಕೊಂಡಿದೆ. ಸಂತೋಷದಲ್ಲಿ ರಮಿಸತಕ್ಕವರು ಸಂಕಟದಲ್ಲಿಯೂ ಶ್ರಮಿಸಬೇಕಾಗುವದು. ಅವು ಒಂದನ್ನೊಂದು ಬಿಟ್ಟಿರುವದಿಲ್ಲ; ಒಂದರಿಂದ ಇನ್ನೊಂದು ಬೇರೆಯೂ ಅಲ್ಲ. ಒಂದರಿಂದ ಇನ್ನೊಂದನ್ನು ಬೇರ್ಪಡಿಸುವದೂ ಸಾಧ್ಯವಲ್ಲ. ಅವುಗಳನ್ನು ಮೀರಿ ಮೇಲೇರುವದೇ ನಿಜವಾದ ಸುಖಕ್ಕೆ ಮಾರ್ಗ. ಸರ್ವದಾ ಆತ್ಮಾರಾಮರಾಗಿರಿ. ಸುಖದಲ್ಲಿ ಸಂತೋಷಪಡುವಂತೆ ದುಃಖದಲ್ಲಿಯೂ ಸಂತೋಷಪಡಬಲ್ಲವನೇ ಮುಕ್ತನಾದವನು. ಯಾವಾಗಲೂ ನಿಮ್ಮ ಮನಸ್ಸು ನಿಜಾತ್ಮನಲ್ಲಿ ನೆಲೆಗೊಳಿಸಿ ಜೀವಿಸಿದರೆ ನಿಮ್ಮ ಆನಂದಕ್ಕೆ ಯಾವದರಿಂದಲೂ ಚ್ಯುತಿ ಬರಲಾರದು; ಮುಕ್ತನಾದ ಮನುಷ್ಯನಿಗೆ ಸಮಸ್ತ ಪ್ರಕೃತಿಯೂ ಗೌರವವನ್ನು ಸಲ್ಲಿಸುತ್ತದೆ; ಇಡೀ ವಿಶ್ವವೇ ಅವನ ಮುಂದೆ ಪ್ರಣಾಮಮಾಡುತ್ತದೆ. "ನಿತ್ಯ ಮುಕ್ತವಾದ ಆ ಪರಬ್ರಹ್ಮವೇ ನಾನು" ಎಂದು ನೀವು ಅರಿತರೆ, ಭಾವಿಸಿದರೆ ನೀವು ಮುಕ್ತರೇ ಸರಿ. ಇದು ನಿಮಗೆ ಇವತ್ತು ಮೆಚ್ಚಿಗೆಯಾಗಬಹುದು, ಆಗದಿರಬಹುದು, ಆದರೆ, ಇದಂತು ಕಠೋರವಾದ ಸತ್ಯ. ಆದ್ದರಿಂದ ಎಲ್ಲರೂ ಈ ಸತ್ಯವನ್ನು ಇವತ್ತೋ ನಾಳೆಯೋ ಕಂಡುಕೊಳ್ಳಲೇ ಬೇಕು. ಸೋಹಂ ಮತ್ತು ಓಂ ಇವುಗಳ ಉಚ್ಚಾರಣೆಯು ಸುಮ್ಮನೆ ನಿಮ್ಮನ್ನು ಸತ್ಯದಲ್ಲಿ ನೆಲೆಯಾಗಿ ನಿಲ್ಲಿಸುವದಕ್ಕೆ ಸಾಧನವು ಮಾತ್ರ.

The greatest fall is to be brought down to the plane Of Causality. The very moment one begins to reflect upon the causes of the phenomena in the world, from that very moment one falls.

ಕಾರಣ ಕಾರ್ಯವಾದದ (ನಿಮಿತ್ತವಾದದ–ಹೇತುವಾದದ) ಭೂಮಿಕೆಗೆ ಇಳಿಯುವದೇ ಅತ್ಯಂತ ಮಹತ್ತಾದ ಪತನವಾಗಿದೆ. ಪ್ರಪಂಚದಲ್ಲಿರುವ ದೃಶ್ಯವಿಲಾಸದ ಕಾರಣಗಳನ್ನು ಊಹಿಸುವದಕ್ಕೆ ಪ್ರಾರಂಭಿಸಿದೊಡನೆಯೇ–ಆ ಕ್ಷಣವೇ – ಪತನ ಹೊಂದುತ್ತೇವೆ. ಮಗುವು ಕಾರ್ಯ–ಕಾರಣವಾದವನ್ನು ಮೀರಿರುವದರಿಂದಲೇ ಸರ್ವದಾ ಸಂತೋಷವಾಗಿಯೂ ನಿಶ್ಚಿಂತವಾಗಿಯೂ ಇರುತ್ತದೆ. ಅದು ತರ್ಕವನ್ನೂ ಹೇತು (ಕಾರ್ಯ–ಕಾರಣ)ವಾದವನ್ನೂ ಯುಕ್ತಿ ವಿಚಾರಗಳನ್ನೂ ಲಕ್ಷ್ಯಮಾಡುವದೇ ಇಲ್ಲ. ಆದ್ದರಿಂದಲೇ ಅದು ಸಂತೋಷವಾಗಿಯೂ ಸುಖವಾಗಿಯೂ ಇರುತ್ತದೆ. ಮಗುವು ಕಾರ್ಯ–ಕಾರಣ ನಿಯಮದ ಹಾಗೂ ವಾದದ ಭೂಮಿಕೆಯನ್ನು ಮೀರಿದೆ. ನೀವು ಕಾರ್ಯ–ಕಾರಣವಾದದ ಭೂಮಿಕೆಯಲ್ಲಿ ಬೀಳುವದಕ್ಕೆ ಬದಲು ದೇವತ್ವದ ಭೂಮಿಕೆಗೆ ಏರಬೇಕು. "ನಾನು ದೃಶ್ಯವಿಲಾಸವನ್ನು ನೋಡುತ್ತಿರುವ ಸಾಕ್ಷಿಯು ಮಾತ್ರ; ಎಂದೂ ಅದರಲ್ಲಿ ಸಿಕ್ಕಿರತಕ್ಕವನಲ್ಲ; ಯಾವಾಗಲೂ ಅವುಗಳನ್ನು ಮೀರಿ ಮೇಲಿರತಕ್ಕವನು". ಎಂದು ಭಾವಿಸುತ್ತಿರಬೇಕು. ಈ ಎಲ್ಲಾ ದೃಶ್ಯವಿಲಾಸವೂ ನನ್ನ ಚೈತನ್ಯ ಶಕ್ತಿಯಲ್ಲಿ ತೋರುತ್ತಿರುವ ಲಯಬದ್ಧವಾದ ಸ್ಪಂದನಗಳು; ಇವು ಋತ ಚಕ್ರದಲ್ಲಿ ಏರಿಳಿಯುತ್ತಿರುವ ಮೇಲ್ಮುಖ–ಕೆಳಮುಖದ ಚಲನೆಗಳು, ಪ್ರಕೃತಿಮಾತೆಯು ಮೇಲೆತ್ತಿ ಕೆಳಗಿಡುವ ಹೆಜ್ಜೆಗಳು. ನೀವು ಕಾರ್ಯ–ಕಾರಣ ನಿಯಮವನ್ನೂ ಭಾವನೆಯನ್ನೂ ಮೀರಿ ಮೇಲೇರಬೇಕೆಂಬುದು ಆಕೆಯ ಉದ್ದೇಶವೇ ಹೊರತು, ನಿಮ್ಮನ್ನು ಕೆಳಗಿಳಿಸಬೇಕೆಂಬುದಲ್ಲ. ಆ ನಿಮಿತ್ತವಾದದ ಭೂಮಿಕೆಯನ್ನು ಮೀರುವದಕ್ಕೆ ಸತತವಾದ ಪ್ರಯತ್ನವೂ ಹೋರಾಟವೂ ಬೇಕಾಗಿದೆ. ನಿಮ್ಮ ದೇವತ್ವದಲ್ಲಿ ನೀವು ನೆಲೆಸಿ ಜೀವಿಸುತ್ತಿದ್ದರೆ ನೀವು ಮುಕ್ತರು; ನಿಮ್ಮ ಸ್ವಾಮಿ ನೀವೇ, ನೀವೇ ವಿಶ್ವಪ್ರಭು, ಪರಮೇಶ್ವರ.

ಓಂ ! ಓಂ ! ಓಂ !

# SOHAM

# ಸೋಽಹಂ

## ತಾ|| 10-6-1903 ಅಮೆರಿಕಾದಲ್ಲಿ ಮಾಡಿದ ಉಪನ್ಯಾಸ

ಮಾನ್ಯ ಸ್ತ್ರೀಪುರುಷರಲ್ಲಿರುವ ನನ್ನ ಆತ್ಮವೇ !

ಪ್ರತಿಯೊಬ್ಬರಿಗೂ ಪರಿಚಯವಾಗಬೇಕಾಗಿರುವ ಬಹಳ ಉಪಯುಕ್ತವಾದ ಒಂದು ಮಂತ್ರವಿದೆ. ಅದೇ ಸೋಽಹಂ ; SOHAM· ಇಂಗ್ಲಿಷ್ ಭಾಷೆಯಲ್ಲಿ So (ಸೋ) ಎಂದರೆ ಅಷ್ಟು, ಇಷ್ಟು, ಅಂತು, ಇಂತು, ಹಾಗೆ, ಹೀಗೆ, ಆದರಂತೆ, ಆದ್ದರಿಂದ...... ಇತ್ಯಾದಿ. ಆದರೆ ಸಂಸ್ಕೃತ ಭಾಷೆಯಲ್ಲಿ 'ಸೋ' (ಸಃ) ಎಂದರೆ ಅದು, ಆವನು. ಅದು ಎಂದರೆ ಇಂದ್ರಿಯಗಳಿಗೂ ಮನಸ್ಸಿಗೂ ಎದುರಿಗಿದ್ದು ತೋರುವದರಿಂದ ಇದು ಎನ್ನಿಸಿಕೊಳ್ಳುವ ವಿಷಯವಲ್ಲ. ಅದು ಇಂದ್ರಿಯಗಳನ್ನೂ ಮನಸ್ಸನ್ನೂ ಮೀರಿ ಅವುಗಳ ಹಿನ್ನೆಲೆಯಲ್ಲಿದ್ದು ಅವುಗಳನ್ನು ಪ್ರೇರಿಸುವ ಶಕ್ತಿ–ಚೈತನ್ಯಶಕ್ತಿ ದೈವೀಶಕ್ತಿ ಅಥವಾ ದೇವರು. ಇಂಡಿಯಾ ದೇಶದಲ್ಲಿ ಹೆಂಡತಿಯು ಗಂಡನನ್ನು ಎಂದೂ ಹೆಸರನ್ನು ಹಿಡಿದು ಕರೆಯುವದಿಲ್ಲ. ಆಕೆಗೆ ಜಗತ್ತಿನಲ್ಲಿ ಒಬ್ಬನೇ ಪುರುಷನಿರುವನು; ಅವನೇ ಆಕೆಯ ಗಂಡ. ಆಕೆಯು ಯಾವಾಗಲೂ ತನ್ನ ಗಂಡನನ್ನು—ಇಡೀ ವಿಶ್ವದಲ್ಲಿ ಬೇರೆ ಯಾರೂ ಪುರುಷರಿಲ್ಲವೇನೋ ಎಂಬಂತೆ—'ಅವನು' 'ಸಃ', 'ಅವರು' ಎಂದೇ ಕರೆಯುವಳು. ಆದ್ದರಿಂದಲೇ ಆಕೆಗೆ ಅವನು ಯಾವಾಗಲೂ ದೇವರು. ಹೀಗೆ ದೇವರು ಯಾವಾಗಲೂ ಆಕೆಯ ಮನಸ್ಸಿನಲ್ಲಿ ಇರುತ್ತಾನೆ. ಆ ಪ್ರಕಾರ ವೇದಾಂತಿಗೆ 'ಸಃ' ಎಂದರೆ ಯಾವಾಗಲೂ ದೇವರು. ಇರುವದು ಒಂದೇ ಸತ್ಯ; ಅದೇ ನಮ್ಮ ಆತ್ಮ. ಈ ನಿಶ್ಚಿತವಾದ ವಿಚಾರವು ಯಾವಾಗಲೂ ನಮ್ಮ ಮನಸ್ಸಿನಲ್ಲಿ ಇರಬೇಕು.

ಪರ್ಷಿಯನ್ ಭಾಷೆಯಲ್ಲಿ 'ಹಂ' Ham ಎಂದರೆ ನಾನು, I ಇದರಲ್ಲಿ H ಎಂಬದನ್ನು ಬಿಟ್ಟು I ಎಂಬಿದನ್ನು ಹಾಕಿದರೆ, So-am I, That am I, God am I, ಅವನು ನಾನು, ದೇವರು ನಾನು—ಎಂದಾಗುತ್ತದೆ; ದೇವರು ಯಾವಾಗಲೂ ನನ್ನ ಮೂಲಕ ಮಾತನಾಡುತ್ತಿದ್ದಾನೆ. ನಿಜವೆಂದರೆ ಇಷ್ಟೇ ಇರುವದು. ಇದರಲ್ಲಿ 'ಓಂ' ಎಂಬದೂ ಇದೆ. ಸ್ (S) ಮತ್ತು ಹ್ (H) ಎಂಬಿವುಗಳನ್ನು ತೆಗೆದು ಹಾಕಿದರೆ, ಉಳಿಯುವದೇ' ಓಂ'. ಸೋಽಹಂ ಎಂಬುದು ನಮ್ಮ ಉಸಿರಾಟದೊಡನೆ ಸ್ವಾಭಾವಿಕವಾಗಿ ಬರುವ ಶಬ್ದ. ನಮ್ಮ ಮನಸ್ಸಿನಲ್ಲಿ ಯಾವಾಗಲೂ ಎಡೆಬಿಡದೆ 'ಸೋಽಹಂ' ಎಂಬುದರ ಅರ್ಥವನ್ನು ಅನ್ನು ಅನುಸಂಧಾನಮಾಡುತ್ತಿರ ಬೇಕು.

ಉಸಿರಾಟದ ಮೇಲೆ ಎಚ್ಚರಿಕೆಯಿಂದ ಲಕ್ಷ್ಯವಿಟ್ಟು ನಿರೀಕ್ಷಿಸುತ್ತಾ 'ಸೋಽಹಂ' ಮಂತ್ರದ ಮೂಲಕ ಛಂದೋಬದ್ಧವಾಗಿ ನಡೆಯುವಂತೆ ಮಾಡಬೇಕು. ಇದು ಸ್ಥೂಲ ಭೌತಿಕ ದೇಹಕ್ಕೂ ಸೂಕ್ಷ್ಮವಾದ ಪ್ರಾಣ–ಮನೋ ದೇಹಕ್ಕೂ ಸಂಬಂಧಪಟ್ಟ ಆಧ್ಯಾತ್ಮಿಕ ಸಾಧನವಾಗುತ್ತದೆ. ಉಸಿರಾಟದಲ್ಲಿ ಒಳಗೆ ಎಳೆದುಕೊಳ್ಳುವ ಪೂರಕವೂ ಹೊರಗೆ ಬಿಡುವ ರೇಚಕವೂ ಸೇರಿವೆ. ಒಳಗೆ ಉಸಿರನ್ನು ಎಳೆದುಕೊಳ್ಳುವಾಗ 'ಸೋ' ಎಂದೂ ಬಿಡುವಾಗ 'ಹಂ' ಎಂದೂ ಉಚ್ಚರಿಸಬೇಕು. ಕೆಲವು ಸಮಯ ಪ್ರಾರಂಭ ದಶೆಯಲ್ಲಿ ಸಾಧಕರಿಗೆ ಓಂ ಎಂದು ಉಚ್ಚರಿಸುವದಕ್ಕಿಂತಲೂ ಸೋಹಂ ಎಂದು ಉಚ್ಚರಿಸುವದೇ ಹೆಚ್ಚು ಸುಲಭವಾಗಿ ಕಾಣುತ್ತದೆ. ಏಕೆಂದರೆ ಆ ಒಂದರಲ್ಲಿ ಎರಡೂ ಅಡಗಿವೆ. ಹೊರಗೆ ಕೇಳುವಂತೆ ಗಟ್ಟಿಯಾಗಿ ಉಚ್ಚರಿಸದಿರುವಾಗ ಒಳಗೆ ಅದನ್ನೇ ಚಿಂತನಮಾಡಿ; ಯಾವಾಗಲೂ ಕೇವಲ ಸ್ವಾಭಾವಿಕವಾಗಿ ಉಸಿರಾಡುತ್ತ ಮಾನಸಿಕವಾಗಿ ಅದನ್ನೇ ಧ್ಯಾನಮಾಡಿ. ಇಂದ್ರಿಯಗಳ ಸಮ್ಮೋಹದಿಂದ ಬಿಡಿಸಿ ಹಿಂದಿರುಗಿ ದೇವತ್ವದಲ್ಲಿ ನೇರಿಸುವದಕ್ಕೆ ಇದೇ ನಿಜವಾದ ಸ್ವಯಂ ಪ್ರೇರಣೆ (Auto suggestion) ಆಗುತ್ತದೆ. "ಸೋಽಹಂ" "ಅದೇ ನಾನಾಗಿದ್ದೇನೆ". ವಿಶ್ವ ದಲ್ಲಿ ಸದಾಕಾಲವೂ ಲಯಬದ್ಧವಾದ (ತಾಳಗತಿಯ) ಚಲನೆಯು ನಡೆದಿದೆ. ಸಂಸ್ಕೃತ ದಲ್ಲಿ 'ಸಃ' ಎನ್ನುವದಕ್ಕೆ ಸೂರ್ಯನೆಂದೂ ಅರ್ಥವಾಗುತ್ತದೆ. "ನಾನು ಸೂರ್ಯ ನಾಗಿದ್ದೇನೆ." ನಾನು ಪ್ರಕಾಶವನ್ನು ನೀಡತಕ್ಕವನು; ನಾನು ಏನನ್ನೂ ತೆಗೆದುಕೊಳ್ಳುವ ದಿಲ್ಲ; ಆದರೆ ಎಲ್ಲವನ್ನೂ ಕೊಡುತ್ತೇನೆ. ನಾನು ಕೊಡತಕ್ಕವನೇ ಹೊರತು ತೆಗೆದು ಕೊಳ್ಳತಕ್ಕವನಲ್ಲ. ಒಂದು ವೇಳೆ ನಾವು ಇತರರಿಂದ ನಿರ್ದಯ ಪತ್ರಗಳನ್ನೂ ಅಸೂ ಯಾಪರರಾದ ವ್ಯಕ್ತಿಗಳಿಂದ ಕಟುವಾದ ನಿಂದೆಗಳನ್ನೂ ಪಡೆಯುತ್ತೇವೆ. ನಾವು ಅದಕ್ಕಾಗಿ ಕ್ಷುಬ್ಧರಾಗಬೇಕೆ? ವಿಷಾದಪಡಬೇಕೆ? ಚಿಂತೆ ಮಾಡಬೇಕೆ? ಎಂದಿಗೂ ಇಲ್ಲ. ಆದರಿಂದ ನಿಮ್ಮ ಮನಸ್ಸು ಕೆರಳದೆ, ಕಲಕದೆ, ನಿಮ್ಮ ಸ್ವರೂಪವಾದ ದೇವತ್ವ ದಲ್ಲಿ ಶಾಂತವಾಗಿ ವಿಶ್ರಾಂತಿ ಪಡೆಯಲಿ. ನಿಮಗೆ ಅತ್ಯಂತವಾಗಿ ಕೇಡುಮಾಡತಕ್ಕವರ ವಿಷಯದಲ್ಲಿ ಮೃದುವಾಗಿ ಪ್ರೀತಿಯಿಂದಲೂ ದಯೆಯಿಂದಲೂ ಆಲೋಚಿಸಿರಿ. ಏಕೆಂದರೆ, ಅವರು ನಿಮ್ಮ ಆತ್ಮವೇ, ನೀವೇ ನಿಮ್ಮ ವಿಷಯದಲ್ಲಿ ನೀವು ಒಳ್ಳೆಯ ದನ್ನು ಮಾತ್ರ ಭಾವಿಸಬಹುದು. "ನಾನು ಸೂರ್ಯರಿಗೆಲ್ಲಾ ಸೂರ್ಯನು; ಪ್ರಕಾ ಶವೂ ವೈಭವವೂ ಶಕ್ತಿಯೂ ನಾನೇ. ನನಗೆ ಹಾನಿ ಮಾಡತಕ್ಕವರು ಯಾರು? ನನಗೆ ನಾನೇ ಹಾನಿಮಾಡಿಕೊಳ್ಳುವದು ಅಸಾಧ್ಯ. ಇತರರ ಅಲ್ಪವಾದ ಮಿಥ್ಯಾಭಿ ಪ್ರಾಯಗಳನ್ನು ಮೀರಿ ನಿಲ್ಲಿ. ಯಾವಾಗಲೂ ದೇವರು ನಿಮ್ಮ ಮೂಲಕವಾಗಿ ಆಲೋಚಿಸಲಿ, ಮಾತನಾಡಲಿ, ಕೆಲಸಮಾಡಲಿ. ನಿಮ್ಮ ಸ್ವರೂಪವಾದ ದೇವತ್ವದಲ್ಲಿ ಶಾಂತವಾಗಿ ವಿಶ್ರಮಿಸಿಕೊಳ್ಳಿ. "ಪ್ರಪಂಚಕ್ಕೆಲ್ಲಾ ಬೆಳಕನ್ನು ಕೊಡುವ ಸೂರ್ಯನೇ ನಾನು.

"ಸಂಪೂರ್ಣ ಸರ್ವಶಕ್ತಿಯೂ ನಾನೇ" ಎಂದು ಭಾವಿಸಿರಿ. "ದೇಶ–ಕಾಲ–ನಿಮಿತ್ತ ಗಳಿಂದ ಬದ್ಧವಾದ ಈ ಅಲ್ಪ ವ್ಯಕ್ತಿಯೇ ನಾನು" ಎಂದು ಭಾವಿಸುವದೇ ನಮ್ಮ ಎಲ್ಲಾ

ಕಷ್ಟಗಳಿಗೂ ಕಾರಣವಾಗಿದೆ. ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡಿ ಕೊಲ್ಲುವದು ಈ ಭಾವನೆಯೇ. ಈ ರೋಗವನ್ನು ಕಳೆಯಬೇಕಾದರೆ ಪ್ರತಿಯೊಬ್ಬರೂ ಏಕಾಂತದಲ್ಲಿ ಕುಳಿತು ತಮ್ಮಲ್ಲಿರುವ ಆ ದೋಷವನ್ನು ನೆನೆಸಿಕೊಂಡು ಅತ್ತು, ಗೋಳಾಡಿ, ಎದೆ ಎದೆ ಬಡಿದು ಕೊಂಡು "ಈ ದೇಹವೇ ನಾನೆಂಬುವ ಅಹಂಕಾರ ಪಿಶಾಚಿಯೇ ತೊಲಗು, ತೊಲಗು ಹೊರಗೆ" ಎಂದು ತೀವ್ರವಾಗಿ ಇಚ್ಛಿಸಬೇಕು; ಆಜ್ಞೆಮಾಡಬೇಕು. ನಿಮ್ಮ ಈ ದೇಹವು ಎಂದೂ ಹುಟ್ಟಿಯೇ ಇರಲಿಲ್ಲವೆಂಬ ಸ್ಥಿತಿಯಲ್ಲಿ ನಿಮ್ಮನ್ನು ನೀವು ಭಾವಿಸಿರಿ. ಈ ದೇಹವು ನೀವಲ್ಲ; ನೀವೇ ದೇವರು. ದೇಶ ಕಾಲಗಳ ಕಟ್ಟಿನಲ್ಲಿ ನೀವು ಸಿಕ್ಕಿಕೊಂಡಿದ್ದರೆ ಇತರರ ಆಲೋಚನೆಗಳೂ ಭಾವನೆಗಳೂ ನಿಮ್ಮನ್ನು ಬಾಧಿಸುತ್ತವೆ. ನೀವು ಸಂಬೋಧಿಸುತ್ತಿರುವ ಈ ದೇಹವು ನಿಮ್ಮ ಭ್ರಮೆಯು ಮಾತ್ರ. ನಿಜವಾಗಿ ಇರುವದು ದೇವರು ಒಂದೇ; ಅದೇ ನೀವು. ಇಲ್ಲದ ದೇಹೇಂದ್ರಿಯಗಳನ್ನೂ ಜಗತ್ತನ್ನೂ ಇರುವಂತೆ ಕಲ್ಪಿಸಿಕೊಳ್ಳುತ್ತಿದ್ದೀರಿ. ಇದನ್ನು ಸ್ವಲ್ಪ ಗಮನಿಸಿ. ಹುಸಿಯಾದ ಅಭಿಪ್ರಾಯಗಳನ್ನು ನಂಬುವದಕ್ಕಿಂತಲೂ ಹೆಚ್ಚಾಗಿ ನಿಜವಾದ ವಸ್ತುಗಳನ್ನು ನಂಬಿ. ನೀವು ದೇವರಾಗಿರುವದರಿಂದ ಕೆಟ್ಟ ಆಲೋಚನೆಗಳೂ ಪ್ರಲೋಭನೆಗಳೂ ನಿಮ್ಮ ಪವಿತ್ರವಾದ ಸನ್ನಿಧಿಯಲ್ಲಿ ಪ್ರವೇಶಿಸುವದಕ್ಕೆ ಅಧಿಕಾರವೇ ಇಲ್ಲ. ಅವು ನಿಮ್ಮಲ್ಲಿ ಏಕೆ ತೋರಿಕೊಳ್ಳಬೇಕು? ನೀವು ಪರಮ ಪವಿತ್ರರು. ಹೃತ್ಪೂರ್ವಕವಾಗಿ, ಉತ್ಕಟವಾಗಿ ಇದನ್ನು ಭಾವಿಸಿರಿ. ಎಲ್ಲಿದೆ ರೋಗ? ಭವರೋಗ? ಯಾವದನ್ನೂ ಅಪೇಕ್ಷಿಸಬೇಡಿ, ನಿರೀಕ್ಷಿಸಬೇಡಿ; ಯಾವದಕ್ಕೂ ಭಯಪಡಬೇಡಿ; ಯಾವ ಹೊಣೆಗಾರಿಕೆಯನ್ನೂ ಮನಸ್ಸಿನಲ್ಲಿ ಹೊತ್ತುಕೊಳ್ಳಬೇಡಿ. 'ಕರ್ತವ್ಯಬದ್ಧನಾಗಿದ್ದೇನೆ' ಎಂಬ ಭಾವನೆಯಿಂದ ಯಾವದನ್ನೂ ಮಾಡಬೇಡಿ. ಕರ್ತವ್ಯವೆಂದರೆ ಏನು? ಕರ್ತವ್ಯವೆಂಬದನ್ನು ನೀವೇ ಸೃಷ್ಟಿ ಮಾಡಿಕೊಳ್ಳುತ್ತೀರಿ; ಕರ್ತವ್ಯವು ನಿಮ್ಮ ಸೃಷ್ಟಿ. ಯಾವ ಕಾರ್ಯವನ್ನಾದರೂ ಘನವಂತನಾದ ಮಹಾರಾಜನಂತೆ ಪ್ರಭುವಾಗಿ ಮಾಡಿ; ಕರ್ಮಕಿಂಕರರಾಗಿ ದಾಸ್ಯಭಾವನೆಯಿಂದ ಯಾವದನ್ನೂ ಮಾಡಬೇಡಿ. ಎಲ್ಲವೂ ನಿಮಗೆ ಆಟವಾಗಿರಬೇಕು. ಯಾವದನ್ನಾದರೂ ಸಂತೋಷದಿಂದ ಮಾಡಿ.

ರೋಗಗಳು ಎರಡು ಬಗೆ. ಅವು ಒಳಗಿನ ಆಧ್ಯಾತ್ಮಿಕವೆಂದೂ ಹೊರಗಿನ ಆಧಿಭೌತಿಕವೆಂದೂ ಹೇಳಲ್ಪಡುತ್ತವೆ. ಇದು ದೈತ್ಯ ರೋಗ ಮೋಹಿನೀ ರೋಗವೆಂದೂ, ರಾಕ್ಷಸರೋಗ ಸ್ತ್ರೀರೋಗವೆಂದೂ ಸಾಮಾನ್ಯವಾಗಿ ಅರ್ಥವಾಗುತ್ತದೆ. ಹೀಗೆಂದರೆ ಏನು? ನಮ್ಮ ಒಳಗಿನಿಂದ ಏಳುವದು ಮೋಹಿನೀರೋಗ ಅಥವಾ ಸ್ತ್ರೀರೋಗ. ನಮ್ಮ ಒಳಗಿರುವ ಆಶೆಗಳು, ಆಕಾಂಕ್ಷೆಗಳು, ಆಸಕ್ತಿಗಳು, ಹಂಬಲಗಳು... ಇವೇ ಮೋಹಿನೀ ರೋಗವು. ಹೊರಗೆ ಇನ್ನೊಂದರ ಅಥವಾ ಇನ್ನೊಬ್ಬರ ಕಾರ್ಯದಿಂದಲೋ ಪ್ರಭಾವದಿಂದಲೋ ಒದಗುವದು ದೈತ್ಯರೋಗವು ಅಥವಾ ವಿಧಿವಿಹಿತ ವಾಸ್ತವ ರೋಗವು. ಒಳ್ಳೆಯದು, ಇವಕ್ಕೆ ಚಿಕಿತ್ಸೆಯೇನು? ಹೊರಗಿನ ಆಧಿಭೌತಿಕ ರೋಗ, ಅಥವಾ ದೈತ್ಯ ರೋಗ ಅಥವಾ ಪುರುಷರೋಗ—ಇದರ ವಿಷಯದಲ್ಲಿ ಚಿಂತೆಮಾಡುವದು ಬೇಡ. ಒಳಗಿನ

ದುರ್ಬಲಗೊಳಿಸುವ ರೋಗಕ್ಕೆ ಚಿಕಿತ್ಸೆ ಮಾಡಿದ ಕೂಡಲೇ ಹೊರಗಿನ ರೋಗಗಳು ತಾವಾಗಿಯೇ ನಮ್ಮನ್ನು ಬಿಟ್ಟು ತೊಲಗುತ್ತವೆ. ಪ್ರಾಪಂಚಿಕ ಜನರು ಇದರ ರಹಸ್ಯ ವನ್ನು ತಿಳಿಯದೆ —ತಮ್ಮ ಆಶೆಗಳಿಂದಲೇ ಸೃಷ್ಟಿಯಾದ ಕಷ್ಟವನ್ನು ಗಮನಿಸದೆ— ಹೊರಗೆ ತಪ್ಪಾದ ಸ್ಥಳದಲ್ಲಿ ಪ್ರಾರಂಭಿಸಿ, ಹೊರಗಿನ ದೈತ್ಯರೋಗದೊಡನೆ—ಗಂಡು ರೋಗದೊಡನೆ—ಹೋರಾಡುವದಕ್ಕೆ ಹೊರಡುತ್ತಾರೆ. ಒಳ ಹೊರಗಿನ ರೋಗಗಳಿಗೆ ಕಾರಣವಾದ ನಿಮ್ಮ ಆಶೆಗಳೇ ನಿಮ್ಮ ದೌರ್ಬಲ್ಯಗಳೆಂದು ವೇದಾಂತವು ಹೇಳುತ್ತದೆ. ನಿಮ್ಮೊಳಗಿರುವ ಸ್ತ್ರೀಭಾಗವೇ ಮೋಹಿನೀ ಅಂಶವೇ ಹೊರಗಿನ ಪ್ರಭಾವಗಳನ್ನು ಆಕರ್ಷಣೆಮಾಡುತ್ತದೆ. ತನ್ನ ಬಾಯಿಯಲ್ಲಿ ಮಾಂಸದ ತುಂಡನ್ನು ಕಚ್ಚಿಕೊಂಡ ಒಂದು ನಾಯಿಯು, ಅದನ್ನು ತನ್ನಿಂದ ಕಸಿದುಕೊಳ್ಳಲು ಹೋರಾಡುವಂತೆ ಬೇರೆ ನಾಯಿಗಳನ್ನು ಹೇಗೆ ಪ್ರಚೋದಿಸುತ್ತದೆಯೋ ಹಾಗೆ ನಾವು ಒಳಗೆ ಮನಸ್ಸಿನಲ್ಲಿ ಕಚ್ಚಿ ಕೊಂಡಿರುವ ಆಶೆಯ ಆಮಿಷವು ಅದರ ಸಾಧನೆಯ ಬಲವನ್ನು ಪರೀಕ್ಷಿಸುವಂತೆ ಹೊರಗಿನ ದ್ವೇಷಾಸೂಯ ಮತ್ಸರಾದಿಗಳನ್ನು ಪ್ರಚೋದಿಸುತ್ತದೆ. ಆದ್ದರಿಂದ ನೀವು ನಿಮ್ಮ ಒಳಗಿನ ದೌರ್ಬಲ್ಯವಾದ ಮೋಹಿನೀರೋಗವನ್ನು ಮೊದಲು ಕಳೆದುಕೊಂಡರೆ ಅದರಿಂದ ಪ್ರಚೋದಿತವಾಗಬಹುದಾಗಿದ್ದ ಹೊರಗಿನ ಭಸ್ಮಾಸುರ ರೋಗವೂ ತನ್ನಿಂದ ತಾನೇ ನಾಶವಾಗುತ್ತಿದೆ. ಈ ಮೋಹಿನೀ ರೋಗವನ್ನು ಇನ್ನೂ ಸ್ವಲ್ಪ ಹೆಚ್ಚಾಗಿ ವಿವರಿಸಬೇಕಾಗಿದೆ. ಇಲ್ಲಿ ಒಬ್ಬ ಅಧ್ಯಾತ್ಮ ಸಾಧಕನು ಇದ್ದಾನೆಂದು ಇಟ್ಟುಕೊಳ್ಳೋಣ. ಇವನು ಪರಿಪೂರ್ಣ ಪರಿಶುದ್ಧನಾಗಿದ್ದರೆ, ಇವನು ಎಲ್ಲಾ ಬಗೆಯ ಪ್ರಲೋಭನೆಗಳನ್ನೂ ಚಾಪಲ್ಯಗಳನ್ನೂ ಆಕರ್ಷಣೆಗಳನ್ನೂ ದುಷ್ಪ್ರೇರಣೆ ಗಳನ್ನೂ ಮೀರಿ ತನ್ನಲ್ಲಿ ತನ್ನ ಪರಮಾತ್ಮ ಸ್ವರೂಪವನ್ನು ಅನುಭವಿಸಿ, " Get behind me, satan, I will have none of thee.'' "ಸೈತಾನನೆ! ಎದಿರಾಗ ಬೇಡ, ಹಿಂದಕ್ಕೆ ಸರಿ, ತೊಲಗು; ನಿನ್ನ ಯಾವ ಕಪಟ ನಾಟಕವೂ ನನಗೆ ಬೇಡ; ನಿನ್ನ ಮಾಯೆಗೆ ಇನ್ನು ನಾನೆಂದೂ ಮರುಳಾಗಲಾರೆ." ಎಂದು ಧೈರ್ಯ ವಾಗಿ ದೃಢ ನಿಶ್ಚಯದಿಂದ ಹೇಳಬಲ್ಲನಾದರೆ ಅವನನ್ನು ಈ ಜಗತ್ತಿನಲ್ಲಿ ಹೊರಗಿನ ಯಾವ ಮೋಹನವೂ ದ್ವೇಷಾಸೂಯೆಗಳೂ ಬಾಧಿಸಲಾರವು. ಅವನು ತನ್ನ ಒಳಗಿನ ಮೋಹಿನೀ ರೋಗವನ್ನು ಕಳೆದುಕೊಂಡಿರುವದರಿಂದ ಹೊರಗಿನ ಯಾವ ದುಷ್ಟ ಶಕ್ತಿಯೂ ಅವನನ್ನು ಏನೂ ಮಾಡಲಾರದು. ನಾವು ಕಾಮ—ಮೋಹಗಳಿಗೆ ಬಲಿಯಾಗಿ ದುರ್ಬಲರಾದ ಕ್ಷಣವೇ ಹೊರಗಿನ ಶತ್ರುಗಳ ದುಷ್ಟ ಭಾವನೆಗಳೆಲ್ಲಾ ದುಷ್ಪ್ರೇರಣೆಗಳ ರೂಪಗಳನ್ನು ತಾಳಿ ನಮ್ಮನ್ನು ನುಂಗಿಬಿಡುತ್ತವೆ. ನಿಮ್ಮ ದೇವತ್ವ ವನ್ನು ನೀವು ಅರಿತು ಸಂಪೂರ್ಣ ಶಾಂತಿಯನ್ನೂ ಸುಖವನ್ನೂ ನೀವು ಅನುಭವಿಸಬೇಕಾ ದರೆ ಕೀಳಾದ ಪಾಶವೀ ಸ್ವಭಾವವು ಸಾಯಬೇಕು. ಈ ಸಾವಿನಲ್ಲಿಯೇ ಶಾಂತ ಜೀವನ ವಿದೆ. ನೀವೇ ದೇವರಾಗಿರುವದರಿಂದ ಯಾವ ವ್ಯವಹಾರವನ್ನಾದರೂ ಶಾಂತ ಚಿತ್ತದಿಂದಲೂ ಸ್ಥಿಮಿತವಾದ ಭರವಸೆಯ ಮನೋಭಾವದಿಂದಲೂ ನಿರ್ವಾಹಮಾಡಿ.

ನಾನು ಏನನ್ನೂ ಅಪೇಕ್ಷಿಸುವದಿಲ್ಲ; ನನಗೆ ಯಾವ ಆವಶ್ಯಕತೆಯೂ ಇಲ್ಲ, ಯಾವ ಭಯವೂ ನಿರೀಕ್ಷೆಯೂ ಹೊಣೆಗಾರಿಕೆಯೂ ಇಲ್ಲ.

ಆತ್ಮಾನುಭವಿಯ ಪ್ರಾರಬ್ಧ ಭೋಗದ ವೇಗ—ವೈಚಿತ್ರ್ಯಗಳನ್ನು ಭೌತಶಾಸ್ತ್ರದ ಒಂದು ದೃಷ್ಟಾಂತದಿಂದ ವಿವರಿಸಬಹುದು. ಒಂದು ರಾಟೆಯ ( Pulley ) ಗಾಲಿಯ ಮೇಲೆ ತೂಗು ಬಿಟ್ಟಿರುವ ರೇಷ್ಮೆಯ ಹುರಿಯ ಎರಡು ಕೊನೆಗಳಲ್ಲಿಯೂ ಎರಡೂ ತೂಕಗಳನ್ನು ಕಟ್ಟಿದೆ. ಒಂದು ತುದಿಯಲ್ಲಿರುವ ತೂಕ 10, ಇನ್ನೊಂದು ತುದಿಯಲ್ಲಿರುವದು 6. ಈ ಚಿಕ್ಕ ತೂಕ 6ಕ್ಕೆ ಇನ್ನೊಂದು ತೂಕ 4ನ್ನು ಸೇರಿಸುತ್ತೇವೆ. ಈಗ ಒಂದು ಕಡೆ $6+4=10$; ಇನ್ನೊಂದು ಕಡೆ 10. ಹೀಗೆ, ಆ ರೇಷ್ಮೆಯ ಹುರಿಯ ಎರಡು ತುದಿಗಳಲ್ಲಿಯೂ 10, –10 ಸಮಾನ ತೂಕಗಳಿರುವುದರಿಂದ (ಗಾಲಿಯೂ ಹುರಿಯೂ) ಆ ತೂಕಗಳು ಚಲಿಸುವುದಿಲ್ಲ. ಒಳ್ಳೆಯದು. ಈಗ ಒಂದು ಕಡೆಯಲ್ಲಿರುವ $6+4=10$ರಲ್ಲಿ, 4 ತೂಕವನ್ನು ತೆಗೆದು ಬಿಟ್ಟರೆ, ಈ ಕಡೆ 6, ಆ ಕಡೆ 10 ತೂಕಗಳು ಉಳಿಯುತ್ತವೆ. ಎರಡೂ ತುದಿಗಳಲ್ಲಿ ಸಮತೂಕವಿಲ್ಲವಾದುದರಿಂದ ಏನಾಗುತ್ತದೆ? 10 ಹೆಚ್ಚು ಭಾರವಾದ್ದರಿಂದ ಕೆಳಗಿಳಿಯುತ್ತದೆ; 6 ಮೇಲೇರುತ್ತದೆ. ಒಂದು ಸೆಕೆಂಡ್ ಕಳೆದ ಮೇಲೆ ಆ 6ಕ್ಕೆ 4ನ್ನು ಸೇರಿಸುತ್ತೇವೆ. ಈಗ ಪುನಃ ಎರಡೂ ಕಡೆಗಳಲ್ಲಿಯೂ ತೂಕಗಳನ್ನು ಸಮಗಟ್ಟಿದ್ದೇವೆ. ಆದರೆ, ಈಗ ಇದರ ಪರಿಣಾಮವೇನಾಗುತ್ತದೆ? ಎರಡು ಕಡೆಗಳಲ್ಲಿಯೂ ಸಮತೂಕವಾದುದರಿಂದ ತೂಕಗಳು ಚಲಿಸುವದಿಲ್ಲ— ಎಂದು ಅನೇಕರು ಹೇಳಬಹುದು. ಆದರೆ, ಹಾಗಾಗುವದಿಲ್ಲ. 10ರ ತೂಕವು ಕೆಳಗಿಳಿಯುತ್ತಾ ಹೋಗುತ್ತದೆ. ಮೊದಲು ಒಂದು ಸೆಕೆಂಡ್ ಚಲಿಸಿದ ಅನಂತರ ತೂಕಗಳು ಸಮವಾದ್ದರಿಂದ ಚಲನೆಯೂ ನಿಲ್ಲಬಹುದೆಂದು ತೋರುತ್ತದೆ. ರಾಮನು ವಿಶ್ವವಿದ್ಯಾನಿಲಯದಲ್ಲಿ ಈ ವಿಷಯದ ಮೇಲೆ ಉಪನ್ಯಾಸ ಮಾಡಿದಾಗ ಎಲ್ಲಾ ವಿದ್ಯಾರ್ಥಿಗಳೂ, ಹೆಚ್ಚು ಕಡಿಮೆಯಿರುವ ತೂಕಗಳು ಒಂದು ಸೆಕೆಂಡ್ ಚಲಿಸಿದ ಮೇಲೆ ಸಮತೂಕ ಮಾಡಲ್ಪಟ್ಟರೆ ಚಲಿಸದೆ ನಿಂತು ಬಿಡುವದೆಂದು ಹೇಳಿದರು. ಆದರೆ ಆ ವಿಷಯವನ್ನು ಪ್ರತ್ಯಕ್ಷ ಪ್ರಯೋಗ ಮಾಡಿ ತೋರಿಸಿ ವಿವರಿಸಿದ ಮೇಲೆ ಅವರು ನಿಜವನ್ನು ಅರಿತರು. ತೂಕಗಳು ಸಮಮಾಡಲ್ಪಟ್ಟ ಮೇಲೂ ಮೊದಲಿನ ವೇಗದಿಂದ ಅದು ಚಲಿಸುತ್ತಲೇ ಇತ್ತು; ನಿಲ್ಲಲಿಲ್ಲ.

ಹೀಗೆ, ಪ್ರಾರಂಭದಲ್ಲಿ ರಾಟೆಯ ಚಕ್ರದ ಮೇಲೆ ತೂಗುಬಿಟ್ಟಿರುವ ಹುರಿಯ ತುದಿಗಳಲ್ಲಿರುವ ತೂಕಗಳು ಸಮವಾಗಿದ್ದರೆ, ಅವು ಚಲಿಸದೆ ಸ್ಥಿರವಾಗಿರುತ್ತವೆ; ಮೊದಲಿನ ಅಚಲ ಸ್ಥಿತಿಯೂ ರಕ್ಷಿತವಾಗಿರುತ್ತದೆ. ಆದರೆ ಒಮ್ಮೆ ಅದು ಚಲಿಸುವದಕ್ಕೆ ತೊಡಗಿದರೆ, ಎರಡು ಕಡೆಯ ತೂಕಗಳನ್ನು ಸಮಗಟ್ಟಿದರೂ ಆ ಚಲನೆ ನಿಲ್ಲುವದಿಲ್ಲ. ಆದರೆ ಒಂದು ವ್ಯತ್ಯಾಸವನ್ನು ನಾವು ಗಮನಿಸಬಹುದು. ಒಂದು ಕಡೆ 6, ಇನ್ನೊಂದು ಕಡೆ 10 ಇರುವ ಅಸಮ ತೂಕಗಳು ಒಂದು ಸೆಕೆಂಡ್ ಕಾಲ ಚಲಿಸಿದರೆ ಒಟ್ಟು

ಪರಿಣಾಮದ ವೇಗವು ( Resultant Velocity ) 4 ಅಡಿಗಳು ಇರುತ್ತದೆ; 2 ಸೆಕೆಂಡ್ ಚಲಿಸಿದರೆ 8 ಅಡಿಗಳು ಆಗುತ್ತದೆ; ಹೀಗೆ ಅದು ಎಡೆಬಿಡದೆ ಚಲಿಸುತ್ತಿದ್ದರೆ 3 ಸೆಕೆಂಡ್‌ಗಳ ಕೊನೆಯಲ್ಲಿ 12 ಅಡಿಗಳೂ 4 ಸೆಕೆಂಡ್‌ಗಳ ಕೊನೆಯಲ್ಲಿ 16 ಅಡಿಗಳೂ......ಇತ್ಯಾದಿ ಆಗುತ್ತದೆ. ಹೀಗೆ, ನಾವು ತೂಕಗಳನ್ನು ಅಸಮವಾಗಿ ಇಟ್ಟ ಪರಿಣಾಮವಾಗಿ ಪ್ರತಿಯೊಂದು ಸೆಕೆಂಡ್ ಕಾಲದ ಕೊನೆಯಲ್ಲಿಯೂ ಗತಿಯ ವೇಗವು ಮೂಲವೇಗ +4 (ಅಡಿಗಳಲ್ಲಿ) ಆಗುತ್ತದೆ. ಇದರಿಂದ ಯಾವ ಸೆಕೆಂಡಿನಲ್ಲಿಯಾದರೂ ಮೊದಲೇ ಸಂಪಾದಿಸಲ್ಪಟ್ಟ ವೇಗವು ಒಂದೇ ಬಗೆಯಾಗಿರುತ್ತದೆಂದು ಸ್ಪಷ್ಟವಾಗುತ್ತದೆ. ಪ್ರಾರಂಭದಲ್ಲಿ ಚಲಿಸುವದಕ್ಕೆ ಮೊದಲು ತೂಕಗಳು ಸಮವಾಗಿರುವದರಿಂದ ಅವು ನಿಶ್ಚಲವಾಗಿಯೂ ಸ್ಥಿರವಾಗಿಯೂ ಇರುತ್ತವೆ. ಆದರೆ, ಪ್ರಾರಂಭದಲ್ಲಿ ತೂಕಗಳು 6, 10 ಇದ್ದು ಒಂದು ಸೆಕೆಂಡ್ ಚಲಿಸಿ 4 ಅಡಿಗಳ ವೇಗವನ್ನು ಸಂಪಾದಿಸಿದ ಅನಂತರ ತೂಕಗಳು ( 10, 10) ಸಮಮಾಡಲ್ಪಟ್ಟರೆ, ಆ 4 ಅಡಿಗಳ ವೇಗದಿಂದಲೇ ಅದು ಮುಂದುವರಿಯುವುದೇ ಹೊರತು ವೇಗವು ಸ್ವಲ್ಪವೂ ಬದಲಾಯಿಸುವದಿಲ್ಲ; 2ನೇ ಸೆಕೆಂಡ್ ಕೊನೆಯಲ್ಲಿ ತೂಕಗಳು ಸಮಮಾಡಲ್ಪಟ್ಟರೆ, ಅಸಮ ತೂಕಗಳು 2 ಸೆಕೆಂಡ್ ಚಲಿಸಿದ್ದರಿಂದ ಸಂಪಾದ್ಯವಾದ 8 ಅಡಿಗಳ ವೇಗವು ಮಾತ್ರ ಮುಂದುವರಿಯುತ್ತದೆ, ಆದರಿಂದ ಮುಂದೆ ವೇಗದಲ್ಲಿ ಯಾವ ಬದಲಾವಣೆಯೂ ಆಗುವದಿಲ್ಲ; 6, 10 ತೂಕಗಳು 3 ಸೆಕೆಂಡ್ ಚಲಿಸಿದ ಅನಂತರ ಸರಿ (10, 10) ಮಾಡಲ್ಪಟ್ಟರೆ, ಅದುವರೆಗೆ ಸಂಪಾದನೆ ಮಾಡಿದ 12 ಅಡಿ ವೇಗದಿಂದಲೇ ಅದು ಚಲಿಸುತ್ತದೆಯೇ ಹೊರತು ಮುಂದೆ ವೇಗವು ಹೆಚ್ಚುವದಿಲ್ಲ. ಮೊದಲನೆಯ ಸೆಕೆಂಡಿನ ಕೊನೆಯಲ್ಲಿ ಗಳಿಸಿದ ವೇಗದಲ್ಲಿಯ ಹೆಚ್ಚುವರಿಗೆ ( Acceleration ) ವೇಗವರ್ಧನ ಎಂದು ಹೆಸರು. ಇಷ್ಟೆಲ್ಲಾ ವಿಚಾರಮಾಡಿದ್ದರಿಂದ ಇಲ್ಲಿ ನಾವು ಗಮನಿಸಬೇಕಾದ ಒಂದು ಮುಖ್ಯ ವಿಷಯವಿದೆ: ತೂಕಗಳು ಸಮವಾಗಿರುವಾಗ ಅವುಗಳ ಮೇಲೆ ಇನ್ನೊಂದು ಶಕ್ತಿಯ ಪ್ರಭಾವ ಇಲ್ಲದಿರುವದರಿಂದ ಅವುಗಳ ಸ್ಥಿತಿಯಲ್ಲಿ ( Rest ) ಆಗಲಿ, ಗತಿಯಲ್ಲಿ ( Motion ) ಆಗಲಿ ಯಾವ ಬದಲಾವಣೆಯೂ ಆಗುವದಿಲ್ಲ. ಈ ನಿಯಮದ ಪ್ರಕಾರ, ತೂಕಗಳು ಅಸಮವಾಗಿರುವಾಗಲೇ ಎಲ್ಲಾ ಬದಲಾವಣೆಗಳೂ ಉಂಟಾಗುತ್ತವೆ.

ಈಗ ನಾವು ಈ ಪ್ರಕೃತಿ ನಿಯಮವನ್ನು ಆತ್ಮಾನುಭವಿಯ ಒಳಗಿನ ಸಮತೆಯ ಸ್ಥಿತಿಗೂ ಹೊರಗಿನ ದೇಹದ ಪ್ರಾರಬ್ಧ ಕರ್ಮದ ವಿಚಿತ್ರಗತಿಗೂ (ಚಲನೆಗೂ) ಹೊಂದಿಸಿ, ಜೀವನ್ಮುಕ್ತರೆಲ್ಲರೂ ತತ್ತ್ವಜ್ಞಾನದಲ್ಲಿಯೂ ಮುಕ್ತಸ್ಥಿತಿಯಲ್ಲಿಯೂ ಒಂದೇ ಆದರೂ ಅವರ ಜ್ಞಾನೋತ್ತರ ಕಾಲದ ಆಚರಣೆಯಲ್ಲಿ ಬೇರೆ ಬೇರೆಯವರು ಬೇರೆ ಬೇರೆ ಬಗೆಯಾಗುವದಕ್ಕೆ ಕಾರಣವೇನೆಂಬುದನ್ನು ತಿಳಿಯಬೇಕಾಗಿದೆ. ನಮ್ಮ ಬಾಳಿನಲ್ಲಿ ನಮ್ಮ ಮನಸ್ಸಿನ ತಕ್ಕಡಿಯನ್ನು ಏರುಪೇರು ಮಾಡತಕ್ಕ ಶಕ್ತಿಯುಳ್ಳ ಎರಡು ತೂಕಗಳೇ (ಮೌಲ್ಯಗಳೇ) ಸುಖ–ದುಃಖ, ನಿಂದಾ–ಸ್ತುತಿ, ಲಾಭ–ನಷ್ಟ ಮೊದಲಾದ

ದ್ವಂದ್ವಗಳು. ಇವುಗಳ ಪ್ರಭಾವದಿಂದ ಮನಸ್ಸು ಹರ್ಷ—ವಿಷಾದಗಳನ್ನು ಪಡೆದು ತಳಮಳಗೊಳ್ಳದಂತೆ ಅದನ್ನು ಸಮತೋಲನದಲ್ಲಿ ಇಟ್ಟುಕೊಳ್ಳುವದೇ ಸ್ಥಿತಪ್ರಜ್ಞನ ಲಕ್ಷಣವು. ಆತ್ಮಾನುಭವವು ನಮ್ಮ ಒಳಗಿರುವ ಅಸಮತೆಯನ್ನೂ—ವಿಷಮತೆಯನ್ನೂ ತೆಗೆದುಹಾಕಿ ನಿತ್ಯವೂ ಬದಲಾವಣೆ ಹೊಂದುತ್ತಿರುವ ಹೊರಗಿನ ಪರಿಸ್ಥಿತಿಗಳ ಯಾವ ಪ್ರಭಾವಕ್ಕೂ ಒಳಗಾಗದಂತೆ ಬಿಡುಗಡೆ ಮಾಡುತ್ತದೆ. ಗಾಳಿಗೂ ಬಿರುಗಾಳಿಗೂ ಸಿಕ್ಕು ಹೊಯ್ದಾಡದಂತೆ ಅದು ರಕ್ಷಿಸುತ್ತದೆ. ನಾವು ಸ್ವತಂತ್ರವಾಗಿಯೂ ಸ್ವಾವಲಂಬಿಗಳಾಗಿಯೂ ನಿಲ್ಲುವಂತೆ ಆದು ಮಾಡುತ್ತದೆ. ಇಷ್ಟಾದರೆ ಜ್ಞಾನಿಯ ಪ್ರಾರಬ್ಧ ಕರ್ಮದ ಹೆಚ್ಚಿನ ವೇಗವೆಲ್ಲಾ (acceleration) ನಿಂತು ಹೋಗುತ್ತದೆ. ಆದರೆ ಜ್ಞಾನವಾಗುವದಕ್ಕೆ ಅಥವಾ ಸಮತೆಯನ್ನು ಸಾಧಿಸುವದಕ್ಕೆ ಮೊದಲು ಸಂಪಾದಿಸಿರುವ ಪ್ರಾರಬ್ಧದ ವೇಗವು ಮಾತ್ರ— ಆ ದೇಹ ಇರುವವರೆಗೂ—ಹಾಗೆಯೇ ಇರುತ್ತದೆ. ಅದು ಕ್ರಿಯಾಶೀಲವಾಗಿ ಭೋಗವನ್ನು ಕೊಟ್ಟೇ ಬರಿದಾಗಬೇಕು. ಕೆಲವು ಜ್ಞಾನಿಗಳಲ್ಲಿ ಅವರು ಮೊದಲು ಮಾಡಿದ ಸಂಕಲ್ಪವೂ ಕರ್ಮವೂ ಅಲ್ಪವಾಗಿರುವದರಿಂದ ಜ್ಞಾನೋತ್ತರ ಕಾಲದಲ್ಲಿ ಅವರ ದೇಹಗಳಿಂದ ಮಹಾ ಕಾರ್ಯಗಳು ಏನೂ ಆಗಲಿಲ್ಲ. ಆದರೆ ಮೊದಲೇ ಸಂಪಾದಿಸಿರುವ ಆಶ್ಚರ್ಯಕರವೂ ಅದ್ಭುತವೂ ಆದ ಪ್ರಾರಬ್ಧ ಕರ್ಮವುಳ್ಳ ಬೇರೆ ಜ್ಞಾನಿಗಳಿದ್ದಾರೆ. ಅವರೂ ಮುಕ್ತರೇ ಆದರೂ ಅವರ ದೇಹವು ಅವಿರತವಾದ ಚಲನೆಯಲ್ಲಿರುವದರಿಂದ ಅವರಿಂದ ಅದ್ಭುತವೂ ದಿವ್ಯವೂ ಆದ ಮಹಾಕಾರ್ಯಗಳಾಗುತ್ತವೆ.

Work is another name for realization.

ಬ್ರಹ್ಮಾನುಭವಕ್ಕೆ ಇನ್ನೊಂದು ಹೆಸರು ಕಾರ್ಯ—ಧರ್ಮಕಾರ್ಯ—ಲೋಕಹಿತ ಕಾರ್ಯ—ಎಂದಾಗುತ್ತದೆ.

"pleasures (are) wrapped up in duties garments"

ಸುಖವು ಕರ್ತವ್ಯದ ಉಡುಗೆಯಲ್ಲಿ ಸುತ್ತಲ್ಪಟ್ಟಿದೆ—ಸುಖವಿರುವದು ಕರ್ತವ್ಯ ಸಾಧನೆಯಲ್ಲಿ— ಎಂದು ಡಾ॥ ಅಂಥೋನಿ (Dr. Anthony) ಹೇಳಿದ್ದಾರೆ.

ಆತ್ಮಾನುಭವದಿಂದ ಕೃತಕೃತ್ಯರಾಗುತ್ತೀರಿ.

ಓಂ ! ಓಂ !ಓಂ !

# AIDS TO REALIZATION-PRANAYAMA

# ಆತ್ಮಾನುಭವಕ್ಕೆ ಸಹಾಯಗಳು-ಪ್ರಾಣಾಯಾಮ

## ತಾ|| 8-3-1903ರಲ್ಲಿ ಅಮೆರಿಕಾದಲ್ಲಿ ಮಾಡಿದ ಉಪನ್ಯಾಸ.

ಭ್ರಾತೃ ಭಗಿನಿಯರ ರೂಪದಲ್ಲಿರುವ ನನ್ನ ಆತ್ಮವೆ!

ರಾಮನ ಹಿಂದಿನ ಉಪನ್ಯಾಸಗಳನ್ನು ಕೇಳಿದವರಿಗೆ ಮಹತ್ವಾದ ಸಹಾಯವಾಗ ತಕ್ಕ ಕೆಲವು ವಿಷಯಗಳ ಮೇಲೆ ಇವತ್ತು ರಾಮನು ಉಪನ್ಯಾಸ ಮಾಡುತ್ತಾನೆ. ನಾವು ಮೊದಲು ಪ್ರಾಣಾಯಾಮವನ್ನು ತೆಗೆದುಕೊಳ್ಳೋಣ. ಪ್ರಾಣಾಯಾಮವೆಂದರೆ ಸಾಮಾನ್ಯವಾಗಿ, ಶ್ವಾಸೋಚ್ಛ್ವಾಸವನ್ನು ನಿರೋಧಮಾಡುವದು, ಉಸಿರಾಟವನ್ನು ತಡೆಹಿಡಿಯುವದು, ಉಸಿರಾಟವನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವದು– ಎಂದು ಅರ್ಥವಾಗುತ್ತದೆ. ಯೋಗಸಂಬಂಧವಾದ ಹಿಂದೂಶಾಸ್ತ್ರಗಳು ಪ್ರಾಣನಿರೋಧದ ಎಂಟು ಕ್ರಮಗಳನ್ನು ಹೇಳಿವೆ. ಪ್ರಾಣನಿರೋಧದಿಂದ ಏನು ಪ್ರಯೋಜನ? ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವೇನೆಂದರೆ, "ಪ್ರಾಣಾಯಾಮದ ಈ ಕ್ರಮವನ್ನು ಕಲಿತು ಅಭ್ಯಾಸಮಾಡಿರಿ; ಅದರಿಂದ ಅತ್ಯಂತವಾದ ಉಪಯೋಗವಿದೆಯೆಂದೂ ಮಹತ್ವಾದ ಹಿತವಿದೆಯೆಂದೂ ನಿಮಗೇ ತಿಳಿಯುತ್ತದೆ". ನಿಮಗೆ ಯಾವಾಗಲಾದರೂ ತಲೆ ತಿರುಗಿದಾಗ, ನಿರುತ್ಸಾಹ ಕಂಡಾಗ, ವಿಷಣ್ಣವಾದಾಗ, ಖಿನ್ನರಾದಾಗ ಎದೆಗುಂದಿದಾಗ, ಅಸಮಾಧಾನವಾದಾಗ, ಈಗ ರಾಮನು ತಿಳಿಸುವ ಪ್ರಾಣಾಯಾಮವನ್ನು ಅಭ್ಯಾಸಮಾಡಿ; ಕೂಡಲೇ ಸಮಾಧಾನ ಪಡೆಯುವದನ್ನು ಕಾಣುತ್ತೀರಿ. ಪ್ರಾಣಾಯಾಮದ ಈ ಕ್ರಮದ ಉಪಯೋಗವನ್ನು ತತ್ಕ್ಷಣವೇ ಪಡೆಯುತ್ತೀರಿ. ನೀವು ಯಾವದಾದರೂ ವಿಷಯದ ಮೇಲೆ ಬರೆಯುವಾಗ ಆಗಲೀ ಆಲೋಚನೆಮಾಡುವಾಗ ಆಗಲೀ ನಿಮ್ಮ ಮನಸ್ಸನ್ನು ನೀವು ಹತೋಟಿಯಲ್ಲಿ ತರಲು ಕಷ್ಟವಾಗಿ ಕಂಡರೆ, ಈ ಪ್ರಾಣಾಯಾಮವನ್ನು ಅಭ್ಯಾಸಮಾಡಿರಿ; ಅದರಿಂದ ನೀವು ಪಡೆಯುವ ಸಿದ್ಧಿಯ ವಿಷಯದಲ್ಲಿ ನಿಮಗೆ ಕೂಡಲೇ ವಿಸ್ಮಯವಾಗಬಹುದು. ಈ ಪ್ರಪಂಚದಲ್ಲಿ ಎಲ್ಲವೂ ನಿಯಮಬದ್ಧವಾಗಿದೆ. ಪ್ರತಿಯೊಂದೂ ಅತ್ಯಂತ ಇಷ್ಟಕರವಾದ ಸ್ಥಿತಿಯಲ್ಲಿಯೇ ಇದೆ. ಪ್ರಾಣಾಯಾಮದಿಂದ ಉಂಟಾಗುವ ಪ್ರಯೋಜನಗಳು ಇವು:

ಇದರಿಂದ ಅನೇಕ ದೈಹಿಕ ವ್ಯಾಧಿಗಳು ಗುಣಪಡುತ್ತವೆ; ಹೊಟ್ಟೆಶೂಲಿ, ಎದೆಶೂಲಿ, ತಲೆಶೂಲಿ ಮೊದಲಾದುವು ಪ್ರಾಣಾಯಾಮದಿಂದ ಗುಣವಾಗುತ್ತವೆ. ಈಗ ಪ್ರಾಣಾಯಾಮವನ್ನು ಹೇಗೆ ಮಾಡಬೇಕೆಂಬದನ್ನು ವಿಚಾರ ಮಾಡೋಣ. ಈ

ದೇಶದಲ್ಲಿ ಪ್ರಾಣಾಯಾಮವನ್ನು ಹೇಗೋ ಹೇಗೋ ಮಾಡುತ್ತಾರೆ. ಆದರೆ, ಇಂಡಿಯಾದೇಶದಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ಅಭ್ಯಾಸ ಮಾಡಲ್ಪಟ್ಟು, ಸಹಸ್ರಾರು ವರ್ಷಗಳ ಪರೀಕ್ಷೆಯಲ್ಲಿ ಉತ್ಕೃಷ್ಟ ಗುಣವುಳ್ಳದೆಂದು ಉತ್ತೀರ್ಣವಾಗಿ ನಿಂತಿರುವ ಕ್ರಮವನ್ನು ನಿಮಗೆ ರಾಮನು ತಿಳಿಸುತ್ತಾನೆ. ಇಂದಿಗೂ ಇಂಡಿಯಾದಲ್ಲಿ ಆ ಕ್ರಮವನ್ನೇ ಅಭ್ಯಾಸಮಾಡುತ್ತಾರೆ. ಅತ್ಯಂತ ಪುರಾತನ ಕಾಲದಿಂದಲೂ ಇವತ್ತಿನವರೆಗೂ ಅಭ್ಯಾಸ ಮಾಡಿರುವ ಆ ಜನಾಂಗವು, ಆ ಕ್ರಮವು ಅತಿಶಯ ಲಾಭದಾಯಕವೆಂದು ಕಂಡುಕೊಂಡಿದ್ದಾರೆ.

ಒಳ್ಳೆಯದು; ಪ್ರಾಣಾಯಾಮವನ್ನು ಅಭ್ಯಾಸಮಾಡಲು ನೀವು ಅತ್ಯಂತ ಸುಲಭವೂ ಸುಖವೂ ಆದ ಆಸನದಲ್ಲಿ ಸ್ಥಿರವಾಗಿ ಕುಳಿತುಕೊಳ್ಳಬೇಕು. ಪದ್ಮಾಸನದಲ್ಲಿ ಕುಳಿತುಕೊಳ್ಳುವದು ಬಹಳ ಸುಖವಾದ ಪದ್ಧತಿಯು. ಆದರೆ ಯಾವಾಗಲೂ ಕುರ್ಚಿಯ ಮೇಲೆ ಆರಾಮವಾಗಿ ಕಾಲುಗಳನ್ನು ನೀಡಿಕೊಂಡು ಸ್ವೇಚ್ಛೆಯಾಗಿ ಕುಳಿತುಕೊಳ್ಳುವ ಅಭ್ಯಾಸವುಳ್ಳ ಪಾಶ್ಚಾತ್ಯರಿಗೆ, ಕಾಲುಗಳನ್ನು ನಿಯಮಬದ್ಧವಾಗಿ ಮಡಿಸಿಕೊಂಡು ಬಹಳ ಹೊತ್ತು ನಿಶ್ಚಲವಾಗಿ ಕುಳಿತುಕೊಳ್ಳುವದೆಂದರೆ ಪ್ರಾಣವೇ ಹೋದಂತೆ ಆಗುತ್ತದೆ. ಆದ್ದರಿಂದ ನೀವು ಆರಾಮ ಕುರ್ಚಿಯ ಮೇಲೆ ಕುಳಿತುಕೊಳ್ಳಬಹುದು. ನಿಮ್ಮ ದೇಹವೂ ತಲೆಯೂ ಕುತ್ತಿಗೆಯೂ ಬೆನ್ನುಹುರಿಯೂ ಸರಳರೇಖೆಯಲ್ಲಿ ನೆಟ್ಟಗೆ, ಗಟ್ಟಿಯಾಗಿ ದೃಢವಾಗಿರಲಿ, ಎದೆ ಉಬ್ಬಿರಲಿ, ತಲೆ ಎತ್ತಿರಲಿ, ಕಣ್ಣುಗಳು—ದೃಷ್ಟಿ—ಎದುರಿನಲ್ಲಿರಲಿ. ಬಲಗೈ ಹೆಬ್ಬೆರಳಿನಿಂದ ಬಲ ಮೂಗಿನ ಹೊಳ್ಳೆಯನ್ನು (ಒತ್ತಿ) ಮುಚ್ಚಿ ಹಿಡಿದು ಎಡದ ಮೂಗಿನಿಂದ ಸಾವಕಾಶವಾಗಿ ಉಸಿರನ್ನು ಒಳಗೆ ಎಳೆದುಕೊಳ್ಳಿ. ಸುಖವಾಗಿಯೂ ಸಾವಕಾಶವಾಗಿಯೂ ಸಾಧ್ಯವಾದಷ್ಟು ದೀರ್ಘಕಾಲ ಉಸಿರನ್ನು ಎಳೆದುಕೊಳ್ಳುತ್ತಾ ಇರಬೇಕು. ಹಾಗೆ ಮಾಡುವಾಗ ಮನಸ್ಸು ಖಾಲಿ ಇರಬಾರದು. ನೀವು ಉಸಿರನ್ನು ಎಳೆದುಕೊಳ್ಳುವಾಗ ಸರ್ವ ಶಕ್ತವೂ ಸರ್ವಜ್ಞವೂ ಸರ್ವವ್ಯಾಪಿಯೂ ಆದ ದೇವತ್ವವನ್ನೇ ದೇವರನ್ನೇ ಇಡೀ ವಿಶ್ವವನ್ನೇ ನಿಮ್ಮೊಳಗೆ ತುಂಬಿಕೊಳ್ಳುತ್ತಿರುವದಾಗಿ ಭಾವಿಸಿ. ಉಸಿರನ್ನು ಸಾಧ್ಯವಾದಷ್ಟು ಪರಮಾವಧಿಯಾಗಿ—ಪರಿಪೂರ್ಣವಾಗಿ—ತುಂಬಿಕೊಂಡ ಮೇಲೆ ಬಲಗೈ ಅನಾಮಿಕದ ಬೆರಳಿನಿಂದ ಎಡದ ಮೂಗನ್ನು ಮುಚ್ಚಿ ಕೊಳ್ಳಬೇಕು. ಆಗ ಬಾಯಿಯಿಂದ ಉಸಿರನ್ನು ಬಿಡಬಾರದು. ಒಳಗೆಳೆದುಕೊಂಡ ಉಸಿರಿನಿಂದ ಶ್ವಾಸಕೋಶಗಳನ್ನೂ ಉದರವನ್ನೂ ಜಠರವನ್ನೂ (ಅನ್ನಕೋಶವನ್ನೂ) ಒಳಗಿನ ಎಲ್ಲಾ ಪೊಳ್ಳುಗಳನ್ನೂ ತುಂಬಿಕೊಂಡಿರುವಾಗ ಪರಮಾತ್ಮನು ಪ್ರಪಂಚದಲ್ಲಿ ಅಣುರೇಣು ತೃಣಕಾಷ್ಠಗಳಲ್ಲಿಯೂ 'ನಾನು' ಎನ್ನುವದರ ಒಳಹೊರಗೂ ತುಂಬಿಕೊಂಡಿದ್ದಾನೆಂದು ಭಾವಿಸಬೇಕು. ಮನಸ್ಸು ಭಾವನಾಶೂನ್ಯವಾಗಿರಬಾರದು. "ಎಲ್ಲೆಲ್ಲಿಯೂ ತುಂಬಿರುವ ಆ ಪರಮಾತ್ಮನೇ ನಾನು" ಎಂದು ನೀವು ತೀವ್ರವಾಗಿ ಭಾವಿಸಬೇಕು. ನಿಮ್ಮ ಎಲ್ಲಾ ಶಕ್ತಿಯನ್ನೂ ಯುಕ್ತಿಯನ್ನೂ ಉಪಯೋಗಿಸಿ ಆ ತತ್ತ್ವವು ನಿಮ್ಮ ಅನುಭವಕ್ಕೆ

ಬರುವಂತೆ ಮಾಡಿಕೊಳ್ಳಬೇಕು. ನಿಮ್ಮ ಮನಸ್ಸು ಈ ಭಾವನೆಯಲ್ಲಿ ಕೇಂದ್ರೀಕರಣ ವಾಗಬೇಕು. ಉಸಿರನ್ನು ಇನ್ನು ಹೆಚ್ಚು ಕಾಲ ತಡೆದಿಟ್ಟುಕೊಳ್ಳುವದು ಸಾಧ್ಯವಿಲ್ಲ ವೆಂದು ತೋರಿದಾಗ ಎಡಮೂಗನ್ನು ಹಾಗೆಯೇ ಮುಚ್ಚಿಟ್ಟುಕೊಂಡು ಬಲಮೂಗಿ ನಿಂದ ಮೆಲ್ಲಗೆ ಕ್ರಮಕ್ರಮವಾಗಿ ಉಸಿರನ್ನು ಹೊರಗೆ ಬಿಡಬೇಕು. ಆಗ ಮನಸ್ಸು ಸುಮ್ಮನಿರಬಾರದು. ಉಸಿರು ಹೊರಗೆಹೋಗುವಂತೆಯೇ ಹೊಟ್ಟೆಯೊಳಗಿನ ಮತ್ತು ಮನಸ್ಸಿನೊಳಗಿನ ಎಲ್ಲಾ ಕಲ್ಮಷಗಳೂ ಕಶ್ಮಲಗಳೂ ಕೆಟ್ಟತನಗಳೂ ಅಪವಿತ್ರವೂ ಅನೀತಿಯೂ ಅಯೋಗ್ಯವೂ ಆದ ಭಾವನೆಗಳೂ ಈ ಎಲ್ಲಕ್ಕೂ ಕಾರಣವಾದ ಅಜ್ಞಾನವೂ ಅವಿವೇಕವೂ ಹೊರಗೆ ತೊಲಗಿ ಹೋದವೆಂದು ಭಾವಿಸಬೇಕು. ಎಲ್ಲಾ ದೌರ್ಬಲ್ಯವೂ ಅವಿದ್ಯೆಯೂ ಭಯವೂ ಚಿಂತೆಯೂ ನೋವೂ ಕಷ್ಟವೂ ವ್ಯಥೆಯೂ ನಿರ್ಮೂಲವಾದವೆಂದು ಭಾವಿಸಬೇಕು. ಬಹಳ ಸಾವಕಾಶವಾಗಿ, ಕ್ರಮಕ್ರಮವಾಗಿ ಉಸಿರನ್ನು ಪೂರಾ ಹೊರಗೆ ಬಿಟ್ಟಮೇಲೆ, ಸ್ವಲ್ಪವೂ ಉಸಿರು ಒಳಗೆ ಉಳಿದಿಲ್ಲವೆಂ ದಾಗ, ಎರಡು ಮೂಗನ್ನೂ ತೆರೆದು ಉಸಿರನ್ನು ಹೊರಗೇ ನಿಲ್ಲಿಸಬೇಕು. ಮೂಗಿ ನಿಂದ ಕೈಯನ್ನು ತೆಗೆಯಿರಿ. ಆದರೆ ಸ್ವಲ್ಪ ಹೊತ್ತು ಉಸಿರನ್ನು ಒಳಗೆ ಸ್ವಲ್ಪವೂ ತೆಗೆದು ಕೊಳ್ಳಬೇಡಿ. ಎಷ್ಟು ಹೊತ್ತು ಸಾಧ್ಯವೋ ಅಷ್ಟು ಹೊತ್ತು ಒಳಗೆ ಖಾಲಿ ಆಗಿರಲಿ. ಆದರೆ ಮನಸ್ಸು ಮಾತ್ರ ಖಾಲಿಯಾಗಬಾರದು. ಅದು ಬ್ರಹ್ಮಭಾವನೆ ಯಿಂದ ತುಂಬಿರಬೇಕು. ಎಲ್ಲಾ ಶಕ್ತಿಯನ್ನೂ ಒಮ್ಮುಖಮಾಡಿ ಅತ್ಯಂತ ತೀವ್ರ ವಾಗಿ ಭಾವಿಸಬೇಕು. "ದೇಶ–ಕಾಲ–ನಿಮಿತ್ತಗಳು ನನ್ನ ಕಲ್ಪನೆ. ನನ್ನ ಆತ್ಮನೇ ಆದ ಪರಮಾತ್ಮನು ದೇಶ–ಕಾಲ–ನಿಮಿತ್ತಗಳನ್ನೂ ಭಾವನೆಗಳನ್ನೂ ಕಲ್ಪನೆಗಳನ್ನೂ ಎಲ್ಲವನ್ನೂ ಮೀರಿದ್ದಾನೆ. ಆತ್ಮನು ಎಲ್ಲವನ್ನೂ ಒಳಗೊಂಡಿರುವದರಿಂದ ಯಾವದು ಅವನನ್ನು ಪರಿಮಿತಗೊಳಿಸಲಾರದು." ಹೀಗೆ ಭಾವಿಸಬೇಕು.

ಹೀಗೆ ಈ ಪ್ರಾಣಾಯಾಮದಲ್ಲಿ ದೈಹಿಕವೂ ಮಾನಸಿಕವೂ ಆದ ನಾಲ್ಕು ವಿಧಾನ ಗಳಿವೆ. ಮೊದಲನೆಯದು ಉಸಿರನ್ನು ಒಳಗೆಳೆದುಕೊಳ್ಳುವ ಪೂರಕ. "ನಾನೇ ಪರಮಾತ್ಮ" ಎಂದು ತಿಳಿದು ಭಾವಿಸಬೇಕು. ಅದಕ್ಕಾಗಿ ಎಲ್ಲಾ ಶಕ್ತಿಯನ್ನೂ ವಿನಿಯೋಗಿಸಬೇಕು. ಇದು ಆ ಸಾಧನೆಯಲ್ಲಿ ಮಾನಸಿಕವಾದ ಭಾಗ. ನೀವು ಉಸಿ ರನ್ನು ಒಳಗೇ ತುಂಬಿ ನಿಲ್ಲಿಸಿಕೊಳ್ಳುವ ದೈಹಿಕವಾದ ಕುಂಭಕದಲ್ಲಿಯೂ 'ಸಮಸ್ತ ವಿಶ್ವವೂ ನಾನೇ' ಎನ್ನುವ ಮಾನಸಿಕ ಸಾಧನವು ಸೇರಿಕೊಂಡೇ ಇರುತ್ತದೆ. ಎಲಾ ಉಸಿರನ್ನೂ ಬಲಮೂಗಿನಿಂದ ಹೊರಗೆ ಹಾಕುವ ರೇಚಕವು ಮೂರನೆಯ ಕ್ರಮವು. ಇದರ ಜೊತೆಗೆ, ಮನಸ್ಸಿನಲ್ಲಿರುವ ಎಲ್ಲಾ ದೋಷಗಳನ್ನೂ ದೌರ್ಬಲ್ಯಗಳನ್ನೂ ಹೊರಗೆ ಹಾಕುವ ಮಾನಸಿಕ ಕ್ರಮವೂ ಕೂಡಿಕೊಂಡಿದೆ. ಅನಂತರ ಕೊನೆಯಲ್ಲಿ ಹೊರಗೆ ಬಿಟ್ಟ ಉಸಿರನ್ನು ಹೊರಗೇ ನಿಲ್ಲಿಸುವ ಬಾಹ್ಯಕುಂಭಕವಿದೆ. ಸಾಧ್ಯವಾ ದಷ್ಟು ಕಾಲ ಉಸಿರನ್ನು ಒಳಗೆ ಎಳೆದುಕೊಳ್ಳಲೇ ಬಾರದು.

ಇಲ್ಲಿಗೆ ಆ ಸಾಧನೆಯ ಅರ್ಧ ಕ್ರಮವು ಮುಗಿದಂತೆ ಆಗುತ್ತದೆ. ಆಗ ನೀವು ಸ್ವಲ್ಪ ವಿಶ್ರಾಂತಿಯನ್ನು ಪಡೆಯಬಹುದು. ಸ್ವೇಚ್ಛೆಯಾಗಿ ಉಸಿರಾಡಲಿ. ದೂರ ನಡೆದಾಡಿ ಬಂದ ಮೇಲೆ ಉಸಿರಾಡುವಂತೆ ವೇಗವಾಗಿ ಉಸಿರಾಡಲಿ. ಈ ವೇಗವಾದ ಉಸಿರಾಟವು ಅದೊಂದು ಬಗೆಯ ಸ್ವಾಭಾವಿಕವಾದ ಪ್ರಾಣಾಯಾಮವು. ಹೀಗೆ ವಿಶ್ರಾಂತಿ ಆದ ಮೇಲೆ ಪ್ರಾಣಾಯಾಮವನ್ನು ಪುನಃ ಪ್ರಾರಂಭಿಸಬೇಕು. ಈಗ ಎಡಮೂಗಿನ ಬದಲು, ಬಲಮೂಗಿನಿಂದ ಉಸಿರನ್ನು ಎಳೆದುಕೊಳ್ಳಲು ಪ್ರಾರಂಭಿಸಬೇಕು. ಮಾನಸಿಕ ಸಾಧನವು ಮೊದಲಿನಂತೆಯೇ ಇರಬೇಕು. ಮೂಗು ಮಾತ್ರ ಬದಲಾಯಿಸಿವೆ. ಬಲಮೂಗಿನಿಂದ ಉಸಿರನ್ನು ಎಳೆದುಕೊಳ್ಳುವಾಗ ದೇವರನ್ನೇ ಒಳಗೆ ತುಂಬಿಕೊಂಡಂತೆ ಭಾವಿಸಬೇಕು. ಪೂರಕವು ಪೂರ್ಣವಾದ ಮೇಲೆ ಸಾಧ್ಯವಾದಷ್ಟು ಕಾಲ ಉಸಿರನ್ನು ನಿಲ್ಲಿಸಿ ಕುಂಭಕವನ್ನು ಮಾಡಿ ನೀವೇ ಇಡೀ ವಿಶ್ವದ ಉಸಿರು—ಮತ್ತು ಜೀವನವೆಂದು ವಿಶಾಲ ಜಗತ್ತನ್ನು ನೀವೇ ಪ್ರಾಣ—ಪ್ರಜ್ಞೆಗಳಿಂದ ತುಂಬಿಕೊಂಡು ಸಚೇತನಗೊಳಿಸುತ್ತಿರುವದಾಗಿಯೂ ಭಾವಿಸಿ. ಎಡಮೂಗಿನಿಂದ ಉಸಿರನ್ನು ಬಿಟ್ಟು ರೇಚಕ ಮಾಡುತ್ತಾ, ಸೂರ್ಯನು ಮಂಜನ್ನೂ ಮಬ್ಬನ್ನೂ ಇಬ್ಬನಿಯನ್ನೂ ಚಳಿಯನ್ನೂ ಕತ್ತಲೆಯನ್ನೂ ಓಡಿಸುವಂತೆ ನೀವೂ ಎಲ್ಲಾ ದೌರ್ಬಲ್ಯವನ್ನೂ ಕತ್ತಲೆಯನ್ನೂ ನಿಮ್ಮ ಮನಸ್ಸಿನಿಂದ ಓಡಿಸುತ್ತಿರುವದಾಗಿ ಭಾವಿಸಿ. ಕೊನೆಗೆ ಉಸಿರನ್ನು ಹೊರಗೇ ನಿಲ್ಲಿಸಿರುವ ಬಾಹ್ಯ ಕುಂಭಕವನ್ನು ಮಾಡಿ. ಇವುಗಳಲ್ಲಿ ಪ್ರತಿಯೊಂದು ಕ್ರಮವನ್ನೂ ಸಾಧ್ಯವಾದಷ್ಟು ದೀರ್ಘ ಕಾಲ— ಹೆಚ್ಚು ಹೊತ್ತು ನಡೆಸಲು ಪ್ರಯತ್ನಮಾಡಿ. ಈ ಸಾಧನದಲ್ಲಿ ಒಟ್ಟು ಎಂಟು ಕ್ರಮಗಳಿವೆ. ಮೊದಲಿನ ನಾಲ್ಕು ಕ್ರಮಗಳಿಂದ ಪ್ರಾಣಾಯಾಮದ ಪೂರ್ವಾರ್ಧವೂ ಎರಡನೆಯ ನಾಲ್ಕು ಕ್ರಮಗಳಿಂದ ಪ್ರಾಣಾಯಾಮದ ಉತ್ತರಾರ್ಧವೂ ಆಗುತ್ತವೆ. ಇವುಗಳಲ್ಲಿ ಪ್ರತಿಯೊಂದನ್ನೂ ಸಾಧ್ಯವಾದಷ್ಟು ಹೆಚ್ಚು ಕಾಲ ಮಾಡಲು ಪ್ರಯತ್ನ ಮಾಡಬೇಕು. ದೊಡ್ಡ ಗಡಿಯಾರದಲ್ಲಿರುವ ಲಂಬಕವು ಎರಡು ಬಗೆಯಾದ ತೂಗಾಟವನ್ನೂ ಹೊಂದಿರುವಂತೆ ನಿಮ್ಮ ಉಸಿರಾಟವನ್ನೂ (ಆ ಲಂಬಕದಂತೆ) ಲಯಬದ್ಧವಾಗಿ ನಡೆಯುವಂತೆ ಮಾಡಬೇಕು. ನಿಮಗೆ ಅಪಾರ ಶಕ್ತಿಯು ಬಂದಿರುವದನ್ನು ನಿಮ್ಮ ಅನುಭವದಿಂದಲೇ ತಿಳಿಯಬಹುದು. ನಿಮ್ಮ ಅನೇಕ ಕಾಹಿಲೆಗಳು ಗುಣಹೊಂದುತ್ತವೆ. ನೀವು ಪ್ರಾಣಾಯಾಮವನ್ನು ಅಭ್ಯಾಸ ಮಾಡಿದರೆ ಕ್ಷಯರೋಗ, ಉದರವ್ಯಾಧಿ, ರಕ್ತರೋಗ ಮೊದಲಾದವುಗಳೆಲ್ಲಾ ನಿಮ್ಮನ್ನು ಬಿಟ್ಟು ತೊಲಗುತ್ತವೆ.

ಪ್ರಾಣಾಯಾಮದ ಅಭ್ಯಾಸವನ್ನು ಪ್ರಾರಂಭಮಾಡಿದ ಕೂಡಲೇ ಬಹಳ ಜನರು ಕಾಹಿಲೆ ಬೀಳುತ್ತಾರೆ ಎಂಬುದು ರಾಮನಿಗೆ ಗೊತ್ತಿದೆ. ಅವರು ಸಾವಧಾನದಿಂದ ಸ್ವಾಭಾವಿಕ ಮಾರ್ಗವನ್ನು ಹಿಡಿಯದೆ ಅತ್ಯುತ್ಸಾಹದಿಂದ ತಮ್ಮ ಶಕ್ತಿಯನ್ನೂ ಮೀರಿ ಹೆಚ್ಚು ಕಾಲ ಪೂರಕ—ಕುಂಭಕ— ರೇಚಕಗಳನ್ನು ಮಾಡುವದೇ ಅವರ ಅನಾರೋಗ್ಯಕ್ಕೆ ಕಾರಣ. ಈ ಅಭ್ಯಾಸದ ಪ್ರತಿಯೊಂದು ಭಾಗದಲ್ಲಿಯೂ

ಸ್ವಾಭಾವಿಕವಾಗಿಯೂ ಸಾವಧಾನವಾಗಿಯೂ ಸಾಧನೆ ಇರಬೇಕು. ಶ್ರಮವಾಗದಂತೆ, ಆಯಾಸವಾಗದಂತೆ ಅಭ್ಯಾಸಮಾಡಬೇಕು. ಮೊದಲನೆಯ ಸಲ ಪೂರಕ–ಕುಂಭಕಗಳನ್ನು ಮಾಡಿದೊಡನೆ ನಿಮಗೆ ಆಯಾಸವಾದರೆ ಅಷ್ಟಕ್ಕೇ ಬಿಟ್ಟುಬಿಡಿ. ನೀವು ಯಾವ ದಾಕ್ಷಿಣ್ಯ–ನಿರ್ಬಂಧಗಳಿಗೆ ಸಿಕ್ಕಿಕೊಳ್ಳಬೇಕಾಗಿಲ್ಲ. ಮರುದಿನ ಅಭ್ಯಾಸ ಮಾಡುವಾಗ ಹೆಚ್ಚು ಎಚ್ಚರವನ್ನೂ ವಿವೇಕವನ್ನೂ ವಹಿಸಿ, ಪ್ರಾಣಾಯಾಮದ ನಾಲ್ಕು ಭಾಗಗಳನ್ನೂ ಆಯಾಸವಿಲ್ಲದಂತೆ ಪೂರ್ಣಗೊಳಿಸಿ.

ಒಳ್ಳೆಯದು ; ಇದೇ ಪ್ರಾಣಾಯಾಮದಲ್ಲಿ ಅನುಕೂಲವಾದ ಕ್ರಮವೂ ಇದೊಂದು ಬಗೆಯ ದೈಹಿಕವಾದ ವ್ಯಾಯಾಮವೂ ಆಗಿದೆ. ಈ ಪ್ರಾಣಾಯಾಮದಲ್ಲಿ ಏನೋ ಗೂಢವೂ ದೈವಿಕವೂ ಆದ ಅರ್ಥವಿದೆಯೆಂದು ಭಾವಿಸುವವರು ಭ್ರಮಿಷ್ಠರು. ಅದು ಅವರತಪ್ಪು ತಿಳಿವಳಿಕೆ ಮಾತ್ರ. ಪ್ರಾಣಾಯಾಮದಿಂದ ಪರಮೋನ್ನತವಾದ ಆತ್ಮಾನುಭವವಾಗುವದೆಂದೂ ಅದಕ್ಕಿಂತಲೂ ಹೆಚ್ಚಿನ ಸಾಧನೆಯೇ ಇಲ್ಲವೆಂದೂ ತಿಳಿದಿರುವವರು ಭ್ರಾಂತರು. ಇದರಲ್ಲಿ ಅಲೌಕಿಕವಾದುದೂ ಅದ್ಭುತವಾದುದೂ ಯಾವದೂ ಇಲ್ಲ. ಅದು ಸಾಮಾನ್ಯವಾದ ಒಂದು ಸಾಧನೆ. ನೀವು ಹೊರಗೆ ಹೋಗಿ ದೈಹಿಕವಾದ ವ್ಯಾಯಾಮ ಮಾಡುವಂತೆ ಇದೂ ಒಂದು ಬಗೆಯ ಶ್ವಾಸಕೋಶಗಳ ವ್ಯಾಯಾಮವು. ಅದರಲ್ಲಿ ಯಾವ ವಿಶೇಷ ರಹಸ್ಯವೂ ಇಲ್ಲ.

ಪ್ರಾಣಾಯಾಮದ ಸಂಬಂಧದಲ್ಲಿ ಇನ್ನೊಂದು ವಿಷಯವನ್ನು ಹೇಳಬೇಕಾಗಿದೆ. ಪೂರಕವನ್ನೂ ರೇಚಕವನ್ನೂ ಮಾಡುವದಕ್ಕೆ ಮೊದಲು ನಾಭಿಯಿಂದ ಕೆಳಗಿನ ಹೊಟ್ಟೆಯನ್ನು ಒಳಗೆ ಎಳೆದುಕೊಳ್ಳಿ. ಅದರಿಂದ ಬಹಳ ಲಾಭವಿದೆ. ಉಸಿರನ್ನು ಒಳಗೆ ಎಳೆದುಕೊಳ್ಳುವಾಗ ಉಸಿರು ಹೃದಯದವರೆಗೆ ಹೋಗಿ ಶ್ವಾಸಕೋಶಗಳನ್ನು ತುಂಬಿಕೊಂಡರೆ ಸಾಲದು. ಕೆಳಗೆ ಆಳವಾಗಿ ಹೋಗಿ ಅದು ಉದರವನ್ನೆಲ್ಲಾ ತುಂಬಿಕೊಳ್ಳಬೇಕು. ಹೊಟ್ಟೆಯಲ್ಲಿರುವ ಎಲ್ಲಾ ಪೊಳ್ಳೂ ಉಸಿರಿನಿಂದ ತುಂಬಿಕೊಳ್ಳಬೇಕು. ಪ್ರಾಣಾಯಾಮದ ವಿಷಯದಲ್ಲಿ ಇಷ್ಟನ್ನು ತಿಳಿದರೆ ಸಾಕು. ವೇದಾಂತ ಶಾಸ್ತ್ರದ ಪ್ರಕಾರವಾಗಿ ಚಿಂತನ ಮಾಡತಕ್ಕವರು, ಓಂಕಾರವನ್ನು ಉಚ್ಚರಿಸುವದಕ್ಕೂ ಮನಸ್ಸನ್ನು ಏಕಾಗ್ರ ಮಾಡುವದಕ್ಕೂ ಮೊದಲು, ಪ್ರಾಣಾಯಾಮದ ಅಭ್ಯಾಸವನ್ನು ಮಾಡುವದು ಅವರಿಗೆ ಆಶ್ಚರ್ಯಕರ ಸಹಾಯವಾಗಿ ಕಂಡುಬರುತ್ತದೆ.

ಮನಸ್ಸನ್ನು ಏಕಾಗ್ರ ಮಾಡುವ ಇನ್ನೊಂದು ಬಗೆಯನ್ನು ರಾಮನು ಈಗ ನಿಮಗೆ ಹೇಳುತ್ತಾನೆ. ಇಲ್ಲಿ ಟೈಪ್ ಮಾಡಿರುವ ಒಂದು ಬಗೆಯ ಪ್ರಾರ್ಥನೆ (prayer) ಇದೆ. ಏನಾದರೊಂದನ್ನು ಬಯಸಿ ದೇವರಲ್ಲಿ ಕೇಳುವದು, ಬೇಡುವದು ಎನ್ನುವ ಅರ್ಥದಲ್ಲಿ ಇದು ಪ್ರಾರ್ಥನೆಯಲ್ಲ. ನಿಮ್ಮ ಸ್ವರೂಪದ ದೇವತ್ವವನ್ನು–ನೀವೇ ದೇವರೆಂಬದನ್ನು–ನೀವು ಅನುಭವಮಾಡುವದಕ್ಕೆ ಇದು ನಿಮ್ಮನ್ನು

ಶಕ್ತರನ್ನಾಗಿ ಮಾಡುತ್ತದೆ ಎನ್ನುವ ಅರ್ಥದಲ್ಲಿ ಇದು ಪ್ರಾರ್ಥನೆ. ಇದನ್ನು ಹೇಗೆ ಉಪಯೋಗಮಾಡಿಕೊಳ್ಳಬೇಕು ಎನ್ನುವದನ್ನು ರಾಮನು ನಿಮಗೆ ತಿಳಿಸುತ್ತಾನೆ. ರಾಮನ ಉಪನ್ಯಾಸಗಳನ್ನು ಬಿಡದೆ ಕೇಳುತ್ತಿರುವವರಿಗೆ ಇದು ಬಹಳ ಪ್ರಯೋಜನವಾಗ ಬಹುದು. ಶ್ರವಣಮಾಡದೆ ಇರತಕ್ಕವರಿಗೆ ಇದು ಸ್ವಾರಸ್ಯವಾಗಿ ತೋರದೇ ಇರಬಹುದು. ಆದರೂ ಅವರು ಓದಿದರೂ ಅವರಿಗೂ ಲಾಭವಾಗುತ್ತದೆ. ಅವರು ಇದರ ಪದ್ಧತಿ ಯನ್ನು ತಮ್ಮ ಸ್ವಂತ ಪ್ರಾರ್ಥನೆಗೆ ಅನ್ವಯಿಸಿಕೊಳ್ಳಬಹುದು. ಈ ಟೈಪ್‌ಮಾಡಿದ ವಿಷಯಗಳು ಉಪಯುಕ್ತವಾಗಿ ಕಂಡರೆ, ಯಾರಾದರೂ ತಮಗಾಗಿ ಮುದ್ರಣ ಮಾಡಿಸಿಕೊಳ್ಳಬಹುದು. ರಾಮನು ಬರೆದಿರುವ "ಆತ್ಮಾನುಭವ" (Realization) ಎನ್ನುವ ಕೆಂಪು ಪುಸ್ತಕವು ನಿಮ್ಮ ಅನೇಕರಲ್ಲಿ ಇದೆ. ಈ ವಿಷಯವೂ ಆ ಪುಸ್ತಕದ ರೀತಿಯಲ್ಲಿಯೇ ಇದೆ. ಈ ಉಪನ್ಯಾಸದ ಕೊನೆಯಲ್ಲಿ "ಸೋಹಂ" ಎಂಬ ಹೆಸರಿರುವ ಲೇಖನವನ್ನು ಯಾವಾಗಲೂ ನಿಮ್ಮ ಜೇಬಿನಲ್ಲಿ ಇಟ್ಟುಕೊಂಡಿರಬಹುದು. ಯಾವಾ ಗಲಾದರೂ ನಿಮ್ಮ ನಿತ್ಯ ಜೀವನದ ಚಿಂತಾ—ಕ್ಲೇಶ—ವ್ಯಥೆಗಳ ಭಾರವು ಬಹಳ ಅಸಹ ನೀಯವಾಗಿ ತೂಗುತ್ತಿರುವಾಗ, ನಿಮ್ಮ ಸನ್ನಿವೇಶವು ಅತಿಶಯ ವಿರುದ್ಧವಾಗಿ ಕಂಡಾಗ, ಏಕಾಂತದಲ್ಲಿ ಕುಳಿತುಕೊಂಡು, ಈಗ ರಾಮನು ತಿಳಿಸುವ ರೀತಿಯಲ್ಲಿ ಈ ಲೇಖನವನ್ನು ಮನನ ಮಾಡುವದಕ್ಕೆ ತೊಡಗಿರಿ.

ನಿಮಗೆ ಸುಲಭವೂ ಸುಖವೂ ಆಗುವಂತೆ ಕುಳಿತುಕೊಳ್ಳಿರಿ. ಪ್ರಾಣಾಯಾಮ ಮಾಡುವಾಗ ಹೇಗೆ ಕುಳಿತುಕೊಳ್ಳಬೇಕೆಂದು ಹೇಳಿತ್ತೋ ಹಾಗೆಯೇ ಕುಳಿತುಕೊಳ್ಳಿ. ನೀವು ಕಣ್ಣುಗಳನ್ನು ಮುಚ್ಚಿಕೊಂಡು ಪ್ರಾರ್ಥನೆ ಮಾಡುವ ಮನೋಭಾವದಿಂದ ಪ್ರಾರಂಭಿಸಬಹುದು.

"ಸತ್ಯವಾದರೋ ಒಂದೇ ; ಎರಡನೆಯದು ಯಾವದೂ ಇಲ್ಲ. ದೇಶ—ಕಾಲಾದಿಗಳನ್ನು ಮೀರಿದ ವಸ್ತುವಿನಲ್ಲಿ—ತತ್ತ್ವದಲ್ಲಿ— ಮೊದಲನೆಯದೆಂಬುದೇ ಇಲ್ಲ; ಎರಡನೆಯದು ಎಲ್ಲಿಂದ ಬರಬೇಕು ? ಸತ್ಯವು ನಿರ್ವಿಶೇಷವೂ ನಿರ್ವಿಕಾರವೂ ಆದುದು; ಅದು "ಏಕಮೇವಾದ್ವಿತೀಯಂ". ಎಂದೂ ಯಾವ ಕಾರಣದಿಂದಲೂ ಯಾವ ಬದ-ಲಾವಣೆಯನ್ನೂ ಹೊಂದದಿರುವ ಇರುವಿಕೆಯೇ—ಬಚ್ಚಬರಿ (ಕೇವಲ) ಇರುವಿಕೆಯೇ—ಸತ್ಯವು ಎಂದೂ ಯಾವ ಕಾರಣದಿಂದಲೂ ಎನ್ನಬಹುದಾದ ದೇಶ—ಕಾಲ—ನಿಮಿತ್ತ ಗಳ ಕಟ್ಟಿಗೆ (ಪರಿಮಿತಿಗೆ) ಇರುವಿಕೆಯು ಸಿಕ್ಕಿಲ್ಲ. ದೇಶ—ಕಾಲಾದಿಗಳೇ ಅದರಲ್ಲಿ ಕಲ್ಪಿತವಾಗಿವೆ. ನಾಮರೂಪಾತ್ಮಕವಾದ ಇಡೀ ವಿಶ್ವದ ತಿರುಳೇ—ಸಾರವೇ—ಸತ್ತು (ಇರುವಿಕೆ) —ಸತ್ಯ—. ಸತ್ತೇ ಚಿತ್ತು; ಸಚ್ಚಿತ್ತೇ ಆನಂದ. ಪ್ರಪಂಚವೆಂದರೆ ಅಸ್ತಿ (ಇರುವಿಕೆ)—ಭಾತಿ (ತೋರುವಿಕೆ)— ಪ್ರಿಯ (ಬೇಕು—ಎನಿಸುವಿಕೆ)—ನಾಮ—ರೂಪ (—ಕರ್ಮ)ಗಳು. ಇವುಗಳಲ್ಲಿ ನಾಮರೂಪ (—ಕರ್ಮಗಳೇ) ಮಾಯೆ. ಅಸ್ತಿ—ಭಾತಿ—ಪ್ರಿಯವೇ ಸತ್—ಚಿತ್—ಆನಂದ. ಇದೇ (ಅದೇ) ಪರಬ್ರಹ್ಮ—ನಮ್ಮೆಲ್ಲರ

ಆತ್ಮ; ಎಲ್ಲ ವಸ್ತುಗಳ ಆತ್ಮ. ಸಚ್ಚಿದಾನಂದ ಸ್ವರೂಪವಾದ ನಮ್ಮ ಆತ್ಮನಲ್ಲಿ ನಾಮರೂಪಾತ್ಮಕ—ಮಾಯಾ—ಜಗತ್ತು ಅವಿದ್ಯೆಯಿಂದ ಕಲ್ಪಿತವಾಗಿ ತೋರುತ್ತಿದೆ. ಗುರೂಪದಿಷ್ಟವಾದ ಬ್ರಹ್ಮವಿದ್ಯೆಯಿಂದ (ಅಧ್ಯಾತ್ಮವಿದ್ಯೆಯಿಂದ) ಅವಿದ್ಯೆಯು ತೊಲಗಲು ಅಧ್ಯಸ್ತವಾದ (ಕಲ್ಪಿತ) ಜಗತ್ತು ಮಿಥ್ಯ (ಇಲ್ಲ) ವೆನಿಸಿ, ಅಧಿಷ್ಠಾನವಾದ ಬ್ರಹ್ಮ ಒಂದೇ ಸತ್ಯವೆಂದು ಅನುಭವಕ್ಕೆ ಬರುತ್ತದೆ. ಓಂ ! ಓಂ ! ! ಓಂ ! ! !

ಇದನ್ನು ಸಾವಕಾಶವಾಗಿ ಓದಿ, ಅರ್ಥಮಾಡಿಕೊಂಡು ಈ ಲೇಖನವನ್ನು ಅತ್ತಲಾಗಿ ಇಡಿರಿ. " There is but one Reality " "ಸತ್ಯವಾದರೋ ಒಂದೇ; ಅದೇ ಆತ್ಮ ಓಂ ! ಓಂ ! ! ಓಂ ! ! !" ರಾಮನ ಉಪ ನ್ಯಾಸಗಳನ್ನೆಲ್ಲಾ ಕೇಳಿದವರು ಇದನ್ನು ಚೆನ್ನಾಗಿ ಅರಿತಿರಬೇಕು. ಇದೇ ಸತ್ಯವೆಂದು ನಿಮಗೆ ಪೂರ್ಣವಾಗಿ ಒಪ್ಪಿಗೆಯಾಗಿರುವದರಿಂದ ಇದನ್ನೇ ಭಾವಿಸಿರಿ. "ಇರುವ ದಾದರೋ ಒಂದು ಸತ್ಯವೇ— ಆತ್ಮವೇ. ಸತ್ಯವಾದರೋ ಒಂದೇ ; ಅದೇ ಆತ್ಮ; ಓಂ, ಓಂ, ಓಂ." ಇದನ್ನೇ ಪುನಃ ಪುನಃ ಭಾವನೆಯ ಭಾಷೆಯಲ್ಲಿ ನಿಮ್ಮಲ್ಲಿ ನೀವೇ ಹೇಳಿಕೊಳ್ಳಿರಿ. ಇದನ್ನು ನೀವೂ ಪೂರ್ಣ ಹೃದಯದಿಂದ ಭಾವಿಸಿ, ಆ ಭಾವನೆಯ ಲ್ಲಿಯೇ ನಿಮ್ಮ ಮನಸ್ಸು ಕರಗಿ ಹೋಗಲಿ. ಕೊನೆಯಲ್ಲಿರುವ "ಓಂ" ಎಂಬುದರ ಅರ್ಥವೇನು ? ಅಗತ್ಯವೇನು ? "ಆತ್ಮವಾದರೋ ಒಂದೇ ಸತ್ಯ" ಎನ್ನುವದೇ 'ಓಂ' ಎಂಬ ದರ ಅರ್ಥ. ಆತ್ಮ ಒಂದೇ ಸತ್ಯ ಎನ್ನುವದಕ್ಕೆ 'ಓಂ' ಎಂಬುದು ಪ್ರತೀಕ—ಪ್ರತಿನಿಧಿ—ಆಗಿದೆ. ಆದ್ದರಿಂದ ಆತ್ಮ ಒಂದೇ ಸತ್ಯ' ಎಂಬ ಮೂರು ಶಬ್ದಗಳನ್ನು ಹೇಳಿಕೊಳ್ಳುವದಕ್ಕೆ ಬದಲು 'ಓಂ' ಎಂಬ ಒಂದೇ ಶಬ್ದವನ್ನು ಉಚ್ಚರಿಸಿಕೊಂಡರೆ 'ಆತ್ಮ ಒಂದೇ ಸತ್ಯ' ಎನ್ನುವ ಅರ್ಥವು ಮನನ—ನಿದಿಧ್ಯಾಸನವಾಗಿ ಅನುಭವಕ್ಕೆ ಬರಬೇಕು. ಬೀಜ ಗಣಿತದಲ್ಲಿ (Algebra) ದೊಡ್ಡ ದೊಡ್ಡ ಸಂಖ್ಯೆಗಳನ್ನು x ಅಥವಾ y, a ಅಥವಾ b ಎಂಬ ಅಕ್ಷರಗಳು ಸೂಚಿಸುವಂತೆ ಮಹತ್ವಾದ ಬ್ರಹ್ಮ ವಿದ್ಯೆಯ ಸಾರವನ್ನೇ ಅತ್ಯಂತ ಪವಿತ್ರವೂ ಪರ ಮಾತ್ಮನ ಪರಮ ಶಕ್ತಿಯ ಸಂಕೇತವೂ ಆದ ಓಂಕಾರವು ಸೂಚಿಸುತ್ತದೆ. ಓಂಕಾರ ವನ್ನು ಉಚ್ಚರಿಸುತ್ತಿರುವಾಗ ಪೂರ್ಣ ಹೃದಯದಿಂದಲೂ ಆತ್ಮದಿಂದಲೂ "ಆತ್ಮ ನೊಬ್ಬನೇ ಸತ್ಯ" ಎಂದು ಭಾವಿಸಬೇಕು. ನಮ್ಮ ಚೈತನ್ಯದ ಉತ್ಸಾಹವನ್ನು ಕುಗ್ಗಿ ಸುವ, ಆನಂದವನ್ನು ಕೆಡಿಸುವ ಭೇದ ರೂಪದ ದೃಶ್ಯವಿಲಾಸವು ನಿಜವಲ್ಲ. ಕ್ಷಣ ಕ್ಷಣಕ್ಕೂ ಬದಲಾವಣೆ ಹೊಂದುತ್ತಿರುವ ಸನ್ನಿವೇಶಗಳೂ ನಿಜವಲ್ಲ. ಆತ್ಮನೊ ಬ್ಬನೇ ಸತ್ಯ. ಈ ಪ್ರಯೋಗ—ಪರೀಕ್ಷೆಗಳನ್ನು ನಡೆಸದೆ, ಶಕ್ತಿಯನ್ನು ವ್ಯರ್ಥವಾಗಿ ವ್ಯಯ ಮಾಡಿರತಕ್ಕವರು ಆತ್ಮನೊಬ್ಬನೇ ಸತ್ಯ ಎನ್ನುವ ಬೋಧೆಯನ್ನು ಅಲ್ಲಗಳೆಯ ಬಹುದು. ಆದರೆ ಅದು ಗಡುಸಾದ ಕಠೋರ ಸತ್ಯ. ಪ್ರಯೋಗ ಶಾಲೆಯಲ್ಲಿ ಪ್ರಯೋಗವನ್ನು ನಡೆಸಿ ಫಲಿತಾಂಶವನ್ನು ಕಣ್ಣಾರೆ ಕಾಣುವಂತೆ, 'ಆತ್ಮನೊಬ್ಬನೇ ಸತ್ಯ, ಎಂಬ ತತ್ತ್ವವನ್ನು ಯಾರಾದರೂ (ಯೋಗ್ಯತೆಯುಳ್ಳವರು) ಅನುಭವದಲ್ಲಿ

ಕಾಣಬಹುದು. ನಿಮ್ಮ ಮನಸ್ಸನ್ನು ನೀವು ಆತ್ಮನಲ್ಲಿ ಕರಗಿಸಿ ದೇವರಲ್ಲಿ ನಿಮ್ಮ ಸಣ್ಣದೂ ಸುಳ್ಳೂ ಆದ ಜೀವಾತ್ಮನನ್ನು ಮುಳುಗಿಸಬೇಕು. —ಇದರ ಪರಿಣಾಮವೇನು ? ನಿಮ್ಮಲ್ಲಿ ಸಾಸಿವೆ ಕಾಳಿನಷ್ಟು ನಂಬಿಕೆಯಿದ್ದು ನಿಮ್ಮಲ್ಲಿಗೆ ಬರಬೇಕೆಂದು ಪರ್ವತಕ್ಕೆ ಆಜ್ಞೆಮಾಡಿದರೂ ಅದು ಬರುತ್ತದೆ– ಎಂದು ಯೇಸು ಕ್ರಿಸ್ತನು ಹೇಳುತ್ತಾನೆ. ಆ ಸತ್ಯವನ್ನು ಭಾವಿಸಿ ಜೀವನದಲ್ಲಿ ತಂದುಕೊಂಡರೆ, ನಿಮ್ಮ ಎಲ್ಲಾ ಪ್ರತಿಕೂಲ ಸನ್ನಿವೇಶಗಳೂ ಅತ್ಯಂತ ಸಮೀಪಗತವಾದ ಅಪಾಯಗಳೂ ದುರುಗುಟ್ಟಿಕೊಂಡು ಇರಿಯುವಂತೆ ನಿಮ್ಮ ಮುಖದಲ್ಲಿಯೇ ದಿಟ್ಟಿಸಿ ನೋಡುತ್ತಿರುವಂತಿರುವ ಕ್ಲೇಶಗಳೂ ಚಿಂತೆಗಳೂ ಮಾಯವಾಗಿಯೇ ತೀರುತ್ತವೆ. ಆದರೆ ನೀವು ಒಳಗಿರುವ ದೇವತ್ವದಲ್ಲಿ ಇಟ್ಟಿರುವ ನಂಬಿಕೆಗಿಂತಲೂ ಹೆಚ್ಚಿನ ನಂಬಿಕೆಯನ್ನು ಹೊರಗಿನ ಪ್ರಕೃತಿ ವಿಲಾಸದಲ್ಲಿ ಇಟ್ಟಿರುವದರಿಂದ, ನಿಮಗೆ ದೇವರು ಸತ್ಯವಾಗಿ ತೋರುವದಕ್ಕಿಂತಲೂ ಪ್ರಪಂಚವು ಹೆಚ್ಚು ಸತ್ಯವಾಗಿ ತೋರುತ್ತಿದೆ. ಹೊರಗಿನ (ಹಾಗೂ ಒಳಗಿನ) ಪ್ರಕೃತಿ ವಿಲಾಸವು ಸತ್ಯವೇ ಸತ್ಯವೆಂದು ದೃಢವಾಗಿ ನಂಬಿ, ಅದರಿಂದ ನೀವು ಸಂಮ್ಮೋಹಿತರಾಗಿರುವದರಿಂದ ಎಲ್ಲಾ ಬಗೆಯ ವ್ಯಥೆಯಲ್ಲಿಯೂ ತೊಂದರೆಗಳಲ್ಲಿಯೂ ಸಿಕ್ಕಿಕೊಳ್ಳುತ್ತೀರಿ. ಯಾವಾಗಲಾದರೂ ನೀವು ತುಂಬಾ ಖಿನ್ನರಾದಾಗ ಈ ಲೇಖನವನ್ನು ಓದಿ, "ನಿಜವಾಗಿ ಇರುವದಾದರೋ ಒಂದೇ; ಅದೇ ಬ್ರಹ್ಮ, ಅದೇ ಆತ್ಮ, ಇನ್ನೊಂದು ಏನೂ ಇಲ್ಲ. ಆತ್ಮನೇ ತನ್ನನ್ನು ತಾನು ತಿಳಿಯದಿರುವ ಅವಿದ್ಯೆಯಿಂದ ಪ್ರಪಂಚವಾಗಿ ತೋರಿಕೊಳ್ಳುತ್ತಿದ್ದಾನೆ. ತೋರುವದು ಅನೇಕವಾದರೂ ಇರುವದು ಒಂದೇ." ನೀವು ಪುಸ್ತಕಗಳಿಂದ ಸತ್ಯವೆನಿಸಿಕೊಂಡ ಅನೇಕ ತತ್ತ್ವಗಳನ್ನು ತಿಳಿದಿರಬಹುದು. ಪುಸ್ತಕಗಳು ಪುಸಲಾಯಿಸಿ ನಿಮ್ಮನ್ನು ನಂಬಿಸಿರಬಹುದಾದ ಆ ಎಲ್ಲವುಗಳಿಗಿಂತಲೂ "ಇರುವದು ಒಂದೇ, ಎರಡನೆಯದಿಲ್ಲ". ಎಂಬ ಸಿದ್ಧಾಂತವು ಹೆಚ್ಚು ಸತ್ಯವೆಂದೂ ಪರಮ ಸತ್ಯವೆಂದೂ ನಿಶ್ಚಯಮಾಡಿ. ನೀವು ಸತ್ಯ–ಸತ್ಯವೆಂದು ನಂಬಿದ್ದ ವಾಸ್ತವವೆನಿಸಿಕೊಂಡ ಎಲ್ಲಾ ವಿಚಾರಗಳೂ ಬರೀ ಭ್ರಮೆಯೇ ಸರಿ. ನೀವು ನಂಬುವಂತೆ ನಿಮ್ಮಲ್ಲಿ ಮೋಹವನ್ನು ಹುಟ್ಟಿಸಿರುವ ಇಂದ್ರಿಯಗಳ ಇಂದ್ರಜಾಲವೇ ಅದು. ಇಂದ್ರಿಯಗಳ ಮೋಸಕ್ಕೆ ಬಲಿಯಾಗಬೇಡಿ. ಯಾರೋ ಬಂದು ನಿಮ್ಮಲ್ಲಿ ತಪ್ಪನ್ನು ಕಂಡು ಹಿಡಿಯುತ್ತಾರೆ, ನಿಮ್ಮನ್ನು ಟೀಕಿಸುತ್ತಾರೆ. ಇನ್ನೊಬ್ಬರು ಬಂದು ನಿಮ್ಮನ್ನು ನಿಂದಿಸುತ್ತಾರೆ. ಮತ್ತೊಬ್ಬರು ಯಾರೋ ಬಂದು ನಿಮ್ಮನ್ನು ಹೊಗಳಿ, ಉಬ್ಬಿಸುತ್ತಾರೆ. ಇವುಗಳೆಲ್ಲಾ ನಿಜವಲ್ಲ, ಸತ್ಯವಲ್ಲ. ಕಠಿಣವಾದ ಸತ್ಯವೇ ವಾಸ್ತವವಾದುದೆಂದು ನೀವು ಭಾವನೆಯಿಂದ ಮನಗಾಣಬೇಕು. ಇದರ ನೆನಪಿಗಾಗಿಯೂ ಮನನಕ್ಕಾಗಿಯೂ ಓಂಕಾರವನ್ನು ಉಚ್ಚರಿಸುವಾಗ ಹೊರಗಿನ ಪ್ರಕೃತಿ ವ್ಯಾಪಾರದ ಸನ್ನಿವೇಶಗಳಲ್ಲಿ ನೀವು ಇಟ್ಟುಕೊಂಡಿರುವ ಎಲ್ಲಾ ನಂಬಿಕೆಯನ್ನೂ ಹೊರಗೆ ಅಟ್ಟಿ, ಹೊರಗೆ ಓಡಿಸಿ, ಉಚ್ಚಾಟನೆಮಾಡಿ, ತೊಲಗಿಸಿ. ಆದರೆ, "ಇರುವದಾದರೋ ನಿಜವಾಗಿ ಒಂದೇ, ಒಂದೇ; ಇನ್ನೊಂದು ಯಾವದೂ ಇಲ. ಅದೇ ಸಚ್ಚಿದಾನಂದ ಸ್ವರೂಪವಾದ ನಾನು." ಎಂಬ

ತತ್ತ್ವದಲ್ಲಿ ನಿಮ್ಮ ಎಲ್ಲಾ ನಂಬಿಕೆಯನ್ನೂ, ಭಾವನೆಯನ್ನೂ, ಅರಿವನ್ನೂ ಶಕ್ತಿಯನ್ನೂ ಬಲವನ್ನೂ ಕೇಂದ್ರೀಕರಿಸಿ ಕೀಲಿಸಿ.

" There is but one Reality OM! OM!! OM!!! "

"ಇರುವದಾದರೋ ಒಂದೇ ಸತ್ಯ. ಓಂ ! ಓಂ ! ! ಓಂ ! ! !.

ಈ ಅಮೃತ ವಾಣಿಯನ್ನು ಮೊದಲನೆಯ ಸಲ ಓದಿಕೊಂಡಾಗ ನಿಮಗೆ ಎಷ್ಟು ಸಂತೋಷವೂ ಸುಖವೂ ಉಲ್ಲಾಸವೂ ಉಂಟಾಯಿತೆಂಬುದನ್ನು ನೀವು ಅನೇಕ ಸಲ ಸ್ಮರಿಸಿಕೊಳ್ಳಬಹುದು. ಆ ದಿವ್ಯ ಭಾವದಲ್ಲಿದ್ದಾಗೆ ನೀವು ಎಲ್ಲಾ ನೋವನ್ನೂ ಕಷ್ಟ ವನ್ನೂ ಮೀರಿರುತ್ತೀರಿ—ಎಂಬದನ್ನು ನೆನೆಸಿಕೊಳ್ಳಬಹುದು. ನೀವು ಆ ವಾಕ್ಯವನ್ನು ಆ ಭಾವನೆಯನ್ನು—ಪುನಃ ಪುನಃ ಮನನಮಾಡಬೇಕೆನಿಸಿದರೆ ಮಾಡಬಹುದು; ನಿಮ್ಮ ಅನುಭವದಲ್ಲಿಯೂ ಅನುಷ್ಠಾನದಲ್ಲಿಯೂ ತಂದುಕೊಳ್ಳುವದಕ್ಕೆ ಅದೊಂದೇ ಅಮರ ಭಾವವು ಸಾಕಾಗಿದೆ. ನಿಮಗೆ ಇನ್ನೂ ಹೆಚ್ಚಿನ ಶಕ್ತಿಯು ಬೇಕೆನಿಸಿದರೆ ಮುಂದಿನ ವಾಕ್ಯವನ್ನು ಓದಿರಿ: " That reality is myself." "ಆ ಸತ್ಯವು ನಾನೇ." ಈ ಭಾವನೆಯಿಂದ ಆ ಸತ್ಯವು ನಮ್ಮ ಹೃದಯಕ್ಕೆ ಹೆಚ್ಚು ಸಮೀಪವಾಗಿ ಬರುತ್ತದೆ. ಆದ್ದರಿಂದ ನನ್ನ ನೆರೆಯವನು ನನ್ನಿಂದ ಬೇರೆಯಲ್ಲ. ಅವನಲ್ಲಿಯೂ ನಾನೇ ಇದ್ದೇನೆ. ಅವನಲ್ಲಿರುವ ಸತ್ಯವೂ ನಾನೇ. ಓಂ ! ಓಂ ! ಓಂ ! ಸ್ವಲ್ಪ ಗಮನಿಸಿ; ಓಂಕಾರವನ್ನು ಉಚ್ಚರಿಸುವಾಗ ನಿಮ್ಮ ಕೈಗಳನ್ನು ಮುಚ್ಚಿಟ್ಟು ಕೊಳ್ಳಬೇಕು; ಅಥವಾ ಹೀಗೆ ಮಾಡಬೇಕು; ಹಾಗೆ ಮಾಡಬೇಕು, ಎಂದು ಕೆಲವರು ಹೇಳುತ್ತಾರೆ. ಆದರೆ ಅದಕ್ಕಾಗಿ ಯಾವ ನಿರ್ಬಂಧವೂ ಇಲ್ಲ. ಭಾವನೆಯೇ ಮುಖ್ಯವಾದುದು. ಮನಸ್ಸನ್ನು ಸಂಯಮ ಮಾಡುವಾಗ—ಏಕಾಗ್ರಮಾಡುವಾಗ—ನೀವು ಯಾವದೊಂದು ವಿಶಿಷ್ಟವಾದ ಆಸನದಲ್ಲಿ—ಅಥವಾ ಸ್ಥಿತಿಯಲ್ಲಿ —ಕುಳಿತು ಕೊಳ್ಳುವ ಅಗತ್ಯವಿಲ್ಲ. ನೀವು ಸದ್ಭಾವನೆಯಿಂದ ಉಸಿರನ್ನು ಎಳೆದುಕೊಳ್ಳುತ್ತಿರು ವಾಗ ದೇಹದ ಚಿಂತೆ ಬೇಡ; ಮತ್ತು ಜನರ ಅಭಿಪ್ರಾಯದ ಕಡೆ ನಿಮಗೆ ಗಮನವೂ ಬೇಡ. ಈ ವಾಕ್ಯವನ್ನೇ, ಭಾವನೆಯನ್ನೇ ಗಾನಮಾಡಬೇಕೆಂದು ತೋರಿದರೆ, ಗಾನ ಮಾಡಿ; ಮಲಗಬೇಕೆಂದು ನಿಮಗೆ ತೋರಿದರೆ ನೆಲದ ಮೇಲೆ ಮಲಗಿಕೊಳ್ಳಿ. ಆದರೆ ಆತ್ಮಭಾವನೆ ಮಾತ್ರ ನಿಮ್ಮಲ್ಲಿ ಯಾವಾಗಲೂ ಇರಲಿ. ದೇಹದ ವಿಷಯದಲ್ಲಿ ಮಾತ್ರ ಯಾವ ನಿರ್ಬಂಧವೂ ಇಲ್ಲ. "ಆತ್ಮನು ಸರ್ವಜ್ಞನು, ಸರ್ವಶಕ್ತನು, ಸರ್ವಾಂತ ರ್ಯಾಮಿಯು" ಈ ಭಾವನೆಯಲ್ಲಿ ಮನಸ್ಸನ್ನು ಕೇಂದ್ರೀಕರಣಮಾಡಿ. ರಾಮನ ಉಪನ್ಯಾಸಗಳನ್ನು ಕೇಳದೇ ಇರತಕ್ಕವರಿಗೆ ಈ ಲೇಖನದಲ್ಲಿ ಆಸಕ್ತಿಯು ತೋರದೇ ಇರಬಹುದು. ಆದರೆ ಉಪನ್ಯಾಸಗಳನ್ನು ಕೇಳಿದವರು ನಿಜವಾದ ಆತ್ಮನು—ಪರ ಮಾತ್ಮನು—(ಸಾಪೇಕ್ಷವಾಗಿ) ಸರ್ವಶಕ್ತನೆಂಬದನ್ನು ಬಲ್ಲರು. (ಪ್ರಪಂಚವು

ಸತ್ಯವಾದರೆ ಅದರ ಸೃಷ್ಟಿ—ಸ್ಥಿತಿ—ಲಯಗಳಿಗೆ ಕಾರಣವಾದ ಶಕ್ತಿಯೂ ಪರಮಾತ್ಮನಲ್ಲಿ ಸತ್ಯವಾಗಿ ಇರಬೇಕು. ಆದರೆ ಶಂಕರಾಚಾರ್ಯರ ಅದ್ವೈತ ಸಿದ್ಧಾಂತದಲ್ಲಿ ಪರಮಾರ್ಥ ದೃಷ್ಟಿಯಿಂದ ಪರಮಾತ್ಮ ಒಂದೇ ಸತ್ಯವು; ಮಿಕ್ಕದ್ದೆಲ್ಲಾ ಮಾಯಾ ಶಕ್ತಿಯೂ ಅದರ ಕಾರ್ಯವೂ—ಜಗತ್ತೂ—ಅವಿದ್ಯಾಕಲ್ಪಿತವಾದುದು. ಆದರೂ ಸಾಪೇಕ್ಷದೃಷ್ಟಿಯ ವ್ಯವಹಾರದಲ್ಲಿ ಶಕ್ತಿಯನ್ನು ಒಪ್ಪಿಕೊಳ್ಳಬಹುದು.) ಈ ಪೃಥ್ವಿಯ ಮೇಲೆ ನಡೆಯುವ ಎಲ್ಲ ಕಾರ್ಯಗಳೂ ಹೇಗೆ ಸೂರ್ಯನ ಮೂಲಕವೇ ನಡೆಯುತ್ತಿವೆಯೋ ಹಾಗೆ ಈ ಪ್ರಪಂಚದಲ್ಲಿ ನಡೆಯುವ ಎಲ್ಲ ವ್ಯಾಪಾರಗಳೂ ಆತ್ಮನ ಮೂಲಕವೇ ನಡೆಯುತ್ತಿವೆ. ಗಾಳಿಯು ಬೀಸುವದು ಸೂರ್ಯನ ದೆಸೆಯಿಂದ, ಹುಲ್ಲು ಬೆಳೆಯುವದೂ ನದಿಗಳು ಹರಿಯುವದೂ ಮಳೆಬರುವದೂ ಹೂವುಗಳೂ ಗುಲಾಬಿ ಹೂಗಳೂ ಅರಳುವದೂ ಸಸ್ಯಗಳೂ ಪ್ರಾಣಿಗಳೂ ಹುಟ್ಟುವದೂ ಬೆಳೆಯುವದೂ ಜನರು ಎಚ್ಚರಗೊಳ್ಳುವದೂ ಈ ಅನಂತ ವಿಧವಾದ (ಸೃಷ್ಟಿ—ಸ್ಥಿತಿ—ಲಯ ರೂಪ) ಜಗದ್ವ್ಯಾಪಾರಗಳು ನಡೆಯುವದೂ ಸೂರ್ಯ ದೇವನಿಂದಲೇ. ಇದೇ ಪ್ರಕಾರ, ಆತ್ಮನಿಂದಲೇ ಸರ್ವಶಕ್ತನಾದ ಪರಮಾತ್ಮನಿಂದಲೇ ಈ ವಿಶ್ವದಲ್ಲಿ ತೋರುತ್ತಿರುವ ಪ್ರತಿಯೊಂದು ಪ್ರಕೃತಿ ವ್ಯಾಪಾರವೂ ನಡೆಯುತ್ತಿದೆ.

"ನಾನೇ ಸರ್ವಶಕ್ತ ; ಸರ್ವಸಮರ್ಥ, ಓಂ, ಓಂ, ಓಂ" ಉತ್ಕಟವಾದ ಈ ಭಾವನೆಯಿಂದ ನಿಮ್ಮನ್ನು ದುರ್ಬಲರನ್ನಾಗಿಯೂ ದಿಗ್ಭ್ರಾಂತರನ್ನಾಗಿಯೂ ಮಾಡುತ್ತಿರುವ ಎಲ್ಲಾ ತಪ್ಪು ತಿಳಿವಳಿಕೆಯೂ ಸಂಶಯವೂ ಹಾರಿಹೋಗುತ್ತವೆ. ನಿಮ್ಮ ಪವಿತ್ರ ಸನ್ನಿಧಿಯಲ್ಲಿ ಪ್ರವೇಶಮಾಡುವದಕ್ಕೆ ಅವುಗಳಿಗೆ ಅಧಿಕಾರವೇ ಇಲ್ಲ. ನೀವು ಸರ್ವಶಕ್ತರೆಂದು ಮತ್ತೆ ಮತ್ತೆ ಭಾವಿಸಿರಿ.

"Just as you think, so you become. Call yourself a sinner and you must become a sinner; Call yourself a fool and must become a fool, call yourself weak and there is no power in this world that can make you strong. Feel that Omnipotence and Omnipotent you are."

"ನೀವು ಹೇಗೆ ಭಾವಿಸಿದರೆ ಹಾಗೆ ಆಗುತ್ತೀರಿ. ನಿಮ್ಮನ್ನು ನೀವು ಪಾಪಿಯೆಂದು ಭಾವಿಸಿ, ಕರೆದುಕೊಂಡರೆ ನೀವು ಪಾಪಿಯೇ ಆಗುತ್ತೀರಿ. ನಿಮ್ಮನ್ನು ನೀವು ಮೂಢ—ಮುಟ್ಠಾಳ ಎಂದುಕೊಂಡರೆ ಹಾಗೆಯೇ ಆಗುತ್ತೀರಿ. ನಿಮ್ಮನ್ನು ನೀವು ದುರ್ಬಲರೆಂದುಕೊಂಡರೆ, ನಿಮ್ಮನ್ನು ಬಲಿಷ್ಠರನ್ನಾಗಿ ಮಾಡುವ ಶಕ್ತಿಯು ಪ್ರಪಂಚದಲ್ಲಿಯೇ ಇಲ್ಲ. ಆದ್ದರಿಂದ ನೀವೇ ಸರ್ವಶಕ್ತರೆಂದು ಭಾವಿಸಿದರೆ ಸರ್ವಶಕ್ತರೇ ನೀವಾಗುತ್ತೀರಿ. (ಆದರೆ, ಇದರಲ್ಲಿ ಒಂದು ವಿಶೇಷ. ಆತ್ಮನು ಸರ್ವಜ್ಞ,

ಸರ್ವಶಕ್ತ, ಎನ್ನುವ ಭಾವನೆಯು ವಸ್ತುವಿನ ನಿಜವಾದ ಸ್ವರೂಪಕ್ಕೆ ಅನುಗುಣವಾದ ಭಾವನೆಯು. ಮಿಕ್ಕೆಲ್ಲಾ ಭಾವನೆಗಳೂ ತಪ್ಪಾದ ಭಾವನೆಗಳು, ಇಲ್ಲದ ಸಲ್ಲದ ಕಲ್ಪನೆಗಳು. 'ನಾನು ಸರ್ವಶಕ್ತ' ಎನ್ನುವದೇ—ಸಾಪೇಕ್ಷವಾಗಿ—ಆತ್ಮನ ಯಥಾರ್ಥ ಜ್ಞಾನ. ಒಂದನ್ನು ಇನ್ನೊಂದನ್ನಾಗಿ ತಿಳಿಯದೆ, ಇದ್ದುದನ್ನು ಇದ್ದಂತೆ ಅರಿಯುವ ಜ್ಞಾನ. ಅದಕ್ಕೆ ಅನುಸಾರವಾದ ಭಾವನೆಯು ಸತ್—ಭಾವನೆಯೇ ಆಗುತ್ತದೆ.)

ಅನಂತರ "ನಾನು—ಆತ್ಮನು—ಸರ್ವಜ್ಞ" ಎನ್ನುವ ಭಾವನೆಯನ್ನು ತೆಗೆದುಕೊಳ್ಳಿರಿ. ಓಂಕಾರವನ್ನು ಉಚ್ಚರಿಸುತ್ತಾ ಈ ಭಾವನೆಯಲ್ಲಿ ಮನಸ್ಸನ್ನು ಇಡಿರಿ. ಓಂ ಇದನ್ನು ಗಾನಮಾಡಿ. 'ಓಂ' ಎಂದರೆ ಸರ್ವಜ್ಞ—ಸರ್ವಶಕ್ತ ಎಂದು. "ನಾನು ಸರ್ವಜ್ಞ, ಸರ್ವಶಕ್ತ. ಓಂ, ಓಂ, ಓಂ." ಹೀಗೆ ಭಾವನೆ ಮಾಡಿ ಸಾಧನೆಮಾಡಿ.

Let those wrong notions which hypnotize you into ignorant fools, be dispensed with. The most direct road to God-head is that.

"ನಾನು ಕೇವಲ ಮೂಢ, ಮುಟ್ಠಾಳ" ಎಂದು ನೀವು ಮರುಳಾಗಿರುವ ನಿಮ್ಮ ಆ ತಪ್ಪು ತಿಳಿವಳಿಕೆಗಳೆಲ್ಲಾ ತೊಲಗಲಿ, ನಾಶವಾಗಲಿ. ನೀವು ಪರಮಾತ್ಮನೆಂದು ಅರಿಯುವದಕ್ಕೆ ಅತ್ಯಂತ ನೇರವಾದ ದಾರಿಯೇ ಇದು.

"ಚೈತನ್ಯ ಸ್ವರೂಪಿಯಾದ ನಾನು ಸರ್ವವ್ಯಾಪಿ" ಎನ್ನುವ ತತ್ತ್ವದಲ್ಲಿ ಮನಸ್ಸನ್ನು ಇಟ್ಟು, ಅದನ್ನೇ ತೀವ್ರವಾಗಿ ಭಾವಿಸಿ. "ನಾನು ಈ ಸಣ್ಣ ದೇಹವಲ್ಲ; ಈ ಅಲ್ಪ ಜೀವವಲ್ಲ, ಈ ಅಹಂಕಾರವಲ್ಲ, ಪ್ರತಿಯೊಂದು ಅಣುವಿನಲ್ಲಿಯೂ ಪರಮಾಣುವಿನಲ್ಲಿಯೂ ತುರಿಕೊಂಡು ತುಂಬಿರುವ ಚೈತನ್ಯವೇ ನಾನು". ಎಂದು ತೀವ್ರತರವಾಗಿ ಭಾವಿಸಿ. ಇದರಲ್ಲಿ ಸ್ವಲ್ಪವೂ ಸಂಶಯವನ್ನು ಹಿಡಿಯಬೇಡಿ. "ಸರ್ವವ್ಯಾಪಿಯೂ ಸರ್ವಾಂತರ್ಯಾಮಿಯೂ ಆಗಿರುವ ಸರ್ವಜ್ಞನೂ ಸರ್ವಶಕ್ತನೂ ನಾನೇ. ಎಲ್ಲಾ ದೇಹಗಳೂ ನನ್ನವೇ. ಸಕಲ ಶರೀರಗಳಲ್ಲಿಯೂ ನಾನೇ ಇದ್ದೇನೆ. ಓಂ! ಓಂ!! ಓಂ!!!

ಮುಂದಿನ ವಾಕ್ಯಗಳನ್ನು ರಾಮನು, ವಿವರಿಸದೆ, ಸುಮ್ಮನೆ ಓದುತ್ತಾನೆ. ಈ ಸಾಧನಾಕ್ರಮವನ್ನು ಅಭ್ಯಾಸಮಾಡಿ. ಒಂದೇ ವಾರದಲ್ಲಿ, ಸತ್ಯವಾದ ದೇವತ್ವವು ನಿಮಗೆ ಅನುಭವಕ್ಕೆ ಬಾರದಿದ್ದರೆ ರಾಮನ ಮಾತು ಸುಳ್ಳೆಂದೂ ತಪ್ಪೆಂದೂ ತಿಳಿಯಬಹುದು.

"Perfect health is mine" "ನಾನು ಸರ್ವದಾ ಪೂರ್ಣಾರೋಗ್ಯವಾಗಿಯೇ ಇರತಕ್ಕವನು." ನೀವು 'ನನ್ನದು' ಎಂದುಕೊಳ್ಳುತ್ತಿರುವ ದೇಹವು

ಅನಾರೋಗ್ಯವಾಗಿದ್ದರೆ, ಅದನ್ನು ಅತ್ತಲಾಗಿ ಬಿಡಿ, ಅದರ ಚಿಂತೆ ಮಾಡಬೇಡಿ. "ಪೂರ್ಣಾರೋಗ್ಯವೇ ನಾನು" ಎಂದು ಭಾವಿಸಿರಿ. ದೇಹವು ಕೂಡಲೇ ತನ್ನಿಂದ ತಾನೇ ಆರೋಗ್ಯವನ್ನು ಪಡೆಯುತ್ತದೆ. ಇದೇ ರಹಸ್ಯ. ಪ್ರಯತ್ನಮಾಡಿ. ಸುಳ್ಳೋ ನಿಜವೋ ಎನ್ನುವದನ್ನು ಪರೀಕ್ಷೆಮಾಡಿ. ನೀವು ಬೇಡವೆಂದರೂ ದೇಹವು ಉತ್ತಮಗೊಳ್ಳುತ್ತದೆ. ಸಂಸ್ಕೃತ ಭಾಷೆಯಲ್ಲಿರುವ ಶಾಸ್ತ್ರದಲ್ಲಿ "ನಾಯಮಾತ್ಮಾ ಬಲಹೀನೇನ ಲಭ್ಯಃ" "ದುರ್ಬಲರು ಆತ್ಮನನ್ನು ಪಡೆಯಲಾರರು." ಎಂದು ಹೇಳಿದೆ. ಸಂಯುಕ್ತ ಸಂಸ್ಥಾನದ (ಅಮೇರಿಕಾದ) ಅಧ್ಯಕ್ಷರಲ್ಲಿಯೋ ಮಹಾರಾಜರಲ್ಲಿಯೋ ನೀವು ಭಿಕ್ಷುಕರಂತೆ ಹೋದರೆ, ನಿಮ್ಮನ್ನು ಹೊರಗೆ ಹಾಕುವದಿಲ್ಲವೆ? ಅವರ ಸನ್ನಿಧಿಯಲ್ಲಿ ನಿಮಗೆ ಪ್ರವೇಶಕ್ಕೇ ಅವಕಾಶ ಕೊಡುವದಿಲ್ಲ. ಹಾಗೆಯೇ ಭಿಕಾರಿಗಳಂತೆ ದೇವರಲ್ಲಿ ಬೇಡಿದರೆ, ತಲೆಯ ಮೇಲೆ ಹೊಡೆದು ಹೊರಗೆ ದೂಡುತ್ತಾರೆ. ಏನನ್ನೂ ಕೇಳದೆ ಬೇಡದೆ, 'ನಾನು ಪೂರ್ಣಾರೋಗ್ಯ' ಎಂದು ಬಲವಾಗಿ, ಭಾವಿಸಿರಿ. ಅದೇ ನೀವಾಗುತ್ತೀರಿ.

ಅದರ ಮುಂದಿನ ವಾಕ್ಯವು "ಸಮಸ್ತ ವಿಶ್ವವೂ ನನ್ನ ಕಲ್ಪನೆ ಮಾತ್ರ" ಎಂದು ಇದನ್ನು ನಂಬಿ. ಹಾಗೆ ನಂಬುವಾಗ "ಪ್ರಪಂಚವು ನಿಜವಲ್ಲ; ಅದು ಕೇವಲ ನಮ್ಮ ಕಲ್ಪನೆ" ಎಂಬುದನ್ನು ಮನಗಾಣಿಸುವದಕ್ಕಾಗಿ, ವೇದಾಂತಿಗಳು ತಿಳಿಸುವ ಯುಕ್ತಿಗಳನ್ನೆಲ್ಲಾ ಮನಸ್ಸಿನಲ್ಲಿ ಹೊರಳಾಡಿಸಿ, ಜೊತೆಗೆ ನಿಮಗೆ ತೋರುವ ಯುಕ್ತಿಗಳನ್ನೂ ಸೇರಿಸಿಕೊಂಡು ಚಿಂತನೆಮಾಡಿ. ನಿಮಗೆ ಇಷ್ಟೆಲ್ಲಾ ವಿಚಾರಶಕ್ತಿಯು ಇಲ್ಲವಾದರೆ, ನೀವು ಆ ವಿಚಾರವನ್ನು ನಂಬಿದರೂ ಅದು ನಿಮಗೆ ಅನುಭವಕ್ಕೆ ಬರುತ್ತದೆ. ಈ ಕೆಳಗಿನ ವಾಕ್ಯಗಳ ಅರ್ಥವನ್ನು ಪುನಃ ಪುನಃ ಚಿಂತನೆ ಮಾಡಿ:

ಪ್ರಪಂಚವು ನನ್ನ ಕಲ್ಪನೆ, ನಿಜವಲ್ಲ. ಓಂ ! ಓಂ ! ! ಓಂ ! ! !
ಪೂರ್ಣಾನಂದವು ನಾನು ಓಂ ! ಓಂ ! ! ಓಂ ! ! !
ಸರ್ವ ಜ್ಞಾನವೂ ನಾನೇ ಓಂ ! ಓಂ ! ! ಓಂ ! ! !
ಸರ್ವ ಸತ್ಯವೂ ನಾನೇ ಓಂ ! ಓಂ ! ! ಓಂ ! ! !
ಸರ್ವ ಪ್ರಕಾಶವೂ ನಾನೇ ಓಂ ! ಓಂ ! ! ಓಂ ! ! !
ನಿರ್ಭಯು, ನಿರ್ಭಯ ನಾನು ಓಂ ! ಓಂ ! ! ಓಂ ! ! !
ನನ್ನಲ್ಲಿ ರಾಗವೂ ಇಲ್ಲ, ದ್ವೇಷವೂ ಇಲ್ಲ. ಓಂ ! ಓಂ ! ! ಓಂ ! ! !
ನಾನು, ಸಮಸ್ತ ಕಾಮಗಳೂ ಸಫಲವಾದ ಪೂರ್ಣಕಾಮ ! ! ಓಂ ! ಓಂ ! ! ಓಂ !
ನಾನು ಪಂಚಕೋಶಗಳಿಗೆ ಅತೀತನೂ ಅವಸ್ಥಾತ್ರಯಗಳಿಗೆ ಸಾಕ್ಷಿಯೂ ಆದ ಪರಮಾತ್ಮ ಓಂ ! ಓಂ ! ! ಓಂ ! ! !
ಎಲ್ಲ ಕಿವಿಗಳಿಂದಲೂ ಕೇಳುವವ ನಾನೇ ಓಂ ! ಓಂ ! ! ಓಂ ! ! !
ಎಲ್ಲ ಕಣ್ಣುಗಳಿಂದಲೂ ನೋಡುವವ ನಾನೇ ಓಂ ! ಓಂ ! ! ಓಂ ! ! !

ಎಲ್ಲ ಮನಸ್ಸುಗಳಿಂದಲೂ ಯೋಚಿಸುವವನು ನಾನೇ ಓಂ ! ಓಂ ! ! ಓಂ ! ! !
ಮಹರ್ಷಿಗಳು ಅರಿಯಲು ಬಯಸುವ ಸತ್ಯವು ನಾನೇ ಓಂ ! ಓಂ ! ! ಓಂ ! ! !
ಸೂರ್ಯ ಚಂದ್ರ ನಕ್ಷತ್ರಗಳಿಂದ ಬೆಳಗುವ ಪ್ರಕಾಶವೂ ಪ್ರಾಣವೂ ನಾನೇ
ಓಂ ! ಓಂ ! ! ಓಂ ! ! !

ಈ ಸಾಧನೆಗೆ ಮುಖ್ಯವಾಗಿ ನಂಬಿಕೆಯೂ ವಿಶ್ವಾಸವೂ ಬೇಕೆನ್ನುವದನ್ನು ಒಂದು ದೃಷ್ಟಾಂತದಿಂದ ತಿಳಿಸಬಹುದು. ಹಿಂದೂಗಳ ಹಿಂದಿನ ಕತೆಗಳಲ್ಲಿ ಸ್ವಾರಸ್ಯವಾದ ಒಂದು ದಂತ ಕಥೆ ಇದೆ. ಒಂದು ದಿನ ಒಬ್ಬ ಪಂಡಿತ–ಸಾಧುಗಳು ತಮ್ಮ ಭಕ್ತವೃಂದ ದಲ್ಲಿ ಪುರಾಣವನ್ನು ಹೇಳುತ್ತಿದ್ದರು. ಆ ಊರಿಗೆ ಹಾಲು ಮಾರುವದಕ್ಕಾಗಿ ಬಂದಿದ್ದ ಗೌಳಿಗಿತ್ತಿಯರು ಆ ಸಮಯದಲ್ಲಿ ಅಲ್ಲಿ ಹೊರಗೆ ಬೀದಿಯಲ್ಲಿ ಹಾದು ಹೋಗುತ್ತಿದ್ದರು. ಅವರು ಆ ಊರಿಗೆ ನಿತ್ಯವೂ ಬರುತ್ತಿದ್ದರು. ಒಂದು ದಿನ ಅವರು ಹಾಲು ಮಾರಿ ಕೊಂಡು ಹೋಗುತ್ತಿದ್ದಾಗ ಆ ಪಂಡಿತರು ಪುರಾಣದಲ್ಲಿ "ಭಗವಂತನ ನಾಮವೆಂಬ ಭದ್ರ ವಾದ ನೌಕೆಯಿಂದ ಅಪಾರವಾದ ಸಂಸಾರ ಸಾಗರವನ್ನು ಸುಲಭವಾಗಿ ದಾಟಬಹುದು. ಓಂ ಎಂಬ ನಾಮವೇ ಅವನ ಅನಂತ ನಾಮಗಳಲ್ಲಿ ಶ್ರೇಷ್ಠವಾದುದು" ಎಂದು ಹೇಳು ತ್ತಿದ್ದುದನ್ನು ಕೇಳಿದರು. ಆ ಗೋಪ ಕನ್ಯೆಯರಿಗೆ ಬಹಳ ಸಂತೋಷವಾಯಿತು. ಅವರು ಸ್ವಲ್ಪವೂ ಸಂಶಯ ಪಡದೆ ಆ ಶಾಸ್ತ್ರ–ಗುರುವಾಕ್ಯದಲ್ಲಿ ಸಂಪೂರ್ಣ ವಿಶ್ವಾಸ ವನ್ನಿಟ್ಟರು. ಅವರು ಬಹಳ ಸರಳರೂ ನಿಷ್ಕಪಟ ಸ್ವಭಾವದವರೂ ಇದ್ದರು. ಅವರಿಗೆ ಯಾವದೂ ಅಸಾಧ್ಯವಾಗಿ ಕಾಣಲಿಲ್ಲ. ಪವಿತ್ರವಾದ ಧರ್ಮಗ್ರಂಥದಲ್ಲಿ ಹೇಳಿರು ವದು ಎಂದೂ ಸುಳ್ಳಲ್ಲ, ಎಂದು ಯೋಚಿಸಿ ದೃಢವಾದ ನಂಬಿಕೆಯನ್ನು ಹೊಂದಿದರು. ಅವರು ನಿತ್ಯವೂ ತಮ್ಮ ಊರಿನಿಂದ ಒಂದು ನದಿಯನ್ನು ದೋಣಿಯಲ್ಲಿ ದಾಟಿ ಈ ಊರಿಗೆ ಬರಬೇಕಾಗಿತ್ತು. ಅದಕ್ಕಾಗಿ ಅವರು ಅಂಬಿಗನಿಗೆ ನಿತ್ಯವೂ 5 ಪೈಸಾ ಕೊಡ ಬೇಕಾಗಿತ್ತು. "ಭಗವಂತನ ಓಂ ಎಂಬ ನಾಮವು (ಸಂಸಾರ) ಸಮುದ್ರವನ್ನೇ ದಾಟಿ ಸಲು ಶಕ್ತಿಯುಳ್ಳದ್ದಾಗಿರುವಾಗ ಈ ಸಣ್ಣ ನದಿಯನ್ನು ದಾಟಿಸಲಾರದೆ? ಓಂಕಾರ ವನ್ನು ಉಚ್ಚರಿಸುತ್ತಾ ನಾವೇಕೆ ನದಿಯನ್ನು ದಾಟಬಾರದು? ನಿತ್ಯವೂ ದೋಣಿಯವ ನಿಗೆ 5 ಪೈಸೆಯನ್ನೇಕೆ ಕೊಡಬೇಕು?" ಎಂದು ಅವರು ಯೋಚಿಸಿದರು. ಅವರ ನಂಬಿ ಕೆಯು ವಜ್ರದಂತೆ ಗಟ್ಟಿಯಾಗಿತ್ತು. ಆದ್ದರಿಂದ ಅವರು ನದಿಗೆ ಹೋಗಿ ಓಂಕಾರವನ್ನು ಉಚ್ಚರಿಸುತ್ತಾ ಸುಲಭವಾಗಿ ನದಿಯಲ್ಲಿ ನಡೆದು, ದಾಟಿ ಹೋದರು. ಅವರೇನೂ ಮುಳುಗಲಿಲ್ಲ. ಹೀಗೆ, ಅಂಬಿಗನಿಗೆ ಏನನ್ನೂ ಕೊಡದೆ, ನಿತ್ಯವೂ ಅವರು ನಾಮ ಸ್ಮರಣೆಯಿಂದಲೇ ನದಿಯನ್ನು ದಾಟುತ್ತಿದ್ದರು. ಹೀಗೆ ಅವರು ಒಂದು ತಿಂಗಳು ನದಿ ಯನ್ನು ದಾಟುತ್ತಿದ್ದ ಮೇಲೆ, ದಿನಕ್ಕೆ 5 ಪೈಸೆಯ ಖರ್ಚನ್ನು ಉಳಿಸಿದ್ದ ಮಹಾಮಂತ್ರ ವನ್ನು ಯಾರಿಂದ ತಾವು ಕಲಿತಿದ್ದರೋ ಆ ಪುಣ್ಯಾತ್ಮನಲ್ಲಿ ಅವರಿಗೆ ಅತ್ಯಂತ ಕೃತಜ್ಞತೆ ಉಂಟಾಯಿತು. ಆ ಗೊಲ್ಲಿತಿಯರು ಒಂದು ದಿನ ಆ ಪಂಡಿತ–ಸಾಧುಗಳಲ್ಲಿ ಬಂದು

ತಮ್ಮ ಮನೆಗೆ ಭೋಜನಕ್ಕೆ ದಯಮಾಡಿ ಬರಬೇಕೆಂದು ಬಿನ್ನವಿಸಿಕೊಂಡರು. ಸಾಧುಗಳು ಒಪ್ಪಿಕೊಂಡರು. ನಿರ್ದಿಷ್ಟವಾದ ದಿವಸ, ಅವರನ್ನು ಕರೆದುಕೊಂಡು ಹೋಗಲು ಗೋಪಕನ್ಯೆಯರು ಬಂದರು. ಅವರು ಸಾಧುವನ್ನು ಕರೆದುಕೊಂಡು ನದಿಯ ಹತ್ತಿರ ಬಂದರು. ಆ ಕನ್ಯೆಯರು ಹಿಂದೆ ನೋಡದೆ, ನದಿಯಲ್ಲಿ ಇಳಿದು, ಮುಂದೆ ಮುಂದೆ 2–3 ನಿಮಿಷಗಳಲ್ಲಿ ನದಿಯನ್ನು ದಾಟಿ ಆಚೆಗೆ ಹೋದರು. ಅವರು ಅಲ್ಲಿಂದ ನೋಡಿದಾಗ, ಸಾಧುಗಳು ನದಿಯಲ್ಲಿ ಇಳಿಯದೆ, ಇನ್ನೂ ಈಚೆಯ ದಂಡೆಯಲ್ಲಿಯೇ ನಿಂತಿದ್ದರು. ಆ ಕನ್ಯೆಯರು ಹಿಂದಿರುಗಿ ಬಂದು, ಅವರು ತಮ್ಮ ಜೊತೆಗೆ ಬಾರದಿರುವದಕ್ಕೆ ಕಾರಣವೇನೆಂದು ಆ ಸಾಧುಗಳನ್ನು ಕೇಳಿದರು. ತಾವು ದೋಣಿಯವನಿಗಾಗಿ ಕಾಯುತ್ತಿರುವದಾಗಿ ಆ ಸಾಧುಗಳು ಹೇಳಿದರು. ಒಬ್ಬ ಗೊಲ್ಲಿತಿಯು ಹೇಳಿದಳು,– "ಸ್ವಾಮಿ ! ನಾವು ನಿಮಗೆ ಅತ್ಯಂತ ಕೃತಜ್ಞರಾಗಿದ್ದೇವೆ. ನಿಮ್ಮ ಉಪದೇಶದ ಬಲದಿಂದ ನಾವು ಒಂದು ಕಾಸನ್ನೂ ಕೊಡದೆ, ಅಂಬಿಗನ ಹಂಗಿಲ್ಲದೆ, ನದಿಯನ್ನು ದಾಟುತ್ತೇವೆ. ನಿಮ್ಮ ಉಪಕಾರವು ನಮಗೆ ಜೀವಮಾನಕ್ಕೆಲ್ಲಾ ಉಪಯೋಗವಾಗಿದೆ. ನೀವೇಕೆ ಅದರ ಉಪಯೋಗವನ್ನು ಹೊಂದಿ ಕಾಸನ್ನು ಉಳಿಸಿಕೊಳ್ಳಬಾರದು ?" ಆ ಸಾಧುವು ಆಶ್ಚರ್ಯದಿಂದ, ತಾವು ಅವರಿಗೆ ಎಂದು, ಯಾವ ಉಪದೇಶವನ್ನು ಮಾಡಿದ್ದರೆಂದು ಕೇಳಿದರು. ಆಗ ಆಕೆ, ಅವರು ಒಂದು ದಿನ ಅವರ ಪುರಾಣದಲ್ಲಿ "ಸಂಸಾರ ಸಮುದ್ರವನ್ನು ದಾಟಿಸುವದಕ್ಕೆ ಓಂ ಎಂಬ ಭಗವಂತನ ನಾಮವೇ ಶ್ರೇಷ್ಠವಾದ ನೌಕೆ" ಎಂದು ಬೋಧಿಸಿದ್ದುದನ್ನು ನೆನಪು ಮಾಡಿಕೊಟ್ಟಳು. ಆ ನಾಮದ ಮಹಿಮೆಯಿಂದಲೇ ತಾವು ನಿತ್ಯವೂ ನದಿಯನ್ನು ದಾಟುತ್ತಿರುವದಾಗಿಯೂ ಹೇಳಿದಳು. ಅವರು "ಒಳ್ಳೆಯದು, ನಾನೂ ಆ ನಾಮದ ಬಲವನ್ನು ಪರೀಕ್ಷಿಸುತ್ತೇನೆ" ಎಂದರು. ಆ ಸಾಧುಗಳ ಜೊತೆಯಲ್ಲಿ ಅವರ ಶಿಷ್ಯರಿದ್ದರು. ಗುರುಗಳು ಉದ್ದವಾದೊಂದು ಹಗ್ಗವನ್ನು ತರಿಸಿ ತಮ್ಮ ಸೊಂಟಕ್ಕೆ ಕಟ್ಟಿಕೊಂಡು ಇನ್ನೊಂದು ತುದಿಯನ್ನು ಶಿಷ್ಯರ ಕೈಯಲ್ಲಿ ಕೊಟ್ಟರು. "ಈ ಮೂಢ ಗೊಲ್ಲತಿಯರು ಏನೋ ಹೇಳುತ್ತಾರೆ. ಅವರ ಹುಚ್ಚು ನಂಬಿಕೆಯನ್ನು ನಾನೂ ಪರೀಕ್ಷೆ ಮಾಡಬೇಕಾಗಿದೆ. ದೇವರ ನಾಮದಲ್ಲಿ ಇಂಥಾ ಮಹಿಮೆ ಇದೆಯೇ, ನೋಡಬೇಕು. ನಾನು ನಾಮಸ್ಮರಣೆ ಮಾಡುತ್ತಾ ನದಿಯಲ್ಲಿ ನಡೆದು ಹೋಗುತ್ತೇನೆ. ನಾಮದಲ್ಲಿ ಶಕ್ತಿಯಿದ್ದರೆ ನಾನು ಮುಳುಗದೆ ನಡೆದು ಹೋಗಬಹುದು. ಯಾವದನ್ನೂ ಪರೀಕ್ಷೆ ಮಾಡದೆ ಅದರಲ್ಲಿ ಭರವಸೆ ಹುಟ್ಟುವದಿಲ್ಲ. ಆದ್ದರಿಂದ ಪರೀಕ್ಷಾ ಕಾಲದಲ್ಲಿ ಆಕಸ್ಮಾತ್ ಮುಳುಗಿದರೆ ನೀವು ಹಗ್ಗವನ್ನು ಹಿಡಿದು ಮೇಲಕ್ಕೆ ಎಳೆದುಕೊಳ್ಳಿರಿ" ಎಂದು ಶಿಷ್ಯರಿಗೆ ಹೇಳಿ, ಹೊಳೆಯಲ್ಲಿ ಹಾರಿದರು. ಅವರು ಕೆಲವು ದೂರ ಹೋಗುವದರೊಳಗೆ ಮುಳುಗುವದಕ್ಕೆ ತೊಡಗಿ, ನೀರನ್ನು ಕುಡಿದು ಕಣ್ಣು ಕಣ್ಣು ಬಿಡುತ್ತಾ ತೇಕುತ್ತಾ ಉಸಿರಾಡಲಾರದೆ, ಪ್ರಾಣಕ್ಕಾಗಿ ಒದ್ದಾಡುತ್ತಿದ್ದರು. ಶಿಷ್ಯರೆಲ್ಲಾ ಗೊಳ್ಳನೆ ನಕ್ಕರು. ಗೊಲ್ಲತಿಯರಿಗೆ

ಆಶ್ಚರ್ಯವೂ ಕನಿಕರವೂ ಆಯಿತು. "ಅಯ್ಯೋ ಪಾಪ" ಎಂದು ಶಿಷ್ಯರು ಕರುಣೆಯಿಂದ ಹಗ್ಗವನ್ನು ಎಳೆದು ಗುರುಗಳನ್ನು ಮೇಲಕ್ಕೆತ್ತಿ ದಂಡೆಗೆ ಸೇರಿಸಿ ಬದುಕಿಸಿದರು.

ಇಲ್ಲಿ ಸ್ವಲ್ಪ ಗಮನಿಸಬೇಕು. ಆ ಪಂಡಿತರಿಗೆ ಇದ್ದಂಥ ನಂಬಿಕೆಯು ಬದುಕಿಸುವ ಸಾಧನವಲ್ಲ ; ಸಂಶಯಾತ್ಮಕವಾದ ಶ್ರದ್ಧೆಯು, ತಾರಕವಲ್ಲ. ಇದು ಹೃದಯದಲ್ಲಿರುವ ವಕ್ರತೆ, ಕುಟಿಲತೆ. ಓಂ ಎಂಬ ನಾಮವನ್ನೋ ಬೇರೆ ಯಾವದಾದರೂ ದೇವರ ನಾಮವನ್ನೋ ಉಚ್ಚಾರಣೆ ಮಾಡುತ್ತಾ "ನಾನು ಪೂರ್ಣಾರೋಗ್ಯ ಸ್ವರೂಪ" ಎಂದು ಚಿಂತನೆ ಮಾಡುತ್ತಿರುವಾಗ ನಿಮ್ಮ ಹೃದಯಾಂತರಾಳದಲ್ಲಿ ದೃಢವಾದ ನಂಬಿಕೆಯಿಲ್ಲದೆ ಸಂಶಯದಿಂದ ಕಂಪಿಸುತ್ತೀರಿ, ನಡುಗುತ್ತೀರಿ, ತತ್ತರಿಸುತ್ತೀರಿ. "ಇದು ನಿಜವಲ್ಲದಿದ್ದರೆ, ಸುಳ್ಳಾದರೆ, ಒಂದು ವೇಳೆ ಇದು ಅಲ್ಲದಿದ್ದರೆ, ಅಕಸ್ಮಾತ್ ಇದು ಆಗದಿದ್ದರೆ,...ರೆ...,ರೆ...ರೆ..." "ಈ ದೇವರ ನಾಮದಲ್ಲಿ ನನ್ನನ್ನು ತೇಲಿಸುವ, ಬದುಕಿಸುವ ಶಕ್ತಿಯಿಲ್ಲದಿದ್ದರೆ, ನೀವು ನನ್ನನ್ನು ಮೇಲಕ್ಕೆ ಎಳೆದುಕೊಂಡುಬಿಡಿ" ಎನ್ನುವ ಮನೋಭಾವ ಏನನ್ನೂ ಸಾಧಿಸಲಾರದು; ತನ್ನ ಶ್ರೇಯಸ್ಸನ್ನೂ ಸಾಧಿಸಲಾರದು. ಸಂಶಯ ಸ್ವಭಾವವು ಮನಸ್ಸನ್ನು ಒಂದೇ ಭಾವದಲ್ಲಿ ನಿಲ್ಲಗೊಡದೆ, ಯಾವಾಗಲೂ ಅಲ್ಲಾಡಿಸುತ್ತಿರುವದರಿಂದ ಮನಶ್ಶಕ್ತಿಯ ಕೇಂದ್ರೀಕರಣದಿಂದ ಕಾರ್ಯಸಾಧನೆ ಮಾಡುವದಕ್ಕೆ ಅವಕಾಶ ಕೊಡುವದಿಲ್ಲ. ಇದರಿಂದ ಶಕ್ತಿಯ ಅಪವ್ಯಯವಾಗುವದು. (ಇದಕ್ಕೆ ಕಾರಣ, ಸ್ವರೂಪಜ್ಞಾನವಿಲ್ಲದಿರುವದು. ನಮ್ಮ ಸ್ವಭಾವದಲ್ಲಿ ಇಲ್ಲದ ಜ್ಞಾನವನ್ನೂ ಶಕ್ತಿಯನ್ನೂ ಶುಭವನ್ನೂ ಕಲ್ಪಿಸುವದಾದರೆ, ಸಂಶಯಪಡಬಹುದು. ನಮ್ಮಲ್ಲಿ ಇಲ್ಲದಿರುವ ಶಕ್ತಿಯೇ ಇಲ್ಲ. ಎಲ್ಲಾ ಶಕ್ತಿಯೂ ಇದ್ದು ಬಿಟ್ಟಿದೆ; ಸ್ವತಃ ಸಿದ್ಧವಾಗಿದೆ, ನಿತ್ಯ ಸಿದ್ಧವಾಗಿದೆ, ತಾನೇ ಇದ್ದು ಬಿಟ್ಟಿದೆ; ಯಾವಾಗಲೂ ಇದ್ದೇ ಇದೆ. ಹೊಸದಾಗಿ ಯಾವದನ್ನೂ ಸಾಧಿಸಬೇಕಾಗಿಲ್ಲ. ಎಂದೋ ಒಂದು ದಿನ ಹೊಸದಾಗಿ ಸಾಧಿಸುವದಾಗಿದ್ದರೆ, ಅದೂ ಎಂದೋ ಒಂದು ದಿನ ನಾಶವಾಗಿ ಬಿಡುತ್ತಿತ್ತು. ಹುಟ್ಟಿದ್ದು ಹಾಳಾಗಲೇ ಬೇಕು, ಉತ್ಪತ್ತಿಯಾದುದು ನಾಶವಾಗಲೇ ಬೇಕು; ತೋರಿದುದು ಅಡಗಲೇ ಬೇಕು. ಎಚ್ಚರ—ಕನಸುಗಳ ಪ್ರಪಂಚವನ್ನೂ ಗಾಢ ನಿದ್ರೆಯ ಅಭಾವವನ್ನೂ ಎಲ್ಲವನ್ನೂ ವಿಷಯಮಾಡಿಕೊಂಡು ಬೆಳಗುವದರಿಂದಲೇ ಆತ್ಮನು ಸರ್ವಜ್ಞನು. ಆದ್ದರಿಂದಲೇ ಸರ್ವಶಕ್ತನು. ಆತ್ಮನು ಸರ್ವವೂ ಆಗಿದ್ದಾನೆ, ಜ್ಞಾನಸ್ವರೂಪವೂ ಆಗಿದ್ದಾನೆ; ಆದ್ದರಿಂದ ಆತ್ಮನು ಸರ್ವಜ್ಞನು. ಹೀಗೆ, ನಮ್ಮಲ್ಲಿ ಸಹಜವಾಗಿರುವ ಸರ್ವಜ್ಞತ್ವವನ್ನೂ ಸರ್ವ ಶಕ್ತಿತ್ವವನ್ನೂ ಅಜ್ಞಾನವೂ ಸಂಶಯಜ್ಞಾನವೂ ವಿಪರೀತಜ್ಞಾನವೂ (ತಪ್ಪು ತಿಳಿವಳಿಕೆಯೂ) ಮುಚ್ಚಿಕೊಂಡಿವೆ. ಆದ್ದರಿಂದ ಸರಿಯಾದ ತಿಳಿವಳಿಕೆಯಿಂದ (ಸಮ್ಯಜ್ಜ್ಞಾನದಿಂದ) ತಪ್ಪು ತಿಳಿವಳಿಕೆ ಮೊದಲಾದವು ತೊಲಗಿಬಿಟ್ಟರೆ, ಒಳಗೆ ನಮ್ಮ ಸ್ವರೂಪದಲ್ಲಿ ನಿಮಿಷವೂ ಎಡೆಬಿಡದೆ ನಿಜವಾಗಿರುವ ಸರ್ವಜ್ಞತ್ವ, ಸರ್ವಶಕ್ತಿತ್ವಗಳು ತಾನೇ ತಾನಾಗಿ ಬೆಳಗುತ್ತವೆ. ಭಾವನಾರೂಪವಾದ ಉಪಾಸನೆಯು ಸಾಧನೆಯ ದೃಷ್ಟಿಯಿಂದ ಶಕ್ತಿಯು ವ್ಯಕ್ತವಾಗುವದಕ್ಕೆ ಸಹಾಯಕವಾದರೂ ಆತ್ಮಸ್ವರೂಪದಲ್ಲಿ ಮಾತ್ರ

ಇದರಿಂದ ಯಾವ ವಿಶೇಷವೂ ಆಗಲಾರದು. ಈ ಪ್ರಪಂಚದಲ್ಲಿ ತೋರುವ ಎಲ್ಲಾ ಭೇದ ಭಾವಗಳೂ ಸನ್ನಿವೇಶಗಳೂ ಆಗುಹೋಗುಗಳೂ ನಿಮ್ಮ ಸೃಷ್ಟಿಯೇ ಎನ್ನುವುದು ತ್ರಿಕಾಲ ಸತ್ಯ, ವಾಸ್ತವ; ಬೇರೆ ಅಲ್ಲ. ನಿಮ್ಮಲ್ಲಿರುವ ಆತ್ಮನೇ—ನೀವೇ—ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಪರಮೇಶ್ವರ. ಇದನ್ನೇ ಈ ಕ್ಷಣದಲ್ಲಿ ಶುದ್ಧವಾದ ಬುದ್ಧಿಯಿಂದ ಅರಿಯಿರಿ, ಇದನ್ನೇ ಹೃದಯದಿಂದ ಭಾವಿಸಿರಿ. ಈ ಗಳಿಗೆಯಲ್ಲಿಯೇ ಅದನ್ನು ಅರಿಯಿರಿ. ಸಂಶಯವಿಲ್ಲದಂತೆ ದೃಢವಾಗಿ ಅದನ್ನು ನಂಬಿರಿ. ಈ ಲೇಖನವನ್ನು ನೀವು ನಿತ್ಯವೂ ಓದುತ್ತಿದ್ದರೆ, ನಿಮ್ಮನ್ನು ಬಂಧಿಸುತ್ತಿರುವ, ನಿಮ್ಮ 'ರೆ' ಗಳೆಲ್ಲಾ ಕರಗಿ ಹೋಗುತ್ತವೆ. ಈ ಲೇಖನವನ್ನು ನೀವು ನಿತ್ಯವೂ ಎರಡು ಸಲವೋ ಐದು ಸಲವೋ ಓದಿರಿ. ಅಲ್ಪವಾದ ನಿಮ್ಮ 'ರೆ' ಗಳೆಲ್ಲಾ ತೊಲಗಿ ಹೋಗುತ್ತವೆ.

ರಾಮನು ಈಗ ಉಪನ್ಯಾಸವನ್ನು ಮುಗಿಸುತ್ತಾನೆ. ಬೇಕಾದರೆ ನಿಮ್ಮಲ್ಲಿ ಯಾರಾದರೂ ಬಂದು, ಈ ವೇದಿಕೆಯಿಂದ ಇಳಿದ ಮೇಲೆ, ಸ್ನೇಹದಿಂದ ರಾಮನನ್ನು ಪ್ರಶ್ನೆಮಾಡಬಹುದು. ಈಗ ಓಂಕಾರವನ್ನು ಉಚ್ಚರಿಸಿ ರಾಮನು ಈ ಪ್ರವಚನ ಪೀಠವನ್ನು ಬಿಡುತ್ತಾನೆ; ಓಂ, ಓಂ, ಓಂ.

ಇನ್ನೊಂದು ವಿಷಯ. ಈ ವೇದಾಂತ ವಿಚಾರಗಳೆಲ್ಲಾ ಪುಸ್ತಕರೂಪದಲ್ಲಿ ಪ್ರಕಟವಾಗುತ್ತವೆ. ಹಿಂದಿನ ಉಪನ್ಯಾಸಗಳನ್ನೆಲ್ಲಾ ಕೇಳದಿರುವದರಿಂದ ಇವತ್ತಿನ ಉಪನ್ಯಾಸವೂ ಅಷ್ಟು ಅರ್ಥವಾಗದಿರುವವರಿಗೆ ಆ ಪುಸ್ತಕದಿಂದ ಬಹಳ ಸಹಾಯವಾಗಬಹುದು. ವೇದಾಂತವಿಚಾರದಲ್ಲಿ ನಿಮಗಿರುವ ಸಂಶಯಗಳೂ ತಪ್ಪು ತಿಳಿವಳಿಕೆಗಳೂ ಹಿಂದೆ ಒಂದು ಕಾಲದಲ್ಲಿ ರಾಮನಲ್ಲಿಯೂ ಇದ್ದವು, ರಾಮನದೇ ಆಗಿದ್ದವು. ರಾಮನು ಇವುಗಳನ್ನೆಲ್ಲಾ ಕಳೆದುಕೊಂಡನು. ನಮ್ಮ ಸಂಶಯಗಳೆಲ್ಲಾ ಅಜ್ಞಾನದ ವಕ್ರರೂಪವೂ ವಿಪರ್ಯಸ್ತಭಾವವೂ ಆಗಿವೆ. ಅವೆಲ್ಲಾ ಎವೆ ಇಕ್ಕುವದರೊಳಗೆ—ಸರಿಯಾದ ವಿಚಾರದಿಂದ—ಹಾರಿ ಹೋಗುತ್ತಿವೆಯೆಂದು ರಾಮನು ಭರವಸೆ ಕೊಡುತ್ತಾನೆ. ನಿಮ್ಮಲ್ಲಿ ಯಾರಾದರೂ ಸಂಶಯವನ್ನು ಕಳೆದುಕೊಳ್ಳಬೇಕೆಂದು ಇಚ್ಛಿಸಿದರೆ, ರಾಮನಲ್ಲಿ ಬಂದು ವಿಚಾರಮಾಡಬಹುದು. ರಾಮನು ಇಲ್ಲಿಂದ ಅಷ್ಟು ಬೇಗ ಹೊರಡುವದಿಲ್ಲ.

ಅಂತು, ಇಷ್ಟನ್ನು ಸಾರಿ ಹೇಳಬಹುದು: ನೀವು ದುಃಖವನ್ನು ಕಳೆದುಕೊಂಡು ನಿಜವಾದ ಸುಖವನ್ನು ಪಡೆಯಬೇಕಾದರೆ ಮತ್ತು ಆತ್ಮಾನುಭವದಿಂದ ನೀವು ನಿತ್ಯಮುಕ್ತರೆಂದು ಮನಗಾಣಬೇಕಾದರೆ ವೇದಾಂತವನ್ನು ಅರ್ಥಮಾಡಿಕೊಂಡು ಅಭ್ಯಾಸ ಮಾಡಬೇಕು. ಇದಲ್ಲದೆ ಬೇರೆ ಗತಿಯೇ ಇಲ್ಲ. ನಿಮ್ಮ ಎಲ್ಲಾ ಮತಧರ್ಮಗಳೂ ತತ್ತ್ವಗಳೂ ಸಿದ್ಧಾಂತಗಳೂ ಸಾಧನಾನುಭವಗಳೂ ಕೊನೆಯಲ್ಲಿ ಪೂರ್ಣಾನುಭವವಾದ ವೇದಾಂತಕ್ಕೆ ಮುಟ್ಟಿಸುವದಕ್ಕೆ ಒಂದೊಂದು ರೀತಿಯ ಉಪಾಯಗಳೇ ಆಗಿವೆ. ಕೇವಲ ಸತ್ಯಕ್ಕೇ ಅವು ಸುಮ್ಮನೆ ಒಯ್ಯುತ್ತವೆ. ಈ ಅಮೆರಿಕೆಯಲ್ಲಿ ಇತ್ತೀಚೆಗೆ ಪ್ರಾರಂಭವಾದ ಸಾಧನ ಪಥಗಳೂ ಉಪಾಸನಾ ಮಾರ್ಗಗಳೂ ಅವುಗಳಲ್ಲಿ

ಹಲವು ತಮ್ಮ ಕ್ರಮಗಳಲ್ಲಿ ವೇದಾಂತ ತತ್ತ್ವಗಳನ್ನು ಸಂಯೋಜಿಸಿಕೊಂಡು ಹೀರಿಕೊಳ್ಳುತ್ತಿರುವದು ಬಹಳ ಒಳ್ಳೆಯ ಭರವಸೆಯ ಲಕ್ಷಣವಾಗಿದೆ. ಅವುಗಳು ವೇದಾಂತವನ್ನು ಒಳಗೆ ತೆಗೆದುಕೊಳ್ಳುತ್ತಿವೆ, ಸೇವಿಸುತ್ತಿವೆ. ಆ ಮತಗಳು ವೇದಾಂತದ ಉಪಕಾರವನ್ನು ಒಪ್ಪಿಕೊಳ್ಳದಿದ್ದರೂ ಅಡ್ಡಿಯಿಲ್ಲ. ಕ್ರೈಸ್ತ ವಿಜ್ಞಾನ (Christion science ), ನೂತನ ವಿಚಾರ ( new thought ), ಅಧ್ಯಾತ್ಮ ವಿಜ್ಞಾನ (Spiritualism) ಅಥವಾ ದೈವ (ಶಾಸ್ತ್ರ) ವಿಜ್ಞಾನ (Divine science) ಇವೇ ಮೊದಲಾದವೇ ಆ ಹೊಸ 'ಪಂಥ' ಗಳು. ಇವು ವೇದಾಂತ ವನ್ನು ಅಳವಡಿಸಿಕೊಳ್ಳುತ್ತಿರುವದು ಅಮೆರಿಕಾ ಜನಾಂಗದ ಶ್ರೇಯಸ್ಸಿಗೇ ಶುಭ ಸೂಚಕವಾದುದು. ಆದರೆ ರಾಮನು ನಿಮಗೆ ಆತ್ಮೀಯಭಾವದಿಂದ ಹೇಳುವದೇ ನೆಂದರೆ, ನೀವು ಸತ್ಯವನ್ನು ಅದರ ಪೂರ್ಣ ವೈಭವದಲ್ಲಿಯೂ ಸಂಪೂರ್ಣ ಸೌಂದರ್ಯ ದಲ್ಲಿಯೂ ಅನುಭವಮಾಡಬೇಕೆನ್ನುವದಾದರೆ, ವೇದಾಂತದರ್ಶನವಿದೆ. ನೀವು ಅದಕ್ಕೆ ಯಾವ ಹೆಸರನ್ನಾದರೂ ಕೊಟ್ಟುಕೊಳ್ಳಿರಿ. ಆದರೆ ಹಿಂದುಗಳ ವೇದ ಶಾಸ್ತ್ರಗಳಲ್ಲಿ ಆ ದರ್ಶನವು ಅತ್ಯಂತ ಧೀರವೂ ಅತ್ಯಂತ ಸ್ಪಷ್ಟವೂ ಆದ ಭಾಷೆಯಲ್ಲಿ ಇದೆ. ಸಮಸ್ತ ಲೋಕಗಳ ಪ್ರಭುವಾದ ಪರಮೇಶ್ವರನಿಗಿಂತಲೂ ಶ್ರೇಷ್ಠನಾದ ಪರಮಾತ್ಮನೇ ನೀವು— ಎಂಬಿದು ಪರಮಸತ್ಯ. ಇದನ್ನೇ ಭಾವಿಸಿರಿ, ಅನುಭವ ದಲ್ಲಿಯೂ ತಂದುಕೊಳ್ಳಿರಿ. ನಿಮ್ಮನ್ನು ಯಾವದೂ ಬಾಧಿಸಲಾರದು. ' ಈ ಪ್ರಪಂಚವು ನನ್ನ ಕಲ್ಪನೆ; ನಾನೇ ಪ್ರಭುಗಳಿಗೆಲ್ಲಾ ಪ್ರಭುವಾದ ಪರಮಾತ್ಮ.' ಇದೇ ಸತ್ಯ; ಇದೇ ವೇದಾಂತ ಸಿದ್ಧಾಂತ. ನಿಮಗೆ ಈ ವಿಚಾರಗಳೆಲ್ಲಾ ಹೊಸದಾಗಿ ತೋರಬಹುದು; ಇದನ್ನು ಕೇಳಿ ನಿಮಗೆ ಅಭ್ಯಾಸವಿಲ್ಲದಿರಬಹುದು. ಹೆದರಬೇಡಿ. ನಿಮ್ಮ ಹಿಂದಿನವರೂ ತಂದೆಯವರೂ ಇದನ್ನು ಹೇಳದಿರಬಹುದು, ನಂಬದಿರಬಹುದು. ಅವರು ನಂಬದಿದ್ದರೆ ನೀವು ನಂಬುವದಕ್ಕೆ ಅಡ್ಡಿಯೇನು ? ಅವರು ಉತ್ತಮ ವೆಂದು ತಿಳಿದಂತೆ ನಂಬಿ ನಡೆದರು. ನೀವು ಉತ್ತಮವೆಂದು ತಿಳಿದಂತೆ ನೀವು ನಂಬಿ ಸಾಧಿಸಬಹುದು. ನಿಮ್ಮ ಮೋಕ್ಷದ ಚಿಂತೆ ನಿಮಗೆ ಇರಬೇಕು. ಅದರ ಸಾಧನೆಯು ನಿಮ್ಮ ಕರ್ತವ್ಯ, ಅವರ ಕರ್ತವ್ಯವಲ್ಲ. ವೇದಾಂತವೆಂದರೆ ಪರಕೀಯವೆಂದು ಭಾವಿಸ ಬೇಡಿ. ಅದು ನಿಮ್ಮದೇ; ಅದು ನಿಮಗೆ ಸ್ವಾಭಾವಿಕವಾದುದು. ಏಕೆಂದರೆ, ನಿಮ್ಮ ಆತ್ಮನು ನಿಮಗೆ ಎಂದಾದರೂ ಪರಕೀಯನೆ? ಅನ್ಯನೆ? ವೇದಾಂತವು ಸುಮ್ಮನೆ ನಿಮ್ಮ ಸ್ವಂತ ಆತ್ಮನ ವಿಚಾರವನ್ನೇ ಹೇಳುತ್ತದೆ; ಬೇರೆಯಲ್ಲ. ನಿಮ್ಮ ಆತ್ಮನು ನಿಮಗಿಂತ ಬೇರೆಯಾಗಿದ್ದರೆ, ಅದರ ವಿಚಾರವನ್ನು ಹೇಳುವ ವೇದಾಂತವೂ ಬೇರೆ ಯಾಗಿರುತ್ತಿತ್ತು. ವೇದಾಂತವನ್ನು ಅನುಭವಕ್ಕೆ ತಂದುಕೊಂಡ ಕೂಡಲೇ ದೈಹಿಕ, ಮಾನಸಿಕ, ನೈತಿಕ, ಆಧ್ಯಾತ್ಮಿಕ— ಈ ಎಲ್ಲಾ ಬಗೆಯ ತಾಪಗಳೂ ಶಾಂತವಾಗುತ್ತವೆ. ಈ ಅನುಭವವು—ಸಾಧನೆಯು—ಅಷ್ಟೇನೂ ಕಷ್ಟವಾದ ಕಾರ್ಯವಲ್ಲ.

ಓಂ ! ಓಂ ! ಓಂ !

# AID TO REALIZATION—THE IDEALS OF NARAYANA AND SHIVA

# ಆತ್ಮಾನುಭವಕ್ಕೆ ಸಹಾಯಗಳು---ನಾರಾಯಣ ಮತ್ತು ಶಿವನ ಆದರ್ಶಗಳು

ಈಗ ದೇವರ ಬೇರೆ ರೂಪಗಳನ್ನು ತಿಳಿಸುತ್ತದೆ, ಅಥವಾ ದೇವರನ್ನು ಬೇರೆ ರೂಪಗಳಲ್ಲಿ ನಿರೂಪಿಸುತ್ತದೆ. ಸಂಪೂರ್ಣ ವಿಶ್ವವನ್ನು ವ್ಯಾಪಿಸಿರುವ ಅಪಾರವಾದ ಕ್ಷೀರಸಾಗರದಲ್ಲಿ ಛತ್ರಿಗಳಂತಿರುವ ಸಹಸ್ರ ಹೆಡೆಗಳುಳ್ಳ ಸುಂದರವಾದ ಆದಿಶೇಷ ನೆಂಬ ಮಹಾ ಸರ್ಪವು ಭಗವಾನ್ ನಾರಾಯಣನ ಮಹಾ (ಯೋಗ) ವಿಶ್ರಾಂತಿಗೆ ಹಂಸತೂಲಿಕಾತಲ್ಪದಂತೆ ಮೃದುವಾದ ಹಾಸಿಗೆಯಾಗಿದೆ. ಈ ಕ್ಷೀರಸಾಗರದಲ್ಲಿ ನಾರಾಯಣ (ಪರಮಾತ್ಮ)ನ ನಿತ್ಯಾನಪಾಯಿನಿಯೂ ಅತ್ಯಂತ ಸುಂದರಿಯೂ ಮನೋಹರೆಯೂ ಆದ ಲಕ್ಷ್ಮೀದೇವಿ ಇದ್ದಾಳೆ. ಆಕೆಯ ಶರೀರವು ಪಾರದರ್ಶಕ ವಾದುದು. ಕಣ್ಣುಗಳು ಅರ್ಧ ಮುಚ್ಚಿವೆ. ತುಟಿಗಳಲ್ಲಿ ಮುಗುಳು ನಗೆ ಮಿನುಗು ತ್ತಿದೆ. ಆ ಶಕ್ತಿಯು (ಸರ್ವ) ಶಕ್ತನಾದ ನಾರಾಯಣನ ಪಾದಗಳನ್ನು ಮೃದು ವಾಗಿ ಸೇವಿಸುತ್ತಿದ್ದಾಳೆ. ಆ ಮನೋಹರೆಯು ಸುಂದರವೂ ಭವ್ಯವೂ ಆದ ಕಮಲದ ಮೇಲೆ ಕುಳಿತು ಪ್ರೀತಿಯಿಂದ ಪರಮಾತ್ಮನ ಪಾದವನ್ನು ಒತ್ತುತ್ತಿದ್ದಾಳೆ. ಆ ದೇವನೂ ದೇವಿಯೂ ಒಬ್ಬರ ದೃಷ್ಟಿಯಲ್ಲಿ ಒಬ್ಬರು ದೃಷ್ಟಿಯನ್ನಿಟ್ಟು ನೋಡು ತ್ತಿದ್ದಾರೆ. ಈ ದೇವಿ ಯಾರು? ಈಕೆ ಪರಮಾತ್ಮನ ಮಹಿಮಾ ವಿಶೇಷವೇ ಬೇರೆ ಯಲ್ಲ. ಆಕೆ ಸಚ್ಚಿದಾನಂದ ಸ್ವರೂಪಿಣಿಯು. ಇದರ ಅರ್ಥವೇನೆಂದರೆ ಜೀವ ನ್ಮುಕ್ತನು ಸರ್ವದಾ ತನ್ನ ಆತ್ಮಮಹಿಮೆಯಲ್ಲಿ ತಾನು ರಮಿಸುತ್ತಿರುತ್ತಾನೆ. ಅವನ ದೃಷ್ಟಿಯಲ್ಲಿ ಪ್ರಪಂಚವೆಲ್ಲಾ ಮುಳುಗಿದಾಗ ಅವನ ಮುಕ್ತಸ್ಥಿತಿಯು ವಿಜೃಂಭಿಸು ತ್ತದೆ. ಅವನು ಎಲ್ಲಾ ಸಂಬಂಧಗಳನ್ನೂ ಬಂಧಗಳನ್ನೂ ಕತ್ತರಿಸಿ ಒಗೆದಿರುವದ ರಿಂದ ಅವನಿಗೆ ಪ್ರಪಂಚದ ಹಂಗೇ ಇಲ್ಲ, ಸಂಗವೂ ಇಲ್ಲ.

ಸಮುದ್ರವೆಂದರೆ ಅಪಾರತೆ. ಕ್ಷೀರಸಾಗರವೆಂದರೆ? ಹಾಲಿನಲ್ಲಿ ಮೂರು ಗುಣ ಗಳಿವೆ. ಅದು ಪ್ರಕಾಶವಾಗಿದೆ, ಬೆಳ್ಳಗಿದೆ, ಉತ್ತೇಜಕವಾಗಿದೆ. ಪ್ರಕಾಶವೆಂದರೆ ಜ್ಞಾನ; ಸ್ವಚ್ಛವೆಂದರೆ ಸುಖ, ಆನಂದ; ಉತ್ತೇಜಕವೆಂದರೆ ಶಕ್ತಿ. ಆದ್ದರಿಂದ ಕ್ಷೀರ ಸಾಗರವೆಂದರೆ ಅಪಾರ ತೇಜಸ್ಸು, ಅಪಾರ ಸುಖ, ಅಪಾರ ಶಕ್ತಿ. ದೇವಿಯೂ ದೇವನೂ ಈ ಅಪಾರತೆಯಲ್ಲಿ—ಜ್ಯೋತಿಸ್ಸುಖ—ಶಕ್ತಿಸಾಗರದಲ್ಲಿ—ವಿರಮಿಸಿದ್ದಾರೆ.

ಆದಿಶೇಷನೆಂದರೆ ಏನು? ಸೃಷ್ಟಿಯಾಗುವದಕ್ಕೆ ಆದಿಯಲ್ಲಿ (ಜನ್ಮವಿಲ್ಲದ) ಯಾವುದಿತ್ತೋ ಎಲ್ಲವೂ ಪ್ರಳಯವಾದ ಮೇಲೆ ಯಾವದಕ್ಕೆ ಎಂದೂ ನಾಶವಿಲ್ಲದೆ (ಶೇಷ) ಉಳಿಯುವದೋ ಅದೇ ಆದಿಶೇಷ. ಹೆಣ್ಣುಹಾವು ತನ್ನ ನೂರು ಮೊಟ್ಟೆಗಳನ್ನು ಇಟ್ಟ ಕೂಡಲೇ ಹಿಂತಿರುಗಿ ಅವುಗಳಲ್ಲಿ ಒಂದೊಂದನ್ನಾಗಿ ನುಂಗುವದಕ್ಕೆ ತೊಡಗುತ್ತದೆ. ಯಾವದೋ ಒಂದನ್ನು ಹೊರತು ಮಿಕ್ಕ ಎಲ್ಲವನ್ನೂ ನುಂಗುತ್ತದೆ. ಜ್ಞಾನಾನಂದ ಶಕ್ತಿಯ ಸಾಗರದಲ್ಲಿ ಅಮೃತಸ್ವರೂಪವಾದುದು ಮಾತ್ರ ಉಳಿಯುತ್ತದೆ. ಆ ದಿವ್ಯ ದಂಪತಿಗಳು ಉಭಯರೂ ತಮ್ಮ ಸ್ವಂತ ಮಹಿಮೆಯಲ್ಲಿ ಪೂರ್ಣಾನಂದವಾಗಿಯೂ ಶಾಂತವಾಗಿಯೂ ಇದ್ದಾರೆ.

ರಾಮನು ಎರಡು ಮುಖ್ಯ ವಿಷಯಗಳನ್ನು ನಿಮ್ಮ ವಿಶೇಷ ಲಕ್ಷ್ಯಕ್ಕೆ ತರುತ್ತಾನೆ:

1. ಅಲ್ಪವಾದ ಈ ಜೀವಾತ್ಮನ ಅಥವಾ ಅಹಂಕಾರದ ನಿರಾಕರಣೆ.

2. ನಿಜವಾದ ಆತ್ಮನ ನಿಶ್ಚಿತವಾದ ಸ್ಪಷ್ಟೀಕರಣ, ಪ್ರತಿಪಾದನ.

1. ವೇದಾಂತದ ಪ್ರಕಾರ ಅಹಂಕಾರ ನಿರಾಕರಣೆಯೇ ಪೂರ್ಣವಾದ ವಿಶ್ರಾಂತಿ, ವಿಮೋಚನೆ, ವಿರಾಮ, ವಿರಾಗ, ಪರಿತ್ಯಾಗ, ಸಂನ್ಯಾಸ. ನಿಮಗೆ ಅವಕಾಶವಾದಾಗ ಈ ದೇಹದ ಹೊರೆಯನ್ನೋ ಭಾರವನ್ನೋ ನೀವು ಎಂದೂ ಹೊತ್ತಿಲ್ಲವೇನೋ ಎಂಬಂತೆ, ಇದರ ಯಾವ ಗೋಜೂ ನಿಮಗೆ ಎಳ್ಳಷ್ಟೂ ಇಲ್ಲವೇನೋ ಎಂಬಂತೆ ಒಂದು ತುಂಡು ಕಲ್ಲು ಬಂಡೆಯು ನಿಮಗೆ ಎಷ್ಟು ಬೇರೆಯೋ ಇದೂ ಅಷ್ಟು ಬೇರೆ ಎಂಬಂತೆ ನೀವು ನಿಮ್ಮ ದೇಹವನ್ನು ಕುರ್ಚಿಯ ಮೇಲೋ ಮಂಚದ ಮೇಲೋ ಕೆಡವಿರಿ, ಒಗೆಯಿರಿ, ಎಸೆಯಿರಿ. ನೆಟ್ಟಗೆ ನಿಯಮಿತವಾದ ರೀತಿಯಲ್ಲಿ ಕುಳ್ಳಿರಿಸುವದಕ್ಕೆ ಇಚ್ಛೆಯ ಅಥವಾ ಭಾವದ ಶ್ರಮಪೂರಿತವಾದ ಪ್ರಯತ್ನವಿಲ್ಲದೆ ನಿಮ್ಮ ದೇಹವು ನಿರ್ಜೀವವಾದ ಶವದಂತೆ ಸ್ವಲ್ಪಕಾಲ ಬಿದ್ದಿರಲಿ. ಇದರಿಂದ ತನುಮನಗಳ ಬಿಗಿತವು ಸಡಿಲವಾಗುತ್ತದೆ. ದೇಹದಲ್ಲಿ ನಿಮಗಿರುವ ಎಲ್ಲಾ ಅಭಿಮಾನವನ್ನೂ ಆಸಕ್ತಿಯನ್ನೂ ಬಿಟ್ಟುಬಿಡಿರಿ. ಮನಸ್ಸು ದೇಹ ಸಂಬಂಧವಾಗಿ ಆಗಲಿ, ಯಾವ ವಿಷಯವಾಗಿ ಆಗಲಿ ಎಲ್ಲಾ ಚಿಂತೆಯನ್ನೂ ಆತಂಕವನ್ನೂ ಬಿಟ್ಟುಬಿಡಲಿ. ಎಲ್ಲಾ ಆಶೆಗಳನ್ನೂ ಆಕಾಂಕ್ಷೆಗಳನ್ನೂ ಅಲ್ಲಗಳೆಯಿರಿ, ಬಿಟ್ಟುಬಿಡಿರಿ. ಇದೇ ನಿರಾಕರಣೆ ಅಥವಾ ನಿರಾಳಗೊಳಿಸುವದು, ವಿರಾಮ, ಆರಾಮ, ವಿಶ್ರಾಂತಿ.

2. ದೇವತ್ವ. ದೇವರ ಇಚ್ಛೆಯನ್ನೇ ನಿಮ್ಮ ಇಚ್ಛೆಯನ್ನಾಗಿ ಮಾಡಿಕೊಳ್ಳಿ. ನಿಮಗೆ ಸುಖವಾಗಲಿ, ದುಃಖವಾಗಲಿ ದೇವರ ಉದ್ದೇಶವನ್ನೇ ನಿಮ್ಮ ಉದ್ದೇಶವೆಂಬಂತೆ ಸಮರ್ಥನೆ ಮಾಡಿರಿ, ರಕ್ಷಿಸಿರಿ. 'ಆತ್ಮಾನುಭವ' ಎಂಬ ಉಪನ್ಯಾಸದಲ್ಲಿ ನಿರೂಪಿಸಿರುವ ಭಾವನೆಯ ಬಗೆಗೆ ಅನುಗುಣವಾಗಿ ದೇಹವನ್ನೂ ಅದರ

ಪರಿಸ್ಥಿತಿಗಳನ್ನೂ ಮನಸ್ಸನ್ನೂ ಅದರ ಉದ್ದೇಶಗಳನ್ನೂ ಭಾವನೆಗಳನ್ನೂ ಅಭಿಪ್ರಾಯಗಳನ್ನೂ ಯಶಸ್ಸಿನ ಕಲ್ಪನೆಯನ್ನೂ ಭಯವನ್ನೂ ನೀವು ಮೀರಿರುವದಾಗಿ ಭಾವಿಸಿರಿ. ಎಲ್ಲೆಲ್ಲಿಯೂ ತುಂಬಿರುವ ಪರಾಶಕ್ತಿಯೇ ನೀವೆಂದು ಭಾವಿಸಿರಿ. ದೇಶ—ಕಾಲ—ನಿಮಿತ್ತಗಳನ್ನೂ ಪ್ರಕೃತಿವಿಲಾಸವನ್ನೂ ಮೀರಿರುವ ಸೂರ್ಯರ ಸೂರ್ಯನೇ ನೀವೆಂದು ಭಾವಿಸಿರಿ. ಸಕಲ ಪ್ರಚಂಡ ಲೋಕಗಳೂ ಸಮಸ್ತ ಆನಂದವೂ ಆಗಿರುವ ಮುಕ್ತರಾಮನೇ ನೀವೆಂದು ಭಾವಿಸಿರಿ. ಓಂಕಾರವನ್ನು ಉಚ್ಚರಿಸಿರಿ, ಜಪಿಸಿರಿ; ನಿಮ್ಮಲ್ಲಿ ಸ್ವಾಭಾವಿಕವಾಗಿ ಹೊಳೆಯುವ ಯಾವ ರಾಗದಲ್ಲಿಯಾದರೂ ಓಂ ಎಂಬ ಮಹಾಮಂತ್ರವನ್ನು ಗಾನಮಾಡಿ. ಓಂಕಾರವನ್ನು ಯಾವ ಮಟ್ಟಿನಲ್ಲಿ ಆದರೂ ಬಗೆ ಬಗೆಯಿಂದ ಹಾಡಿಕೊಳ್ಳಿ. "ಆನಂದ, ಆನಂದ, ಪರಮಾನಂದ, ಪೂರ್ಣಾನಂದ, ಸಮಸ್ತ ಆನಂದವೂ ನಾನೇ" ಎಂದು ಭಾವಿಸಿರಿ. ಇದರಿಂದ ಎಲ್ಲಾ ತೊಂದರೆಗಳ ಹಾಗೂ ಕಾಹಿಲೆಗಳ ಕಾರಣಗಳೂ ನಿಮ್ಮ ಸಮೀಪಕ್ಕೂ ಬರಲಾರವು. ನಿಮ್ಮ ಸನ್ನಿಧಿಯನ್ನು ಬಿಟ್ಟು ತಾವಾಗಿಯೇ ತೊಲಗುತ್ತವೆ. ಪ್ರಪಂಚವೂ ನಿಮ್ಮ ಸುತ್ತಲ ಸನ್ನಿವೇಶವೂ ನೀವು ಅವನ್ನು ಹೇಗೆ ಭಾವಿಸಿದರೆ ಹಾಗೆಯೇ ನಿಮಗವು ತೋರುತ್ತವೆ. ನಿಮ್ಮ ಹೃದಯದ ಮೇಲೆ ಪ್ರಪಂಚವು ಭಾರವಾಗಿ ತೂಗದಿರಲಿ. "ಸಕಲ ಸಾರ್ವಜನಿಕ ಅಭಿಪ್ರಾಯಗಳೂ ಪ್ರಪಂಚದ ಸಮಾಜಗಳೂ ಕೇವಲ ನನ್ನ ಭಾವನೆ, ನನ್ನ ಕಲ್ಪನೆ. ಇಡೀ ಜಗತ್ತು ಯಾರ ಉಸಿರೋ ಅಥವಾ ಬರಿಯ ನೆರಳೋ ಆ ನಿಜವಾದ ಶಕ್ತಿಯೇ ನಾನು" ಎಂಬೀ ಸತ್ಯದ ಮೇಲೆ ರಾತ್ರಿ ಹಗಲೂ ಮನಸ್ಸನ್ನಿಟ್ಟು ಚಿಂತಿಸಿ. ಅತ್ಯಂತ ಸಮೀಪಸ್ಥನಾದ ಪರಮಾತ್ಮನಲ್ಲಿ ನಿಮಗಿರುವ ವಿನಯಕ್ಕಿಂತಲೂ ಹೆಚ್ಚಿನ ನಮ್ರತೆಯು, ಚಂಚಲವೂ ಅನಿಶ್ಚಿತವೂ ಅಸ್ಪಷ್ಟವೂ ಆದ ಜನಾಭಿಪ್ರಾಯದಲ್ಲಿ ನಿಮಗಿರುವದೇ ನೀವು ನಿಮ್ಮ ಅತ್ಯುನ್ನತ ಧ್ಯೇಯಕ್ಕೆ ಏರದಿರುವದಕ್ಕೆ ಕಾರಣ. ರಾಮನು ಹೇಳುವದೇನೆಂದರೆ, "ಬೇರೆಯವರ ಅಭಿಪ್ರಾಯದಂತೆ ಬದುಕದೆ, ನಿಮಗಾಗಿ ನೀವು ಬದುಕಿರಿ" ಎಂದು. ಸ್ವತಂತ್ರವಾಗಿರಿ; ಬಿಡುಬೀಸಾಗಿರಿ. ಈಗಲೇ ಇಲ್ಲಿಯೇ ಮುಕ್ತರಂತೆ ಇರಿ, ಮುಕ್ತರಾಗಿರಿ. ನಿಮ್ಮೊಳಗಿರುವ ಪ್ರಭುವೂ ಪತಿಯೂ ಗುರುವೂ ಆಗಿರುವ ನಿಜವಾದ ಆತ್ಮನನ್ನು, ಎರಡನೆಯದಿಲ್ಲದ ಪರಮಾತ್ಮನನ್ನು ಮೆಚ್ಚಿಸುವದಕ್ಕೂ ಸಂತೋಷಪಡಿಸುವದಕ್ಕೂ ಪ್ರಯತ್ನಮಾಡಿ. ನೀವು ಸಹಸ್ರ ಶಿರಗಳುಳ್ಳ ಮಹಾಸರ್ಪದಂತಿರುವ ಜನಜಂಗುಳಿಯನ್ನು ಮೆಚ್ಚಿಸುವದು ಯಾವ ಬಗೆಯಿಂದಲೂ ಸಾಧ್ಯವಲ್ಲ; ಸಕಲರನ್ನು ಮೆಚ್ಚಿಸುವದೂ ಸಾಧ್ಯವಲ್ಲ, ಬಹುಜನರನ್ನು ಮೆಚ್ಚಿಸುವದೂ ಸಾಧ್ಯವಲ್ಲ; ಮೆಚ್ಚಿಸಬೇಕೆಂಬ ಹಂಗೂ ಇಲ್ಲ. ನೀವು ಯಾವ ರೀತಿಯಿಂದಲಾದರೂ ಸಾರ್ವಜನಿಕರಿಗೆ ಸಾಲಗಾರರೆ? ಅವರ ಋಣವನ್ನು ಹೊತ್ತಿದ್ದೀರಾ? ಸರ್ವಥಾ ಇಲ್ಲ, ಎಂದಿಗೂ ಇಲ್ಲ. ನಿಮ್ಮನ್ನು ತಯಾರು ಮಾಡಿಕೊಳ್ಳುವ ಶಿಲ್ಪಿ ನೀವೇ. ನೀವು ಇರುವವರು ಒಬ್ಬರೇ; ಹತ್ತಿರ ಯಾರೂ ಕೇಳುವವರಿಲ್ಲ—ಎಂಬಂತೆ ನಿಮ್ಮಷ್ಟಕ್ಕೆ ನೀವೇ ಹಾಡಿಕೊಳ್ಳಿ. ನಿಮ್ಮ ಆತ್ಮವು ಮೆಚ್ಚಿಕೊಂಡರೆ, ಬೇರೆ ಜನರೂ

ಮೆಚ್ಚಬಹುದು, ಮೆಚ್ಚಬೇಕು. ಇದೇ ಪ್ರಕೃತಿ ನಿಯಮ. ಇತರರಿಗಾಗಿ ಬದುಕುವ ಅಸ್ವಾಭಾವಿಕ ಬಾಳಿನಿಂದ ಪ್ರಯೋಜನವೇನು?

ಒಬ್ಬ ರಾಜಕುಮಾರನು ತನ್ನ ಬಾಲ್ಯದಲ್ಲಿ ರಾಜಮನೆತನದ ಮಕ್ಕಳೊಡನೆ ಕಣ್ಣಾಮುಚ್ಚಾಲೆ ಆಟವನ್ನು ಆಡುತ್ತಿದ್ದನು. ಬಚ್ಚಿಟ್ಟುಕೊಂಡ ಹುಡುಗರನ್ನು ಕಂಡುಹಿಡಿಯುವದಕ್ಕೆ ಅವನು ಬಹಳ ಪೇಚಾಡಬೇಕಾಯಿತು. ಆಗ ಇವರ ಆಟವನ್ನೆಲ್ಲಾ ನೋಡುತ್ತಿದ್ದವನೊಬ್ಬನು, "ರಾಜಕುಮಾರ! ನೀನು ಯಾರು? ನಿನ್ನ ಅಧಿಕಾರವೇನು? ವಿಚಾರಮಾಡು. ನಿನ್ನ ಪ್ರಭುತ್ವವನ್ನು ನೀನು ಮರೆತು ಅತಿ ಸಾಮಾನ್ಯನಂತೆ ಕಷ್ಟಪಡುತ್ತಿದ್ದೀಯ. ನೀನು ರಾಜನಾಗಿ ಆಜ್ಞೆಮಾಡಿದರೆ ಸಾಕು, ಕಷ್ಟಪಟ್ಟು ಹುಡುಕಿದರೂ ಯಾರು ನಿನಗೆ ಸಿಕ್ಕುವದಿಲ್ಲವೋ ಅವರೆಲ್ಲರೂ ತಾವಾಗಿಯೇ ಕೂಡಲೇ ಓಡಿ ಬಂದು ನಮಸ್ಕಾರ ಹಾಕಿ ನಿನ್ನ ಎದುರಿಗೆ ಕೈಕಟ್ಟಿಕೊಂಡು 'ಜೀ ಹಸಾದ್' ಎಂದು ತಲೆಬಾಗಿ ನಿಲ್ಲುತ್ತಾರೆ. ನಿನ್ನ ಅಧಿಕಾರವನ್ನು ನೀನು ಚಲಾಯಿಸದೆ ಪೇಚಾಡಿದರೆ ಏನು ಪ್ರಯೋಜನ?" ಎಂದನು. ಅದಕ್ಕೆ ರಾಜಕುಮಾರನು "ಬೆಪ್ಪ! ನೀನು ಹೇಳಿದಂತೆ ಮಾಡಿದರೆ ಆಟದಲ್ಲಿ ಸ್ವಾರಸ್ಯವೇ ಉಳಿಯುವುದಿಲ್ಲ. ನಾನು ಬೇಕಾಗಿ ಈ ಆಟವನ್ನು ಹೂಡಿದ್ದೇನೆ. ನನಗೂ ಸಿಕ್ಕದಂತೆ ಬಚ್ಚಿಟ್ಟುಕೊಳ್ಳಬೇಕಾದರೆ ಮಕ್ಕಳು ಎಷ್ಟು ಜಾಣತನವನ್ನು ಉಪಯೋಗಿಸಬೇಕು! ಅವರು ನನ್ನಲ್ಲಿ ಹುಟ್ಟಿಸುವ ಕುತೂಹಲವೂ ಕೌತುಕವೂ ನನಗೆ ರಂಜನೆಯನ್ನು ಉಂಟುಮಾಡುತ್ತದೆ. ಅವರನ್ನು ಹುಡುಕುವುದರಲ್ಲಿ ನನಗೆ ಉಂಟಾಗುವ ಶ್ರಮವು ವ್ಯಾಯಾಮವಾಗುತ್ತದೆ; ಹಿತಮಿತವಾದ ಆಯಾಸವು ಆರೋಗ್ಯವನ್ನೂ ಆನಂದವನ್ನೂ ನೀಡುತ್ತದೆ. ಅವರು ನನಗೆ ಸಿಕ್ಕದಂತೆ ಬಚ್ಚಿಟ್ಟುಕೊಳ್ಳುವದಕ್ಕೆ ನನ್ನ ಪ್ರಭುತ್ವದ ಆಜ್ಞೆಯೇ ಕಾರಣವಾದ್ದರಿಂದ ಅದು ನನಗೆ ವಿರೋಧವಾಗದೆ ವಿನೋದವೇ ಆಗಿದೆ. ನಿನಗೆ ಪೇಚಾಟವೆನಿಸಿರುವ ಈ ಹುಡುಕಾಟವು ನನಗೆ ಹುಡುಗಾಟವಾಗಿದೆ" ಎಂದನು.

ಹೀಗೆ, ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರನೇ ನೀವಾದರೂ ಏನನ್ನೂ ಅರಿಯದವರಂತೆ ಈ ಪ್ರಪಂಚವೆಂಬ ಗೂಢವಾದ ಚಕ್ರವ್ಯೂಹದಲ್ಲಿ ನಿಮ್ಮ ವಿನೋದಕ್ಕಾಗಿ, ಜ್ಞಾನವೆನಿಸಿಕೊಂಡಿರುವ ವಿಚಾರಗಳನ್ನು ಹುಡುಕುವದಕ್ಕಾಗಿ ಜ್ಞಾನಾರ್ಜನೆಯೆಂಬ ಅಥವಾ ವಿದ್ಯಾರ್ಜನೆಯೆಂಬ ಕಣ್ಣಾಮುಚ್ಚಾಲೆ ಆಟದಲ್ಲಿ ತೊಡಗಿದ್ದೀರಿ. ನಿಮ್ಮ ಚಿತ್‌ಸ್ವರೂಪದಲ್ಲಿಯೇ—ಚಿತ್ತದಲ್ಲಿಯೇ —ಅಡಗಿಕೊಂಡಿರುವ ಜ್ಞಾನವಿಚಾರಗಳ ಶೋಧವನ್ನು ಮಾಡುವ ವಿನೋದ ಸಾಧನೆಯನ್ನು ಕೈಬಿಟ್ಟು ಒಮ್ಮೆಗೇ "ಶುದ್ಧವಾದ ಅರಿವಿನ ಸ್ವರೂಪನೇ ನಾನು; ನಿರ್ವಿಶೇಷ ಚಿದ್ಘನನೇ ನಾನು" ಎಂದು ಎಲ್ಲಾ ಮನೋವ್ಯಾಪಾರಗಳನ್ನೂ ಕತ್ತರಿಸಿ ಅರಿವಿನ ಬಯಲಾಗಿ ನಿಲ್ಲುವದು ಆ ಮಹಾಲೀಲೆಗೆ ಅಪಚಾರ ಮಾಡಿದಂತೆ ಆಗುತ್ತದೆ; ಆ ಜ್ಞಾನಸಾಧನೆಯ ಮಹಾಕ್ರೀಡೆಯನ್ನು 'ಶಹಾ' ಮಾಡಿದಂತೆ, ಭಂಗಗೊಳಿಸಿದಂತೆ ಆಗುತ್ತದೆ.

ಭೂತ–ಭವಿಷ್ಯ–ವರ್ತಮಾನಗಳೂ ಸಹಸ್ರಾರು ಸೂರ್ಯಚಂದ್ರ–ನಕ್ಷತ್ರಗಳೂ ಯಾವ ಭೂಮಿಕೆಯಲ್ಲಿ ಚಿತ್ತವು ನಿಂತಾಗ ನಮ್ಮ ಆತ್ಮನೇ ಆಗುವವೋ—ಆಗಿರುವವೋ—ಮತ್ತು ಅವು ನಮ್ಮ ಜ್ಞಾನಸಾಗರದಲ್ಲಿ ಸುಳಿಗಳೂ ಅಲೆಗಳೂ ಆಗಿರುವವೋ ಅಲ್ಲಿ ಪ್ರಾಪಂಚಿಕ ಯಶಸ್ಸಿನ ಅಥವಾ ನ್ಯಾಯವಾದಿಯ ಪರೀಕ್ಷೆಗಳ ಮಹತ್ವವು ಏನಿದ್ದೀತು? ಎಲ್ಲೆಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ದೇವರನ್ನೇ ನೋಡುವ ದಿವ್ಯ ದೃಷ್ಟಿಯು ನಿಮಗೆ ಬೇಕಾದರೆ, ಯಾವ ಇಂದ್ರಿಯ ಭೂಮಿಕೆಯಿಂದ ನೀವು ದಿವ್ಯ ದೃಷ್ಟಿಯನ್ನು ಅಥವಾ ಅತೀಂದ್ರಿಯ ದೃಷ್ಟಿಯನ್ನು ಬಯಸುವಿರೋ ಆ ಭೂಮಿಕೆಯನ್ನೇ ಬಿಡಬೇಕಾಗಿದೆ; ಅಥವಾ ಮೀರಬೇಕಾಗಿದೆ.

ಮೀನುಗಳನ್ನು ಹಿಡಿಯಲು ಒಂದು ದೊಡ್ಡ ಬಲೆಯನ್ನು ಬೀಸಿದ್ದರು. ಅದರಲ್ಲಿ ಬಿದ್ದು ಸಿಕ್ಕಿಕೊಂಡ ಅನೇಕ ಮೀನುಗಳು ಒಟ್ಟುಗೂಡಿ ತಮ್ಮ ಅಗಾಧ ಶಕ್ತಿಯಿಂದ ಆ ಬಲೆಯನ್ನೇ ಎಳೆದುಕೊಂಡು ಒಯ್ದುಬಿಟ್ಟವು. ಹೀಗೆ ನಡೆದುಕೊಳ್ಳಬೇಕೆಂದು ದೇವರಿಗೆ ಬುದ್ಧಿವಾದ ಹೇಳಬೇಡಿ. ನಿಮ್ಮ ಇಚ್ಛೆಯನ್ನು ದೇವರಿಗೆ ಉಪದೇಶಿಸಬೇಡಿ, ಆದೇಶಿಸಬೇಡಿ. ಅವನಿಗೆ ಶರಣಾಗತರಾಗಿ, ಈ ಅಲ್ಪವಾದ ನಾನು ಎನ್ನುವ ಜೀವಾತ್ಮನನ್ನು ಬಿಟ್ಟು ಬಿಡಿ; ಕೃತ್ರಿಮವಾದ ಬಯಕೆಗಳನ್ನು ಪರಿತ್ಯಜಿಸಿ. ಇದರಿಂದ ನಿಮ್ಮ ತನು–ಮನಗಳು ಬೆಳಕಿನಿಂದ ತುಂಬಿಕೊಳ್ಳುತ್ತವೆ. ಅವು ಭಗವಂತನ ಅಭಿವ್ಯಕ್ತತೆಗೆ ಪರಿಶುದ್ಧವೂ ಪರಿಪೂರ್ಣವೂ ಆದ ಸಾಧನವಾಗುತ್ತವೆ. ಎಲ್ಲಾ ನಿಜವಾದ ಜ್ಞಾನವೂ ತನ್ನ ಹೆಸರಿಗೆ ಅರ್ಹತೆಯುಳ್ಳ ವಿದ್ಯೆಯೂ ನಮ್ಮ ಅಂತರಂಗದಲ್ಲಿ ಉದಯವಾಗಿ ಬರುವದೇ ಹೊರತು ಪುಸ್ತಕಗಳಿಂದಲಾಗಲೀ ಹೊರಗಿನ ಮನಸ್ಸುಗಳಿಂದಾಗಲೀ ಬರುವದಿಲ್ಲ. ಅಸಾಧಾರಣ ಪ್ರತಿಭಾ ಸಂಪನ್ನರಾದವರೂ ಸಂಶೋಧನಾ ಕ್ಷೇತ್ರದಲ್ಲಿ ಸ್ವತಂತ್ರಧೀಶಕ್ತಿಯಿಂದ ಕಾರ್ಯಸಾಧನೆ ಮಾಡತಕ್ಕವರೂ ತಮ್ಮ ಮನಸ್ಸಿನಲ್ಲಿಯೂ ವ್ಯಕ್ತಿತ್ವದಲ್ಲಿಯೂ ಸ್ವಾರ್ಥದ ಒಲವು ಕೂಡ ಇಲ್ಲದೆ, ಯಾವ ಬಗೆಯ ಗಡಿಬಿಡಿಯೂ ಇಲ್ಲದೆ, ಎಲ್ಲಾ ಬಯಕೆಯನ್ನೂ ಮೀರಿ ಬಹಳ ದೂರ, ದೂರ ನಿಂತು, ಇಂದ್ರಿಯಗಳ ಭೂಮಿಕೆಯನ್ನು ಮೀರಿ, ಚಿದಾಕಾಶದಲ್ಲಿ ದೂರ ಏರಿ, ಕೇವಲ ನಿರಂಕುಶ ವಿಚಾರದಲ್ಲಿ ಲೀನರಾದಾಗ ಮಾತ್ರ ಅಪೂರ್ವವೂ ಆಶ್ಚರ್ಯಕರವೂ ಆದ ಆವಿಷ್ಕಾರಗಳನ್ನೂ ಶೋಧಗಳನ್ನೂ ಮಾಡಿದ್ದಾರೆ. ಅವರು ಪಾರದರ್ಶಕವಾದ ಕನ್ನಡಿಯಿಂದ ಅಥವಾ ಗಾಜಿನಿಂದ ನೋಡುವದರಿಂದ ಅವುಗಳ ಮೂಲಕ ಜ್ಞಾನ ಪ್ರಕಾಶವು ಹೊರಹೊಮ್ಮಿತು. ಅವರು ಪುಸ್ತಕಗಳ ಮೇಲೆ ಬೆಳಕನ್ನು ಚೆಲ್ಲಿದರು. ಅವರು ಹೀಗೆ ಪುಸ್ತಕಗಳನ್ನೂ ಪುಸ್ತಕ ಭಂಡಾರಗಳನ್ನೂ ಬೆಳಗಿದರೇ ಹೊರತು ಗ್ರಂಥ ಭಂಡಾರಗಳು ಅವರಿಗೆ ಬೆಳಕನ್ನು (ಜ್ಞಾನವನ್ನು) ಕೊಡಲಾರದಾದವು. ಇದಕ್ಕೇ ಕಾರ್ಯವೆನ್ನಬೇಕು, ಮಹಾಕಾರ್ಯವೆನ್ನಬೇಕು. ಕೆಲಸವೆಂದರೆ ವಿರಾಮವಿಲ್ಲದ ದುಡಿತ, ಗುಲಾಮಚಾಕರಿ, ಶ್ರಮಪೂರಿತವಾದ ಕರ್ಮ

ಎಂದೇನೂ ರಾಮನ ಅರ್ಥವಲ್ಲ. ವೇದಾಂತದಲ್ಲಿ ಕರ್ಮವೆಂದರೆ, ನಿಜವಾದ ಆತ್ಮ ನೊಡನೆ ಸಮೀಚೀನವೂ ಸುಖಕರವೂ ಸುಶ್ರಾವ್ಯವೂ ಲಯಬದ್ಧವೂ ಮಧುರವೂ ಪ್ರಿಯವೂ ಆದ ಸ್ಪಂದನಗಳು; ಕರ್ಮವೆಂದರೆ, ವಿಶ್ವದೊಡನೆ ಸರಸವಾಗಿ ಶ್ರುತಿ ಗೂಡಿಸುವದು, ಸ್ವರಗೂಡಿಸುವದು. ಒಂದೇ ಆಗಿರುವ ಸತ್ಯದೊಡನೆ ಸಾಧಿಸುವ ನಿಸ್ಸ್ವಾರ್ಥವಾದ ಈ ಏಕತ್ವವನ್ನೇ ವೇದಾಂತವು ನಿಜವಾದ ಕರ್ಮವೆಂದು ಕರೆದರೂ ಅಜ್ಞಾನಿಗಳು ಅನೇಕವೇಳೆ ಇದನ್ನು ಕರ್ಮವಲ್ಲವೆಂದೂ ಸೋಮಾರಿತನವೆಂದೂ ಮೈಗಳ್ಳತನವೆಂದೂ ಮುದ್ರೆವೊತ್ತಿ, ಕಳಂಕ ಹಚ್ಚುತ್ತಾರೆ. "ಗೆಲುವಿನ ಗುಟ್ಟು, ಯಶಸ್ಸಿನ ರಹಸ್ಯ" "Secret of Success" ಎನ್ನುವ ಹಿಂದಿನ ಉಪನ್ಯಾಸವನ್ನು ಪುನಃ ಪೂರ್ಣವಾಗಿ ದಯವಿಟ್ಟು ಓದಿರಿ. ಮತ್ತೇನೆಂದರೆ, ವೇದಾಂತ ತತ್ತ್ವದಲ್ಲಿ ಹೃತ್ಪೂರ್ವಕವಾದ ನಿಷ್ಠೆಯಿಂದ ಕಾರ್ಯ ನಡೆಸುವದಾದರೆ ಅತ್ಯಂತ ಶ್ರಮಪೂರಿತವಾದ ಕರ್ಮವೂ ಪ್ರಯಾಸವಾಗಿಯೂ ಹೊರೆಯಾಗಿಯೂ ಕಾಣದೆ ಎಲ್ಲಾ ಆಟವಾಗಿಯೂ ವಿನೋದವಾಗಿಯೂ ತೋರುತ್ತದೆ. ಅತ್ಯಂತ ಉನ್ನತವೂ ಪ್ರಬಲವೂ ಆದ ಕರ್ಮವೂ ಸಹ ವೇದಾಂತ ದೃಷ್ಟಿಯಿಂದ ಕರ್ಮವೇ ಅಲ್ಲ.

ಹಿಂದೂಗಳ ಪುರಾಣಗಳಲ್ಲಿ ದೇವರನ್ನು ಎರಡು ರೂಪಗಳಿಂದ ಚಿತ್ರಿಸಿದೆ. ಪ್ರತಿಯೊಂದು ಮತಧರ್ಮದಲ್ಲಿಯೂ ಅದರ ಬೋಧೆಯು ಮೂರು ಮುಖವಾಗಿರಬೇಕು. ತತ್ತ್ವಶಾಸ್ತ್ರ, ಪುರಾಣ, ಕರ್ಮೋಪಾಸನೆಗಳು ಅಥವಾ ಆಚಾರಪದ್ಧತಿ. ಆಧ್ಯಾತ್ಮ ಸಂಸ್ಕಾರವುಳ್ಳ ಬುದ್ಧಿ ಜೀವಿಗಳೂ ವಿದ್ವಾಂಸರೂ ತತ್ತ್ವಶಾಸ್ತ್ರ ವಿಚಾರಕ್ಕೆ ಅಧಿಕಾರಿಗಳು; ಭಾವನಾಪ್ರಧಾನರಾದವರೂ ಕಲ್ಪನಾಶಕ್ತಿ—ವಿಚಾರಶಕ್ತಿ ಉಳ್ಳವರೂ ನಂಬತಕ್ಕವರೂ ಪುರಾಣಕ್ಕೆ ಅಧಿಕಾರಿಗಳು ; ಶ್ರದ್ಧಾವಂತರಾದ ಸಾಮಾನ್ಯರೂ ಕರ್ಮಾಚರಣೆಗೆ ಅಧಿಕಾರಿಗಳು. ಈ ಮೂರು ಸಾಧನಗಳೂ ಪರಸ್ಪರ ಪೂರಕವಾಗಿ ಸಹಾಯವಾಗಬೇಕು. ಈ ಮೂರರಲ್ಲಿ ಯಾವದೊಂದು ದುರ್ಬಲವಾದರೂ ಆ ಮತಧರ್ಮವು ಊರ್ಜಿತವಾಗಲಾರದು. ಹಿಂದೂ ಶಾಸ್ತ್ರಗಳಲ್ಲಿ ಈ ಮೂರೂ ಸಮರಸವಾಗಿಯೂ ಸಮಬಲವಾಗಿಯೂ ಅನ್ಯೋನ್ಯ ಸುಸಂಗತವಾಗಿಯೂ ಇರುವದರಿಂದಲೇ ಹಿಂದೂ ಧರ್ಮವು 300,000,000 (ಕ್ರಿ. ಶ. 1903) ಜನರ ಸುಭದ್ರವಾದ ಧರ್ಮವಾಗಿ ಇನ್ನೂ ಇದೆ. ಈ ಮೂರರಲ್ಲಿ ಯಾವದೊಂದಕ್ಕೆ ಕೊರತೆಯಾದರೂ ಅದನ್ನುಳ್ಳ ಧರ್ಮವು ನಿಜವಾದ ಧರ್ಮವಾಗುವದಿಲ್ಲ. ಹಿಂದೂಧರ್ಮದಲ್ಲಿ ಈ ಮೂರೂ ಪರಿಪೂರ್ಣ ಸ್ಥಿತಿಯಲ್ಲಿದೆ. ಪೂರ್ಣಸ್ಥಿತಿಯನ್ನು ಪಡೆದಿರುವ ಮನುಷ್ಯನು ಅಥವಾ ದೇವರು ಹೇಗಿರುವನೆಂಬ ಒಂದು ಆದರ್ಶರೂಪಕವನ್ನು ಹಿಂದೂಗಳ ಪುರಾಣದಿಂದ ಯಾವಾಗಲೂ ನೆನಪಿಟ್ಟುಕೊಳ್ಳುವದಕ್ಕೆ ರಾಮನು ನಿಮಗೆ ಹೇಳುತ್ತಾನೆ. ದೇವತ್ವದಲ್ಲಿ ಪರಮಾದರ್ಶವಾದ ಈ ರೂಪಕಗಳು ನಾರಾಯಣ ಮತ್ತು ಶಿವ ಎಂದು ಎರಡು ಬಗೆ. ಈ ಒಂದೊಂದೂ ಶಕ್ತಿಸಂಪನ್ನವಾಗಿ, ಲಕ್ಷ್ಮೀನಾರಾಯಣ, ಗಿರಿಜಾಶಂಕರ

ಎಂದು ಎರಡೆರಡು ಬಗೆ. ಮೊದಲು ಪ್ರಾರಂಭದಲ್ಲಿ ಲಕ್ಷ್ಮೀನಾರಾಯಣತತ್ತ್ವವನ್ನು ತಿಳಿಸಿದೆ. ಈಗ ಗಿರಿಜಾಶಂಕರತತ್ತ್ವವನ್ನು ತಿಳಿಸುತ್ತದೆ.

ರಜತಗಿರಿಯಂತೆ ಶುಭ್ರ—ಶ್ವೇತವಾಗಿಯೂ ಭವ್ಯವಾಗಿಯೂ ಘನಗಂಭೀರವಾಗಿಯೂ ಇರುವ ಪರಶಿವನು ಹಿಮಾಲಯದ ಕೈಲಾಸಶಿಖರದಲ್ಲಿ ಮುಚ್ಚಿದ ಕಣ್ಣುಗಳಿಂದ ಧ್ಯಾನಮಾಡುತ್ತಾ, ಪ್ರಪಂಚವನ್ನೂ ತನ್ನನ್ನೂ ಮರೆತು ಆನಂದವೇ ಮೂರ್ತಿಗೊಂಡಂತೆ ಅಚಲವಾಗಿ ಕುಳಿತಿದ್ದಾನೆ. ಎಲ್ಲಾ ಕಷ್ಟಗಳಿಂದಲೂ ಗಲಭೆ ಗದ್ದಲಗಳಿಂದಲೂ ದೂರವಾಗಿ ಚಿಂತಾತಂಕಗಳಿಂದ ವಿಮುಕ್ತನಾಗಿ, ಆ ಮಹಾದೇವನು ಸರ್ವತಂತ್ರ ಸ್ವತಂತ್ರನಾಗಿದ್ದಾನೆ. ಅವನಿಗೆ ಜಗತ್ತು ಎಂದೂ ಇರಲೇ ಇಲ್ಲ. ಇದು ಸರ್ವದಾ ಧ್ಯಾನಸ್ಥನಾದ ಮುಕ್ತಾತ್ಮನ ಚಿತ್ರ. ಬೆಳ್ಳಿಯ ಬಿಳುಪು ಹಿಮಾಲಯ ನೈರ್ಮಲ್ಯದ ಸಂಕೇತವು. ಆ ಸಮಾಧಿಸ್ಥವಾದ ಅಚಲಮೂರ್ತಿಯು ಸ್ವಸ್ಥವೂ ಶಾಂತವೂ ಆಗಿರುವ ಮನಸ್ಸಿನ ಸಂಕೇತವು.

ಆ ಶಿವನೊಡನೆ ಅವನ ಶಕ್ತಿಯಾದ ಗಿರಿಜೆಯೂ ಇದ್ದಾಳೆ. ಆಕೆಯು ಅಡಿಯಿಂದ ಮುಡಿಯವರೆಗೂ ಗುಲಾಬಿಯ ಕಾಂತಿಯಿಂದ ಶೋಭಿಸುತ್ತಿದ್ದಾಳೆ. ಗಿರಿಜೆಯು ಶಿವನ ತೊಡೆಯ ಮೇಲೆ ಕುಳಿತಿದ್ದಾಳೆ. ಅವನು ತನ್ನ ಸಮಾಧಿಯಿಂದ ಸ್ವಲ್ಪ ಸ್ವಲ್ಪವಾಗಿ ಎಚ್ಚರಗೊಳ್ಳುತ್ತಾ, ಕಣ್ಣುಗಳನ್ನು ತೆರೆಯುತ್ತಿರುವಾಗ, ಪುನಃ ಅವನು ಆನಂದದಿಂದ ಉನ್ಮತ್ತನಾಗುವದಕ್ಕಾಗಿ ಪಾರ್ವತಿಯು ತಾನು ಸಿದ್ಧಪಡಿಸಿ ಇಟ್ಟುಕೊಂಡಿರುವ ವನಸ್ಪತಿಯ (ರಾಮು) ರಸವನ್ನು ಅವನ ತುಟಿಗೆ ಹಿಡಿದು ಕುಡಿಸುತ್ತಾಳೆ. ಆಗ ಆಕೆಯು ಇಡೀ ವಿಶ್ವಕ್ಕೆ ಸಂಬಂಧಪಟ್ಟಿರುವ ವಿಷಯಗಳನ್ನು ಪ್ರಶ್ನೆಮಾಡುತ್ತಾಳೆ; ಶಿವನು ಆಕೆಗೆ ವಿವರಿಸಿ ಉತ್ತರ ಹೇಳುತ್ತಾನೆ. ಆಕೆಯು (ಪರ್ವತ) ರಾಜನ ಮಗಳಾದರೂ ಶ್ಮಶಾನವಾಸಿಯೂ ವಿರಕ್ತ ಚಕ್ರವರ್ತಿಯೂ ದಿಗಂಬರನೂ ಆದ ಈ ಮಹಾದೇವನ ಸಮೀಪದಲ್ಲಿ ನಿರಂತರವಾಗಿ ಇರುವದಕ್ಕಾಗಿ ಸಮಸ್ತ ಸಂಪತ್ತನ್ನೂ ಸುಂದರವಸ್ತುಗಳನ್ನೂ ಪರಿತ್ಯಾಗಮಾಡಿದಳು. ಆಕೆಯೇ ಗಿರಿಜಾ, ಪಾರ್ವತೀ, ಹೈಮವತೀ, ಉಮಾದೇವಿ. ಆ ದೇವನೇ ಶಿವ, ಪರಶಿವ, ಪರಮೇಶ್ವರ, ಮಹಾದೇವ......

ಓಂ! ಓಂ! ಓಂ!

# AIDS TO REALIZATION
# THE SECRET OF REST

## ಆತ್ಮಾನುಭವಕ್ಕೆ ಸಹಾಯುಗಳು—ವಿಶ್ರಾಂತಿಯ ರಹಸ್ಯ

ಜೀವನದ ಬೇಡಿಕೆಗಳೂ ತಗಾದೆಗಳೂ ಮತ್ತು ನಿಮ್ಮ ದೈಹಿಕ–ಮಾನಸಿಕ ಶಕ್ತಿಗಳ ಮೇಲೆ ಬೀಳುವ ಬಗೆಬಗೆಯ ಹಕ್ಕುಬಾಧ್ಯತೆಗಳೂ ಸದಾ ಕಾಲದಲ್ಲಿಯೂ ನಿಮ್ಮನ್ನು ಚಿಂತೆಗೀಡುಮಾಡಿ ತೀವ್ರ ಬಿಗಿತದಲ್ಲಿಯೇ ಇಟ್ಟಿರುತ್ತದೆ. ನಿಮ್ಮನ್ನು ಎಲ್ಲಾ ಕಾಲದಲ್ಲಿಯೂ ಹೀಗೆ ಧಾವತಿಯಲ್ಲಿಯೇ ಇಟ್ಟಿರುವ ಕ್ಲೇಶಕರವಾದ ಹೊರಗಿನ ಸನ್ನಿವೇಶಗಳಿಗೆ ನೀವು ಅವಕಾಶಕೊಟ್ಟರೆ, ನಿಮ್ಮ ಕೈಗಳಿಂದಲೇ—ಮಾಂಸಖಂಡಗಳಿಂದಲೇ—ನಿಮ್ಮ ಗೋರಿಯನ್ನು ನೀವೇ ಮುಂಚೆ ತೋಡಿಕೊಂಡಂತೆ ಆಗುತ್ತದೆ.

ಇದನ್ನು ತಪ್ಪಿಸಿ, ಸ್ವಲ್ಪ ವಿಶ್ರಾಂತಿ ಪಡೆಯುವದು ಹೇಗೆ? ಕೆಲಸಗಳಿಂದ ಹಿಂದೆಗೆಯುವದನ್ನಾಗಲೀ ನಿತ್ಯವೂ ಮಾಡಬೇಕಾದ ಕಾರ್ಯಗಳನ್ನು ಬಿಡುವದಕ್ಕಾಗಲೀ ರಾಮನು ಸಲಹೆಮಾಡುವದಿಲ್ಲ. ರಾಮನು ಎಂದೂ ಹಾಗೆ ಬೋಧಿಸುವದಿಲ್ಲ. ಆದರೆ ಕ್ಲೇಶಕರವೂ ದುರ್ಭರವೂ ಹೊರೆಯೂ ಪರೀಕ್ಷಕವೂ ಆಗಿರುವ ಕಾರ್ಯಗಳನ್ನು ಯಾವಾಗಲೂ ಉಪಾಯದಿಂದ ಬಿಟ್ಟುಬಿಡುವ ಅತಿಶಯ ಉಪಯುಕ್ತವಾದ ಪದ್ಧತಿಯನ್ನು ಅಭ್ಯಾಸಮಾಡಬೇಕೆಂದು ರಾಮನು ನಿಮಗೆ ಉಪದೇಶ ಮಾಡುತ್ತಾನೆ. ಇದು ವೇದಾಂತದಲ್ಲಿ ಬೋಧಿಸಿರುವ ತ್ಯಾಗಕ್ಕಿಂತಲೂ ಕಡಿಮೆಯೇನೂ ಅಲ್ಲ. ನೀವು ಸರ್ವದಾ ತ್ಯಾಗವೆಂಬ ಭದ್ರವಾದ ಬಂಡೆಯ ಮೇಲೆ ಸ್ಥಿರವಾಗಿ ನಿಂತು, ನಿಮಗೆ ತಾನಾಗಿಯೇ ಒದಗುವ ಯಾವ ಕಾರ್ಯವನ್ನಾದರೂ ಪೂರ್ಣ ಹೃದಯದಿಂದ ಮಾಡಬೇಕು. ಹಾಗಾದರೆ, ನೀವು ಆಯಾಸಪಟ್ಟುಕೊಳ್ಳದೆ ಯಾವ ಕಾರ್ಯವನ್ನಾದರೂ ನಿರ್ವಹಿಸಬಹುದು.

ನೀವು ಕೆಲಸಮಾಡುತ್ತಿರುವಾಗ ನಡುನಡುವೆ ಸ್ವಲ್ಪ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಳ್ಳಿ. ಆ ಒಂದೆರಡು ನಿಮಿಷಗಳ ವಿಶ್ರಾಂತಿಕಾಲದಲ್ಲಿ "ನನಗೆಂದಿಗೂ ದೇಹವೇ ಇಲ್ಲ. ಆದ್ದರಿಂದ ನನಗೆ ದೇಹದ ಕರ್ಮಗಳ ಹಾಗೂ ಕರ್ಮಫಲಗಳ ಸಂಬಂಧವೇ ಇಲ್ಲ. ನಾನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ನಾನು ಸರ್ವಸಾಕ್ಷಿಯು" ಎಂದು ಭಾವಿಸಬೇಕು. ಹೀಗೆ ಚಿಂತನೆ ಮಾಡುವಾಗ, ನಿಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳಬಹುದು, ಅಂಗಾಂಗಗಳನ್ನೆಲ್ಲಾ ಸಡಿಲಿಸಬಹುದು, ದೇಹವನ್ನು ಪೂರ್ಣ ಆರಾಮವಾಗಿ ಇಟ್ಟಿರಬಹುದು. ಎಲ್ಲಾ ಭಾವನೆಗಳಿಂದಲೂ

ಕಲ್ಪನೆಗಳಿಂದಲೂ ವಿಚಾರಗಳಿಂದಲೂ ನಿಮ್ಮ ಮನಸ್ಸನ್ನು ಖಾಲಿ ಮಾಡಿ, ಬರಿದುಮಾಡಿ. ನೀವು ನಿಮ್ಮ ಮನಸ್ಸನ್ನು ಎಷ್ಟು ಬಯಲುಮಾಡುತ್ತೀರೋ ಅಷ್ಟು ನೀವು ಹೆಚ್ಚು ಶಕ್ತಿಯನ್ನು ಪಡೆದಂತೆ ನಿಮ್ಮ ಅನುಭವಕ್ಕೆ ಬರುತ್ತದೆ.

ದೇಹದಲ್ಲಿರುವ ಪ್ರಾಣ ಶಕ್ತಿಯನ್ನು ನರಗಳು ಧಾರಣಮಾಡುತ್ತವೆ. ಮತ್ತು ಭಾವನೆಗಳನ್ನೂ ಆಲೋಚನೆಗಳನ್ನೂ ವಿಚಾರಗಳನ್ನೂ ಸಹ ನರಮಂಡಲವೇ ಸಂರಕ್ಷಿಸುತ್ತದೆ. ಪಚನಕ್ರಿಯೆಯೂ ರಕ್ತಸಂಚಾರವೂ ಕೂದಲ ಬೆಳವಣಿಗೆಯೂ ಇವೇ ಮೊದಲಾದ ದೇಹದ ಒಳಗಿನ ಕ್ರಿಯೆಗಳು ಕೊನೆಯಲ್ಲಿ ನರಮಂಡಲದ ಶಕ್ತಿಯನ್ನೇ ಅವಲಂಬಿಸಿರುತ್ತವೆ. ನಿಮ್ಮ ಭಾವನೆಗಳು ಕಲಕಲ್ಪಟ್ಟರೂ ಹಲವು ಬಗೆಯ ಆಲೋಚನೆಗಳಿಂದ ನಿಮ್ಮ ಮನಸ್ಸಿನಲ್ಲಿ ಗೊಂದಲವೂ ಕಳವಳವೂ ತರಾತುರಿಯೂ ಪೀಡನೆಯೂ ಎದ್ದರೂ ನರಮಂಡಲದ ಮೇಲೆ ಅತಿ ಹೆಚ್ಚಾದ ಹೊರೆಯು ಬೀಳುತ್ತದೆ. ಅತಿ ಶ್ರಮಪೂರಿತವಾದ ಆಲೋಚನಾ – ಭಾವನಾ—ವಿಚಾರಗಳ ಪ್ರಯತ್ನರೂಪದಲ್ಲಿರುವ ನರ—ನಾಡಿಗಳ ಕ್ರಿಯೆಯು, ಬುದ್ಧಿಶಕ್ತಿಯ ಬೆಳವಣಿಗೆಯಲ್ಲಿ ಲಾಭವೇ ಆದರೂ ನರಮಂಡಲದ ಶಕ್ತಿಯ ದೃಷ್ಟಿಯಿಂದ ದೇಹದಲ್ಲಿರುವ ಪ್ರಾಣಶಕ್ತಿಯ ಕ್ರಿಯೆಗಳು ನಷ್ಟಹೊಂದುವದು ಈ ಪ್ರಕಾರವಾಗಿಯೇ ಎನ್ನಬಹುದು. ಇದು, ಒಂದೇ ಕುದುರೆಯ ಮೇಲೆ ಹೆಚ್ಚಾದ ಎರಡು ಭಾರಗಳನ್ನು ಹೊರಿಸಿದಂತೆ ಆಗುತ್ತದೆ. ಕುದುರೆಯು ಸಹಿಸಬೇಕಾದರೆ ಒಂದು ಭಾರವನ್ನು ಹೆಚ್ಚಿಸಿದರೆ ಇನ್ನೊಂದನ್ನು ಕಡಿಮೆ ಮಾಡಲೇಬೇಕು. ಕುದುರೆಯ ಮೇಲೆ ಹೇರಿರುವ ಹೆಚ್ಚಿನ ಹೊರೆಯನ್ನು ಇಳಿಸಿದರೆ, ಮಿಕ್ಕ ಹೇರಿಗೆ ಹಾನಿಯಿಲ್ಲದಂತೆ ಕುದುರೆಯು ಓಡಬಲ್ಲದು. ನೀವು ನಿಮ್ಮ ಪ್ರಾಣಶಕ್ತಿಯನ್ನು ಅಪವ್ಯಯ ಮಾಡದೆ, ಆರೋಗ್ಯವನ್ನು ರಕ್ಷಿಸಿಕೊಳ್ಳುವದರ ಮೂಲಕ ನಿಮ್ಮ ಜೀವಕ್ರಿಯೆಯ ಭಾರವನ್ನು ನರಮಂಡಲವೆಂಬ ಕುದುರೆಯು ಸುಲಭವಾಗಿ ಹೊರುವಂತೆ ಮಾಡಬೇಕಾದರೆ, ನೀವು ನಿಮ್ಮ ಆಲೋಚನಾ—ಭಾವನಾ—ವಿಚಾರಗಳ (ಅಥವಾ ಮನೋವ್ಯಾಪಾರಗಳ), ಹೊರೆಯನ್ನು ಹೆಚ್ಚು ಹಗುರಗೊಳಿಸಿಕೊಳ್ಳಬೇಕು. ದಿಗ್ಭ್ರಮೆಗೊಳಿಸುವ ವಿಚಾರಗಳೂ ಕ್ಲೇಶಪಡಿಸುವ ಆಲೋಚನೆಗಳೂ ನಿಮ್ಮ ಜೀವದ ವೀರ್ಯವನ್ನು ಹೀರದಿರಲಿ. ಯಾವ ಭಯದಿಂದಲೂ ಆಲೋಚನೆಯಿಂದಲೂ ಚಿಂತೆಯಿಂದಲೂ ಎಂದಿಗೂ ಮನಸ್ಸು ಕುಸಿಯದೆ, ಕಾತುರಗೊಳ್ಳದೆ, ಆತುರಪಡದೆ, ಕಳವಳಹೊಂದದೆ, ಯಾವಾಗಲೂ ಸಂತೋಷವಾಗಿಯೂ ಉಲ್ಲಸಿತವಾಗಿಯೂ ಇರುವದರಲ್ಲಿಯೇ ಪೂರ್ಣಾರೋಗ್ಯದ ಮತ್ತು ತೀವ್ರವಾದ ಕ್ರಿಯಾಶೀಲತೆಯ ರಹಸ್ಯವು ಅಡಗಿದೆ.

ಪ್ರಾಪಂಚಿಕವಾದ ಯಾವ ಚಿಂತೆಯೂ ಕ್ಲೇಶವೂ ಕರ್ತವ್ಯಭಾರವೂ ಇಲ್ಲದಿರುವ ನಿಷ್ಪ್ರಪಂಚನಾದ ನಿಮ್ಮ ನಿಜಾತ್ಮನ ಈಶ್ವರತ್ವವನ್ನು ನಿಮ್ಮ ಅಂತರಂಗದ ಲಕ್ಷ್ಯದಲ್ಲಿ ಸಂತತವಾಗಿ ಇಟ್ಟುಕೊಂಡು ಎಲ್ಲಾ ಚಿಂತೆಗಳನ್ನೂ ಭಯಗಳನ್ನೂ ಕಳವಳಗಳನ್ನೂ ತರಾತುರಿಗಳನ್ನೂ ಎತ್ತಿ ಎಸೆಯುವದೇ—ನಾಶಮಾಡುವದೇ—(ಗಾಢ ನಿದ್ರೆಯಲ್ಲಿ ಹೇಗೋ

ಹಾಗೆ ನಮ್ಮ ನಿಜವಾದ ಸ್ವರೂಪದಲ್ಲಿ ಆ ಮನೋವ್ಯಾಪಾರಗಳೆಲ್ಲಾ ಇಲ್ಲವೇ ಇಲ್ಲವೆಂದು ನಿಶ್ಚಯ ಮಾಡುವದೇ) ವೇದಾಂತದೃಷ್ಟಿಯ ತ್ಯಾಗವೆನಿಸುತ್ತದೆ, ಅಥವಾ ಸಂನ್ಯಾಸವೆನಿಸುತ್ತದೆ. ನೀವು ನಡೆಸಲೇ ಬೇಕಾದ ಕರ್ತವ್ಯಗಳಿಲ್ಲ; ಯಾರ ಹಂಗಿಗೂ ನೀವು ಸಿಕ್ಕಿಲ್ಲ, ಯಾರ ಕಟ್ಟಿಗೂ ನೀವು ಒಳಪಟ್ಟಿಲ್ಲ; ಯಾರಿಗೂ ನೀವು ಹೊಣೆಗಾರರಲ್ಲ, ಋಣಿಗಳೂ ಅಲ್ಲ ; ಎಲ್ಲಾ ಸಮಾಜಗಳನ್ನೂ ರಾಷ್ಟ್ರಗಳನ್ನೂ ಎಲ್ಲವನ್ನೂ ಎದುರಿಸಿಯಾದರೂ ನಿಮ್ಮ ವೈಶಿಷ್ಟ್ಯವನ್ನೂ ವ್ಯಕ್ತಿತ್ವವನ್ನೂ ಸ್ಪಷ್ಟಪಡಿಸಬೇಕು, ಕಂಠೋಕ್ತವಾಗಿ ಪ್ರತಿಪಾದಿಸಬೇಕು. ಇದೇ ವೇದಾಂತದ ತ್ಯಾಗವು. ಸಮಾಜ, ಪದ್ಧತಿ, ರೂಢಿ, ಕಾನೂನುಗಳು, ಕಾಯಿದೆಗಳು, ನಿಯಮ—ನಿಬಂಧನೆಗಳು, ಟೀಕೆಗಳು, ವಿಮರ್ಶೆಗಳು, ಇವೇ ಮೊದಲಾದ ಯಾವದೂ ನಿಮ್ಮ ನಿಜವಾದ ಆತ್ಮನನ್ನು ಎಂದಿಗೂ ಸೋಂಕಲಾರವು. ಅದನ್ನು ಅರಿಯಿರಿ, ಭಾವಿಸಿರಿ; ಅದಕ್ಕೆ ವಿರುದ್ಧವಾದ ಕಲ್ಪನೆಗಳನ್ನು ಕಿತ್ತೆಸೆಯಿರಿ; ಬಿಟ್ಟುಬಿಡಿರಿ. ಈ ಎಲ್ಲಾ ತತ್ತ್ವಗಳನ್ನೂ ನೆನಪುಕೊಡುವದೆಂದು ಓಂಕಾರಕ್ಕೆ ಅರ್ಥವನ್ನು ಮಾಡಿ, ಆಯಾಸವಾದ ಸಮಯದಲ್ಲಿಯೂ ಮಿಕ್ಕ ಎಲ್ಲಾ ಸಮಯಗಳಲ್ಲಿಯೂ ಓಂಕಾರವನ್ನು ಉಚ್ಚರಿಸಿರಿ, ಜಪಿಸಿರಿ.

ಓಂ ! ಓಂ ! ಓಂ !

# AIDS TO REALIZATION
# LECTURE TO YOURSELF

## ಆತ್ಮಾನುಭವಕ್ಕೆ ಸಹಾಯಗಳು—ನಿಮಗೆ ನೀವೇ ಉಪನ್ಯಾಸಮಾಡಿರಿ

ನಾವು ಆತ್ಮಾನುಭವವನ್ನು ಸವಿಯುವದಕ್ಕಾಗಿ – ಹೊಟ್ಟೆಗಿಲ್ಲದವರು ಊಟಕ್ಕಾಗಿ ಹಸಿದು ಬಾಯಾರಿ ಬಾಯಿ ಬಾಯಿ ಬಿಟ್ಟು ಬೇಡುವಂತೆ — ಹಂಬಲಿಸುತ್ತೇವೆ. ಶುದ್ಧವಾದ ಮನಸ್ಸಿನ ಸದ್ಭಾವನೆಯೆಂಬ ಉಸಿರನ್ನು ಈ ದೇಹವೆಂಬ ಕೊಳಲಿನಲ್ಲಿ ತುಂಬಿ, ಓಂಕಾರ ಮಂತ್ರವನ್ನು ನುಡಿಸಿ ಗಾನಮಾಡಬೇಕು. ಆದ್ದರಿಂದ ನಿಮ್ಮ ಹೃದಯದ ಮಾನಸ ಸರೋವರದಲ್ಲಿ ಅಡಗಿರುವ ಅನಂತ ಸ್ವಾರ್ಥಮಯವಾದ ಕಾಮಗಳೆಂಬ ಸಹಸ್ರ ಫಣಗಳುಳ್ಳ ಮಹಾಸರ್ಪವನ್ನು ಓಂಕಾರದ ವೇಣುಗಾನದಿಂದ ಶೋಧಿಸಿ, ಹೊರತೋರುವಂತೆ ಮಾಡಿ, ಒಂದೊಂದು ಕಾಮವೆಂಬ ತಲೆಯನ್ನೂ ಸದೆಬಡಿಯಬೇಕು. ಇದಕ್ಕಾಗಿ ದೃಢಪ್ರತಿಜ್ಞೆಮಾಡಿ ಗಂಭೀರವಾದ ವ್ರತವನ್ನು ಆಚರಿಸಬೇಕು. ಈ ಸರ್ಪವನ್ನು ನಾಶಮಾಡಿ ಹೊರಬಂದಮೇಲೆ ನಿಮ್ಮ ಮಾನಸ ಸರೋವರವು ವಿಷರಹಿತವಾಗಿರಬೇಕು. ಕಾಮದೊಡನೆ ಹೋರಾಟನಡೆಸಿದಾಗ, ಅದರ ಪ್ರತಿಕ್ರಿಯಾ ರೂಪವಾಗಿ ಮನಸ್ಸು ವಿಷಮವಾಗದೆ ಶಾಂತವೂ ಪ್ರೇಮಳ ಸ್ವಭಾವದ್ದೂ ಆಗಿರಬೇಕು. ಆಗ ಆ ಮಾನಸ ಸರೋವರದ ನಿರ್ಮಲ ಜಲವನ್ನು ಯಾರು ಸೇವಿಸಿದರೂ ಅವರಿಗೆ ಹಿತವಾಗುತ್ತದೆ. ಅದು, ಆ ಮಾನಸ ಸರೋವರಕ್ಕೆ ದೇವರಿಂದಲೇ ಹೊಸಹೊಸದಾಗಿ ಹರಿದು ಬರುವ ಗಂಗಾಜಲವಾದುದರಿಂದ, ಅದನ್ನು ಸೇವಿಸುವ ನಿಂದಕರಿಗೂ ಮನಸ್ಸು ಪರಿವರ್ತನೆಯಾಗಿ ಶ್ರೇಯಸ್ಸು ಉಂಟಾಗುತ್ತದೆ. ಮನಸ್ಸಿನಲ್ಲಿರುವ ದೋಷ ದೌರ್ಬಲ್ಯಗಳನ್ನು ಹುಡುಕಿ, ಹುಡುಕಿ ನಿರ್ಮೂಲಮಾಡಿರಿ. ಬಯಕೆಗಳು ಏಕಾಗ್ರತೆಯನ್ನು ತಪ್ಪಿಸುತ್ತವೆ. ಆತ್ಮನ ಶುದ್ಧಿಯೂ ಜ್ಞಾನವೂ ಆಳವಟ್ಟ ಹೊರತು ನಿಜವಾದ ಸಂಯಮವು ಸಾಧ್ಯವಿಲ್ಲ. ಸಂಯಮ (ಧಾರಣಾ—ಧ್ಯಾನ—ಸಮಾಧಿ) ವನ್ನು ಸಾಧಿಸುವಾಗ ಅದನ್ನು ಕೆಡಿಸುವದಕ್ಕೆ ಒದಗುವ ಕಾರಣಗಳನ್ನೆಲ್ಲಾ ನಿರ್ಮೂಲಮಾಡಿ. ನಿಮ್ಮ ಶ್ರೇಯಸ್ಸಿಗೆ ನೀವೇ ಅಡ್ಡಿಯಾಗಬೇಡಿ. ನಿಮಗೆ ನೀವು (ವಂಚನೆಯಿಲ್ಲದೆ) ನಿಜವಾಗಿರಿ. ಈ ದೇಶದಲ್ಲಿ ಬೇರೆಯವರಿಂದ ನಾವು ಅನೇಕ ಉಪನ್ಯಾಸಗಳನ್ನು ಕೇಳುತ್ತೇವೆ. ಆದರೆ ನಿಮಗೆ ನೀವೇ ಉಪನ್ಯಾಸಮಾಡಿಕೊಂಡರೆ ಹೆಚ್ಚು ಲಾಭವಾಗುತ್ತದೆ. ಇದಿಲ್ಲದೆ ಯಾವ ಪ್ರಗತಿಯೂ ಇಲ್ಲ.

ಮಲಗುವದಕ್ಕೆ ಮುಂಚೆ, ಕುಳಿತುಕೊಂಡು, ನೀವು ಕಳೆದುಕೊಳ್ಳಬೇಕಾಗಿರುವ ನಿಮ್ಮಲ್ಲಿರುವ ತಪ್ಪುಗಳನ್ನು ನಿಮ್ಮ ಕಣ್ಣೆದುರಿಗೆ ತಂದುಕೊಳ್ಳಿ. ಬೈಬಲ್ಲನ್ನೂ ಗೀತೆಯನ್ನೂ ಉಪನಿಷತ್ತುಗಳನ್ನೂ ಅಥವಾ ಎಮರ್‌ಸನ್‌ರಂಥ ತತ್ತ್ವಜ್ಞರ ಲೇಖನಗಳನ್ನೂ ಓದಿರಿ. ಆಶೆಯಾಗಲೀ, ದುಃಖವಾಗಲೀ ನಿಮ್ಮಲ್ಲಿರುವ ದೋಷವಾದರೆ ಗೀತಾದಿಗಳ ವಾಚನದ ಬಲದಿಂದ, ಈ ದೋಷವು ನಿಮ್ಮಲ್ಲಿ ಏಕಿದೆ? ಅದನ್ನು ಹೇಗೆ ಕಳೆದುಕೊಳ್ಳಬೇಕು?—ಎಂಬದನ್ನು ವಿಚಾರಮಾಡಿ. ಓಂ ಎಂಬ ಮಹಾಮಂತ್ರವನ್ನು ಉಚ್ಚರಿಸಿ. ದೋಷವನ್ನು ನಿಗ್ರಹಿಸಿದಿರೆಂಬ ನಂಬಿಕೆಯಾದ ಮೇಲೆ, ಅದನ್ನು ಮೀರಿದ್ದೀರೆಂಬ ನಿಶ್ಚಯಮಾಡಿ, ಅನಂತರ ಅದನ್ನು ನೆನೆಯಲೇ ಬೇಡಿ. ಕಾಮ ಸರ್ಪದ ಒಂದೊಂದು ತಲೆಯನ್ನು ತುಳಿಯುವಾಗಲೂ ನಿಮಗೆ ನೀವೇ ಉಪನ್ಯಾಸಮಾಡಿಕೊಳ್ಳಿ. ಧ್ಯಾನಮಾಡುವಾಗ ಓಂಕಾರವನ್ನು ಝೇಂಕರಿಸಿ. ಕಂಠವು ಇದನ್ನು ನುಡಿಯುವಾಗ, ಈ ಪವಿತ್ರ ಶಬ್ದದ ದೈವೀ ಪ್ರಭಾವವು ಪ್ರಸರಿಸಿ ನಿಮ್ಮ ಮನಸ್ಸು ಶುದ್ಧವಾಗುವದಕ್ಕೂ ಸ್ಥಿರವಾಗುವದಕ್ಕೂ ಸಹಾಯವಾಗುತ್ತದೆ. ಇದರಿಂದ ಸುಂದರ ಶೀಲವು ನಿಮ್ಮಲ್ಲಿ ರೂಪಿತವಾದರೆ ನೀವು ಶಕ್ತಿಸಂಪನ್ನರಾಗುತ್ತೀರಿ. ಇದೇ ಮೊದಲನೆಯ ಸಾಧನೆ.

ಎಲ್ಲಾ ಅನರ್ಥಗಳ ಮೂಲ ಕಾರಣವೂ ಅನೇಕ ರೂಪಗಳಿಂದ ತೋರುವ ಅಜ್ಞಾನ. ಅಜ್ಞಾನವೆಂದರೆ ಆತ್ಮನನ್ನು ಅರಿಯದಿರುವದು ಮತ್ತು ತಾನಲ್ಲದ ದೇಹವನ್ನೂ ಇಂದ್ರಿಯಗಳನ್ನೂ ಮನಸ್ಸನ್ನೂ ಅಹಂಕಾರವನ್ನೂ ತಾನೆಂದುಕೊಳ್ಳುವದು; ಹೊರಗಿನಿಂದಾಗುವ ಸುಖ ದುಃಖಗಳಲ್ಲಿಯೂ ತನ್ಮಯತೆಯನ್ನು ಪಡೆಯುವದು. ಈ ಎಲ್ಲಾ ರೂಪವಾದ ಅಧ್ಯಾಸವೂ ಅಜ್ಞಾನವೇ. ಇದರಿಂದ ಎಲ್ಲಾ ಬಗೆಯ ದುಃಖಗಳಿಗೂ ನೋವುಗಳಿಗೂ ಬಾಧೆಗಳಿಗೂ ನಾವು ಒಳಗಾಗುತ್ತೇವೆ. ಅನಂತನಾದ ಆತ್ಮನೇ ನೀವೆಂದು ತಿಳಿದರೆ, ಶೋಕ—ಮೋಹಗಳಿಗೆ ವಶರಾಗುವದು ಹೇಗೆ? ನೈತಿಕ ನಿಯಮಗಳು ಗಣಿತಶಾಸ್ತ್ರದ ನಿಯಮಗಳಂತೆ ($4 \times 3 = 12$ ಎನ್ನುವಂತೆ) ನಿಷ್ಕೃಷ್ಟವಾದವುಗಳಲ್ಲವೆಂದು ಜನರು ಹೇಳುತ್ತಾರೆ. ಅವರದು ತಪ್ಪು ತಿಳಿವಳಿಕೆಯು. ಕತ್ತಲುಗವಿಗಳಲ್ಲಿಯೂ ದೂರವಾದ ನಿರ್ಜನಾರಣ್ಯಗಳಲ್ಲಿಯೂ ಯಾರಿಗೂ ತಿಳಿಯದಂತೆ ನೀವು ಒಂದು ಪಾಪವನ್ನು ಮಾಡಿದರೆ, ನಿಮ್ಮ ಕಾಲಿನ ತಳದಲ್ಲಿರುವ ಹುಲ್ಲು ಗರಿಕೆಗಳೂ ಗಿಡ ಮರಗಳೂ ನಿಮ್ಮ ಕಾರ್ಯವನ್ನು ಖಂಡಿಸಿ, ನಿಮ್ಮ ವಿರುದ್ಧವಾಗಿ ಸಾಕ್ಷಿ ಹೇಳುವದನ್ನು ನೋಡಿ ನಿಮಗೆ ಆಶ್ಚರ್ಯವಾಗಬಹುದು· ತಮ್ಮ ಕಷ್ಟಕ್ಕೆ ಕಾರಣವನ್ನು ತಿಳಿಯದವರು ಸುತ್ತಲ ಸನ್ನಿವೇಶದೊಡನೆ ಹೋರಾಡಬಹುದು. ಇಲ್ಲಿ ಒಂದು ನಿಸ್ಸಂದೇಹವೂ ನಿರ್ವಿವಾದವೂ ಆದ ದೈವೀನಿಯಮವಿದೆಯೆಂದು ಸಾರಿ ಹೇಳಬಹುದು. ದೇವರ ಕಣ್ಣಿನಲ್ಲಿ ಮಣ್ಣನ್ನು ಎರೆಚಲು ಹೋದರೆ ನಿಮ್ಮ ಕಣ್ಣುಗಳೇ ಕುರುಡಾಗುತ್ತವೆ. ನೀವು ಹೃದಯದಲ್ಲಿ ಏನಾದರೂ ಕಲ್ಮಷವನ್ನು ಅಥವಾ ಪಾಪವನ್ನು ಪೋಷಿಸಿಟ್ಟುಕೊಂಡರೆ ಅದರ ಫಲವಾದ ದುಃಖವನ್ನು

ಅನುಭವಿಸಲೇ ಬೇಕು. ಈ ನಿಯಮಗಳು ಹೇಗೆ ಅಬಾಧಿತವಾದವು ಎನ್ನುವದನ್ನು ತೋರಿಸಿದರೆ ಮನುಷ್ಯನು ಎಂದೂ ಅಧಮವಾದ ಬಯಕೆಗಳಿಗೆ ಇಳಿಯಲಾರನು.

ಅಪವಿತ್ರವಾದ ಕಾಮಗಳ ಮೇಲೆ ಒಮ್ಮೆ ನಿಮಗೆ ಸ್ವಾಮಿತ್ವವು ಸಾಧ್ಯವಾದರೆ, ನಿಮಗೆ ಇಷ್ಟ ಬಂದಷ್ಟು ಕಾಲ ನೀವು ಮನಸ್ಸನ್ನು ಏಕಾಗ್ರಮಾಡಬಹುದು.

ಹೊಟ್ಟೆಗಿಲ್ಲದೆ ಒರಲಲೂ ಬಾರದು ; ಹೊಟ್ಟೆಬಾಕರಂತೆ ಅತಿಯಾಗಿ ತಿನ್ನಲೂ ಬಾರದು. ಎರಡನ್ನೂ ಬಿಡಬೇಕು. ತಿನ್ನಬೇಕೋ ಉಪವಾಸ ಮಾಡಬೇಕೋ ಎನ್ನುವದು ನಮ್ಮೊಳಗೇ ಸ್ವಾಭಾವಿಕವಾಗಿ ಹೊಳೆಯುತ್ತದೆ. ಸ್ವಾಭಾವಿಕ ಪ್ರವೃತ್ತಿಯನ್ನೂ ಅಂತಃಸ್ಫೂರ್ತಿಯನ್ನೂ ನಾವು ಅನುಸರಿಸಬೇಕು. ಹಾಗಾದರೆ ಹಲವು ವೇಳೆ ಉಪವಾಸವೂ ಸ್ವಾಭಾವಿಕವಾಗಿಬರುತ್ತದೆ. ಯಾವದಕ್ಕೂ ಗುಲಾಮರಾಗಬಾರದು, ಸ್ವಾಮಿಯಾಗಿರಬೇಕು.

ಇಂಡಿಯಾದೇಶದಲ್ಲಿ ಪೂರ್ಣಿಮಾ ದಿನದಂಥ ದಿನಗಳು ಸಂಯಮ ಸಾಧನಕ್ಕೆ ಸಹಾಯಕವೆಂದೂ ಹಿತಕರವೆಂದೂ ಸಿದ್ಧಮಾಡಲ್ಪಟ್ಟಿದೆ. ನೀವು ಪರೀಕ್ಷಾ ಪ್ರಯೋಗಗಳನ್ನು ಮಾಡಿನೋಡಿ. ಮುಖ್ಯವಾಗಿ ನೀವು ಹಣ್ಣು, ಕಾಯಿ, ರೊಟ್ಟಿ ಮೊದಲಾದವುಗಳನ್ನು ತಿಂದರೆ ಧ್ಯಾನಕ್ಕೆ ಅಂಥಾ ದಿನಗಳೇ ಸಹಾಯಕವೆಂದು ಕಂಡುಕೊಳ್ಳುತ್ತೀರಿ.

ಓಂ ! ಓಂ ! ಓಂ !

# IMPORTANT QUESTIONS ON VEDANTA-I

# ವೇದಾಂತದ ಮೇಲೆ ಮುಖ್ಯವಾದ ಪ್ರಶ್ನೆಗಳು-I

## ಸ್ಯಾನ್ ಫ್ರ್ಯಾನ್‌ಸಿಸ್ಕೋದಲ್ಲಿ 'ಹರ್ಮೆಟಿಕ್ ಬ್ರದರ್‌ಹುಡ್ ಹಾಲ್'ನಲ್ಲಿ ತಾ. 26—12—1902ರಲ್ಲಿ ಮಾಡಿದ ಉಪನ್ಯಾಸ

ಸಭ್ಯ ಸ್ತ್ರೀಪುರುಷ ರೂಪದಲ್ಲಿರುವ ನನ್ನ ಆತ್ಮವೇ !

ಮೊದಲನೆಯ ಪ್ರಶ್ನೆ ಏನೆಂದರೆ, ಅರ್ಥವನ್ನು ತಿಳಿಯದೆ, ಓಂಕಾರವನ್ನು ಉಚ್ಚಾರ ಮಾಡಿದರೆ, ಏನಾದರೂ ವಿಶಿಷ್ಟ ಪ್ರಯೋಜನವಾಗುವದೆ? ಹಿಮಾಲಯ ಪರ್ವತದ ಅರಣ್ಯಗಳಲ್ಲಿ ವಾಸಮಾಡುತ್ತಿರುವ ಯತಿಗಳು ಓಂಕಾರವನ್ನು ಉಚ್ಚರಿಸುತ್ತಾರೆ, ಅಥವಾ ಇನ್ನೇನನ್ನೋ ಗಾನಮಾಡುತ್ತಾ ಒಂದು ವಾದ್ಯವನ್ನು ನುಡಿಸುತ್ತಾರೆ. ಎಷ್ಟೋ ಸಂದರ್ಭಗಳಲ್ಲಿ ಹಾವುಗಳೂ ಜಿಂಕೆಗಳೂ ಕಾಡು ಮೃಗಗಳೂ ತಮ್ಮ ಸ್ಥಳಗಳನ್ನು ಬಿಟ್ಟು ಆ ಸನ್ಯಾಸಿಗಳ ಹತ್ತಿರ ಬರುತ್ತವೆ. ಆ ವನ್ಯಪ್ರಾಣಿಗಳಿಗೆ ಆ ಕೀರ್ತನೆಗಳ ಅರ್ಥವಾಗದಿದ್ದರೂ ಸಂಗೀತದ ನಿಯಮಗಳು ತಿಳಿಯದಿದ್ದರೂ ಓಂಕಾರ ಗಾನದ ಅರ್ಥದ ಅರಿವು ಇಲ್ಲವಾದರೂ ಅದರ ಪ್ರಭಾವವು ಅವುಗಳ ಮೇಲೆ ಇದ್ದೇ ಇದೆ. ಹಾವು ಹುಲ್ಲೆಗಳ ಮೇಲೆ ಕೇವಲ ಶಬ್ದವು ಅಂಥ ಅದ್ಭುತ ಪರಿಣಾಮವನ್ನು ಉಂಟುಮಾಡುವದಾದರೆ ಸಾಧಕರು ಸಂತತವಾಗಿ ಉಚ್ಚರಿಸುವ ಮಂತ್ರವು ಅವರ ಜೀವನದಲ್ಲಿ, ಒಂದು ಸರಿಯಾದ ಕಾಲದಲ್ಲಿ ವಿಶಿಷ್ಟ ಪರಿಣಾಮವನ್ನು ಉಂಟುಮಾಡಲಾರದೆ ?

ಪ್ರತಿಯೊಂದು ಕೀರ್ತನೆಗೂ ಮೂರು ಮುಖಗಳಿವೆ, ಅಥವಾ ಮೂರು ಅಂಶಗಳಿವೆ. ಮೊದಲನೆಯದು ಕೀರ್ತನೆಯ ಅರ್ಥವು, ಎರಡನೆಯದು ಸಂಗೀತದ ನಿಯಮಗಳು, ಮೂರನೆಯದು ಅದರ ಧ್ವನಿ, ರಾಗ ಅಥವಾ ಅದರ ಭಾಷೆ. ಒಂದು ಕೀರ್ತನೆಯ ಈ ಎಲ್ಲಾ ಮೂರು ಮುಖಗಳ ಪೂರ್ಣ ಪರಿಚಯವು ನಿಮಗಿದ್ದರೆ, ಅದರ ಆಶ್ಚರ್ಯಕರವಾದ ಆನಂದವನ್ನು ಚೆನ್ನಾಗಿ ಅನುಭವಿಸುತ್ತೀರಿ. ಆದರೆ ಗಾನದ ಒಂದಂಶದ ಪರಿಚಯವೇ ನಿಮಗಿದ್ದರೂ ಕೆಲವು ಮಟ್ಟಿಗೆ ನೀವು ಆನಂದ ಪಡಬಹುದು. ಹಾವುಗಳೂ ಜಿಂಕೆಗಳೂ ಗಾನದ ಇಂಪಾದ ಬರಿಯ ಧ್ವನಿಯನ್ನು ಕೇಳಿ ಮುಗ್ಧವಾಗುತ್ತವೆ. ಅವುಗಳಿಗೆ ಕೀರ್ತನೆಯ ಅರ್ಥವೂ ಸಂಗೀತ ಶಾಸ್ತ್ರದ ನಿಯಮಗಳೂ ತಿಳಿಯದಾದರೂ ಅವು ಆನಂದ ಪಡಬಲ್ಲವು. ಕೆಲವರು ಕೀರ್ತನೆಯ ಅರ್ಥವನ್ನು ತಿಳಿಯದಿದ್ದರೂ ಶಾಸ್ತ್ರ ನಿಯಮಗಳನ್ನು ತಿಳಿದು ರಾಗಜ್ಞಾನವುಳ್ಳವರಾದುದರಿಂದ

ವಿದ್ವಾಂಸರು ಹಾಡಿದಾಗ ಆನಂದದಿಂದ ತಲೆದೂಗಬಲ್ಲರು. ಅವರಿಗೆ ರಾಗಾಲಾಪನೆಯು ಮುಖ್ಯವೇ ಹೊರತು ಕೀರ್ತನೆಯ ಅರ್ಥವು ಮುಖ್ಯವಲ್ಲ. (ಅವರು ತಿಳಿಯದ ಭಾಷೆಯಲ್ಲಿರುವ ಆ ಕೀರ್ತನೆಯ ಸಾಹಿತ್ಯದಲ್ಲಿ ಅವರ ನಿಂದೆಯೇ ತುಂಬಿದ್ದರೂ ಅಥವಾ ಅಶ್ಲೀಲತೆಯೇ ಇದ್ದರೂ ಅದನ್ನು ಶಾಸ್ತ್ರೀಯವಾಗಿ ಹಾಡಿದರೆ ಸಾಕು, ಅವರು ಮೆಚ್ಚಿ ಮೈಮರೆಯುತ್ತಾರೆ.) ಇನ್ನು ಕೆಲವರು ಕೀರ್ತನೆಯ ಅರ್ಥವನ್ನೂ ಶಾಸ್ತ್ರನಿಯಮಗಳನ್ನೂ ತಿಳಿಯದಿದ್ದರೂ ಶಿಶುಗಳಂತೆಯೂ ಪಶುಗಳಂತೆಯೂ ಗಾನ ಮಾಧುರ್ಯವನ್ನು ಸವಿಯಬಲ್ಲರು. ಗಾನಶಾಸ್ತ್ರವನ್ನಾಗಲೀ ಗಾನ ದಿಂಪನ್ನಾಗಲೀ ಅರಿಯಲಾರದ ಕೆಲವು ಸಾಹಿತಿಗಳಿಗೆ ಕೀರ್ತನೆಯ ಸಾಹಿತ್ಯವೇ—ಅರ್ಥವೇ ಮುಖ್ಯವು. ಆದರೆ ಗಾನವಿದ್ಯೆಯ ಈ ಮೂರೂ ಮುಖಗಳ ಪರಿಚಯವು ಪೂರ್ಣವಾಗಿ ಉಳ್ಳವರ ಆನಂದವು ಪೂರ್ಣವಾದುದು—ಎನ್ನುವದು ಸ್ವಾಭಾವಿಕವು.

ಹೀಗೆಯೇ ಓಂಕಾರದಲ್ಲಿ ಮೂರು ಅಂಶಗಳಿವೆ. ಮೊದಲನೆಯದು, ಉಚ್ಚರಿತವಾದ ಮಂತ್ರದ ಕೇವಲ ಶಬ್ದವು. ಎರಡನೆಯದು, ಭಾವನೆಯ ಮೂಲಕ ಅನುಭವಿಸಬೇಕಾದ ಓಂಕಾರದ ಮಾತ್ರೆಗಳ ಅರ್ಥವು; ಮೂರನೆಯದು, ನಿಮ್ಮ ಕಾರ್ಯಗಳಲ್ಲಿಯೂ ನಡೆನುಡಿಗಳಲ್ಲಿಯೂ ಓಂಕಾರವನ್ನು ಗಾನಮಾಡುತ್ತಾ ಆ ಪವಿತ್ರ ಮಂತ್ರಾರ್ಥವನ್ನು ಭಾವನೆಯ ಮೂಲಕ ನಿಮ್ಮ ಶೀಲದಲ್ಲಿ ಅಳವಡಿಸಿಕೊಳ್ಳುವದು. ವಾಕ್ಕಿನಿಂದ ಓಂಕಾರವನ್ನು ಜಪಿಸುತ್ತಾ ಹೃದಯದಿಂದ ಅದರ—ಅರ್ಥವನ್ನು ಭಾವಿಸುತ್ತಾ ಕಾರ್ಯದ ಮೂಲಕ ಅದನ್ನೇ ಹಾಡುತ್ತಾ—ಈ ಎಲ್ಲಾ ರೂಪದಿಂದ—ಓಂಕಾರವನ್ನು ನಿರಂತರವಾಗಿ ಉಪಾಸನೆ ಮಾಡತಕ್ಕವನು, ತನ್ನ ಜೀವನವನ್ನೇ (ಓಂಕಾರ) ಮಧುರ ಗಾಯನವನ್ನಾಗಿ ಮಾಡಿಕೊಳ್ಳುತ್ತಾನೆ. ಅವನು ಪ್ರತಿಯೊಬ್ಬರಿಗೂ ದೇವರು. ಭಾವನೆಯಿಂದಲೂ ಕೃತಿಯಿಂದಲೂ ಅದನ್ನು ಉಚ್ಚರಿಸುವದು ಸಾಧ್ಯವಿಲ್ಲವಾದರೆ, ಅದನ್ನು ಬಿಡಬೇಡಿ, ಕೇವಲ ವಾಕ್ಕಿನಿಂದಲಾದರೂ ಉಚ್ಚರಿಸುತ್ತಿರಿ. ಅಷ್ಟೇ ಆದರೂ ಅದು ಉಪಯೋಗವಿಲ್ಲದೇ ಇಲ್ಲ. ಕೃತಿಯಿಂದಲೂ ವಾಣಿಯಿಂದಲೂ ಅಲ್ಲದೆ, ಕೇವಲ ಭಾವನೆಯಿಂದಲೇ ಓಂಕಾರವನ್ನು ಗಾನಮಾಡುತ್ತಿದ್ದರೂ ಕೆಲವು ಮಟ್ಟಿಗೆ ನಿಮಗೆ ಲಾಭವಾಗಿಯೇ ಆಗುವದು. ಕಾರ್ಯದಲ್ಲಿ ಮಾತ್ರವೇ ಅದನ್ನು ಗಾನಮಾಡುತ್ತಿದ್ದು, ಇನ್ನು ಎರಡು ರೂಪದಿಂದ ಇಲ್ಲವಾದರೂ ಅದು ಒಳ್ಳೆಯದೇ, ಉತ್ತಮವಾದುದೇ. ಆದರೆ ಮೊದಲು, ಮೊದಲು ಬರಿಯ ವಾಚಿಕ ಜಪವನ್ನು ಮಾಡುತ್ತಿದ್ದರೂ ಭಾವನೆಯೂ ಕೃತಿಯೂ ಸ್ವಾಭಾವಿಕವಾಗಿಯೇ ಅದನ್ನು ಹಿಂಬಾಲಿಸುತ್ತವೆ.

ಕಿತ್ತಲೇ ಹಣ್ಣು, ಮಾವಿನ ಹಣ್ಣು, ಸೇಬು, ದ್ರಾಕ್ಷಿ, ಜೇನು, ಜಿಲೇಬಿ, ಜಾಮೂನು ಮೊದಲಾದ ಕೆಲವು ವಸ್ತುಗಳ ಹೆಸರನ್ನು ಹೇಳಿದ ಮಾತ್ರಕ್ಕೇ ನಾಲಿಗೆಯಲ್ಲಿ ನೀರು ಊರುತ್ತದೆ. ಅಥವಾ ರಸನೇಂದ್ರಿಯವು ದ್ರವಿಸುತ್ತದೆ. ಬರಿಯ

ಆ ಹೆಸರುಗಳೇ ಒಂದು ಪರಿಣಾಮವನ್ನು ಉಂಟುಮಾಡಿದರೆ, ಅವುಗಳನ್ನು ತಿಂದರೆ ಖಂಡಿತವಾಗಿಯೂ ಪರಿಣಾಮವು ಪೂರ್ಣವಾಗುತ್ತದೆ. ಹೀಗೆಯೇ, ಓಂಕಾರದ ಕೇವಲ ಉಚ್ಚಾರಣೆಯೇ ವಿಶಿಷ್ಟವಾದ ಪರಿಣಾಮವನ್ನು ಉಂಟುಮಾಡುತ್ತದೆ. ಆದರೆ ಅದರ ಸಮಗ್ರ ರೂಪದಲ್ಲಿ ಉಪಾಸನೆ ಮಾಡಿದರೆ ಅದರ ಪರಿಣಾಮವು ಪೂರ್ಣವಾಗುತ್ತದೆ. ನಿಮಗೆ ಮೊದಲು ಮೊದಲು ಅದರ ಪರಿಣಾಮವು ಕಾಣದಿದ್ದರೂ ಕೊನೆಕೊನೆಗೆ ಅದರ ಪ್ರಯೋಜನವು ಕಾಣಬರುವದೆಂದು ನಿಶ್ಚಯವಾಗಿ ತಿಳಿಯಿರಿ.

ನೀರಿನ ತೊಟ್ಟಿಯ ತಳದಲ್ಲಿ ಒಂದು ದ್ವಾರವಿದ್ದು ಅದನ್ನು ಬಿರಡೆಯಿಂದ ಮುಚ್ಚಿ, ತೊಟ್ಟಿಯಲ್ಲಿ ನೀರನ್ನು ಹೊಯ್ಯುತ್ತಿದ್ದರೆ, ಹೆಚ್ಚು ಹೆಚ್ಚಾಗಿ ನೀರನ್ನು ಸುರಿದಂತೆ ತೊಟ್ಟಿಯ ತಳದಲ್ಲಿ ಒತ್ತಡವೂ ಹೆಚ್ಚುತ್ತಾ ಹೋಗುತ್ತದೆ–ಎಂದು ಜಲ ಸಮಸ್ಥಿತಿಶಾಸ್ತ್ರವು ( Hydrostatics ) ಹೇಳುತ್ತದೆ. ಆ ಬಿರಡೆಯನ್ನು ಹೊರಕ್ಕೆ ತಳ್ಳಲು ಸಾಕಷ್ಟು ಒತ್ತಡವು ಉಂಟಾಗಬೇಕಾದರೆ ಆ ತೊಟ್ಟಿಯೊಳಗೆ ಎಷ್ಟು ನೀರನ್ನು ಹಾಕಬೇಕು–ಎನ್ನುವದನ್ನು ಆ ಶಾಸ್ತ್ರದ ನಿಯಮಗಳ ಪ್ರಕಾರವೇ ಲೆಕ್ಕಮಾಡಿ ಕಂಡು ಹಿಡಿಯಬಹುದು. ಹಾಗೆಯೇ ನಿಮ್ಮ ದೇಹವೆಂಬ ಪಾತ್ರದಲ್ಲಿ ಓಂಕಾರವನ್ನು–ಗಂಗಾಜಲದಂತೆ –ಸುರಿಯುತ್ತಾ ಹೋದರೆ, ನೀರಿನ ಒತ್ತಡವು ಬೆಳೆದಂತೆ, ಆ ಮಂತ್ರದ ಪ್ರಭಾವವು ಬೆಳೆಯುತ್ತಾ ಹೋಗುತ್ತದೆ. ಆದರೆ ಒಳಗಿನ ಪ್ರಭಾವದ ಉತ್ಪಾದನವೇ ಒಂದು ರೀತಿಯದಾದರೆ, ಹೊರಗೆ ಜನರ ದೃಷ್ಟಿಗೆ ಅದರ ಪ್ರಕಟಣವೇ ಬೇರೆ ಬಗೆಯಾಗುತ್ತದೆ. ಆದರೂ, ನೀರಿನ ಒತ್ತಡವು ಹೆಚ್ಚಾಗಿ ಆ ತೊಟ್ಟಿಯ ಕೆಳಗಿನ ಬಿರಡೆಯು ಕಿತ್ತುಕೊಂಡು ನೀರು ಹೊರನುಗ್ಗಿ ಹರಿಯುವ ಒಂದು ಸಮಯವು ಬರುವಂತೆ, ನಿಮ್ಮ ಓಂಕಾರ ಉಪಾಸನೆಯ ಭಾವನಾಬಲವು ಬೆಳೆದು ಉತ್ಪನ್ನವಾಗುವ ಚೈತನ್ಯಶಕ್ತಿಯು ನಿಮ್ಮಿಂದ ಹೊರಚಿಮ್ಮಿ ಹರಿಯುವ ಒಂದು ಕಾಲವು ಬರುತ್ತದೆ. ಕೆಲವು ಕಾಲದವರೆಗೆ ಯಾವ ಪರಿಣಾಮವೂ ತೋರದಿರಬಹುದು; ಆದರೂ ಪರಿಣಾಮವು ಒಳಗೆ ಬೆಳೆಯುತ್ತಲೇ ಬರುತ್ತಿರುತ್ತದೆ. ಅದಕ್ಕೆ ಒಂದು ದೃಷ್ಟಾಂತವನ್ನು ಕೊಡಬಹುದು : ಹೊಸದಾಗಿ ಮದುವೆಯಾದ ಒಬ್ಬ ತರುಣಿ ಇದ್ದಳು. ಆಕೆಗೆ ಗರ್ಭಧಾರಣೆಯ ಅನುಭವವೂ ಹೊಸದಾಗಿದ್ದಿತೆನ್ನುವದು ಸ್ವಾಭಾವಿಕವೇ ಸರಿ. ಆಕೆಯು ಸರಳತೆಯೇ ಮೈತಳೆದಂತೆ ಅತಿ ಮುಗ್ಧಳಾಗಿದ್ದಳು. ಕೆಲವು ದಿನಗಳಲ್ಲಿ ಆಕೆಯು ಗರ್ಭವತಿಯಾದಳು. ಮೊದಲನೆಯ ತಿಂಗಳಲ್ಲಿ ಆಕೆಯು ತನ್ನ ಪ್ರಕೃತಿಯಲ್ಲಿ ಸ್ವಲ್ಪ ಬದಲಾವಣೆಯನ್ನು ಕಂಡರೂ ಮುಂದೆ ತನ್ನಲ್ಲಿ ಹೆಚ್ಚು ಬದಲಾವಣೆ ಆಗಲಾರದೆಂದು ಮುಗ್ಧತೆಯಿಂದ ಭಾವಿಸಿದಳು. ಇಂಡಿಯಾ ದೇಶದಲ್ಲಿ ಸೊಸೆಯು ಅತ್ತೆಯ ಮನೆಯಲ್ಲಿಯೇ ವಾಸಮಾಡುತ್ತಾಳೆ; ಅತ್ತೆಯು ಸೊಸೆಯ ಮತ್ತು ಆಕೆಯ ಮಕ್ಕಳ ಯೋಗಕ್ಷೇಮವನ್ನು ನೋಡುತ್ತಾಳೆ. ಒಂಭತ್ತನೆಯ ತಿಂಗಳ ಕೊನೆಯಲ್ಲಿ ಮುದ್ದು ಸೊಸೆಯು–ಬಹಳ ಹಳೆಯ ಕಾಲದ ಹೆಣ್ಣಿನಂತೆ–"ಅತ್ತೆ, ಅತ್ತೆ! ನನಗೆ ನಿದ್ದೆ ಬಂದಾಗ ಅಕಸ್ಮಾತ್ ನನಗೆ ಅರಿವಿಲ್ಲದಂತೆ ಶಿಶುವು ಜನನವಾಗಬಹುದು.

ನನ್ನ, ಪ್ರಸವಕಾಲದಲ್ಲಿ ದಯವಿಟ್ಟು ನನ್ನನ್ನು ಎಚ್ಚರಗೊಳಿಸುತ್ತೀರ"? ಎಂದು ಬೇಡಿದಳು. ಅತ್ತೆಯು ಆಕೆಯನ್ನು ಕುರಿತು, "ಮಗಳೆ! ಹೆರಿಗೆಯ ಸಮಯವು ಬಂತೆಂದರೆ ನಿನ್ನನ್ನು ಎಚ್ಚರಗೊಳಿಸುವ ಅಗತ್ಯವೇ ಇರುವದಿಲ್ಲ. ಏಕೆಂದರೆ, ಪ್ರಸವ ವೇದನೆಯನ್ನು ತಡೆಯಲಾರದೆ, ಅರಚುವದಕ್ಕೂ ಕಿರಿಚುವದಕ್ಕೂ ತೊಡಗುವದರಿಂದ ನೀನೇ ನೆರೆಹೊರೆಯವರನ್ನೆಲ್ಲಾ ಎಚ್ಚರಗೊಳಿಸುವ ಸ್ಥಿತಿಯಲ್ಲಿ ಇರುತ್ತೀಯು" ಎಂದಳು. ಗರ್ಭವು ಬೆಳೆಯುತ್ತಿದ್ದ ಕಾಲದಲ್ಲಿ, ತಾಯಿಗೆ ಅದರ ವಿಶೇಷವಾದ ಪರವೆಯಿಲ್ಲವಾದರೂ ಆಕೆಯ ಪ್ರಕೃತಿಯಲ್ಲಿ ಪರಿಣಾಮವುಂಟಾಗಿ ವಿಲಕ್ಷಣವಾದ ಬದಲಾವಣೆಗಳು ನಡೆಯುತ್ತಲೇ ಇದ್ದವು. ಸರಿಯಾದ (ಪರಿಪಕ್ವ) ಕಾಲವು ಬಂತಾದರೆ ಪರಿಣಾಮವೇನೆಂಬುದು ಹೊರತೋರಿಕೊಳ್ಳುತ್ತದೆ. ಹಾಗೆಯೇ ಈ ಮಂತ್ರವನ್ನು ಸೇವಿಸುತ್ತಾ ನಡೆದು, ಅದರಿಂದ ಪುಷ್ಟಿಯನ್ನು ಪಡೆದು, ಈ ಪೋಷಕವಾದ ಅಮೃತವನ್ನು ಆಳವಾಗಿ ಹೀರಿದರೆ, ಅದರ ಮಹಿಮೆ ಏನೆಂಬುದು ಸಕಾಲದಲ್ಲಿ ಪ್ರಕಾಶವಾಗುತ್ತದೆ. ನೀವು ಅಸಹನೆಯಿಂದ ಆತುರಪಡಬಾರದು.

ರಾಮನು ಬಾಲಕನಾಗಿದ್ದಾಗ ಇತರ ಬಾಲಕರ ಜೊತೆಯಲ್ಲಿ ಸೇರಿಕೊಂಡು ಮನೆಯ ಅಂಗಳದ ತೋಟದಲ್ಲಿ ಚೆನ್ನಾಗಿ ಅಗತೆಮಾಡಿ ಗೊಬ್ಬರವನ್ನೂ ಹಾಕಿ ಭತ್ತ, ಕಡಲೆ, ಹೆಸರು ಮೊದಲಾದ ಧಾನ್ಯಗಳ ಬೀಜಗಳನ್ನು ಬಿತ್ತಿ, ಮಣ್ಣನ್ನು ಮುಚ್ಚಿ ನೀರನ್ನು ಎರೆಯುತ್ತಿದ್ದನು. ನಮಗೆ ಆ ಕಾರ್ಯದಲ್ಲಿ ಎಷ್ಟು ಶ್ರದ್ಧಾದರ ಇತ್ತು ಎಂದರೆ, ನಾವು ಊಟ ತಿಂಡಿಗಳನ್ನು ಸಹ ಮರೆತು ಅದರಲ್ಲಿ ತೊಡಗಿರುತ್ತಿದ್ದೆವು. ನಮಗೆ ತಿಳಿಯದಂತೆ ಬೀಜಗಳು ಮೊಳಕೆಯೊಡೆದು ಗಿಡವಾಗಬಹುದೇನೋ ಎಂಬ ಭಯದಿಂದ ಆ ಸ್ಥಳವನ್ನು ನಾವು ಒಂದು ನಿಮಿಷವೂ ಬಿಟ್ಟು ಹೋಗುತ್ತಿರಲಿಲ್ಲ. ನಿಮಿಷ ನಿಮಿಷಕ್ಕೂ ಆ ಬೀಜಗಳಲ್ಲಿ ಆಗುವ ಬದಲಾವಣೆಯನ್ನು ನೋಡಬೇಕೆಂದು ನಮಗೆ ಕುತೂಹಲವಿತ್ತು. ಬೀಜಗಳನ್ನು ಬಿತ್ತಿದ ಒಂದು ಗಂಟೆಯೊಳಗೇ—ಬಹಳ ಆತುರ—ಕಾತುರಗಳಿಂದ—ಅವುಗಳಲ್ಲಿ ಆಗುತ್ತಿರುವ ಬೆಳವಣಿಗೆಯನ್ನು ನೋಡಬೇಕೆಂದು ಆ ಸ್ಥಳವನ್ನೆಲ್ಲಾ ಕೆದರಿ, ಕೆದರಿ, ಪರೀಕ್ಷಿಸಿ ನೋಡುತ್ತಿದ್ದೆವು. ಏನೂ ಕಾಣುತ್ತಿರಲಿಲ್ಲ. ಅಲ್ಲಿ ಮತ್ತಷ್ಟು ಬಗೆದು ಬಗೆದು ಏನೂ ಕಾಣದಾಗಲು ನಿರಾಶರಾಗಿ ಬೀಜಗಳನ್ನೇ ಕಿತ್ತು ನೋಡುತ್ತಿದ್ದೆವು. ಆಗಂತೂ ನಮ್ಮ ನಿರಾಶೆಗೂ ಅಸಮಾಧಾನಕ್ಕೂ ಮಿತಿಯೇ ಇರುತ್ತಿರಲಿಲ್ಲ! ಆ ಬೀಜಗಳಲ್ಲಿ ಒಂದು ಗಂಟೆಯೊಳಗೆ ಯಾವ ಬದಲಾವಣೆ ತೋರಬಹುದು!

ಸಾಧಕರಾದ ನೀವೂ ಆ ಹುಚ್ಚು ಮಕ್ಕಳಂತೆ, ಕಣ್ಣು ಮುಚ್ಚಿ ಧ್ಯಾನ ಮಾಡಿದ ಕಾಲುಗಂಟೆಯೊಳಗೇ ಬ್ರಹ್ಮವನ್ನು ಕಾಣಬೇಕೆಂದು ಆತುರಪಡಬೇಡಿ. ಒಂದೆರಡು ಗಂಟೆಗಳು 'ಓಂಕಾರವನ್ನು ಉಚ್ಚರಿಸಿದ ಮಾತ್ರಕ್ಕೆ ನಿಮ್ಮೊಳಗೇ ಯಾವ ಶಕ್ತಿಯು ಬೆಳೆದಿದೆಯೋ ಯಾವ ಸಿದ್ಧಿಯು ಪ್ರಾಪ್ತವಾಗಿದೆಯೋ ತಿಳಿಯಬೇಕೆಂದು ಹುಚ್ಚು

ಕುತೂಹಲದಿಂದ ಪರೀಕ್ಷಿಸಿ ನೋಡಬೇಡಿ. ಮೂಗನ್ನು ಒತ್ತಿ ಹಿಡಿದು, ಕಣ್ಣುಗಳನ್ನು ಮುಚ್ಚಿದ ಕೂಡಲೇ ದೇವರು ನಿಮ್ಮ ಎದುರಿಗೆ ಕೈಮುಗಿದುಕೊಂಡು ಬಂದು ನಿಲ್ಲುತ್ತಾನೆಂದು ತಿಳಿಯಬೇಡಿ. ನೀವು ಬೀಜವನ್ನು ಬಿತ್ತಬಹುದು, ಆದರೆ ನೀವು ತಿಳಿದಷ್ಟು ಬೇಗ, ನಿಮ್ಮ ಆತುರಕ್ಕೆ ಫಲವಾಗುವದಿಲ್ಲ, ಸುಗ್ಗಿ ಬರುವದಿಲ್ಲ. ಸಾಧನವು ಫಲಿಸುವದಕ್ಕೆ ಎಡೆಬಿಡದೆ ಪ್ರಯತ್ನವೂ ಸಮಾಧಾನವೂ ದೀರ್ಘ ಕಾಲವೂ (ಅಥವಾ ಸಾಕಷ್ಟು ಕಾಲವೂ) ಬೇಕು. ಆದರೆ ಪ್ರಯತ್ನಕ್ಕೆ ತಕ್ಕ ಫಲವು ಇದ್ದೇ ಇದೆ, ತಪ್ಪುವದೇ ಇಲ್ಲ.

## Mental Healers
## ಮಾನಸಿಕ ಚಿಕಿತ್ಸಕರು

ಪ್ರಶ್ನೆ: ದೈಹಿಕ ರೋಗಗಳನ್ನು ಅಥವಾ ಮಾನಸಿಕ ರೋಗಗಳನ್ನು ತಮ್ಮ ಮನಶ್ಶಕ್ತಿಯಿಂದ ಗುಣಪಡಿಸತಕ್ಕವರು, ರೋಗಿಗಳು ಅನುಭವಿಸಲೇ ಬೇಕಾಗಿದ್ದ ಪ್ರಾರಬ್ಧ ಭೋಗವನ್ನು ತಡೆಗಟ್ಟುವದರಿಂದ, ಮುಂದಿನ ಜನ್ಮಗಳಲ್ಲಿ ತಾವೇ ಆ ಎಲ್ಲಾ ರೋಗಗಳನ್ನೂ ಅನುಭವಿಸುವದಕ್ಕೆ ಕಾರಣವಾದ ಘೋರ ಕರ್ಮದ ಬೀಜವನ್ನು ಈಗಲೇ ಬಿತ್ತುತ್ತಿದ್ದಾರೆ—ಎಂದು ಕೆಲವರು ಹೇಳುತ್ತಾರೆ, ಇದು ನಿಜವೆ?

ಉತ್ತರ: ಇಲ್ಲ, ಇಲ್ಲ, ಸುಳ್ಳು. ಮಾನಸಿಕ ಚಿಕಿತ್ಸಕರ ಸಾಧನದಿಂದ ಮುಂದಿನ ಜನ್ಮಗಳಲ್ಲಿ ಭಯಂಕರ ರೋಗಗಳು ಅವಶ್ಯವಾಗಿ ಬರಲೇಬೇಕಾದುದು ಏನೂ ಇಲ್ಲ. ಆ ಚಿಕಿತ್ಸೆಯಲ್ಲಿ ಅದಕ್ಕೆ ಕಾರಣವಾದುದು ಏನೂ ಇಲ್ಲ. ಜನರು ಎಲ್ಲಾ ಬಗೆಯ ಪ್ರಾಪಂಚಿಕ ಕರ್ಮಗಳನ್ನು ಮಾಡುತ್ತಿರುತ್ತಾರೆ. ಅದರಿಂದ ಅವರಿಗೆ ಮುಂದಿನ ಜನ್ಮಗಳಲ್ಲಿ ಭಯಂಕರ ರೋಗಗಳು ಹೇಗೆ ಬರುವದಿಲ್ಲವೋ ಹಾಗೆ ಸಾಮಾನ್ಯ ವೈದ್ಯರಂತೆ ಚಿಕಿತ್ಸೆ ಮಾಡುವ ಆ ಮಾನಸಿಕ ಚಿಕಿತ್ಸಕರಿಗೂ ಭಯಂಕರ ರೋಗಗಳು ಬರುವದಿಲ್ಲ. ಸಾಮಾನ್ಯ ವೈದ್ಯರಿಗೆ ಅಂಥಾ ಅಪಾಯವಿದ್ದಿದ್ದರೆ ಇವರಿಗೂ ಇರುತ್ತಿತ್ತು. ಡಾಕ್ಟರುಗಳಿಗೆ ಅದಿಲ್ಲವಾದ್ದರಿಂದ ಇವರಿಗೂ ಇರುವದಿಲ್ಲ. ಮಾನಸಿಕ ಚಿಕಿತ್ಸೆಯನ್ನೇಕೆ ಅಭ್ಯಾಸ ಮಾಡಲಿಲ್ಲವೆಂದು ಕೆಲವರು ರಾಮನನ್ನು ಕೇಳಿದರು. ರಾಮನ ದೃಷ್ಟಿಯಲ್ಲಿ ಭೌತಿಕ ಜೀವನವು ನಮ್ಮ ಗಂಭೀರವಾದ ಲಕ್ಷ್ಯವನ್ನು ಸೆಳೆಯುವಷ್ಟು ಮುಖ್ಯವಲ್ಲ—ಎನ್ನುವದೇ ಅದಕ್ಕೆ ಉತ್ತರ. ಕ್ರಿಸ್ತನಲ್ಲಿ ರೋಗಗಳನ್ನು ಗುಣಪಡಿಸುವ ಶಕ್ತಿ ಇದ್ದಿತು. ಆದರೆ ಅವನು ಅದನ್ನು ವೃತ್ತಿಯನ್ನಾಗಿ ನಡೆಸಲಿಲ್ಲ. ಅವನು ಯಾರ ಕಾಹಿಲೆಯನ್ನಾದರೂ ಗುಣಪಡಿಸಿದಾಗ, ಅಥವಾ ಯಾವ ಕಾಹಿಲೆಯಾದರೂ ಅವನಿಂದ ಗುಣ ಪಟ್ಟಾಗ "ನಿನ್ನ ಶ್ರದ್ಧಾ ಭಕ್ತಿಯೇ – ನಿನ್ನ ನಂಬಿಕೆಯೇ—ನಿನ್ನ ರೋಗವನ್ನು ಗುಣಪಡಿಸಿತೇ ಹೊರತು ನಾನೇನೂ ಮಾಡಲಿಲ್ಲ" ಎನ್ನುತ್ತಿದ್ದನು. ರಾಮನು

ಅಂಥಾ ಕಾರ್ಯವನ್ನು ಮಾಡಿದರೆ ಅದರ ಪರಿಣಾಮ ಏನಾಗಬಹುದು? ಪ್ರತಿಯೊಬ್ಬರೂ ರಾಮನಲ್ಲಿ ರೊಟ್ಟಿಗಳಿಗಾಗಿಯೂ, ಮೀನುಗಳಿಗಾಗಿಯೂ—ಕ್ಷುದ್ರ ಲೌಕಿಕ ಕಾಮನೆಗಳ ತೃಪ್ತಿಗಾಗಿ—ಬರುವರು. ಕೆಲವರು ರಾಮನಲ್ಲಿಗೆ ಬಂದು "ನನ್ನ ಮಗನ ಮೂರ್ಛಾ ರೋಗವನ್ನು ಗುಣಪಡಿಸಿ; ನನ್ನ ಮಗಳ ಕ್ಷಯರೋಗವನ್ನು ವಾಸಿಮಾಡಿ; ನನ್ನ ತಂಗಿಗೆ ಸಂತಾನವಾಗುವಂತೆ ಅನುಗ್ರಹಮಾಡಿ"; ಎಂದು ಹೇಳಬಹುದು. ಇತರರು "ನನ್ನ ಬಡತನವನ್ನು ಕಳೆಯಿರಿ; ನನ್ನ ಮಗನಿಗೆ ಉನ್ನತವಾದ ಉದ್ಯೋಗವು ದೊರಕುವಂತೆ ಆಶೀರ್ವದಿಸಿ..." ಎಂದು ಮೊದಲಾಗಿ ಕೇಳಬಹುದು. ಈ ಬಗೆಯ ವ್ಯವಹಾರದಲ್ಲಿ ಇಳಿದರೆ, ಅದು ವ್ಯಾಪಾರ ಮನೋಭಾವವನ್ನು ಬೆಳೆಸುತ್ತದೆ. ಮಾನಸ ಚಿಕಿತ್ಸೆಯನ್ನು ಒಂದು ವೃತ್ತಿಯನ್ನಾಗಿ ನಡೆಸಿದರೆ ನಿಜವಾದ ಸ್ವಾತಂತ್ರ್ಯದಿಂದಲೂ ಮೋಕ್ಷದಿಂದಲೂ ನಮ್ಮನ್ನು ದೂರ ಒಯ್ಯುತ್ತದೆ.

## Manifestation of Soul
## ಆತ್ಮನ ಅಭಿವ್ಯಕ್ತಿ

ಪ್ರಶ್ನೆ: ಈ ಭೌತಿಕ ಶರೀರದಲ್ಲಿ ಇರುವಾಗ ಆತ್ಮನು ಪೂರ್ಣವಾಗಿ ತೋರಿಕೊಳ್ಳುವದು ಸಾಧ್ಯವೆ?

ಉತ್ತರ: ಇಲ್ಲಿ, 'ಆತ್ಮ' ಎಂಬ ಶಬ್ದವಿದೆ; ಇದರ ಅರ್ಥವು ಏನೆಂಬುದನ್ನು ಸ್ವಲ್ಪ ವಿವರಿಸಬೇಕು. ಇಲ್ಲಿ ಒಂದು ನೀರಿನ ಪಾತ್ರೆಯಿದೆ. ಈ ನೀರಿನಲ್ಲಿ ಸೂರ್ಯನು ಪ್ರತಿಬಿಂಬಿಸಿದ್ದಾನೆ. ಈಗ ನೀರನ್ನು ಈ ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಸುರಿಯಿರಿ. ಮೊದಲನೆಯ ಪಾತ್ರೆಯ ನೀರಿನಲ್ಲಿ ಸೂರ್ಯನು ಹೇಗೆ ಪ್ರತಿಫಲಿಸಿದ್ದನೋ ಹಾಗೆಯೇ ಎರಡನೆಯ ಪಾತ್ರೆಯಲ್ಲಿಯೂ ಅವನು ಪ್ರತಿಫಲಿಸಿರುವದನ್ನು ಕಾಣುತ್ತೀರಿ. ಎರಡನೆಯ ಪಾತ್ರೆಯಿಂದ ನೀರನ್ನು ಮೂರನೆಯ ಪಾತ್ರೆಗೆ ಬದಲಾಯಿಸಿರಿ. ಆ ನೀರಿನಲ್ಲಿಯೂ ಸೂರ್ಯನು ಮೊದಲಿನಂತೆಯೇ ಪ್ರತಿ ಬಿಂಬಿಸುತ್ತಾನೆ. ಹಾಗೆಯೇ ನಿಮ್ಮ ಹೊರಗಿನ ಸ್ಥೂಲವಾದ ಶರೀರವನ್ನು ಒಂದು ಪಾತ್ರೆಗೆ ಅಥವಾ ಮಣ್ಣಿನ ಪಾತ್ರೆಗೆ ಹೋಲಿಸಬಹುದು. ಮುಖ್ಯವಾಗಿ ಬಯಕೆಗಳೂ ಭಾವನೆಗಳೂ ಇರುವ ಮನಸ್ಸಿನ ಸೂಕ್ಷ್ಮ ಶರೀರವನ್ನು ಪಾತ್ರೆಯಲ್ಲಿರುವ ನೀರಿಗೆ ಚೆನ್ನಾಗಿ ಹೋಲಿಸಬಹುದು. ಸತ್ತಮೇಲೆ ಸೂಕ್ಷ್ಮ ಶರೀರವು ಒಂದು ಸ್ಥೂಲ ಶರೀರದ ಪಾತ್ರೆಯಿಂದ ಇನ್ನೊಂದಕ್ಕೆ ವರ್ಗಾವಣೆ ಪಡೆಯುತ್ತದೆ. ಕೆಲವರ ಅಭಿಪ್ರಾಯದಂತೆ ಜನ್ಮಾಂತರವನ್ನು ಹೊಂದುವ ಈ ಸೂಕ್ಷ್ಮ ಶರೀರವೇ ಆತ್ಮನು. ಆದರೆ, ವೇದಾಂತದ ಪ್ರಕಾರ ಇದಲ್ಲ. ವೇದಾಂತದ ರೀತ್ಯಾ, ನಿಜವಾದ ಆತ್ಮನು ಅಥವಾ ಸ್ವಯಂ ಪ್ರಕಾಶನಾದ ಆತ್ಮನು, ಮೊದಲನೆಯ ಸ್ಥೂಲ ಶರೀರದ ಪಾತ್ರೆಯಲ್ಲಿರುವ ಸೂಕ್ಷ್ಮ ಶರೀರದ ನೀರಿನಲ್ಲಿ ಪ್ರತಿಬಿಂಬಿಸಿದಂತೆಯೇ ಎರಡನೆಯ ಮೂರನೆಯ... ಸೂಕ್ಷ್ಮ

ಶರೀರಗಳಲ್ಲಿಯೂ ಸಮಾನವಾಗಿ ಪ್ರತಿಬಿಂಬಿಸುವ ಸೂರ್ಯನಂತೆ ಇದ್ದಾನೆ. ಈ ನಿಜವಾದ ಆತ್ಮನು ಎಲ್ಲಾ ಸಂದರ್ಭಗಳಲ್ಲಿಯೂ ಎಲ್ಲಾ ಕಾಲದಲ್ಲಿಯೂ ಪೂರ್ಣವಾಗಿಯೇ ತೋರಿಕೊಳ್ಳುತ್ತಾನೆ. ನಿಜವಾದ ಮಹಿಮಾವಂತನಾದ ಆತ್ಮನು ಎಂದೂ ಬದಲಾವಣೆ ಹೊಂದುವದೂ ಇಲ್ಲ ; ಬೆಳೆಯುವದೂ ಇಲ್ಲ. ಆತ್ಮನು ಯಾವಾಗಲೂ ಪೂರ್ಣನೇ. ನೀವು 'ಆತ್ಮ' ಎನ್ನುವ ಶಬ್ದಕ್ಕೆ ಸೂಕ್ಷ್ಮಶರೀರ ಎಂದು ಅರ್ಥಮಾಡಿಕೊಂಡರೆ, ಅದು ಜನ್ಮರಹಿತವಾಗಿರುವ ಅಂತಿಮಸ್ಥಿತಿಯನ್ನು ಪಡೆಯಬೇಕಾದರೆ ಸಾಮಾನ್ಯವಾಗಿ ಅನೇಕ ಜನ್ಮಗಳನ್ನು ಪಡೆಯುತ್ತದೆ. ಆದರೆ, ಈ ಜನ್ಮದಲ್ಲಿಯೇ ನೀವು ನಿಮ್ಮ ಮೋಕ್ಷದ ವಿಷಯದಲ್ಲಿ ನಿಜವಾಗಿಯೂ ಅತ್ಯಂತ ಶ್ರದ್ಧೆಯನ್ನು ವಹಿಸಿದರೆ, ಮುಂದೆ ಜನ್ಮವಿಲ್ಲದಂತೆ (ಈಗಲೇ ಇಲ್ಲಿಯೇ) ಪೂರ್ಣ ಮುಕ್ತಿಯನ್ನು ಪಡೆಯಬಹುದು.

ಸಾವು ಎಂದರೇನು ? ಮರಣವೆಂದರೆ ಶರೀರದ ಸ್ಥೂಲ ಪಾತ್ರೆಯು ಒಡೆದು ಹೋಗುವದು. ಸಾವು ಬಂದಾಗ, ಒಂದು ಸ್ಥೂಲ ಶರೀರದ ಪಾತ್ರೆಯಿಂದ ನೀರು ಇನ್ನೊಂದು ಪಾತ್ರೆಗೆ ಬದಲಾವಣೆ ಹೊಂದಿದಂತೆ ಆಗುತ್ತದೆ. ಸೂಕ್ಷ್ಮಶರೀರವು ಪುನರ್ಜನ್ಮವನ್ನು ಪಡೆದು, ಇನ್ನೊಂದು ಸ್ಥೂಲಶರೀರವನ್ನು ತೆಗೆದುಕೊಂಡರೆ, ಈ ಎರಡನೆಯ ಶರೀರದಲ್ಲಿಯೂ—ಪಾತ್ರೆಯಲ್ಲಿಯೂ—ನಿಜವಾದ ಆತ್ಮನು ಅಥವಾ ಪರಮಾತ್ಮನು ಮೊದಲನೆಯ ಶರೀರದ ಪಾತ್ರೆಯಲ್ಲಿ ಪ್ರತಿಬಿಂಬಿಸಿದಂತೆಯೇ ಪ್ರತಿಬಿಂಬಿಸುತ್ತಾನೆ. ಈ ಶರೀರದ ಪಾತ್ರೆಯು ತನ್ನ ರೀತಿಯಲ್ಲಿ, ಎಪ್ಪತ್ತು (ಮೂರಿಪ್ಪತ್ತು ಮೇಲೆ ಹತ್ತು) ವರ್ಷಗಳು ಬದುಕಿ ಒಡೆಯುತ್ತದೆ—ಎಂದು ಇಟ್ಟುಕೊಳ್ಳೋಣ. ಆ ಪಾತ್ರೆಯಲ್ಲಿದ್ದ ದ್ರವವಾದ ಸೂಕ್ಷ್ಮಶರೀರವು ಮೂರನೆಯ ದೇಹದ ಮಣ್ಣಿನ ಮಡಕೆಗೆ ವರ್ಗಮಾಡಲ್ಪಡುತ್ತದೆ. ಜನ್ಮಾಂತರವೆಂಬದು ಇದೇ. ನಿಜವಾದ ಆತ್ಮನು, ಬೇರೆ ಬೇರೆಯಾದ ಎಲ್ಲಾ ಸ್ಥೂಲಶರೀರಗಳ ಪಾತ್ರೆಗಳಲ್ಲಿರುವ ಸೂಕ್ಷ್ಮಶರೀರದಲ್ಲಿ ಸಮಾನವಾಗಿ ಪ್ರತಿಬಿಂಬಿಸುವ ಸೂರ್ಯನಂತೆ ಇದ್ದಾನೆ. ಹೀಗೆ ಸ್ಥೂಲ—ಸೂಕ್ಷ್ಮ ಶರೀರಗಳು ಬದಲಾವಣೆ ಹೊಂದುತ್ತಿರುವವೇ ಹೊರತು (ಬದಲಾವಣೆ ಹೊಂದದಿರುವ) ಸೂರ್ಯನಂತೆ ಆತ್ಮನೂ ಬದಲಾವಣೆ ಹೊಂದುವದಿಲ್ಲ. ನಿಜವಾದ ಆತ್ಮನು ಎಲ್ಲಾ ಜನ್ಮಾಂತರಗಳನ್ನೂ ಮೀರಿದ್ದಾನೆ. ಜನ್ಮಾಂತರವಿರುವದೆಲ್ಲಾ ಸೂಕ್ಷ್ಮ ಶರೀರಕ್ಕೆ, ಸೂರ್ಯನಿಗಲ್ಲ ಅಥವಾ ಆತ್ಮನಿಗಲ್ಲ. ಈ ವಿಷಯವನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸಬೇಕು.

ಸೂರ್ಯನು ಎಲ್ಲಾ ಕಾಲದಲ್ಲಿಯೂ ಪೂರ್ಣವಾಗಿ ಬೆಳಗುತ್ತಾನೆ; ಆದರೆ, ನೀರಿನ ಮೇಲೆ ಪ್ರತಿಫಲಿಸುವ ಸೂರ್ಯಬಿಂಬವು ಯಾವಾಗಲೂ ಪೂರ್ಣವಾಗಿಯೂ ಸ್ಥಿರವಾಗಿಯೂ ಇರುವದಿಲ್ಲ. ನೀರು ಘನವಾದ ಸ್ಥಿತಿಯಲ್ಲಿದ್ದಾಗ, ಮೇಲೆ ಸೂರ್ಯನು ಬೆಳಗುತ್ತಿದ್ದರೂ ಆ ಮಂಜು ಗಡ್ಡೆಯಲ್ಲಿ ಅವನ ಪ್ರತಿಬಿಂಬವು ಮೂಡುವದಿಲ್ಲ.

ಹಾಗೆಯೇ ನೀರು ಆವಿಯಾಗಿರುವಾಗಲೂ ಸೂರ್ಯಬಿಂಬವು ಅದರಲ್ಲಿ ಪ್ರತಿಫಲಿಸುವದಿಲ್ಲ. ನೀರಿನ ಘನ–ದ್ರವ–ಅನಿಲ ( Soliden–Liquid–Gas ) ಎಂಬ ಮೂರು ಸ್ಥಿತಿಗಳಲ್ಲಿ, ದ್ರವಸ್ಥಿತಿಯಲ್ಲಿ ಮಾತ್ರ ಸೂರ್ಯನ ಪ್ರತಿಬಿಂಬವು ಮೂಡುತ್ತದೆ; ಮಿಕ್ಕ ಎರಡು ಸ್ಥಿತಿಗಳಲ್ಲಿಯೂ ಮೂಡುವದಿಲ್ಲ. ನೀರಿನ ಸ್ಥಿತಿಗಳು ಬದಲಾಯಿಸಿದಂತೆ ಸೂರ್ಯನ ಪ್ರತಿಬಿಂಬದಲ್ಲಿಯೂ ಬದಲಾವಣೆಗಳು ತೋರುತ್ತವೆ. ಈ ಮಣ್ಣಿನ ಪಾತ್ರೆಗಳು ಅಥವಾ ಸ್ಥೂಲಶರೀರಗಳು ಸಸ್ಯರೂಪವೂ ಪ್ರಾಣಿರೂಪವೂ ಮನುಷ್ಯರೂಪವೂ ಆಗಿವೆ. ಸೂಕ್ಷ್ಮಶರೀರವು ನೀರಿನ ಘನಸ್ಥಿತಿ (ಮಂಜುಗಡ್ಡೆ)ಯಂತೆ ಅತಿಶಯ ಸ್ಥೂಲವಾಗಿಯೂ ಒರಟಾಗಿಯೂ ಅಸಂಸ್ಕೃತವಾಗಿಯೂ ಇರುವ ಕಾಲ ಒಂದಿದೆ. ಆ ಸ್ಥಿತಿಯಲ್ಲಿದ್ದಾಗ, ಎಂದಿನಂತೆ ಸೂರ್ಯನು ತಲೆಯ ಮೇಲೆ ಬೆಳಗುತ್ತಿದ್ದರೂ ಸೂರ್ಯನು ಅದರಲ್ಲಿ ಪ್ರತಿಫಲಿಸುವದಿಲ್ಲ. ಸಸ್ಯಗಳೂ ಪಶುಪ್ರಾಣಿಗಳೂ ಬೆಳೆದು ವಿಕಾಸಹೊಂದಿದರೂ ಅವುಗಳಲ್ಲಿ "ನಾನು ಇದನ್ನು ಮಾಡುತ್ತಿದ್ದೇನೆ" ಎಂಬ ಭಾವನೆ ಇರುವದಿಲ್ಲ. ಅವುಗಳಲ್ಲಿ ಕರ್ತೃತ್ವ ಭಾವನೆಯ ಛಾಯೆಯೂ ಸುಳಿವೂ ಇರುವದಿಲ್ಲ; ಅಥವಾ ಅವುಗಳಲ್ಲಿ ಆತ್ಮನ ಪ್ರತಿಬಿಂಬದ ಲೇಶವೂ ಗುರುತೂ ಇರುವದಿಲ್ಲ. ಇಡೀ ಪ್ರಕೃತಿ ಮಂಡಲದಲ್ಲಿ ಹೇಗೋ ಹಾಗೆ ಅವುಗಳಲ್ಲಿಯ ಎಲ್ಲಾ ಬೆಳವಣಿಗೆಯೂ ಅಭಿವೃದ್ಧಿಯೂ ಸೂರ್ಯನಿಂದಲೇ ಉಂಟಾಗುತ್ತವೆ. ಹಿಮಾಲಯದ ಶಿಖರಗಳಲ್ಲಿ ಮಂಜು ಗಡ್ಡೆಯು ಸಂಗ್ರಹವಾಗುವದಕ್ಕೂ ಕರಗುವದಕ್ಕೂ ಸೂರ್ಯನೇ ಕಾರಣವಾದರೂ ಅದರಲ್ಲಿ ಹೇಗೆ ಪ್ರತಿಫಲಿಸುವದಿಲ್ಲವೋ ಹಾಗೆ ಸಸ್ಯಗಳೂ ಪ್ರಾಣಿಗಳೂ ಆತ್ಮಸೂರ್ಯನಿಂದಲೇ ಅಭಿವೃದ್ಧಿಯನ್ನೂ ವಿಕಾಸವನ್ನೂ ಹೊಂದಿದರೂ ಆತ್ಮಸೂರ್ಯನ ಕಾರಕತ್ವವನ್ನೂ ಕರ್ತೃತವನ್ನೂ ಶಕ್ತಿಯನ್ನೂ ತೋರಿಕೆಯ ಅಲ್ಪದೇಹದಲ್ಲಿ ಅನ್ವಯಿಸಿಕೊಳ್ಳುವದಿಲ್ಲ. ಸ್ವರ್ಗದಿಂದ ಬೆಂಕಿಯನ್ನು ಕದ್ದುಕೊಂಡು ಬಂದ 'ಪ್ರೊಮೆಥಿಯಸ್'ನ ಕಾರ್ಯವು ಅವುಗಳಲ್ಲಿಲ್ಲ. "ನಾನು ಇದನ್ನು ಮಾಡುತ್ತೇನೆ, ಅದನ್ನು ಮಾಡುತ್ತೇನೆ" ಎಂಬ ಎಲ್ಲವನ್ನೂ ತನ್ನಲ್ಲಿಯೇ ಆರೋಪಿಸಿಕೊಳ್ಳುವ ವ್ಯಕ್ತಿತ್ವದ ಭಾವನೆ ಅವುಗಳಲ್ಲಿಲ್ಲ.

ಸೂಕ್ಷ್ಮ ಶರೀರದ ದ್ರವವು, ಸಸ್ಯಗಳು, ಪ್ರಾಣಿಗಳು ಎಂಬ ಕೀಳು ಬಗೆಯ ಪಾತ್ರೆಗಳಲ್ಲಿ ತುಂಬಿದ್ದು, ಹರಿದು, ಮನುಷ್ಯನೆಂಬ ಸುಂದರವಾದ ಪಾತ್ರೆಯನ್ನು ಸೇರುತ್ತದೆ. ಸೂಕ್ಷ್ಮ ದೇಹವು ಮನುಷ್ಯನೆಂಬ ಪಾತ್ರೆಯಲ್ಲಿ ಪಾರದರ್ಶಕವಾದ ತಿಳಿ ನೀರಿನ ರೂಪವನ್ನು ತಾಳುವದರಿಂದ, ಇದರಲ್ಲಿ 'ನಾನು ಕರ್ತೃ, ನಾನು ಭೋಕ್ತೃ' ಅಥವಾ "ನಾನೇ ಮಹಾ ಕರ್ತೃ, ನಾನೇ ಮಹಾ ಭೋಕ್ತೃ" ಎಂದು ಆತ್ಮ ಸೂರ್ಯನ ಪ್ರತಿಫಲನವಾಗುತ್ತದೆ. ಇಲ್ಲಿ, ಮೊದಲಿನಂತೆ ನಿಜವಾದ ಕರ್ತೃವು ಆತ್ಮಸೂರ್ಯನೇ ಆದರೂ ಮನುಷ್ಯನ ಸೂಕ್ಷ್ಮಶರೀರದಲ್ಲಿ ಅಹಂಕಾರದ ರೂಪದಿಂದ ಹೊಣೆಗಾರಿಕೆಯುಳ್ಳ ಕರ್ತೃ ಭಾವನೆ ಮೂಡುತ್ತದೆ. ಸಸ್ಯಗಳಲ್ಲಿಯೂ ಪ್ರಾಣಿಗಳಲ್ಲಿಯೂ 'ನಾನು' ಎನ್ನುವ ಆತ್ಮನ ಮಿಥ್ಯಾರೂಪವು – ಆಭಾಸರೂಪವು – ತೋರಿಕೊಳ್ಳದಿದ್ದರೂ

ಮನುಷ್ಯನಲ್ಲಿ ತೋರಿಕೊಳ್ಳುತ್ತದೆ. "ನಾನು ಮಾಡತಕ್ಕವನು" ಎನ್ನುವ ಭಾವವೇ ಸೂಕ್ಷ್ಮ ಶರೀರದ ದ್ರವರೂಪದಲ್ಲಿ ಮೂಡಿರುವ ಆತ್ಮಸೂರ್ಯನ ಪ್ರತಿಬಿಂಬವು ಈ ಅಹಂಕಾರವೇ ಚಿದಾಭಾಸವೇ ಚೈತನ್ಯದಂತೆ ತೋರುವಿಕೆಯೇ ಸುಳ್ಳು, ನಿಜವಲ್ಲ. ನಿಜವಾದ ಕರ್ತೃವು ದೇವರೇ; ಅವನೇ ಎಲ್ಲವನ್ನೂ ಮಾಡತಕ್ಕವನು. ನಿಜವಾದ ಹೊಣೆಗಾರಿಕೆಯುಳ್ಳ ಸ್ವಾಮಿಯು ಅವನೇ. (ಆದರೆ ಇದನ್ನು ತಿಳಿಯದೆ) ಅಜ್ಞಾನದಿಂದ ಮನುಷ್ಯನ ಸುಧಾರಿತವಾದ ಸೂಕ್ಷ್ಮಶರೀರವು ಆ ಜವಾಬ್ದಾರಿಯನ್ನು ತಾನೇ ತೆಗೆದುಕೊಂಡು ತನ್ನದೆಂಬಂತೆ ಅಭಿಮಾನಿಸಿ, ಆಲಂಗಿಸಿಕೊಳ್ಳುತ್ತದೆ. ಕರ್ತೃಭಾವನೆಯು ಈ ಕಲ್ಪನೆಯೇ ಮಿಥ್ಯಾ–ಭ್ರಾಂತಿಯು – ಜೀವಾತ್ಮನಾಗಿದೆ. ದ್ರವರೂಪ ವಸ್ತುವಿನಲ್ಲಿ ಮೂಡುವ ಪ್ರತಿಬಿಂಬವು ಹೇಗೆ ನಿಜವಲ್ಲವೋ ಹಾಗೆಯೇ ಈ ಅಹಂಕಾರವೂ ನಿಜವಲ್ಲ. ದೃಷ್ಟಿ (ದೃಗ್) ವಿಜ್ಞಾನಿಗಳು, ಕನ್ನಡಿಯಲ್ಲಿ ಆಗಲಿ ನೀರಿನಲ್ಲಿ ಆಗಲಿ ಮೂಡುವ ಪ್ರತಿಬಿಂಬವು ಬರಿ ತೋರಿಕೆಯೆಂದೂ ಭ್ರಮೆಯೆಂದೂ ಗಣಿತ ಶಾಸ್ತ್ರದ ಪ್ರಕಾರ ನಿಶ್ಚಿತವಾಗಿ ತೋರಿಸುತ್ತಾರೆ. ಹಾಗೆಯೇ ಹೊಣೆಗಾರಿಕೆಯನ್ನು ಹೊತ್ತಿರುವ ಈ ಸ್ವಾರ್ಥಮಯವಾದ ಅಹಂಕಾರವೂ ಕೇವಲ ಭ್ರಾಂತಿಯು, ತೋರಿಕೆ ಮಾತ್ರ, ನಿಜವಲ್ಲ. ಸೂರ್ಯನ ಮೂಲಕವೇ ದ್ರವವಸ್ತುವಿನಲ್ಲಿ ಅಥವಾ ಸೂಕ್ಷ್ಮಶರೀರದಲ್ಲಿ ವಿಕಾಸವಾಗುತ್ತದೆ. ಸೂಕ್ಷ್ಮಶರೀರವು ಸೂರ್ಯನ – ಆತ್ಮನ – ಪರಮಾತ್ಮನ – ಶಾಖ ಪ್ರಕಾಶಗಳನ್ನು (ಚೈತನ್ಯಶಕ್ತಿಯನ್ನು) ಹೆಚ್ಚು ಹೆಚ್ಚಾಗಿ ಅಳವಡಿಸಿಕೊಂಡು, ಹೀರಿಕೊಂಡು ತನ್ನ ಭೌತಿಕ ಉಪಾಧಿಯನ್ನು (ವಸ್ತುಸ್ಥಿತಿಯನ್ನು) ಸ್ಥೂಲರೂಪದಿಂದ ಹೆಚ್ಚು ಹೆಚ್ಚು ಸೂಕ್ಷ್ಮರೂಪವಾಗಿ ಪರಿವರ್ತಿಸಿಕೊಳ್ಳುತ್ತದೆ. ಸಾಮಾನ್ಯ ಮನುಷ್ಯನು ಆತ್ಮನ ಪ್ರಕಾಶವನ್ನೂ ಜ್ಞಾನವನ್ನೂ ಹೆಚ್ಚು ಹೆಚ್ಚಾಗಿ ಅರಗಿಸಿ ಕೊಳ್ಳುವದರಿಂದ ಅವನ ಸೂಕ್ಷ್ಮಶರೀರವು ಹೆಚ್ಚು ಸುಸಂಸ್ಕೃತವೂ ವಿಕಸಿತವೂ ಆಗುತ್ತದೆ. ಕೆಲವು ಕಾಲದಲ್ಲಿ ಅದು ಆವಿಯಾದಂತೆ ಆಗುವದರಿಂದ ಸ್ಥೂಲ ಶರೀರದ ಪಾತ್ರೆಯಲ್ಲಿದ್ದರೂ ಆತ್ಮ ಸೂರ್ಯನ ಪ್ರತಿಬಿಂಬವು ಅದರಲ್ಲಿ ಮೂಡುವದಿಲ್ಲ. ಪ್ರತಿಬಿಂಬವು ಸೂರ್ಯನಲ್ಲಿ ಒಂದಾದಂತೆ ಸುಳ್ಳು ಚಿದಾಭಾಸನು ನಿಜವಾದ ಆತ್ಮನಲ್ಲಿ ಒಂದಾಗುತ್ತಾನೆ. ಸಸ್ಯಗಳಲ್ಲಿಯೂ ಪ್ರಾಣಿಗಳಲ್ಲಿಯೂ ಹೊಣೆಗಾರಿಕೆಯ ಭಾವನೆಯೂ 'ನಾನು ಇದನ್ನು ಮಾಡುತ್ತೇನೆ', 'ನಾನು ನಿಮಗೆ ಹೆಚ್ಚಿನ ಉಪಕಾರ ಮಾಡಿರುವದರಿಂದ ನೀವು ನನಗೆ ಅತ್ಯಂತ ಕೃತಜ್ಞರಾಗಿರಬೇಕು.' ಈ ಮೊದಲಾದ ಭಾವನೆಗಳೂ ಇಲ್ಲದಿರುವಂತೆ ಅವನಲ್ಲಿಯೂ ಇರುವದಿಲ್ಲ. ಆತ್ಮನ ಪ್ರತಿಬಿಂಬವಾದ ಮಿಥ್ಯಾ ಆತ್ಮನು ಇನ್ನೇನೂ ತೋರುವದಿಲ್ಲ; ಕೃತಿಯಲ್ಲಿ ತನ್ನ ಹಕ್ಕನ್ನು ಭದ್ರಪಡಿಸುವ ವ್ಯಾಪಾರಿ ಮನೋಭಾವವು ತಪ್ಪಿದೆ; 'ನಾನು, ನನ್ನದು, ನಾನು, ನನ್ನದು, ಎನ್ನುವ ಸ್ವಾರ್ಥಮಯವಾದ ಅಹಂಕಾರವು ಕಳೆದಿದೆ.

ಸಾಮಾನ್ಯವಾಗಿ ಅನಿಲಗಳನ್ನು (Gases) ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಸುರಿಯಲಾಗುವದಿಲ್ಲ. ಘನ ವಸ್ತುಗಳನ್ನೂ ದ್ರವ ವಸ್ತುಗಳನ್ನೂ ಒಂದು

ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ವರ್ಗಾಯಿಸಬಹುದು. ಆದರೆ, ಅನಿಲವುಳ್ಳ ಪಾತ್ರೆಯನ್ನು ಒಡೆದರೆ ಅನಿಲವು ಗಾಳಿಯಲ್ಲಿ ಹರಡಿಕೊಂಡುಬಿಡುತ್ತದೆ. ಮುಂದೆ ಜನ್ಮವೇ ಬಾರದಿರುವ ಅತ್ಯಂತ ಸೂಕ್ಷ್ಮವೂ ಶುದ್ಧವೂ ಸುಸಂಸ್ಕೃತವೂ ಆದ ಸ್ಥಿತಿಯನ್ನು ಪಡೆಯುವದೇ ಹಿಂದೂ ಜನಾಂಗದ ಧ್ಯೇಯವಾಗಿದೆ. ಮುಂದೆ ಎಂದೆಂದಿಗೂ ಪುನಃ ಜನ್ಮವನ್ನು ಪಡೆಯದಿರುವ ಮುಕ್ತಿಯನ್ನು ಸಂಪಾದಿಸತಕ್ಕ ಮಗುವನ್ನು ಪಡೆಯುವದೇ ಹಿಂದೂ ತಾಯಿಯ ಅತ್ಯುನ್ನತವಾದ ಮಹತ್ವಾಕಾಂಕ್ಷೆಯಾಗಿದೆ.

## ಸೂಕ್ಷ್ಮಶರೀರ

ಪ್ರಶ್ನೆ: ಮುಕ್ತನಾದ ಮನುಷ್ಯನ ದೇಹವು ನಾಶವಾದ ಮೇಲೆ (ಸತ್ತಮೇಲೆ) ಅವನ ಆತ್ಮವು ಸೂಕ್ಷ್ಮಶರೀರದಿಂದ ಜೀವಿಸಿರುವದೆ? ಅಥವಾ ಬ್ರಹ್ಮದಲ್ಲಿ ಲೀನವಾಗುವದೆ?

ಉತ್ತರ: ಪಾತ್ರೆಯಿಂದ ಹೊರಬಿಡಲ್ಪಟ್ಟ ಅನಿಲವು ಇಡೀ ವಿಶ್ವವನ್ನೇ ತುಂಬಿಕೊಳ್ಳುತ್ತದೆ. ಮುಕ್ತ ಪುರುಷನ ಸೂಕ್ಷ್ಮದೇಹವು ಪ್ರಪಂಚದ ದೇಹವಾಗುತ್ತದೆ; ಅಥವಾ ಪ್ರಪಂಚವೇ ಅವನ ದೇಹವಾಗುತ್ತದೆ.

ಪ್ರಶ್ನೆ: ಸೂಕ್ಷ್ಮಶರೀರವು ಯಾವದರಿಂದ ರಚನೆಯಾಗಿದೆ?

ಉತ್ತರ: ಸೂಕ್ಷ್ಮಶರೀರದಲ್ಲಿ ಅನುರಾಗವೂ ಬಯಕೆಗಳೂ ಭಾವನೆಗಳೂ ಕಾಮವೂ ವೇದನೆಗಳೂ ಆಲೋಚನೆಗಳೂ ಇವೆ. ಮುಕ್ತಾತ್ಮನ ಬಯಕೆಗಳು ವೈಯಕ್ತಿಕವಾದುವಲ್ಲ. ಅವುಗಳಲ್ಲಿ ಸ್ವಾರ್ಥದ ಕಳಂಕವಿಲ್ಲ. ನಿಸ್ವಾರ್ಥವೂ ವ್ಯಕ್ತಿದೃಷ್ಟಿರಹಿತವೂ ವಿಶ್ವಹಿತಾಸಕ್ತಿಸಹಿತವೂ ಆದ ಬಯಕೆಗಳುಳ್ಳ ಮುಕ್ತಾತ್ಮನ ಸೂಕ್ಷ್ಮಶರೀರವು ಅನಿಲ ಸ್ಥಿತಿಯನ್ನು ಪಡೆದಂತೆ ಇರುತ್ತದೆ. ಈ ಅನಿಲವನ್ನು ಹಿಡಿದುಕೊಂಡಿರುವ ಸ್ಥೂಲ ಪಾತ್ರೆಯು ಒಡೆದುಹೋದರೆ, ಅನಿಲವು ನಿಬಿಡವಾಗಿ ಒಟ್ಟುಗೂಡಿದ ಒಂದು ರಾಶಿಯಾಗಿ ಉಳಿಯದೆ, ವಿಶ್ವದ ತುಂಬಾ ತುಂಬಿಕೊಳ್ಳುವಂತೆ ಮುಕ್ತಪುರುಷನ ಸೂಕ್ಷ್ಮಶರೀರವೂ ವಿಶ್ವವನ್ನೇ ವ್ಯಾಪಿಸಿಕೊಳ್ಳುತ್ತದೆ.

ಪರ್ಷಿಯಾ ದೇಶದ ಹಿರಿಯ ರಾಜನಾದ ಸೈರಸ್‌ನ ವಿಷಯವಾಗಿ ಹೀಗೆ ಹೇಳಿದೆ: ಅವನು ಪ್ರಪಂಚದಲ್ಲಿ ಜೀವಿಸಿರುವವರೆಗೂ ಜನರ ಹಿತಕ್ಕಾಗಿಯೂ ಸೇವೆಗಾಗಿಯೂ ಇದ್ದನು. ಅವನು ಸಾಯುವಾಗ ತನ್ನ ಇಚ್ಛಾ ಪತ್ರದಲ್ಲಿ "ಸತ್ತ ಮೇಲೆ ನನ್ನ ಶರೀರವನ್ನು ಭವ್ಯವಾದ ಒಂದು ಸಮಾಧಿಯಲ್ಲಿ ಇರಿಸುವದು ಬೇಡ. ಅದನ್ನು ಕಡಿದು ಕೊಚ್ಚಿಕೊಚ್ಚಿ ಸಣ್ಣ ತುಂಡುಗಳನ್ನು ಮಾಡಿ ಅದು ಗೊಬ್ಬರವಾಗಿ ಪರಿಣಮಿಸಲು ಪರ್ಷಿಯಾದ ರಾಜ್ಯದ ತುಂಬಾ ಹಂಚಲ್ಪಡಲಿ" ಎಂದು ಬರೆಸಿದನಂತೆ. ಮುಕ್ತಾತ್ಮನ ಸೂಕ್ಷ್ಮ

ಶರೀರಕ್ಕೆ ಆಗುವ ಪರಿಣಾಮವು ಖಂಡಿತವಾಗಿ ಇದೇ ಸರಿ. ಮರಣಾನಂತರ ಅವನ ಸೂಕ್ಷ್ಮಶರೀರವು ಇಡೀ ವಿಶ್ವದ ತುಂಬಾ ಪ್ರಸರಣವಾಗುತ್ತದೆ. ಪ್ರತಿಯೊಬ್ಬನೂ ಅವನ ಹಂಚಿಕೆಯಲ್ಲಿ ಭಾಗಿಯಾಗುತ್ತಾನೆ. ಅವನ ಮಾಂಸವನ್ನು ಸೇವಿಸಿ, ರಕ್ತವನ್ನು ಪಾನಮಾಡುತ್ತಾನೆ. ಸಣ್ಣದಾಗಿ ಕತ್ತರಿಸಲ್ಪಟ್ಟ ಅವನ ಸೂಕ್ಷ್ಮಶರೀರವು ಇಡೀ ಜಗತ್ತಿನಿಂದ ಸೇವಿಸಲ್ಪಡುತ್ತದೆ. ಇಲ್ಲಿ ಅಹಂಕಾರವು ಗಾಳಿಗೆ ತೂರಲ್ಪಟ್ಟಿದೆ. ಅವನು ಬಾಯಿ ಬಿಟ್ಟು ಉಪದೇಶಮಾಡಲಿ ಮಾಡದಿರಲಿ, ಅವನು ಗ್ರಂಥಗಳನ್ನು ಬರೆಯಲಿ ಬರೆಯದಿರಲಿ, ಅವನು ಸಾರ್ವಜನಿಕ ವೇದಿಕೆಯ ಮೇಲೆ ಬರಲಿ ಬಾರದಿರಲಿ, ಮಾನವ ಜನಾಂಗವನ್ನು ಆಶ್ಚರ್ಯಕರವಾಗಿ ಸೇವಿಸುತ್ತಾನೆ. ಅವನು ಅದ್ಭುತ ಸುಧಾರಕನು. ರಾಜಾಧಿರಾಜರ ಭಾಗ್ಯಭಂಡಾರದಲ್ಲಿಯಾದರೂ ಅವನು ಬಯಸಬಹುದಾದುದು ಏನೂ ಇಲ್ಲ. ಪ್ರಪಂಚದಲ್ಲಿರುವ ಯಾವ ಗ್ರಂಥಗಳೂ ವೇದಗಳೂ ಬೈಬಲ್‌ಗಳೂ ಅವನಿಗೆ ಏನನ್ನೂ ತಿಳಿಸಬೇಕಾಗಿಲ್ಲ. ಮಹಾರಾಜರುಗಳ ಅಥವಾ ಮಹಾ ದುಷ್ಟ ಪ್ರಭುಗಳ ಅನುಗ್ರಹವಾಗಲೀ ಆಗ್ರಹವಾಗಲೀ ಅವನಿಗೆ ಅರ್ಥಹೀನವಾಗಿರುತ್ತವೆ. ಅವನು ಜೀವಿಸಿರುವವರೆಗೂ ಅವನ ದಯಾಮಯವಾದ ಸಾನ್ನಿಧ್ಯವೂ ಪವಿತ್ರವಾದ ದೃಷ್ಟಿಯೂ ಪರಿಶುದ್ಧಿಯನ್ನೂ ಸುಖವನ್ನೂ ಪ್ರಸರಿಸುತ್ತದೆ. ಅವನು ನಿಧನ ಹೊಂದಿದರೆ ಪ್ರಪಂಚವು ಆಶ್ಚರ್ಯಕರವಾಗಿ ಸುಧಾರಣೆ ಹೊಂದುತ್ತದೆ.

ಸೂರ್ಯನ ಶಾಖದಿಂದ ಈ ಸ್ಥಳದಲ್ಲಿರುವ ಗಾಳಿಯು ವಿರಳವಾದರೆ ಅದು ಸ್ವಾಭಾವಿಕವಾಗಿ ಮೇಲೇರುತ್ತದೆ ; ಇಲ್ಲಿ ಅದರ ಸ್ಥಳವು ಖಾಲಿ ಆಗುತ್ತದೆ. ಈ ಖಾಲಿ ಆದ ಸ್ಥಳವನ್ನು ತುಂಬಿಕೊಳ್ಳಲು ಸುತ್ತಲೆಲ್ಲಾ ಕಡೆಗಳಿಂದಲೂ ಗಾಳಿಯು ನುಗ್ಗಿ ಬರುತ್ತದೆ. ಹೀಗೆ ಇಡೀ ವಾತಾವರಣದ ತುಂಬಾ ಚಲನೆಗಳೂ ಪರಿಭ್ರಮಣೆಗಳೂ ಉಂಟಾಗುತ್ತವೆ. ಯಾವ ಮನುಷ್ಯನು ದೇಹದ ವಿಷಯದಲ್ಲಿ ಎಂದಿಗೂ ಏನನ್ನೂ ಆಲೋಚಿಸುವದಿಲ್ಲವೋ ಯಾವ ಬಯಕೆಯನ್ನೂ ಉಳ್ಳವನಾಗಿಲ್ಲವೋ ಪೂರ್ಣನಾಗಿದ್ದಾನೆಯೋ ಅವನು ಪುನಃ ಹುಟ್ಟುವದಿಲ್ಲ. ಆವನು ಸತ್ತ ಮೇಲೆ,— ಆತ್ಮಜ್ಞಾನವನ್ನು ಆಳವಾಗಿ ಪಾನಮಾಡಿ ಸತ್ಯವನ್ನು (ಶಾಖವನ್ನು) ಅಥವಾ ಪ್ರಕಾಶವನ್ನು ಹೀರಿಕೊಂಡಿರುವ—ಅವನ ಸೂಕ್ಷ್ಮಶರೀರವು, ವಿಶ್ವದಲ್ಲಿರುವ ತನ್ನ ಸ್ಥಾನವನ್ನು ಖಾಲಿಮಾಡಿ, ವಿರಳವಾದ ಗಾಳಿಯಂತೆ ಈ ಪ್ರಪಂಚವನ್ನು ಬಿಟ್ಟು ಮೇಲೇರುತ್ತದೆ. ಅವನಿಗೆ ಪುನರ್ಜನ್ಮವಿಲ್ಲವಾದ್ದರಿಂದ, ಅವನಿಂದ ಬರಿದಾದ ಸ್ಥಳವನ್ನು, ಒಂದು ದೈವೀ ನಿಯಮದ ಪ್ರಕಾರ, ಅವನಿಗೆ ಅತ್ಯಂತ ಸಮೀಪವಾಗಿರುವ ಭಕ್ತರು, ಅವನ ಸ್ಥಳವನ್ನು ತುಂಬುವದಕ್ಕಾಗಿ, ಮನಶ್ಶುದ್ಧಿಯಿಂದಲೂ ಪ್ರೇಮದಿಂದಲೂ ಜ್ಞಾನದಿಂದಲೂ ಮೇಲೆ ಎತ್ತಲ್ಪಡುವರು. ಆಗ ಅವರಿಂದ ತೆರವಾದ ಸ್ಥಳವನ್ನು ತುಂಬುವದಕ್ಕಾಗಿ ಅವರಿಗೆ ಅತ್ಯಂತ ಸಮೀಪರಾದ ಸಾಧಕರ ಉದ್ಧಾರದಿಂದಲೂ ಅವರ ಸ್ಥಳವನ್ನು ಅವರಿಗೆ ಅತ್ಯಂತ ಸಮೀಪರಾದ ಯೋಗಿಗಳ ಉನ್ನತಿಯಿಂದಲೂ ಹೀಗೆ ಇಡೀ ಜಗತ್ತೇ—ಸಂಸ್ಕಾರ—ಸಂಬಂಧವುಳ್ಳ, ಅಧಿಕಾರಿಗಳ ಯೋಗ್ಯತೆಯ ತಾರತಮ್ಯದಂತೆ—

ಉದ್ಧಾರವನ್ನು ಪಡೆಯುತ್ತದೆ. ಹೀಗೆ ಜೀವನ್ಮುಕ್ತನ ನಿಧನದಿಂದಲೂ ಪ್ರಪಂಚವೇ (ಸ್ವಯಂ) ಸಂಚಲಿತವಾಗುತ್ತದೆ. ಇವನು ಆಶ್ಚರ್ಯಕರವೂ ಅದ್ಭುತವೂ ಆದ ಸುಧಾರಕನು. ಬ್ರಹ್ಮನಿಷ್ಠ ಜೀವನ್ಮುಕ್ತನು ಬಾಯಿ ಬಿಚ್ಚದಿದ್ದರೂ ಪ್ರಪಂಚವು ಅವನಿಂದ ಉನ್ನತಿಯನ್ನು ಪಡೆಯುತ್ತದೆ.

ಪ್ರಸಿದ್ಧ ವಿಜ್ಞಾನಿಯಾದ ಆರ್ಕಿಮಿಡಿಸ್‌ನು (Archimedes), "I will move the world if I get a stand-point" "ನಾನು ನಿಲ್ಲುವದಕ್ಕೆ ಭದ್ರವಾದ ಅವಸ್ಥಾನ ಒಂದು ಸಿಕ್ಕರೆ, ಜಗತ್ತನ್ನೇ ಅಲ್ಲಾಡಿಸಿಬಿಡುತ್ತೇನೆ" ಎಂದು ಹೇಳಿದ್ದನು. ಮೀಟುಕೋಲಿನಿಂದ ಎತ್ತಿ ಎಸೆಯುವದಕ್ಕೆ ಅವನಿಗೆ ಸ್ಥಿರವೂ ಭದ್ರವೂ ಆದ ಆಧಾರವು ಸಿಕ್ಕಲಿಲ್ಲ. ಆ ಸ್ಥಿರವಾದ ಆಧಾರಬಿಂದುವು ನಿಮ್ಮ ಒಳಗೇ ಇದೆ, ಎಂದು ವೇದಾಂತವು ಹೇಳುತ್ತದೆ. ಅದೇ ಆತ್ಮ. ಅದನ್ನೇ ಬಲವಾಗಿ ಹಿಡಿದರೆ, ಇಡೀ ಪ್ರಪಂಚವನ್ನೇ ನೀವು ಅಲ್ಲಾಡಿಸುತ್ತೀರಿ.

ಸುಳ್ಳಾದ ಜೀವಾತ್ಮನ ವಿಷಯಕ್ಕೆ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಪಾತ್ರೆಯಲ್ಲಿರುವ ದ್ರವವಸ್ತುವಿನಲ್ಲಿ ಸೂರ್ಯನ ಪ್ರತಿಬಿಂಬವಿದೆ. ಈ ಪ್ರತಿಬಿಂಬವು ಸುಳ್ಳೆಂದು ವಿಜ್ಞಾನವೂ ದೃಷ್ಟಿವಿಜ್ಞಾನವೂ ಸಾಧಿಸಿ, ತೋರಿಸುತ್ತವೆ. ಏಕೆಂದರೆ ಎಲ್ಲಾ ಬೆಳಕೂ ಹೊರಗಿದೆ, ದ್ರವವಸ್ತುವಿನಲ್ಲಿರುವ ಪ್ರತಿಬಿಂಬವು ಬೆಳಕಿನ ಪರಾವರ್ತನೆಯು ಮಾತ್ರ. ಪ್ರತಿಬಿಂಬವು ನಮ್ಮ ಸ್ವಂತ ಅನುಮಾನವು, ಊಹೆಯು; ಅದು ನಮ್ಮ ಇಂದ್ರಿಯಗಳ ತಂತ್ರವು – ಇಂದ್ರಜಾಲವು ಮಾತ್ರ; ನೀರಿನಲ್ಲಿ ಆಗಲೀ ಕನ್ನಡಿಯಲ್ಲಿ ಆಗಲೀ ಅದೇನೂ ಇಲ್ಲ. ಪ್ರತಿಬಿಂಬವು ನಮ್ಮ ಭ್ರಾಂತಿಯೇ ಹೊರತು ಬೇರೇನೂ ಇಲ್ಲ. ನೀರು (ಅಥವಾ ದ್ರವ ಪದಾರ್ಥವು) ಅಲ್ಲಾಡಿದರೆ ಅದರಲ್ಲಿರುವ ಪ್ರತಿಬಿಂಬವೂ ಅಲ್ಲಾಡಿದಂತೆ ತೋರುತ್ತದೆ ; ನೀರು ಎಷ್ಟೆಷ್ಟು ಅಲ್ಲಾಡುವದೋ ಅಷ್ಟಷ್ಟು ಆ ತೋರಿಕೆಯ ಪ್ರತಿಬಿಂಬವೂ ಅಲ್ಲಾಡಿದಂತೆ ಕಾಣುತ್ತದೆ.

ಬದುಕಿರುವವರೆಗೆ ನಿಮಿಷವೂ ನಿಲ್ಲದಂತೆ ನಿರಂತರವಾಗಿ ಉಸಿರಾಡುವದೂ ರಕ್ತ ಸಂಚಾರವಾಗುವದೂ ಹೃದಯ ಸ್ಫುರಣವಾಗುವದೂ ಆಹಾರ ಪಚನವಾಗುವದೂ ಕೂದಲು ಬೆಳೆಯುವದೂ ಒಟ್ಟಿನ ದೇಹವು ಬೆಳೆಯುವದೂ ಯಾವ ಶಕ್ತಿಯಿಂದ? "ನಾನು, ನಾನು" ಎಂದು ಅಭಿಮಾನದಿಂದ ಸಾಧಿಸುವ 'ನನ್ನದು, ನನ್ನದು' ಎಂದು ಹಕ್ಕು ಬಾಧ್ಯತೆಯನ್ನು ಸ್ಥಾಪಿಸುವ ಅಲ್ಪವಾದ ಈ ಸುಳ್ಳು ಅಹಂಕಾರವು–ಜೀವಾತ್ಮವು – ಆ ಶಕ್ತಿಯಾಗಬಲ್ಲದೆ? ಎಂದೆಂದಿಗೂ ಇಲ್ಲ. ಹೊಣೆಗಾರಿಕೆಯನ್ನು ಹೊತ್ತಿರುವಂತೆ ತೋರುವ ಈ ಕ್ಷುದ್ರವಾದ ಅಹಂಕಾರವು ಮೆದುಳಿನಿಂದ ಆಲೋಚಿಸುವಂತೆ ಮಾಡಬಲ್ಲದೆ? ಭ್ರಮಾತ್ಮಕವಾದ ಈ ಜೀವಾತ್ಮನನ್ನು ಕಳೆದುಕೊಳ್ಳಿ; ನಿಮ್ಮ ನಿಜವಾದ ಆತ್ಮನನ್ನು ಅನುಭವದಿಂದ ಮನಗಾಣಿರಿ. ನೀವೇ ವಿಶ್ವದ ಪ್ರಭುಗಳು; ನೀವೇ ಪ್ರಕಾಶಗಳಿಗೆಲ್ಲಾ ಪ್ರಕಾಶ, ಪವಿತ್ರಗಳಿಗೆಲ್ಲಾ ಪವಿತ್ರ.

ಗಾಢ ನಿದ್ರೆಯಲ್ಲಿ ಸೂಕ್ಷ್ಮ ಶರೀರವು ಸ್ವಲ್ಪ ಹೊತ್ತು ಘನಸ್ಥಿತಿಯನ್ನು ಪಡೆದಂತೆ ಜಡವಾಗಿ ಬಿದ್ದಿರುತ್ತದೆ. ಆಗ ರಕ್ತವು ಪ್ರವಹಿಸುತ್ತದೆ; ಆಹಾರವು ಜೀರ್ಣವಾಗುತ್ತದೆ;......... ಆದರೆ ಆಗ "ನಾನು ಆಹಾರವನ್ನು ಜೀರ್ಣಿಸಿಕೊಳ್ಳುತ್ತಿದ್ದೇನೆ" ಎಂಬ ಭಾವನೆಯಿರುವದಿಲ್ಲ. ಅನಂತರ ಸೂಕ್ಷ್ಮಶರೀರವು ಘನಸ್ಥಿತಿಯಿಂದ ಕರಗಿ ಸ್ವಪ್ನಾವಸ್ಥೆಯಲ್ಲಿ ದ್ರವವಾಗಿ ಹರಿಯುತ್ತದೆ. ಆಗ ಆತ್ಮಸೂರ್ಯನು ಪ್ರತಿಫಲಿಸುವದಕ್ಕೆ ತೊಡಗುವದರಿಂದ ನೀವು "ನಾನು ಅದನ್ನು ಬಯಸುತ್ತೇನೆ; ನಾನು ಇದನ್ನು ಮಾಡಿ, ಇದನ್ನು ಅನುಭವಿಸುತ್ತೇನೆ" ಎಂದು ಭಾವಿಸುತ್ತೀರಿ. ಆ ಸ್ವಾರ್ಥಪರವೂ ಜವಾಬ್ದಾರಿಯನ್ನು ಹೊತ್ತಿರುವದೂ ಬಯಕೆಯುಳ್ಳದ್ದೂ ಆದ ಪ್ರತಿಬಿಂಬರೂಪ ಜೀವಾತ್ಮವು ಪುನಃ ನಿಮಗೆ ಗಂಟುಬೀಳುತ್ತದೆ. ಈ ಸ್ವಾರ್ಥಮಯವಾದ ವ್ಯಕ್ತಿತ್ವವು ನಿಜವಾಗಿದ್ದರೆ ಅದು ಎಡೆಬಿಡದೆ ಮೂರು ಅವಸ್ಥೆಗಳಲ್ಲಿಯೂ ಒಂದೇ ರೂಪವಾಗಿ ನಿಮ್ಮಲ್ಲಿ ಇರುತ್ತಿತ್ತು. ಅದು ಗಾಢ ನಿದ್ರೆಯಲ್ಲಿ ಏಕೆ ಉಳಿಯಲಿಲ್ಲ? ಈ 'ನಾನು' ಎನ್ನುವದು ಗಾಢ ನಿದ್ರೆಯಲ್ಲಿ ಇಲ್ಲವೆಂಬದೇ ಗೌರವವನ್ನೂ ಸ್ತುತಿಯನ್ನೂ ಖ್ಯಾತಿಯನ್ನೂ ಬಯಸುವ 'ಅಹಂ' ಕಾರವು ಭ್ರಾಂತಿಯು ಮಾತ್ರ ಎನ್ನುವದನ್ನು ತೋರಿಸುತ್ತದೆ. ಅದನ್ನು ಮೀರಿ ಮೇಲೇಳಿರಿ. ನೀವೇ ಸೂರ್ಯರುಗಳಿಗೆಲ್ಲಾ ಸೂರ್ಯರು, ನೀವೇ ಪೂರ್ಣಾನಂದ ಸ್ವರೂಪರು, ಸತ್ಯ ಸ್ವರೂಪರು, ಹೊರತು ಬೇರೆಯಲ್ಲ.

ಜನಸಾಮಾನ್ಯರಲ್ಲಿರುವ ಕಷ್ಟವೇನೆಂದರೆ, ಈ ಮಿಥ್ಯೆಯಾದ ಅಹಂಕಾರವನ್ನೇ ಈ ಸುಳ್ಳಾದ ಪ್ರತಿಬಿಂಬವನ್ನೇ ತಾವೆಂದು ತಿಳಿಯುತ್ತಾರೆ. ಅದನ್ನು ಬಿಡುವದು ಅವರಿಗೆ ಸಾಧ್ಯವೇ ಇಲ್ಲ. ಎಲ್ಲಾ ಅಶಾಂತಿಗೂ ಇದೇ ಕಾರಣ.

ನೀರು ಹರಿಯುತ್ತದೆ. ಅದರಲ್ಲಿ ಅಲೆಗಳೂ ಸುಳಿಗಳೂ ದೊಡ್ಡ ತೆರೆಗಳೂ ಗುಳ್ಳೆಗಳೂ ಇರುತ್ತವೆ. ಆದರೆ ಎಲ್ಲಕ್ಕೂ ಕಾರಣವು ಸೂರ್ಯನೇ ಹೊರತು ನೀರಿನಲ್ಲಿರುವ ಪ್ರತಿಬಿಂಬವಲ್ಲ. ನೀರು ಕಲಕಿ ಕಲ್ಲೋಲವಾದಷ್ಟು ಅದರಲ್ಲಿರುವ ಪ್ರತಿಬಿಂಬವೂ ಕುಲುಕಿ ಚೆಲ್ಲಾಡಿದಂತೆ ತೋರುತ್ತದೆ. ಹೀಗೆಯೇ ಸೂಕ್ಷ್ಮ ಶರೀರವು ನೀರಿನಂತಿದೆ. ನಿಜಾತ್ಮನ ಶಕ್ತಿಯ ಮೂಲಕ ಅದು ಅಲ್ಲಾಡಬೇಕು, ಅಲೆಗಳಾಗಬೇಕು. ಆದರೂ ನೀರಿನಲ್ಲಿ ತೋರುವ ಪ್ರತಿಬಿಂಬರೂಪ ಮಿಥ್ಯಾ ಆತ್ಮನು ಅದರಲ್ಲಿರುವ ಕ್ಷುಬ್ಧತೆಗೆಲ್ಲಾ ತಾನೇ ಕಾರಣನೆಂದು ಪ್ರಕ್ಷುಬ್ಧನಾಗುತ್ತಾನೆ. ನೀರಿನಲ್ಲಿ ತೋರುವ ಪ್ರತಿಫಲನವೆಂದರೆ ದೇಹವೂ ಇಂದ್ರಿಯಗಳೂ ಪ್ರಾಣವೂ ಮನಸ್ಸೂ ಅಹಂಕಾರವೂ ತಾನು—ಎಂದುಕೊಳ್ಳುವದು. ದೇಹಕ್ಕೆ ಕಾಯಿಲೆಯಾದರೆ "ನನಗೆ ಕಾಯಿಲೆಯಾಗಿದೆ; ನಾನು ಕಾಯಿಲೆ ಮನುಷ್ಯ." ಎಂದು ನೀವು ಹೇಳುತ್ತೀರಿ. ನೀವು ದೇಹವೆಂದೂ ಮನಸ್ಸೆಂದೂ ತಿಳಿಯುವದೇ ಇದಕ್ಕೆ ಕಾರಣ. ವೇದಾಂತವು "ಈ ಸುಳ್ಳು ತಾದಾತ್ಮ್ಯಭಾವವನ್ನು ಬಿಟ್ಟುಬಿಡಿ, ನೀವು ಸರಿಯಾಗುತ್ತೀರಿ" ಎಂದು ಹೇಳುತ್ತದೆ. ದೇಹದಲ್ಲಿಯಾಗಲೀ

ಮನಸ್ಸಿನಲ್ಲಿಯಾಗಲೀ ಏನು ಹೆಚ್ಚು ಕಡಿಮೆಯಾದರೂ ನಿಮ್ಮಲ್ಲಿ ಕಳವಳವಾಗಬಾರದು. ನಿಮ್ಮ ಎಲ್ಲಾ ದುಃಖಕ್ಕೂ ಈ ಸುಳ್ಳು ಜೀವಾತ್ಮನ ಸುಳ್ಳು ಭಾವಾತಿರೇಕವೇ ಕಾರಣ.

ಪ್ರಶ್ನೆ: ಭೌತಿಕ ಶರೀರದಲ್ಲಿರುವಾಗ ಆತ್ಮವು ಪೂರ್ಣವಾಗಿ ವ್ಯಕ್ತವಾಗ ಬಲ್ಲದೆ?

ಉತ್ತರ: ಆತ್ಮ ಎಂಬುವ ಶಬ್ದಕ್ಕೆ ನೀವು ಯಾವ ಅರ್ಥವನ್ನು ಕೊಡು ತ್ತೀರೋ ಅದರ ಮೇಲೆ ಉತ್ತರವು ಅವಲಂಬಿಸಿರುತ್ತದೆ. ಆತ್ಮ ಎಂದರೆ ಏನು? ಮನಸ್ಸು ಆತ್ಮವೆ? ಬರ್ಕ್ಲೆ (Berkeley), ಮಿಲ್ (Mill) ಹ್ಯಮಿಲ್‌ಟನ್ (Hamilton), ರೈಡ್ (Reid)— ಇವರೆಲ್ಲರೂ ಮನಸ್ಸೇ ಆತ್ಮನೆಂದು ಹೇಳುತ್ತಾರೆ. ಈ ಅರ್ಥದಲ್ಲಿ ಆತ್ಮನ ಪ್ರಗತಿಯೂ ಮುನ್ನಡೆಯೂ ಅನಿಶ್ಚಿತವಾಗುತ್ತದೆ. ಆತ್ಮ ಎಂಬ ಶಬ್ದಕ್ಕೆ ಮನುಷ್ಯನಲ್ಲಿರುವ ಸತ್ಯದ ಪ್ರತಿಬಿಂಬ ಎಂದು ಅರ್ಥ ಮಾಡುವದಾದರೆ ಈ ಪ್ರಶ್ನೆಯು ಹೊಂದಿಕೆಯಾಗುವದಿಲ್ಲ. ಆತ್ಮ ಎಂಬ ಶಬ್ದಕ್ಕೆ ನಿಜವಾದ ಆತ್ಮ ಎಂದೇ ಅರ್ಥಮಾಡುವದಾದರೆ ಆತ್ಮನಲ್ಲಿ ಯಾವ ಬದಲಾವಣೆಗೂ ಪ್ರಗತಿಗೂ ಅವಕಾಶವೇ ಇಲ್ಲ; ಅದು ಸಾಧ್ಯವೇ ಅಲ್ಲ. ಆದರೆ ಸಾಮಾನ್ಯವಾಗಿ ಬಹುಜನರ ಭಾವನೆಯಲ್ಲಿ ಆತ್ಮ ಎಂದರೆ ಅದೊಂದು ಬರಿ ಕಾಲ್ಪನಿಕ ಸೃಷ್ಟಿ, ಬರಿ ಹೆಸರು, ಯಾವ ನಿಶ್ಚಿತಾರ್ಥವೂ ಇಲ್ಲದ ಭ್ರಾಂತಿ. ಈ ಜನರು ಆ ವಿಷಯಕ್ಕೆ ಬೇಕಾದರೆ, ತಮ್ಮದೇ ಆದ ವಾದಗಳನ್ನು ರೂಪಿಸಿ ಕೊಳ್ಳಬಹುದು.

ಓಂ! ಓಂ! ಓಂ!

# IMPORTANT QUESTIONS ON VEDANTA II

# ವೇದಾಂತದಲ್ಲಿ ಮುಖ್ಯವಾದ ಪ್ರಶ್ನೆಗಳು-II

## ತಾ|| 26-2-1903ರಲ್ಲಿ ಅಮೆರಿಕಾದಲ್ಲಿ ಮಾಡಿದ ಉಪನ್ಯಾಸ

ಸಜ್ಜನರಾದ ಸ್ತ್ರೀಪುರುಷರಲ್ಲಿರುವ ನನ್ನ ಆತ್ಮವೆ,

ಇವತ್ತು ರಾಮನು ವೇದಾಂತದ ಕೆಲವು ಪ್ರಶ್ನೆಗಳಿಗೆ ಉತ್ತರ ನೀಡುತ್ತಾನೆ.

ಪ್ರಶ್ನೆ: "ಈ ಶರೀರವು ನಾನಲ್ಲ, ನಾನು ಆತ್ಮ, ಆತ್ಮನೇ ನಾನು" ಹೀಗೆ ಹೇಳುವದು ಯಾವದು?

ಉತ್ತರ: ನಿಜವಾದ ಆತ್ಮನಲ್ಲಿ ಶಬ್ದಗಳೇ ಇಲ್ಲ. ನಿಜವಾದ ಆತ್ಮನ ದೃಷ್ಟಿಯಿಂದ "ನಾನು ಇದಾಗಿದ್ದೇನೆ, ಅದಾಗಿದ್ದೇನೆ, ನಾನು ಬ್ರಹ್ಮವಾಗಿದ್ದೇನೆ" ಎಂದು ಹೇಳಲು ಸಾಧ್ಯವೇ ಇಲ್ಲ. ಯಾವ ಶಬ್ದವೂ ನಿಜವಾದ ಆತ್ಮನನ್ನು ಮುಟ್ಟಲಾರದು. ಆತ್ಮನು ಎಲ್ಲಾ ಶಬ್ದಗಳನ್ನೂ ಮೀರಿದ್ದಾನೆ. ಆದ್ದರಿಂದ "ನಾನು ಬ್ರಹ್ಮವಾಗಿದ್ದೇನೆ; ನಾನು ಆತ್ಮನಾಗಿದ್ದೇನೆ; ನಾನು ದೇವರು" ಮೊದಲಾಗಿ ಯಾವ ಮಾತನ್ನೂ ಆತ್ಮನು ಆಡಲಾರನು. ಈ ಮಾತನ್ನು ಬುದ್ಧಿಯು (ಸೂಕ್ಷ್ಮ ಶರೀರವು) ಹೇಳಬಹುದು. ಪ್ರಶ್ನೆ ಏನೆಂದರೆ, ಮನಸ್ಸು ಅಥವಾ ಬುದ್ಧಿಯು "ನಾನು ಬ್ರಹ್ಮವಾಗಿದ್ದೇನೆ; ನಾನು ದೇವರಾಗಿದ್ದೇನೆ" ಎಂದು ಹೇಳಿದರೆ, ಸರಿಯೇ? ನ್ಯಾಯವೇ? ಬುದ್ಧಿಯು ತಾನು ಬ್ರಹ್ಮವೆಂದು ಹೇಳಿಕೊಳ್ಳುವದು ತಪ್ಪಲ್ಲವೆ? ಇದಕ್ಕೆ ವೇದಾಂತವು ಹೇಳುವದೇನೆಂದರೆ, ಒಂದು ದೃಷ್ಟಿಯಿಂದ ನೋಡಿದರೆ ಮನಸ್ಸೂ ಬುದ್ಧಿಯೂ ಬ್ರಹ್ಮವಲ್ಲ; ಆದರೆ ಇನ್ನೊಂದು ದೃಷ್ಟಿಯಿಂದ ವಿಚಾರ ಮಾಡಿದರೆ ಮನಸ್ಸೂ ಬುದ್ಧಿಯೂ ಬ್ರಹ್ಮದ ಹೊರತು ಬೇರೆಯಲ್ಲ. ಸ್ಥೂಲ ದೇಹವು ಕೂಡ ಬ್ರಹ್ಮದ ಹೊರತು ಬೇರೆಯಲ್ಲ; ಪ್ರಪಂಚದಲ್ಲಿ ಪ್ರತಿಯೊಂದೂ ಬ್ರಹ್ಮದ ಹೊರತು ಬೇರೆಯಿಲ್ಲ. ನಾವು ಕಪ್ಪು ಸರ್ಪ ಹಗ್ಗವಾಗಿದೆ ಎನ್ನುವಾಗ ಕಪ್ಪು ಆ ಸರ್ಪಕ್ಕೆ ಸಂಬಂಧಪಟ್ಟರೀತಿಯಲ್ಲಿ ಹಗ್ಗವು ಸಂಬಂಧಪಡುವದಿಲ್ಲ. ಸರ್ಪವು ಕಪ್ಪಾಗಿದೆ ಎನ್ನುವಾಗ ಕಪ್ಪು ಗುಣವು ಸರ್ಪಕ್ಕೆ ಸೇರಿದ್ದಾಗುತ್ತದೆ. ಆದರೆ ಸರ್ಪವು ಹಗ್ಗವಾಗಿದೆ—ಎನ್ನುವಾಗ ಹಗ್ಗವು ಹಾವಿನ ಗುಣವಾಗುವದಿಲ್ಲ. ಹೀಗೆಯೇ ದೇಹವು, ಮನಸ್ಸು ಅಥವಾ ಬುದ್ಧಿಯು ಬ್ರಹ್ಮವಾಗಿದೆ—ಎನ್ನುವಾಗ ಬ್ರಹ್ಮವು ಅಥವಾ ಆತ್ಮವು

ಮನಸಿನ ಅಥವಾ ಬುದ್ಧಿಯ ಅಥವಾ ದೇಹದ ಗುಣಧರ್ಮವಾಗುವದಿಲ್ಲ. "ನಾನು ದೇವರು" ಎನ್ನುವದು 'ನಾನು ರಾಜ' ಎಂದಂತೆ ಅಲ್ಲ. ರಾಜ ಎನ್ನುವದು ಪ್ರಭುತ್ವದ ಅಧಿಕಾರವನ್ನು ತೋರಿಸುತ್ತದೆ. ಆದರೆ ಹಾವು ಹಗ್ಗವಾಗಿದೆ ಎನ್ನುವಾಗ ಹಗ್ಗವು ಹಾವಾಗಿ ತೋರುತ್ತದೆ ಎಂದೇ ಅರ್ಥ. ನಿಜವಾಗಿ ಇರುವದು ಹಗ್ಗ ; ಆದರೆ ಅದರಲ್ಲಿ ತೋರುತ್ತಿರುವದು ಹಾವು. ಹಾಗೆ 'ನಾನು ಬ್ರಹ್ಮವಾಗಿದ್ದೇನೆ' ಎನ್ನುವ ಮಾತಿನಲ್ಲಿ ನಾನು ಎನ್ನುವದು ಸುಳ್ಳು ತೋರಿಕೆ; ಬ್ರಹ್ಮ ಒಂದೇ ನಿಜ ಎಂದು ತಿಳಿಯಬೇಕು. ಹಗ್ಗವು ಹಾವಾಗಿಯೂ ಹೂವಿನ ಮಾಲೆಯಾಗಿಯೂ ನೀರಿನ ಕೋಡಿಯಾಗಿಯೂ ನೆಲದ ಬಿರುಕಾಗಿಯೂ ತೋರುವಂತೆ ಬ್ರಹ್ಮವು (ಆತ್ಮವು) ದೇಹವಾಗಿಯೂ ಮನಸ್ಸಾಗಿಯೂ ಬುದ್ಧಿಯಾಗಿಯೂ ಪ್ರಾಣವಾಗಿಯೂ ನಾನು ಎಂಬ ಅಹಂಕಾರವಾಗಿಯೂ ಈ ಸಮಸ್ತ ಜಗತ್ತಾಗಿಯೂ ತೋರಿಕೊಳ್ಳುತ್ತಿದೆ. ಆದ್ದರಿಂದ ಬ್ರಹ್ಮ ಒಂದೇ ಸತ್ಯ. ಆ ಬ್ರಹ್ಮವೇ 'ನಾನು' ಬ್ರಹ್ಮವನ್ನೇ ನಾವು ಜಗತ್ತು ಜೀವ ಎಂದು ಕರೆಯುತ್ತೇವೆ. ಜಗತ್ತು ಬ್ರಹ್ಮರೂಪದಿಂದ ಸತ್ಯ ; ನಾಮರೂಪದಿಂದ ಮಿಥ್ಯಾ. ತೋರಿ ಅಡಗುವ ನಾಮ ರೂಪಗಳನ್ನು ಯಾವಾಗಲೂ ಬೆಳಗುತ್ತಿರುವ ನಿರ್ವಿಕಾರಿಯಾದ ಅರಿವೇ ಬ್ರಹ್ಮ. ಶಬ್ದಾದಿ ವಿಷಯಗಳೂ ಇಂದ್ರಿಯಗಳ ವ್ಯಾಪಾರಗಳೂ ಅಂತಃಕರಣ ವೃತ್ತಿಗಳೂ ವಸ್ತುವಿನ ಭಾವವೂ ಅಭಾವವೂ ಎಲ್ಲವೂ ತೋರುತ್ತಿರುವದು ಅರಿವಿನಿಂದ ವ್ಯಾಪಿಸಲ್ಪಟ್ಟು ಅರಿವಿನಲ್ಲಿಯೇ. ಅರಿವನ್ನು ಬಿಟ್ಟು ಯಾವದೂ ಸ್ವತಂತ್ರವಾಗಿ ತೋರುವದಿಲ್ಲ. ಎಚ್ಚರ ಕನಸುಗಳ ಬಗೆಬಗೆಯ ಸ್ಥೂಲ ಸೂಕ್ಷ್ಮ ಭಾವಗಳನ್ನೂ ನಿದ್ರೆಯಲ್ಲಿಯ ಅಭಾವವನ್ನೂ ಅರಿಯುತ್ತಿರುವ ನಿರ್ವಿಶೇಷವಾದ ಅರಿವೇ ನಮ್ಮ ಆತ್ಮ—ಬ್ರಹ್ಮ.

ಓ ಲೋಕದ ಜನರೇ ! ನೀವು ನನ್ನನ್ನು ಸ್ವಾಮಿ ಎಂದೋ ರಾಮ ಎಂದೋ ತಿಳಿದಿದ್ದರೆ, ತಪ್ಪಾಗಿ ತಿಳಿದಿದ್ದೀರಿ. ಈ ದೇಹವು ನಾನಲ್ಲ. ನಾನೇ ದೇವರು. ಅದೇ ನೀವೂ ಆಗಿದ್ದೀರಿ.

ಒಬ್ಬ ಮನುಷ್ಯನು ನಿದ್ರೆ ಮಾಡುತ್ತಿದ್ದನು. ಆ ನಿದ್ರೆಯಲ್ಲಿ ಅವನು ತನ್ನನ್ನು ತಾನು ಕಡು ಬಡವನಾಗಿಯೂ ಭಿಕ್ಷುಕನಾಗಿಯೂ ಕಂಡನು. ಅವನು ಆ ಕನಸಿನಲ್ಲಿಯೇ ತನ್ನ ಕಷ್ಟವನ್ನು ಕಳೆದುಕೊಳ್ಳುವದಕ್ಕಾಗಿ ಹಲವು ದೇವರನ್ನು ಪ್ರಾರ್ಥಿಸಿದನು. ಪ್ರಯೋಜನವಾಗಲಿಲ್ಲ. ಬಡತನವನ್ನು ತಡೆಯಲಾರದೆ ಕಳವು ಮಾಡಿದನು; ಆದರೆ ಸಿಕ್ಕಿಬಿದ್ದು ಅಪಾದಿತನಾದನು. ಮಿತ್ರರಲ್ಲಿಯೂ ಲಾಯರ್‌ಗಳಲ್ಲಿಯೂ ಮೊರೆಯಿಟ್ಟನು. ಯಾರೂ ಅವನಿಗೆ ಶಿಕ್ಷೆಯನ್ನು ತಪ್ಪಿಸುವದು ಸಾಧ್ಯವಾಗಲಿಲ್ಲ. ಅವನು ಕಾರಾಗೃಹದ ಬಂಧನದಲ್ಲಿ ಸಂಕಟಪಡುತ್ತಿದ್ದಾಗ ಒಂದು ಭಯಂಕರ ಸರ್ಪವು ಅವನನ್ನು ಕಡಿಯಿತು. ಅದರ ಕ್ರೂರವಾದ ಯಾತನೆಯಿಂದ ಅವನಿಗೆ ಎಚ್ಚರವಾಯಿತು. ಆ ಕನಸಿನಲ್ಲಿ ಕಚ್ಚಿದ ಹಾವಿಗೆ ಅವನು ಅತ್ಯಂತ

ಕೃತಜ್ಞನಾಗಿರಬೇಕಾಗಿತ್ತು. ಏಕೆಂದರೆ ಅದರಿಂದಲೇ ಅವನಿಗೆ ಎಚ್ಚರವಾದ್ದರಿಂದ ಕನಸಿನ ಸಮಸ್ಯೆಗಳೂ ಸಂಕಟಗಳೂ ಕರಗಿಹೋದವು. ಆ ಶ್ರೀಮಂತನು ಎಚ್ಚರವಾದಾಗ ತನ್ನ ಹಾಸಿಗೆಯ ಸುತ್ತಲೂ ಪ್ರಿಯಪತ್ನಿಯೂ ಅಕ್ಕರೆಯ ಮಕ್ಕಳೂ ಚಕ್ಕಂದ ವಾಡುತ್ತಿದ್ದುದನ್ನು ಕಂಡು ಸಂತೋಷಚಿತ್ತನಾದನು. ಕನಸಿನಲ್ಲಿ ಅವನು ಬಂಧನ ದಲ್ಲಿ ಸಿಕ್ಕಿದ್ದುದರಿಂದ ಅದರ ಬಿಡುಗಡೆಗಾಗಿ ಚಡಪಡಿಸುತ್ತಿದ್ದನು. ಸರ್ಪವು ಕಚ್ಚಿ ಅವನಿಗೆ ಮೋಕ್ಷವನ್ನು ಕೊಟ್ಟಿತು. ಆ ಸರ್ಪವು ಕನಸಿನಲ್ಲಿದ್ದ ಮಿಕ್ಕ ವಸ್ತುಗಳಂತೆಯೇ ಒಂದು ವಸ್ತುವಾದರೂ ಅದು ಅವನನ್ನು ಗಾಬರಿಪಡಿಸಿ ಎಚ್ಚರಗೊಳಿಸಿ ಉಪ ಕಾರಮಾಡಿತು. ಅದು ಅವನ ಕನಸಿನ ಜೀವವನ್ನು ನುಂಗಿತು. ಅಷ್ಟೇ ಅಲ್ಲ, ಅದು ಆ ಸೆರೆಮನೆಯನ್ನೂ ಕಾವಲುಗಾರರನ್ನೂ ಅಲ್ಲಿಯ ಸಂಕಷ್ಟಗಳನ್ನೂ ಎಲ್ಲವನ್ನೂ ನಾಶ ಮಾಡಿತು. ಆ ವಿಲಕ್ಷಣವಾದ ಸರ್ಪವು ತನ್ನನ್ನು ತಾನೇ ನುಂಗಿ ಬಿಡುವ ಅಸಾಧಾರಣ ಕಾರ್ಯವನ್ನು ಮಾಡಿತು. ಏಕೆಂದರೆ ಆ ಮನುಷ್ಯನಿಗೆ ಎಚ್ಚರವಾದ ಮೇಲೆ ಆ ವಿಚಿತ್ರ ಸರ್ಪವು ಇರಲಿಲ್ಲ.

ವೇದಾಂತದ ದೃಷ್ಟಿಯಿಂದ ನೀವು ಕಾಣುವ ಈ ಪ್ರಪಂಚವೆಲ್ಲಾ ಕೇವಲ ಸ್ವಪ್ನ, ಮಾಯಾ, ಕನಸು ಕಾಣುವ ನೀವೇ ಕಳ್ಳರು. ನಿಮ್ಮ ಮಿತ್ರರೂ ಮಿಕ್ಕವರೂ, ನಿಮ್ಮ ದೇವರುಗಳೂ–ಯಾರಿಂದ ನೀವು ಬಿಡುಗಡೆಯನ್ನು ಬಯಸುವಿರೋ ಆ– ಎಲ್ಲರೂ ನಿಮ್ಮೊಡನೆ ಸೆರೆಯಾಳುಗಳೇ. ಆದ್ದರಿಂದ ಆ ಹಾವು ಕಚ್ಚುವವರೆಗೂ ನಿಮಗೆ ಸಹಾಯವು ದೊರಕುವುದಿಲ್ಲ. ಸರ್ವಸಂಗ ಪರಿತ್ಯಾಗವೇ ಆ ಹಾವು. ಕರ್ತೃತ್ವ– ಭೋಕ್ತೃತ್ವ ತ್ಯಾಗವೇ ಆ ಸರ್ಪ; ಜೀವಭಾವ ತ್ಯಾಗವೇ ಆ ಸರ್ಪ. ಅವಿದ್ಯಾ ಬುದ್ಧಿಯ ತ್ಯಾಗವೂ ಕಾಮಾದಿಗಳ ತ್ಯಾಗವೂ ಸರ್ಪದೋಪಾದಿಯಲ್ಲಿ ಭಯಂಕರವಾಗಿ ತೋರಿ ಕಚ್ಚುವಂತಾಗುತ್ತದೆ. ಬ್ರಹ್ಮವಿದ್ಯೆಯೇ ನಿಜವಾದ ತ್ಯಾಗ. ಆತ್ಮೈಕತ್ವ ವಿದ್ಯೆಯೇ–ಆತ್ಮ ಒಂದೇ ಸತ್ಯವೆಂಬ ಜ್ಞಾನವೇ–ನಿಜವಾದ ತ್ಯಾಗ. ಅದೇ ವೇದಾಂತವು.

ಯಾವಾಗ ನಿಜವಾದ ತ್ಯಾಗವು ಬರುತ್ತದೆಯೋ ಆಗ ಜ್ಞಾನವು ಬರುತ್ತದೆ. "ನಾನೇ ಬ್ರಹ್ಮ" ಎನ್ನುವ ವೇದಾಂತ ಸಿದ್ಧಾಂತವು ಅನುಭವಕ್ಕೆ ಬರುತ್ತದೆ. ಅಮೆರಿ ಕನ್‌ರ ಮತ್ತು ಯೂರೋಪಿಯನ್‌ರ ಕಿವಿಗಳಿಗೆ "ನಾನು ಬ್ರಹ್ಮವಾಗಿದ್ದೇನೆ" ಎಂಬ ಮಾತು ಹಾವಿನ ಬುಸ್‌ಗುಟ್ಟುವ ಶಬ್ದದಂತೆ ಕೇಳಬಹುದು; ಆ ಬುಸ್‌ಗುಟ್ಟುವ ಸರ್ಪವು ನಿಮ್ಮನ್ನು ಕಡಿಯುತ್ತದೆ. "ಅಂಥಾ ಅಸಂಬದ್ಧ ಭಾವನೆಗೆ ಹೇಗೆ ಆಶ್ರಯ ಕೊಡಬೇಕು? ಅಂಥಾ ವಿಪರೀತವಾದ ಭಾವನೆ ಮಾಡುವದಕ್ಕೆ ಎಷ್ಟು ಧೈರ್ಯ?" ಎಂದು ನೀವು ಕೇಳಬಹುದು.

ಓ ಜನರೆ! ತ್ಯಾಗ ಸರ್ಪವು ನಿಮ್ಮನ್ನು ಕಚ್ಚಲಿ. ಅದನ್ನು ಸ್ವಾಗತಿಸಬೇಕು. ಅದು ನಿಮ್ಮನ್ನು ಎಲ್ಲಾ ಚಿಂತೆಗಳಿಂದಲೂ ವ್ಯಥೆಗಳಿಂದಲೂ ಬಿಡುಗಡೆ ಮಾಡುತ್ತದೆ. ಈ ಸತ್ಯವು ನಿಮ್ಮಲ್ಲಿ ವಿಷವನ್ನು ತುಂಬುವದಿಲ್ಲ; ಅಮೃತವನ್ನು ತುಂಬುತ್ತದೆ. ನೀವು

ಎಚ್ಚರಗೊಳ್ಳುತ್ತೀರಿ; ಕನಸು ಕಾಣುವ ಜೀವನೂ ಅದರ ಜೊತೆಗೆ ಜಗತ್ತೂ ಹೋಗಿ ಬಿಡುತ್ತವೆ.

ರಾಮನ ಮಾತು ಬರೀ ಊಹಾಪೋಹವಲ್ಲ. ಇದರ ಸತ್ಯತೆಯನ್ನು ನಿಮ್ಮ ಅನುಭವದಿಂದಲೇ ಪರೀಕ್ಷಿಸಿ ನೋಡಿಕೊಳ್ಳಬಹುದು. ಎಲ್ಲಾ ನೋವೂ ತೊಂದರೆಯೂ ಕ್ಲೇಶವೂ ಕೂಡಲೇ ತೊಲಗುತ್ತವೆ.

ನಿಮ್ಮಲ್ಲಿರುವ ನಿಜವಾದ ಆತ್ಮನು ತಾನೇ ತಾನಾಗಿ ಬೆಳಗುವದಕ್ಕೆ ಬಿಡದೆ ಅವನನ್ನು ಕದ್ದು ಅವಿದ್ಯಾ ಕಾಮಕರ್ಮಗಳಲ್ಲಿ ಮುಚ್ಚಿಟ್ಟುಕೊಂಡಿರುವದರಿಂದ ನೀವು ಆ ಕನಸಿನ ಕಳ್ಳನಂತಾಗಿದ್ದೀರಿ. "ಆತ್ಮ ಒಂದೇ ಸತ್ಯ; ಚೈತನ್ಯ ಸ್ವರೂಪವಾದ ಆತ್ಮನೇ ನಾನು" ಎಂಬ ತತ್ತ್ವಜ್ಞಾನದ ಸರ್ಪವು ಅನಾದಿಯಾದ ನಿಮ್ಮ ಮಾಯಾ ಸ್ವಪ್ನದಲ್ಲಿ ನಿಮ್ಮನ್ನು ಕರುಣೆಯಿಂದ ಕಚ್ಚಿದರೆ ನೀವು ಎಚ್ಚರಗೊಳ್ಳುತ್ತೀರಿ. ಆಗ ನಿಮ್ಮಲ್ಲಿರುವ ನಿಜವಾದ ಆತ್ಮನು ತನ್ನ ಪೂರ್ಣ ಮಹಿಮಾ ವೈಭವದಿಂದ ತಾನೇ ತಾನಾಗಿ ಬೆಳಗುತ್ತಾನೆ. ಆತ್ಮನು ಎಲ್ಲಾ ಭಾಷೆಯನ್ನೂ ಭಾವನೆಯನ್ನೂ ಊಹೆಯನ್ನೂ ವಿವರಣೆಯನ್ನೂ ಮೀರಿದ್ದಾನೆ.

ಪ್ರಶ್ನೆ: ಸಾವು ಜೀವಂತರಾದವರ ನಿದ್ರೆಯಂತಿರುತ್ತದೆ, ಎನ್ನುವದರ ಅರ್ಥವೇನು? ಮರಣಾನಂತರದ ಮೃತ್ಯುವಿನ ಕ್ಷೇತ್ರದಲ್ಲಿ ಏನು ನಡೆಯುವದೆಂಬದು ಯಾರಿಗೂ ತಿಳಿಯದು—ಎಂದೇ ಈ ಮಾತಿನ ಅರ್ಥ?

ಉತ್ತರ: ನೀವು ಮರಣವೆಂಬ ದೀರ್ಘ ನಿದ್ರೆಯನ್ನು ಅನುಭವಿಸುತ್ತಿರುವಾಗ ನೀವೇ ಸೃಷ್ಟಿ ಮಾಡಿಕೊಂಡಿರುವ ಒಂದು ಲೋಕದಲ್ಲಿ ವಾಸಮಾಡುತ್ತಿರುತ್ತೀರಿ. ಜಾಗ್ರದವಸ್ಥೆಯಲ್ಲಿ ಕೂಡ ನೀವೇ ಕಲ್ಪಿಸಿಕೊಂಡಿರುವ ಲೋಕದಲ್ಲಿ ಜೀವಿಸಿರುತ್ತೀರಿ. ನಿಮ್ಮ ಸುತ್ತಲಿರುವ ಅಲ್ಪವಾದ ಜಗತ್ತು ನಿಮ್ಮ ಕಾಮ–ಕರ್ಮಗಳ ಫಲವು. ಹಾಗೆಯೇ ದೀರ್ಘ ನಿದ್ರೆಯಾದ ಮರಣ ಕಾಲದಲ್ಲಿ ನಿಮ್ಮ ಇಚ್ಛೆಯಿಂದ ನೀವೇ ಸೃಷ್ಟಿಸಿಕೊಂಡಿರುವ ಲೋಕದಲ್ಲಿ ನೀವಿರುತ್ತೀರಿ. ಕನಸಿನ ಜಗತ್ತಿಗೂ ಎಚ್ಚರದ ಜಗತ್ತಿಗೂ ಇರುವ ಸಂಬಂಧವೇ ಸಾವಿನ (ನಿದ್ರಾ) ಪ್ರಪಂಚಕ್ಕೂ ಎಚ್ಚರದ ಪ್ರಪಂಚಕ್ಕೂ ಇದೆ.

ಪ್ರಶ್ನೆ: ಚೈತನ್ಯಕ್ಕೆ ವಿಶ್ರಾಂತಿಯೇ ಬೇಕಿಲ್ಲವಾದ್ದರಿಂದ ನಿದ್ರೆ ಮಾಡುವದು ಯಾವದು?

ಉತ್ತರ: ನಿಜವಾದ ದೇವರಾದ ಆತ್ಮನು ಎಂದಿಗೂ ನಿದ್ರಿಸುವದಿಲ್ಲ. ನಿದ್ರೆ ಅದನ್ನು ಸೋಂಕುವದೇ ಇಲ್ಲ. ವೇದಾಂತದ ದೃಷ್ಟಿಯಿಂದ ಎಚ್ಚರವೂ ನಿದ್ರೆಯೂ ಮಾಯೆಯ ಹೊರತು ಬೇರೆಯಲ್ಲ. ಮನಸ್ಸಿಗೆ ಅಥವಾ ಸುಳ್ಳಾದ ಅಹಂಕಾರಕ್ಕೆ

ನಿದ್ರೆಯು ಬರುತ್ತದೆ. ನಿದ್ರೆಯು ಅಂಟಿಕೊಂಡಿರುವದು ನಿಜವಲ್ಲದ, ತೋರಿಕೆಯ ಆತ್ಮನಿಗೆ, ಕೇವಲ ಸೂಕ್ಷ್ಮದೇಹಕ್ಕೆ. ನಿದ್ರೆಯು ನಿಮ್ಮ ಮಿಥ್ಯಾ ಅಹಂಕಾರದ ಒಂದು ಮುಖ, ಅದು ಮಾಯೆಯು, ಕನಸಿನ ಭ್ರಾಂತಿಯ ಒಂದು ಮುಖ, ಒಂದು ರೂಪ.

ಪ್ರಶ್ನೆ: ಸತ್ತಿರುವ ಜೀವರಿಂದ ಆವಾಹಿತರಾಗುವ ಜೀವರು (Mediums) ಸಮಾಚಾರವನ್ನು ಪಡೆಯುವರೆ?

ಉತ್ತರ: ರಾಮನು ಹೇಳುವದೇನೆಂದರೆ, ಎಚ್ಚರದಲ್ಲಿ ಕೂಡ ನಿಮಗೆ ಬರುವ ಸಮಾಚಾರಗಳೆಲ್ಲಾ ನಿಮ್ಮ ಒಳಗಿನಿಂದಲೇ. ನಿಮ್ಮ ಎಚ್ಚರದಲ್ಲಿ ಹೊರಗೆ ತೋರುವ ವಸ್ತುಗಳೆಲ್ಲಾ ನಿಮ್ಮ ಒಳಗೇ ಇವೆ. ಮೋಹನ ವಿದ್ಯೆಯಲ್ಲಿಯೂ (Hypnotic) ವಶೀಕರಣ ವಿದ್ಯೆಯಲ್ಲಿಯೂ ( Mesmeric ) ಆತಿವಾಹಿಕ ಜೀವದ (Departed soul) ಆವಾಹನೆಯಲ್ಲಿಯೂ ( Mediumistic ) ಬರುವದೆಲ್ಲಾ ನಿಮ್ಮ ಒಳಗಿನಿಂದಲೇ. ಸೂರ್ಯ, ಚಂದ್ರ, ನಕ್ಷತ್ರಗಳಾದಿಯಾದ ಸ್ಥೂಲ ರೂಪವಾಗಿ ತೋರುವ ಪ್ರಪಂಚವೆಲ್ಲಾ ನಿಮ್ಮ ಸ್ವಂತ ಸೃಷ್ಟಿಯೆಂದೇ ವೇದಾಂತವು ಹೇಳುತ್ತದೆ. ಸತ್ಯ ಸ್ವರೂಪರಾದ ನಿಮ್ಮ ಆತ್ಮವನ್ನು ಬಿಟ್ಟು ವಿಶ್ವ ಪ್ರಕೃತಿಯು ಬೇರೆ ಸ್ವತಂತ್ರವಾಗಿ ಇಲ್ಲವೆಂದು ವೇದಾಂತವು ಒತ್ತಿ ಹೇಳುತ್ತದೆ. ಆ ಕೋಟಿ ಕೋಟಿ ಚೇತನರು ನಿಮ್ಮೊಳಗೇ ಇದ್ದಾರೆ. ನಿಮ್ಮ ಹೊರಗೆ ಯಾವದೂ ಇಲ್ಲ.

ಜಗತ್ತಿನ ಅತ್ಯಂತ ಶ್ರೇಷ್ಠ ಕವಿಗಳಲ್ಲಿ ಒಬ್ಬನಾದ ಹಫೀಜ್ ಎಂಬವನಿಂದ ಪರ್ಷಿಯನ್ ಭಾಷೆಯಲ್ಲಿ ಬರೆಯಲ್ಪಟ್ಟಿರುವ ಒಂದು ಸುಂದರವಾದ ಪದ್ಯವಿದೆ. ಅದು 'ಎಮರ್‌ಸನ್' ಮಹಾಕವಿಯಿಂದ ಕೆಲವು ಮಟ್ಟಿಗೆ ಭಾಷಾಂತರಿಸಲ್ಪಟ್ಟಿದೆ. ಅದರ ಅರ್ಥವೇನೆಂದರೆ, "ಓ ಮನಸ್ಸೇ! ಈ ಎಲ್ಲಾ ಸಂಶಯಗಳನ್ನೂ ಚರ್ಚೆಗಳನ್ನೂ ಅತ್ತಲಾಗಿ ಎಸೆದುಬಿಡು. ಬಾ, ಬಾ, ಸ್ವರ್ಗದ ಬಾಗಿಲ ಬೀಗದ ಕೈಯನ್ನು ಕೊಡುವ ಮಾಣಿಕ್ಯ ಮಧುವನ್ನು ತುಂಬಿರುವ ಬಟ್ಟಲನ್ನು ತೆಗೆದುಕೊಂಡು ಬಾ." ಇದರಿಂದ ನೀವು ಬಚ್ಚೂಸ್‌ನ ಶಿಷ್ಯರಾಗಬೇಕೆಂದು ಅರ್ಥವಲ್ಲ. ದೇವತ್ವದ ಅಮೃತವೆಂಬ ಮಧುವನ್ನು ಸೇವಿಸೋಣ; ದೈವೀಭಾವದ ಹುಚ್ಚನ್ನು ಹಿಡಿಸುವ ಏನನ್ನಾದರೂ ಆಸ್ವಾದಿಸೋಣ. ಮಾಯಾ ಸ್ವಪ್ನವನ್ನು ಕಾಣುತ್ತಿದ್ದ ಆ ನಿರ್ಭಾಗ್ಯ ಕಳ್ಳನನ್ನು ಎಚ್ಚರಗೊಳಿಸಿದ ಆ ಸರ್ಪದಂಶವು ನಮಗಿರಲಿ; ಸ್ವರ್ಗದ್ವಾರದ ಬೀಗವನ್ನು ತೆಗೆಯುವ ರೀತಿಯೇ ಇದು; —ಇದೇ ಇದರ ಅರ್ಥ.

ಆದ್ದರಿಂದ ರಾಮನು ಹೇಳುವದೇನೆಂದರೆ, ಸ್ವಲ್ಪ ಕಾಲ ಈ ಬಯಕೆಗಳನ್ನೂ ಹಂಬಲಗಳನ್ನೂ ಆಚೆಗೆ ಎಸೆಯಿರಿ; ರಾಮನೊಡನೆ ದಿವ್ಯೋನ್ಮಾದವನ್ನು —ದೈವಿ ಹುಚ್ಚನ್ನು—ಅನುಭವಿಸಿ ಆನಂದ ಪಡಿ. ರಾಮನು ತನ್ನಲ್ಲಿರುವ ಗುಟ್ಟನ್ನೆಲ್ಲಾ ಹೇಳಿಕೊಳ್ಳಬೇಕು. ರಾಮನು ಇನ್ನು ಮುಂದೆ, ನಿಮ್ಮ ವಿಚಾರಗಳನ್ನೂ ಬಯಕೆಗಳನ್ನೂ

ಆದರಿಸುವದು ಸಾಧ್ಯವಲ್ಲ; ನಿಮ್ಮ ಅಭಿರುಚಿಗಳನ್ನು ಹೆಚ್ಚಾಗಿ ಅಭಿಮಾನಿಸುವದೂ ಸಾಧ್ಯವಿಲ್ಲ.

ಓ ಅಮೇರಿಕಾದ ಜನರೆ, ಇಡೀ ಜಗತ್ತಿನ ಜನರೆ, ಸತ್ಯವೇನೆಂದರೆ, ದೇವರನ್ನೂ ದೆವ್ವನನ್ನೂ ಅಥವಾ ಧನಪಿಶಾಚಿಯನ್ನೂ ಏಕಕಾಲದಲ್ಲಿ—ಪ್ರಭುಗಳಿಬ್ಬರನ್ನೂ—ಸೇವಿಸುವದು ಸಾಧ್ಯವಿಲ್ಲ. ಭೋಗವನ್ನೂ ತ್ಯಾಗವನ್ನೂ (ಸತ್ಯಾನುಭವವನ್ನೂ) ಒಂದೇ ಸಮಯದಲ್ಲಿ ಸಾಧಿಸುವದು ಸಾಧ್ಯವಲ್ಲ.

ಹೀಗೆ ಪೂರ್ಣ ಸತ್ಯವನ್ನು ತಿಳಿಯುವದಕ್ಕಾಗಿ ಪ್ರಾಪಂಚಿಕವಾದ ಎಲ್ಲಾ ಬಯಕೆಗಳನ್ನೂ ಬಿಡಬೇಕು; ನೀವು ಪ್ರಾಪಂಚಿಕವಾದ ಎಲ್ಲಾ ಆಸಕ್ತಿಗಳನ್ನೂ ದ್ವೇಷಾಸೂಯೆಗಳನ್ನೂ ಮೀರಬೇಕು. ನೀವು ಅಭಿಮಾನದಿಂದ ಅಂಟಿಕೊಳ್ಳುವದಕ್ಕೂ ಗುಲಾಮಗಿರಿಗೂ ಕಾರಣವಾದ ಎಲ್ಲಾ ಬಂಧಗಳಿಗೂ ಸಂಬಂಧಗಳಿಗೂ ಕೊನೆಯ ನಮಸ್ಕಾರ ಹೊಡೆಯಬೇಕು. ನೀವು ಈ ಎಲ್ಲವನ್ನೂ ಮೀರಬೇಕು. ಆತ್ಮ ವಸ್ತು ಲಾಭವಾಗಬೇಕಾದರೆ ಇದೇ ಬೆಲೆ; ನೀವು ಈ ಬೆಲೆಯನ್ನು ಕೊಟ್ಟ ಹೊರತು ನಿಮಗೆ ಸತ್ಯದ ಅನುಭವವಾಗುವದಿಲ್ಲ. ಈ ಬೆಲೆಯನ್ನು ಕೊಡುವದಕ್ಕೆ ನೀವು ಸಿದ್ಧವಿಲ್ಲದಿದ್ದರೆ, ಜನ್ಮ, ಕರ್ಮ, ಸುಖ ದುಃಖ ರೂಪವಾದ ಸಂಸಾರ (ಭೋಗ) ವಿಷವನ್ನು ಅನಂತಕಾಲ ಸೇವಿಸುತ್ತಿರುವ ನಿಮ್ಮ ದುರ್ದೈವದ ಹಣೆಯ ಬರಹದಲ್ಲಿಯೇ ನೀವು ಸಂತೃಪ್ತರಾಗಿರಬಹುದು. ನಿಮಗೆ ಆತ್ಮಾನುಭವವು—ಬ್ರಹ್ಮಪ್ರಜ್ಞೆಯು—ಬೇಕಾದರೆ, ದಯವಿಟ್ಟು ಬನ್ನಿ, ಬೆಲೆಯನ್ನು ಚೆಲ್ಲಿ ನಿಮಗೆ ಸಕಲವೂ ಲಭಿಸುತ್ತವೆ. ಕ್ರಿಸ್ತನು ಈ ಮಾತುಗಳನ್ನು ನಿರ್ದಾಕ್ಷಿಣ್ಯವಾಗಿ ಹೇಳಿದನು. ಆದರೆ ಓ ಜನರೆ! ಈಗ ಆ ಮಾತುಗಳನ್ನು ನಮನಮಗೆ ಇಷ್ಟವಾದ ಅರ್ಥವನ್ನು ಕೊಡುವದಕ್ಕಾಗಿ ಎಷ್ಟೆಷ್ಟು ತಿರುಚಿ, ವಿಕಾರಗೊಳಿಸಿದ್ದೇವೆ. ಶಾಸ್ತ್ರವಾಕ್ಯಗಳನ್ನು ನಾವು ಎಷ್ಟು ಚಿತ್ರಹಿಂಸೆಗೊಳಿಸಿದ್ದೇವೆ!

ಈ ಪ್ರಸಂಗವು ರಾಮನಿಗೆ ಒಂದು ಕತೆಯನ್ನು ನೆನಪುಗೊಡುತ್ತದೆ. ಇಂಡಿಯಾ ದೇಶದಲ್ಲಿ ದಿವ್ಯಭಾವದಿಂದ ಉನ್ಮತ್ತನಾದ ಒಬ್ಬ ಪ್ರಸಿದ್ಧ ಮಹಾತ್ಮನಿದ್ದನು. ಅವನು ಅತ್ಯುಚ್ಚವಾದ ಧ್ವನಿಯಲ್ಲಿ "ಓ! ದೇವರು ಬೇಕೆನ್ನುವ ಗಿರಾಕಿಗಳೆ ಬನ್ನಿ ಬನ್ನಿ. ಪರಮಾತ್ಮ ಜ್ಞಾನವನ್ನು ಅಪೇಕ್ಷಿಸತಕ್ಕವರೆಲ್ಲಾ ಬನ್ನಿ. ಸಂಸಾರ ಭಾರವನ್ನು ಹೊರಲಾರದವರೆಲ್ಲಾ ಬನ್ನಿ. ಅದಕ್ಕಾಗಿ 'ನಾಮ್ ಲೇ ಲೋ, ನಾಮ್ ಲೇ ಲೋ" ಎಂದು ಬೀದಿಗಳಲ್ಲಿ ಕೂಗುತ್ತಾ ಹೋಗುತ್ತಿದ್ದನು. 'ನಾಮ್' ಎನ್ನುವದಕ್ಕೆ ಎರಡು ಅರ್ಥಗಳಿವೆ. ನಾಮ್ ಎಂದರೆ ರಾಮ್, ಅಥವಾ ದೇವರು ಎನ್ನುವದು ಒಂದು ಅರ್ಥ. ಇನ್ನೊಂದು ಅರ್ಥ, ಕೊರಳಿಗೆ ಹಾಕುವ ಸುಂದರವಾದ ರತ್ನಾಭರಣ. ಆ ಮಹಾತ್ಮನು ದೇವರು ಎನ್ನುವ ಅರ್ಥದಲ್ಲಿ 'ನಾಮ್' ಎಂಬ ಶಬ್ದವನ್ನು

ಉಪಯೋಗಿಸುತ್ತಿದ್ದನು. ಇಂಡಿಯಾ ದೇಶದಲ್ಲಿ ವಿವಾಹಕಾಲದಲ್ಲಿ ಕನ್ಯೆಯನ್ನು ಅಲಂಕರಿಸುವುದಕ್ಕಾಗಿ ಅಮೂಲ್ಯವಾದ ರತ್ನಾಭರಣಗಳನ್ನು ಉಪಯೋಗಿಸುತ್ತಾರೆ. ಆಭರಣವು ಬೇಕಾದ ಶ್ರೀಮಂತನೊಬ್ಬನು ಒಂದು ದಿನ ಪೇಟೆಯಲ್ಲಿ ಹೋಗುತ್ತಿರುವಾಗ 'ನಾಮ್ ಲೇ ಲೋ' ಎನ್ನುವ ಕೂಗನ್ನು ಕೇಳಿ, ಆ ರತ್ನಮಾಲೆಯನ್ನು ರಹಸ್ಯವಾಗಿ ಕೊಳ್ಳುವದಕ್ಕಾಗಿ, ಆ ಮಹಾತ್ಮನ ಮನೆಯನ್ನು ಹುಡುಕಿಕೊಂಡು ಹೋದನು. ಆದರೆ ಆ ಸಮಯದಲ್ಲಿ ಅವನು ಮನೆಯಲ್ಲಿರಲಿಲ್ಲವಾದ್ದರಿಂದ ಒಂದು ಸಣ್ಣ ಮಗುವು ಬಂದು, "ನನ್ನ ತಂದೆಯುವರು ಮನೆಯಲ್ಲಿಲ್ಲ; ಸಂಜೆಗೆ ಬರುತ್ತಾರೆ, ಅವರಿಂದ ಏನಾಗಬೇಕೆಂಬುದನ್ನು ತಿಳಿಸಿ" ಎಂದು ಕೇಳಿತು. ಅವನು, ತಾನು ನಾಮವನ್ನು ಕೊಳ್ಳಬೇಕೆಂದು ಹೇಳಿದನು. ಆ ಮಗುವು, "ದಯವಿಟ್ಟು ಸ್ವಲ್ಪ ತಡೆಯಿರಿ; ನಾಮವನ್ನು ಒಳಗಿನಿಂದ ತಂದು ಕೊಡುತ್ತೇನೆ" ಎಂದು ಹೇಳಿ ಒಳಗೆ ಹೋಯಿತು. ಆ ಮುದ್ದಾದ ಮಗುವಿನ ಮಾತಿನಿಂದ ಮೋಹಿತನಾಗಿ ಆ ಶ್ರೀಮಂತನು ಹೊರಗೆ ಕಾಯುತ್ತಾ ಕುಳಿತನು. ಅರ್ಧ ಗಂಟೆಯ ಮೇಲಾದರೂ ಆ ಮಗುವು ಹೊರಗೆ ಬಾರದಿರಲು, ಹೆಚ್ಚು ಹೊತ್ತು ಕಾದಿರುವದಕ್ಕೆ ಸಮಾಧಾನವಿಲ್ಲದೆ, ಅವನು ಕುತೂಹಲದಿಂದ ಒಳಗೆ ಹಣಕಿ ನೋಡಿದನು. ಆ ಮಗುವು ದೊಡ್ಡದೊಂದು ಚಾಕುವನ್ನು ಮಸೆಯುತ್ತಿದ್ದಿತು. ಅವನು ಅಸಮಾಧಾನದಿಂದ "ಇಷ್ಟು ಹೊತ್ತು ಏನು ಮಾಡುತ್ತಿದ್ದೆ ಮಗು? ನಾನು ಎಷ್ಟು ದೊಡ್ಡ ಮನುಷ್ಯ ಎನ್ನುವದು ನಿನಗೇನು ಗೊತ್ತು? ನನ್ನ ಹತ್ತಿರ ಹೀಗೆ ಹುಡುಗಾಟವಾಡಬಹುದೆ? ಚಾಕುವನ್ನೇಕೆ ಮಸೆಯುತ್ತೀ? ಬೇಗ ಆ ರತ್ನಹಾರವನ್ನು ತೆಗೆದುಕೊಂಡು ಬಾ. ನಿನ್ನ ಆ 'ನಾಮ'ಕ್ಕೆ ಒಬ್ಬ ಸರಾಫರಿಂದ ಬೆಲೆಯನ್ನು ತಿಳಿಯಬೇಕು" ಎಂದನು. ಆ ಮಗುವು "ಬೀದಿಯ ಸರಾಫರು ಬೆಲೆಯನ್ನು ಕಟ್ಟುವ ಬಡಹಾರವು–ಬಡನಾಮವು–ನಮ್ಮದಲ್ಲ; ಬೆಲೆಯಿಲ್ಲದ ಬೆಲೆಯನ್ನು ಅದಕ್ಕೆ ಕಟ್ಟಿಯೇ ಬಿಟ್ಟಿದೆ. ಅದನ್ನು ಹೆಚ್ಚು ಕಡಿಮೆ ಮಾಡುವಂತೆಯೇ ಇಲ್ಲ. ಆದರೆ ಮೊದಲು ಬೆಲೆಯನ್ನು ಕೊಡಬೇಕು. ನಾಮವನ್ನು ಪಡೆಯಬೇಕಾದರೆ ಜೀವವನ್ನು ತೆರಬೇಕು. ಅದಕ್ಕಾಗಿಯೇ ಈ ಚಾಕುವನ್ನು ಮಸೆಯುತ್ತಿದ್ದೇನೆ. ಜೀವವನ್ನು ಉಳಿಸಿಕೊಳ್ಳಬೇಕಾದರೆ ನಾಮವನ್ನು ಕಳೆದುಕೊಳ್ಳಬೇಕು" ಎಂದಿತು.

ಅರಬ್ಬೀ ಭಾಷೆಯಲ್ಲಿ ಒಂದು ಪದ್ಯವಿದೆ. ಅದರ ಅರ್ಥವೇನೆಂದರೆ, "ನಿನ್ನನ್ನು ಸಮಾಧಿ (ಗೋರಿ) ಮಾಡುವದರೊಳಗೆ ನೀನು ಸಾಯಬೇಕು. ಹಾಗೆ ಮಾಡುವದರಿಂದ ಈ ಲೋಕವನ್ನು ನೀನು ಭೂವೈಕುಂಠವಾಗಿ ಮಾಡುತ್ತಿ." ಸಂಸ್ಕೃತ ಸುಭಾಷಿತಗಳಲ್ಲಿಯೂ ಹೀಗೆಯೇ ಹೇಳಿದೆ.

ನಿಮ್ಮ ಇಡೀ ಜೀವನವೇ ಪ್ರಪಂಚದಿಂದ ಹಿಂದಿರುಗಿದಾಗ ನಿಮ್ಮನ್ನು ನೀವು ಶಿಲುಬೆಗೇರಿಸಿ, ಪ್ರಪಂಚದ ವಿಷಯಕ್ಕೆ ನೀವು ಸತ್ತಾಗ ಬದುಕಿಯೇ ಬದುಕುತ್ತೀರಿ.

ಉಪದೇಶಕರ ಮತ್ತು ಬೋಧಕರ ಮೆಚ್ಚುಗೆಯ ಮಾತಿನಿಂದ ಮರುಳಾಗಬೇಡಿ. ರಾಮನು ನಿಮಗೆ ಸತ್ಯವನ್ನೇ ಹೇಳುತ್ತಾನೆ. ಅವನು ನಿಮ್ಮನ್ನು ವ್ಯರ್ಥವಾಗಿ ಹೊಗಳುವದಿಲ್ಲ. ವೇದಗಳಲ್ಲಿ ಸುಂದರವಾದೊಂದು ಸಂಸ್ಕೃತ ಶ್ಲೋಕವಿದೆ. ಅದರ ಅರ್ಥವೇನೆಂದರೆ—ಮನುಷ್ಯನ ದೇಹವು ಭದ್ರವಾದ ದುರ್ಗದಂತಿದೆ. ಇಂದ್ರಿಯಗಳೇ ಅದರಲ್ಲಿರುವ ಕಿಂಡಿಗಳು. ಅವುಗಳಲ್ಲಿ ನಾವು ಗುಂಡುಗಳನ್ನೂ ಫಿರಂಗಿಗಳನ್ನೂ ಇಟ್ಟು ಒಳಗಿನಿಂದ ಹೊರಗೆ ಉಪಾಯಿಸುತ್ತೇವೆ. ಹಾಗೆಯೇ ನಿಮ್ಮಿಂದ ಪ್ರೇಕ್ಷಕರ ತಲೆಗಳೊಳಗೂ ಹೃದಯಗಳೊಳಗೂ ದೃಷ್ಟಿಯ ಫಿರಂಗಿ ಗುಂಡುಗಳು ಹೊಡೆಯಲ್ಪಡುತ್ತವೆ; ಕಿವಿಗಳ ಕಿಂಡಿಗಳಿಂದ ಭಾವನೆಗಳು ಹೊರಸಿಡಿಯುತ್ತವೆ. ಈ ಮನುಷ್ಯ ದುರ್ಗದ ಸೃಷ್ಟಿಕರ್ತನಾದ ಆತ್ಮನು ಮಾನವನೊಡನೆ ಒಂದು ಪರಿಹಾಸ ಮಾಡಿದ್ದಾನೆ. ಎಲ್ಲಾ ಫಿರಂಗಿಯ ಗುಂಡುಗಳೂ ಒಳಗಿನಿಂದ ಹೊರಗೆ ಹಾರುವದರಿಂದ ಮನುಷ್ಯನು ದಿಗ್ಭ್ರಾಂತನಾಗಿದ್ದಾನೆ. ಅವನು ತಾನು ಪ್ರಪಂಚವನ್ನು ಜಯಿಸುತ್ತಿದ್ದೇನೆಂದೂ ಲಾಭವನ್ನು ಗಳಿಸುತ್ತಿದ್ದೇನೆಂದೂ ತನ್ನ ಆಸ್ತಿಯನ್ನೂ ಪ್ರಭಾವವನ್ನೂ ಬೆಳೆಸುತ್ತಿದ್ದೇನೆಂದೂ ತಿಳಿಯುತ್ತಾನೆ; ಆದರೆ ವಾಸ್ತವವಾಗಿ ತನ್ನನ್ನು ತಾನು—ತನ್ನ ಆತ್ಮವನ್ನು ತಾನು—ಕಳೆದುಕೊಳ್ಳುತ್ತಿದ್ದಾನೆ. ಮನುಷ್ಯನು ಈ ಕೋಟೆಯೊಳಗೆ ತಾನು ಜ್ಞಾನವನ್ನು ಸಂಪಾದಿಸುತ್ತಾ ಪ್ರಪಂಚದಲ್ಲಿ ಜಯಶಾಲಿಯಾಗುತ್ತಿರುವದಾಗಿ ಭಾವಿಸುತ್ತಾನೆ. ಆದರೆ ವಾಸ್ತವವಾಗಿ ತನ್ನ ನಿಜವಾದ ಆತ್ಮನನ್ನು ಅವನು ಉಪವಾಸ ಸಾಯಿಸುತ್ತಿದ್ದಾನೆ. ಆ ಶ್ಲೋಕದಲ್ಲಿ ಹೇಳುವದೇನೆಂದರೆ "ಯಾರ ಕಣ್ಣುಗಳು ಹೊರಗೆ ನೋಡುವದಕ್ಕೆ ಬದಲು ಒಳಗೆ (ಕಣ್ಣಿಗೆ ಕಣ್ಣಾದ) ನೋಟದ ಮೂಲವನ್ನು ನೋಡುವವೋ ಯಾರ ಕಿವಿಗಳು ಹಿಂದಿರುಗಿ ಒಳಗೆ, ಕೇಳುವ ಶಕ್ತಿಗೆ ಮೂಲವಾದ ಆತ್ಮನ ಶಬ್ದವನ್ನು ಕೇಳುವವೋ, ಯಾರ ಮನಸ್ಸು ಒಳ ತಿರುಗಿ ತನ್ನ ಕ್ರಿಯಾಶಕ್ತಿಯ ಮೂಲವನ್ನು ನೋಡ ಬಲ್ಲದೋ, ಹೀಗೆ ಯಾರು ತಮ್ಮ ಫಿರಂಗಿಗಳ ಮತ್ತು ಕೋವಿಗಳ ಬಾಯಿಗಳನ್ನು ಒಳ ತಿರುಗಿಸಿ ಗುಂಡುಗಳನ್ನು ಹಾರಿಸಬಲ್ಲರೋ ಅವರು ಪ್ರಪಂಚವನ್ನೆಲ್ಲಾ ಜಯಿಸಬಲ್ಲರು."

ಒಳಗೆ ನೋಡಿ! ಕಣ್ಣುಗಳು ನೋಡುವಂತೆಯೂ ಕಿವಿಗಳು ಕೇಳುವಂತೆಯೂ ಕೂದಲು ಬೆಳೆಯುವಂತೆಯೂ ಮಾಡುವದು ಯಾವದು? ಅದೇ ಆತ್ಮ, ದೇವರು. ಇದು ಎಷ್ಟು ಸರಳ ಸುಲಭವಾಗಿದೆ! ಒಂದು ಕ್ಷಣ ಮಾತ್ರವೇ ಈ ಸತ್ಯದ ಕಡೆ ನೀವು ಗಮನವಿಟ್ಟು ಆಲೋಚಿಸುವದಾದರೆ, ನೀವು ದೇವರು ಹೊರತು ಬೇರೆ ಅಲ್ಲವೆಂಬುದನ್ನು ಮನಗಾಣಬಹುದು. ನಿಮ್ಮೊಳಗೆ ಆ ದೇವತ್ವವಿರುವದನ್ನು ಭಾವಿಸಿರಿ; ನೀವೇ ವಿಶ್ವದ ಪ್ರಭುಗಳೂ ವ್ಯವಸ್ಥಾಪಕರೂ ಸಾರ್ವಭೌಮರೂ ಆಗಿರಿ. ಆದರೆ ಈ ಜೀವವು ಬೆಳೆದು ಮುಪ್ಪಾಗುತ್ತದೆ, ಅನಂತರ ಸಾವೂ ಬರುತ್ತದೆ. ಬೀಜವು ಮೊಳಕೆಯೊಡೆದು ಬೆಳೆದಷ್ಟೂ ಕ್ಷೀಣವಾಗುತ್ತದೆ. ದೀಪವು ಬೆಳಗಬೇಕಾದರೆ

ಬತ್ತಿಯೂ ಎಣ್ಣೆಯೂ ಉರಿಯಬೇಕು. ಆದ್ದರಿಂದ ದೇವರಾಗಿ ಬದುಕ ಬೇಕಾದರೆ, ಹೊರಗೆ ಹರಿಯುವ ಪ್ರವೃತ್ತಿಯು ನಿಲ್ಲಬೇಕು, ಕ್ಷುದ್ರವಾದ ಅಹಂಕಾರವು, ಮಿಥ್ಯಾ ಆತ್ಮವು, ಹುಸಿ ನಾನು ಉರಿದು ಹೋಗಬೇಕು.

ಈ ವಿಚಾರವು ನಮ್ಮ ಹಿಂದಿನ ಕಥೆಯಿಂದ ದೂರ ಒಯ್ಯಬಹುದು. ಅದನ್ನೇ ಮುಂದುವರಿಸೋಣ. ಆ ಬಾಲಕಿಯು ಹೇಳಿದಳು; "ನಾಮಕ್ಕೆ ಬೆಲೆಯು ನಿಶ್ಚಿತ ವಾಗಿದೆಯೆಂದು ತಿಳಿಯದೆ ಸ್ವಾಮಿ ! ನಿಮಗೆ ನಾಮವು ಬೇಕಾದರೆ ಈ ಕತ್ತಿಯಿಂದ ನಿಮ್ಮ ತಲೆಯನ್ನು ಕತ್ತರಿಸಿ ಹಾಕಬೇಕು. ಹಾಗಾದರೇ ನಿಮಗೆ ನಾಮವು ದೊರಕು ವದು." ಇಲ್ಲಿ ನಾಮವೆಂದರೆ ಬಾಲಕಿಗೆ ದೇವರ ನಾಮವೆಂದೂ ದೇವರೆಂದೂ ಆ ಸಾಹು ಕಾರನಿಗೆ ರತ್ನಮಾಲಿಕೆಯೆಂದೂ ಅಭಿಪ್ರಾಯವಿತ್ತು. ಆ ಮಗುವು ನಿರ್ಭಯವಾ ಗಿಯೂ ನಿರ್ದಾಕ್ಷಿಣ್ಯವಾಗಿಯೂ ಸಮಾಧಾನವಾಗಿಯೂ "ನಿಮಗೆ ನಾಮವು ಬೇಕಾ ದರೆ ನಿಮ್ಮ ತಲೆಯನ್ನು ಬಲಿಕೊಡಬೇಕು" ಎಂದು ಹೇಳುತ್ತಿತ್ತು. ಆ ಬಡ ಗಿರಾ ಕಿಗೆ ಭಯವಾಗಿ ಉದ್ವೇಗದಿಂದ ಕೂಗುವದಕ್ಕೆ ತೊಡಗಿದನು. ನೆರೆ ಹೊರೆಯವ ರೆಲ್ಲಾ ಓಡಿ ಬಂದರು. ಅವನು "ನೋಡಿ, ಈ ಹಾಳು ಗುಡಿಸಿಲಿನಲ್ಲಿ ಕಟುಕರೂ ಕೊಲೆ ಪಾತಕಿಗಳೂ ನರಘಾತಕರೂ ತುಂಬಿದ್ದಾರೆ. ಈ ಹುಡುಗಿಯ ತಂದೆ ತಾಯಿ ಗಳು ಇನ್ನೂ ಹೆಚ್ಚು ಪಾಪಿಷ್ಠರೂ ಕೊಲೆಗಡುಕರೂ ಇರಬೇಕು. ಇದನ್ನು ಪೋಲೀಸ್ ಅಧಿಕಾರಿಗಳಿಗೆ ತಿಳಿಸಬೇಕು." ಎಂದು ಕೂಗುತ್ತಿದ್ದನು. ಆದರೆ ಜನರು, "ಓ, ಹಾಗೆ ಹೇಳಬೇಡಿ ; ಈ ಬಾಲಕಿಯ ಮಾತಾಪಿತೃಗಳು ಬಹಳ ಸಾತ್ವಿಕರು, ಧಾರ್ಮಿಕರು, ದೈವೀ ಸಂಪತ್ತುಳ್ಳವರು." ಎಂದು ಹೇಳಿದರು. ಅವನು "ಇಂಥಾ ವೇಷಧಾರಿಗಳು ಧರ್ಮದ ಸೋಗಿನಲ್ಲಿ ಮಾಡಬಾರದುದನ್ನು ಮಾಡುತ್ತಾರೆಂಬದನ್ನು ನಾನು ಬಲ್ಲೆ" ಎಂದು ಕೂಗುತ್ತಿದ್ದನು. ಆಗ ಆ ದೊಡ್ಡ ಗೊಂದಲದಲ್ಲಿ ಆ ಬಾಲಕಿಯ ತಂದೆಯು ಒಮ್ಮೆಗೇ ತೋರಿಕೊಂಡನು. ಅದನ್ನು ತಿಳಿದ ಉದ್ರಿಕ್ತನಾದ ಸಾಹುಕಾರನು ಅವನ ಕುತ್ತಿಗೆಯನ್ನು ಹಿಸುಕಬೇಕೆಂಬಷ್ಟು ಸಿಟ್ಟಿನಿಂದ ಕ್ರೂರವಾದ ಭಾಷೆಯಲ್ಲಿ "ಇಷ್ಟು ಸಣ್ಣ ಮಕ್ಕಳನ್ನು ಸಹ ಕೊಲೆಗಾರರನ್ನಾಗಿ ಮಾಡುವಷ್ಟು ಕೊಲೆಪಾತಕಿಗಳೇನಯ್ಯ ನೀವು ? ನಿಮಗೆ ಎಂಥಾ ಘೋರಶಿಕ್ಷೆಯನ್ನು ಕೊಟ್ಟರೂ ಸಾಲದಾಗಿದೆ..." ಎಂದು ಮೊದಲಾಗಿ ಕೂಗಾಡಿದನು. ಆದರೆ ಆ ಸಾಧುಪುರುಷನು ಕ್ಷುಬ್ಧನಾಗದೆ, ಸಮಾಧಾನ ದಿಂದ ಎಲ್ಲಾ ವಿಷಯವನ್ನೂ ತಿಳಿದ ಕೂಡಲೇ ಭಾವಾವಿಷ್ಟನಾದನು. ಅವನ ಹೃದ ಯವು ದೈವಭಾವದಿಂದ ತುಂಬಿ ತುಳುಕುತ್ತಿತ್ತು. ಅವನು ಆನಂದಪುಳಕಿತನಾದನು. ಅವನ ಕಣ್ಣುಗಳ ಮೇಲೆ ಆನಂದ ಬಾಷ್ಪವು ಸುರಿಯುತ್ತಿತ್ತು. ಅವನು ಗದ್ಗದ ಕಂಠ ದಿಂದ "ಓ ಸಂತರೆ, ಮಹಾತ್ಮರೆ, ದೇವತೆಗಳೆ, ದೇವರೆ ! ಮೂಢ ಬಾಲಕಿಯಿಂದ ಅನರ್ಘವಾದ ದೇವರ ನಾಮವು ಇಷ್ಟು ಅಗ್ಗವಾಯಿತೆ ? ಇಷ್ಟು ಅಪಮಾನಿತವಾ ಯಿತೆ ? ಒಂದು ತಲೆಗೋ ಹೃದಯಕ್ಕೋ ಕೊಡುವಷ್ಟು ನಾಮದ ಬೆಲೆಯು ಕೀಳಾ ಯಿತೆ ? ಅತ್ಯಂತ ಪ್ರಿಯವಾದ ಸ್ವರ್ಗವೂ ಅಪವರ್ಗವೂ ಅಮೃತವೂ ದೇವತ್ವವೂ

ಒಂದು ಜೀವದ ಬೆಲೆಗೆ ತೆರುವಷ್ಟು ಭಯಂಕರ ನಿಕೃಷ್ಟವಾಯಿತೆ! ಸತ್ಯಸ್ವರೂಪದ ಕ್ಷಣಮಾತ್ರ ದರ್ಶನವನ್ನು ಪಡೆಯಬಹುದಾದರೆ, ಕೋಟಿ ಕೋಟಿ ಜೀವಗಳು ಸೃಷ್ಟಿಯಾಗಿ ನಾಶವಾಗಲಿ! ಪವಿತ್ರವಾದ ಪರಮಾತ್ಮ ಜ್ಞಾನವು ಒಂದು ಕ್ಷಣವೇ ಹೊಳೆಯುವದಾದರೆ, ಕೋಟಿ ಕೋಟಿ ಜೀವಗಳೂ ತಲೆಗಳೂ ತುಂಡು ತುಂಡಾಗಲಿ, ಕತ್ತರಿಸಿ, ಕತ್ತರಿಸಿ ಬೀಳಲಿ!" ಎಂದು ಉದ್ಗಾರ ಮಾಡಿದನು.

ಉತ್ಕಟವಾದ ಭಾವಾವೇಶದಿಂದ ಆ ಮಹಾತ್ಮನು ತನ್ನಷ್ಟಕ್ಕೆ ತಾನು ಹೀಗೆ ಆಲಾಪ ಮಾಡಿದೊಡನೆ ಆ ವಿಚಿತ್ರ ಗಿರಾಕಿಯ ಮನಸ್ಸು ಕರಗಿತು. ಸುತ್ತಲೂ ನೆರೆದಿದ್ದ ಜನರು ಬೆರಗಾಗಿ ನಿಂತಿದ್ದರು. ಬಾಲಕಿಗೂ ಆಕೆಯ ತಂದೆತಾಯಿಗಳಿಗೂ ನಾಮವೆಂದರೆ ಪರಮಾಮೃತವಾದ ದೇವರ ನಾಮವೆಂಬ ಭಾವನೆಯಿದ್ದುದನ್ನು ತಿಳಿದುಕೊಳ್ಳಲಾರದ ಪ್ರಾಪಂಚಿಕವಾದ ತಮ್ಮ ಮನಸ್ಸಿನ ಮೌಢ್ಯಕ್ಕಾಗಿ ಆ ಸಾಹುಕಾರನಿಗೂ ಜನರಿಗೂ ನಾಚಿಕೆಯೂ ವಿಸ್ಮಯವೂ ವಿಷಾದವೂ ಆಯಿತು.

ಮಧುರವಾದ ಜ್ಞಾನಾಮೃತವನ್ನು ಸವಿಯ ಬೇಕಾದರೆ, ನಾವು ತೆರಬೇಕಾಗಿರುವ ಬೆಲೆ ಏನು—ಎನ್ನುವದನ್ನು ಈ ಕಥೆಯು ತಿಳಿಸುತ್ತದೆ. ಆತ್ಮಾನುಭವಕ್ಕೆ ಅನಿವಾರ್ಯವಾಗಿ ಸಲ್ಲಿಸಬೇಕಾಗಿರುವ ಬೆಲೆಯೆಷ್ಟು—ಎನ್ನುವದನ್ನು ಈ ಕಥೆಯು ಬೋಧಿಸುತ್ತದೆ.

ಕುತ್ಸಿತವಾದ ವಿಷಯ ಭೋಗವನ್ನು ಬಿಡದೆ ಆತ್ಮಾನುಭವವನ್ನು ಪಡೆಯುವದು ಸಾಧ್ಯವಿಲ್ಲವೆನ್ನುವದನ್ನು ಲಕ್ಷ್ಯದಲ್ಲಿಡಬೇಕು.

ಸಾಧುಗಳು ನಾಮವೆಂಬ ರತ್ನಾಭರಣದ ವ್ಯಾಪಾರಿಗಳು. ನಿಮ್ಮ ಪಶುಸ್ವಭಾವದ ತಲೆಯ ಬೆಲೆಯನ್ನು ಕೊಟ್ಟ ಹೊರತು ಆ ಸ್ವರ್ಗ ಸೀಮದ ಸುಖವು ನಿಮಗೆ ದಕ್ಕುವದಿಲ್ಲ. ಆತ್ಮ ಸುಖವೇ ಸುಂದರವಾದ ರತ್ನಾಭರಣ. ಆ ಪೂರ್ಣ ಜ್ಞಾನದ ಆನಂದವೂ ನಿಮಗೆ ಲಭಿಸಿಲ್ಲವಾದರೆ, ನೀವು ಸರಿಯಾದ ಬೆಲೆಯನ್ನು ತೆತ್ತಿಲ್ಲವೆಂದೇ ಅರ್ಥವು. ಆದ್ದರಿಂದ ಆ ಬೆಲೆಯನ್ನು ಚೆಲ್ಲಿರಿ; ಈ ನಿಮಿಷವೇ ಪರಮಾನಂದವನ್ನು ಅನುಭವಿಸುವಿರಿ.

ಒಬ್ಬ ಮನುಷ್ಯನು ಮೇಲಿನಿಂದ ಬಿದ್ದು ಕಾಲನ್ನು ನೋಯಿಸಿಕೊಂಡು, ಅದಕ್ಕೆ ಗುರುತ್ವಾಕರ್ಷಣ ಶಕ್ತಿಯೇ ಕಾರಣವೆಂದು ಅದರಲ್ಲಿ ತಪ್ಪನ್ನು ಹುಡುಕಿ, ಉದ್ವಿಗ್ನನಾಗಿ "ಓ ಬಿಕನಾಸಿ ಗುರುತ್ವಾಕರ್ಷಣ ನಿಯಮವೇ! ನೀನು ನನ್ನನ್ನು ಬೀಳುವಂತೆ ಮಾಡಿದೆ, ಹಾಳಾಗು." ಎಂದು ನಿಂದಿಸಿದನು. ಆದರೆ ಗುರುತ್ವಾಕರ್ಷಣನಿಯಮವು ಹಾಳಾಗುವದಕ್ಕಿಂತಲೂ ಲಕ್ಷಾಂತರ ಜನರು ಬಿದ್ದು, ಕಾಲು ಮುರಿದುಕೊಂಡು, ಹಾಳಾಗುವದು ಹೆಚ್ಚು ಉತ್ತಮವಾದುದು. ಆದ್ದರಿಂದ ಪ್ರಕೃತಿ ನಿಯಮಗಳ

ಜೊತೆಗೆ ಹೋರಾಟಕ್ಕೆ ಹೋಗದೆ, ಎಚ್ಚರಿಕೆಯಿಂದ ನಡೆಯುತ್ತಿದ್ದರೆ, ನೀವು ಬೀಳುವದಿಲ್ಲ. ನಿಮ್ಮ ಎಲ್ಲಾ ಪತನಕ್ಕೂ ಗಾಯಗಳಿಗೂ ನೋವುಗಳಿಗೂ ಚಿಂತೆಗಳಿಗೂ ತೊಂದರೆಗಳಿಗೂ ನಿಮ್ಮೊಳಗಿರುವ ಏನೋ ಒಂದು ದೋಷವೇ–ದೌರ್ಬಲ್ಯವೇ–ಕಾರಣವು. ಸನ್ನಿವೇಶಗಳೊಡನೆ ಯುದ್ಧಕ್ಕೆ ಹೋಗದೆ, ಜನರನ್ನು ದೂಷಿಸದೆ, ಇನ್ನೊಬ್ಬರ ಮೇಲೆ ತಪ್ಪನ್ನು ಹೊರಿಸದೆ, ನಿಮ್ಮಲ್ಲಿರುವ ದೌರ್ಬಲ್ಯವನ್ನು ನೀವು ಕಳೆದುಕೊಳ್ಳಿ. ಯಾವಾಗ ನಿಮಗೆ ಯಾವ ಕಷ್ಟ ಬಂದರೂ ನಿಮ್ಮಲ್ಲಿರುವ ಯಾವದೊಂದು ದೋಷವೇ ಅದಕ್ಕೆ ಕಾರಣವೆಂದು ತಿಳಿಯಿರಿ. ಇದನ್ನು ನೆನಪಿಟ್ಟುಕೊಂಡು ವರ್ತಿಸಬೇಕೇ ಹೊರತು ಪ್ರಕೃತಿ ನಿಯಮಗಳ ಜೊತೆಗೆ ಹೊಡೆದಾಡಬಾರದು

ಒಳಗಿರುವ ಈ ದೌರ್ಬಲ್ಯವೇನು? ದೇಹವನ್ನೂ ಇಂದ್ರಿಯಗಳನ್ನೂ ನೀವೆಂದು ಭಾವಿಸುವ ಅಜ್ಞಾನ ಗಾಡಾಂಧಕಾರವೇ ಈ ದೋಷವಾಗಿದೆ. ಅದನ್ನು ತಿರಸ್ಕರಿಸಿ, ಕಳೆದುಕೊಳ್ಳಿ ; ಆಗ ಶಕ್ತಿಯೇ ನೀವಾಗುತ್ತೀರಿ. ನಿಮ್ಮ ಪಿತ್ತಕೋಶವನ್ನೋ ಗುಲ್ಮವನ್ನೋ ಗಮನಿಸುವದು ಯಾವಾಗ? ಅದು ಕೆಟ್ಟಾಗ. ನಿಮ್ಮ ಶ್ವಾಸಕೋಶವನ್ನು ನೀವು ಭಾವಿಸುವದು ಯಾವಾಗ? ಅದಕ್ಕೆ ಕಷ್ಟವಾದಾಗ. ಕಣ್ಣು ಮೂಗುಗಳು ಆರೋಗ್ಯವಾಗಿರುವಾಗ ಅವುಗಳು ಇವೆಯೆಂಬುದೇ ತಿಳಿಯುವದಿಲ್ಲ.

ಹೀಗೆಯೇ, ನಿಮಗೆ ದೇಹಭಾವನೆ ಬಂದರೆ, ಅದರಲ್ಲಿ ಏನೋ ದೋಷವಿರಬೇಕೆಂದೂ ಅದೊಂದು ವ್ಯಾಧಿಯೆಂದೂ ತಿಳಿಯಬೇಕು. ನೀವು ಪೂರ್ಣಾರೋಗ್ಯದಿಂದಿರುವಾಗ ನಿಮ್ಮಲ್ಲಿ ಧೈರ್ಯವೂ ಶಕ್ತಿಯೂ ನಿಮ್ಮ ಅನುಭವಕ್ಕೆ ಬರುತ್ತದೆ. ಆಗ ನೀವು ಈ ದೇಹವೆಂದೂ ಒಂದು ವ್ಯಕ್ತಿಯೆಂದೂ ನಿಮಗೆ ಅಷ್ಟಾಗಿ ತೋರುವದಿಲ್ಲ; "ಈ ಸುಳ್ಳು ಆತ್ಮವೇ ನಾನು—ಈ ಪುಟ್ಟ ದೇಹವೇ ನಾನು" ಎಂಬ ಅಣಕವನ್ನೂ ಭ್ರಮೆಯನ್ನೂ ನೀವು ಮೀರಿರುತ್ತೀರಿ. ನಿಮಗೆ ಇಡೀ ಜಗತ್ತೇ ನಿಮ್ಮ ದೇಹವಾಗಿರುತ್ತದೆ. ಆ ಸ್ಥಿತಿಯಲ್ಲಿ ನೀವು ಇದ್ದ ಕೂಡಲೇ ಆ ಕ್ಷಣದಲ್ಲಿಯೇ—ಆನಂದವು ನಿಮ್ಮಲ್ಲಿ ಸ್ಫುರಿಸುತ್ತದೆ; ಬಯಕೆಯೇ ಏಳುವದಿಲ್ಲ. ದೇಹವು ನಾನೆಂಬ ಅಜ್ಞಾನ ಕತ್ತಲೆಯಲ್ಲಿ ನೀವು ಮತ್ತೆ ಮತ್ತೆ ಎಡವಿ ಬೀಳುತ್ತೀರಿ; ಅಜ್ಞಾನವೇ ನಿಮ್ಮಲ್ಲಿರುವ ದೌರ್ಬಲ್ಯವು.

ಒಬ್ಬ ಮಹಾತ್ಮರಲ್ಲಿ ಶಿಷ್ಯನೊಬ್ಬನು ಪ್ರಶ್ನೆಮಾಡಿದನು: "ಕ್ರಿಸ್ತನನ್ನು ಶಿಲುಬೆಗೇರಿಸಿ ಮೈತುಂಬಾ ಮೊಳೆಗಳನ್ನು ಜಡಿದಾಗ, ಅವನಿಗೇಕೆ ನೋವಾಗಲಿಲ್ಲ?" ಎಂದು ಕೇಳಿದನು. ಆಗ ಆ ಮಹಾತ್ಮನಲ್ಲಿ ಎರಡು ತೆಂಗಿನ ಕಾಯಿಗಳಿದ್ದವು. ಒಂದು ಎಳೆಯದಾಗಿ ಹಸಿಯಾಗಿದ್ದಿತು. ಇನ್ನೊಂದು ಕಾಯಿಯು ಬಲಿತು ಒಣಗಿದ್ದಿತು. ಆ ಮಹಾತ್ಮನು ಹೇಳಿದನು, "ಈಗ ಈ ಹಸಿಯ ಕಾಯಿಯ ಚಿಪ್ಪನ್ನು ಒಡೆದರೆ, ಒಳಗಿನ ಕಾಯಿಗೂ ಗಾಯವಾಗಿ, ಕಾಯಿಯೂ ಒಡೆದು ಚೂರಾಗುತ್ತದೆ. ಈ ಒಣಗಿದ ಕಾಯಿಯನ್ನು ಒಡೆದರೆ, ಒಳಗಿನ ಕಾಯಿಯು ಗಿಟುಕಾಗಿ ಚಿಪ್ಪನ್ನು ಬಿಟ್ಟು ಪ್ರತ್ಯೇಕವಾಗಿರುವದರಿಂದ ಆ ಕೊಬ್ಬರಿಗೆ ಸ್ವಲ್ಪವೂ ಅಪಾಯವಾಗುವುದಿಲ್ಲ; ಗಾಯವಾಗುವದಿಲ್ಲ.

ಆದರೆ ಹಸಿಯ ಕಾಯಿಯು ಚಿಪ್ಪಿಗೆ ಅಂಟಿಕೊಂಡಿರುವದರಿಂದ ಚಿಪ್ಪಿಗೆ ಆಗುವ ಗಾಯವೆಲ್ಲಾ ಕಾಯಿಗೂ ಆಗುತ್ತದೆ. ಕ್ರಿಸ್ತನು, ಅವಿದ್ಯಾಕಾಮಗಳು ಶೋಷಣ ವಾಗಿ ಒಣಗಿದ ಕೊಬರಿಯಂತಾಗಿದ್ದನು. ಹೊರಗಿನ ಚಿಪ್ಪಿನಂತಿರುವ ದೇಹದ ಅಭಿಮಾನವನ್ನು ಬಿಟ್ಟು ಅವನು ಬೇರೆಯಾಗಿ ಸ್ವಸ್ವರೂಪದಲ್ಲಿ ನಿಂತಿದ್ದನು. ಆದ್ದ ರಿಂದ ಅವನ ಹೊರಗಿನ ಚಿಪ್ಪಿಗೆ—ದೇಹಕ್ಕೆ—ಮೊಳೆಗಳನ್ನು ಹೊಡೆದರೂ ಒಳಗಿನ ಅವನ ಆತ್ಮವು ಸ್ವಲ್ಪವೂ ನೋಯಲಿಲ್ಲ. ಆದ್ದರಿಂದ ಅದಕ್ಕಾಗಿ ಏಕೆ ದುಃಖ ಪಡ ಬೇಕು, ಅಳಬೇಕು, ಗೋಳಾಡಬೇಕು? ಸಾಮಾನ್ಯ ಜನರ ವಿಷಯವೇ ಬೇರೆ. ಹಸಿ ಕಾಯಿಯು ಹೊರಗಿನ ಚಿಪ್ಪಿಗೆ ಅಂಟಿಕೊಂಡಿರುವದರಿಂದ ಚಿಪ್ಪಿಗೆ ಗಾಯವಾದರೆ ಒಳಗಿನ ಕಾಯಿಗೂ ಗಾಯವಾಗುವಂತೆ ಸಾಮಾನ್ಯ ಜೀವರ ದೇಹಕ್ಕೆ ಆಗುವ ದುಃಖವು ಅವರ ಒಳಗೂ ತಳಮಳವನ್ನುಂಟುಮಾಡುತ್ತದೆ.

ಹೊರಗಿನ ಚಿಪ್ಪಿಗೆ ಅಂಟಿಕೊಂಡಿರುವದೇ, ಅದಕ್ಕೆ ಗುಲಾಮರಾಗಿರುವದೇ ನಿಮ್ಮಲ್ಲಿರುವ ದೊಡ್ಡ ದೌರ್ಬಲ್ಯ, ದೋಷ, ಅಥವ ರೋಗವು. ಹೀಗೆ ಚಿಪ್ಪಿನಲ್ಲಿ ರುವ ಅಭಿಮಾನವನ್ನೂ, ಆಸಕ್ತಿಯನ್ನೂ ದಾಸ್ಯವನ್ನೂ ಬಿಡುವದೇ ಪ್ರಾಪಂಚಿ ಕರ ದೃಷ್ಟಿಯಿಂದ ಸಾವು. ಈ ಸಾವನ್ನು ಅನುಭವಿಸಿ, ಚಿಪ್ಪಿನಿಂದಲೂ ಚಿಪ್ಪಿನ ಸಂಬಂಧದಿಂದಲೂ ಹಂಬಲದಿಂದಲೂ ನಿಮ್ಮನ್ನು ನೀವು ಬಿಡುಗಡೆ ಮಾಡಿಕೊಂಡ ಹೊರತು, ಸಾವನ್ನು ಜಯಿಸಲು ಸಾಧ್ಯವಿಲ್ಲ; ನೀವು ಕ್ಲೇಶವನ್ನೂ ದುಃಖವನ್ನೂ ರೋಗವನ್ನೂ ನೋವನ್ನೂ ಮೀರುವದು ಸಾಧ್ಯವಿಲ್ಲ. ದೇಹವು ನಿಮಗೆ ಎಂದೆಂದೂ ಇರಲಿಲ್ಲವೇನೋ ಎಂಬಂತೆ ಆಗಲಿ. ದೇಹವು ಎಂದೆಂದೂ ಹುಟ್ಟಿಯೇ ಇರಲಿಲ್ಲ ವೇನೋ ಎನ್ನುವಷ್ಟು ತೀವ್ರವಾಗಿ ಪರಮಾತ್ಮ ಸ್ವರೂಪದಲ್ಲಿ ನೆಲೆನಿಂತು ಜೀವಿಸು ತ್ತಿರುವವನೇ ಮುಕ್ತಾತ್ಮನು.

"ಅಯ್ಯೋ! ನಾನೆಂದೂ ಹುಟ್ಟದಿದ್ದರೆ ಎಷ್ಟು ಚೆನ್ನಾಗಿತ್ತು!" ಎನ್ನುವ ಮಾತನ್ನು ಅನೇಕರ ಮುಖದಿಂದ ರಾಮನು ಕೇಳಿದ್ದಾನೆ. "Let the day Perish in Which I was born" "ನಾನು ಹುಟ್ಟಿದ ದಿನವು ನಾಶವಾಗಲಿ" ಎಂಬ ಜಾಬ್ (Job)ನ ಸುವಾರ್ತೆಯನ್ನು ಡೀನ್ ಸ್ವಿಫ್ಟ್ (Dean Swift)ನು ಓದುವ ಪದ್ಧತಿಯಿತ್ತು. ಆದರೆ ರಾಮನು ಹೇಳುವದೇನೆಂದರೆ "ತಮ್ಮ! ನಿನ್ನ ಜನ್ಮದಿನವು ನಾಶವಾಗುವಂತೆ ಮಾಡುವ ರೀತಿಯು ಇದಲ್ಲ. ನಿನ್ನ ಅಭಿಮಾನವೂ ಆಸಕ್ತಿಯೂ ಆಶೆಗಳೂ ನಾಶವಾಗಲಿ. ಎಂದೂ ನಿನಗೆ ದೇಹವೇ ಇರಲಿಲ್ಲವೇನೋ, ಎಂದೂ ನೀನು ಹುಟ್ಟಿಯೇ ಇಲ್ಲವೇನೋ ಎನ್ನುವಷ್ಟು ತೀವ್ರವಾಗಿ ನಿನ್ನ ನೆನಪಿನಲ್ಲಿ ನೀನು ಹುಟ್ಟಿದ ದಿನವು ಉಳಿಯದಷ್ಟು ಉತ್ಕಟವಾಗಿ ಪರಮಾತ್ಮ ಪ್ರಜ್ಞೆಯಲ್ಲಿ ಜೀವಿಸುತ್ತಿರಬೇಕು. ನೀವು ಗಾಢ ನಿದ್ರೆಯಲ್ಲಿ ರುವಾಗ ಎಚ್ಚರದ ಎಲ್ಲಾ ಅನುಭವಗಳೂ ಮಾಯವಾಗುವಂತೆ, ಮರೆತುಹೋಗುವಂತೆ, ನಿಮ್ಮ ಹಿಂದಿನ ಅನುಭವಗಳೂ ಸಂಬಂಧಗಳೂ ಖಾಲಿಯಾಗಿ, ಬಯಲಾಗುವಷ್ಟು

ಆತ್ಮಜ್ಞಾನದಲ್ಲಿ ನೀವು ಮುಳುಗಬೇಕು. ಚಿಪ್ಪಿನಿಂದ ಕೊಬರಿಯು ಬೇರ್ಪಡುವಂತೆ ಮಾಡುವ ರೀತಿಯೇ ಇದು. ಆಗ ನೀವು ಮೃತ್ಯುವನ್ನು ಜಯಿಸುತ್ತೀರಿ.

ನಿಮ್ಮ ಹಳೆಯ ಹಾಡುಗಳನ್ನೆಲ್ಲಾ ಈ ಹೊಸರಾಗಕ್ಕೆ ಹೊಂದಿಸುವದೇ ಆತ್ಮಾನುಭವ. ಹಳೆಯ ಹಾಡುಗಳು ಹಾಗೆಯೇ ಇರುತ್ತವೆ. ಆದರೆ ಎಲ್ಲವನ್ನೂ ಪೂರಾ ಹೊಸರಾಗದಲ್ಲಿ ಹಾಡಬೇಕು. ನೀವು ಪ್ರಪಂಚವನ್ನು ಪೂರಾ ಹೊಸನೋಟದಿಂದಲೇ ನೋಡಬೇಕು. ಎರಡು ನೋಟಗಳನ್ನೂ ನೀವು ಮಿಶ್ರಮಾಡುವದು ಸಾಧ್ಯವಲ್ಲ. ಯಾವದೋ ಒಂದು ವಿದ್ಯಮಾನವನ್ನು ನೀವು ಪ್ರಾಪಂಚಿಕ ದೃಷ್ಟಿಯಿಂದ ನೋಡಿ ಇನ್ನೊಂದು ಸನ್ನಿವೇಶವನ್ನು ಹೊಸ ಪಾರಮಾರ್ಥಿಕ ದೃಷ್ಟಿಯಿಂದ ನೋಡುವದು ಶಕ್ಯವಲ್ಲ. ನಿಮ್ಮ ನೋಟವೂ ನಿಲುಮೆಯೂ ಸಂಪೂರ್ಣವಾಗಿ ಬದಲಾಗಲಿ. ಪ್ರತಿಯೊಂದನ್ನೂ ದೇವರೆಂದು ಭಾವಿಸಿ, ದೇವರೆಂದು ತಿಳಿಯಿರಿ. ದೇವರು ಪ್ರಪಂಚದೊಡನೆ ಯಾವ ಸಂಬಂಧವನ್ನು ಇಟ್ಟುಕೊಂಡಿದ್ದಾನೋ ನೀವು ಪ್ರಪಂಚದೊಡನೆ ಅದೇ ಸಂಬಂಧವನ್ನು ಇಟ್ಟುಕೊಳ್ಳಬೇಕು. ಮನಸ್ಸೇ ಸಂಪೂರ್ಣ ಪರಿವರ್ತನೆಯನ್ನು ಹೊಂದಬೇಕು. ಇದನ್ನು ಕೆಲವು ಕಥೆಗಳಿಂದ ಮನಗಾಣಿಸಬಹುದು.

ಒಮ್ಮೆ ರಾಮನ ವೇದಾಂತದ ಉಪನ್ಯಾಸ ಮಹಿಮೆಯಿಂದ ಸಭಿಕರೆಲ್ಲಾ ದೇವರ ಭಾವನೆಯಲ್ಲಿ ಮುಳುಗಿ, ಪ್ರಪಂಚದ ಎಚ್ಚರವನ್ನೇ ಕಳೆದುಕೊಂಡಂತೆ ಇದ್ದಾಗ, ಒಬ್ಬ ಮನುಷ್ಯನು ಅಳುತ್ತಾ ಒಳಗೆ ಬಂದು ಎದೆ ಎದೆ ಬಡಿದು ಕೊಳ್ಳುವದಕ್ಕೆ ತೊಡಗಿದನು. ರಾಮನ ಮಗನು ಸತ್ತನೆಂದು ಅವನು ಗೋಳಾಡುತ್ತಿದ್ದನು. ಆ ಹುಡುಗನು ಅವನ ಸಂಬಂಧಿಯಾಗಿದ್ದನು. ಆದರೆ, ಆಗ ಅಲ್ಲಿದ್ದ ದೈವಿಕ ವಾತಾವರಣದ ಪ್ರಭಾವದಿಂದಲೂ ಎಲ್ಲರಲ್ಲಿ ಎಚ್ಚರಗೊಂಡಿದ್ದ ವೇದಾಂತ ವಿಚಾರದ ಮನೋಭಾವದಿಂದಲೂ ಯಾರೂ ಅವನ ಕಡೆ ಲಕ್ಷ್ಯ ಕೊಡಲೇ ಇಲ್ಲ. ಅವನ ಅಳುವು ಎಲ್ಲರಿಗೂ ಅಣಕವಾಗಿತ್ತು, ಅರ್ಥಹೀನವಾಗಿತ್ತು. ಕೈಲಾಸ ಶಿಖರದ ಎತ್ತರದಿಂದ ಸಹಸ್ರಾರು ಅಡಿಗಳ ಕೆಳಗಿರುವ ಒಂದು ಮೃಗವನ್ನು ಅಥವಾ ಒಂದು ಕಂದರವನ್ನು ನೋಡಿದರೆ ಅದು ಎಷ್ಟು ಸಣ್ಣದಾಗಿ ಕಾಣಬಹುದೋ ಅವನ ದುಃಖವೂ ಎಲ್ಲರಿಗೂ ಅಷ್ಟು ಕ್ಷುದ್ರವಾಗಿ ಕಾಣುತ್ತಿತ್ತು. ಕೊನೆಗೆ ಅವನೇ ಪೆಚ್ಚಾದನು. ಅವನು ನಿರೀಕ್ಷಿಸಿದಂತೆ ಯಾರೂ ಸಹಾನುಭೂತಿಯಿಂದ ಅವನೊಡನೆ ಅಳಲಿಲ್ಲ. ತತ್ತ್ವೋಪದೇಶವನ್ನು ಶ್ರವಣ–ಮನನ ಮಾಡಿದ್ದರ ಬಲದಿಂದ ಎಲ್ಲರ ಮನಸ್ಸೂ ದೇವರ ಸ್ವರೂಪದ ಅರಿವಿನಲ್ಲಿ ಮುಳುಗಿದ್ದರಿಂದ ಯಾರ ಮನಸ್ಸಿನಲ್ಲಿಯೂ ಕಳವಳವುಂಟಾಗಲಿಲ್ಲ. ಪ್ರಪಂಚದಲ್ಲಿರುವ ಪ್ರತಿಯೊಂದನ್ನೂ ಪ್ರತಿಯೊಂದು ಘಟನೆಯನ್ನೂ, ತಾನು ದೇವರಾಗಿ ದೇವರ ದೃಷ್ಟಿಯಿಂದ ನೋಡುವ ಸ್ಥಿತಿಯು ಆಗ ಎಲ್ಲರಲ್ಲಿಯೂ ಇದ್ದುದರಿಂದ ಯಾರೂ ತಳಮಳಗೊಳ್ಳಲಿಲ್ಲ. ಆಗ, ಎಲ್ಲಾ ಹಳೆಯ ಹಾಡುಗಳನ್ನೂ ದಿವ್ಯವಾದ ಹೊಸರಾಗಕ್ಕೆ ಹೊಂದಿಸಿ ಹೇಳುವ ವಿಚಿತ್ರವಾದ ನೂತನ ಮನೋಭಾವವಿದ್ದಿತು. ಆ ಸಮಯದಲ್ಲಿ ಈ ಮಾತುಗಳು ಈ ತುಟಿಗಳಿಂದ ನುಸುಳಿದವು:

"ಓ ತಮ್ಮಾ! ರಾಮನ ಮಗನು ಸತ್ತು ಹೋದನೆಂದು ನೀನು ಸುದ್ದಿಯನ್ನು ತಿಳಿಸುವದಕ್ಕಾಗಿ ಬಂದಿದ್ದಿ. ನಿನಗೆ ಅವನು ಸಂಬಂಧ ಪಟ್ಟವನೆಂಬ ಅಭಿಮಾನದಿಂದ ಗೋಳಾಡುತ್ತಿದ್ದಿ. ರಾಮನೂ ರಾಮನ ಅಭಿಮಾನಿಗಳೂ ಸಹ ನಿನ್ನಂತೆಯೇ ದುಃಖಪಡಬೇಕೆಂದು ನಿರೀಕ್ಷಿಸುತ್ತಿದ್ದಿ. ನಮ್ಮದು ಎನ್ನುವ ಅಭಿಮಾನವನ್ನು ಬಿಟ್ಟರೆ ಸಾವು ಎನ್ನುವದು ಸಾಮಾನ್ಯವಾಗಿದೆ. ಇದರಲ್ಲಿ ವಿಶೇಷವೇನು? ಹುಟ್ಟಿದ ಪ್ರಾಣಿಗಳೆಲ್ಲಾ ಸಾಯಲೇ ಬೇಕು. ಸತ್ತವರೂ ಹುಟ್ಟಲೇ ಬೇಕು. ಇದು ಅತ್ಯಂತ ಸ್ವಾಭಾವಿಕವಾದುದು. ಇದರಲ್ಲಿ ಅಸಾಧಾರಣತೆ ಏನಿದೆ? ಗಾಳಿಯು ಬೀಸುತ್ತಿದ್ದರೆ, ನದಿಯು ಹರಿಯುತ್ತಿದ್ದರೆ ಅದು ಕೇವಲ ಸ್ವಾಭಾವಿಕ. ಹಾಗೆಯೇ ಪ್ರತಿ ನಿಮಿಷವೂ ಕೋಟಿ ಕೋಟಿ ಪ್ರಾಣಿಗಳು ಸಾಯುತ್ತಿರುವದೂ ಅವುಗಳಲ್ಲಿ ಒಂದು ನಮದಾಗಿರಬಹುದಾದುದೂ ಸ್ವಾಭಾವಿಕ. ಅದು ನಮ್ಮ ಸಮಾಧಾನವನ್ನೇಕೆ ಕದಲಿಸಬೇಕು? ಸತ್ತವರಿಗಾಗಿ ಅಳುವದಾದರೆ, ನಾವು ಯಾವಾಗಲೂ ಅಳುತ್ತಲೇ ಇರಬೇಕು. ಯಾರೂ ಸಾವನ್ನು ತಪ್ಪಿಸಿಕೊಳ್ಳುವದು ಸಾಧ್ಯವಿಲ್ಲದ ಮೇಲೆ ನಮ್ಮವರಿಗಾಗಿ ಮಾತ್ರ ಏಕೆ ಅಳಬೇಕು? ಈ ಪಕ್ಷಪಾತವೇಕೆ? ಅಳತಕ್ಕವರೂ ಸಾಯತಕ್ಕವರೇ ಅಲ್ಲವೆ? ನೀವು ವಿಶ್ವವಿದ್ಯಾನಿಲಯವನ್ನು ಪ್ರವೇಶಿಸುವದು, ಅದನ್ನೇ ನಿಮ್ಮ ಸ್ವಂತ ಮನೆಯನ್ನಾಗಿ ಮಾಡಿಕೊಂಡು ಸಾಯುವವರೆಗೂ ಅಲ್ಲಿಯೇ ಇರುವದಕ್ಕಾಗಿಯೇ? ಸ್ವಲ್ಪ ಕಾಲವಿದ್ದು ಪರೀಕ್ಷೆಯನ್ನು ಕೊಟ್ಟು ಉತ್ತೀರ್ಣರಾಗಿ ಅದನ್ನು ಬಿಟ್ಟು ತೆರಳುವ ಮುನ್ನಡೆಗಾಗಿ ಅಲ್ಲವೆ? ಒಂದು ದಿನ ಅದನ್ನು ಬಿಡುವದಕ್ಕಾಗಿಯೇ ಅಲ್ಲಿ ಬಂದು ಸೇರುವದು. ಏಣಿಯನ್ನು ಹತ್ತುವದಕ್ಕೆ ತೊಡಗುವದು, ಅದನ್ನು ಏರಿ ಬಿಡಬೇಕೆಂದೇ ಹೊರತು, ಏಣಿಯ ಮೆಟ್ಟಲಿನ ಮೇಲೆ ನಿಂತಿರಬೇಕೆಂದಲ್ಲ. ನೀವು ಜನ್ಮವೆತ್ತಿದಾಗಲೇ ಅದನ್ನು ಒಂದುದಿನ ಬಿಡುವದು ನಿಶ್ಚಿತವಲ್ಲವೆ?

ಆದ್ದರಿಂದ ರಾಮನ ಮಗನೆಂದು ನೀವು ಕರೆಯುವ ಹುಡುಗನು ಸತ್ತಿದ್ದರೆ, ಅದು ಕೇವಲ ಸ್ವಾಭಾವಿಕ. ಅದರಲ್ಲಿ ವಿಶೇಷವೂ ವಿಚಿತ್ರವೂ ಏನೂ ಇಲ್ಲ. ಆದ್ದರಿಂದ ಅಷ್ಟಕ್ಕಾಗಿ ಯಾರೂ ಅಸಮಾಧಾನವಾಗುವ ಕಾರಣವಿಲ್ಲ.

ನಿಮ್ಮ ಪ್ರಾಪಂಚಿಕ ಪರಿಚಯಗಳನ್ನೂ ಪ್ರೇಮಗಳನ್ನೂ ಸಂಬಂಧಗಳನ್ನೂ ಈ ದೃಷ್ಟಿಯಿಂದ, ದೇವರ ದೃಷ್ಟಿಯಿಂದ ನೋಡಬೇಕು. ರಾಮನನ್ನೇ—ಸತ್ಯವನ್ನೇ—ನಿಮ್ಮ ಆತ್ಮವನ್ನಾಗಿ ನೋಡಬೇಕು. ಪ್ರಪಂಚದಲ್ಲಿಯೇ ಅತ್ಯಂತ ಉನ್ನತವಾದ ಹಿಮಾಲಯದ ಕೈಲಾಸ ಶಿಖರದಿಂದ ಪ್ರಪಂಚವನ್ನು ನೋಡಿದರೆ ಎಷ್ಟು ಅಲ್ಪವಾಗಿ ಕಾಣಬಹುದೋ ಆತ್ಮ ಭೂಮಿಕೆಯಿಂದ ವೀಕ್ಷಿಸಿದರೆ ಅಷ್ಟು ಕ್ಷುದ್ರವಾಗಿ ಕಾಣುತ್ತದೆ. ಅಲ್ಲಿ ನಿಂತು ದಿವ್ಯ ಜ್ಞಾನವೆಂಬ ದೂರದರ್ಶಕ ಯಂತ್ರದಿಂದ ನೋಡಿದರೆ ನೀವೇ ದೇವರೆಂದೂ ದೇವಾಧಿದೇವರೆಂದೂ ಪ್ರಕಾಶಗಳಿಗೆಲ್ಲಾ ಪ್ರಕಾಶವೆಂದೂ ಕಾಣುತ್ತೀರಿ. ನಾನೂ ಅದೇ ಆಗಿದ್ದೇನೆ. ನಾನು ಈ ದೇಹವಲ್ಲ, ಮನಸ್ಸಲ್ಲ ಈ ಅಲ್ಪವೂ ಮಿಥ್ಯವೂ ಕಾಮುಕವೂ ಆದ ಅಹಂಕಾರವಲ್ಲ; ನಾನೇ ದೇವರು. ಓ! ಅದನ್ನೇ ಭಾವಿಸಿರಿ, ಭಾವಿಸಿರಿ, ಅನುಭಾವಿಸಿರಿ. ನೀವೇ

ದೇವರೆಂದು ಅನುಭವ ಪಡೆದುಕೊಳ್ಳಿ. ಇದೊಂದೇ ಮುಖ್ಯವಾಗಿ ಬೇಕಾದುದು. ಈ ದೇಹವು ಒಂದು ಹೊಲಸು ಗುಡಿಸಿಲಿನಲ್ಲಿದ್ದರೆ ತಾನೆ ಏನು? ನಾನೇ ದೇವರೆಂಬ ಅರಿವಿದ್ದರೆ ಅದೇ ಸ್ವರ್ಗವಾಗಿ ಪರಿಣಮಿಸುತ್ತದೆ. ನಿಮ್ಮ ದೇಹವು ಅಕಸ್ಮಾತ್ ಚಿತ್ರಹಿಂಸೆಗೊಳಗಾಗಬಹುದು, ಅದಕ್ಕಾಗಿ ಚಿಂತಿಸಬೇಡಿ. 'ನಾನೇ ದೇವರು' ಎಂಬ ಪ್ರಜ್ಞೆಯು ಮಾತ್ರ ನಿಮ್ಮಲ್ಲಿದ್ದರೆ, ಈ ಪ್ರಪಂಚದಲ್ಲಿರುವ ಐಶ್ವರ್ಯವೆಲ್ಲಾ ನಿಮ್ಮದೇ ಆಗುತ್ತದೆ; ಈ ವಿಶ್ವದಲ್ಲಿರುವ ಸಕಲ ಸಂಪತ್ತೂ ನಿಮ್ಮದೇ ಆಗಿರುತ್ತದೆ. ನಿಮ್ಮಲ್ಲಿ ಆತ್ಮಜ್ಞಾನದ ಸಂಪತ್ತು ಒಂದಿದ್ದರೆ ಸಾಕು, ಮಿಕ್ಕ ಎಲ್ಲವನ್ನೂ ಎಸೆಯಿರಿ.

ಒಮ್ಮೆ ಒಬ್ಬ ಮಿತ್ರನು ಬಂದು ರಾಮನಿಗೆ, "ಸ್ವಾಮಿ! ಸ್ವಾಮಿ! ಒಬ್ಬ ಪ್ರಸಿದ್ಧ ಮಹಾರಾಜನು ನಿಮ್ಮನ್ನು ಗೌರವಿಸಲು ನಿಮ್ಮ ಸಂದರ್ಶನಕ್ಕಾಗಿ ಬರುತ್ತಾನೆ." ಎಂದು ಹೇಳಿದನು. ಈಗ ಇಲ್ಲಿ ನಾವು ವಿಚಾರಮಾಡಬೇಕಾದ ಒಂದು ಮುಖ್ಯ ವಿಷಯವಿದೆ. ಮುಖಸ್ತುತಿ ಮಾಡಿ ನಮ್ಮನ್ನು ಉಬ್ಬೇರಿಸುವ ಸ್ನೇಹಿತರು ನಮ್ಮ ಸುತ್ತಲೂ ಸೇರುತ್ತಾರೆ. ನಾವು ಬಹಳ ಎಚ್ಚರವಾಗಿರಬೇಕು; ಅದಕ್ಕೆ ವಶವಾಗಬಾರದು. ಈ ಸ್ನೇಹಿತನು ಬಹಳ ಅಭಿಮಾನದಿಂದ ಹಾಗೆ ಹೇಳುತ್ತಿರುವಾಗ ರಾಮನು ಎಚ್ಚರದಲ್ಲಿ ಎಚ್ಚರವಾಗಿ, ತನ್ನ ಆನಂದದಲ್ಲಿ ತಾನಿದ್ದನು. ಪ್ರತಿಯೊಂದನ್ನೂ ರಾಮನು ಆತ್ಮಾರಾಮನೇ ತಾನಾಗಿ ಈಶ್ವರನ ಭೂಮಿಕೆಯಿಂದ ನೋಡುತ್ತಿದ್ದನು. ಆದ್ದರಿಂದ ಆ ಸ್ನೇಹಿತನ ಅಭಿಮಾನದ ಮಾತುಗಳಿಗೆ ಮರುಳಾಗದೆ, ಸಹಜ ಪ್ರತಿಕ್ರಿಯಾರೂಪವಾಗಿ ರಾಮನ ಬಾಯಿಯಿಂದ ಈ ಮಾತುಗಳು ಹೊರಟವು: "ತಮ್ಮ! ರಾಜರಾಗಲೀ ಮಹಾರಾಜರಾಗಲೀ ಚಕ್ರವರ್ತಿ ಸಾರ್ವಭೌಮರಾಗಲೀ ಅವರಿಂದ ರಾಮನಿಗಾಗಬೇಕಾದುದೇನು? ನನಗೆ ಸತ್ಯವಾದ ಆತ್ಮನೊಬ್ಬನಿದ್ದರೆ ಸಾಕು. ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ನಮ್ಮೆಲ್ಲರಲ್ಲಿರುವ ಆತ್ಮನಿಗಿಂತಲೂ ಯಾರೂ ದೊಡ್ಡವರಿಲ್ಲ; ಯಾವ ಚಕ್ರವರ್ತಿಯೂ ದೊಡ್ಡವನಲ್ಲ. ಆತ್ಮನ ಹೊರತು ಮಿಕ್ಕೆಲ್ಲವೂ ಕ್ಷುಲ್ಲಕವಾದವು. ತುಚ್ಛವಾದವು; ಹುಡುಗಾಟಿಕೆಗಳು. ರಾಮನಿಗೆ ಯಾವದೂ ಮಹತ್ತಲ್ಲ; ಯಾವದರಲ್ಲಿಯೂ ಆಸಕ್ತಿಯಿಲ್ಲ. ಆತ್ಮನೊಬ್ಬನಿದ್ದರೆ ಸಾಕು. ಆ ಆನಂದಾನುಭವದಲ್ಲಿ ವಿರಾಮವಿಲ್ಲದಂತೆ ಕಾರ್ಯನಿರತನಾಗಿರುವದಕ್ಕೆ ನನಗೆ ಆತ್ಮನೊಬ್ಬನಿದ್ದರೆ ಸಮೃದ್ಧಿಯಾಗಿರುತ್ತದೆ. ವ್ಯರ್ಥವಾದ ಮಾತುಗಳಿಗೂ ಪ್ರಾಪಂಚಿಕ ವಿಷಯಗಳಿಗೂ ನನಗೂ ಏನೂ ಸಂಬಂಧವಿಲ್ಲ. ಈ ಶ್ರೀಮಂತರಾಗಲೀ ಮಹಾರಾಜರುಗಳಾಗಲೀ ರಾಮನ ದೇಹವನ್ನೂ ವ್ಯಕ್ತಿತ್ವವನ್ನೂ ನೋಡಿ ಬರುತ್ತಾರೆ; ಇವರು ವ್ಯಕ್ತಿತ್ವವನ್ನೂ ಮೀರಿದ ನಿಜವಾದ ರಾಮನನ್ನು ನೋಡಿ ಬರುವದಿಲ್ಲ. ಅವರಂತೆ ನಾನೂ ಮಿಥ್ಯವಾದ ವ್ಯಕ್ತಿಯನ್ನೇ ಸತ್ಯವಾಗಿಯೂ ಮಹತ್ತಾಗಿಯೂ ಭಾವಿಸಿ ಗೌರವಿಸುವದಾದರೆ ಪ್ರಶ್ನಾರ್ಹನಾಗುತ್ತೇನೆ; ದೊಡ್ಡ ಪ್ರಶ್ನಾರ್ಥಕ ಚಿಹ್ನೆಯಾಗುತ್ತೇನೆ. ನೋಡುವ ದೃಷ್ಟಿಯು ಬದಲಾಗಿ, ಹಳೆಯ ಹಾಡುಗಳನ್ನು ,ಹೊಸರಾಗದಲ್ಲಿ ಹಾಡುವಾಗ, 'ಸರ್ವಂ ಖಲ್ವಿದಂ ಬ್ರಹ್ಮ' ಇದೆಲ್ಲವೂ ಬ್ರಹ್ಮವೇ ಎನ್ನುವ ಆತ್ಯಂತಿಕ

ದೃಷ್ಟಿಯಲ್ಲಿ, ಒಬ್ಬ ಪ್ರಭುವಾಗಲೀ ನಾಯಕನಾಗಲೀ ನಗರಾಧಿಪತಿಯಾಗಲೀ ರಾಜನಾಗಲೀ ರಾಮನಲ್ಲಿ ಯಾವ ಆಸಕ್ತಿಯನ್ನೂ ಆದರವನ್ನೂ ಹುಟ್ಟಿಸಬಲ್ಲರು? ಯಾವದೂ ಇಲ್ಲ. ಆದ್ದರಿಂದ ನಮ್ಮ ನೋಡುವ ದೃಷ್ಟಿಯು ಬದಲಾಗಬೇಕು; ಪೂರ್ಣ ದೈವೀಕರಣವಾಗಬೇಕು; ತತ್ತ್ವೀಭೂತವಾಗಬೇಕು. ಎಂದು ನಿಮಗೆ ವೃತ್ತಾಂತ ಪತ್ರಿಕೆಗಳಲ್ಲಿ ಆಕರ್ಷಣೆಯೂ ಆಸಕ್ತಿಯೂ ಕಡಿಮೆಯಾಗುವದೋ ಅಂದಿನಿಂದ ನೀವು ದೇಹಾಭಿಮಾನವನ್ನು ಮೀರಿ, ದೇವರಿಗೆ ಹೆಚ್ಚು ಸಮೀಪವಾಗುತ್ತೀರಿ. ನಿಮ್ಮ ನಿತ್ಯ ಜೀವನದಲ್ಲಿ ಸತ್ಯವನ್ನು ವ್ಯವಹಾರಕ್ಕೆ ಅನ್ವಯಿಸಿಕೊಳ್ಳುವ ಒಂದು ಮಾರ್ಗ ಇದು. ಇಂಥಾ ಆತ್ಮ ಬಲಿದಾನವನ್ನು ಸಾಧಿಸಿದಾಗ ನಿಮ್ಮಲ್ಲಿರುವ ನಿಜವಾದ ಜೀವನವು—ಆತ್ಮವು—ಅನೇಕ ಬಗೆಯಿಂದ ವ್ಯವಹಾರ ಮಾರ್ಗದಲ್ಲಿ ಪ್ರಕಟವಾಗುತ್ತದೆ.

ನೀವು ಸುಮ್ಮನೆ ಅಂಥ ವಿಶ್ವಾಸದಿಂದ ಅನುಕರಣಮಾಡಬೇಕೆಂದು ಈ ಕಥೆಗಳನ್ನೆಲ್ಲಾ ಹೇಳುತ್ತಿಲ್ಲ. ಹಾಗಲ್ಲ, ನಿಮ್ಮಲ್ಲಿರುವ ದೇವತ್ವವನ್ನು ನೀವು ಮನಸಾರೆ ಭಾವಿಸಿರಿ; ನೀವೇ ದೇವರೆಂಬದನ್ನು ಮನಗಾಣಿರಿ; ಚಿಂತಿಸಿರಿ, ಭಾವಿಸಿರಿ, ಧ್ಯಾನಿಸಿರಿ. ಇದರ ಬಲದಿಂದ ಎಲ್ಲಾ ಮರುಳಾಟಗಳನ್ನೂ ಮೋಹಗಳನ್ನೂ ಪ್ರಲೋಭನಗಳನ್ನೂ, ಭಯವನ್ನೂ ಚಿಂತೆಯನ್ನೂ ಮೆಟ್ಟಿ, ಮೇಲೇರಿ.

ಓಂ! ಓಂ! ಓಂ!

# THE GOAL OF RELIGION

## ಧರ್ಮದ ಗುರಿ, ಧ್ಯೇಯ

### ಸ್ಯಾನ್ ಫ್ರ್ಯಾನ್‌ಸಿಸ್ಕೋದಲ್ಲಿ 'ಹೆರ್ಮಿಟಿಕ್ ಬ್ರದರ್‌ಹುಡ್‌ಹಾಲ್'ನಲ್ಲಿ ತಾ. 6-12-1902ರಲ್ಲಿ ಶನಿವಾರ ಮಾಡಿದ ಉಪನ್ಯಾಸ

My alter Egos, My other Selves,

ನನ್ನ ಬೇರೆ ಅಹಂಕಾರಗಳೆ, ನನ್ನ ಇತರ ಆತ್ಮರೆ,

ಇಲ್ಲಿ ನಡೆಸುವ ಕ್ರಮಬದ್ಧವಾದ ಉಪನ್ಯಾಸ ಮಾಲೆಗೆ ಈ ರಾತ್ರಿಯ ಭಾಷಣವು ಪ್ರವೇಶಿಕೆಯೆಂದು ತಿಳಿಯಬಹುದು. "ಧರ್ಮದ ಧ್ಯೇಯವೇನು? ಹಿಂದೂ ಜನರು ಅದನ್ನು ಹೇಗೆ ಸಾಧಿಸುತ್ತಾರೆ?" ಇದೇ ಈ ದಿವಸದ ವಿಷಯ.

ಹಿಂದೂಗಳ ಪ್ರಕಾರ, ಪ್ರತಿಯೊಬ್ಬನೂ ದೇವರೇ; ಅತ್ಯಂತ ಅನರ್ಘ್ಯರತ್ನವೂ ಸಕಲ ಸಂಪತ್ತೂ, ಪರಮಾನಂದವೂ ಸಮಸ್ತ ಸುಖಗಳ ಮೂಲವೂ ಅವನೇ. ಪ್ರತಿಯೊಬ್ಬನೂ ದೇವರೇ, ಆದ್ದರಿಂದ ಎಲ್ಲವೂ ಅವನಲ್ಲಿಯೇ ಇವೆ. ಹಾಗಾದರೆ ಜನರು ದುಃಖ ಪಡುವದೇಕೆ? ಅವರು, ಪರಿಹಾರವಿಲ್ಲವೆಂದಾಗಲೀ ತಮ್ಮಲ್ಲಿ ಅಪಾರವಾದ ಆನಂದವು ಇಲ್ಲವೆಂದಾಗಲೀ, ತಮ್ಮೊಳಗೆ ಅಮೂಲ್ಯವಾದ ರತ್ನವಿಲ್ಲವೆಂದಾಗಲೀ ದುಃಖ ಪಡುವದಿಲ್ಲ. ಆದರೆ ಅದನ್ನು ಮುಚ್ಚಿಟ್ಟಿರುವ ಗಂಟನ್ನು ಬಿಚ್ಚಲಾರದೆ ಅದನ್ನು ಅಡಗಿಸಿಟ್ಟುಕೊಂಡಿರುವ ಭರಣಿಯನ್ನು ತೆರೆಯಲಾರದೆ, ದುಃಖ ಪಡುತ್ತಾರೆ. ಅಥವಾ ತಮ್ಮ ಚೈತನ್ಯದಲ್ಲಿಯೇ ಪ್ರವೇಶಮಾಡಿ ಆತ್ಮಾನುಭವ ಪಡೆಯುವದಕ್ಕೆ ಜನರಿಗೆ ತಿಳಿಯದು. ಎಲ್ಲಾ ಮತಧರ್ಮಗಳೂ ಆತ್ಮನನ್ನು ಮುಸುಕಿರುವ ಅವಿದ್ಯೆಯ ತೆರೆಯನ್ನು ಹರಿದು, ಸ್ವರೂಪವನ್ನು ತಿಳಿಸುವ ಕೇವಲ ಪ್ರಯತ್ನಗಳಾಗಿವೆ. ನಮ್ಮೊಳಗಿರುವ ಅಮೂಲ್ಯ ರತ್ನದ ಮೇಲೆ, ನಮ್ಮ ಕೈಯಿಂದಲೇ ನಮ್ಮ ಪ್ರಯತ್ನದಿಂದಲೇ ತೆರೆಯನ್ನು ಎಳೆದುಕೊಂಡು ಮುಚ್ಚಿ, "Every man is God playing the fool". ಪ್ರತಿಯೊಬ್ಬನೂ ಮೂಢನಂತೆಯೂ ಮುಟ್ಠಾಳನಂತೆಯೂ ನಟಿಸುವ ದೇವರೇ." ಎಂದು ಎಮರ್‌ಸನ್ ಹೇಳುವಂತೆ ನಮ್ಮನ್ನು ನಾವು ದುಃಖಿಗಳನ್ನಾಗಿಯೂ ನಿರ್ಭಾಗ್ಯರನ್ನಾಗಿಯೂ ಪಾಪಿಗಳನ್ನಾಗಿಯೂ ಮಾಡಿಕೊಂಡಿದ್ದೇವೆ.

ಎಲ್ಲಾ ಮತಧರ್ಮಗಳೂ ನಮ್ಮ ಕಣ್ಣುಗಳನ್ನು ಮುಸುಕಿರುವ ತೆರೆಯನ್ನು ಹರಿದೊಗೆಯುವ ಬರಿ ಪ್ರಯತ್ನಗಳೇ ಆಗಿವೆ. ಕೆಲವು ಧರ್ಮಗಳು ಮಿಕ್ಕ ಧರ್ಮಗಳಿಗಿಂತಲೂ ಆ ತೆರೆಯನ್ನು ಹೆಚ್ಚು ತೆಳ್ಳಗೆ ಮಾಡುವದರಲ್ಲಿ ಅಧಿಕ ಯಶಸ್ವಿಗಳಾಗಿವೆ.

ಆದರೆ ಎಲ್ಲಾ ಮತಗಳಲ್ಲಿಯೂ ನಿಜವಾದ ಧರ್ಮಶ್ರದ್ಧೆಯುಳ್ಳ ಜನರಿದ್ದಾರೆ. ಅವರಲ್ಲಿ ಅಜ್ಞಾನ ಪಟಲವು ದಪ್ಪವಾಗಿದ್ದರೂ ತೆಳ್ಳಗಿದ್ದರೂ ಅವರು ತಾತ್ಕಾಲಿಕವಾಗಿ ಅದನ್ನು ಅತ್ತ ಸರಿಸಿ, ಒಳಗಿರುವ ಸತ್ಯದ ಕ್ಷಣದರ್ಶನವನ್ನು ಪಡೆಯುತ್ತಾರೆ. ಇದನ್ನು ಈ ಉದಾಹರಣೆಯಿಂದ ತಿಳಿಸಬಹುದು. ಇಲ್ಲಿ ನನ್ನ ಕಣ್ಣೆದುರಿಗೆ ಒಂದು ಕರವಸ್ತ್ರದ ಪರದೆ ಇದೆ. ನಾವು ಇದನ್ನು ಅತ್ತ ಸರಿಸಿ, ಕ್ಷಣಕಾಲ ನೋಡಬಹುದು. ಆದರೆ ಈ ತೆರೆಯು ಪುನಃ ಕಣ್ಣಿಗೆ ಅಡ್ಡಲಾಗಿ ಬರಬಹುದು. ತೆರೆಯನ್ನು ಹೆಚ್ಚು ಹೆಚ್ಚು ತೆಳ್ಳಗೆಮಾಡಿ ಜೋರಾಗಿ ತಳ್ಳಿದರೂ ಅದು ಮತ್ತೆ ಮತ್ತೆ ಕಣ್ಣಿಗೆ ಮರೆಯಾಗಿ ಬರಬಹುದು. ಅದು ಕಣ್ಣನ್ನು ಖಾಯಂ ಆಗಿ ಬಿಡಲಾರದು. ತೆರೆಯನ್ನು ಪರಮಾವಧಿಯಾಗಿ ತೆಳ್ಳಗೆ ಮಾಡಿದಾಗ, ಅದನ್ನು ಸರಿಸುವದಕ್ಕೆ ಆಗದಿದ್ದರೂ ನಮ್ಮ ನೋಟಕ್ಕೆ ಅದೇನೂ ಮರೆಯಾಗುವದಿಲ್ಲ. ಅತ್ಯಂತ ಸೂಕ್ಷ್ಮವಾಗಿ ಪಾರದರ್ಶಕದಂತಿರುವ ಆ ತೆರೆಯ ಮೂಲಕ ನಮ್ಮ ನೋಟವನ್ನು ತೂರಿ ಆಚೆಗೆ ನೋಡಬಹುದು. ಅತ್ಯಂತ ನವಿರಾದ ಆ ತೆರೆಯು ತೆರೆಯೆನಿಸುವದಿಲ್ಲ. ಆದ್ದರಿಂದ ಅತ್ಯಂತ ಸೂಕ್ಷ್ಮಗೊಳಿಸಲ್ಪಟ್ಟ ಅವಿದ್ಯಾ ಪಟಲದ ಮೂಲಕ ದೇವರನ್ನು ಪ್ರತ್ಯಕ್ಷವಾಗಿ ಕಾಣಬಹುದು; ಅಥವಾ ನಾವೇ ದೇವ ರೆಂಬುದನ್ನು ಮನಗಾಣಬಹುದು. ಈ ಅನುಭವಕ್ಕೆ ಯಾವದೂ ಅಡ್ಡಿಯಾಗುವದಿಲ್ಲ. ಹೀಗೆ ಮಾಯಾಪಟಲವನ್ನು ಅತ್ಯಂತವಾಗಿ ಸೂಕ್ಷ್ಮಗೊಳಿಸಿ ವ್ಯವಹಾರ ಜೀವನದಲ್ಲಿ ಕೂಡ ಜ್ಞಾನಿಯು ಆನಂದಮಯವಾದ ದರ್ಶನವನ್ನು ಪಡೆದಿರುವಂತೆ ಮಾಡುವದೇ (ಇತರ ಮತಧರ್ಮಗಳಲ್ಲಿರುವ ಶಕ್ತಿಗಿಂತ) ವೇದಾಂತದರ್ಶನದಲ್ಲಿರುವ ಹೆಚ್ಚುಗಾರಿಕೆಯು.

ಎಲ್ಲಾ ಮತಧರ್ಮಗಳ ಭಕ್ತರೂ ಉಪಾಸಕರೂ ಕೆಲವು ಸಮಯ ದೇವರಲ್ಲಿ ತಾದಾತ್ಮ್ಯ ಭಾವವನ್ನು ಹೊಂದಬಹುದು. ಅವರು ಪರಮಾತ್ಮನೊಡನೆ ಸಂಪರ್ಕ ವನ್ನೂ ಸಂಯೋಗವನ್ನೂ ಹೊಂದಿರುವವರೆಗೂ ಮಂದವಾಗಿಯೋ ಸೂಕ್ಷ್ಮ ವಾಗಿಯೋ ಇರಬಹುದಾದ (ಕಣ್ಣಮುಂದಿನ) ಪರದೆಯು ಸರಿದಿರುತ್ತದೆ. ವೇದಾಂ ತಿಯು ಕೂಡ ಹಾಗೆಯೇ ಮಾಡಬಹುದು; ಅವನು ಆನಂದಮಯವಾದ ಸಮಾಧಿ ಸ್ಥಿತಿಯಲ್ಲಿ ಮುಳುಗಬಹುದು. ಆದರೆ ಅವನು ಸಾಮಾನ್ಯ ಸ್ಥಿತಿಯಲ್ಲಿ ಕೂಡ ಅರಿ ವಿನ ಆನಂದದಲ್ಲಿ—ದಿವ್ಯದರ್ಶನವನ್ನು ಪಡೆದವನಂತೆ—ಇರಬಹುದು. ಅಜ್ಞಾನ ಪಟ ಲವು ಹೆಚ್ಚು ಮಂದವಾಗಿರುವ ಬೇರೆ ಧರ್ಮದವರಿಗೆ ಈ ಭಾಗ್ಯವಿರುವದಿಲ್ಲ.

ಇಂಡಿಯಾದೇಶದ ಮತಗಳನ್ನೂ ಸೇರಿಸಿ, ಪ್ರಪಂಚದಲ್ಲಿರುವ ಎಲ್ಲಾ ಮತಗಳನ್ನೂ ಮುಖ್ಯವಾದ ಮೂರು ಶಿರೋನಾಮಗಳಲ್ಲಿ ವಿಂಗಡಿಸಬಹುದು. ಇದನ್ನು ನಾವು ಸಂಸ್ಕೃತದಲ್ಲಿ ತಸ್ಯೈವಾಹಂ, ತವೈವಾಹಂ, ತ್ವಮೇವಾಹಂ ಎಂದು ಕರೆಯಬಹುದು. ಮೊದಲನೆಯ 'ತಸ್ಯೈವಾಹಂ' ಎಂಬುದರ ಅರ್ಥವು 'ನಾನು ಅವನವನು' 'ನಾನು ಅವನ ಸಂಬಂಧ ಪಟ್ಟವನು' ಎಂದು. ಈ ನಂಬಿಕೆಯ ಧರ್ಮದಲ್ಲಿ ಅಜ್ಞಾನದ ಪರದೆಯು ಅತ್ಯಂತ ನಿಬಿಡವೂ ಮಂದವೂ ಆಗಿರುತ್ತದೆ. ಮತ ಧರ್ಮಗಳ ಎರಡನೆಯ ಭೂಮಿಕೆಯು

'ತವೈವಾಹಂ' 'ನಿನ್ನವನು ನಾನು' ಎಂದು. ಈ ಎರಡು ಭಾವನೆಗಳಿಗೂ ದೃಷ್ಟಿಗಳಿಗೂ ಎಷ್ಟು ಭೇದವಿದೆ ಎನ್ನುವದು ನಿಮಗೇ ತಿಳಿಯುತ್ತದೆ. ಮೊದಲನೆಯ ಉಪಾಸನಾ ಕ್ರಮದಲ್ಲಿ ಉಪಾಸಕನು ದೇವರನ್ನು ತನ್ನಿಂದ ಬೇರೆಯಾಗಿ, ದೂರವಾಗಿ, ಅವನರಿ ಯಾರೋ ಮೂರನೆಯವನೊಬಂತೆ ಕಾಣುತ್ತಾನೆ. ಕಣ್ಣಿಗೆ ಕಾಣದಿರುವ, ಕೈಗೆ ಸಿಕ್ಕದಿರುವ ದೇವರು ಇಲ್ಲವೇನೋ ಎಂಬಂತೆ ಮಾತನಾಡುತ್ತಾನೆ. 'I am His' ನಾನು ಅವನ ಸಂಬಂಧಿ' ಎಂದು ತಿಳಿಯುತ್ತಾನೆ. ಇದು ಧರ್ಮಸಾಧನೆಯ ಪ್ರಾರಂಭ. ಧರ್ಮ ಭಾವನೆಯ ಶಿಶುವಿಗೆ ಇದು ತಾಯಿಯ ಹಾಲು ಇದ್ದಂತೆ. ಒಮ್ಮೆಯಾದರೂ ಈ ಹಾಲನ್ನು ಸೇವಿಸದೆ ಯಾರೂ ಧರ್ಮ ಸಾಧನೆಯಲ್ಲಿ ಮುಂದುವರಿಯುವದು ಸಾಧ್ಯವಿಲ್ಲ. ಈ ಭಾವನೆಯನ್ನಾದರೂ ಪೂರ್ಣವಾಗಿ ಸಾಧಿಸಿದರೆ, ಮಧುರವಾಗಿರುವದಿಲ್ಲವೆ ?

ಅವನು ಉಷಃಕಾಲದಲ್ಲಿ ಏಳುವಾಗ "ನನ್ನನ್ನು ನನ್ನ ಪ್ರಭುವು, ಗುರುವು, ಸ್ವಾಮಿಯು, ದೇವರು ಎಚ್ಚರಗೊಳಿಸಿದನು." ಎಂದು ಭಾವಿಸುತ್ತಾನೆ. ಅವನು ಆಫೀಸಿಗೆ ಹೋಗಲೀ ಉದ್ಯೋಗವನ್ನು ಮಾಡಲಿ, ಯಾವ ವ್ಯವಹಾರವನ್ನು ನಡೆಸಲಿ, ಎಲ್ಲವೂ ತನ್ನ ಸ್ವಾಮಿಯಾದ ಇಷ್ಟದೇವನ ಸೇವೆಯೆಂದೂ ಅವನಿಂದಲೇ ತನಗೆ ವಹಿಸಲ್ಪಟ್ಟ ಕಾರ್ಯವೆಂದೂ ಭಾವಿಸುತ್ತಾನೆ. ಅವನು ತನ್ನ ಮನೆಯನ್ನೂ ಬಂಧು ಮಿತ್ರರನ್ನೂ ಕುಟುಂಬವನ್ನೂ ಹೆಚ್ಚೇನು, ಇಡೀ ಜಗತ್ತನ್ನೇ ತನ್ನ ಅತ್ಯಂತ ಪ್ರಿಯ ಪ್ರಭುವಿನದೆಂದು ತಿಳಿಯುತ್ತಾನೆ. ತನ್ನ ದೇಹ ಸಹಿತ ಸಮಸ್ತವೂ ತನ್ನ ಇಷ್ಟ ದೇವನದೆಂದೇ ಅವನು ಹೃತ್ಪೂರ್ವಕ ಪ್ರಾಮಾಣಿಕವಾಗಿ ಭಾವಿಸಿದರೆ ಪ್ರಪಂಚವೆಲ್ಲಾ ಅವನಿಗೆ ಸ್ವರ್ಗಲೋಕವಾಗುತ್ತದೆ. ಈ ಭಾವನೆಯನ್ನಾದರೂ ಪೂರ್ಣವಾಗಿ ಅನುಭವದಲ್ಲಿ ತಂದುಕೊಂಡರೆ, ಅವರ್ಣನೀಯವೂ ದಿವ್ಯವೂ ಆದ ಪರಮಾನಂದವನ್ನು ತರುತ್ತದೆ. ಸಾಧನಾನುಭವದಲ್ಲಿ ಎಷ್ಟನ್ನು ತರುವದು ಸಾಧ್ಯವಾದರೂ ಲಾಭವೇ ; ಆದರೆ ಅಧ್ಯಾತ್ಮಸಾಧನೆಯ ದೃಷ್ಟಿಯಿಂದ "ತಸ್ಯೈವಾಹಂ" ಎನ್ನುವ ಭಾವವು ಕೇವಲ ಆರಂಭದಶೆಯೇ ಸರಿ.

"ತವೈವಾಹಂ " "ನಿನ್ನವನು ನಾನು" ಎನ್ನುವ ಭಾವವು ಮತ–ಧರ್ಮಗಳ ಎರಡನೆಯ ಮುಖವೂ ಧರ್ಮಜೀವನದ ಮತ್ತು ಭಕ್ತಿಯ ಎರಡನೆಯ ಘಟ್ಟವೂ ಆಗಿದೆ. "ಪ್ರತಿ ಕ್ಷಣವೂ ನಿಮಿಷವೂ ನೀನು ನನಗೆ ಬೇಕು. ನಾನು ನಿನ್ನವನು, ನಿನ್ನವನು." 'ತಸ್ಯೈವಾಹಂ' ಎನ್ನುವ ಮೊದಲನೆಯ ಭಾವವು ಮಧುರವೂ ಪ್ರಿಯವೂ ಸುಂದರವೂ ಆದರೆ, ಈ 'ತವೈವಾಹಂ' ಎನ್ನುವದು ಅತಿ ಮಧುರವೂ ಅತಿ ಪ್ರಿಯವೂ ಅತಿ ಸುಂದರವೂ ಆಗಿದೆ. ಈ ಎರಡನೆಯ ಭಾವವನ್ನು ಮೊದಲನೆಯ ಭಾವಕ್ಕೆ ಹೋಲಿಸಿ ನೋಡಿ ವ್ಯತ್ಯಾಸವನ್ನು ಗಮನಿಸಬೇಕು. ಎರಡನೆಯದರಲ್ಲಿ, ನಮ್ಮ ಕಣ್ಣೆದುರಿಗೆ ದೇವರನ್ನು ಮರೆಮಾಡುವ ತೆರೆಯು ಹೆಚ್ಚು ತೆಳುವಾಗಿದೆ, ನವಿರಾಗಿದೆ, ಸೂಕ್ಷ್ಮವಾಗಿದೆ–ಎನ್ನಬಹುದು. "ನಾನು ನಿನ್ನವನು" ಎನ್ನುವ ಭಾವದಲ್ಲಿ ದೇವರನ್ನು

ಮೂರನೆಯವನೆಂದು ತಿಳಿಯುವದಿಲ್ಲ; ತೆರೆಯ ಮರೆಯಲ್ಲಿ ಎಲ್ಲಿಯೋ ದೂರದಲ್ಲಿ ಅಪರೋಕ್ಷವಾಗಿ ಇರಬಹುವೆಂದೂ ಇಲ್ಲದೇ ಇರಬಹುದೆಂದೂ ತಿಳಿಯುವದಿಲ್ಲ. ಅವನು ನಮ್ಮ ಸಮ್ಮುಖದಲ್ಲಿಯೇ ಕಣ್ಣೆದುರಿಗೆ ಬರುತ್ತಾನೆ. ಅವನು ನಮಗೆ ಅತಿ ಸಮೀಪನೂ ಪ್ರಿಯನೂ ಆಗುತ್ತಾನೆ. ದೇವರು ನಮಗೆ ಹೆಚ್ಚು ಪರಿಚಿತನಾಗುತ್ತಾನೆ. ಧರ್ಮಸಾಧನೆಯ ದೃಷ್ಟಿಯಿಂದ ಈ ಭಾವನೆಯು ಹೆಚ್ಚು ಉನ್ನತವಾದುದು. ಈ ಉಪಾಸನಾಪದ್ಧತಿಯಲ್ಲಿ ಅನೇಕ ಸಮಯ ಜನರಿಗೆ ನಂಬಿಕೆಯಾಗುತ್ತದೆ ; ಅವರು ದೇವರನ್ನು ಅತಿ ಪರಿಚಿತನನ್ನಾಗಿಯೂ ಅತಿ ಸಮೀಪನನ್ನಾಗಿಯೂ ಸಂಬೋಧಿಸುತ್ತಾರೆ. ಆದರೆ ಈ ಭಾವನೆಯಲ್ಲಿ ನಿಜವಾದ ಶ್ರದ್ಧೆಯೂ ಜೀವಂತ ವಿಶ್ವಾಸವೂ ಬೇಕು.

'ತಸ್ಯೈವಾಹಂ' ಎನ್ನುವ ಮೊದಲನೆಯ ಭಾವದಲ್ಲಿ, ಅಧ್ಯಾತ್ಮ ಸಾಧನೆಯ ಮೊದಲನೆಯ ಘಟ್ಟದಲ್ಲಿ, ಜೀವಂತ ವಿಶ್ವಾಸವಿದ್ದರೆ, ಪರದೆಯು—ಅವಿದ್ಯಾ ಪಟಲವು—ಅತಿ ಮಂದವಾಗಿದ್ದರೂ ತಾತ್ಕಾಲಿಕವಾಗಿ ಸರಿದಿರುತ್ತದೆ. ಆದರೆ ಆ ಭಾವನೆಯು ಹೃತ್ಪೂರ್ವಕವಾಗಿರಬೇಕು. "ನಾನು ದೇವರವನು" ಎನ್ನುವ ಭಾವನೆಯು ರಕ್ತದ ಹನಿ ಹನಿಯಲ್ಲಿಯೂ ಮಿಡಿಯುತ್ತಿರಬೇಕು; ದೇಹದ ರೋಮ ರೋಮದಲ್ಲಿಯೂ ನುಡಿಯುತ್ತಿರಬೇಕು, ಸುರಿಯುತ್ತಿರಬೇಕು. ಆ ನಿಷ್ಕಪಟ ಶುದ್ಧಭಾವವೂ ಶ್ರದ್ಧೆಯೂ ಆದರವೂ ತವಕವೂ ಉತ್ಸಾಹವೂ ಆಗಿನ ಮಟ್ಟಿಗೆ ಅವನ ದೃಷ್ಟಿಯಿಂದ ಅವಿದ್ಯಾ ಪಟಲವನ್ನು ಸರಿಸುವದರಿಂದ ಆ ಉಪಾಸಕನು ತನ್ನನ್ನು ತಾನು ಮರೆತು ಸರ್ವಾತ್ಮನಾದ ದೇವರಲ್ಲಿ ಮುಳುಗಿ ಹೋಗಿ ತಾತ್ಕಾಲಿಕವಾಗಿ ದೇವರೇ ಆಗುತ್ತಾನೆ. ಆದರೆ 'ತವೈವಾಹಂ' ಎನ್ನುವ ಭಾವನೆಯು 'ತಸ್ಯೈವಾಹಂ' ಎನ್ನುವ ಭಾವನೆಗಿಂತಲೂ ಹೆಚ್ಚಿನದಾದರೂ ಶ್ರದ್ಧೆಯು ಕಡಿಮೆಯಾದರೆ ಪ್ರಯೋಜನವಾಗುವದಿಲ್ಲ. ಶ್ರದ್ಧೆಯು ಸಾಲದಿರುವ ಎರಡನೆಯ ಭಾವನೆಗಿಂತಲೂ ತೀವ್ರ ಶ್ರದ್ಧೆಯಿರುವ ಮೊದಲನೆಯ ಭಾವವು ಹೆಚ್ಚಿನ ಅನುಭವವನ್ನು ಕೊಡಬಹುದು. ಆದ್ದರಿಂದ ಯಾವ ಬಗೆಯ ಉಪಾಸನೆಯಲ್ಲಿಯಾದರೂ ನಿಜವಾದ ಶ್ರದ್ಧೆಯೇ ಮುಖ್ಯವಾದುದು.

"ತ್ವಮೇವಾಹಂ" ಎನ್ನುವ ಭಾವವು ಉಪಾಸನೆಯ ಮೂರನೆಯ ರೂಪವು. "ನೀನೇ ನಾನು" ಎನ್ನುವ ಈ ಭಾವನೆಯು ದೇವರಿಗೆ ಅತ್ಯಂತ ಸಮೀಪವಾದುದು. ಸಮೀಪವೇನು? ದೇವನಿಗೂ ಭಕ್ತನಿಗೂ ಇದರಲ್ಲಿ ಅಂತರವೇ ಉಳಿಯುವದಿಲ್ಲ. 'ದೇವರವನು ನಾನು' ಎನ್ನುವ ಮೊದಲನೆಯ ಭಾವದಲ್ಲಿ ದೇವರು ದೂರವಾಗಿದ್ದಾನೆ. 'ನಿನ್ನವನು ನಾನು' ಎನ್ನುವ ಎರಡನೆಯ ಭಾವದಲ್ಲಿ ದೇವರು ನಮ್ಮ ಸಮ್ಮುಖದಲ್ಲಿ ಕಣ್ಣೆದುರಿಗೆ ಬರುತ್ತಾನೆ; ಹೆಚ್ಚು ಸಮೀಪವಾಗುತ್ತಾನೆ. 'ನೀನೇ ನಾನು' ಎನ್ನುವ ಆಧ್ಯಾತ್ಮಿಕ ಬೆಳವಣಿಗೆಯ ಕೊನೆಯ ಹಂತದಲ್ಲಿ ಉಪಾಸಕನು ಉಪಾಸ್ಯದಲ್ಲಿ ಬೆರೆತು ಒಂದಾಗುತ್ತಾನೆ; ಪ್ರೇಮಿಯೂ ಪ್ರೇಮಪಾತ್ರನೂ ಪ್ರೇಮದಲ್ಲಿ ಮುಳುಗಿ ಕಳೆದು

ಹೋಗುತ್ತಾರೆ. (ಜ್ಞಾತೃವಿನ ಸ್ವರೂಪವೇ ಆದ ಜ್ಞೇಯವಲ್ಲದ ಜ್ಞೇಯದಲ್ಲಿ ಜ್ಞಾತೃವು ಅಡಗಿ ಹೋದಾಗ) ಈ ಬಗೆಯಿಂದ ವೇದಾಂತವು ಅನುಭವಕ್ಕೆ ಬರುತ್ತದೆ. ದೀಪದ ಹುಳುವು ದೀಪದ ಹತ್ತಿರ ಹತ್ತಿರಕ್ಕೆ ಹೋಗಿ, ದೀಪದಲ್ಲಿ ಬಿದ್ದು ಸುಟ್ಟು ದೀಪವೇ ಆಗುತ್ತದೆ. ಭೇದಜ್ಞಾನವೆಂಬ ಪತಂಗವು ಪ್ರಕಾಶಗಳಿಗೆಲ್ಲಾ ಪ್ರಕಾಶವಾದ ಪರಮಾತ್ಮನಿಗೆ (ಉಪ) ಅತ್ಯಂತ ಸಮೀಪವಾಗಿ ಬರುವದರಿಂದ, (ನಿ) ನಿಶ್ಚಿತವಾಗಿಯೂ (ಷದ್) ನಾಶವಾಗುತ್ತದೆ– ಎಂಬದೇ ಉಪನಿಷದ್ (ವೇದಾಂತ) ಎಂಬದರ ಅರ್ಥವು. ನಿಜವಾದ ಭಕ್ತನು ಪ್ರೇಮದಿಂದ ದೇವರಲ್ಲಿ ಬೆರೆತು ಒಂದಾಗುವದರಿಂದ "ನಾನೇ ಅವನು, ಅವನೇ ನಾನು, ನಾನೇ ನೀನು, ನೀನೇ ನಾನು" "ನಾನೇ ದೇವರು, ದೇವರೇ ನಾನು" "ದೇವರಿಗಿಂತ ನಾನು ಯಾವದರಲ್ಲಿಯೂ ಕಡಿಮೆಯಿಲ್ಲ" ಎಂಬ ಉದ್ಗಾರಗಳು ಅವನಿಗೆ ಅರಿವಿಲ್ಲದಿದ್ದರೂ ಪ್ರಯತ್ನವಿಲ್ಲದೆ ತಾನೇ ತಾನಾಗಿ, ಅವನ ಬಾಯಿಂದ ಹೊರಡುತ್ತವೆ. ಇದೇ ಧಾರ್ಮಿಕ ಬೆಳವಣಿಗೆಯ ಅಂತಿಮ ಘಟ್ಟವು. ಇದೇ ಪರಮ ಭಕ್ತಿ, ಪರಾಭಕ್ತಿ, ಅತ್ಯಂತ ಉನ್ನತವಾದ–ಶ್ರೇಷ್ಠವಾದ–ಭಕ್ತಿ. ಇದನ್ನೇ ಜ್ಞಾನದ ಕೊನೆ ಎಂಬ ಅರ್ಥದಲ್ಲಿ ವೇದಾಂತ ಎನ್ನುವದು, ಸಮಸ್ತ ಜ್ಞಾನವೂ ಇಲ್ಲಿಯೇ ಕೊನೆಗೊಳ್ಳುತ್ತದೆ. ಗುರಿಯನ್ನು ಸೇರುವದು ಇಲ್ಲಿಯೇ. ಉಪಾಸನೆಯ ಈ ಕೊನೆಯ ಘಟ್ಟದಲ್ಲಿ ಮಾಯಾಪಟಲವು ಅತ್ಯಂತ ಸೂಕ್ಷ್ಮವಾಗಿರುವುದರಿಂದ ಸಮಗ್ರ ಸತ್ಯವನ್ನು ಕಾಣಬಹುದಾದರೂ ಪರಮಾವಧಿಯ ಶ್ರದ್ಧಾದರಯುಕ್ತವಾದ ಒಮ್ಮನಸ್ಸಿನಿಂದ ಅಥವಾ ಸಂಯಮದಿಂದ ಆ ಪರದೆಯನ್ನೂ ಪೂರಾ ಸರಿಸಿ ಪೂರ್ಣಾನಂಭವವನ್ನು ಸವಿಯಬಹುದು. ಕೆಲವರು ತಾವೇ ದೇವರೆಂದು ಬೌದ್ಧಿಕವಾಗಿ ನಿಶ್ಚಯಕ್ಕೆ ಬಂದ ಮೇಲೆ, ಆ ಪರದೆಯನ್ನು ಹರಿದೊಗೆದು ದಿವ್ಯವಾದ ಆನಂದವನ್ನು ಅನುಭವಿಸುವಷ್ಟು ತೀವ್ರವಾಗಿ ಭಾವನೆಯನ್ನು ಬೆಳೆಸುತ್ತಾರೆ. ಇವರೇ ಜೀವನ್ಮುಕ್ತರು.

The refining of the creed or the thinning of the curtain comes chiefly through the intellect and the lifting of the veil is effected through feeling.

ಉಪಾಸನಾ ಸಾಧನೆಯ ಶುದ್ಧೀಕರಣವೂ ಸುಧಾರಣೆಯೂ ಅಥವಾ ಅವಿದ್ಯಾ ಪಟಲದ ಸೂಕ್ಷ್ಮೀಕರಣವೂ ಮುಖ್ಯವಾಗಿ ಬುದ್ಧಿಶಕ್ತಿಯ ಸೂಕ್ಷ್ಮ ವಿಚಾರದಿಂದ ಆಗುತ್ತದೆ, ಮತ್ತು ಪಟಲವನ್ನು ಹಾರುಹೊಡೆಯುವದು ಭಾವನಾಬಲದ ಮೂಲಕ ಸಾಧ್ಯವಾಗುತ್ತದೆ. ಇದುವರೆಗೆ ಉಪಾಸನಾಮತದ ಮೂರು ಬಗೆಗಳನ್ನು ವಿವರಿಸಿದೆವು. ಬೇರೆ ಬೇರೆ ಉಪಾಸನಾ ಮಾರ್ಗಗಳಲ್ಲಿರುವವರು ಅಜ್ಞಾನದ ಪರದೆಯನ್ನು ಹೇಗೆ ತೆರೆಯುವರೆಂಬದನ್ನು ಕೆಲವು ಹಿಂದೂ ದೇಶದ ಕತೆಗಳ ದೃಷ್ಟಾಂತದಿಂದ ವಿಚಾರಮಾಡೋಣ.

ಒಬ್ಬ ತರುಣಿಯು ತನ್ನ ಪ್ರಿಯನಲ್ಲಿ ಅತ್ಯಂತ ಗಾಢವಾದ ಪ್ರೇಮವುಳ್ಳವಳಾಗಿದ್ದಳು. ಒಮ್ಮೆ ಆಕೆಗೆ ಬಹಳ ಕಾಯಿಲೆಯಾಯಿತು. ಆಕೆಯ ಚಿಕಿತ್ಸೆಗಾಗಿ ವೈದ್ಯರು

ಬಂದು, ನೋಡಿ, ಆ ಶರೀರದಿಂದ ರಕ್ತವನ್ನು ತೆಗೆಯುವದೊಂದೇ ಪರಿಹಾರವೆಂದು ಹೇಳಿದರು. ಅವರು ಆಕೆಯ ಕೈಯ ಮಾಂಸದಲ್ಲಿ ಶಸ್ತ್ರವನ್ನು ಪ್ರಯೋಗಮಾಡಿದರೂ ರಕ್ತವು ಬರಲೇ ಇಲ್ಲ. ಆದರೆ ಆಕೆಯ ಪ್ರಿಯನ ಕೈಯಿಂದ, ಆಶ್ಚರ್ಯವೆನಿಸುವಂತೆ, ರಕ್ತವೂ ಚಿಮ್ಮುತ್ತಿದ್ದುದನ್ನು ಕಂಡರು. ಆಹಾ! ಎಂಥಾ ವಿಸ್ಮಯಕಾರಿಯಾದ ಐಕ್ಯತೆ! ಏಕೀಭವನ! ಇದೊಂದು ಸುಳ್ಳು ಕತೆಯೆಂದು ನಿಮಗೆ ಕಾಣಬಹುದು. ಆದರೆ ಇದು ನಿಜವಾಗಬಲ್ಲದು. ಕೀಳು ಸ್ವಭಾವದ್ದಾದರೂ, ಎಷ್ಟೋ ಸಮಯ, ಸಾಂಸಾರಿಕ ಪ್ರೇಮದಲ್ಲಿ ಈ ಬಗೆಯ ಏನೋ ಒಂದು ಅನುಭವವನ್ನು ಜನರು ತಮ್ಮ ಜೀವನದಲ್ಲಿ ತಾರ್ಕಣೆ ಮಾಡಿಕೊಳ್ಳುತ್ತಾರೆ. ಆ ಪ್ರೇಯಸಿಯು ತನ್ನನ್ನು ತಾನು ಮರೆತು ತನ್ನ ಪ್ರಿಯನೊಡನೆ ಒಂದಾಗಿದ್ದಳು; ಆ ಪ್ರಿಯನೂ ತನ್ನ ಪ್ರೇಯಸಿಯಲ್ಲಿ ಪೂರಾ ಮುಳುಗಿದ್ದನು.

ದೇವರಲ್ಲಿ ಪ್ರೇಮದಿಂದ ಹಾಗೆ ಒಂದಾಗುವದೇ ಧರ್ಮ. "ನನ್ನ ದೇಹವೇ ಅವನ ದೇಹವೂ ಅವನ ಆತ್ಮವೇ ನನ್ನ ಆತ್ಮವೂ ಆಗಲಿ."

ಅತ್ಯಂತ ಉತ್ಕಟ ಪ್ರೇಮಿಗಳಾದ ಸ್ತ್ರೀಪುರುಷರಿಬ್ಬರನ್ನು ಬೆಂಕಿಯಲ್ಲಿ ಎಸೆದರೂ ಬೆಂಕಿಯು ಅವರನ್ನು ಸುಡಲಿಲ್ಲವೆಂದು ಹಿಂದೂಗಳ ಧರ್ಮಗ್ರಂಥವಾದ ಯೋಗವಾಸಿಷ್ಠದಲ್ಲಿ ಹೇಳಿದೆ. ಅವರನ್ನು ನದಿಯಲ್ಲಿ ಎಸೆದರೂ ನೀರು ಮುಳುಗಿಸಲಿಲ್ಲ. ಪರ್ವತದಿಂದ ಅವರನ್ನು ಕೆಳಗೆ ಎಸೆದರೂ ಅವರ ಒಂದು ಮೂಳೆಯೂ ಮುರಿಯಲಿಲ್ಲ. ಅದಕ್ಕೆ ಏನು ಕಾರಣ? ಅವರು ಪರಮ ಪ್ರೇಮದ ಏಕತ್ವದಲ್ಲಿದ್ದಾಗ ಪ್ರಶ್ನೆಯೂ ಅವರನ್ನು ಮುಟ್ಟಲಾರದಾಗಿತ್ತು; ಅವರು ಅದಕ್ಕೆ ಸಮಾಧಾನವನ್ನೂ ಕೊಡಲಾರದವರಾಗಿದ್ದರು. ಬಹಳ ಕಾಲದ ಮೇಲೆ ಅವರು ಸ್ವಾಭಾವಿಕ ವ್ಯವಹಾರ ಸ್ಥಿತಿಯಲ್ಲಿದ್ದಾಗ ಜನರು ಆಶ್ಚರ್ಯದಿಂದ ಆ ಪವಾಡದ ಕಾರಣವನ್ನು ಕೇಳಿದರು. ಅವರಲ್ಲಿ ಪ್ರಿಯನಿಗೆ ಪ್ರಿಯಳೂ ಪ್ರಿಯಳಿಗೆ ಪ್ರಿಯನೂ ಪರಸ್ಪರ ಸರ್ವಸ್ವವಾಗಿದ್ದರೆಂದು ಅವರದಕ್ಕೆ ಉತ್ತರವನ್ನು ಹೇಳಿದರು. ಅವರಿಗೆ ಬೆಂಕಿಯು ಬೆಂಕಿಯಾಗಿರಲಿಲ್ಲ; ಆಕೆಗೆ ಬೆಂಕಿಯು ತನ್ನ ಪ್ರಿಯನಾಗಿಯೂ ಆತನಿಗೆ ಅದೇ ಬೆಂಕಿಯು ತನ್ನ ಪ್ರಿಯಳಾಗಿಯೂ ಕಂಡಿತು. ಅವರಿಗೆ ನೀರು ನೀರಾಗಿರಲಿಲ್ಲ. ಪರ್ವತವು ಪರ್ವತವಾಗಿರಲಿಲ್ಲ; ಎಲ್ಲವೂ ಪ್ರೇಮ ಸ್ವರೂಪವೇ ಆಗಿದ್ದವು. ಆದ್ದರಿಂದ ಪ್ರಿಯಕರನು ಪ್ರಿಯೆಗೂ ಪ್ರಿಯೆಯು ಪ್ರಿಯಕರನಿಗೂ ಹಾನಿ ಮಾಡುವದು ಹೇಗೆ ಸಾಧ್ಯ?

ಹಿಂದೂ ಪುರಾಣಗಳಲ್ಲಿ, ರಾಜಕುಮಾರನಾದ ಪ್ರಹ್ಲಾದನ ತಂದೆಯು, ಮಗನನ್ನು ಭಕ್ತಿಮಾರ್ಗದಿಂದ ತನ್ನ ಪ್ರಪಂಚಮಾರ್ಗಕ್ಕೆ ತಿರುಗಿಸಬೇಕೆಂದು ಅನೇಕ ಬಗೆಯಿಂದ ಪ್ರೇರಿಸಿ, ಪ್ರೋತ್ಸಾಹಿಸಿದರೂ ತನ್ನ ಬುದ್ಧಿವಾದವೆಲ್ಲಾ ವ್ಯರ್ಥವಾದುದಕ್ಕಾಗಿ, ಮಗನನ್ನು ಚಿತ್ರಹಿಂಸೆಗೂ ಗುರಿಪಡಿಸುತ್ತಾನೆ. ಪ್ರಹ್ಲಾದನನ್ನು ಹಿರಣ್ಯಕಶಿಪುವು ಬೆಂಕಿಯಲ್ಲಿ

ಎಸೆಯುತ್ತಾನೆ. ಆದರೆ ಬೆಂಕಿಯು ಅವನನ್ನು ಸುಡುವದಿಲ್ಲ. ಆ ರಾಜನು ಮಗನನ್ನು ನದಿಯಲ್ಲಿ ನೂಕುತ್ತಾನೆ. ಆದರೆ ನದಿಯು ಅವನನ್ನು ಮುಳುಗಿಸದೆ, ತೇಲಿಸಿ ಎತ್ತಿ ಹಿಡಿಯುತ್ತದೆ. ಪಂಚಭೂತಗಳಲ್ಲಿ ಬೆಂಕಿ–ನೀರುಗಳಂತೆ ಇತರ ಭೂತಗಳೂ ಪ್ರಹ್ಲಾದನಿಗೆ ಯಾವ ತೊಂದರೆಯನ್ನೂ ಮಾಡುವದಿಲ್ಲ. ಅವನು ಅವುಗಳ ನಿಜಸ್ವರೂಪವನ್ನು ಅರಿತಿದ್ದನು. ಆ ಬಾಲಕನ ಮೋಹವು ನಾಶವಾಗಿದ್ದುದರಿಂದ ನಿಜಸ್ಥಿತಿಯಲ್ಲಿ ನಿಂತಿದ್ದನು. ಅವನಿಗೆ ಎಲ್ಲವೂ ದೇವರಾಗಿದ್ದಿತು; ಎಲ್ಲವೂ ಪ್ರೇಮವಾಗಿದ್ದಿತು. ಬೆದರಿಕೆಗಳೂ ಆಗ್ರಹಗಳೂ ಹುಬ್ಬುಗಂಟುಗಳೂ ಖಡ್ಗವೂ ಬೆಂಕಿಯೂ ಎಲ್ಲವೂ ಅವನಿಗೆ ಮಧುರವಾದ ಸ್ವರ್ಗದ ಹೊರತು ಬೇರೆಯೆಂದು ತೋರಲಿಲ್ಲ. ಹೀಗಿರುವಾಗ ಅವನಿಗೆ ಯಾವ ಅಪಾಯವು ಬರಬೇಕು?

ಸ್ವಲ್ಪ ಕಾಲದ ಹಿಂದೆ ಹೃಷೀಕೇಶದ ಸಮೀಪದಲ್ಲಿ, ಹಿಮಾಲಯದ ಗೊಂಡಾರಣ್ಯದಲ್ಲಿ ಗಂಗಾನದಿಯ ದಂಡೆಯ ಮೇಲೆ ಒಬ್ಬ ಹಿಂದೂ ಯೋಗಿಯು ಕುಳಿತಿದ್ದನು. ಕೆಲವು ದೂರದಲ್ಲಿ ಇನ್ನು ಕೆಲವರು ಸಂನ್ಯಾಸಿಗಳೂ ಕುಳಿತಿದ್ದರು. ಆ ಯೋಗಿಯು "ಶಿವೋಹಂ" "ಶಿವೋಹಂ" "ಶಿವನೇ ನಾನು" "ಶಿವನೇ ನಾನು" "ದೇವರೇ ನಾನು" ಎಂದು ಆಗಾಗ ಉದ್ಗಾರ ಮಾಡುತ್ತಿದ್ದನು. ಆ ಸಂನ್ಯಾಸಿಗಳೆಲ್ಲಾ ಕುತೂಹಲದಿಂದಲೂ ಆದರದಿಂದಲೂ ಆತ್ಮಾರಾಮನಾದ ಆ ಯೋಗಿಯನ್ನೇ ನೋಡುತ್ತಿದ್ದರು. ಆದರೆ ಒಮ್ಮೆಗೇ ಒಂದು ಹುಲಿಯು ಜಿಗಿದು ಬಂದು ಆ ಯೋಗಿಯನ್ನು ಕಚ್ಚಿಕೊಂಡು ಹೋಯಿತು. ಭಯಂಕರವಾದ ಆ ಹುಲಿಯ ದವಡೆಯಲ್ಲಿ ಸಿಕ್ಕಿಕೊಂಡಿದ್ದರೂ ಆ ಯೋಗಿಯು ನಿರ್ಭಯವಾಗಿ "ಶಿವೋಹಂ, ಶಿವೋಹಂ" ಎಂದೇ ಆವೇಶದಿಂದ ಕೂಗುತ್ತಿದ್ದನು. ಆ ಹುಲಿಯು ಅವನ ಕೈಕಾಲುಗಳನ್ನೆಲ್ಲಾ ಹರಿದು ಹಾಕಿದರೂ ಅವನ ಬಾಯಿಂದ ಅದೇ ಶಬ್ದವೇ ಅಡವಿಯೆಲ್ಲಾ ಮಾರ್ದನಿ ಕೊಡುವಂತೆ ನುಗ್ಗಿ ಬರುತ್ತಿದ್ದಿತು. ಈ ಅದ್ಭುತಕ್ಕೆ ಏನೆನ್ನುತ್ತೀರಿ? "ಶಿವೋಹಂ, ಶಿವೋಹಂ" 'ನಾನೇ ದೇವರು' 'ನಾನೇ ದೇವರು' ಎನ್ನುವದು ಇದೆಂತಹ ಸತ್ಯ! ಇದನ್ನೇನು ನಾಸ್ತಿಕವಾದವೆನ್ನುತ್ತೀರಾ? ನಿರೀಶ್ವರವಾದವೆನ್ನುತ್ತೀರಾ? ಅದರಿಂದ ಎಷ್ಟೋ ದೂರ, ಬಹಳ ದೂರ, ಅತಿ ದೂರ! 'ಶಿವೋಹಂ' ಎನ್ನುವ ಅನುಭವವೇ ಆತ್ಯಂತಿಕ ಅನುಭವ, ಕಟ್ಟಕಡೆಯ ಅನುಭವ. ಪ್ರೇಮಿಗಳು ಆ ಪ್ರೇಮದ ಕೈಲಾಸಶಿಖರವನ್ನು ಏರಿದಾಗ, ಸೇರಿದಾಗ, ತಮ್ಮ ಅತ್ಯಂತ ಪ್ರಿಯವ್ಯಕ್ತಿಯಲ್ಲಿ ಸಂಪೂರ್ಣ ಐಕ್ಯಭಾವವನ್ನು ಅನುಭವಿಸುವದಿಲ್ಲವೆ? ತಾಯಿಯು ತನ್ನ ಮುದ್ದು ಮಗುವನ್ನು ತನ್ನ ಮಾಂಸದ ಮಾಂಸವೆಂದೂ ರಕ್ತದ ರಕ್ತವೆಂದೂ ಮೂಳೆಯ ಮೂಳೆಯೆಂದೂ ಹೇಳುವದಿಲ್ಲವೆ? ತಾಯಿಯು ತನ್ನ ಮಗುವನ್ನು ತನ್ನ ಇನ್ನೊಂದು ಜೀವವೆಂದೂ ಆತ್ಮವೆಂದೂ ತಿಳಿಯುವದಿಲ್ಲವೆ? ಮಗುವಿನ ಹಿತಾಸಕ್ತಿಗಳೂ ತಾಯಿಯ ಹಿತಾಸಕ್ತಿಗಳೂ ಒಂದೇ ಅಲ್ಲವೆ? ಎಂದೆಂದಿಗೂ ಒಂದೇ ಸರಿ.

ದೇವರನ್ನು ಒಪ್ಪಿಕೊಳ್ಳುವದು, ಅಂಗೀಕರಿಸುವದು ಮಾತ್ರವಲ್ಲ, ಆಲಂಗಿಸ ಬೇಕು, ಅವನಲ್ಲಿಯೇ ಲಗ್ನವಾಗಬೇಕು, ಮಗ್ನವಾಗಬೇಕು; ಲೇಶ ಭೇದದ ಸೆಲೆಯೂ ಇಲ್ಲದಂತೆ ಅತ್ಯುತ್ಕಟವಾದ ಪ್ರೇಮಭಾವದಿಂದ ದೇವರಲ್ಲಿ ಒಂದಾಗಬೇಕು. "ಓ ಪ್ರಭುವೇ ! ನಿನ್ನ ಇಚ್ಛೆಯಂತೆ ಆಗಲಿ;" ಎಂದು ಪ್ರಾರ್ಥನೆ ಮಾಡುವದಕ್ಕೆ ಬದಲು "ಸಕಲವೂ ನನ್ನ ಇಚ್ಛೆಯಂತೆಯೇ ನಡೆಯುತ್ತದೆ" ಎಂದು ತಿಳಿಯುವದರಲ್ಲಿ ನಿಮ್ಮ ಸಂತೋಷವಿರಲಿ.

ಬಹಳ ಹಿಂದಿನ ಕಾಲದಲ್ಲಿ, ಇಂಡಿಯಾದಲ್ಲಿ ಈಗ ನೀವು ಅಮೆರಿಕಾದಲ್ಲಿ ಕಾಣುವ ದಕ್ಕಿಂತಲೂ ಪದ್ಧತಿಗಳೂ ರೂಢಿಗಳೂ ಬೇರೆ ಬಗೆಯಾಗಿದ್ದವು. ಇಲ್ಲಿ ಅಮೆರಿಕಾ ದಲ್ಲಿ ರಾತ್ರಿ ಕಾಲದಲ್ಲಿ ವಿದ್ಯುಚ್ಛಕ್ತಿಯಿಂದ ನಿಮ್ಮ ಮನೆಗಳನ್ನೂ ನಗರಗಳನ್ನೂ ಬೆಳಗಿ ರಾತ್ರಿಯನ್ನೇ ಹಗಲನ್ನಾಗಿ ಮಾಡಿಕೊಳ್ಳುತ್ತಿದ್ದೀರಿ. ಈಗ ರಾಮನು ಹೇಳುತ್ತಿರುವ ಸಂದರ್ಭದ ಸಮಯದಲ್ಲಿ ಇಂಡಿಯಾದಲ್ಲಿ ದೀಪಕ್ಕೆ ಮಣ್ಣಿನ ಹಣತಿಯನ್ನು ಉಪ ಯೋಗಿಸುತ್ತಿದ್ದರು. ಸಂಜೆಯ ಹೊತ್ತು ಒಂದು ಮನೆಯಲ್ಲಿ ದೀಪವನ್ನು ಹಚ್ಚಿದರೆ, ನೆರೆಹೊರೆಯ ಮನೆಯವರೆಲ್ಲಾ ಆ ಮನೆಗೆ ಬಂದು ತಮ್ಮ ತಮ್ಮ ದೀಪಗಳನ್ನು ಹಚ್ಚಿಕೊಂಡು ಹೋಗುತ್ತಿದ್ದರು. ಒಂದು ಸಾಯಂಕಾಲ ಶ್ರೀಕೃಷ್ಣನಲ್ಲಿ ಉತ್ಕಟ ಪ್ರೇಮವುಳ್ಳ ಒಬ್ಬ ಕನ್ನಿಕೆಯು ತನ್ನ ಹಣತಿಗೆ ದೀಪವನ್ನು ಹಚ್ಚಿಕೊಳ್ಳುವ ನೆಪ ದಿಂದ ಕೃಷ್ಣನ ತಂದೆಯ ಮನೆಗೆ ಹೋದಳು. ಆದರೆ ದೀಪ ಹಚ್ಚಿದ್ದ ಬೇರೆ ಎಷ್ಟೋ ಮನೆಗಳಿದ್ದರೂ ಆ ಮನೆಗಳಿಗೆ ಹೋಗದೆ, ಕೃಷ್ಣನ ದಿವ್ಯ ಸೌಂದರ್ಯದ ತೇಜಸ್ಸಿನಲ್ಲಿ ತಾನು ಪತಂಗದಂತೆ ಸಿಕ್ಕು, ಸುಟ್ಟು ಹೋಗಬೇಕೆಂದೇ ಅಲ್ಲಿಗೆ ಬಂದಿದ್ದಳು. ದೀಪವನ್ನು ಹಚ್ಚಿಕೊಂಡು ಬರಬೇಕೆಂಬದು ಆ ಕನ್ಯೆಯು ತನ್ನ ತಾಯಿಗೆ ಹೇಳಿದ್ದ ನೆವಮಾತ್ರವಾಗಿ ದ್ದಿತು. ಆ ಕುಮಾರಿಯು ದೀಪವನ್ನು ಹಚ್ಚಿಕೊಳ್ಳುವಾಗ ತನ್ನ ಪ್ರಣತಿಯ ಬತ್ತಿ ಯನ್ನು ಉರಿಯುತ್ತಿದ್ದ ದೀಪದಲ್ಲಿ ಇರಿಸಬೇಕಾಗಿತ್ತು ; ಆದರೆ, ಆಕೆಯ ಕಣ್ಣುಗಳು ದೀಪದಲ್ಲಿರದೆ ಆ ಪ್ರಿಯ ಕೃಷ್ಣನ ಮುದ್ದಾದ ಮುಖದಲ್ಲಿದ್ದವು. ಆ ರಮ್ಯವೂ ಮೋಹಕವೂ ಆದ ಕೃಷ್ಣನ ಮುಖವನ್ನು ಆಕೆಯು ಅತ್ಯಂತ ಕಾತರತೆಯಿಂದಲೂ ಆಸಕ್ತಿಯಿಂದಲೂ ನೋಡುತ್ತಿದ್ದುದರಿಂದ ತನ್ನ ಪ್ರಣತಿಯ ಬತ್ತಿಯನ್ನು ಉರಿಯುವ ದೀಪಕ್ಕೆ ಹಚ್ಚುವ ಬದಲು ತನ್ನ ಕೈಬಟ್ಟುಗಳನ್ನೇ ಹಚ್ಚಿದ್ದುದು ಆಕೆಯ ಲಕ್ಷ್ಯಕ್ಕೆ ಬರಲಿಲ್ಲ. ಆ ದೀಪದಲ್ಲಿ ಆಕೆಯ ಬಟ್ಟುಗಳು ಉರಿಯುತ್ತಲೇ ಇದ್ದರೂ ಆಕೆಗೆ ಅದರ ಎಚ್ಚರವಿರಲಿಲ್ಲ. ಆಕೆಯ ನೋಟವೂ ಮನಸ್ಸೂ ಉತ್ಕಟವಾದ ಪ್ರೇಮದಿಂದ ಕೃಷ್ಣನ ಮುಖಾರವಿಂದದಲ್ಲಿಯೇ ನಾಟಿದ್ದವು. ಹಾಗೇ ಎಷ್ಟೋ ಹೊತ್ತು ಕಳೆಯಿತು; ಆಕೆಯು ಮನೆಗೆ ಹಿಂದಿರುಗಲಿಲ್ಲವಾದ್ದರಿಂದ ಆಕೆಯ ತಾಯಿಗೆ ಚಿಂತೆಯಾಯಿತು; ಮಗಳು ಮನೆಗೆ ಬಾರದೆ ಅಷ್ಟು ತಡವಾದುದನ್ನು ತಾಯಿಯು ಸಹಿಸಲಾಗಲಿಲ್ಲ. ಆದ್ದ ರಿಂದ ತಾಯಿಯು ನೆರಮನೆಗೆ ಹೋಗಿ, ಮಗಳ ಕೈಬೆರಳುಗಳು ದೀಪದಲ್ಲಿ ಸುಡುತ್ತಾ

ಮೂಳೆಯು ಸೀದುಹೋಗಿ, ಕೈ ಗಡಗಡ ನಡಗುತ್ತಿದ್ದರೂ ಆಕೆಗೆ ಎಚ್ಚರವಿಲ್ಲದಿರುವದನ್ನು ನೋಡಿ ಹೌಹಾರಿ, ಏದುತ್ತಾ "ಅಯ್ಯೋ! ಮಗಳೆ, ಏನು ಮಾಡುತ್ತಿ? ಇನ್ನೇನು ಗತಿ? ಸುಟ್ಟು ಹೋದೆಯಲ್ಲೇ!" ಎಂದು ಕಿರುಚುತ್ತಾ, ಕೈಯನ್ನು ದೀಪದಿಂದ ಎಳೆದುಹಾಕಿ ತಾಯಿಯು ಅಳುವದಕ್ಕೆ ತೊಡಗಿದಳು. ಆಗ ಬಾಲಕಿಯು ಹೊಡೆದೆಬ್ಬಿಸಿದಂತೆ ಎಚ್ಚರಗೊಂಡಳು.

ಅಂಥಾ ದಿವ್ಯವಾದ ಪೂರ್ಣ ಪ್ರೇಮದ ಸ್ಥಿತಿಯಲ್ಲಿ ಪ್ರಿಯಕರೆಯೂ ಪ್ರಿಯತಮನೂ ಒಂದಾಗುತ್ತಾರೆ – "ನಾನೇ ಅವನು" "ನಾನೇ ನೀನು" ಎನ್ನುವದು ಆಗ ಅನುಭವಕ್ಕೆ ಬರುತ್ತದೆ.

ಇದು ಮೂರನೇ ಸ್ಥಿತಿ; ಇದಕ್ಕೂ ಮೇಲೆ ಎಲ್ಲಾ ನಿರೂಪಣೆಯನ್ನೂ ವಿವರಣೆಯನ್ನೂ ಮೀರಿದ ಸ್ಥಿತಿಯು ಇದೆ.

ಇದುವರೆಗೆ ಹೇಳಿದ ಈ ಕತೆಗಳು ಪ್ರೇಮದ ಮೂರನೆಯ ಬಗೆಯನ್ನು ತಿಳಿಸುತ್ತವೆ. ಈ ಮುಂದಿನ ದೃಷ್ಟಾಂತವು 'ತವೈವಾಹಂ' ಎನ್ನುವ ಅಧ್ಯಾತ್ಮ ವಿಕಾಸದ ಎರಡನೆಯ ಸ್ಥಿತಿಯನ್ನೂ ಘಟ್ಟವನ್ನೂ ತಿಳಿಸುತ್ತದೆ. ಇಬ್ಬರು ವಿದ್ಯಾರ್ಥಿಗಳು ಗುರುಗಳಲ್ಲಿ ಬಂದು ತಮಗೆ ಧರ್ಮ ತತ್ತ್ವವನ್ನು ಉಪದೇಶ ಮಾಡಬೇಕೆಂದು ಬೇಡಿಕೊಂಡರು. ಅವರ ಅರ್ಹತೆಯನ್ನು ಪರೀಕ್ಷೆಮಾಡಿ ಬೋಧಿಸುವದಾಗಿ ಗುರುಗಳು ಹೇಳಿ, ಅವರಲ್ಲಿ ಒಬ್ಬೊಬ್ಬರಿಗೆ ಒಂದೊಂದು ಪಾರಿವಾಳದ ಹಕ್ಕಿಯನ್ನು ಕೊಟ್ಟರು. ಯಾರೊಬ್ಬರೂ ನೋಡದಿರುವಲ್ಲಿ ಆ ಹಕ್ಕಿಗಳನ್ನು ಕೊಂದು ತರಬೇಕೆಂದು ಅವರು ಇಬ್ಬರಿಗೂ ಹೇಳಿ ಕಳುಹಿಸಿದರು. ಅವರಲ್ಲಿ ಒಬ್ಬನು ಜನಭರಿತವಾದ ರಾಜಬೀದಿಗೆ ಹೋಗಿ, ಜನರ ಕಡೆ ಬೆನ್ನು ತಿರುಗಿಸಿ, ತನ್ನ ತಲೆಯ ಮೇಲೆ ಮುಸುಕು ಹಾಕಿಕೊಂಡು, ಯಾರೂ ಕಾಣರೆಂದು, ಪಾರಿವಾಳವನ್ನು ಕತ್ತು ಹಿಸುಕಿ ಕೊಂದು, ಗುರುಗಳಲ್ಲಿ ಬಂದು "ಸ್ವಾಮಿ, ಸ್ವಾಮಿ! ತಾವು ಹೇಳಿದಂತೆಯೇ ಯಾರೂ ಕಾಣದಲ್ಲಿ ಪಾರಿವಾಳವನ್ನು ಕೊಂದು ತಂದಿದ್ದೇನೆ; ದಯವಿಟ್ಟು, ನನಗೆ ಉಪದೇಶ ಮಾಡಬೇಕು" ಎಂದು ಹೇಳಿದನು.

ಇನ್ನೊಬ್ಬ ಬಾಲಕನು ದಟ್ಟವಾದ ಅರಣ್ಯಕ್ಕೆ ಹೋಗಿ, ನಿರ್ಜನವಾದ ಸ್ಥಳದಲ್ಲಿ ಪಾರಿವಾಳದ ಕುತ್ತಿಗೆಯನ್ನು ಮುರಿಯುವದಕ್ಕೆ ತೊಡಗಿದಾಗ ಆಹಾ! ಆ ಪಾರಿವಾಳದ ಸೌಮ್ಯವೂ ಮೃದುವೂ ಗಂಭೀರವೂ ಪ್ರಕಾಶಮಾನವೂ ಆದ ಕಣ್ಣುಗಳೇ ತನ್ನನ್ನು ನೇರವಾಗಿ ಕರುಣಾಜನಕವಾಗಿ ನೋಡುತ್ತಿರುವಂತೆ ಅವನಿಗೆ ಭಾಸವಾಯಿತು. ಅದರ ನೋಟದಲ್ಲಿ ಅವನ ನೋಟವೂ ಸೇರಿದಾಗ ಅವನ ಹೃದಯವು ತಲ್ಲಣಿಸಿತು. ಅತಿ ಕಠಿಣವಾದ ಪರೀಕ್ಷೆಗೆ ಗುರುವು ತನ್ನನ್ನು ಗುರಿಪಡಿಸಿದಂತೆ ಅವನಿಗೆ ತೋರಿತು; ಏಕೆಂದರೆ, ಎಲ್ಲ ಕಾಲದಲ್ಲಿಯೂ ಎಲ್ಲ ಸ್ಥಳದಲ್ಲಿಯೂ ಎಲ್ಲವನ್ನೂ ನೋಡಬಲ್ಲ ಸರ್ವಸಾಕ್ಷಿಯು ಆ ಪಾರಿವಾಳದಲ್ಲಿಯೂ ಇದ್ದು, ಅದರ ಕಣ್ಣುಗಳ ಮೂಲಕ ತನ್ನ

ಕೃತ್ಯವನ್ನು ನೋಡುತ್ತಿರುವಂತೆ ಅವನಿಗೆ ಕಂಡಿತು. ಅವನು ಎಲ್ಲೆಲ್ಲಿ ಹೋಗಿ ಯಾವ ಯಾವ ನಿರ್ಜನ ಸ್ಥಳದಲ್ಲಿ ಅದನ್ನು ಕೊಲ್ಲಲು ಪ್ರಯತ್ನಮಾಡಿದರೂ ಸರ್ವಸಾಕ್ಷಿಯು ಆ ಪಾರಿವಾಳದ ಕಣ್ಣುಗಳಿಂದ ನೋಡುತ್ತಲೇ ಇದ್ದಿತು. ಅದರ ದೃಷ್ಟಿಯಿಂದ ತಪ್ಪಿಸಿಕೊಳ್ಳುವದು ಅವನಿಗೆ ಸಾಧ್ಯವೇ ಆಗಲಿಲ್ಲ.

ಆದ್ದರಿಂದ ನಿರಾಶನಾದ ಬಾಲಕನು ಭಯದಿಂದಲೂ ಅಸಂತುಷ್ಟಿಯಿಂದಲೂ ಪಾರಿವಾಳವನ್ನು ತಂದು ಗುರುಗಳ ಪಾದದಡಿಯಲ್ಲಿಟ್ಟು "ಸ್ವಾಮಿ! ಕ್ಷಮಿಸಬೇಕು. ತಮ್ಮ ಆಜ್ಞೆಯನ್ನು ನಡೆಸುವದು ನನ್ನಿಂದ ಸಾಧ್ಯವಾಗಲಿಲ್ಲ. ಎಲ್ಲಿ ಹೋದರೂ ತಪ್ಪದೇ ನೋಡುತ್ತಿರುವ ಪಾರಿವಾಳದ ಕಣ್ಣನ್ನು ತಪ್ಪಿಸಿ ಅದನ್ನು ಕೊಲ್ಲುವದು ಸಾಧ್ಯವಾಗುವುದಿಲ್ಲ. ಈ ಅತ್ಯಂತ ಕಠಿಣ ಪರೀಕ್ಷೆಯಲ್ಲಿ ನಾನು ತೇರ್ಗಡೆ ಹೊಂದಲಾರೆ. ಆದರೂ ದಯಮಾಡಿ ನನ್ನ ಮೇಲೆ ಕರುಣೆಯಿಟ್ಟು, ನನಗೆ ದಿವ್ಯವಾದ ಜ್ಞಾನವನ್ನು ಉಪದೇಶಮಾಡಬೇಕು. ನನಗೆ ಖಂಡಿತವಾಗಿಯೂ ಅದೊಂದೇ ಬೇಕು. ದಯಾಸಾಗರರಾದ ತಾವು ಅನುಗ್ರಹಮಾಡಬೇಕು" ಎಂದು ಅಳುತ್ತಾ ಬೇಡಿಕೊಂಡನು. ಗುರುಗಳಿಗೆ ಬಹಳ ಸಂತೋಷವಾಯಿತು. ಅವರು ಮಗನನ್ನು ಮುದ್ದಾಡುವಂತೆ ಅವನನ್ನು ಪ್ರೀತಿಯಿಂದ ಮುದ್ದಾಡಿ, ಪಾದಗಳಲ್ಲಿ ಬಿದ್ದವನನ್ನು ಎತ್ತಿ, ಆಲಂಗಿಸಿಕೊಂಡು, ಬೆನ್ನುತಟ್ಟಿ, "ಎಲೈ ವತ್ಸ! ನೀನು ಕೊಲ್ಲಬೇಕೆಂದಿದ್ದ ಪಾರಿವಾಳದ ಕಣ್ಣಿನಲ್ಲಿ ವೀಕ್ಷಕನನ್ನು ಅಥವಾ ಸಾಕ್ಷಿ ಪುರುಷನನ್ನು ನೋಡಿದಂತೆಯೇ ನೀನು ಎಲ್ಲಿ ಹೋದರೂ ಏನು ಮಾಡಿದರೂ ಯಾವ ಅಪರಾಧವನ್ನು ನಡೆಸಿದರೂ ಎಲ್ಲವನ್ನೂ ನೋಡತಕ್ಕ ದೇವರು ಇದ್ದಾನೆಂದು ಮನಗಾಣಬೇಕು. ನೆನಪಿನಲ್ಲಿಟ್ಟಿರಬೇಕು. ನೀನು ಹಂಬಲಿಸುತ್ತಿರುವ ಹೆಣ್ಣಿನ ಕಣ್ಣುಗಳಲ್ಲಿಯೂ ಮಾಂಸದಲ್ಲಿಯೂ ಸರ್ವಸಾಕ್ಷಿಯಾದ ಚೈತನ್ಯವೇ ಇದೆಯೆಂದು ಅರಿಯಬೇಕು. ಅವಳ ಕಣ್ಣುಗಳಲ್ಲಿ ಕೂಡ ಗುರುವೇ ನೋಡುತ್ತಿರುವನೆಂದು ತಿಳಿ. ಯಾವಾಗಲೂ ಆ ಮಹಾ ಗುರು ಪರಮೇಶ್ವರನ ಸನ್ನಿಧಿಯಲ್ಲಿಯೇ, ಸಮ್ಮುಖದಲ್ಲಿಯೇ ಅವನ ಕಣ್ಣೆದುರಿಗೇ ಇರುವದಾಗಿ ತಿಳಿದು,—ಆ ಪ್ರಿಯತಮನು ಸರ್ವದಾ ನೋಡುತ್ತಿರುವನೆಂದು ತಿಳಿದು—ವರ್ತಿಸು.

ನೇಪಲ್ಸ್ ಪಟ್ಟಣದಲ್ಲಿ ಒಂದು ಭವ್ಯವಾದ ವಸ್ತು ಪ್ರದರ್ಶನಶಾಲೆ ಇದೆಯೆಂದು ಹೇಳುತ್ತಾರೆ. ಆ ನಿಲಯದ ಛಾವಣಿಯ ಮೇಲೆ ಒಂದು ಸುಂದರವಾದ ದೇವತಾಮೂರ್ತಿಯಿದೆ. ಅದರ ವಿಶೇಷವೇನೆಂದರೆ, ಆ ಪ್ರದರ್ಶನಶಾಲೆಯ (ಮ್ಯೂಸಿಯಂನ) ಯಾವದೇ ಭಾಗದಲ್ಲಿ ನೀವಿದ್ದರೂ ಪ್ರಕಾಶಮಾನವಾಗಿ ಥಳಥಳಿಸುವ ಆ ದೇವತೆಯ ನಿರ್ಮಲ ನೇತ್ರಗಳು ನೇರವಾಗಿ ನಿಮ್ಮ ಕಣ್ಣುಗಳಲ್ಲಿಯೇ ದೃಷ್ಟಿಯಿಟ್ಟು ನೋಡುತ್ತವೆ. ಅಧ್ಯಾತ್ಮಸಾಧನೆಯ ಎರಡನೆಯ ಘಟ್ಟದಲ್ಲಿರತಕ್ಕವರು ಪ್ರಾಮಾಣಿಕರಾಗಿದ್ದರೆ, ನಿತ್ಯ ನಿರಂತರವಾಗಿ ಗುರುವಿನ ದೃಷ್ಟಿಯಲ್ಲಿಯೇ ಜೀವಿಸುತ್ತಾರೆ. ತಾವು ಎಲ್ಲಿಯೇ ಹೋಗಲಿ, ಮನೆಯ ಕತ್ತಲೆಯ ಕೋಣೆಯಲ್ಲಿ ಆಗಲಿ,

ಅರಣ್ಯದ ಅತ್ಯಂತ ನಿರ್ಜನ ಗುಹೆಯಲ್ಲಿ ಆಗಲಿ, ಎಲ್ಲಿಯೇ ಇರಲಿ ಸರ್ವದಾ ದೇವರಿಂದ ನೋಡಲ್ಪಡುತ್ತಾ ಅವನ ಬೆಳಕಿನಿಂದ ಪೋಷಿತರಾಗಿಯೂ ಅವನ ಕರುಣೆಯಿಂದ ಅನುಗ್ರಹೀತರಾಗಿಯೂ ಇರುವಂತೆ ಅವರಿಗೆ ಅನುಭವವಾಗುತ್ತದೆ.

ಈಗ ನಾವು 'ತಸ್ಯೈವಾಹಂ' 'ಅವನ ಪ್ರೇಮಕ್ಕೆ ಪಾತ್ರನಾದವನು ನಾನು' ಎನ್ನುವ ಅಧ್ಯಾತ್ಮ ಸಾಧನೆಯ ಮೊದಲನೆಯ ಘಟ್ಟವನ್ನು ತೆಗೆದುಕೊಳ್ಳೋಣ. ಇದು ಕೇವಲ ಪ್ರಾಥಮಿಕ ಪಾಠವಾಗಿ ಕಾಣುತ್ತದೆ. ಆದರೆ, ಓ! ಅಧ್ಯಾತ್ಮ ಭಾವದ ಬೆಳವಣಿಗೆಯಲ್ಲಿ ಜನರು ಕೇವಲ ಆ ಮೊದಲನೆಯ ಸಾಧನೆಯನ್ನು ನಡೆಸುವದು ಕೂಡ ಎಷ್ಟು ಕಷ್ಟವಾಗಿದೆ! ಸಾಧಕನು ನಿಷ್ಕಪಟವಾದ ಹೃದಯದಿಂದಲೂ ನಿಜವಾದ ಒಮ್ಮನಸ್ಸಿನ ಭಕ್ತಿಯಿಂದಲೂ ತಾನು ನಂಬಿರುವದನ್ನೂ ತಿಳಿದಿರುವದನ್ನೂ ಸಾಧನೆಯಲ್ಲಿ ತಂದು, 'ತಸ್ಯೈವಾಹಂ' ಎಂಬ ಭಾವನೆಯು ತನ್ನ ಧಮನಿ–ಧಮನಿಯಲ್ಲಿಯೂ ರಕ್ತದ ಕಣಕಣದಲ್ಲಿಯೂ ಮಿಡಿಯುವಂತೆ ಮಾಡಿ, ಉಪಾಸನಾ ಮಾರ್ಗದ ಈ ಪ್ರಾಥಮಿಕ ಘಟ್ಟದಲ್ಲಿಯೇ ಆದರೂ ಆ ಭಾವನೆಯಿಂದ ತುಂಬಿ ತುಳುಕುವಂತಾದರೆ ಈ ಪ್ರಪಂಚದಲ್ಲಿ ಅವನೇ ಲೋಕೋತ್ತರ ದೇವತಾ ಪುರುಷನಾಗಬಹುದು.

ಇಂಡಿಯಾದಲ್ಲಿ ಗುರುನಾನಕ್ ಎಂಬ ಅತ್ಯಂತ ಪೂಜ್ಯ ಮಹಾತ್ಮನೊಬ್ಬನು ಅವನ ಯೌವನ ಕಾಲದಲ್ಲಿ ಧನ–ಧಾನ್ಯಗಳನ್ನು ಬಡವರಿಗೆ ದಾನಮಾಡುವ ಸೇವೆಯಲ್ಲಿ ನಿಯೋಜಿತನಾಗಿದ್ದನು. ಕೆಲವು ಬಡವರಿಗೆ ಹದಿಮೂರು ಸೇರು ಹಿಟ್ಟನ್ನು ಅಳೆದುಕೊಡಬೇಕೆಂದು ಅವನ ಯಜಮಾನನು ಅವನಿಗೆ ಅನುಜ್ಞೆ ಮಾಡಿದನು. ಗುರು ನಾನಕ್‌ನು ಅವರಿಗೆ ಒಂದು, ಎರಡು, ಮೂರು, ನಾಲ್ಕು, ಐದು ಎಂದು ಹಿಟ್ಟನ್ನು ಸೇರಿನಿಂದ ಅಳೆದುಕೊಡುವದಕ್ಕೆ ತೊಡಗಿದನು. ಅವನು ಹತ್ತು, ಹನ್ನೊಂದು, ಹನ್ನೆರಡು ಎಂದು ಗಟ್ಟಿಯಾಗಿ ಹಿಂದೀ ಭಾಷೆಯಲ್ಲಿ ಸಂಖ್ಯೆಗಳನ್ನು ಉಚ್ಚರಿಸುತ್ತಾ ಹಿಟ್ಟನ್ನು ಅಳೆದು ಕೊಟ್ಟು, ಹದಿಮೂರು ಎನ್ನುವ ಅಂಕೆಗೆ ಬಂದನು. ಹಿಂದೀ ಭಾಷೆಯಲ್ಲಿ ಹದಿಮೂರು ಎನ್ನುವದಕ್ಕೆ ತೇರಾ ಎಂಬ ಶಬ್ದವಿದೆ. ಇದೊಂದು ಬಹಳ ಗಮನಾರ್ಹ ಶಬ್ದ. ಇದಕ್ಕೆ ಎರಡು ಅರ್ಥಗಳಿವೆ. ಹದಿಮೂರು ಎಂದು ಒಂದು ಅರ್ಥ. ಇನ್ನೊಂದು ಅರ್ಥ "ತವೈವಾಹಂ" "ನಿನ್ನವನು ನಾನು" "ತವೈವಾಹಂ" "ನಾನು ದೇವರವನು" "ನಾನು ದೇವರ ಅಂಶ!" ಎಂದು.

ಗುರು ನಾನಕ್‌ನು ಹದಿಮೂರು ಸೇರು ಹಿಟ್ಟನ್ನು ಅವರಿಗೆ ಅಳೆದು ಕೊಟ್ಟು "ತೇರಾ, ತೇರಾ, ತೇರಾ" ಎಂದು ಉಚ್ಚರಿಸುತ್ತಿದ್ದಾಗ ಆ ಭಕ್ತಾಗ್ರೇಸರನಿಗೆ, "ನಿನ್ನವನು ನಾನು, ನಿನ್ನವನು ನಾನು, ತವೈವಾಹಂ" ಎನ್ನುವ ಅರ್ಥವು ಹೊಳೆದು, ಅವನು ನಿಜವಾಗಿಯೂ ತನ್ನ ದೇಹವನ್ನೂ ಸಮಸ್ತವನ್ನೂ ಮನಃಪೂರ್ವಕವಾಗಿ ಭಗವಂತನಿಗೆ ಒಪ್ಪಿಸುವಂಥ ಪವಿತ್ರ ವಿಚಾರಗಳೂ ಭಾವಗಳೂ ಅವನಲ್ಲಿ ಚಿಮ್ಮಿದವು. ಅವನು

ಪ್ರಪಂಚವನ್ನೇ ಮರೆತು ಬಿಟ್ಟನು. ಅವನು ತನ್ನನ್ನು ತಾನೇ ಮೀರಿದನು; ಅಲ್ಲಿ, ಅವನು ತನ್ನಲ್ಲಿ ತಾನೇ ಊರಿ ನಿಂತನು. ಆ ಆನಂದಾವೇಶದ ಭರದಲ್ಲಿ ಅವನು ಮೈಮರೆತು, "ತೇರಾ, ತೇರಾ, ತೇರಾ, ತೇರಾ" ಎಂದು ಕೂಗುತ್ತಾ ಎಚ್ಚರವಿಲ್ಲದೆ ಜನರಿಗೆ ಅಳೆದು ಕೊಡುತ್ತಲೇ ಇದ್ದನು. ಅವನು ಹಾಗೆಯೇ 'ತೇರಾ' 'ತೇರಾ' ಎನ್ನುತ್ತಾ ಎನ್ನುತ್ತಾ ನಿರತಿಶಯ ಆನಂದಾನುಭವದ ಸಮಾಧಿ ಸ್ಥಿತಿಯನ್ನು ಪಡೆದು ಬಿದ್ದುಬಿಟ್ಟನು.

ಹೀಗೆ ಉಪಾಸನೆಯ ಕೇವಲ ಪ್ರಾಥಮಿಕ ಭೂಮಿಕೆಯಲ್ಲಿರುವ ಜನರೇ ಎಷ್ಟೋ ವೇಳೆ, ಅವರಲ್ಲಿ ನುಡಿಗೆ ಸರಿಯಾದ ನಡೆಯೂ ಇದ್ದರೆ, ಅವರಲ್ಲಿ ನಿಷ್ಕಪಟ ಭಾವವೂ ಶ್ರದ್ಧೆಯೂ ಇದ್ದು ದೇವರ ಕಣ್ಣಿನಲ್ಲಿ ಮಣ್ಣೆರಚುವ ಬುದ್ಧಿಯಿಲ್ಲವಾದರೆ, ದೇವರಿಗೆ ವಾಗ್ದಾನಮಾಡಿ ಭರವಸೆ ಕೊಟ್ಟು, ಅದನ್ನು ಭಂಗಪಡಿಸಬೇಕೆಂಬುದು ಅವರಿಗಿಲ್ಲವಾದರೆ,—ಆಧ್ಯಾತ್ಮಿಕ ಅನುಭವದ ಅತ್ಯಂತ ಉನ್ನತ ಶಿಖರಕ್ಕೆ ಏರಬಲ್ಲರೆಂಬುದು ಇದರಿಂದ ವ್ಯಕ್ತವಾಗುತ್ತದೆ. ದೇವಸ್ಥಾನದಲ್ಲಿ (ಅಥವಾ ಚರ್ಚ್‌ನಲ್ಲಿ) ದೇವರ ಎದುರಿಗೆ ಇದ್ದಾಗ ಜನರು "ತವೈವಾಹಂ" 'ನಿನ್ನವನು ನಾನು' ಎಂದು ಶರಣಾಗತರಾಗುತ್ತಾರೆ. ಆದರೆ ಹೊರಗೆ ಬಂದೊಡನೆ ಅದನ್ನು ಮರೆತು "ಎಲ್ಲಾ ನನ್ನದು" ಎಂದು ಭಾವಿಸುತ್ತಾರೆ. 'ತವೈವಾಹಂ' ಎನ್ನುವದನ್ನು ತೀವ್ರ ಭಾವನೆಯಿಂದ ಜೀವನದಲ್ಲಿ ಅಳವಡಿಸಿಕೊಂಡು ಅನುಭವದಲ್ಲಿ ತಂದುಕೊಳ್ಳಬೇಕು. ಇದೇ ನಿಜವಾದ ಧರ್ಮವು.

'ತಸ್ಯೈವಾಹಂ' 'ತವೈವಾಹಂ' 'ತ್ವಮೇವಾಹಂ' ಎನ್ನುವ ಈ ಮೂರು ಶಿರೋನಾಮಗಳಲ್ಲಿ ಪ್ರಪಂಚದ ಆದ್ಯಂತದಲ್ಲಿರುವ ಮತ ಧರ್ಮಗಳನ್ನೆಲ್ಲಾ ವಿಭಾಗಮಾಡಬಹುದು. ಹೊರಗಿನ ರೂಪಗಳ ದೃಷ್ಟಿಯಿಂದ, 'ನೀನೇ ನಾನು' ಎನ್ನುವ ಮೂರನೆಯ ಭಾವವು ಅತ್ಯಂತ ಶ್ರೇಷ್ಠವಾದುದು. ಆದರೆ 'ನಿನ್ನವನು ನಾನು' ಎನ್ನುವ ಎರಡನೆಯ ಭಾವವು ಮೊದಲನೆಯ 'ಅವನವನು ನಾನು' ಎನ್ನುವ ಭಾವಕ್ಕಿಂತಲೂ ಹೆಚ್ಚು ಶ್ರೇಷ್ಠವಾದುದು. ಈ ಮೂರು ರೂಪಗಳಲ್ಲಿ ನಮ್ಮ ಧಾರ್ಮಿಕ ಮನೋಭಾವವನ್ನು ಯಾವದೊಂದರಲ್ಲಿಯಾದರೂ ಎರಕಹೊಯ್ಯಬಹುದು.

ಹಿಂದೂಗಳ ಅಭಿಪ್ರಾಯದಂತೆ ಉಪಾಸನಾಧರ್ಮದ ಮೊದಲನೆಯ ಹಂತದಲ್ಲಿ ಶ್ರದ್ಧೆಯಿಂದ ಸಾಧನೆ ಮಾಡತಕ್ಕವರು ಈ ಜನ್ಮದಲ್ಲಿಯೋ ಮುಂದಿನ ಜನ್ಮದಲ್ಲಿಯೋ ಎರಡನೆಯ ಮೇಲಿನ ಹಂತಕ್ಕೆ ಏರುತ್ತಾರೆ. ಅಲ್ಲಿ ಶ್ರದ್ಧೆಯಿಂದ ಎಡೆಬಿಡದೆ, ಸಾಧನೆ ಮಾಡಿದರೆ ಈ ಜನ್ಮದಲ್ಲಿಯೋ ಮುಂದಿನ ಜನ್ಮದಲ್ಲಿಯೋ 'ತ್ವಮೇವಾಹಂ' "ಸ ಏವಾಹಂ" ಎನ್ನುವ ಕೊನೆಯ ಹಂತಕ್ಕೆ ಕ್ರಮೇಣ ಏರುತ್ತಾರೆ. ಈ ಘಟ್ಟವನ್ನು ಸೇರಿದಾಗ ಪುನಃ ಜನ್ಮವಿಲ್ಲ. ಅವನು ಮುಕ್ತನು, ಜೀವನ್ಮುಕ್ತನು.

ಸರ್ವತಂತ್ರ ಸ್ವತಂತ್ರನು. ಆಗ ನರನೇ ನಾರಾಯಣನಾದನು; ಪುರುಷನೇ ಪುರುಷೋತ್ತಮನಾಗುತ್ತಾನೆ; ಜೀವನೇ ದೇವನೂ ಮಹಾದೇವನೂ ಆಗುತ್ತಾನೆ. ಓಂ, ಓಂ, ಓಂ !

ಓ ! ಎನ್ನಾ ಸಂತೋಷದ ಪಾತ್ರೆಯು ತುಂಬಿಹುದು,
ಕಾಮಗಳಖಿಲವು ಪರಿಪೂರ್ಣದಿ ಸಂತೃಪ್ತಿ ಪಡೆದಿಹುದು;
ಮುಂಜಾನೆಯ ಸುಮಧುರ ಮಂದಾನಿಲ ನಸುಬೀಸುತೆ,
ಮುತ್ತಿಡುವದ ನಾನರಳಿದ ಕುಸುಮದಿ ಮೆಚ್ಚುವೆನು.
ಕಾಮದ ಬಿಲ್ಲಿನ ಬಗೆಬಗೆ ಬಣ್ಣಗಳೆನ್ನಯ ಉಡಿಗೆಗಳು.
ಬೆಳಕೆನ್ನಯ ಸಂದೇಶವು ಮಿಂಚೆನ್ನಯ ಸಂಚು.
ಪ್ರಿಯಕರರೆಲ್ಲಾ ನಾನೇ, ಪ್ರೇಯಸಿಯರು ನಾನೇ.
ಬಯಕೆಗಳೆಲ್ಲಾ ನಾನೇ ಭಾವಾವೇಗವು ನಾನೇ.
ಗುಲಾಬಿಯ ನಗೆ, ಮಂಜಿನ ಮುತ್ತುಗಳು,
ಸವಿಯೊಳು ಸುವಾಸಿತ ಸೂರ್ಯನ ಮಿರುಗುವ ಕಿರಣಗಳು,
ರಜತಮಯನು ಚಂದ್ರನು ರುಚಿಕರ ಓರಣವೂ,
ಉಲ್ಲಸಿತ ತರಂಗ.

---

# RELIGION

# ಧರ್ಮ

## ಇಂಡಿಯಾ ದೇಶದಲ್ಲಿ ಮಥುರೆಯ 'ಶಾಂತಿ ಆಶ್ರಮ'ದಲ್ಲಿ ಉಪನ್ಯಾಸ

ಸಭ್ಯ ಸ್ತ್ರೀ ಪುರುಷರೂಪದಲ್ಲಿರುವ ನನ್ನ ಆತ್ಮವೆ!

Religion ಎನ್ನುವ ಇಂಗ್ಲಿಷ್ ಶಬ್ದದಲ್ಲಿ Re ಎಂದರೆ ಹಿಂದಕ್ಕೆ, Ligare ಎಂದರೆ ಬಂಧಿಸು ಎಂದು ಅರ್ಥವಾಗುತ್ತದೆ. ಇದರ ಮುಖ್ಯವಾದ ಅರ್ಥವೇನೆಂದರೆ, "ಮೂಲ ತತ್ತ್ವಕ್ಕೆ ಅಥವಾ ಉಗಮ ಮಸ್ತಕಕ್ಕೆ ಹಿಂದಿರುಗಿ ಬಂಧಿಸು" ಎಂದು.

ಪ್ರಶ್ನೆ: ಮೂಲ ಅಥವಾ ಉಗಮ ಯಾವದು? ಯಾರ ಶಾಸನದಿಂದ-ಎನ್ನುವಂತೆ-ಮನಸ್ಸು ಆಲೋಚಿಸುವದು, ಕಣ್ಣು ನೋಡುವದು ಮತ್ತು ಪ್ರಕೃತಿಯು ಜೀವಿಸುವದು?

ಉತ್ತರ: ಮನಸ್ಸಿನ ಗ್ರಹಣಕ್ಕೂ, ಕಣ್ಣಿಗೂ ಯಾವ ಇಂದ್ರಿಯಕ್ಕೂ ಗೋಚರ ವಾಗದೆ, ಅದನ್ನು ಅದರದರ ಕಾರ್ಯದಲ್ಲಿ ಪ್ರೇರಣೆ ಮಾಡಬಲ್ಲದು ಯಾವದೋ ಅದೇ ಬ್ರಹ್ಮ. ಬ್ರಹ್ಮವು ಇಂದ್ರಿಯಗಳಿಗೂ ಮನಸ್ಸಿಗೂ ವಿಷಯವಾಗಲಾರದು. ಮನಸ್ಸೂ, ಮಾತೂ ಅದನ್ನು ಮುಟ್ಟಲಾರದೇ ಭಯಭ್ರಾಂತವಾಗಿ ಹಿಂದಿರುಗುತ್ತವೆ.

ಇಕ್ಕಳವು ಬೇರೆ ಏನನ್ನಾದರೂ ಹಿಡಿಯಬಲ್ಲದು, ಆದರೆ ಅದೇ ಹಿಂದಿರುಗಿ ತನ್ನನ್ನೇ ಹಿಡಿದಿರುವ ಕೈಬೆರಳುಗಳನ್ನೇ ಹೇಗೆ ಹಿಡಿಯುವದು ಸಾಧ್ಯ? ಮನಸ್ಸಾಗಲೀ ಬುದ್ಧಿಯಾ ಗಲೀ ತನಗೇ ಕೇವಲ ಮೂಲವಾದ ಮಹಾ ಅಜ್ಞೇಯವನ್ನು ಅರಿಯಬಲ್ಲದೆಂದು ನಿರೀಕ್ಷಿಸುವದು ಹೇಗೆ ಸಾಧ್ಯ? ಹಾಗಾದರೆ, ಯಾವದರಿಂದ ಮನಸ್ಸು ಅಥವಾ ಬುದ್ಧಿಯು ಹಿಂದಿರುಗಿ, ಅತರ್ಕ್ಯವೂ ಅಭೇದ್ಯವೂ ಆದ ಮೂಲದಲ್ಲಿ, ಸರ್ವಾತೀತವಾದ ಮಹತ್ತಿನಲ್ಲಿ, ಲೀನವಾಗಿ ತನ್ನನ್ನು ತಾನು ಕಳೆದುಕೊಳ್ಳಬಲ್ಲದೋ ಅಂಥಾ ಸಾರಭೂತವಾಗಿ ನಿಗೂಢವಾದ ಸಾಧನ ಕ್ರಮವೇ-ದೇವಶಾಸ್ತ್ರದಿಂದ ಪ್ರತ್ಯೇಕವಾಗಿಯೂ ಅದರ ಸೈದ್ಧಾಂತಿಕ ಅತಿಶಯಗಳಿಂದ ವಿಮುಕ್ತವಾಗಿಯೂ ಇರುವ-ಧರ್ಮವು.

ಭಕ್ತನಾದ ಕ್ರೈಸ್ತನೂ ಅಥವಾ ಧರ್ಮಶೀಲ ಮುಸಲ್ಮಾನನು ಪ್ರಾರ್ಥನೆ ಸಲ್ಲಿಸು ವಾಗ, ತಾನು ಕಾಣುವದಕ್ಕೆ ಪ್ರಯತ್ನಮಾಡುತ್ತಿರುವ ದೇವರ ಮೇಲೆ, ದೂರ ಆಚೆಗೆ, ಅರಿವಿಗೂ ನಿಲುಕದೆ ಇರುವನೆಂಬದನ್ನು ಪರವೆಯಿಲ್ಲದೆ ತೋರಿಸುತ್ತಿರುವನೋ

ಎಂಬಂತೆ, ತನ್ನ ಕೈಗಳನ್ನು ಮೇಲೆತ್ತಿಕೊಂಡಿರುತ್ತಾನೆ. ಭಕ್ತಿಯಲ್ಲಿ ಮುಳುಗಿರುವ ಅಥವಾ ಸಮಾಧಿಯಲ್ಲಿ ಲೀನವಾಗಿರುವ ಹಿಂದುವು ಸ್ವಾಭಾವಿಕವಾಗಿ ಕಣ್ಣು ಮುಚ್ಚಿ ಕೊಳ್ಳುವದು, ಅವನ ಮನಸ್ಸು ಅಥವಾ ಬುದ್ಧಿಯು ಮುಳುಗಿರುವ ತತ್ತ್ವವು ಅವನೊಳಗೆ ಆಚೆ ದೂರವಾಗಿ ಅದೃಶ್ಯವಾಗಿದೆ– ಎಂಬದನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಇಸ್ಲಾಮ್, ಹಿಂದೂ, ಅಥವಾ ಕ್ರೈಸ್ತಮತದ ಆತ್ಮವಾದ ಧರ್ಮವು–ಅಲ್ಲ– ಆ ಧರ್ಮವು, ನಿಖರವಾಗಿ ಹೇಳಬೇಕೆಂದರೆ, ಅಜ್ಞೇಯ ತತ್ತ್ವದ ಅವರ್ಣನೀಯವಾದ ಅನುಭವವೇ ಆಗಿದೆ. ಶಬ್ದಗಳಿಂದ ವಿವರಿಸಲಾಗದ ಆ ಸರ್ವಾತೀತ ವಸ್ತುವಿನಲ್ಲಿ ಎಲ್ಲಾ ಜಾತಿ, ಮತ, ವರ್ಣಗಳ ಭೇದಗಳೂ ಎಲ್ಲಾ ಸಿದ್ಧಾಂತಗಳೂ ವಾದಗಳೂ ದೇಹವೂ ಮನಸ್ಸೂ ದೇಶ ಕಾಲ, ನಿಮಿತ್ತಗಳೂ ಇವುಗಳಲ್ಲಿ ಅಡಗಿರುವ ಸಮಸ್ತವೂ ಈ ಪ್ರಪಂಚವೂ ಮತ್ತು ಮಿಕ್ಕ ಎಲ್ಲಾ ಕಾಲ್ಪನಿಕ ಲೋಕಗಳೂ ಎಲ್ಲವೂ ಜ್ಞಾನಗಂಗೆಯಿಂದ ಕೊಚ್ಚಿ ತೊಳೆದು ಹೋಗುತ್ತವೆ. ಇಂಥಾ ಅದ್ಭುತ ವಿಚಾರ ನಮ್ಮನ್ನು ದಿಗ್ಭ್ರಮೆಗೊಳಿಸಬಹುದೋ ? ಇಲ್ಲವೇ ಇಲ್ಲ. ನಿಜವಾದ ಧಾರ್ಮಿಕ (ಆಧ್ಯಾತ್ಮಿಕ) ಅನುಭವವುಳ್ಳ ಯಾರೇ ಆಗಲಿ, ಪರಮಾತ್ಮನಲ್ಲಿ ತಮ್ಮ ಮನಸ್ಸಿನ ಸಂಪರ್ಕ–ಸಂಯೋಗಗಳನ್ನು ಪಡೆದ ಕೆಲವು ಕ್ಷಣಗಳ ಅನುಭವವನ್ನು ನೆನಪು ಮಾಡಿಕೊಂಡು, ಅಲ್ಲಿ "ನಾನು ಅಥವಾ ಈ ಪ್ರಪಂಚ" ಎನ್ನುವ ಕಲ್ಪನೆ ಇಲ್ಲದಿರುವದು ಹಾಗಿರಲಿ, ಏನಾದರೂ ದೇವರ ಭಾವನೆಯು ಕೂಡಾ ಉಳಿದಿರುತ್ತದೆಯೆ ?– ಎನ್ನುವದನ್ನು ಕಂಠೋಕ್ತವಾಗಿ ಹೇಳಲಿ. ನಿಜವಾದ ಅನುಭವದಲ್ಲಿ ನಾನು ಮತ್ತು ನೀನು ಎನ್ನುವದಾಗಲೀ ವಿಷಯಿ ( Subject ) ಮತ್ತು ವಿಷಯ (Object) ಎನ್ನುವದಾಗಲೀ ಲವಲೇಶವೂ ಇಲ್ಲ.

ಈ ಮೇಲೆ ನಿರೂಪಿಸಿರುವ ಗುರಿಯನ್ನು ಸಾಧಿಸುವುದಕ್ಕೆ ಯಾವ ಕ್ರಮಬದ್ಧವಾದ ಪ್ರಯತ್ನವಾದರೂ ಧಾರ್ಮಿಕವಾದುದೇ, ಧರ್ಮವೇ. ಇಂಥಾ ಗೂಢವಾದ ಫಲವನ್ನು ಗುರಿಯಿಡುವ ಅಗತ್ಯವಾದರೂ ಏನು ? ಎಂದು ಕೇಳಬಹುದು. ಈ ಪ್ರಶ್ನೆಯನ್ನು ಉತ್ತರಿಸುವದಕ್ಕೆ ಮೊದಲು ಮನುಷ್ಯನ ಆಕರ್ಷಣೆಗೆ ಮುಖ್ಯವಾದ ಆದರ್ಶಗಳೂ ಮತ್ತು ಗುರಿಗಳೂ ಆದ ಜ್ಞಾನ, ಪರಾಕ್ರಮ, ಪ್ರೇಮ ಮತ್ತು ಸುಖ– ಇವುಗಳನ್ನು ಸಾಮಾನ್ಯವಾಗಿ ಸಾಧಿಸುವ ಮಾರ್ಗವು ಯಾವದು ಎನ್ನುವದನ್ನು ಪರೀಕ್ಷಿಸೋಣ.

ಹೊರಗಿನ ಸಾಧನಗಳಾದ ಪುಸ್ತಕಗಳಿಂದಲೂ ಅಥವಾ ಬೋಧಕರಿಂದಲೂ ಸಂಪಾದಿಸಲ್ಪಟ್ಟ ಸಮಾಚಾರದ ಮೊತ್ತವೇ ಜ್ಞಾನವೆಂದು ಸಾಮಾನ್ಯವಾಗಿ ತಿಳಿದಿರುತ್ತಾರೆ; ಮತ್ತು ಒಂದಾನೊಂದು ಕಾಲದಲ್ಲಿ ಪರಮ ಪ್ರಮಾಣವಾಗಿ ಪ್ರಸಿದ್ಧವಾಗಿದ್ದ ಪಾಂಡಿತ್ಯಪೂರ್ಣವಾದ ಶಾಸ್ತ್ರಗಳನ್ನು ತಮ್ಮ ಮೆದುಳಿನಲ್ಲಿ ಗಿಟ್ಟುಗಿರಿಯುವಂತೆ

ತುಂಬಿಕೊಂಡವರು ಮಹಾ ವಿದ್ವಾಂಸರೆಂದು ತಿಳಿಯುತ್ತಾರೆ. ಪೂರ್ವ ಕಾಲದವರ ಸಾಧನೆಗಳನ್ನು ತಿರಸ್ಕರಿಸಬಾರದು, ಮತ್ತು ಅವುಗಳು ಶ್ರದ್ಧಾಪೂರ್ವಕವಾದ ಜಾಗರೂಕತೆಯಿಂದ ಅಧ್ಯಯನಮಾಡಬೇಕಾದ ಮೌಲ್ಯವುಳ್ಳವುಗಳು—ಎಂಬದೂ ನಿಜ. ಆದರೆ, True education ನಿಜವಾದ ವಿದ್ಯೆ – ಎಂದರೇನು? E-out, duco—I draw 'ನಾನು – ನನ್ನ ಒಳಗಿನಿಂದ – ಹೊರಗೆ ಎಳೆಯುತ್ತೇನೆ'; ಎಂಬದೇ ವಿದ್ಯೆ ಎನ್ನುವದರ ಅರ್ಥವು. ಆದ್ದರಿಂದ ಮನುಷ್ಯನು ಹೊರಗಿನ ಎಲ್ಲಾ ಸಹಾಯ—ಸಾಧನಗಳಿಂದಲೂ ತನ್ನೊಳಗೆ ತಿರುಗಿ, ತಾನು ಅಪೂರ್ವವಾದ ಜ್ಞಾನದ ಸ್ವಾಭಾವಿಕ ಮೂಲ ಝರಿಯೋ ಅಥವಾ ಭವ್ಯವಾದ ನವ್ಯ ಭಾವನೆಗಳ ಉಗಮವೋ ಎನ್ನುವಂತೆ ಆದರೆ ಮಾತ್ರ ನಿಜವಾದ ವಿದ್ಯೆಯು, ಪ್ರಾರಂಭವಾಗುತ್ತದೆ. ನ್ಯೂಟನ್ ಮತ್ತು ಇತರ ತತ್ತ್ವಜ್ಞಾನದ ಪ್ರಸಾರಕರೂ ಪ್ರಪಂಚಕ್ಕೆಲ್ಲಾ ಉಪಯುಕ್ತವಾದ ನೂತನ ಶೋಧಗಳನ್ನು ತಮ್ಮೊಳಗಿನಿಂದ ಹೊರ ಸುರಿಯುತ್ತಾರೆ. ಅವರು ಹೀಗೆ ಮಾಡುವದಕ್ಕೆ ಅವರಿಗೆ ಯಾರು ಕಲಿಸಿದರು? ಹಿಂದಿನ ಎಲ್ಲಾ ಶೋಧನೆಗಳನ್ನೂ ಮೀರಿದ ಮಹಾ ಮೌಲ್ಯವುಳ್ಳ ಆ ಎಲ್ಲಾ ಹೊಸ ಸಂಶೋಧನೆಗಳನ್ನೂ ಅವರು ಯಾವ ಪುಸ್ತಕಗಳಿಂದ ಕಲಿತರು? ನಿಶ್ಚಿತವಾಗಿಯೂ, ಮಾನವ ಕುಲಕ್ಕೇ ಉಪಕಾರ ಮಾಡಿದ ಜ್ಞಾನಿಗಳ ವಿದ್ಯೆಯು, ಯಾವದರಲ್ಲಿ ಸಂಯಮದಿಂದ ನಿಂತ ಮಾತ್ರವೇ ಕೇಳದಿರುವದನ್ನೆಲ್ಲಾ ಕೇಳಬಹುದೋ ತಿಳಿಯದಿರುವದನ್ನೆಲ್ಲಾ ತಿಳಿಯಬಹುದೋ ವಿಚಾರ ಮಾಡದಿರುವದನ್ನೆಲ್ಲಾ ವಿಚಾರ ಮಾಡಬಹುದೋ ಆ ನಿಜವಾದ ಆತ್ಮನನ್ನು ಪರವೆಯಿಲ್ಲದೇ ಸೇರುವದರಲ್ಲಿಯೇ ಉದಿಸಿ ಸ್ಫೂರ್ತಿಯನ್ನು ಪಡೆದಿರುತ್ತದೆ.

ನಮ್ಮ ಮನಸ್ಸು ಕೇಂದ್ರೀಕೃತವಾಗಿ, ಅಹಂಕಾರ, ಮನಸ್ಸು, ದೇಹಾದಿಗಳು ನಮಗೆ ತೋರದಂತಾಗಿ, ಮಹತ್ತಾದ ಅಜ್ಞೇಯದಲ್ಲಿ ಅಥವಾ ಅರಿವಿಗೆ ನಿಲುಕದಿರುವ ಮಹತ್ತಿನಲ್ಲಿ ಅಹಂಕಾರದಿಂದ ದೇಹದವರೆಗಿನ ಸರ್ವ ಜಗತ್ತೂ ಮುಳುಗಿ ಹೋಗಿರುವ ಒಂದು ಸ್ಥಿತಿಯನ್ನು ಸೇರಿದಾಗ ಮಾತ್ರವೇ ತತ್ತ್ವವಿಚಾರಗಳ ವೃಷ್ಟಿಯಾಗುತ್ತದೆ; ನೂತನ ಶೋಧಗಳ ಆವಿಷ್ಕಾರವಾಗುತ್ತವೆ; ಜ್ಞಾನಗಂಗೆಯು ಪ್ರವಹಿಸುವದಕ್ಕೆ ಆರಂಭವಾಗುತ್ತದೆ; ಪ್ರಕೃತಿಯ ರಹಸ್ಯಗಳೆಲ್ಲಾ ಪ್ರಕಟವಾಗುತ್ತವೆ. ಹೀಗೆ, ಎಲ್ಲಾ ಸತ್ಯಗಳೂ ಶೋಧಗಳೂ ನೂತನ ಯಾಂತ್ರಿಕ–ತಾಂತ್ರಿಕ ನಿರ್ಮಾಣಗಳೂ ಯೋಜನೆಗಳೂ ವಾದಗಳೂ ಸಂವಿಧಾನಗಳೂ ಇತ್ಯಾದಿಗಳು ಮೇಲೆ ವಿವರಿಸಿರುವ ಒಂದು ಬಗೆಯ ಸರ್ವಾತೀತ ಅಥವಾ ಪಾರಮಾರ್ಥಿಕ ಯೋಗದ ಅಥವಾ ಧರ್ಮದ ಸ್ವಾಭಾವಿಕ ಫಲಿತಾಂಶಗಳಾಗಿವೆ. ಕವಿಯು, ಸಾಮಾನ್ಯ ಅರಿವನು ಮೀರಿದ ಆ (ತುರೀಯ) ಸ್ಥಿತಿಯಲ್ಲಿ ಒಮ್ಮೆ ನಿಂತನೆಂದರೆ, ದಿವ್ಯವಾದ ವಿಚಾರಗಳೂ ಭವ್ಯವಾದ ಭಾವನೆಗಳೂ ಅವನಿಂದ ಹೊರಹೊಮ್ಮುತ್ತವೆ. ಗಣಿತ ಶಾಸ್ತ್ರ

ಪಂಡಿತನು ಅಥವಾ ತತ್ತ್ವಜ್ಞಾನಿಯು ಸುಮ್ಮನೆ ಅಹಂಕಾರವನ್ನು ಬಿಟ್ಟರೆ ಸಾಕು, ಅತ್ಯಂತ ಗಹನವಾದ ಸಮಸ್ಯೆಗಳ ಆಶ್ಚರ್ಯಕರವಾದ ಉತ್ತರಗಳು ಅವನಿಗೇ ಹೊಳೆಯುತ್ತವೆ. ಒಂದು ಸಮಸ್ಯೆಯನ್ನು ಬಿಡಿಸಿದ ಅನಂತರ ಅಥವಾ ಶೋಧವನ್ನು ಮಾಡಿದ ಮೇಲೆ, ನಮ್ಮಲ್ಲಿರುವ ತೋರಿಕೆಯ 'ನಾನು' ತನ್ನ ಯಶಸ್ಸಿಗಾಗಿ ಪ್ರಶಸ್ತಿಯನ್ನೂ ಖ್ಯಾತಿಯನ್ನೂ ಗೌರವವನ್ನೂ ಪಡೆಯುವದಕ್ಕೆ ಬಯಸುತ್ತದೆ. ಆದರೆ ಹಕ್ಕನ್ನು ಸ್ಥಾಪಿಸುವ ಅಥವಾ ಸ್ವಾಮ್ಯವನ್ನು ಭದ್ರಪಡಿಸಿಕೊಳ್ಳುವ ಈ "ನಾನು" ನಮ್ಮಲ್ಲಿ ತೋರಿಕೊಳ್ಳುತ್ತಿರುವವರೆಗೂ ಯಾವ ಶೋಧನೆಯೂ ಸಾಧ್ಯವಿರಲಿಲ್ಲ. ಆ "ನಾನು" ಎನ್ನುವದು ಅಡಗಿಹೋಗಿ, ಇದುವರೆಗೆ ಮೇಲೆ ವಿವರಿಸಿದಂತೆ, ಧರ್ಮ ಭಾವನೆಯು ಉದಿಸಿದ ಮೇಲೆಯೇ ಯಶಸ್ಸೂ ಜ್ಞಾನವೂ ನಮ್ಮೊಳಗೇ ಪುಟಿದು, ಬುಗ್ಗೆಯೇಳುವದಕ್ಕೆ ತೊಡಗುತ್ತದೆ.

ರಣರಂಗದಲ್ಲಿರುವ ಒಬ್ಬ ವೀರಪುರುಷನನ್ನು ನೋಡಿ. ಅವನಲ್ಲಿರುವ ಅತಿ ಸಮೃದ್ಧಿಯಾದ ಶಕ್ತಿಯಿಂದ ಅವನು ಉನ್ಮತ್ತನಾಗಿದ್ದಾನೆ. ವೈರಿಗಳಲ್ಲಿ ಸಹಸ್ರಜನ ಶೂರರೆಂದರೆ ಅವನಿಗೆ ಲೆಕ್ಕವೇ ಇಲ್ಲ. ಅವನ ದೇಹವೇ ಅವನಿಗೆ ಸತ್ಯವಾಗಿ—ಮಹತ್ತಾಗಿ—ತೋರುವದಿಲ್ಲ. ಅವನಿಗೆ ದೇಹವೂ ಮನಸ್ಸೂ ಈ ಪ್ರಪಂಚವೂ ಯಾವದೂ ಉಳಿದಿಲ್ಲ. ಅವನು ಅತ್ಯುತ್ಸಾಹಶಾಲಿಯಾಗಿದ್ದಾನೆ. ಅವನ ದೇಹಕ್ಕೂ ಮನಸ್ಸಿಗೂ ಇಡೀ ಪ್ರಪಂಚಕ್ಕೂ ಹಿನ್ನೆಲೆಯಾಗಿ ಆಧಾರವಾಗಿರುವ ದೂರ ಮಹತ್ತಿನಲ್ಲಿ—ಬೃಹತ್ತಿನಲ್ಲಿ (ಬ್ರಹ್ಮದಲ್ಲಿ) ಅವನ ಮನಸ್ಸು ವಿಲೀನವಾಗಿರುವದನ್ನು ಅವನ ದೇಹದ ಪ್ರತಿಯೊಂದು ರೋಮ ರೋಮವೂ ಗರ್ಜಿಸುತ್ತದೆ. ಹೀಗೆ ಯೋಧನ ದುರ್ದಮ್ಯವಾದ ಧೈರ್ಯವೂ ಪರಾಕ್ರಮ ಶಕ್ತಿಯೂ ಪ್ರಕೃತಿ ವಿಲಾಸವಾದ ಪ್ರಪಂಚದಲ್ಲಿ ಪರಮಾತ್ಮನ ವಿದ್ಯುತ್ ಪ್ರಕಾಶವಾಗಿದೆಯೆಂದು ಪ್ರೇಕ್ಷಕರಿಗೆ ತೋರುತ್ತದೆ ; ಆದರೆ ವ್ಯಕ್ತಿಯ ನಿರ್ಭಯವಾದ ಶೌರ್ಯವು, ಅವನು ಅರಿವಿಲ್ಲದೆ ಮಾಡುವ ಧರ್ಮ ಸಾಧನೆಯಾಗಿದೆ. ತೆರೆಯ ಹಿಂದಿನ ಶಕ್ತಿಯಲ್ಲಿ ಅರಿತೋ ಅರಿಯದೆಯೋ ಲೀನನಾಗುವದೇ ಆ ಧರ್ಮ.

ಪ್ರೇಮ ಎನ್ನುವ ಶಬ್ದವೇ ಎಷ್ಟು ಪ್ರಿಯವಾಗಿದೆ ! ಸುಭಾಷಿತವು ಹೇಳುವಂತೆ ಪ್ರತಿಯೊಬ್ಬರೂ ಪ್ರೇಮಿಯನ್ನೇ ಪ್ರೀತಿಸಬೇಕು. ಅನೇಕ ಸಂದರ್ಭಗಳಲ್ಲಿ ಶುದ್ಧ ಹಿಂದೂವಿಗೆ ಪ್ರೇಮ (ಭಕ್ತಿ) ಒಂದೇ ಅವಶ್ಯವಾದುದು. ದೈವೀ ಪ್ರೇಮಕ್ಕಾಗಿ ಏನನ್ನಾದರೂ ಎಲ್ಲವನ್ನಾದರೂ ಸಂತೋಷದಿಂದ ತ್ಯಾಗ ಮಾಡಬಲ್ಲ ಕೆಲವರು ಉದಾತ್ತ ಜೀವರಿದ್ದಾರೆ. ಪ್ರೇಮದ ಉಗಮ ಸ್ಥಾನವು ಯಾವದು ಎನ್ನುವದನ್ನು ಕಂಡುಹಿಡಿಯುವುದಕ್ಕೆ ಪ್ರಯತ್ನ ಮಾಡೋಣ.

ಚೈತನ್ಯ ಮಹಾ ಪ್ರಭುಗಳಂಥ ಮಹಾಭಕ್ತರ ಆದರ್ಶವು ಅವರ ಅಸಾಧಾರಣವಾದ ಸಮಾಧಿಗೆ ಅಥವಾ ಪ್ರಾರ್ಥನೆಯ ಪರವಶತೆಗೆ ವಿಶೇಷ ಪ್ರಸಿದ್ಧವಾಗಿದೆ.

ಭಗವತ್ ಪ್ರೇಮವನ್ನು ಉತ್ಕಟತೆಯಲ್ಲಿ ಆ ಮಟ್ಟಕ್ಕೆ ಏರಿಸುವದೆಂದರೆ ಅಪಮಾನ ಭಾವವನ್ನೂ ಅನುಸರಣೆಯನ್ನೂ ಅಥವಾ ಪ್ರಪಂಚವನ್ನೂ ಮೀರುವದು ಮತ್ತು ಅಲ್ಪವಾದ ಅಹಂಕಾರ ಭಾವನೆಯಿಂದ ಬಿಡುಗಡೆ ಹೋಂದುವದು, ಅತ್ಯುನ್ನತವೂ ಅತ್ಯಂತ ಶ್ರೇಷ್ಠವೂ ಆದ ಪ್ರೇಮವು, ಪ್ರೇಮ ಮಾಡತಕ್ಕವನು ಪ್ರೇಮಕ್ಕೆ ಪಾತ್ರ ವಾದ ವಸ್ತು (ಅಥವಾ ವ್ಯಕ್ತಿ) ಎಂಬ ತೋರಿಕೆಯ ಭೇದವನ್ನು ಮೀರಿರುತ್ತದೆ— ಎಂಬುದನ್ನು ಪ್ರಾಪಂಚಿಕ ವಿಷಯಗಳಲ್ಲಿ ಪ್ರೇಮಮಾಡುವ ಅನುಭವದಿಂದ ಅನು ಗ್ರಹ ಪಡೆದಿರುವವರು ಸಹ ಒಪ್ಪಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಪ್ರೇಮವೆಂಬದೂ ಧರ್ಮವೆಂಬದೂ ಒಂದೇ ಆಗಿದೆಯೆಂಬುದನ್ನು ಯಾರೂ ಅಲ್ಲಗಳೆಯುವದು ಸಾಧ್ಯವಿಲ್ಲ.

ಇಂಗ್ಲಿಷ್ ಭಾಷೆಯಲ್ಲಿ Ecstacy ಆನಂದಪರವಶತೆ ಎಂಬ ಶಬ್ದವು—ಯಾವ ಸಂದರ್ಭದಲ್ಲಿ ಯಾವ ವಿಷಯದಲ್ಲಿಯಾದರೂ ಅದು ಅನುಭವಕ್ಕೆ ಬರಲಿ,—Ek—ಹೊರಗೆ, Sto—ನಿಲ್ಲು,— ದೇಹವನ್ನೂ ಮನಸ್ಸನ್ನೂ ಪ್ರಪಂಚವನ್ನೂ ಮೀರಿ ಒಂದು ರೀತಿಯಿಂದ ಹೊರಗೆ ನಿಲ್ಲುವದೆನ್ನುವದನ್ನು ತೋರಿಸುವದಲ್ಲದೆ ಬೇರೆಯಿಲ್ಲ. ಯಾರಾದರೂ ತಮ್ಮ ಅನುಭವವನ್ನು ತಾವು ನೋಡಿಕೊಂಡರೆ ಆನಂದವೂ ಸ್ವಾತಂತ್ರ್ಯವೂ ವಿಮೋಚನೆಯೂ ಒಂದೇ ಎಂಬದನ್ನು ಕಂಡು ಕೊಳ್ಳಬಹುದು. ಪ್ರಣಯ ತೋರಿಸಿ ಓಲೈಸುವ ವ್ಯಕ್ತಿಯೂ ಒಲುಮೆಗೆ ಪಾತ್ರವಾದ (ವಸ್ತುವೂ) ವ್ಯಕ್ತಿಯೂ ತಾತ್ಕಾಲಿಕವಾಗಿಯಾದರೂ ಎಲ್ಲಾ ದ್ವಂದ್ವಗಳನ್ನೂ ಮೀರಿ ಆನಂದವೆಂಬ ಒಂದು ಘಟಕದೊಳಗೆ ಬೆಸಿಗೆಯಾಗುತ್ತಾರೆ. ಹೀಗೆ ವ್ಯಕ್ತವಾಗಿ ಸುಖ ಸಂತೋಷಗಳ ಸ್ವಭಾವವೇ ಧರ್ಮವಾಗಿದೆ.

ಈ ಸಮೀಕ್ಷೆಗಳು ಎಲ್ಲಾ ಉದಾತ್ತವೂ ಅಪೇಕ್ಷಣೀಯವೂ ಆದ ಜೀವನದ ಉದ್ದೇಶಗಳನ್ನು ಬುದ್ಧಿಯೂ ಅದರೊಡನೆ ಇಡೀ ಜ್ಞೇಯವಾದ ಜಗತ್ತೂ ಪರತರ ವಾದ ಅಜ್ಞೇಯದಲ್ಲಿ ಕರಗಿಹೋದಾಗ ಮಾತ್ರ ಸಾಧಿಸಬಹುದೆಂದು ಸ್ಪಷ್ಟವಾಗಿ ತೋರಿಸುತ್ತವೆ.

ಆದರೆ ಇದು, ಶಬ್ದಕೋಶದಲ್ಲಿ ಮುಳುಗಿ, ಹುಡುಕಿ, ಉತ್ಕೃಷ್ಟವಾದ ಅವಶ್ಯ ಶಬ್ದ ರತ್ನಗಳನ್ನು ಪಡೆದಂತೆ, ಅಥವಾ ಸಮುದ್ರದಲ್ಲಿ ಮುಳುಗಿದವನು ಸ್ವಲ್ಪ ಹೊತ್ತಿ ನಲ್ಲಿ ದಿವ್ಯವಾದ ಮುತ್ತು, ರತ್ನಗಳನ್ನು ಹಿಡಿದುಕೊಂಡು ಮೇಲೆ ಬಂದಂತೆ, ವಿಶ್ವದ ಸಾರತತ್ತ್ವದಲ್ಲಿ ಮುಳುಗುವದಾಗಿದೆ.

ನಿಷ್ಕೃಷ್ಟವಾಗಿ ಹೇಳುವದಾದರೆ ಇಂದ್ರಿಯ ಸುಖಗಳು ಸಹ ಸಾರದಲ್ಲಿ ಧರ್ಮ ವಾಗಿವೆ. ಆದರೆ ಅದರಲ್ಲಿರುವ ಧರ್ಮವನ್ನು ತಿಳಿಯುವದು ಮಾತ್ರ ಚರಂಡಿಯ ಹೊಲಸು ದ್ವಾರದಿಂದ ರಾಜನ ದರ್ಬಾರನ್ನು ಇಣಿಕಿ ನೋಡಿದಂತೆಯೇ ಸರಿ. ಅಮಾವಾ ಸ್ಯೆಯ ಕತ್ತಲೆಯಲ್ಲಿ ಥಳಾರನೆ ಹೊಳೆಯುವ ಸೆಳೆಮಿಂಚು ಹಗಲು ಬೆಳಕಿನಂತೆಯೇ ಕ್ಷಣಕಾಲ ಎಲ್ಲವನ್ನೂ ಬೆಳಗಿ ತೋರಿಸಿದರೂ ಅದರಿಂದ ಉಪಕಾರವಾಗುವದಕ್ಕಿಂತಲೂ

ಹೆಚ್ಚು ಅಪಕಾರವೇ ಆಗುವಂತೆ ಇಂದ್ರಿಯ ಸುಖಗಳ ಪರಿಣಾಮವೂ ಆಗುತ್ತದೆ. ಅಥವಾ ಇನ್ನೂ ಹೆಚ್ಚು ಯಥಾರ್ಥವಾಗಿ ಹೇಳಬೇಕೆಂದರೆ, ಅದು 'ಪ್ರೊಮೆಥಿಯಸ್-'ನು ಸ್ವರ್ಗದಿಂದ ಬೆಂಕಿಯನ್ನು ಕದ್ದು ತಂದಂತೆಯೇ ಸರಿ.

ಆನಂದಮಯವಾದ ದರ್ಬಾರನ್ನು ಕೊಳಚೆಯ ಕಳ್ಳಗಂಡಿಯಿಂದ ಹಣಿಕಿ ನೋಡದೆ ನ್ಯಾಯವಾದ ದ್ವಾರದಿಂದ ರಾಜಾರೋಷವಾಗಿ ಪ್ರವೇಶಿಸುವದಕ್ಕೆ ಸಾಧ್ಯವಿಲ್ಲವೆ? ಮಧ್ಯರಾತ್ರಿಯ ಕೋಲು ಮಿಂಚನ್ನು ಎಂದೆಂದಿಗೂ ಇರುವ ಹಗಲು ಬೆಳಕಿನ ಹಾಗೆ, ಎಡೆಬಿಡದೆ ಪ್ರಕಾಶಿಸುವಂತೆ ಮಾಡುವದಕ್ಕೆ ಆಗುವದಿಲ್ಲವೆ? ಸಾಮಾನ್ಯ ದೃಷ್ಟಿಯಿಂದ ಹೇಳಬಹುದಾದರೆ, ಆ ಬಗೆಯಾದ ಸ್ವಾಭಾವಿಕ ಬಯಕೆಯಲ್ಲಿಯೇ ಧರ್ಮದ ಆವಶ್ಯಕತೆಯಿದೆ. ಅದರ ಸಾಧನೆಗಾಗಿ ಎಷ್ಟು ಕಷ್ಟದ ಹೋರಾಟ ನಡೆಸಿದರೂ ಸಾರ್ಥಕವೇ ಸರಿ. ಧರ್ಮದ ಮಹತ್ವವನ್ನು ಅಲ್ಲಗಳೆಯತಕ್ಕವರು ತಮ್ಮ ಹಿತಕ್ಕೇ ಘಾತಕವಾಗಿ ಆತ್ಮಹತ್ಯಾರೂಪದ ಪ್ರಯತ್ನದಲ್ಲಿ ತೊಡಗುತ್ತಾರೆ.

ಅನಿರ್ವಚನೀಯ ತತ್ತ್ವದ ರಹಸ್ಯವನ್ನು ಭೇದಿಸಬೇಕೆಂಬ ತತ್ತ್ವಶಾಸ್ತ್ರದ ಹಾಗೂ ವಿಜ್ಞಾನ ಶಾಸ್ತ್ರದ ಸಾಹಸಗಳೆಲ್ಲಾ ಸಹಾಯ ಶೂನ್ಯವಾಗಿ ಸೋತುಹೋಗಿವೆ. ಜ್ಞಾತೃವಿನ ದೃಷ್ಟಿಯಿಂದಾಗಲೀ ಜ್ಞೇಯ ದೃಷ್ಟಿಯಿಂದಾಗಲೀ ದೇಶ—ಕಾಲ—ನಿಮಿತ್ತಗಳ ಸ್ವಭಾವವನ್ನು ತಿಳಿಯಬೇಕೆಂಬ ಪ್ರಯತ್ನಗಳನ್ನೆಲ್ಲಾ ಅವು ಪ್ರತಿಭಟಿಸುತ್ತವೆ. ವಸ್ತು (Matter) ಶಕ್ತಿ (Force or energy), ಚಲನೆ (Motion) ಇವುಗಳ ಆತ್ಯಂತಿಕ ಸ್ವರೂಪವು ಏನೆನ್ನುವದು ಜಿಜ್ಞಾಸುವಿನ ವಿಚಾರಶೀಲ ಮನಸ್ಸಿಗೆ ಭೇದಿಸಲಾಗದ ಸಮಸ್ಯೆಯಾಗಿ ತೋರುತ್ತದೆ. ಪರಮಾಣು ವಾದದಲ್ಲಿ ಅಸಂಬದ್ಧತೆಯು ಆವರಿಸಿಕೊಂಡಿದೆ. ಶಕ್ತಿ ಕೇಂದ್ರಗಳ (Centres of Force) ಬಾಸ್ಕೊವಿಚ್ (Boscovich) ನ ವಾದವು ದೀರ್ಘಾವಧಿಯಲ್ಲಿ ಉತ್ತಮ ಪ್ರಗತಿಯನ್ನು ಹೊಂದುವಂತೆ ತೋರುವದಿಲ್ಲ. ಪ್ರಪಂಚದಲ್ಲಿರುವ ಎಲ್ಲಾ ಸೈದ್ಧಾಂತಿಕವಾದ ಮತ—ಧರ್ಮ ಶಾಸ್ತ್ರಗಳೂ ತಮ್ಮ ಮುಖದ ಮೇಲೆ ಸ್ವಲ್ಪ ಹೆಚ್ಚು ಕಡಿಮೆಯಾದ ಮೂಢನಂಬಿಕೆ—ಮೂಢ ಭಕ್ತಿ—ಮೂಢಾಚರಣೆಗಳ ಮುದ್ರೆಯನ್ನು ಒತ್ತಿಕೊಂಡಿರುತ್ತವೆ. ಒಂದು ಬಗೆಯ ತತ್ತ್ವಶಾಸ್ತ್ರವು ಇನ್ನೊಂದು ಕ್ರಮದ ತತ್ತ್ವಶಾವನ್ನು ಖಂಡಿಸುತ್ತದೆ; ಆ ಎರಡನೆಯದಾದರೂ ಮೊದಲನೆಯದಕ್ಕೆ ಅದೇ ಬಗೆಯ ಸಂಭಾವನೆಯನ್ನು ಹಿಂದಿರುಗಿ ನಿರ್ದಾಕ್ಷಿಣ್ಯವಾಗಿ ಸಲ್ಲಿಸುವದಕ್ಕೆ ಸ್ವಲ್ಪವೂ ಹಿಂದೆಗೆಯುವದಿಲ್ಲ. ಇದರಿಂದ, ಪ್ರಕೃತಿಯ ಅಂತರಂಗವು ಮನಸ್ಸಿಗೆ ಎಂದೆಂದಿಗೂ ರಹಸ್ಯಮಯವಾಗಿಯೇ ಉಳಿಯುತ್ತದೆಯೆಂದು ತೋರುತ್ತದೆ. ವಿಶ್ವದ ಆಳವನ್ನು ಕಂಡುಹಿಡಿಯುವದು ಮಾನವ ಬುದ್ಧಿಗೆ ಸಾಧ್ಯವಿಲ್ಲವೆಂದೂ ಕಾಣುತ್ತದೆ.

ಹಾಗಾದರೆ, ವಿಶ್ವಕ್ಕೆ ಆಧಾರವಾದ ಕೇವಲ ತತ್ತ್ವವನ್ನು ತಿಳಿಯುವ ಪ್ರಯತ್ನವು ಹತಾಶವಾದ ಭರವಸೆಯೆಂದು ನಾವು ಎಲ್ಲಾ ಶೋಧವನ್ನೂ ಬಿಟ್ಟು ಬಿಡಬೇಕೆ?

ರೈಲ್ವೇ, ಟೆಲಿಗ್ರಾಫ್, ಮದ್ದು ಗುಂಡುಗಳು ಮೊದಲಾದ ವ್ಯವಹಾರಗಳಲ್ಲಿ ಉಪಯುಕ್ತವಾದ ಶೋಧಗಳನ್ನೂ ನಿರ್ಮಾಣಗಳನ್ನೂ ಮೀಸಲಾಗಿ ಮಾಡುವುದಕ್ಕೆ ಮಾತ್ರವೇ ನಮ್ಮ ಎಲ್ಲಾ ಶಕ್ತಿ—ಸಾಮರ್ಥ್ಯಗಳನ್ನೂ ಉಪಯೋಗಿಸೋಣವೆ? ಅಂಥಾ ಕ್ರೀಡಾ ವಸ್ತುಗಳು ಕೂಡ ಶಾಂತಿಯನ್ನೂ ವಿಶ್ರಾಂತಿಯನ್ನೂ ತರುವದಿಲ್ಲ ಪ್ರತಿಯೊಂದು ಸ್ವತ್ತಿನ ಹೊಸ ಸಂಪಾದನೆಯನ್ನೂ ಬಿಡದೆ ಜೊತೆಗೂಡುವ—ಇನ್ನೂ ಹೆಚ್ಚಾಗಿ ಬೇಕು, ಇನ್ನೂ ಹೆಚ್ಚಾಗಿ ಬೇಕು, ಎಂಬ ದಾಹವೇ ಈ ಭೂಮಿಯ ಅತ್ಯಾಶೆಯ ವ್ಯರ್ಥತೆಯನ್ನು ಕಂಠೋಕ್ತವಾಗಿ ಸಾರಿಹೇಳುತ್ತದೆ.

ಇಂಥಾ ಆಲೋಚನೆಗಳು ನಮ್ಮನ್ನು ಪೂರಾ ನಿರಾಶೆಯಲ್ಲಿ ನಿಲ್ಲಿಸುತ್ತವೆ. ಹತಾಶನಾಗಬೇಡ, ಎದೆಗೆಡಬೇಡ, ಧೈರ್ಯಗೆಡಬೇಡ, ಭಯಪಡಬೇಡ—ಎಂದು ಉಪನಿಷತ್ತುಗಳು ಬೋಧಿಸುತ್ತವೆ. ನೈಜವು ಕಠೋರವೆಂದು ನಾವೆಷ್ಟೇ ಹಟಮಾರಿತನದಿಂದ ಕಣ್ಣು ಮುಚ್ಚಿಕೊಂಡರೂ ಸುಖವಾದ ಏಕಾಂತ ಸಮಯಗಳಲ್ಲಿ "ಈ ಪ್ರಕೃತಿ ವಿಲಾಸವೆಲ್ಲಾ ಎಲ್ಲಿಂದ ಹೊರಹೊಮ್ಮುತ್ತದೆ? ನಾನಿರುವದು ಏಕೆ? ಈ ಭೂ—ಗಗನಗಳ ಅರ್ಥವೇನು? ಈ ಪ್ರಶ್ನೆಗಳು ತಾವಾಗಿಯೇ ನಮ್ಮೊಳಗೆ ಮೊರೆದೇಳುತ್ತವೆ.

ನಮ್ಮಲ್ಲಿ ಆಳವಾಗಿ ಬೇರು ಬಿಟ್ಟುಕೊಂಡಿರುವ ಪ್ರಶ್ನೆಯು—ತತ್ತ್ವಶಾಸ್ತ್ರದಿಂದಾಗಲೀ ವಿಜ್ಞಾನದಿಂದಾಗಲೀ ಪಾರ್ಥಿವ ಪ್ರೇಮದಿಂದಾಗಲೀ ಉತ್ತರವನ್ನು ಪಡೆಯದಿದ್ದರೂ—ಅವಶ್ಯವಾಗಿ ಉತ್ತರವನ್ನು ಕಾಣಲೇ ಬೇಕು. ಅನಿರ್ವಚನೀಯವಾದ ಮಾಯೆಯಲ್ಲಿ (ಇಡೀ ಜಗತ್ತಿನ ಬಿಡಿಸಲಾಗದ ಒಗಟಿನಲ್ಲಿ) ತಾನೇ ಸಿಕ್ಕಿಕೊಂಡಿರುವ ಪ್ರಶ್ನೆಯು, ತಾನು ಬಿಚ್ಚಲು ಬಯಸುವ ಅವರ್ಣನೀಯವಾದ ರಹಸ್ಯದ ಒಂದು ಭಾಗವೇ ಆಗಿದೆ. ಗರುಡ ಪಕ್ಷಿಯು ತಾನು ತೇಲುತ್ತಿರುವ ವಾಯುಮಂಡಲವನ್ನು ಮೀರಿ ಹೇಗೆ ಮೇಲೆ ಹಾರಲಾಗದೋ ಹಾಗೆಯೇ ಆಲೋಚನೆಗಳೂ ಭಾವನೆಗಳೂ ವಿಚಾರಗಳೂ ತಮ್ಮ ಪರಿಮಿತಿಯ ಕ್ಷೇತ್ರವನ್ನು ಮೀರಿ ಸಾಗಲಾರವು. ಪ್ರಶ್ನೆಮಾಡತಕ್ಕವರೂ ಪ್ರಶ್ನೆಮಾಡಲ್ಪಡುವ ವಿಷಯಗಳೂ ಇರುವವರೆಗೂ ಮಾಯೆಯೆಂಬ ಸೆರೆಮನೆಯ ಗೋಡೆಗಳು ಇದ್ದೇ ಇರುತ್ತವೆ; ಅದುವರೆಗೆ ತೋರಿಕೆಗಳನ್ನು ಮೀರಿ ಏರುವದೂ ಸಾಧ್ಯವಿಲ್ಲ. ವಿಶಿಷ್ಟವಾದ ಸಂಸ್ಕಾರ—ಸಾಧನೆಯಿಂದ ಗುರಿಯನ್ನು ಸೇರಬಹುದು; ಹಾಗೆ ಸೇರಿದಾಗ ಪ್ರಶ್ನೆಯೂ ಉತ್ತರವೂ ಒಟ್ಟಾಗಿಯೇ ಕರಗಿಹೋಗಬೇಕು. ಬಂಧನಕ್ಕೆ ಕಾರಣವಾದ ಸಾಮಾನ್ಯ ಸುಖಗಳು, ಸಂತೋಷ ಪರವಶತೆಗಳು ಭಾವಾವೇಶಗಳು, ಪ್ರಣಯ—ಪ್ರೇಮಗಳು, ರಾಗದ್ವೇಷಗಳು,—ಇತ್ಯಾದಿಗಳಿಗೆ ಸಂಬಂಧಪಟ್ಟ ಕ್ರಮಗಳಿಂದ ಪ್ರತ್ಯೇಕ ಸ್ವತಂತ್ರವಾದ ರೀತಿಯಿಂದ ಗುರಿಯನ್ನು ಸಾಧಿಸಲು ವೇದಾಂತವು ಪ್ರಯತ್ನ ಮಾಡುತ್ತದೆ. ವೇದಾಂತದ ವಿಚಾರದಿಂದಪಡೆಯುವ ಅಂಥಾ ದಿವ್ಯ ದರ್ಶನದಲ್ಲಿ ತನ್ನನ್ನು ತಾನು ಕಳೆದುಕೊಂಡವನು

ಮನಸ್ಸಿನ ಅಥವಾ ಬುದ್ಧಿಯ ಅರಿವಿಗೆ ನಿಲುಕದ ಬ್ರಹ್ಮವೇ ಆಗಿರುತ್ತಾನೆ. ಅಂಥಾ ಅನುಭಾವದ ಕ್ಷಣ ದರ್ಶನವನ್ನಾದರೂ ಪಡೆದವನು ಭಯವನ್ನೂ ಚಿಂತೆಯನ್ನೂ ಮೀರಿ ನಿಲ್ಲುತ್ತಾನೆ. ನಚ್ಚೀಲದ ಅಚಲವಾದ ಶಕ್ತಿಯೇ ಈ ಅನುಭಾವದ ಅಥವಾ ಧರ್ಮದ ಅತ್ಯವಶ್ಯಕವಾದ ಫಲಿತಾಂಶವಾಗಿದೆ. ಆದ್ದರಿಂದ ಧರ್ಮವು ಎಷ್ಟು ಅಪೇಕ್ಷಣೀಯವೂ ಆದರಣೀಯವೂ ಆರಾಧನೀಯವೂ ಎಂಬದನ್ನು ಮನಗಾಣ ಬಹುದು.

ಓಂ ! ಓಂ ! ಓಂ !

# IS A PARTICULAR SOCIETY NEEDED ?

## ಒಂದು ವಿಶಿಷ್ಟವಾದ ಸಂಸ್ಥೆಯು ಅಗತ್ಯವೆ ?

### ಸ್ಯಾನ್‌ಫ್ರ್ಯಾನ್‌ಸಿಸ್ಕೋದಲ್ಲಿ "ಗೋಲ್ಡನ್ ಗೇಟ್‌ಹಾಲ್"ನಲ್ಲಿ ತಾ|| 29-1-1903ರಲ್ಲಿ ಮಾಡಿದ ಉಪನ್ಯಾಸ

ಸಭ್ಯಸ್ತ್ರೀ ಪುರುಷರಲ್ಲಿರುವ ನನ್ನ ಆತ್ಮವೆ,

ಇವತ್ತು ರಾಮನು, ಇಷ್ಟು ದಿನ ಈ ಉಪನ್ಯಾಸಗಳನ್ನು ಕೇಳುತ್ತಿದ್ದವರು ಅನೇಕ ಸಲ ಮಾಡಿರುವ ಪ್ರಶ್ನೆಗಳಿಗೆ ಉತ್ತರವನ್ನು ಹೇಳಲು ಇಚ್ಛಿಸುತ್ತಾನೆ.

ಪ್ರಶ್ನೆ: ಸ್ವಾಮಿಗಳು ನಮಗೆ ಉಪದೇಶಮಾಡಿರುವ ತತ್ತ್ವಗಳನ್ನು ವಿಚಾರ ಮಾಡಿ, ಸಾಧನಾನುಭವಗಳಲ್ಲಿ ತಂದುಕೊಂಡು, ಪ್ರಸಾರಮಾಡುವದಕ್ಕಾಗಿ ನಮದೇ ಆಗಿರುವ ಒಂದು ಸಂಸ್ಥೆಯನ್ನು ಪ್ರಾರಂಭಿಸುವದು ಉತ್ತಮವಲ್ಲವೆ ?

ಉತ್ತರ: ಜಾತಿ–ಮತಗಳ ಅಭಿಮಾನವನ್ನೂ ಪಂಥ–ಸಂಸ್ಥೆಗಳ ಅಭಿಮಾನ ವನ್ನೂ ಭಂಗಪಡಿಸುವದೇ ರಾಮನ ಉದ್ದೇಶಗಳಲ್ಲಿ ಒಂದಾಗಿದೆ.

ಒಂದು ಸಂಸ್ಥೆಯನ್ನು ಪ್ರಾರಂಭಿಸುವದರಿಂದಲೋ ಒಂದು ಸಂಘವನ್ನು ರೂಪಿ ಸುವದರಿಂದಲೋ ಸತ್ಯ–ಧರ್ಮಗಳ ಧ್ಯೇಯೋದ್ದೇಶಗಳನ್ನು ಚೆನ್ನಾಗಿ ಸಾಧಿಸ ಬಹುದೆಂಬದೇನೋ ನಿಜವೇ. ಆದರೆ ಹಲವು ಸಂದರ್ಭಗಳಲ್ಲಿ ಅದರಿಂದ ಉಪ ಕಾರವಾಗುವದಕ್ಕಿಂತಲೂ ಅಪಕಾರವೇ–ಹಾನಿಯೇ ಹೆಚ್ಚಾಗಿ ಆಗುತ್ತದೆ.

ಒಂದು ಸಂಘವನ್ನೋ ಸಂಸ್ಥೆಯನ್ನೋ ರಚನೆಮಾಡಿದರೆ, ಅದು ಬೇರೆ ಸಂಘ–ಸಂಸ್ಥೆಗಳಂತೆ ಇರಬಾರದು. ವೇದಾಂತದ ವಿಷಯದಲ್ಲಿಯಾದರೂ ಗುಲಾಮಗಿರಿ ಯನ್ನೂ ದಾಸ್ಯವನ್ನೂ ರಾಮನು ಇಚ್ಛಿಸುವದಿಲ್ಲ. ಬೇರೆ ಸಂಸ್ಥೆಗಳಿಗೆ ಹೋಗಿ ಅವುಗಳ ತತ್ತ್ವಗಳನ್ನು ತಿಳಿಯುವದಕ್ಕಾಗಲೀ ಹೊಸಹೊಸದಾಗಿ ಬಂದು ಹೇಳತಕ್ಕವರ ಬೋಧನೆಗಳನ್ನು ಕೇಳುವದಕ್ಕಾಗಲೀ ನೀವೆಲ್ಲರೂ ಸ್ವತಂತ್ರರಾಗಿದ್ದೀರಿ. ನೀವು ಬೇರೆ ಉಪನ್ಯಾಸಕರಿಂದ ಆಕರ್ಷಿಸಲ್ಪಟ್ಟರೆ, ನೀವು ಸಂಗ್ರಹಿಸಬಹುದಾದ ಅಮೂಲ್ಯ ವಿಷಯಗಳು ಅವರಿವರಿಂದ ದೊರಕುವದಾದರೆ, ಅವರಲ್ಲಿಗೆ ಹೋಗಿರಿ. ಯಾರು ಮಾತನಾಡಿದರೂ ಉಪನ್ಯಾಸಮಾಡಿದರೂ ಅವರು ರಾಮನೇ. ಕೃಷ್ಣನೂ ನಾನೇ; ಮಹಮ್ಮದ್‌ನೂ ನಾನೇ. "ಇದು ನಮ್ಮ ತತ್ತ್ವ, ಇದು ನಮ್ಮ ಸಿದ್ಧಾಂತ,

ಇದೊಂದೇ ಸತ್ಯ." ಎನ್ನುವ ಯಾವ ಪೂರ್ವಗ್ರಹಗಳನ್ನೂ ಮನಸ್ಸಿನಲ್ಲಿ ಹಿಡಿಯದೆ, ಬಿಡುಬಿಚ್ಚಾದ ಮನಸ್ಸಿನಿಂದ ಯಾರು ಹೇಳುವದನ್ನೂ ಕೇಳಿ. ಆದರೆ, ಯಾರ ಮಾತು ನಿಮಗೆ ಒಪ್ಪಿಗೆಯಾದರೂ ಅವರಿಗೆ ನೀವು ದಾಸರಾಗುವದು ರಾಮನಿಗೆ ಒಪ್ಪಿಗೆಯಿಲ್ಲ. ಯಾರಿಂದಲಾದರೂ ಬರುವ ಬೆಳಕನ್ನು ತಡೆಯಬೇಡಿ. ಅದೇ ಸಮಯದಲ್ಲಿ ಈ ಸತ್ಯದಿಂದ ಪ್ರಯೋಜನವನ್ನು ಪಡೆಯಿರಿ.

ಹಿಮಾಲಯದ ಶ್ವೇತಮಸ್ತಕ ಶಿಖರಗಳಷ್ಟು ಪ್ರಾಚೀನವಾದ ಸತ್ಯವೇ ಸಹಸ್ರಾರು ವರ್ಷಗಳಿಂದಲೂ ಪವಿತ್ರ ಗಂಗಾನದಿಯ ದಂಡೆಗಳ ಮೇಲೆ ಮಹರ್ಷಿಗಳಿಂದ ಗಾನಮಾಡಲ್ಪಡುತ್ತಿರುವ ಸತ್ಯವೇ ಎಮರ್‌ಸನ್, ವ್ಹಿಟ್‌ಮನ್ ಮೊದಲಾದವರಿಂದ ಗ್ರಹಿಸಲ್ಪಟ್ಟು ಅವರಿಗೆ ಆನಂದಪರವಶತೆಯನ್ನು ಉಂಟುಮಾಡಿತು. ವರ್ತಮಾನ ಕಾಲದ ಸಂಘಗಳಿಂದಲೂ ಸಂಸ್ಥೆಗಳಿಂದಲೂ ಸಹಸ್ರಾರು ರೂಪಗಳಿಂದ ಪೂರ್ಣತೆಯಿಂದಲೂ ಭಾಗಶಃ ಆಗಿಯೋ ಅದೇ ಸತ್ಯವು ನಿರೂಪಿತವಾಗಿ ಬರುತ್ತಿದೆ. ನಿಮ್ಮ ದೈನಂದಿನ ಪತ್ರಿಕೆಗಳಲ್ಲಿಯೂ ಮಾಸಪತ್ರಿಕೆಗಳಲ್ಲಿಯೂ ವಿಚಾರ ಮಾಡುತ್ತಿರುವ ಸತ್ಯವನ್ನೇ ಸುಂದರವಾಗಿ ನಿರೂಪಿಸಬಹುದು. ಆದರೆ ಸತ್ಯವೇನೂ ಬದಲಾಯಿಸಿಲ್ಲ. ಸಹಸ್ರಾರು ವರ್ಷಗಳ ಹಿಂದೆ ಅದು ಇದ್ದಂತೆಯೇ ಇವತ್ತಿಗೂ ಇದೆ. ಆದರೆ ರಾಮನು ಹೇಳುವದೇನೆಂದರೆ, ಅದೇ ಸತ್ಯವು ಅವನಿಂದ ಅತ್ಯಂತ ಸುಂದರವಾಗಿ ವಿವರಿಸಲ್ಪಡುತ್ತದೆ. ಈ ಪುಸ್ತಕಗಳನ್ನು ನೀವು ಓದಿದರೆ ಸಾಕು, ರಾಮನು ಈ ತತ್ತ್ವಗಳನ್ನು ಭವ್ಯವಾಗಿಯೂ ಆಶ್ಚರ್ಯಕರವಾಗಿಯೂ ಚಿತ್ರಿಸುತ್ತಾನೆ. ಜನರ ಅಭಿರುಚಿಗಳಿಗೆ ಅನುಗುಣವಾಗಿ ರಾಮನು ಅತಿ ಲಾಲನೆಯನ್ನೂ ಹಾಸ್ಯವನ್ನೂ ಮಾಡಿ ರಂಜನೆಯಾಗುವಂತೆ ಮಾತಾಡಲಿಲ್ಲವಾದ್ದರಿಂದ ರಾಮನ ವಾಗ್‌ಝರಿಯು ಕೆಲವರಿಗೆ ರುಚಿಸಲಿಲ್ಲ. ಬೇಕಾದರೆ ರಾಮನು ಸತ್ಯಮಾರ್ಗದಿಂದ ಸರಿದು, ಜನರ ಒಲವಿಗೂ ಖಯಾಲಿಗೂ ಅಭಿರುಚಿಗೂ ಸರಿಯಾಗಿ ಮಾತನಾಡಿ, ಅವರನ್ನು ಹೊಗಳಿ, ವಿನೋದವಾಗಿ ನಗಿಸುತ್ತಿರಲಿ, ರಾಮನ ಉಪನ್ಯಾಸವನ್ನು ಕೇಳುವದಕ್ಕೆ ಸಹಸ್ರಾರು ಜನರು ಸೇರುತ್ತಾರೆ.

ಆದರೆ ರಾಮನು ಜನರ ಮನೋರಂಜನೆ ಮಾಡುವದಕ್ಕಾಗಿ ಸತ್ಯದ ಸುವರ್ಣ ಮೇರು ಶಿಖರದಿಂದ ಎಂದೂ ಇಳಿಯುವದಿಲ್ಲ, ಎಂದೆಂದಿಗೂ ಜಾರುವದಿಲ್ಲ.

ಕ್ರಿಸ್ತನು ಹನ್ನೊಂದು ಜನ ಶಿಷ್ಯರಿಗೆ ಮಾತ್ರ ಬೋಧಿಸಿದನು; ಆದರೆ ಆ ಮಾತುಗಳನ್ನು ವಾಯುಮಂಡಲವು ಸಂಗ್ರಹಿಸಿ, ಆಕಾಶವು ಸಂಕಲನ ಮಾಡಿದ್ದರಿಂದ ಇವತ್ತು ಅದನ್ನು ಲಕ್ಷಾಂತರ ಜನರು ಓದುತ್ತಿದ್ದಾರೆ. ಸತ್ಯವನ್ನು ನುಗ್ಗುಬಡಿದು, ಮಣ್ಣಿನಲ್ಲಿ ಹಾಕಿ ತುಳಿದಾಡಿದರೆ, ಅದು ಪುನಃ ಸಹಸ್ರಮುಖವಾಗಿ ಪುಟಿದು ಮೇಲೇಳುತ್ತದೆ.

ಈ ವಿಚಾರಗಳನ್ನು ಎಷ್ಟೋ ಜನರು ವ್ಯಕ್ತಮಾಡುತ್ತಿರಬಹುದು; ಆದರೆ ಈಗಿನ ಪತ್ರಿಕೆಗಳು ಪ್ರಸಾರಮಾಡುತ್ತಿರಬಹುದಾದ ತತ್ತ್ವವು, ರಾಮನು ಹೇಳುತ್ತಿರುವ

ಕ್ರಮದಲ್ಲಿ ಕೆಲವರಿಗೆ ಪ್ರಯೋಜನವಾಗಬಹುದು. ಹಲವರಿಗೆ ಬೇರೆ ಬಗೆಯಿಂದ ಹೇಳಿದರೆ ಲಾಭವಾಗಬಹುದು. ಆದರೆ ರಾಮನ ಮಾರ್ಗದಿಂದ ಲಕ್ಷಾಂತರ ಜನರು ಉಪಯೋಗಹೊಂದುತ್ತಾರೆಂಬದರಲ್ಲಿ ಸಂದೇಹವಿಲ್ಲ. ನೀವು ಅದರಲ್ಲಿ ಆಸಕ್ತಿಯನ್ನು ವಹಿಸಿದರೆ, ಒಳ್ಳೆಯದಾಯಿತು ; ಅದನ್ನು ಬೆಳೆಸಿ ಪ್ರತಿಯೊಬ್ಬರಿಗೂ ಎಲ್ಲರಿಗೂ ಪ್ರಸಾರಮಾಡಿ, ರಾಮನು ನಿಮ್ಮನ್ನು ಬಿಟ್ಟು ದೂರ ಹೋದ ಮೇಲೆ, ನೀವು ಒಂದು ಸಂಸ್ಥೆಯನ್ನು ನಿರ್ಮಿಸಿ, ಸ್ವಾಮಿಯ ಕಾರ್ಯವನ್ನು ತೆಗೆದುಕೊಂಡರೆ, ಹಾಗೆಯೇ ಎಮರ್‌ಸನ್, ವ್ಹಿಟ್‌ಮನ್, ಸ್ಪೆನ್ಸರ್ ಮತ್ತು ಇತರ ಎಲ್ಲರ ಕಾರ್ಯಗಳನ್ನೂ ತೆಗೆದು ಕೊಳ್ಳಿ. ಯಾವದೊಂದು ಹೆಸರಿಗೂ ಬದ್ಧವಾಗದೆ, ಸತ್ಯವನ್ನು ಸಾಧನೆಯಿಂದ ಬೆಳೆಸಿ ಪ್ರಸಾರಮಾಡಬೇಕೆಂಬ ನಿಜವಾದ ಒಂದೇ ಉದ್ದೇಶದಿಂದ ಸಂಸ್ಥೆಯನ್ನು ರಚನೆ ಮಾಡಿ. ಸಂಸ್ಥೆಯಲ್ಲಿರುವ ಯಾರಾದರೂ ಸದಸ್ಯರು ತಮ್ಮ ಅಭ್ಯಾಸದಲ್ಲಿ ಆಗಲಿ ಗ್ರಂಥಾವಲೋಕನದಲ್ಲಿ ಆಗಲಿ, ಧ್ಯಾನ ಸಾಧನದಲ್ಲಿ ಆಗಲಿ ಮೂಲಭೂತ ತತ್ತ್ವ ಗಳನ್ನೂ ಅಪೂರ್ವವಿಷಯಗಳನ್ನೂ ನೂತನವಿಚಾರಗಳನ್ನೂ ಕಂಡುಕೊಂಡರೆ ಸಂಸ್ಥೆಯಲ್ಲಿ ಅವನ್ನು ವಿಚಾರಮಾಡುವದರಿಂದ ಎಲ್ಲರಿಗೂ ಉಪಯೋಗವಾಗು ತ್ತದೆ. ಆದರೆ ಯಾವದು ಹೊರಬಂದರೂ ನಿಯಮಾಧೀನವಾಗಿ ಯಾಂತ್ರಿಕವಾಗಿ ಬಾರದೇ ಸ್ವಾಭಾವಿಕವಾಗಿ ಹೊರಹೊಮ್ಮಲಿ.

ಇಲ್ಲಿ ಒಂದು ಪೀಪಿ ಇದೆ ; ಇದನ್ನು ಊದಿದಾಗಲೆಲ್ಲಾ ಕೋಕಿಲೆಯ ಧ್ವನಿ ಉಂಟಾಗುತ್ತದೆ. ನಮಗೆ ಬೇಕಾದಾಗಲೆಲ್ಲಾ ಊದಿ ಊದಿ ಕೋಗಿಲೆಯ ಧ್ವನಿಯನು ಹೊರಡಿಸಬಹುದು; ಆದರೆ ಅದು ಸ್ವಾಭಾವಿಕವಾದುದಲ್ಲ. ಕೋಗಿಲೆಯ ಸ್ವಾಭಾವಿಕ ಗಾನವು ದೇಶ–ಕಾಲನಿಮಯಗಳಿಗೆ ಒಳಪಡಲಾರದು. ಅದು ತನಗೆ ಪ್ರೀತಿ ಬಂದಾಗ ಹಾಡಬಹುದೇ ಹೊರತು, ನೀವು ಹೋಗಿ "ಓ ಕೋಗಿಲೆಯೆ ಹಾಡು" ಎಂದು ಪ್ರಾರ್ಥಿಸಿಕೊಂಡರೆ ಹಾಡಲಾರದು. ಮಾತನಾಡುವದಕ್ಕೋ ಉಪ ನ್ಯಾಸಮಾಡುವದಕ್ಕೋ ಒಂದು ಕಾಲವನ್ನು ನಿಯಮಿಸಿದರೆ, ನಿರ್ಬಂಧವನ್ನು ಹೇರಿ ದಂತೆ ಆಗುವದರಿಂದ ಉತ್ಕೃಷ್ಟವಾದ ಫಲವು ಲಭಿಸುವದಿಲ್ಲ.

ಒಂದು ಮನೆಯ ಬಾಡಿಗೆ ಹಣವನ್ನು ಪಡೆಯುವುದಕ್ಕೂ ಅದನ್ನು ಆಗಾಗ ಬೆಳೆಸುವದಕ್ಕೂ ನಿಶ್ಚಿತವಾದ ನಿಯಮಗಳು ಬೇಕು. ಆದರೆ ಎಲ್ಲಾ ನಿಯಮಗಳೂ ಸರ್ವತಂತ್ರ ಸ್ವತಂತ್ರವಾದ ಸತ್ಯವನ್ನು ಬಲಿಹಾಕುತ್ತವೆ. ಇದು ಸತ್ಯದ ಯೇಸುವನು (Jesus of Truth) ಮೂವತ್ತು ಬೆಳ್ಳಿಯ ನಾಣ್ಯಗಳಿಗೆ ಮಾರಿದಂತೆ ಆಗುತ್ತದೆ.

ನೀವು ಸಂಸ್ಥೆಗಳನ್ನು ಕಟ್ಟಬೇಕೆಂದಿದ್ದರೆ, ಈಗಿರುವ ಬೇರೆ ಸಂಸ್ಥೆಗಳನ್ನು ಅನು ಕರಣ ಮಾಡದೆ, ಸ್ವಾಭಾವಿಕ ರೀತಿಯಲ್ಲಿ ಕಟ್ಟಬೇಕೆಂದು ರಾಮನು ಹೇಳುತ್ತಾನೆ ಈ ಬಗೆಯ ಹೊಸ ನಮೂನೆಯ ಸಂಸ್ಥೆಗಳಲ್ಲಿ ಇದೇ ಮೊದಲನೆಯದಾಗಬಹುದು.

ಕ್ರೈಸ್ತರ ಚರ್ಚ್ ತಾನೇ ಒಂದು ಪ್ರಮಾದ, ಅವಿವೇಕ, ತಿಳಿಗೇಡಿತನದ ತಪ್ಪು. ಅದು ಮಹತ್ತಾದ ಒಳಿತನ್ನೂ ಮಾಡಿದೆ ; ಆದರೆ, ಕ್ರೈಸ್ತರ ಬೈಬಲ್‌ನಿಂದ ಹೊರತು ಬೇರೆ ಯಾವ ಮೂಲದಿಂದ ಬಂದರೂ ಸತ್ಯವನ್ನು ಸ್ವೀಕರಿಸಬಾರದೆಂದು ಆ ಮತ ಧರ್ಮಿಗಳ ಸುತ್ತಲೂ ಗೋಡೆಯನ್ನು ಕಟ್ಟಿ, ಬೆಳಕು ಬರದಂತೆ ಅಡ್ಡಿ ಪಡಿಸುವದ ರಿಂದ ಅವರನ್ನು ಕತ್ತಲೆಯಲ್ಲಿ ನೂಕಿ ಅಪಾರವಾದ ಹಾನಿಯನ್ನೂ ಮಾಡಿದೆ. ಬೌದ್ಧರೂ ಮಹಮ್ಮದೀಯರೂ ಬೇರೆ ಅನೇಕ ಮತದವರೂ ಹಾಗೆಯೇ ತಮ್ಮ ತಮ್ಮ ಧರ್ಮದ ಅನುಯಾಯಿಗಳು ಬೇರೆ ಯಾವ ಮೂಲದಿಂದಲೂ ಸತ್ಯದ ಬೆಳ ಕನ್ನು ಪಡೆಯದಂತೆ ಸಂಕುಚಿತವಾದ ಪರಿಮಿತಿಯಲ್ಲಿ ಬಂಧಿಸಿಟ್ಟು ಭಯಂಕರವಾದ ತಪ್ಪನ್ನು ಮಾಡಿದ್ದಾರೆ. ಅವರು ತೋರಿಸುವ ಬಾಗಿಲಿನಿಂದಲೇ ಅಥವಾ ಕಿಟಕಿಯಿಂದಲೇ ಸ್ವರ್ಗಕ್ಕೆ ಹೋಗಬೇಕೇ ಹೊರತು ಬೇರೆ ಮಾರ್ಗದಿಂದ ಹೋಗಕೂಡದು.

ಯಾವ ಬಾಗಿಲಿಂದಲಾದರೂ ಕಿಟಕಿಯಿಂದಲಾದರೂ ಆಕಾಶವನ್ನು ನೋಡು ವದಕ್ಕೆ ನಿಮಗೆ ಹಕ್ಕಿದೆ, ಅಧಿಕಾರವಿದೆ, ಯೋಗ್ಯತೆಯಿದೆ. ಆ ಬಾಗಿಲನ್ನೂ ಕಿಟಕಿ ಯನ್ನೂ ಬಿಟ್ಟು, ಮನೆಯನ್ನೇ ಬಿಟ್ಟು, ಹೊರಗೆ ಬಯಲಿಗೆ ಬಂದು ಆ ಅನಂತಾಕಾಶ ವನ್ನೇ ಪೂರ್ಣವಾಗಿ ನೋಡಿ ಆನಂದ ಪಡುವದಕ್ಕೆ ನಿಮಗೆ ಹಕ್ಕು ಪೂರಾ ಇದೆ. ಆದ್ದರಿಂದ ಬೇರೆ ಸಂಸ್ಥೆಗಳಂತೆ ಅಸ್ವಾಭಾವಿಕವಾದ ಯೋಜನೆಯ ಮೇಲೆ ಸಂಸ್ಥೆ ಯನ್ನು ಕಟ್ಟಬಾರದೆಂದೂ ಆದರೆ ಅತ್ಯಂತ ಸ್ವಾಭಾವಿಕ ಯೋಜನೆಯ ಮೇಲೆ ಸಂಸ್ಥೆ ಯನ್ನು ನಡಿಸಬೇಕೆಂದೂ ರಾಮನು ಇಚ್ಛಿಸುತ್ತಾನೆ. ಸಂಸ್ಥೆಯ ಸದಸ್ಯರು ಯಾವ ದೊಂದು ಕ್ರಮಕ್ಕೂ ನಿಯಮಕ್ಕೂ ಸಂಪ್ರದಾಯಕ್ಕೂ ಪಂಥಕ್ಕೂ ಕಟ್ಟುಬೀಳದೆ ಸ್ವತಂತ್ರರಾಗಿರಬೇಕು; ಬಿಡುಬೀಸ್ವಾಗಿರಬೇಕು. ಕೋಗಿಲೆಯು ಉಲ್ಲಾಸಗೊಂಡಾಗ ತಾನಾಗಿಯೇ ಇಂಪಾಗಿ ಹಾಡುವಂತೆ, ಸದಸ್ಯರು ಸ್ಫೂರ್ತಿ ಹೊಂದಿದಾಗ ಸಂಸ್ಥೆಯಲ್ಲಿ ಉಪನ್ಯಾಸಮಾಡಬೇಕು. ಕೋಗಿಲೆಯನ್ನು ಹಾಡಲು ಒತ್ತಾಯಮಾಡಿದರೆ ಅದರ ಗಾನದ ಮಾಧುರ್ಯವೆಲ್ಲಾ ನಷ್ಟವಾಗುತ್ತದೆ; ಉಪನ್ಯಾಸ, ಲೇಖನ ಮೊದಲಾದ ವಾಙ್ಮಯಗಳ ವಿಷಯವೂ ಹಾಗೆಯೇ. ನೀವು ಕೃತಕವಾದ ಪೀಪಿಯಂತೆ, ಸಿಳ್ಳು ಸೀಟಿಯಂತೆ ಆಗಬೇಡಿ. ಕೋಗಿಲೆಯ ಧ್ವನಿಯನ್ನು ಅನುಕರಣಮಾಡಬೇಡಿ. ನಿಯಮ–ನಿಬಂಧನೆಗಳ ಸೆರೆಗೆ, ಕಟ್ಟಳೆಯ ಕಟ್ಟಿಗೆ ಸಿಕ್ಕಬೇಡಿ. ಸತ್ಯವನ್ನು ಒಂದು ಸಂಪ್ರದಾಯದಿಂದಲೂ ಕ್ರಮದಿಂದಲೂ ಪದ್ಧತಿಯಿಂದಲೂ ಕಟ್ಟಲಾಗುವದಿಲ್ಲ.

ರಾಮನು ತನ್ನ ಅತ್ಯಂತ ಶ್ರೇಷ್ಠ ಕೃತಿಗಳನ್ನು ಶ್ರೋತೃಗಳು ಯಾರೂ ಇಲ್ಲದ ಹಿಮಾಲಯದ ಗೊಂಡಾರಣ್ಯಗಳಲ್ಲಿ ಬರೆದನು. ಅಲ್ಲಿ ರಾಮನು ಅರಣ್ಯದ ಮರ ಗಳಿಗಾಗಿ ಹಾಡಿದನು; ಆ ಅಡವಿಯಲ್ಲಿದ್ದ ಗಾಳಿಯು ಆ ಶಬ್ದವನ್ನು ತೆಗೆದುಕೊಂಡು ದೂರವಾಗಿಯೂ ವಿಶಾಲವಾಗಿಯೂ ಪ್ರತಿಧ್ವನಿಯ ಮೂಲಕ ಪ್ರಸಾರ ಮಾಡಿತು. ಆ ಲೇಖನಗಳು ಪ್ರಚಾರವಾದವು. ಆದರೆ ಯಾವಾಗ ರಾಮನು ಒಂದು ಸಂಸ್ಥೆಯ ಮುಂದೆ

ಮಾತನಾಡಲು ಒತ್ತಾಯ ಮಾಡಲ್ಪಟ್ಟು, ಅದರ ನಿಯಮ ನಿಬಂಧನೆಗಳಿಗೆ ಅನುಗುಣವಾಗಿ ಮಾತನಾಡಿದನೋ ಆಗ ಅವನ ಪ್ರಯತ್ನವು ಅಷ್ಟು ಯಶಸ್ವಿಯಾಗ ಲಿಲ್ಲ. ಅದು ಅಸ್ವಾಭಾವಿಕವಾಗಿದ್ದುದರಿಂದ ಅದರ ಸೌಂದರ್ಯವೇ ಅಳಿದು ಹೋಗಿತ್ತು. ಕೆಲವು ಸಮಯ ಒಬ್ಬನೇ ಶ್ರೋತೃವಿರುವಾಗ ಸತ್ಯವು ಹೆಚ್ಚು ಸುಂದರ ವಾಗಿಯೂ ಭವ್ಯವಾಗಿಯೂ ಹೊರ ಹೊಮ್ಮುತ್ತದೆ. ಶ್ರೋತೃಗಳ ಸಭೆಯು ದೊಡ್ಡದಾಗಿದೆಯೋ ಸಣ್ಣದಾಗಿದೆಯೋ ಎಂದೇನೂ ಸತ್ಯವು ಲಕ್ಷಿಸುವದಿಲ್ಲ. ಯಾವದಾದರೊಂದು ಸದ್ಭಾವನೆಯನ್ನೂ ಸದ್ವಿಚಾರವನ್ನೂ ಬೆಳೆಸಿ ಬಲಗೊಳಿಸಿ; ಕ್ರಮೇಣ ಇಡೀ ಜಗತ್ತೇ ಅದನ್ನು ಕೇಳುತ್ತದೆ.

ಯಾವದಾದರೊಂದು ಸಂಸ್ಥೆಗೆ ನೀವೇಕೆ ಸೇರಬೇಕು? ಸಂಸ್ಥೆಯು ನಿಮಗೆ ಸೇರಿದೆಯೇ ಹೊರತು ನೀವು ಸಂಸ್ಥೆಗೆ ಸೇರಬೇಕಾಗಿಲ್ಲ.

ನೀವು ಇಲ್ಲಿದ್ದೀರಿ. ನೀವು ಪ್ರತಿಯೊಂದು ಸಲವೂ ನಿಮ್ಮ ಶ್ವಾಸಕೋಶ ದೊಳಕ್ಕೆ ಸ್ವಲ್ಪ ಗಾಳಿಯನ್ನೇ ಎಳೆದುಕೊಂಡು ಉಸಿರಾಡುತ್ತೀರಿ; ಆದರೂ ಈ ಪ್ರಪಂಚ ದಲ್ಲಿರುವ ಗಾಳಿಯೆಲ್ಲಾ ನಿಮ್ಮದೇ ಆಗಿದೆ, ಅಲ್ಲವೆ? ಈ ಪ್ರಪಂಚದಲ್ಲಿರುವ ಗಾಳಿ ಗೆಲ್ಲಾ ನೀವೇ ಹಕ್ಕುದಾರರು, ಬಾಧ್ಯಸ್ಥರು. ವಾಯುಮಂಡಲವೆಲ್ಲಾ ನಿಮ್ಮದೇ ಆದ್ದರಿಂದ ಇಡೀ ವಾತಾವರಣವನ್ನೇ ನೀವು ಉಸಿರಾಡಬಹುದು. ಇಂಡಿಯಾ, ಚೈನಾ, ಇಂಗ್ಲೆಂಡ್, ಅಮೆರಿಕಾ ಮೊದಲಾದ ಎಲ್ಲಾ ದೇಶಗಳ ಗಾಳಿಯೂ ರಾಮನದೇ ಆಗಿದೆ; ನೀವೇ ರಾಮ; ನೀವೂ ಸಹ ರಾಮನೇ. ಹಿಮಾಲಯದ ಮಧುರಗಂಧ ವುಳ್ಳ ಗಾಳಿಯು ನಿಮ್ಮದೇ. ವಾಯುವು ಯಾರೊಬ್ಬರ ಸ್ವತ್ತಲ್ಲ. ಹಾಗೆಯೇ ಸತ್ಯವನ್ನು ಅಥವಾ ಜ್ಞಾನವನ್ನು ಇದು ನನ್ನ ಆಸ್ತಿ— ಎಂದು ಹೇಳಿಕೊಳ್ಳುವ ಅಧಿ ಕಾರವು ಯಾರಿಗೂ ಇಲ್ಲ. ಪ್ರಪಂಚದ ಎಲ್ಲಾ ಧರ್ಮಗಳೂ ಎಲ್ಲಾ ಸತ್ಯವೂ ನಿಮ್ಮದೇ ಆಗಿವೆ.

ಈ ದೇಹವು ಇಡೀ ಜಗತ್ತಿನ ಗಾಳಿಯನ್ನು ಉಸಿರಾಡುವಂತೆ ಇಡೀ ಜಗತ್ತಿನ ಸತ್ಯಕ್ಕೆ ಮನಸ್ಸು ಹಕ್ಕುದಾರವಾಗಿದೆ— ಎಂಬ ವಿಚಾರವನ್ನು ಉಸಿರಾಡುವಾಗ ಚಿಂತಿಸಿ, ಇದನ್ನೇ ಶ್ರದ್ಧೆಯಿಂದ ಭಾವಿಸಬೇಕು.

ಎಮರ್‌ಸನ್, ವ್ಹಿಟ್‌ಮನ್ ಮತ್ತು ಇತರರಿಂದಲೂ ಉಪನಿಷತ್ತು ಗೀತಾ ಮೊದಲಾದವುಗಳಿಂದಲೂ ತತ್ತ್ವವನ್ನು ಸಂಗ್ರಹಿಸಿ, ಇಡೀ ಜಗತ್ತಿನ ಸತ್ಯವನ್ನು ಉಸಿರಿನ ಜೊತೆಗೆ ಒಳಗೆಳೆದುಕೊಳ್ಳಿ. ಅವು ನಿಮ್ಮವು; ಅವನ್ನು ನಿಮ್ಮವೆಂದು ಭಾವಿಸಿ.

ನೀವು ಓದಲು ಯಾವದಾದರೊಂದು ಪುಸ್ತಕವನ್ನು ತೆಗೆದುಕೊಂಡಾಗ, ಲೇಖ ಕರು ಯಾರು? ಎಂಬುದನ್ನು ನೋಡಬೇಡಿ. ಬರೆದವರ ಹೆಸರಿಲ್ಲದೆ ಉಪನಿಷತ್ತುಗಳು ಬಂದಿರುವಂತೆ ಗ್ರಂಥಗಳು ಹೊರಬರಲಿ.

ಉಪನಿಷತ್ತುಗಳ ದ್ರಷ್ಟಾರರು ಅಥವಾ ಕರ್ತೃಗಳು ತಮ್ಮ ಅನುಭವದಿಂದ ಕಂಡ ತತ್ತ್ವಗಳನ್ನು ಪ್ರಪಂಚಕ್ಕೆ ನೀಡಿದ್ದಕ್ಕಾಗಿ ಯಾವ ಶ್ಲಾಘನೆಯನ್ನೂ ಖ್ಯಾತಿಯನ್ನೂ ಗೌರವವನ್ನೂ ಬಯಸಲಿಲ್ಲ. ಇಂಡಿಯಾದಲ್ಲಿ ಅತ್ಯಂತ ಶ್ರೇಷ್ಠ ಕೃತಿಗಳಾದ ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ ಮೊದಲಾದ ಷಡ್ದರ್ಶನಗಳು ಕರ್ತೃವಿನ ಹೆಸರನ್ನೇ ಎಲ್ಲಿಯೂ ಪಡೆದಿಲ್ಲ. ಆ ಲೇಖಕರು ಹಕ್ಕುಭದ್ರತೆಯ ಧೋರಣೆಯನ್ನೂ ( Copyrighting spirit ) ಸ್ವಸಂರಕ್ಷಣೆಯ ಅಹಂಕಾರವನ್ನೂ (proprietary self) ಬಿಟ್ಟು, "ನಾನೇ ಸತ್ಯ; ಸತ್ಯವು ನಾನೇ; ನಾನೇ ಆತ್ಮ" ಎಂಬ ತುಂಬಿದ ಭಾವನೆಯಿಂದ, ನಿಷ್ಪಕ್ಷಪಾತವಾಗಿ ಬರೆದಿದ್ದಾರೆ. "ಸದ್ ಬ್ರಹ್ಮವು ನಾನೇ. ಚೈತನ್ಯವು ನಾನೇ. ನಿತ್ಯ ಶುದ್ಧ ಬುದ್ಧ ಮುಕ್ತನು ನಾನೇ; ಸರ್ವಜ್ಞ, ಸರ್ವಶಕ್ತನು ನಾನೇ; ಸಕಲ ಲೋಕಗಳಿಗೂ ಆಧಾರನಾಗಿ, ಸರ್ವಲೋಕಗಳಲ್ಲಿಯೂ ವ್ಯಾಪಿಸಿ, ಸಮಸ್ತವೂ ಆಗಿರುವವನು ನಾನೇ; ಚೈತನ್ಯಸ್ವರೂಪನಾದ ನನ್ನಲ್ಲಿಯೇ ಎಲ್ಲವೂ ತೋರಿಕೊಂಡು, ನನ್ನಲ್ಲಿಯೇ ಪ್ರತಿಷ್ಠಿತವೂ ನನ್ನಿಂದಲೇ ಪೋಷಿತವೂ ಆಗಿ, ನನ್ನಲ್ಲಿಯೇ ಲಯವಾಗುವದರಿಂದ ನಾನೇ ಪರಮಾನಂದ ಸ್ವರೂಪವಾದ ಅದ್ವಿತೀಯ ಬ್ರಹ್ಮವು" ಎಂಬ ಸತ್ಯವನ್ನರಿತು ಭಾವಿಸುವದರಲ್ಲಿಯೇ ನನಗೆ ಸಾಕಷ್ಟು – ಬೇಕಷ್ಟು ಸಮೃದ್ಧಿಯಾದ ಆನಂದವಿದೆ. "ನಾನು ನೂರು ಪುಸ್ತಕಗಳನ್ನು ಬರೆದಿದ್ದೇನೆ; ಅಥವಾ ನನ್ನಲ್ಲಿ (50,00,000) ಐವತ್ತು ಲಕ್ಷ ರೂಪಾಯಿಗಳಿರುವದರಿಂದ ನಾನು ಶ್ರೀಮಂತ" ಹೀಗೆ ಭಾವಿಸುವದರಲ್ಲಿ ಯಾವ ಆನಂದವಿದೆ? "ನಾನು ಪರಿಪೂರ್ಣನು, ಅಮೃತ ಸ್ವರೂಪನು, ನಾನು ಸಚ್ಚಿದಾನಂದಸ್ವರೂಪನಾದ ಆತ್ಮನು. ದಿವ್ಯವೂ ಭವ್ಯವೂ ಆದ ಕೇವಲ ಸತ್ಯಸ್ವರೂಪನು ನಾನು—" ಎಂಬೀ ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುವದರಲ್ಲಿಯೇ ನಿಜವಾದ, ಶಾಶ್ವತವಾದ ಆನಂದವಿದೆ. ಅದೊಂದನ್ನು ಪಡೆದರೆ, ವ್ಯಕ್ತಿಯಾಗಿ ಅನುಭವಿಸುವ ಮಿಕ್ಕ ಎಲ್ಲಾ ಪ್ರಾಪಂಚಿಕ ಸುಖ ಸಂತೋಷಗಳೂ ನೆರಳಿನಂತೆ ಅವಾಸ್ತವವಾಗಿ ತೋರುತ್ತವೆ.

ನೀವು ಉಸಿರಾಡುವಾಗ "ಈ ಪ್ರಪಂಚದಲ್ಲಿರುವ ಸಮಸ್ತವೂ ನನ್ನದೇ" ಎಂದು ಭಾವಿಸಿ, ಅನುಭವದಲ್ಲಿ ತಂದುಕೊಳ್ಳಿ. ನಿಮ್ಮ ಶ್ವಾಸಕೋಶದಲ್ಲಿ ಉಸಿರಾಡುತ್ತಿರುವ ಗಾಳಿಯೂ ನಿಮ್ಮ ಧಮನಿಯಲ್ಲಿ ಹರಿಯುತ್ತಿರುವ ಪ್ರತಿಯೊಂದು ರಕ್ತದ ಕಣವೂ ಹೇಗೆ ನಿಮ್ಮ ದೇಹದಲ್ಲಿರುವ ಪ್ರತಿಯೊಂದು ಕೋಶಕ್ಕೂ ಸೇರಿದ್ದೋ ಹಾಗೆ ಇಡೀ ಜಗತ್ತಿನಲ್ಲಿರುವ ಗಾಳಿಯೂ ಎಲ್ಲಾ ಸೌಂದರ್ಯವೂ ಪ್ರೇಮವೂ ನಿಮಗೇ ಸೇರಿವೆಯೆಂದು ಭಾವಿಸಿರಿ. ಎಲ್ಲಾ ಜ್ಞಾನವೂ ಶಕ್ತಿಯೂ ಸತ್ಯವೂ ಸುಖವೂ ಎಲ್ಲಾ ಸಿದ್ಧಾಂತಗಳೂ ಮತಗಳೂ ಕೃಷ್ಣನೂ ಮಹಮ್ಮದ್‌ನೂ ರಾಮನೂ ಯೇಸುವೂ ಎಲ್ಲಾ ನಿಮಗೇ ಸೇರಿದವರೆಂದು ಭಾವಿಸಿರಿ. ಈ ನಿಮಿಷದಲ್ಲಿ ನಿಮ್ಮ ಮನಸ್ಸಿನಲ್ಲಿ ಏನಿದೆಯೆಂಬುವದರ ಮೇಲೆ ನಿಮ್ಮ ಯೋಗ್ಯತೆಯನ್ನು ನಿರ್ಣಯಿಸಬೇಕು.

ಆಗಾಗ ಕುಸಿದು ಬೀಳುತ್ತಿರುವ ನಿರುತ್ಸಾಹಿಯಾದ ಮನಸ್ಸಿನ ಖಿನ್ನತೆಗೆ ಹೇಗೆ ಚಿಕಿತ್ಸೆಮಾಡಬೇಕು? ಇದೊಂದು ಸಮಸ್ಯೆ. ಇದಕ್ಕೆ ಪರಿಹಾರವು ಬಹಳ ಸುಲಭ ವಾಗಿದೆ. ಇದು ಅಷ್ಟು ಸರಳ—ಸುಲಭವಾಗಿರುವದರಿಂದಲೇ ಜನರು ಅದನ್ನು ಉದಾಸೀನ ಮಾಡುತ್ತಾರೆ.

ಅನುಭವವು ಅದನ್ನು ಸರಿಯೆಂದು ತೋರಿಸಿದೆ. ರಾಮನು ಈಗ ಹೇಳುವ ಸಾಧನದ ಮೇಲೆ ಮಹಾಪುರುಷರೆಲ್ಲಾ ತಿಳಿದೋ ತಿಳಿಯದೆಯೋ ಎಡವಿ ಬಿದ್ದಿದ್ದಾರೆ. ನೀವೇ ಅದನ್ನು ಪರೀಕ್ಷಿಸಿದಾಗ, ಅದರ ಪರಿಣಾಮವನ್ನು ನೋಡಿ ಆಶ್ಚರ್ಯ ಪಡುತ್ತೀರಿ.

ನೀವು ನಿಮ್ಮ ಕೋಣೆಯಲ್ಲಿ ಕುಳಿತುಕೊಂಡಾಗ ನಿಮ್ಮ ಮನಸ್ಸು ನಿರುತ್ಸಾಹಿಯಾದರೆ ಅಥವಾ ನಿಮಗೆ ಆಯಾಸವೆನಿಸಿದರೆ, ಮನಸ್ಸಿನಲ್ಲಿ ಕಾಮವೋ ಕ್ರೋಧವೋ ಅಸೂಯಾ ಭಾವನೆಯೋ ಕೀಳಾದ ಅತ್ಯಾಸಕ್ತಿಯೋ ಹೆಡೆಯೆತ್ತಿದರೆ, ಆರೋಗ್ಯವಾದ ಶರೀರದಲ್ಲಿ ಇಂಥಾ ಭಾವನೆಗಳು ಬರಲಾರವೆಂದೂ ನಿಮ್ಮ ಹೊಟ್ಟೆಯಲ್ಲಿ ಏನೋ ದೋಷವಿರಬೇಕೆಂದೂ ನೆನೆಸಿಕೊಳ್ಳಿ.

ಯಾವನಾದರೊಬ್ಬನು ರಾಮನಲ್ಲಿಗೆ ಬಂದು, ಅಯೋಗ್ಯವಾದ ಮಾತುಗಳನ್ನು ಬಳಸುವದಕ್ಕೆ ತೊಡಗಿದರೆ ಅಥವಾ ಕಠಿಣವಾದ ಧ್ವನಿಯಲ್ಲಿ ಮಾತನಾಡಿದರೆ, ಅವನು ಅವನಲ್ಲಿ ಎಂದೂ ತಪ್ಪು ಕಂಡುಹಿಡಿಯುವದಿಲ್ಲ; ಅಥವಾ ಅವನು ಅದೇ ಕಠಿಣವಾದ ಧ್ವನಿಯಲ್ಲಿ ಅವನಿಗೆ ಉತ್ತರ ಕೊಡುವದಕ್ಕೂ ಹೋಗುವದಿಲ್ಲ. ಯಾರಾದರೂ ನಿಮ್ಮಲ್ಲಿ ಮತ್ಸರವನ್ನೋ ಈರ್ಷ್ಯೆಯನ್ನೋ ಚುಚ್ಚು ಮಾತನ್ನೋ ಕಟುಹಾಸ್ಯವನ್ನೋ ಮನಸ್ತಾಪವನ್ನೋ ಸೂಚಿಸಿದರೆ, ನೀವೂ ಅಸಮಾಧಾನಗೊಂಡು ಎಂದಿಗೂ ಸೇಡಿನಿಂದ ಮಾತಾಡಬಾರದು. ಅದಕ್ಕೆ ಬದಲಾಗಿ, ಅವನ ಮೇಲೆ ಕನಿಕರಗೊಂಡು, ಅವನ ಉದರದಲ್ಲಿರುವ ದೋಷವನ್ನು ಕಳೆಯುವದಕ್ಕೆ ಅವನಿಗೆ ಏನಾದರೂ ಔಷಧವನ್ನು ಕೊಡಿ. ಆ ಬಗೆಯ ದೋಷಗಳು ನಿಮ್ಮ ಮನಸ್ಸಿನಲ್ಲಿಯೇ ಎದ್ದಾಗ, ನೀವೇನು ಮಾಡಬೇಕು? ನೀವೂ ಹೊರಗಿನ ಔಷಧಿಗಳನ್ನು ತೆಗೆದುಕೊಳ್ಳಬೇಕೆ? ಓ, ಇಲ್ಲ. ಹೊರಗಿನ ಔಷಧಿಗಳು ಪ್ರಬಲವಾದ ಪರಿಹಾರವಾಗುವದಿಲ್ಲ; ಅದರ ಪರಿಣಾಮವು ದೀರ್ಘಕಾಲ ಇರುವದಿಲ್ಲ.

ನಿಮ್ಮ ಮನಸ್ಸಿನಲ್ಲಿ ಕುಗ್ಗು, ಕುಸಿತ, ಕೊರತೆ, ಕಳವಳ, ಮಂಕುತನ, ಖೇದ, ಚಿಂತೆ, ನಿರುತ್ಸಾಹ ಇತ್ಯಾದಿ ದುರ್ಬಲ ಭಾವಗಳು ಕಂಡಾಗ, ಮೊದಲು ನಿಮ್ಮ ಆಲಸ್ಯವನ್ನು ಸೋಮಾರಿತನವನ್ನೂ ಹೊಡೆದಟ್ಟಿ, ಕೈಯಲ್ಲಿರಬಹುದಾದ ಪುಸ್ತಕವನ್ನೋ ಪದಾರ್ಥವನ್ನೋ ಕಿತ್ತೆಸೆದು, ಪುಟಿದೆದ್ದು ನಿಂತು, ಹೊರಗೆ ಬಯಲಿನಲ್ಲಿ ಬಿರುಸಾಗಿ ನಡೆದಾಡಿ, ವೇಗವಾಗಿ ಓಡಿಹೋಗಿ. ಇದರಿಂದ ನಿಮ್ಮ ಉಸಿರಾಟವು ಸ್ವಾಭಾವಿಕವಾಗಿ

ನೀಳವೂ ಆಳವೂ ಆಗುತ್ತದೆ. ಅದು ನಿಮಗೆ ಹುರುಪನ್ನೂ ಶಕ್ತಿಯನ್ನೂ ಉಲ್ಲಾಸವನ್ನೂ ಸಂತೋಷವನ್ನೂ ಕೊಡುತ್ತದೆ; ಮನಸ್ಸಿನ ಕುಗ್ಗು ಕುಸಿತಗಳೆಲ್ಲಾ ಮಾಯವಾಗುತ್ತವೆ. ಬಯಲಿನಲ್ಲಿ ಬಿರುಸಾಗಿ ನಡೆಯುವಾಗ ಎದೆಯನ್ನು ಉಬ್ಬಿಸಿ ತಲೆಯನ್ನು ಮೇಲೆತ್ತಿ, ಹೊಕ್ಕಳನ್ನು ಅಥವಾ ಕಿಬ್ಬೊಟ್ಟೆಯನ್ನು ಒಳಗೆ ಎಳೆದು ಕೊಂಡು ಉಡ್ಡಿಯಾನಮಾಡಿ, ಕೈಗಳನ್ನು ನಡಿಗೆಗೆ ಜೋಡಿಯಾಗಿ ಲಯಬದ್ಧ ವಾಗಿ ಬೀಸುತ್ತಾ ಸೆಟೆದು ನಡೆಯಬೇಕು, ಅಥವಾ ಓಡಬೇಕು. ಆಳವಾಗಿಯೂ ನೀಳವಾಗಿಯೂ ಉಸಿರಾಡಬೇಕು. ಜೊತೆಗೆ ಯಾರೂ ಇರದೆ, ಒಂಟಿಯಾಗಿರ ಬೇಕು. ಮುಖದ ಮೇಲೆಯೂ ಮೈಮೇಲೆಯೂ ಬೀಸುವ ತಂಗಾಳಿಯು ಆಶ್ಚರ್ಯ ಕರವಾದ ಪರಿಣಾಮವನ್ನುಂಟುಮಾಡುತ್ತದೆ. ಉಸಿರಾಟದ ಜೊತೆಗೆ ಪವಿತ್ರವಾದ ಓಂಕಾರವನ್ನು ಸೇರಿಸಿಕೊಳ್ಳಬೇಕು. ಮತ್ತು ಮನಸ್ಸಿನ ಕುಸಿತವನ್ನೂ ಕಳವಳ ವನ್ನೂ ಎದುರಿಟ್ಟು ವಿಷಯಮಾಡಿಕೊಂಡು ಸಾಕ್ಷಿಯಾಗಿ ಅರಿಯಬೇಕು. ಮನಸ್ಸೂ ಮನೋಧರ್ಮಗಳೂ ತಾನಲ್ಲವೆಂದು ಸ್ಮರಿಸಬೇಕು. ಎಲ್ಲವನ್ನೂ ಬೆಳಗುವ ಚಿದಾ ಕಾಶವೇ ತಾನೆಂದು ಬಯಲಾಗಬೇಕು. ಬಯಲಿನಲ್ಲಿ ಮೌನವಾಗಬೇಕು, ಶಾಂತಿಯು ತುಂಬಿರಬೇಕು. ಅಲ್ಲಿಂದ ಕಾಯವನ್ನೂ ಕರಣಗಳನ್ನೂ ಕರಣಧರ್ಮಗಳನ್ನೂ ಹೊರಚಾಗಿ ನೋಡಬೇಕು. ಸಾಕ್ಷಿಚೈತನ್ಯದಿಂದ ಅಕ್ಷಯವಾದ ಶಕ್ತಿಯೂ ಉತ್ಸಾಹವೂ ಸಂತತವಾಗಿ ಚಿಮ್ಮುತ್ತವೆ. ಅಪಾರವಾದ ನಿತ್ಯೋತ್ಸಾಹವೇ ತಾನೆಂದು ಭಾವಿಸಬೇಕು. ಆಶ್ಚರ್ಯದಲ್ಲಿ ಆಶ್ಚರ್ಯವೆಂದರೆ ಹೆಚ್ಚು ಜನರು ಇದನ್ನು ತಿಳಿದಿಲ್ಲ.

ಪ್ರಾಣಾಯಾಮದ ಮೇಲೆ ಹಲವರು ಹಲವು ಉಪನ್ಯಾಸಗಳನ್ನು ಕೊಟ್ಟಿರ ಬಹುದು. ಆದರೆ ಆ ವಿಷಯದಲ್ಲಿ ರಾಮನ ಸಾಧನಪದ್ಧತಿಯು ಅತ್ಯಂತ ಸ್ವಾಭಾ ವಿಕವಾದುದು. ನೀವು ಸಮುದ್ರ ತೀರದಲ್ಲಿಯೋ ನದೀ ತೀರದಲ್ಲಿಯೋ ಅರಣ್ಯದ ಲ್ಲಿಯೋ ಬಯಲಿನಲ್ಲಿಯೋ ನಡೆದಾಡುತ್ತಿರಬಹುದು, ವಿಹಾರಮಾಡುತ್ತಿರ ಬಹುದು; ರಾಮನ ಪದ್ಧತಿಯಿಂದ ನಿಮ್ಮ ಪ್ರಾಣವು ಸರಿಯಾದ ಕ್ರಮದಲ್ಲಿ ಆಡ ತೊಡಗುತ್ತದೆ. ಬೇರೊಂದು ರೀತಿಯಿದೆ. ನೀವು ಕೋಣೆಯಿಂದ ಹೊರ ಬಿದ್ದ ಮೇಲೆ, ಬಯಲಿನ ಗಾಳಿಯಲ್ಲಿ, ಬಿರುಸಾಗಿ ನಡೆಯದೆಯೂ ಓಡದೆಯೂ ಇರ ಬಹುದು. ಏಕೆಂದರೆ, ನೀವು ಓಡುವದನ್ನು ನೋಡಿ, ಜನರು ಏನೆನ್ನುವರೋ ಎನ್ನುವ ಭಯ, ಚಿಂತೆ; ಜನರು ನಗಬಹುದೇನೋ ಎನ್ನುವ ಅಭಿಮಾನ, ನಿಮಗೆ. ಪಾಪ, ನಿಮ್ಮ ಹಿತಕ್ಕಿಂತಲೂ ಜನರ ಅಭಿಪ್ರಾಯವೇ ಹೆಚ್ಚೆಂದು ನೀವು ತಿಳಿದಿದ್ದೀರಿ. ನೀವು ಸ್ವತಂತ್ರರಾಗಿಲ್ಲ ; ಜನಾಭಿಪ್ರಾಯಕ್ಕೆ ಗುಲಾಮರಾಗಿದ್ದೀರಿ. ನೀವು ಸುಳ್ಳು- ಪೊಳ್ಳು ಗಾಂಭೀರ್ಯದ ಗುಲಾಮರು. ಅಯ್ಯೋ ! ನಿಮ್ಮ ಈ ಸ್ಥಿತಿಯು ಅತ್ಯಂತ ಶೋಚನೀಯವೂ ದಯನೀಯವೂ ಆಗಿದೆ. ಆಗಲಿ, ನೀವು ಗಂಭೀರವಾಗಿ ಮೆಲ್ಲಗೆ ನಡೆಯುತ್ತಿದ್ದೀರೆಂದು ಇಟ್ಟುಕೊಳ್ಳೋಣ. ಆಗ ಶ್ವಾಸಕೋಶಗಳಲ್ಲಿಯೂ ಹೊಟ್ಟೆ ಯಲ್ಲಿಯೂ ಮೇಲೆ ಮೇಲೆ ಉಸಿರಾಡುತ್ತದೆಯೇ ಹೊರತು ಗಾಳಿಯು ಆಳವಾಗಿ

ಒಳಗೆ ಇಳಿದು ಆಡುವದಿಲ್ಲ. ಇದರಿಂದ ಶ್ವಾಸಕೋಶಗಳ ಒಳಗೆ ಆಳದಲ್ಲಿರುವ ಗಾಳಿಯು ಬಹಳ ಕಾಲದಿಂದ ಚಲಿಸದೆ ಮಲಿತು ಹಳೆಯದಾಗಿಯೇ ಇರುವದರಿಂದ ಅದರಲ್ಲಿರುವ ಕೊಳೆಯು ಹೊರಹೋಗುವದಕ್ಕಾಗಲೀ ಹೊಸ ಗಾಳಿಯ ಪ್ರಾಣ ಶಕ್ತಿಯಿಂದ ( Oxygen ) ದೇಹಕ್ಕೆ ಬೇಕಾದ ಹೊಸ ಪೋಷಣ ದ್ರವ್ಯ ಗಳು ಸಿಕ್ಕುವದಕ್ಕಾಗಲೀ ಅವಕಾಶವಾಗುವದಿಲ್ಲ. ಆದ್ದರಿಂದ ಪ್ರತಿಯೊಬ್ಬರೂ ನಿತ್ಯವೂ ಕೆಲವು ಹೊತ್ತು ಆಳವಾಗಿ ಉಸಿರಾಡಬೇಕು. ನಿತ್ಯವೂ ಕೆಲವು ದೂರ ಸಾಕಷ್ಟು ವೇಗವಾಗಿ ಓಡುವದರಿಂದ ಇದು ಸಾಧನೆಯಾಗುತ್ತದೆ. ಆದರೆ ನೀವು ಓಡುವದನ್ನು ನೋಡಿ ಜನರು ಏನನ್ನುವರೋ ಎಂದು ಚಿಂತಿಸುವ (ಹುಸಿ) ಮರ್ಯಾದೆಯ ಕೂಸುಗಳಿಗೆ ರಾಮನು ಸಲಹೆಮಾಡುವದೇನೆಂದರೆ, ಯಾರೂ ಕಾಣದಿರುವ ಒಂದು ಮೂಲೆಯಲ್ಲಿಯೋ ಕೋಣೆಯಲ್ಲಿಯೋ ಅಡವಿಯಲ್ಲಿಯೋ ನಿಶ್ಚಲವಾಗಿ ನೆಟ್ಟಗೆ ನಿಂತುಕೊಳ್ಳಿ ಅಥವಾ ಕೂತುಕೊಳ್ಳಿ. ಬಾಯಿಯನ್ನು ತೆರೆದು ಶ್ವಾಸ ಕೋಶಗಳೂ ಹೊಟ್ಟೆಯೂ ತುಂಬುವಂತೆ ಉಸಿರನ್ನು ಆಳವಾಗಿ ಎಳೆದುಕೊಳ್ಳಿ. ಮೂಗಿನ ಹೊಳ್ಳೆಗಳಿಂದ ಪೂರ್ತಿಯಾಗಿ ಬಿಟ್ಟು ಬಿಡಿರಿ. ಉಸಿರನ್ನು ಬಿಡುಬಿಡುತ್ತಾ ಹೊಟ್ಟೆಯನ್ನು ಒಳಗೊಳಗೇ ಎಳೆದುಕೊಳ್ಳಿ. ಉಸಿರನ್ನು ಪೂರಾ ಬಿಟ್ಟಾಗ ಹೊಟ್ಟೆ ಯನ್ನು ಪೂರಾ ಒಳಗೆ ಎಳೆದು ಕೊಂಡಿರಬೇಕು. ನಿತ್ಯವೂ ಈ ಸಾಧನೆಯನ್ನು ಬಿರು ಸಾಗಿ ಅಭ್ಯಾಸ ಮಾಡಬೇಕು. ಇದು ನಿಮ್ಮನ್ನು ಎಷ್ಟು ವಿಸ್ಮಯಕರವಾಗಿ ಉಲ್ಲಾಸ ಗೊಳಿಸುತ್ತದೆ, ಸಂತೋಷ ಪಡಿಸುತ್ತದೆ ಎನ್ನುವದನ್ನು ನೀವೇ ಕಾಣುತ್ತೀರಿ.

ರಾಮನು ನಿಮಗೆ ಅತ್ಯಂತ ಸ್ವಾಭಾವಿಕವಾದ ಪ್ರಾಣಾಯಾಮವನ್ನು ತಿಳಿಸು ತ್ತಾನೆ. ಉಸಿರಾಡಿ, ಉಸಿರಾಡಿ, ಉಸಿರಾಡಿ. ಆಳವಾದ ಉಸಿರಾಟದಲ್ಲಿ ವಾಯುವು ಉದರದ ಕೆಳಭಾಗದಲ್ಲಿ ತುಂಬಿಕೊಂಡು ಒಳಗಿರುವ ನಾಡಿಯಲ್ಲಿ ಪೂರಾ ಸಂಚ ರಿಸುತ್ತದೆ. ನೀಳವಾಗಿ ಉಸಿರೆಳೆದುಕೊಂಡು ನೀಳವಾಗಿ ಬಿಡಬೇಕು. ಈ ರೀತಿ ಯಿಂದ ನೀವು ಕೂಡಲೇ ಮನಸ್ಸಿನ ನಿರ್ವಿಣ್ಣತೆಯನ್ನೂ ನಿರುತ್ಸಾಹವನ್ನೂ ಕುಸಿತ ವನ್ನೂ ಕಳೆದುಕೊಳ್ಳುತ್ತೀರಿ. ಮತ್ತು ನಿಮ್ಮ ಶಕ್ತಿಗಳೂ ಉತ್ತಮ ಪ್ರಯೋಜ ನಕ್ಕೆ ವಿನಿಯೋಗವಾಗುತ್ತವೆ. ಹಾಗೆ ಪ್ರಾಣಾಯಾಮ ಮಾಡುವಾಗ "ನಾನು ಇಡೀ ಜಗತ್ತಿನ ಗಾಳಿಯನ್ನು ಉಸಿರಾಡುತ್ತಿದ್ದೇನೆ. ಈ ಪ್ರಪಂಚದ ಎಲ್ಲಾ ಸೌಂದರ್ಯವೂ ಪ್ರೇಮವೂ ನನ್ನವೇ." ಎಂದು ಭಾವಿಸಿ ಮಾನಸಿಕ ಸಾಧನೆ ಮಾಡಬೇಕು. ಆಳವಾದ ಉಸಿರಾಟದೊಡನೆ "ಈ ಪ್ರಪಂಚದಲ್ಲಿರುವ ಎಲ್ಲಾ ಸೌಂದರ್ಯವೂ ಸಂಪತ್ತೂ ನನ್ನದೇ" ಎಂಬ ಭಾವನೆಯನ್ನು ಬೆಳೆಸಬೇಕು. ಇದು ನಿಮ್ಮನ್ನು ಉಲ್ಲಾಸ ಪಡಿಸಿ, ಹರ್ಷಗೊಳಿಸುತ್ತದೆ. ಸುಮ್ಮನೆ ಇದನ್ನು ನೀವು ಪರೀಕ್ಷೆ ಮಾಡಿ ; ಇದು ಬಹಳ ಸುಲಭ; ಆದರೂ ಇದರ ಫಲಿತಾಂಶಗಳು ಅತ್ಯಾಶ್ಚರ್ಯಕರವಾಗಿರುತ್ತವೆ.

ಇನ್ನು ಗಾಳಿಯ ಸಂಚಾರಕ್ಕಾಗಿ ತಿರುಗಾಟದ ವಿಷಯ:

ತಿರುಗಾಟಕ್ಕೆ ಹೋಗುವಾಗ ಯಾರಾದರೊಬ್ಬರು ಜೊತೆಯಲ್ಲಿರಬೇಕೆಂದು ಜನರು ತಿಳಿಯುತ್ತಾರೆ. ಒಬ್ಬ ತಿಳಿಗೇಡಿಯಾದ ಕವಿಯೂ ಹಾಗೆಯೇ ಬರೆದ್ದಾನೆ;

Have a friend with whom to talk,
Somebody with him to walk.
"ಜೊತೆಗಾರನಿರಬೇಕು ನಡೆದಾಡುವಾಗ
ಅತಿಮಿತ್ರನವಬೇಕು ನುಡಿದಾಡಲಾಗ"

ರಾಮನು ಹೇಳುವದೇನೆಂದರೆ ನೀವು ಆಲೋಚನಾಪರರೂ ವಿಚಾರಶೀಲರೂ ಅಲ್ಲವಾದರೆ, ಅಥವಾ ನೀವು ಅಧ್ಯಾತ್ಮ ಸಂಸ್ಕಾರವಿಲ್ಲದವರಾದರೆ, ಏಕಾಂತವಾದ ಚಿಂತನೆಗೆ ಭವ್ಯವೂ ಉದಾತ್ತವೂ ಆದ ವಿಷಯವಿಲ್ಲವಾದರೆ, ಆಗ ಅಡ್ಡಾಡುವದಕ್ಕೆ ಹೋದಾಗ ಯಾರನ್ನಾದರೂ ಜೊತೆಯಲ್ಲಿ ಕರೆದುಕೊಂಡು ಹೋಗಬಹುದು. ನೀವು ತಿಳಿವಳಿಕೆಯಲ್ಲಿ ದುರ್ಬಲರಾಗಿದ್ದರೂ ತಿರುಗಾಡುವಾಗ ಜೊತೆಗೆ ಸ್ನೇಹಪರರಾದ ಉಪಾಧ್ಯಾಯರೊಬ್ಬರನ್ನು ಕರೆದುಕೊಂಡು ಹೋಗುವದು ಜ್ಞಾನಾಭಿವೃದ್ಧಿಗೆ ಲಾಭಕರ ವಾದುದೇ ಸರಿ. ಆದರೆ ಯಾರು ನಿಮ್ಮನ್ನು ಮೇಲೆತ್ತಲಾರರೋ ಗುಣಶೀಲಗಳನ್ನೂ ತಿಳಿವಳಿಕೆಯನ್ನೂ ಉತ್ತಮಗೊಳಿಸಲಾರರೋ ಅಥವಾ ಯಾರು ಹಾಳು ಹರಟೆಗಳಿಂದ ವ್ಯರ್ಥ ಕಾಲಕ್ಷೇಪ ಮಾಡುತ್ತಾರೋ ಅಥವಾ ಯಾರು ದ್ವೇಷಾಸೂಯೆಗಳನ್ನು ಬೆಳೆಸುವ, ಕಾಮವನ್ನು ಕೆರಳಿಸುವ ಮಾತನಾಡಿ ಕೆಳಗಿನ ಭೂಮಿಕೆಗೆ ಇಳಿಸುವರೋ ಅಂಥವರ ಸಹವಾಸದಲ್ಲಿ ಓಡಾಡಲೂ ಎಂದೂ ಹೋಗಬಾರದು. ನೀವು ವಿಚಾರಶೀಲರಾದರೆ, ಜೊತೆಗೆ ಯಾರನ್ನೂ ಕರೆದುಕೊಳ್ಳದೆ ಒಬ್ಬರೇ ಅಡ್ಡಾಡಲು ಹೋಗಬೇಕು. ಆಗ ಓಂಕಾರವನ್ನು ಉಚ್ಚರಿಸತೊಡಗುವದಕ್ಕಿಂತಲೂ ಹೆಚ್ಚು ಶುಭಕರವಾದುದು ಯಾವದೂ ಇಲ್ಲ. ಆ ವಾತಾವರಣವೇ ನಿಮಗೆ ಸ್ಫೂರ್ತಿಯನ್ನು ಕೊಡುತ್ತದೆ. ನಿಮ್ಮಲ್ಲಿ ಆಶ್ಚರ್ಯಕರವೂ ಅದ್ಭುತವೂ ಉನ್ನತವೂ ಆದ ವಿಚಾರಗಳು ಉಕ್ಕೇರುತ್ತವೆ.

ಜನರು ಮಹತ್ತಾದ ಈ ಅನುಭವದ ಉಪಯೋಗವನ್ನು ಹೊಂದುವದಿಲ್ಲ. ಇವೆಲ್ಲಾ ಸಾಮಾನ್ಯವಾದ ಬುದ್ಧಿವಾದವೆಂದು ತೋರುತ್ತದೆ; ಆದರೆ ಇದನ್ನು ಅಭ್ಯಾಸ ಮಾಡಿದಾಗ ಇದರಿಂದ ಉಂಟಾಗುವ ಆಶ್ಚರ್ಯಕರವಾದ ಪರಿಣಾಮವನ್ನು ನೋಡಿ ವಿಸ್ಮಯಪಡುತ್ತೀರಿ.

ಇಲ್ಲಿ ಮಹತ್ತಾಗಿಯೂ ಪ್ರಚಂಡವಾಗಿಯೂ ಇರುವ ಸಮುದ್ರವಿದೆ. ಈ ಮಹತ್ತಾದ ಸಾಗರದಲ್ಲಿ ಒಂದು ಅಲೆಯ ಹಿಂದಿರುವ ಶಕ್ತಿಯೇ ಒಂದು ನೀರಿನ ಹನಿಯ ಹಿಂದೆಯೂ ಇದೆ. ಒಂದು ಅಲೆಯ ಹಿಂದಿರುವ ಶಕ್ತಿಯೇ ಇನ್ನೊಂದು ಅಲೆಯ ಹಿಂದೆಯೂ ಇದೆ. ಪ್ರತಿಯೊಂದು ಅಲೆಗೂ ಸುಳಿಗೂ ಗುಳ್ಳೆಗೂ ಆ ಪ್ರಚಂಡವಾದ ಸಾಗರವೇ ಆತ್ಮವಾಗಿದೆ. ಒಂದೊಂದು ಅಲೆಗೂ ಜಲಬಿಂದುವಿಗೂ ಆ ಮಹಾ ಸಿಂಧುವೇ ಆಧಾರ.

ಹಾಗೆಯೇ, ಸೂರ್ಯ, ಚಂದ್ರ, ನಕ್ಷತ್ರಗಳಿಗೂ ಸಮಸ್ತ ಲೋಕಕ್ಕೂ ಆಧಾರವೂ ಪೋಷಕವೂ ಆಗಿರುವ ಶಕ್ತಿ ಸಾಗರಗಳಿಗೆಲ್ಲಾ ಅದ್ಭುತ ಶಕ್ತಿಸಾಗರವಾದ ವಿಶ್ವಶಕ್ತಿಯೇ ಕ್ಷುದ್ರವಾದ ಜಲಬಿಂದುವಿನಂತಿರುವ—ನಿಮ್ಮಂದೆದು ಕರೆದು ಕೊಳ್ಳುವ—ನಿಮ್ಮ ದೇಹವನ್ನೂ ನಿಮ್ಮನ್ನೂ ಆಧಾರವಾಗಿ ಎತ್ತಿ ಹಿಡಿದು, ಪೋಷಿಸಿ, ಬೆಳೆಸುತ್ತಿದೆಯೆಂದು ಭಾವಿಸಿ.

ಸೂರ್ಯ—ಚಂದ್ರ—ನಕ್ಷತ್ರಗಳಿಗೆಲ್ಲಾ ನಿಮ್ಮಲ್ಲಿರುವ ಚೈತನ್ಯವೇ—ನೀವೇ—ಆಧಾರ ; ನಿಮ್ಮ ದೇಹದಲ್ಲಿರುವ ಪ್ರತಿಯೊಂದು ರಕ್ತ ಕಣಕ್ಕೂ ಅದೇ ಆತ್ಮ; ನಿಮ್ಮ ತಲೆಯ, ಮೈಯ ಪ್ರತಿಯೊಂದು ರೋಮಕ್ಕೂ ಅದು ಆತ್ಮ. ನಿಮ್ಮ ಇಡೀ ದೇಹಕ್ಕೂ ಮನಸ್ಸಿಗೂ ಆ ಚೈತನ್ಯವೇ ಆತ್ಮ. ಅದೇ ನಿಜವಾದ ನೀವು.

ಸತ್ಯವೂ ಜ್ಞಾನವೂ ಅನಂತವೂ ಆಗಿರುವ ಈ ಆತ್ಮನೇ ನೀವು. ಈ ದೇಹಕ್ಕೆ ಮಾತ್ರ ನೀವು ಆಧಾರವೂ ಪೋಷಕವೂ ಆಗಿಲ್ಲ ; ಎಲ್ಲಾ ದೇಶ ಕಾಲಗಳಿಗೂ ನೀವೇ ಆತ್ಮ. ಎಲ್ಲಾ ದೇಶಕಾಲಗಳಿಗೂ ಆಧಾರವಾದ ಆತ್ಮನೇ ನೀವು—ಇದನ್ನು ಚೆನ್ನಾಗಿ ಗಮನಿಸಿ. ಆ ಅನಂತಾತ್ಮನೇ ನೀವು. ಈಗ ನೋಡಿ, ಈ ದೇಹವು ಸತ್ತರೆ, ಆ ಆತ್ಮ ಸಾಯುವದೆ? ಇಲ್ಲ. ದೇಶ ಕಾಲಗಳಿರುವವರೆಗೂ ದೇಹವು ಸತ್ತರೆ, ಆತ್ಮವು ಸಾಯುವದಿಲ್ಲ. ಓ ಆಶ್ಚರ್ಯಗಳಿಗೆಲ್ಲಾ ಆಶ್ಚರ್ಯ ! ಎಲ್ಲಾ ದೇಶಕ್ಕೂ ನಾನೇ ಆತ್ಮ, ಎಲ್ಲಾ ಅನಂತತೆಗೂ ಶಾಶ್ವತತೆಗೂ ನಾನೇ ಆತ್ಮ, ಎಲ್ಲಾ ಕಾಲಕ್ಕೂ ನಾನೇ ಆತ್ಮ.

ಒಂಟಿಯಾಗಿ 'ವಾಕಿಂಗ್' ಹೋಗಿರುವಾಗ, ಸಮುದ್ರ ತೀರದಲ್ಲಿಯಾಗಲೀ ನದೀ ತೀರದಲ್ಲಿಯಾಗಲೀ ಬಯಲಿನಲ್ಲಿಯಾಗಲೀ ಪರ್ವತಾರಣ್ಯಗಳಲ್ಲಿಯಾಗಲೀ ಹಾದಿಯಲ್ಲಾಗಲೀ ಒಬ್ಬರೇ ಅಡ್ಡಾಡುವಾಗ, ಸಂಚರಿಸುವಾಗ ಇದುವರೆಗೆ ನಿರೂಪಿಸಿರುವ ತತ್ತ್ವವನ್ನೇ ಭಾವಿಸಿ, ತೀವ್ರವಾಗಿ ಭಾವಿಸಿ. ನೀವು ಬಿಡುಬಿಚ್ಚಾಗಿ ಓಂಕಾರವನ್ನು ಉಚ್ಚರಿಸದೇ ಇರಬಹುದು. ನೀವು ಆ ಭಾವನೆಯಲ್ಲಿ ದೃಢವಾಗಿ ನಿಂತರೆ, ಭಾವನೆಯ ಮೂಲಕ ಓಂಕಾರವನ್ನು ಉಚ್ಚರಿಸಿದಂತೆಯೇ ಆಗುತ್ತದೆ.

ಹೊರಗೆ (ವೈಖರೀ) ವಾಕ್ಕಿನಿಂದ ಓಂಕಾರವನ್ನು ಉಚ್ಚರಿಸುವದಕ್ಕೆ ನೀವು ಅತಿಯಾದ ಮಹತ್ವವನ್ನು ಕೊಡುವ ಅಗತ್ಯವಿಲ್ಲ. ಆದರೆ ಭಾವನೆಯ ಮೂಲಕ "ಅನಂತವೇ ನಾನು, ಎಲ್ಲಾ ದೇಶವೂ ನಾನೇ, ಎಲ್ಲಾ ದೇಹಗಳಲ್ಲಿಯೂ ತುಂಬಿ ಕೊಂಡಿರುವದು ನಾನೇ; ಮಿತ್ರರ ಅಥವಾ ಶತ್ರುಗಳ ಎಲ್ಲಾ ಕಾಮಗಳೂ ನಾನೇ." ಎಂಬ ಸತ್ಯವನ್ನು ಅನುಭವಕ್ಕೆ ತಂದುಕೊಳ್ಳಿ.

ನಾನು ಅಸೂಯೆಪಡುವಂಥ ಒಬ್ಬ ಮನುಷ್ಯನು ಇಲ್ಲಿದ್ದಾನೆಂದು ಇಟ್ಟು ಕೊಳ್ಳೋಣ. ಇವನನ್ನು ನಾನು ನನ್ನ ವೈರಿಯೆಂದು ತಿಳಿದಿದ್ದೇನೆ. ಇದಿಷ್ಟು

ಸಾಮಾನ್ಯ ಲೌಕಿಕಭಾವನೆಯಾಗಿದೆ. ಈ ಲೌಕಿಕ ದೃಷ್ಟಿಗೆ ನಾನು ಬೇರೆ, ಅವನು ಬೇರೆ ಎಂದು ತೋರುತ್ತದೆ. ನನ್ನ ಹಿತಕ್ಕೆ ಅವನ ಹಿತಾಸಕ್ತಿಗಳು ವಿರೋಧವಾಗಿವೆ. ನನ್ನ ಹಿತವನ್ನು ಕೆಡಿಸಿಯಾದರೂ ಅವನು ತನ್ನ ಹಿತವನ್ನು ಸಾಧಿಸಿಕೊಳ್ಳಬಹುದಾದ್ದರಿಂದ ನಾನು ಅವನನ್ನು ವೈರಿಯೆಂದು ಭಾವಿಸಿದ್ದೇನೆ. ನಾನೂ ನನ್ನ ಹಿತವೂ ನನಗೆ ಮುಖ್ಯ. ಇದೇ ಪ್ರಾಪಂಚಿಕ ದೃಷ್ಟಿ, ವ್ಯಾವಹಾರಿಕ ದೃಷ್ಟಿ. ಇದರಿಂದ ನಿರಂತರ ಘರ್ಷಣೆ, ಹೋರಾಟ, ಭಯ, ಚಿಂತೆ, ದುಃಖ, ಅಶಾಂತಿ. ಈ ದೃಷ್ಟಿಯಲ್ಲಿ ನಿತ್ಯವೂ ಅಶಾಂತಿಯು ಅನಿವಾರ್ಯವಾದರೂ ನಮಗೆ ಅಪ್ರಿಯವೂ ಅನಿಷ್ಟವೂ ಆಗಿದೆ. ವ್ಯಾವಹಾರಿಕವಾದ ಭೇದ ದೃಷ್ಟಿಯ ಫಲವಾದ ಅಶಾಂತಿಯೂ ದುಃಖವೂ ನಮಗೆ ಯಾರಿಗೂ ಬೇಕಾಗಿಲ್ಲ. ಆದರೆ ಇದನ್ನು ತಪ್ಪಿಸಿಕೊಳ್ಳುವದು ಹೇಗೆ? ತಪ್ಪಿಸಿಕೊಳ್ಳುವದೇ ಎಲ್ಲರಿಗೂ ಬೇಕಾದುದು. ಈ ಪ್ರಶ್ನೆಗೆ ಉತ್ತರವಾಗಿಯೇ, ಅಶಾಂತಿಯನ್ನೂ ಅಸುಖವನ್ನೂ ತಪ್ಪಿಸಿಕೊಳ್ಳುವದಕ್ಕೆ ಸಹಾಯಕವಾಗಿಯೇ ವೇದಾಂತ ಶಾಸ್ತ್ರವಿದೆ. ವೇದಾಂತಶಾಸ್ತ್ರವು ನಮಗೆ ಸೂಚಿಸುವ ಅಥವಾ ಜ್ಞಾಪಿಸುವ ವಿವೇಕದೃಷ್ಟಿಗೆ ಪಾರಮಾರ್ಥಿಕ ದೃಷ್ಟಿ, ಎಂದು ಹೆಸರು. ಇದೇ ನೈಜವಾದ ದೃಷ್ಟಿ; ವಸ್ತುಸ್ಥಿತಿಯನ್ನು ಹೇಗಿದೆಯೋ ಹಾಗೆ, ಯಥಾರ್ಥವಾಗಿ ತೋರಿಸುವ ದೃಷ್ಟಿ, ತಿಳಿಸುವ ದೃಷ್ಟಿ. ಇದು ವಸ್ತುಗಳ ಹೃದಯವನ್ನೂ ತಿರುಳನ್ನೂ ಸಾರವನ್ನೂ ಶೋಧಿಸಿ, ಭೇದಿಸಿ ನೋಡುವ ಆಳವಾದ ದೃಷ್ಟಿ. ವ್ಯಾವಹಾರಿಕದೃಷ್ಟಿಯು ಮೇಲೆ ಮೇಲೆ ತೇಲುವ ದೃಷ್ಟಿ. ಮೇಲೆ ಮೇಲೆ ಅಥವಾ ಹೊರ ಹೊರಗೆ ತೋರುವದನ್ನೇ ಅದು ನೈಜವೆಂದು ತಿಳಿಯುವ (ಭ್ರಾಮಕ) ದೃಷ್ಟಿ. ಅದು ಆಳವಾಗಿ, ವಸ್ತುವಿನ ಅಂತರಂಗದಲ್ಲಿ ತೂರಿ ನೋಡಲಾರದು. ಆದರೆ ಪಾರಮಾರ್ಥಿಕ ದೃಷ್ಟಿಯಿಂದ ಆಳವಾಗಿ ವಿಚಾರಮಾಡಿದರೆ, ಚೈತನ್ಯ ಸ್ವರೂಪವಾದ ಒಂದು ಆತ್ಮವೇ ಎಲ್ಲರಲ್ಲಿಯೂ ಸಮವಾಗಿ ತುಂಬಿಕೊಂಡಿದೆ. ಅದೇ ನಾನು, ಅದೇ ನೀವು, ಅದೇ ಅವರು, ಅದೇ ಎಲ್ಲವೂ. ಆದ್ದರಿಂದ ನನ್ನ ವೈರಿಯೆಂದು ನಾನು ತಿಳಿದಿರುವ ವ್ಯಕ್ತಿಯಲ್ಲಿ ಇರುವ ಆತ್ಮವು ನಾನೇ. ಈ ದೇಹೇಂದ್ರಿಯ ಮನಸ್ಸು ಅಹಂಕಾರಗಳು ನಾನೂ ಅಲ್ಲ; ಆ ದೇಹೇಂದ್ರಿಯ—ಮನ—ಅಹಂಕಾರಗಳು ಅವನೂ ಅಲ್ಲ. ನಾನೂ ಅಹಂಕಾರಾದಿ ದೇಹದ ವರೆಗಿನ ವ್ಯಕ್ತಿತ್ವಕ್ಕೆ ಸಾಕ್ಷಿ ; ಅವನೂ ಆ ಅಹಂಕಾರಾದಿ ವ್ಯಕ್ತಿತ್ವಕ್ಕೆ ಸಾಕ್ಷಿ. ಸಾಕ್ಷಿಚೈತನ್ಯದಲ್ಲಿ ಎರಡಿಲ್ಲ. ಎಲ್ಲರಲ್ಲಿರುವ ಸಾಕ್ಷಿಯು ಒಂದೇ. ಸಾಕ್ಷಿಯು ಎಲ್ಲಾ ದೇಶ ಕಾಲ ನಿಮಿತ್ತಗಳಿಗೂ ಅವುಗಳಲ್ಲಿರುವ ಎಣಿಕೆಗೂ ಗಣಿತಕ್ಕೂ ಸರ್ವಕ್ಕೂ ಸಾಕ್ಷಿಯೇ, ಸಮಸ್ತ ಜಗತ್ತೂ ಸಾಕ್ಷಿಯಲ್ಲಿ ಕಲ್ಪಿತವಾಗಿದೆ. ಎಲ್ಲಕ್ಕೂ ಸಾಕ್ಷಿಯೇ ಆಧಾರ. ಎಲ್ಲವೂ ಸಾಕ್ಷಿಗೆ ಹೊರಚ್ಚಾಗಿವೆ. ಸಾಕ್ಷಿಯು ಒಂದೇ ಸತ್ಯ; ಅದರಲ್ಲಿ ಅಥವಾ ಆ ನಮ್ಮಲ್ಲಿ, ಆ ನಮ್ಮ ಚೈತನ್ಯದಲ್ಲಿ ಹಗ್ಗದ ಹಾವಿನಂತೆಯೂ ಕಪ್ಪೆಯ ಚಿಪ್ಪಿನ ಬೆಳ್ಳಿಯಂತೆಯೂ ಮರುಭೂಮಿಯ ಬಿಸಿಲ್ ಕುದುರೆಯಂತೆಯೂ ಪ್ರಪಂಚವೂ ಅದರಲ್ಲಿಯ ಶತ್ರು—ಮಿತ್ರರೂ ತೋರುತ್ತಿದ್ದಾರೆ. ಇದೇ ಪರಮಾರ್ಥ ದೃಷ್ಟಿ; ಪಾರಮಾರ್ಥಿಕ ವಿಚಾರ;

ಸತ್ಯವಾದ ವಿಷಯ. ಇದನ್ನು ವಿಚಾರಮಾಡಿ ಅಭ್ಯಾಸಮಾಡದಿರುವದರಿಂದ ನಮಗೆ ವ್ಯವಹಾರದೃಷ್ಟಿಯೇ ಸತ್ಯವಾಗಿ ನಮ್ಮಲ್ಲಿ ಆಳವಾಗಿ ಬೇರೂರಿಕೊಂಡು ನಮ್ಮ ಅಶಾಂತಿಗೆ ಕಾರಣವಾಗಿದೆ. ಆದ್ದರಿಂದ ಇದನ್ನು ಕಳೆದುಕೊಂಡು ಶಾಂತಿ–ಸುಖಗಳನ್ನು ಪಡೆಯಬೇಕಾದರೆ ವೇದಾಂತವು ಬೋಧಿಸುವ ಪರಮಾರ್ಥ ಸತ್ಯವನ್ನು ನಮ್ಮ ಶುದ್ಧ ಬುದ್ಧಿಯಿಂದ ಗ್ರಹಿಸಿ, ಅರಿತು, ನಿರ್ಮಲವಾದ ಮನಸ್ಸಿನಿಂದ ಭಾವಿಸ ಬೇಕು. ನಮ್ಮ ಅನುಭವವು ಪೂರ್ಣವಾಗಬೇಕಾದರೆ, ಯಥಾರ್ಥ ಜ್ಞಾನವೂ ಅದಕ್ಕೆ ಅನುಗುಣವಾದ ತೀವ್ರಭಾವನೆಯೂ ಅತ್ಯವಶ್ಯವಾಗಿದೆ. ಇವೆರಡೂ ಬಲಗೊಂಡರೆ ಆ ಅನುಭವವು ಆಚರಣೆಯಲ್ಲಿ ವ್ಯಕ್ತವಾಗುತ್ತದೆ.

ವ್ಯವಹಾರದೃಷ್ಟಿಯಿಂದ ನನಗೆ ವೈರಿಯು ತೋರುತ್ತಿದ್ದರೆ, ಪರಮಾರ್ಥ ದೃಷ್ಟಿಯಿಂದ, 'ಆ ವೈರಿಯಲ್ಲಿರುವವನು ನಾನೇ' ಎಂದು ಭಾವಿಸಬೇಕು. ಭಾವಿಸ ಬೇಕೆನ್ನುವಾಗ ಇಲ್ಲದ್ದನ್ನೇನೂ ಭಾವಿಸುವದಲ್ಲ; ವಸ್ತುಸ್ಥಿತಿಯು ನಿಜವಾಗಿಯೂ ಹಾಗಿರುವದರಿಂದಲೇ ಹಾಗೇ ಭಾವಿಸಬೇಕು. ನನ್ನ ಕನಸಿನಲ್ಲಿ ನನಗೆ ಕಾಣುವ ಶತ್ರುವು ನನ್ನ ಕಲ್ಪನೆಯಲ್ಲದೆ ಬೇರೆಯಲ್ಲದಿರುವಂತೆ ನನ್ನ ಎಚ್ಚರದ ಸೃಷ್ಟಿಯೂ ಇದೆ. ನಮಗೆ ಗಾಢನಿದ್ರೆಯಲ್ಲಿ ನಮ್ಮ ಸ್ವರೂಪವಿದ್ದರೂ ನಾನು ಎನ್ನುವದೂ ಇಲ್ಲ, ಈ ಪ್ರಪಂಚವೂ ಇಲ್ಲ, ಶತ್ರು ಮಿತ್ರರೂ ಇಲ್ಲ. ನಮ್ಮ ಗಾಢನಿದ್ರೆ ಯಲ್ಲಿರುವ ನಮ್ಮ 'ಸ್ವರೂಪವೂ ನಮ್ಮ ಶತ್ರುಗಳೆನಿಸಿಕೊಂಡವರ ಗಾಢನಿದ್ರೆ ಯಲ್ಲಿರುವ ಅವರ ಸ್ವರೂಪವೂ ಒಂದೇ ಆಗಿದೆ. ಬೇರೆ ಬೇರೆಯಲ್ಲ. ಅದು ನಿರ್ವಿ ಕಲ್ಪವೂ ನಿಷ್ಪ್ರಪಂಚವೂ ಆಗಿದೆ. ನಿರ್ವಿಕಲ್ಪದಲ್ಲಿ ನಾನು, ನೀನು, ಅವನು ಮೊದ ಲಾದ ವಿಕಲ್ಪಗಳಿಲ್ಲ. ಒಂದು, ಎರಡು ಎನ್ನುವದಿಲ್ಲ; ಯಾವ ಭೇದವೂ ಇಲ್ಲ. ಆದ್ದರಿಂದ ನಾನು ಬೇರೆ, ನೀನು ಬೇರೆ, ಅವನು ಬೇರೆ, ಶತ್ರು ಬೇರೆ, ಮಿತ್ರ ಬೇರೆ ಎನ್ನುವ ತಿಳಿವಳಿಕೆಯು ತಪ್ಪಾದ್ದರಿಂದ ಆ ಭಾವನೆಯನ್ನು ಬಿಟ್ಟುಬಿಡಬೇಕು. ಅಸೂಯಾಪರವಾದ ಈ ಸಣ್ಣ ನಾನು, ಈ ಸುಳ್ಳು ನಾನು, ನಿಜವಾದ ನಾನಲ್ಲವೆಂದು ಅರಿಯಬೇಕು; ಗುರುತಿಸಬೇಕು.

ನೀವು ಒಂದು ವ್ಯಕ್ತಿಯನ್ನು ಪ್ರೀತಿಸುತ್ತಿರಬಹುದು; ಅದೇ ವ್ಯಕ್ತಿಯನ್ನು ಬೇರೊಬ್ಬರು ಪ್ರೀತಿಸುತ್ತಿದ್ದಾರೆಂದು ನಿಮಗೆ ತಿಳಿಯುತ್ತದೆ. ಆಗ ಅಸೂಯೆ ಉಂಟಾಗುತ್ತದೆ. ಅದನ್ನು ಪ್ರೋತ್ಸಾಹಿಸಬೇಡಿ. ಏಕೆಂದರೆ ನಿಮ್ಮ ಪ್ರೇಮಕ್ಕೆ ಪಾತ್ರವಾಗಿರುವ ವ್ಯಕ್ತಿಯೂ ನೀವೆ; ನಿಮ್ಮ ಹೃದಯಾರಾಧ್ಯ ಮೂರ್ತಿಯನ್ನು ಪ್ರೀತಿಸುವ ಬೇರೊಬ್ಬನೆಂದು ತೋರುವ ವ್ಯಕ್ತಿಯೂ ನೀವೇ; ಅವನ ಸುಖವೇ ನಿಮ್ಮ ಸುಖ— ಈ ಸತ್ಯವನ್ನು ಚೆನ್ನಾಗಿ ಮನದಂದುಕೊಳ್ಳಿರಿ. ಸತ್ಯವನ್ನು ಅರಿತು, ಅನುಭವ ಪಡೆಯಬೇಕಾದರೆ ನಿಮ್ಮನ್ನೇ ಸತ್ಯವೆಂದು ಅನುಭವದಿಂದ ಅರಿಯಬೇಕು. ಭೇದಭಾವ ವನ್ನು ಮೀರಿ ನಿಲ್ಲಿ. ಸಣ್ಣದು, ದೊಡ್ಡದು ಎಂಬ ಭೇದ ಭಾವವನ್ನೂ ಕಳೆದುಕೊಳ್ಳಿ.

ವೇದಾಂತ ದೃಷ್ಟಿಯಿಂದ ವಿಚಾರಮಾಡಿದರೆ ಸಣ್ಣದು, ದೊಡ್ಡದು ಎಂಬ ತೋರಿಕೆಯ ಭೇದವು ನಿಜವಲ್ಲವೆಂದು ನಿಶ್ಚಯಮಾಡಿರಿ. "ಇವತ್ತು ದೊಡ್ಡವನು ಎನ್ನಿಸಿಕೊಂಡವನು ನಾನೇ; ಇವತ್ತು ದೊಡ್ಡವನಲ್ಲ ಎಂದು ತೋರುತ್ತಿರುವವನೂ ನಾನೇ." ಎಂದು ಚಿಂತಿಸಿ. ನಿಮಗಿಂತಲೂ ದೊಡ್ಡವರು ಯಾರಾದರೂ ಇರ ಬಹುದು; ನಿಮಗಿಂತಲೂ ಹೆಚ್ಚಿನ ಐಶ್ವರ್ಯವನ್ನು ಸಂಪಾದಿಸುವ ಶಕ್ತಿಯು ಅವರಿ ಗಿರಬಹುದು; ನಿಮಗಿಂತಲೂ ಹೆಚ್ಚಿನ ಗೌರವವನ್ನು ಅವರು ಪಡೆಯುತ್ತಿರಬಹುದು; ಅವರ ವಿಷಯದಲ್ಲಿ ನಿಮಗೆ ಅಸೂಯೆಯು ತೋರಬಹುದು. ಆಗ ವೇದಾಂತ ದೃಷ್ಟಿಯಿಂದ ವಿಚಾರಮಾಡಿ. ನಿಮ್ಮ ಅಸೂಯೆಗೆ ಗುರಿಯಾಗಿರುವದು ಒಂದು ದೇಹ, ಒಂದು ವ್ಯಕ್ತಿ. ಆದರೆ ಆ ಶ್ರೇಷ್ಠ ಪುರುಷನ ದೇಹವೂ ವ್ಯಕ್ತಿತ್ವವೂ ಅವನ ಆತ್ಮವಲ್ಲ. ಅವನ ಆತ್ಮವೂ ನಾನೂ ಒಂದೇ; ಅವನ ಆತ್ಮವೂ ನೀವೂ ಒಂದೇ. ಈ ಸತ್ಯವನ್ನು ಆಳವಾಗಿಯೂ ತೀವ್ರವಾಗಿಯೂ ಭಾವಿಸಿ ಈ ಅಸೂಯಾ ಭಾವವನ್ನು ಮೆಟ್ಟಿ ನಿಲ್ಲಿ.

ಪ್ರಕೃತಿಯಲ್ಲಿ ಅತ್ಯುತ್ಕೃಷ್ಟವಾಗಿರುವದರೊಡನೆ ಒಂದಾಗಿ ನಿಮ್ಮ ಹೃದಯವು ಹೆಚ್ಚು ಮಿಡಿದಷ್ಟೂ ಇಡೀ ಪ್ರಕೃತಿಯ ಆದ್ಯಂತದಲ್ಲಿಯೂ ನೀವೇ ಉಸಿರಾಡುತ್ತಿದ್ದೀ ರೆಂದು ನಿಮಗೆ ಹೆಚ್ಚಿನ ಅನುಭವವು ಉಂಟಾಗುತ್ತದೆ. ವೃಕ್ಷಗಳ ವೃದ್ಧಿಯಲ್ಲಿಯೂ ಕ್ಷಯದಲ್ಲಿಯೂ ನೀವೇ ಉಸಿರಾಡುತ್ತಿದ್ದೀರಿ. ಸೂರ್ಯನ ಉದಯಾಸ್ತಗಳೇ ನಿಮ್ಮ ಶ್ವಾಸೋಚ್ಛ್ವಾಸವು.

ಜನನ–ಮರಣಗಳು ನಿಮ್ಮ ಉಸಿರಾಟ; ಪ್ರಕೃತಿಯಿಂದ ನೀವು ಬೇರೆಯೆಂದು ತಿಳಿದಷ್ಟೂ ಭಾವಿಸಿದಷ್ಟೂ ನೀವು ನಷ್ಟರಾಗುತ್ತೀರಿ. ಇಡೀ ಜಗತ್ತು ನಿಮ್ಮ ಉಸಿ ರಾಟವೆಂದು ನೀವು ಹೆಚ್ಚಾಗಿ ಭಾವಿಸಿದಷ್ಟೂ ಜನನ–ಮರಣಗಳ ಪ್ರಕೃತಿ ವಿಲಾಸದ ಮೂಲಕ ಉಸಿರಾಡುತ್ತಿರುವ ಅನಂತ ಶಕ್ತಿಯೇ ನೀವಾಗುತ್ತೀರಿ. ನೀವು ಎಲ್ಲಾ ಕ್ಷುದ್ರವಾದ ಚಿಂತಾತಂಕಗಳನ್ನು ಮೀರಿ ನಿಲ್ಲುತ್ತೀರಿ. ಇದೇ ಅಂತರಂಗದ ಸೌಂದರ್ಯ. ತಮ್ಮೊಳಗೆ ಯಾರು ಸುಂದರವಾಗುತ್ತಾರೋ ಅವರ ಹೊರಗಿನ ರೂಪವೂ ಹೇಗಾ ದರೂ ಇರಲಿ, ಅವರು ಇಡೀ ಜಗತ್ತಿನ ಆಕರ್ಷಣೆಯ ಕೇಂದ್ರವಾಗುತ್ತಾರೆ.

ಸಾಕ್ರೇತಿಸನು ಬಹಳ ಕುರೂಪಿಯಾಗಿದ್ದನು; ಆದರೆ ಅವನು ಅಂತರಂಗದಲ್ಲಿ ತತ್ತ್ವಜ್ಞಾನದಿಂದಲೂ ಸದ್ಗುಣಗಳಿಂದಲೂ ಉನ್ನತಭಾವಗಳಿಂದಲೂ ಪರಮ ಸುಂದರನಾಗಿದ್ದುದರಿಂದ ಲೋಕವನ್ನೇ ಆಕರ್ಷಿಸುತ್ತಿದ್ದನು.

ಒಳಗಿನ ಸೌಂದರ್ಯವಿದ್ದರೆ ಇಡೀ ಜಗತ್ತು ಎಷ್ಟು ಸರಳವೂ ಸರಾಗವೂ ಸುಲ ಲಿತವೂ ಸುಗಮವೂ ಆಗುತ್ತದೆ! ನೀವು ಮುಕ್ತರೆಂದೂ ಸ್ವತಂತ್ರರೆಂದೂ ಭಾವಿಸಿದಾಗ

ಪ್ರಪಂಚದಲ್ಲಿ ಅಸಮತೆ—ವಿಷಮತೆಗಳಾಗಲೀ ಒರಟುತನವಾಗಲೀ ಕಾಠಿಣ್ಯವಾಗಲೀ ತೋರುವದಿಲ್ಲ.

ಸೂರ್ಯನು ಕೆಳಗಿಳಿದರೂ ಚಂದ್ರನು ಕಳಚಿ ಧೂಳಿನಲ್ಲಿ ಒರಗಿದರೂ ಲೋಕ ಲೋಕಗಳೇ ಸೌರವ್ಯೂಹಗಳೇ ಬ್ರಹ್ಮಾಂಡ ತಂಡಗಳೇ ಆತ್ಯಂತಿಕ ನಾಶದಲ್ಲಿ ನೂಕಲ್ಪಟ್ಟರೂ ಸತ್ಯಸ್ವರೂಪ ಆತ್ಮನಾದ ನಿಮಗೇನು ನಷ್ಟ ! ಅದನ್ನೇ ಭಾವಿಸಿರಿ. ಇದರಿಂದ ಯಾವದೂ ನಿಮಗೆ ಹಾನಿಯನ್ನುಂಟು ಮಾಡಲಾರದು. ಸೂರ್ಯ—ಚಂದ್ರ—ನಕ್ಷತ್ರಗಳು ನಾಶವಾದರೂ ನೀವೇನೂ ನಾಶವಾಗುವದಿಲ್ಲ. ಎಲ್ಲಾ ದೇಶಕಾಲಗಳ ಆತ್ಮವೇ ನೀವು. ನೀವು ಅವಿನಾಶಿ ಎಂದು ಭಾವಿಸಿದರೆ ಕಲ್ಲು ಬಂಡೆಯಂತೆ ಭದ್ರವಾಗಿ ನಿಲ್ಲುತ್ತೀರಿ. ಅದನ್ನು ಅನುಭವದಿಂದ ಅರಿಯಿರಿ. ನೀವು ಉಸಿರಾಡಬೇಕಾದ ರೀತಿಯೇ ಇದು. ಶ್ವಾಸಕೋಶಗಳಿಂದಲೂ ಮನಸ್ಸಿನಿಂದಲೂ ಈ ಬಗೆಯಿಂದ ಉಸಿರಾಡಿ. ಮನಸ್ಸಿನ ಮೂಲಕ ಪೂರ್ಣ ಜಗತ್ತಿನ ಆತ್ಮನನ್ನೇ ಉಸಿರಾಗಿ ಎಳೆದುಕೊಳ್ಳಿ, ಉಸಿರಾಡಿ. ಇಡೀ ವಿಶ್ವವನ್ನೇ ವಿಶ್ವದ ಸತ್ತ್ವವನ್ನೇ ಉಸಿರಾಗಿ ತುಂಬಿಕೊಂಡು ಉಸಿರಾಡಿ. ಇದರಿಂದ ನೀವು ಪ್ರಕೃತಿಯೊಡನೆ ಸಮಶ್ರುತಿಯನ್ನೂ ಸಮರಸತೆಯನ್ನೂ ಸಂಗಾನವನ್ನೂ ಪಡೆಯುತ್ತೀರಿ. ಸಮಗ್ರ ವಿಶ್ವದೊಡನೆ ನಿಮ್ಮ ಜೀವನವು ಸಮರಸವಾಗುತ್ತದೆ ; ಮಧುರ ಸ್ವರಮೇಳವನ್ನು ಪಡೆಯುತ್ತದೆ.

ಇಂಪಾದ ಸ್ವರಗಾನದ ಸಂಚಲನೆ ಯಾವದು ? ಮೆದುಳಿನ ಚಲನೆಯು, ಸ್ಪಂದನವು ಮಧುರ ಗಾನವಾಗಲಿ. ಸುಸಂಗತವಾದ ಸ್ವರಮೇಳದ ಸಂಚಲನೆಯೇ ಗ್ರಹಗೋಳಗಳ ಮಧುರಗಾನ. ವಿಶ್ವದ ಎಲ್ಲಾ ಗ್ರಹಗೋಳಗಳೂ ಸುಸ್ವರ ಮೇಳದ ಸಂಚಲನೆಯಲ್ಲಿ ಉಸಿರಾಡುತ್ತಿವೆ.

ಈ ಸುಸ್ವರ ಮೇಳದ ಸಂಚಲನೆಯನ್ನು ಸಾಧಿಸಿರಿ. ಸುಸ್ವರ ಮೇಳದಲ್ಲಿ ದನಿಗೂಡಿಸಿ; ಗ್ರಹಗೋಳಗಳ ಗಾನದಲ್ಲಿ ಸ್ವರಗೂಡಿಸಿ—ಆಗ ನೀವು ನಿಮ್ಮೊಳಗೆ ಸುಂದರವಾಗುತ್ತೀರಿ.

ಮಹಾ ಸಾಗರದಲ್ಲಿ ಮೀನುಗಳಿವೆ. ಸಾಗರದ ನೀರು ಮೀನುಗಳ ಜಲಶ್ವಾಸಾಂಗಗಳನ್ನು ತುಂಬಿ ಕೊಳ್ಳುತ್ತದೆ; ಒಳ ಹೊರಗೆ ಹರಿಯುತ್ತದೆ. ಹೀಗೆ ಮೀನುಗಳ ಹೊಟ್ಟೆ ಒಳಗೂ ಹೊರಗೂ ಸಾಗರ ಜಲಕ್ಕೆ ಪೂರ್ಣಚಲನೆ ಇದೆ. ಸಾಗರದ ಎಲ್ಲಾ ಜಲವೂ ಮೀನುಗಳದೇ.

ಹೀಗೆ, 'ಇಡೀ ಜಗತ್ತೇ ನನ್ನದು' ಎಂದು ಭಾವಿಸಿ. ನಿಮ್ಮ ಹುರುಪು ಹುಮ್ಮಸ್ಸುಗಳ ಮೇಲೂ ಉತ್ಸಾಹದ ಮೇಲೂ ಸಂತೋಷ ವೃತ್ತಿಯ ಮೇಲೂ ತಣ್ಣೀರೆರಚುವದು ಯಾವದು ? ಇದೇ ಆಧ್ಯಾತ್ಮಿಕ ಅಪಾರ—ದರ್ಶಕತೆ; ಆಧ್ಯಾತ್ಮಿಕ

ಮಾಂದ್ಯ, ಮಬ್ಬು, ಮಸುಕು, ಅಸ್ಪಷ್ಟತೆ, ಆಧ್ಯಾತ್ಮಿಕ ಅಪಾರ ದೀಪ್ತಿ. ತನ್ನಲ್ಲಿ ಆಧ್ಯಾತ್ಮಿಕ ಬೆಳಕನ್ನು, ಚೈತನ್ಯದ ಬೆಳಕನ್ನು ಹಾಯಗೊಡದಿರುವದು. ಚೈತನ್ಯದ ಪ್ರಕಾಶವನ್ನು ಪ್ರತಿಫಲಿಸದಿರುವದೇ 'Spiritual Opacity' ಪ್ರಜ್ಞಾ ಮಾಂದ್ಯ. ಇದು ನಿಮ್ಮ ಮನಸ್ಸಿನ ಮೇಲೆ ಕತ್ತಲೆಯನ್ನು ಕವಿಸುವದರಿಂದ ಇವನ್ನು ಕಳೆದುಕೊಳ್ಳಬೇಕು. ನಿಮ್ಮ ಹೃದಯವು ಚೈತನ್ಯದ ಬೆಳಕಿಗೆ ಪಾರದರ್ಶಕವಾಗ ಬೇಕು.

ಈ ಅಪಾರ ದರ್ಶಕತೆ ಅಥವಾ ನಿಷ್ಪಾರ ದರ್ಶಕತೆ ಎಂದರೆ ಏನು? "ಇದು ನನ್ನದು; ಅದು ನನಗೆ ಸೇರಿದ್ದು" ಎಂಬ ಸ್ವಾಮಿತ್ವವನ್ನು ಸಾಧಿಸುವ ಕ್ಷುದ್ರವಾದ ಅಹಂಕಾರವೇ ಅದು. ಇದನ್ನೇ ಬಿಟ್ಟು ಬಿಡಬೇಕು. ನೀವು ಬಯಲು ಗಾಳಿಯಲ್ಲಿ ಉಸಿರಾಡುವಾಗ ಸಮಗ್ರ ಜಗತ್ತಿನೊಡನೆ ಸುಸ್ವರಮೇಳವನ್ನು ಪಡೆದಿದ್ದೀರೆಂದು ಭಾವಿಸಿ. ಆಗ ನೀವು ಪಾರದರ್ಶಕವಾಗುತ್ತೀರಿ; ಸಕಲವೂ ನಿಮ್ಮಲ್ಲಿಗೇ ಆಕರ್ಷಿತ ವಾಗಿ ಬರುತ್ತವೆ.

ಒಬ್ಬ ರಾಜನಲ್ಲಿಗೆ ಇಬ್ಬರು ಚಿತ್ರಗಾರರು ಬಂದು ಅವನ ಅರಮನೆಯ ಗೋಡೆ ಗಳನ್ನು ಚಿತ್ರಿಸಿ ಅಲಂಕರಿಸುವ ಉದ್ಯೋಗದಲ್ಲಿ ತಮ್ಮನ್ನು ನಿಯಮಿಸಿಕೊಳ್ಳಬೇಕೆಂದು ಕೇಳಿಕೊಂಡರು. ಪರಸ್ಪರ ವಿರೋಧಿಗಳಾಗಿದ್ದ ಆ ಬಣ್ಣಗಾರರಲ್ಲಿ ಪ್ರತಿಯೊಬ್ಬನೂ ತನಗೊಬ್ಬನಿಗೇ ಆ ಇಡೀ ಕಾರ್ಯವನ್ನು ಗುತ್ತಿಗೆ ಕೊಡಬೇಕೆಂದು ಪ್ರಾರ್ಥಿಸಿದನು. ಅವರನ್ನು ಕೆಲಸದಲ್ಲಿ ತೊಡಗಿಸುವದಕ್ಕೆ ಮುಂಚೆ ಅವರ ಕಲಾಕೌಶಲವನ್ನು ಪರೀಕ್ಷಿಸ ಬೇಕೆಂದು ರಾಜನು ಯೋಚಿಸಿದನು. ಅದೇ ಪ್ರಕಾರವಾಗಿ, ಒಂದಕ್ಕೊಂದು ಎದು ರಾಗಿರುವ ಎರಡು ಗೋಡೆಗಳ ಮೇಲೆ ಬೇರೆ ಬೇರೆ ಚಿತ್ರಿಸಬೇಕೆಂದು ರಾಜನು ಅವರನ್ನು ನಿಯಮಿಸಿದನು.

ಆ ಕಲಾವಿದರು ಒಬ್ಬರ ಕೆಲಸವನ್ನು ಒಬ್ಬರು ನೋಡದೆ, ಸ್ವತಂತ್ರವಾಗಿ ಚಿತ್ರಿಸು ವದಕ್ಕಾಗಿ ಗೋಡೆಗಳ ಎದುರಿಗೆ ಮರೆಯಾಗಿ ಪರದೆಗಳನ್ನು ಇಟ್ಟರು. ಅವರು ಒಂದು ತಿಂಗಳು ಕೆಲಸ ಮಾಡಿದ ಮೇಲೆ, ಅವರಲ್ಲಿ ಒಬ್ಬನು ರಾಜನಲ್ಲಿಗೆ ಬಂದು, ತನ್ನ ಕಾರ್ಯವು ಮುಗಿದಿದೆಯೆಂದೂ ರಾಜನು ಬಂದು ತನ್ನ ಚಿತ್ರವನ್ನು ನೋಡಬಹು ದೆಂದೂ ಅವನನ್ನು ಬೇಡಿದನು. ಆ ರಾಜನು ಇನ್ನೊಬ್ಬ ಚಿತ್ರಕಾರನನ್ನು ಕುರಿತು, ಅವನ ಕೆಲಸವು ಮುಗಿಯುವುದಕ್ಕೆ ಇನ್ನು ಎಷ್ಟು ಕಾಲ ಬೇಕಾಗಬಹುದೆಂದು ಕೇಳಿದನು. ಅದಕ್ಕೆ, ತನ್ನ ಕೆಲಸವೂ ಮುಗಿದಿದೆಯೆಂದು ಆ ಚಿತ್ರಕಾರನು ಹೇಳಿದನು. ನಿಯ ಮಿತವಾದ ಒಂದು ದಿನ ರಾಜನು ತನ್ನ ಪರಿವಾರ ಮತ್ತು ಪ್ರೇಕ್ಷಕರ ಸಹಿತವಾಗಿ, ಯಾವ ಚಿತ್ರಕಾರನ ಕೆಲಸವು ಇನ್ನೊಬ್ಬನ ಕೆಲಸಕ್ಕಿಂತಲೂ ಉತ್ತಮವಾಗಿದೆಯೆಂಬ ದನ್ನು ನೋಡಬೇಕೆಂದು ಬಂದನು. ಮೊದಲನೆಯ ಕಲಾವಿದನ ಗೋಡೆಗೆ

ಮರೆಯಾಗಿದ್ದ ತೆರೆಯನ್ನು ತೆರೆದು ನೋಡಿದರು. ರಾಜನೂ ಜೊತೆಗಿದ್ದವರೆಲ್ಲರೂ ಆ ಚಿತ್ರವು ದಿವ್ಯವಾಗಿಯೂ ಭವ್ಯವಾಗಿಯೂ ಇದೆಯೆಂದು ಒಮ್ಮತದಿಂದ ಮೆಚ್ಚಿ ಹೊಗಳಿದರು. ಎಲ್ಲರೂ ಅದನ್ನು ನೋಡಿ ನೋಡಿ ಸಂತೋಷ ಪರವಶರಾದರು. ಆ ಚಿತ್ರವು ಘನವಾಗಿದೆಯೆಂದೂ ಮಹೋನ್ನತವಾಗಿದೆಯೆಂದೂ ಭಾವಿಸಿ ಮಾತ ನಾಡಿಕೊಂಡರು.

ಆ ಚಿತ್ರಕ್ಕಿಂತಲೂ ಉತ್ತಮವಾಗಿ ಯಾರೂ ಬರೆಯಲು ಸಾಧ್ಯವಿಲ್ಲವೆಂದೂ ಇನ್ನೊಬ್ಬನ ಚಿತ್ರವನ್ನು ನೋಡುವ ಆವಶ್ಯಕತೆಯೇ ಇಲ್ಲವೆಂದೂ ಇವನು ತಮ್ಮ ನಿರೀಕ್ಷೆಯನ್ನು ಬಹಳ ದೂರ ಮೀರಿದ್ದಾನೆಂದೂ ಪೂರಾ ಕೆಲಸವನ್ನು ಇವನಿಗೇ ಕೊಡ ಬಹುದೆಂದೂ ಆಸ್ಥಾನದ ಅಧಿಕಾರಿಗಳೆಲ್ಲಾ ಅಭಿಪ್ರಾಯ ಪಟ್ಟರು. ಆದರೆ ರಾಜನು ಅವರೆಲ್ಲರಿಗಿಂತಲೂ ಹೆಚ್ಚು ಜಾಣನಾಗಿದ್ದನು. ಅವನು ಇನ್ನೊಂದು ಗೋಡೆಯ ಎದುರಿಗಿದ್ದ ತೆರೆಯನ್ನು ತೆಗೆಸಿದನು. ಆಹಾ ! ಜನರೆಲ್ಲರೂ ಬೆರಗಾದರು ! ಎಲ್ಲರೂ ಬಾಯಿ ಕಳೆದು, ಕಣ್ಣುಗಳನ್ನರಳಿಸಿ ನೋಡುತ್ತಾ ಆಶ್ಚರ್ಯಮಗ್ನರಾಗಿ ಗಟ್ಟಿಯಾಗಿ ಉಸಿರಾಡದಂತೆ ನಿಂತಿದ್ದರು. “ಏನಿದಾಶ್ಚರ್ಯ ! ಅದ್ಭುತ ! ಇದೆಷ್ಟು ಸುಂದರ ವಾಗಿದೆ ! ಅಪೂರ್ವವಾಗಿದೆ ! ಲೋಕೋತ್ತರವಾಗಿದೆ !” ಎಂದು ರಾಜನೂ ದರ್ಬಾರಿ ನವರೂ ಉದ್ಗಾರಮಾಡುತ್ತಿದ್ದರು.

ಆದರಲ್ಲಿ ಅಂಥಾ ಆಶ್ಚರ್ಯವೇನಿತ್ತು ? ಎಂದು ವಿಸ್ಮಯಗೊಳ್ಳಬಹುದು. ಆ ಎರಡನೆಯ ಚಿತ್ರಕಾರನು ಆ ಇಡೀ ತಿಂಗಳೆಲ್ಲಾ ಗೋಡೆಯ ಮೇಲೆ ಏನನ್ನೂ ಚಿತ್ರಿ ಸಿರಲಿಲ್ಲ. ಅವನು ಆ ಮೂವತ್ತು ದಿನಗಳು ರಾತ್ರಿ ಹಗಲೂ ಆ ಗೋಡೆಯನ್ನು ತಿಕ್ಕಿ ತಿಕ್ಕಿ ಉಜ್ಜಿ ಉಜ್ಜಿ ಅತಿಶಯ ನಯವಾಗಿ ಮಿರುಗುಟ್ಟುವಂತೆಯೂ ಸಾಧ್ಯ ವಾದಷ್ಟು ಪಾರದರ್ಶಕವಾಗುವಂತೆಯೂ ಮಾಡಿದ್ದನು. ಇನ್ನೊಂದು ಎದುರು ಗೋಡೆ ಯಲ್ಲಿ ಚಿತ್ರವು ಚೆನ್ನಾಗಿದ್ದರೂ ಆ ಗೋಡೆಯು ಒರಟಾಗಿಯೂ ಉಬ್ಬು ತಗ್ಗಾಗಿಯೂ ಕುರೂಪವಾಗಿಯೂ ಇದ್ದಿತು. ಚಿತ್ರವನ್ನು ಬರೆಯದಿದ್ದ ಗೋಡೆಯು ಹೆಚ್ಚು ನಯ ವಾಗಿಯೂ ಸಮವಾಗಿಯೂ ಮಟ್ಟವಾಗಿಯೂ ನುಣುಪಾಗಿಯೂ ಸಾಫಾಗಿಯೂ ಸುಂದರವಾಗಿಯೂ ಇದ್ದಿತು. ಅದರಲ್ಲಿ ಪಾರದರ್ಶಕತೆಯು ಪೂರ್ಣವಾಗಿ ದೆಯೋ ಎನ್ನುವಂತೆ ಮಾಡುವುದರಲ್ಲಿ ಅವನು ಯಶಸ್ವಿಯಾಗಿದ್ದನು. ಆದ್ದರಿಂದ ಎದುರಿನ ಗೋಡೆಯ ಮೇಲೆ ಅವನ ಪ್ರತಿಸ್ಪರ್ಧಿಯು ಬರೆದಿದ್ದ ಬಣ್ಣದ ಚಿತ್ರವೆಲ್ಲಾ ಆ ಪಾರದರ್ಶಕವಾದ ಗೋಡೆಯಲ್ಲಿ ಪೂರ್ಣವಾಗಿ ಪ್ರತಿಫಲಿಸಿದ್ದಿತು. ಈ ಗೋಡೆಯು ನಯವಾಗಿಯೂ ಸುಂದರವಾಗಿಯೂ ಥಳಥಳ ಹೊಳೆಯುತ್ತಲೂ ಇದ್ದುದರಿಂದ ಇದರಲ್ಲಿ ಪ್ರತಿಬಿಂಬಿತವಾದ ವರ್ಣಚಿತ್ರವು ಎದುರಿನ ಮೂಲ ಚಿತ್ರಕ್ಕಿಂತಲೂ ಉತ್ತ ಮವಾಗಿಯೂ ದಿವ್ಯವಾಗಿಯೂ ತೋರುತ್ತಿದ್ದಿತು.

ಆ ಕಾಲದ ರಾಜರೂ ಪ್ರಜೆಗಳೂ ಕನ್ನಡಿಯನ್ನು ಕಂಡಿರಲಿಲ್ಲ. ಮತ್ತು ಅವರು ಗೋಡೆಯನ್ನು ಬಹಳ ಹತ್ತಿರದಲ್ಲಿ ಪರೀಕ್ಷಿಸಲಿಲ್ಲ. "ಮಹಾ ಪ್ರಭೋ ! ಈ ಚಿತ್ರಕಾರನು ಗೋಡೆಯಲ್ಲಿ ಎರಡು ಮೂರು ಗಜಗಳು ಆಳವಾಗಿ ತೋಡಿ ತೆಗೆದು ಎಲ್ಲವನ್ನೂ ಬಣ್ಣದಿಂದ ಚಿತ್ರಿಸಿದ್ದಾನೆ. ಇದು ಅಸಾಧಾರಣವೇ ಸರಿ !" ಎಂದು ಪರಿವಾರದವರು ರಾಜನಿಗೆ ಆಶ್ಚರ್ಯವನ್ನು ಸೂಚಿಸಿದರು.

ಕನ್ನಡಿಯಿಂದ ಹೊರಗೆ ವಸ್ತುಗಳು ಎಷ್ಟು ದೂರದಲ್ಲಿರುತ್ತವೆಯೋ ಕನ್ನಡಿಯೊಳಗೆ ಅಷ್ಟೇ ದೂರದಲ್ಲಿ ಅವುಗಳ ಪ್ರತಿಬಿಂಬಗಳು ಇರುವಂತೆ ಕಾಣುತ್ತವೆ. ಆ ಎರಡು ಗೋಡೆಗಳ ನಡುವೆ ಎರಡು ಮೂರು ಗಜಗಳ ದೂರವಿದ್ದುದರಿಂದ ಕನ್ನಡಿಯಷ್ಟು ಮೆರುಗಿದ್ದ ಆ ಗೋಡೆಯಲ್ಲಿ ಹಾಗೆ ಕಂಡಿತು. ಆ ಗೋಡೆಗಳು ಬಹಳ ಎತ್ತರವಾಗಿದ್ದು ಅವುಗಳ ಮಧ್ಯದಲ್ಲಿ ನಿಂತು ನೋಡತಕ್ಕವರ ತಲೆಯಿಂದ ಮೇಲೆ ಚಿತ್ರಗಳು ಕಾಣುತ್ತಿದ್ದವು. ಆದ್ದರಿಂದ ಪ್ರೇಕ್ಷಕರ ಪ್ರತಿಬಿಂಬವು ಕನ್ನಡಿಯಂತಿದ್ದ ಗೋಡೆಯಲ್ಲಿ ಬೀಳಲಿಲ್ಲ.

ಈ ದೃಷ್ಟಾಂತದಿಂದ ನಾವು ತಿಳಿದುಕೊಳ್ಳಬೇಕಾದುದೇನೆಂದರೆ ಪುಸ್ತಕಗಳನ್ನು ಓದಿ ಜ್ಞಾನವನ್ನು ಸಂಪಾದಿಸುವದು ಮೊದಲನೆಯ ಚಿತ್ರಕಾರನು ಗೋಡೆಯ ಮೇಲೆ ಚಿತ್ರವನ್ನು ಬರೆದಂತೆ. ಅದು ಮೇಲು ಮೇಲಿನ ತಿಳಿವಳಿಕೆಯಾದುದರಿಂದ ಅಷ್ಟು ಪ್ರಯೋಜನಕಾರಿಯಲ್ಲ. ಎರಡನೆಯ ಚಿತ್ರಕಾರನು ಗೋಡೆಯನ್ನು ಉಜ್ಜಿ ಉಜ್ಜಿ ನುಣುಪು ಮಾಡಿ ಮೆರಗು ಕೊಟ್ಟು ಕನ್ನಡಿಯಂತೆ ಪಾರದರ್ಶಕವಾಗಿ ಮಾಡಿದಂತೆ ನಮ್ಮ ಮನೋಬುದ್ಧಿಗಳ ಗೋಡೆಯನ್ನೂ ಉಜ್ಜಿದಂತೆ ಸಾಧನ ಸಂಸ್ಕಾರದಿಂದ ನಯವಾಗಿಯೂ ಸಮವಾಗಿಯೂ ಸೂಕ್ಷ್ಮವಾಗಿಯೂ ಮಾಡಬೇಕು. ಹೃದಯವನ್ನು ನಿರ್ಮಲಗೊಳಿಸುವದರಿಂದ ಅದು ಪಾರದರ್ಶಕವಾಗಿ ಪ್ರಪಂಚದಲ್ಲಿರುವ ಜ್ಞಾನವೆಲ್ಲಾ ಅದರಲ್ಲಿ ತಾನೇ ತಾನಾಗಿ ಪ್ರತಿಫಲನವಾಗುತ್ತದೆ. ಇಡೀ ವಿಶ್ವದಿಂದಲೇ ನೀವು ಸ್ಫೂರ್ತಿಯನ್ನು ಪಡೆಯುತ್ತೀರಿ.

ರಾಮನು ತನ್ನ ಸ್ವಂತ ಅನುಭವವನ್ನು ಹೇಳುತ್ತಾನೆ. ಅವನು ಹಿಮಾಲಯದ ನಿಬಿಡವಾದ ಅಡವಿಗಳಲ್ಲಿ ವಾಸಮಾಡುತ್ತಿದ್ದಾಗ, ಮನಸ್ಸು ಪಾರದರ್ಶಕವೂ ತಟಸ್ಥವೂ ಕಲ್ಪನಾಶೂನ್ಯವೂ ಇದ್ದ ಸಮಯದಲ್ಲಿ ಸ್ಫೂರ್ತಿಯ ಮೂಲಕ ಎನ್ನುವಂತೆ ಅತ್ಯಂತ ಶ್ರೇಷ್ಠವಾದ ಭಾವನೆಗಳೂ ಆಶ್ಚರ್ಯಕರವಾದ ತತ್ತ್ವವಿಚಾರಗಳೂ ಅದ್ಭುತವಾದ ಶಕ್ತಿಯೂ ಮನಸ್ಸಿನಲ್ಲಿ ಉದಯವಾದವು. ಆದ್ದರಿಂದ ಬೈಬಲ್ಲೂ ಉಪನಿಷತ್ತುಗಳೂ ವೇದಗಳೂ ಮಿಲ್ಟನ್ ಮಹಾಕವಿಯ ಕೃತಿಗಳೂ ಎಮರ್‌ಸನ್‌ನ ಕೃತಿಗಳೂ ಕ್ರೈಸ್ತನೆನಿಸಿಕೊಳ್ಳದಿದ್ದರೂ ಇಂಗರ್‌ಸಾಲ್‌ನ ಕೃತಿಗಳೂ ದೈವಪ್ರೇರಣೆಯಿಂದಲೇ, ಸ್ಫೂರ್ತಿಯಿಂದಲೇ ಈ ಎಲ್ಲಾ ಗ್ರಂಥಗಳೂ ಬರೆಯಲ್ಪಟ್ಟಿವೆಯೆಂದು

ರಾಮನು ಹೇಳುತ್ತಾನೆ. ವೇದಗಳು, ಕೊರಾನ್, ಬೈಬಲ್ ಇತ್ಯಾದಿ ಗ್ರಂಥಗಳಂತೆಯೇ ಸ್ಪೆನ್ಸರ್‌ನ ಕೃತಿಗಳೂ ದೈವಪ್ರೇರಣೆಯಿಂದಲೇ ಆಗಿವೆ. ಸ್ಫೂರ್ತಿಯಿಂದಲ್ಲದೆ ಯಾವ ಜ್ಞಾನವೂ ಇಲ್ಲ; ಎಲ್ಲಾ ಜ್ಞಾನವೂ ಸ್ಫೂರ್ತಿಯ ಮೂಲಕವೇ ಬರುತ್ತದೆ. ಯಾವಾಗ ಗ್ರಂಥಕರ್ತನು ತನ್ನಲ್ಲಿ ವಿಚಾರವನ್ನೂ ಭಾವವನ್ನೂ ಪ್ರಚೋದನೆ ಮಾಡಿದ ದೈವವನ್ನು ಮರೆತು ತಾನೇ ಸ್ವತಂತ್ರ ಕರ್ತೃವೆಂಬ ಅಹಂಕಾರವನ್ನೂ ಆ ಕೃತಿಯು ತನ್ನ ಸ್ವಂತ ಸ್ವತ್ತು ಎಂಬ ಸ್ವಾಮಿತ್ವವನ್ನೂ ವಹಿಸಿ, ವ್ಯಾಪಾರ ಮನೋಭಾವದಿಂದ, ಜನರ ಮೂಲಕ ಹಣಸಂಪಾದನೆ ಮಾಡುತ್ತಾನೋ ಆಗ ಅವನ ಹೃದಯವು ಸಂಕುಚಿತವೂ ಕಲುಷಿತವೂ ಸ್ವಾರ್ಥಮಯವೂ ಆಗುತ್ತದೆ—ಅಥವಾ ಅದರಿಂದ ಅವನ ಹೃದಯದ ಗೋಡೆಯು ಅಪೂರ್ಣವೂ ಒರಟೂ ಅಸಮವೂ ವಿಷಮವೂ ವಿಕಾರಿಯೂ ಆಗುತ್ತದೆ. ಈ ದೋಷವನ್ನು ಕಳೆದುಕೊಂಡರೆ ಹೃದಯಭಿತ್ತಿಯು ಪಾರದರ್ಶಕವಾಗುತ್ತದೆ. ಆಗ ದಿವ್ಯಜ್ಞಾನದ ಸುಂದರವಾದ ವರ್ಣಚಿತ್ರವು ತಾನಾಗಿ ಸ್ಪಷ್ಟವಾಗಿ ಮೂಡುತ್ತದೆ. ನಿಮ್ಮ ಹೃದಯವು ಇಡೀ ಜಗತ್ತಿನ ಜೊತೆಗೆ ಸರಸವಾಗಿ ಸ್ಪಂದನಮಾಡಿದಾಗ, ಪ್ರಪಂಚದ ವ್ಯವಹಾರವೇ ನಿಮ್ಮ ವ್ಯವಹಾರವಾದಾಗ ಪ್ರಪಂಚದ ಹೃದಯವೇ ನಿಮ್ಮ ಹೃದಯವಾದಾಗ, "ಸಮಗ್ರ ವಿಶ್ವದಲ್ಲಿ ಮಿಡಿಯುತ್ತಿರುವ ಶಕ್ತಿಯು ನಾನೇ" ಎಂಬ ಭಾವವು ನಿಮಗೆ ಬಂದಾಗ ನೀವು ತಿಳಿದೋ ತಿಳಿಯದೆಯೋ ಆ ಸ್ಥಿತಿಯಲ್ಲಿದ್ದಾಗ, ಜ್ಞಾನವು ತಾನಾಗಿಯೇ ನಿಮ್ಮೊಳಗೆ ಸ್ಫುರಿಸಿ ತುಂಬಿಕೊಳ್ಳುತ್ತದೆ. ಇದೇ ರಾಜಮಾರ್ಗ.

ಪುಸ್ತಕಗಳಲ್ಲಿಯೂ ದೇವಾಲಯಗಳಲ್ಲಿಯೂ ಜ್ಞಾನವನ್ನು ವ್ಯರ್ಥವಾಗಿ ಹುಡುಕಬೇಡಿ. ವಿದ್ಯೆಯ ರಹಸ್ಯವನ್ನು ನಿಮ್ಮ ಹೃದಯದಲ್ಲಿಯೇ ಹುಡುಕಿರಿ. ನೀವು ಒಳಗೆ ಎಳೆದುಕೊಳ್ಳುವ ಉಸಿರಿನೊಂದಿಗೆ ಇಡೀ ಜಗತ್ತನ್ನೇ – ಸಕಲಸಾರವಾದ ಚೈತನ್ಯವನ್ನೇ—ಎಳೆದುಕೊಳ್ಳುವದಾಗಿ ಭಾವಿಸಿರಿ. ನಿಮ್ಮ ಮನಸ್ಸಿನಲ್ಲಿ ವಿರೋಧವೂ ವೈರವೂ ಇಲ್ಲವಾದರೆ, "ಇದು ನನ್ನದು" ಎಂದು ಹಕ್ಕನ್ನು ಸಾಧಿಸುವ ಮನೋಭಾವ ಇಲ್ಲವಾದರೆ, ಶತ್ರುವಿನ ಬಯಕೆಗಳು ನಿಮ್ಮ ಬಯಕೆಗಳೆಂದೇ ಭಾವಿಸುವದಾದರೆ, ಯಾರ ವಿಷಯದಲ್ಲಿ ನಿಮಗೆ ಅಸೂಯೆ ಇತ್ತೋ ಅವರನ್ನು ನೀವೇ ಎಂದು ತಿಳಿಯುವದಾದರೆ ನಿಮ್ಮ ಪ್ರಜ್ಞಾಮಾಂದ್ಯವೂ ಹೃದಯದ ಅಪಾರದರ್ಶಕತೆಯೂ ( Opacity ) ಮಬ್ಬೂ, ಮಂಜೂ, ತಮಸ್ಸೂ, ಕತ್ತಲೆಯೂ ಕರಗಿವೆಯೆಂದು ತಿಳಿಯಬೇಕು. ಆಗ ನಿಮ್ಮ ಹೃದಯವು ಕನ್ನಡಿಯಂತೆ ನಿರ್ಮಲವಾಗಿ ಪಾರದರ್ಶಕವಾಗುತ್ತದೆ. ನಿಮ್ಮನ್ನು ಶತ್ರುವಾಗಿ ಕಾಣತಕ್ಕವರ ಇಚ್ಛೆಯು ನಿಮ್ಮ ದೇಹವನ್ನು ಕೊಲ್ಲಬೇಕೆಂದು ಇದ್ದರೆ, ಆ ಇಚ್ಛೆಯನ್ನೂ ನಿಮ್ಮದೆಂದೇ ತಿಳಿಯಬೇಕು ಅಥವಾ ಭಾವಿಸಬೇಕು. ನಿಮ್ಮ ದೇಹವನ್ನು ಕೊಲ್ಲುವದರಿಂದ ಆ ಶತ್ರುವಿಗೆ ಯಾವ ಸಂತೋಷವಾಗುವದೋ ಅದೇ ಸಂತೋಷ ನಿಮಗೂ

ಆಗುವದಾದರೆ, ಓ ! ಆಗ ನಿಮ್ಮ ಹೃದಯವು ವಿಶ್ವಗಾನದೊಂದಿಗೆ ಸಮಶ್ರುತಿಯಿಂದ ದನಿಗೂಡಿಸಿದೆಯೆಂದು ತಿಳಿಯಬೇಕು; ಇಡೀ ಪ್ರಪಂಚದ ಸಂಗಾನದಲ್ಲಿ ಸಮರಸ ವಾಯಿತೆಂದು ತಿಳಿಯಬೇಕು. ಆಗ ನಿಮ್ಮ ಹೃದಯದ ಮಾಂದ್ಯವೆಲ್ಲಾ ಕಳೆದು, ಕನ್ನಡಿಯಾಗಿರುವದರಿಂದ ನೀವೇ ದೇವರು, ಸರ್ವಸಮರ್ಥನಾದ ಪರಮೇಶ್ವರ, ಪರ ಮಾತ್ಮ. ಇದೇ ಯಶಸ್ಸಿನ ರಹಸ್ಯ; ಪ್ರಪಂಚದ ಸಕಲೈಶ್ವರ್ಯಗಳೂ ನಿಮ್ಮದೇ ಆಗುತ್ತವೆ.

ಓಂ ! ಓಂ ! ಓಂ !

# THE BROTHERHOOD OF MAN

## ಮಾನವನ ಭ್ರಾತೃಭಾವ–ಬಂಧುಭಾವ

### ಅಮೆರಿಕಾದಲ್ಲಿ ತಾ|| 15-2-1903 ರಲ್ಲಿ ಮಾಡಿದ ಉಪನ್ಯಾಸ

ಸಂಪನ್ನ ಸ್ತ್ರೀಪುರುಷರಲ್ಲಿರುವ ನನ್ನ ಆತ್ಮವೆ,

ಉಪನ್ಯಾಸವನ್ನು ಪ್ರಾರಂಭಿಸುವದಕ್ಕೆ ಮುಂಚೆ ನೀವು ಮಾನವ ಕುಲದ ಐಕಮತ್ಯದ ಮೇಲೆ, ಒಕ್ಕಟ್ಟಿನ ಮೇಲೆ, ಅಖಂಡತೆಯ ಮೇಲೆ, ಪ್ರತಿಯೊಬ್ಬನ ಮತ್ತು ಎಲ್ಲರ ಭಾವೈಕ್ಯದ ಮೇಲೆ, ಮಾನವನ ಸಹೋದರತ್ವದ ಮೇಲೆ ನಿಮ್ಮ ಮನಸ್ಸನ್ನು ಕೇಂದ್ರೀಕರಿಸುವದು ಅಥವಾ ಸಂಯಮಮಾಡುವದು ಉತ್ತಮವಾಗಿದೆ. ಇದನ್ನೇ ಮನಸ್ಸಿಗೆ ತಂದುಕೊಳ್ಳಿ, ಮನಮುಟ್ಟಿ ಭಾವಿಸಿ, ಅನುಭವದಲ್ಲಿ ಬರುವಂತೆ ತೀವ್ರವಾಗಿ ಭಾವಿಸಿ. Just feel, feel, feel-

ಇದು ಕೇವಲ ಊಹಾಪೋಹದ ಮಾತಾಗಿದ್ದರೆ, ಇದನ್ನು ಕೇಳುವದರಲ್ಲಿ ಒಂದು ಗಂಟೆಯ ಹೊತ್ತನ್ನು ಕಳೆಯುವದು ಅಷ್ಟೇನೂ ಪ್ರಯೋಜನವಾಗುತ್ತಿದ್ದಿಲ್ಲ. ನಿಮಗೆ ವಾಸ್ತವವಾಗಿಯೂ ಪಾರಮಾರ್ಥಿಕ ಸುಖವನ್ನು ತರುವದಕ್ಕಾಗಿ ಅದನ್ನು ವ್ಯವಹಾರಯೋಗ್ಯ ವಿಷಯವನ್ನಾಗಿ ಮಾಡಬೇಕು. ಈ ಪ್ರಪಂಚದಲ್ಲಿರುವ ಜನರೆಲ್ಲರೂ 'ನಾನೇ' ಎಂದು ಭಾವಿಸುವಾಗ ಅದು ಆಹಾ ! ಎಂಥಾ ಆನಂದವನ್ನು ಕೊಡುತ್ತದೆ ! ಒಂದು ಒಳ್ಳೆಯ ಗಾನವನ್ನು ಕೇಳುವಾಗ 'ಅದು ನನ್ನದೇ' ಎಂದು ಭಾವಿಸಿದರೆ ಎಷ್ಟು ಸಂತೋಷವಾಗುತ್ತದೆ ! ಈ ಪ್ರಪಂಚದಲ್ಲಿ ಜನಪ್ರಿಯರಾಗಿಯೂ ಕೀರ್ತಿಶಾಲಿಗಳಾಗಿಯೂ ಉಚ್ಚಾ್ರಯ ಸ್ಥಿತಿಯಲ್ಲಿ ಉನ್ನತವಾಗಿ ಚಿಮ್ಮುತ್ತಲೂ ಇರುವ ಜನರು ನಾನೇ ಎಂದು ಭಾವಿಸಿದರೆ, ಓ ! ಅದು ಎಂಥಾ ಆನಂದ ! ನಿಜವಾಗಿಯೂ ಇದು ಎಷ್ಟು ಸಂತೋಷವನ್ನುಂಟುಮಾಡುತ್ತದೆ ! ಇದನ್ನು ಭಾವಿಸುವದಕ್ಕೆ ಪ್ರಯತ್ನಮಾಡಿ; ಇದರ ಸ್ವಾಭಾವಿಕವಾದ ಪರಿಣಾಮವನ್ನು ಅನುಭವದಲ್ಲಿ ಕಾಣುತ್ತೀರಿ. ಈ ಒಂದು ಶರೀರವು ನಿಮ್ಮದೆಂದು ಭಾವಿಸಿರುವಂತೆ ಎಲ್ಲಾ ಶರೀರಗಳೂ ನಿಮದೇ ಎಂದು ಭಾವಿಸತೊಡಗಿ ಅನುಭವದಲ್ಲಿ ತಂದುಕೊಳ್ಳಿರಿ. ಇದನ್ನು ನೀವು ಭಾವಿಸುವದಕ್ಕೆ ತೊಡಗಿದರೆ, ನಿಮ್ಮದೆಂದುಕೊಳ್ಳುವ ಈ ದೇಹವು ನಿಮ್ಮ ಬಯಕೆಗಳನ್ನೂ ಆಜ್ಞೆಗಳನ್ನೂ ಹೇಗೆ ವಿಧೇಯವಾಗಿ ನಡೆಸುವದೋ ನಿಮ್ಮ ಇಚ್ಛೆಯಂತೆ ನಿಮ್ಮ ಕೈಕಾಲುಗಳು ಹೇಗೆ ಚಲಿಸುವವೋ ಹಾಗೆಯೇ ಈ ಪ್ರಪಂಚದಲ್ಲಿರುವ ಎಲ್ಲಾ ದೇಹಗಳಲ್ಲಿಯೂ ನಿಮ್ಮ ಇಚ್ಛೆಯೇ ನಡೆಯುತ್ತಿರುವದನ್ನು ಅಥವಾ

ನಿಮ್ಮ ಇಚ್ಛೆಯಂತೆಯೇ ಎಲ್ಲವೂ ನಡೆಯುವದನ್ನು ಅನುಭವದಲ್ಲಿ ಕಾಣಬಹುದು. ಇದು ಅನುಭವದಲ್ಲಿ ಕಂಡುಕೊಳ್ಳುವದಕ್ಕೆ ಸಾಧ್ಯವಾದ ವಾಸ್ತವ ವಿಷಯು. ನಿಮ್ಮ ಮನಸ್ಸನ್ನೂ ಪ್ರಾಣಶಕ್ತಿಗಳನ್ನೂ ಮಾನವ ಜನಾಂಗದ ಐಕ್ಯತೆಯ ಈ ಸತ್ಯದ—ಮೇಲೆ ಕೇಂದ್ರೀಕರಿಸಿದರೆ, ಈ ಪ್ರಪಂಚದಲ್ಲಿರುವ ಎಲ್ಲಾ ದೇಹಗಳೂ ನಿಮ್ಮ ಇಚ್ಛೆಗೆ ಅನು ಗುಣವಾಗಿಯೇ ಕರಾರುವಾಕಾಗಿ ಚಲಿಸುವದನ್ನೂ ನಡೆದುಕೊಳ್ಳುವದನೂ ನೋಡುತ್ತೀರಿ. ಇದು ಪ್ರಯೋಗಸಾಧ್ಯವಾದ ವಿಷಯು. ಇದನ್ನು ನಂಬಿ, ನೀವೇ ಪ್ರಯೋಗ ಮಾಡಿ ನೋಡಿ, ಪರೀಕ್ಷಿಸಿ ನೋಡಿ. ಇದು ಕೇವಲ ಕಾಲ್ಪನಿಕ ವಿಷಯುವಲ್ಲ, ಊಹಾಪೋಹದ ವಿಷಯವಲ್ಲ. ಇದು ಪೊಳ್ಳು ಮಾತೂ ಅಲ್ಲ. ಇದು ನಿಮ್ಮ ಶರೀರವೆನ್ನುವದು ಎಷ್ಟು ವಾಸ್ತವವೋ ಅದೂ ಅಷ್ಟೇ ವಾಸ್ತವ. ಅದರೆ ಅದು ಕಠೋರ ಸತ್ಯವಾದರೂ ವಾದಕ್ಕಾಗಿ, ಅದು ಪ್ರಯೋಗಸಾಧ್ಯವಲ್ಲವೆಂದು ಇಟ್ಟುಕೊಳ್ಳೋಣ. ಆದರೂ ಮಾನವ ಕುಲದ ಏಕಾಖಂಡತೆಯನ್ನು ಭಾವಿಸಿದ ಮಾತ್ರಕ್ಕೇ ಆ ಕ್ಷಣವೇ ನಿಮಗಾಗುವ ಆನಂದವನ್ನು ನೀವು ಅಲ್ಲಗಳೆಯಲಾರಿರಿ. ಈ ಜನರು ತಮಗೆ ಐಶ್ವರ್ಯವಿಲ್ಲವೆಂದು ಏಕೆ ದುಃಖಿಸುವರು? ಅದು ಬೇಕೆಂದು ಏಕೆ ಚಿಂತಿಸುವರು? ಅವರು ತಮಗೂ ಸ್ವಂತ ತೋಟಗಳು ಬೇಕೆನ್ನುವರು. ಅವರು ಹುಲ್ಲು ಮೈದಾನಗಳನ್ನು ತಮ್ಮದೆಂದು ಹೇಳಿಕೊಳ್ಳಲು ಬಯಸುವರು. ಎಂಥಾ ಶೋಚನೀಯ ವಿಚಾರ! ಶ್ರೀಮಂತರ ತೋಟಗಳಿಗೋ ಸಾರ್ವಜನಿಕ ಉದ್ಯಾನ ವನಗಳಿಗೋ ಹೋಗಿ ಅಲ್ಲಿ ಗಂಟೆಗಟ್ಟಲೆ ಕುಳಿತುಕೊಂಡು, ಅದು ತನ್ನದೆಂದು ಕರೆದುಕೊಳ್ಳುವ ಮಾಲೀಕನು ಎಷ್ಟು ಸಂತೋಷಪಡುತ್ತಾನೋ ಅಷ್ಟೇ ಸಂತೋಷಪಡುವದಕ್ಕೆ ನಿಮಗೆ ಬರುವದಿಲ್ಲವೆ? ಆ ತೋಟವನ್ನು ತನ್ನದೆಂದು ಕರೆದುಕೊಳ್ಳುವ ಆ ಯಜಮಾನನು ಅಲ್ಲಿರುವ ಹೂ—ಹಣ್ಣುಗಳನ್ನು ಎಂದಾದರೂ ನಾಲ್ಕು ಕಣ್ಣುಗಳಿಂದ ನೋಡಬಲ್ಲನೆ? ಅವನೂ ನಿಮ್ಮಂತೆಯೇ ಆ ತೋಟದ ಎಲೆಗಳ ಹೂಕಾಯಿ ಹಣ್ಣುಗಳ ಸೌಂದರ್ಯವನ್ನು ಎರಡು ಕಣ್ಣುಗಳಿಂದಲೇ ನೋಡುವದಲ್ಲವೆ? ಅವನು ಆ ತೋಟದಲ್ಲಿರುವ ಕೋಗಿಲೆ, ಬುಲ್‌ಬುಲ್ ( Nightingale ) ಮೊದಲಾದ ಹಕ್ಕಿಗಳ ಇಂಪಾದ ಕೂಜನವನ್ನು ನಿಮ್ಮ ಕಿವಿಗಳಂಥ ಎರಡು ಕಿವಿಗಳಿಂದಲೇ ಕೇಳುವದಲ್ಲವೆ? ಹಾಗಾದರೆ, ಆ ತೋಟವನ್ನು ನಿಮ್ಮದಾಗಿ ಮಾಡಿಕೊಳ್ಳಬೇಕೆಂಬ ತಿಳಿಗೇಡಿತನದ ಬಯಕೆಯಿಂದ ಏಕೆ ಪೇಚಾಡುತ್ತೀರಿ? ಕುದಿಯುತ್ತೀರಿ? ಒಳ್ಳೆಯದು. ರಾಮನು ಹೇಳುವದೇನೆಂದರೆ, ಪ್ರಪಂಚದಲ್ಲಿರುವ ಎಲ್ಲಾ ತೋಟಗಳನ್ನೂ ವನಗಳನ್ನೂ ಉದ್ಯಾನವನಗಳನ್ನೂ ಎಲ್ಲರ ದೇಹಗಳನ್ನೂ ನಿಮ್ಮದಾಗಿಯೇ ಭಾವಿಸಬೇಕೆಂದು. ಲೋಕದಲ್ಲಿರುವ ಎಲ್ಲಾ ಪ್ರತಿಭಾಶಕ್ತಿಗಳೂ ಅತಿಶಯವಾದ ಬುದ್ಧಿಶಕ್ತಿ—ಮೇಧಾಶಕ್ತಿಗಳೂ ನಿಮ್ಮದೆಂದೇ ಭಾವಿಸಿರಿ. ಈ ಭಾವನೆಯು ಬಹುದೂರ ಎಳೆದಾಡಿ ಹೊಂದಿಸಿರುವದೂ ಅಸ್ವಾಭಾವಿಕವಾದುದೂ ಏನಲ್ಲ. ಜೀವನದಲ್ಲಿ ಉನ್ನತವಾದ ಆದರ್ಶಗಳನ್ನು ಅನುಭವದಲ್ಲಿ ತಂದುಕೊಳ್ಳಲು ಅನೇಕ ಸದ್ಗುಣಗಳನ್ನು

ನೀವು ಅಭ್ಯಾಸಮಾಡುವದು ಬೇಡವೆ? ಅವುಗಳೆಲ್ಲವೂ ನಿಮಗೆ ಉಪಯುಕ್ತವಾದವೇ. ಆದರೆ ಎಲ್ಲಕ್ಕಿಂತಲೂ ಬಹಳ ಹೆಚ್ಚಾಗಿ ಉಪಯೋಗವಾಗುವ ಉತ್ಕೃಷ್ಟವಾದ ಸಾಧನೆ ಯಾವದೆಂದರೆ, ಎಲ್ಲರೂ ಒಂದೇ, ಎಲ್ಲಾ ದೇಹಗಳೂ ನಿಮ್ಮ ದೇಹಗಳೇ ಎಂಬ ಎಲ್ಲ ಸತ್ಯಗಳಿಗಿಂತಲೂ ಅತ್ಯಂತ ಶ್ರೇಷ್ಠವಾದ ಈ ಸತ್ಯದ ಮೇಲೆ ನಿಮ್ಮ ಭಾವನೆಗಳನ್ನೂ ವಿಚಾರಗಳನ್ನೂ ಎಲ್ಲಾ ಶಕ್ತಿಗಳನ್ನೂ ಕೇಂದ್ರೀಕರಿಸುವದೇ ಆಗಿದೆ. ಎಲ್ಲಾ ದೇಹಗಳೂ ನಿಮ್ಮ ದೇಹಗಳೆಂದೇ ಭಾವಿಸಿ; ನಿಮ್ಮ ಎಲ್ಲಾ ಶಕ್ತಿಗಳನ್ನೂ ವಿಚಾರಗಳನ್ನೂ ಈ ಸತ್ಯದಲ್ಲಿಯೇ ಕೇಂದ್ರೀಕರಿಸಿ ಭಾವಿಸಿ. ಇಂಗ್ಲೆಂಡಿನ ರಾಜನನ್ನೋ ರಷ್ಯಾದ ಸಾರನನ್ನೋ ಅಮೆರಿಕಾದ ಅಧ್ಯಕ್ಷನನ್ನೋ ಕಂಡಾಗ ಅಸೂಯೆಯಾಗಲೀ ಭಯವಾಗಲೀ ನಿಮ್ಮ ಮನಸ್ಸಿನಲ್ಲಿ ಪ್ರವೇಶ ಮಾಡದಿರಲಿ. ಆ ಮಹಾ ವ್ಯಕ್ತಿಗಳ ಠೀವಿಯ ದೃಷ್ಟಿಯನ್ನು ನಿಮ್ಮ ದೃಷ್ಟಿ ಎಂದು ಭಾವಿಸಿ, ಸಂತೋಷಪಡಿ. "ನಾನೇ ಅವರು, ಬೇರೆಯಲ್ಲ" ಎಂದು ಭಾವಿಸಿ. ಈ ಬಗೆಯ ಭಾವನೆಯನ್ನು ಅಭ್ಯಾಸಮಾಡುತ್ತಿದ್ದರೆ, "ಎಲ್ಲರೂ ಒಂದೇ. ಎಲ್ಲರ ಕಿವಿಗಳೂ ನನ್ನ ಕಿವಿಗಳು, ಎಲ್ಲರ ಕಣ್ಣುಗಳು ನನ್ನ ಕಣ್ಣುಗಳು; ಎಲ್ಲರ ಕೈಕಾಲುಗಳು ನನ್ನ ಕೈಕಾಲುಗಳು. ಎಲ್ಲರ ದೇಹ ನನ್ನ ದೇಹ" ಎನ್ನುವದು ನಿಮ್ಮ ಅನುಭವಕ್ಕೇ ಬರುತ್ತದೆ. ಮಾನವನ ಭ್ರಾತೃತ್ವ! ತರ್ಕಶಾಸ್ತ್ರವು ಅದನ್ನು ಪ್ರಮಾಣೀಕರಿಸಬಲ್ಲದೋ ಪ್ರಮಾಣೀಕರಿಸಲಾರದೋ ವಿಜ್ಞಾನವು ಅದನ್ನು ಪ್ರಯೋಗದಿಂದ ತೋರಿಸಿ ಕೊಡಬಲ್ಲದೋ ತೋರಿಸಲಾರದೋ ತತ್ತ್ವಶಾಸ್ತ್ರವೂ ಅದನ್ನು ಸಿದ್ಧಮಾಡಿ ಕೊಡಬಲ್ಲದೋ ಕೊಡಲಾರದೋ ಅದು ಹೇಗಾದರೂ ಇರಲಿ. ಮಾನವನ ಸಹೋದರತ್ವವು ಮಾತ್ರ ಸತ್ಯವೆನ್ನುವದಕ್ಕೆ ಅನುಭವವೇ ಸಾರ್ವಭೌಮ ಪ್ರಮಾಣವಾಗಿದೆ.

ಒಳ್ಳೆಯದು. ಈಗ ರಾಮನು ಮಾನವನ ಭ್ರಾತೃತ್ವವು ಸತ್ಯವೆಂದು ತೋರಿಸುವದಕ್ಕೆ, ಸ್ಥಾಪಿಸುವದಕ್ಕೆ ಕೆಲವು ಕಾರಣಗಳನ್ನೂ ಯುಕ್ತಿಗಳನ್ನೂ ಕೊಡುತ್ತಾನೆ. ಅವುಗಳನ್ನು ಪ್ರತಿವಾದಿಸುವಾಗ ಅವನ ವಿಚಾರಕ್ರಮದ ತೀರ್ಮಾನವನ್ನೂ ಸಿದ್ಧಾಂತವನ್ನೂ ಕೇವಲ ಬುದ್ಧಿಯಿಂದ ಗ್ರಹಿಸದೆ, ನಿಮ್ಮ ಹೃದಯದಲ್ಲಿ ಭಾವನೆಯಿಂದ ಗ್ರಹಿಸಿ, ಅವನ ಅಭಿಪ್ರಾಯಗಳನ್ನು ನೀವು ಅನುಭವದಲ್ಲಿ ತಂದುಕೊಳ್ಳುವದಕ್ಕೆ ಪ್ರಯತ್ನ ಮಾಡಬೇಕು.

ವೃತ್ತಪತ್ರಿಕೆಗಳಲ್ಲಿ ಪ್ರಕಟಿಸುವದಕ್ಕಾಗಿ ಈ ದಿನದ ಉಪನ್ಯಾಸ—ವಿಷಯದ ಶಿರೋನಾಮವನ್ನು "Brotherhood of Man" "ಮಾನವನ ಭ್ರಾತೃತ್ವ" ಎಂದು ಪತ್ರಿಕೆಗೆ ಸೂಚಿಸಿದ ಮೇಲೆ, ವಿಷಯವನ್ನು ಈ ರೀತಿ ಹೆಸರಿಸಿದ್ದು ತಪ್ಪು ಎಂದು ರಾಮನಿಗೆ ಹೊಳೆಯಿತು. "ಮಾನವನ ಭ್ರಾತೃತ್ವ" ಎನ್ನುವದು ತಪ್ಪು ಹೆಸರು, ಅಪಪ್ರಯೋಗ. "universal Brotherhood" "ವಿಶ್ವ ಭ್ರಾತೃತ್ವ" ಎನ್ನುವ ಹೆಸರು ಸಹ ತಪ್ಪು ಹೆಸರು. ಅದೂ ಉದ್ದಿಷ್ಟವಾದ

ವಿಷಯವನ್ನು ಅಷ್ಟು ಸರಿಯಾಗಿ ತಿಳಿಸುವದಿಲ್ಲ. ಭ್ರಾತೃ, ಸಹೋದರ, ಸೋದರ ಎನ್ನುವ ಶಬ್ದಗಳು ಸ್ವಲ್ಪ ಭೇದವನ್ನು ಧ್ವನಿಸುತ್ತವೆ, ಸೂಚಿಸುತ್ತವೆ. ಜಗತ್ತಿನ ಇತಿಹಾಸವನ್ನು ನೋಡಿದರೆ, ಅಣ್ಣತಮ್ಮಂದಿರು ಒಬ್ಬರೊಡನೊಬ್ಬರು ಹೊಡೆದಾಡುತ್ತಾ ಯುದ್ಧದಲ್ಲಿ ತೊಡಗಿರುವದನ್ನು ಕಾಣುತ್ತೇವೆ. ಆದರೆ ಈ ಉಪನ್ಯಾಸಕ್ಕೆ ಆರಿಸಿ ಕೊಂಡಿರುವ ವಿಷಯದ ಸಹೋದರತ್ವದಲ್ಲಿ ಭೇದಭಾವನೆಗೆ ಸ್ವಲ್ಪವೂ ಅವಕಾಶ ವಿಲ್ಲ. ಆ ವಿಶಿಷ್ಟಾರ್ಥದಲ್ಲಿಯೇ ಆ ಪದವನ್ನು ಪ್ರಯೋಗಮಾಡಿದೆ. ಭ್ರಾತೃತ್ವ ಎನ್ನುವ ಶಬ್ದವು ತಿಳಿಸುವ ಸಾಮಾನ್ಯವಾದ ಅರ್ಥಕ್ಕಿಂತಲೂ ಹೆಚ್ಚಿನ ಅರ್ಥವನ್ನು ಅದರಲ್ಲಿ ಗ್ರಹಿಸಬೇಕು. ಕೆಲವು ದೇಶಗಳ ಇತಿಹಾಸಗಳಲ್ಲಿ ಅನ್ಯೋನ್ಯ ಉತ್ಕಟ ಪ್ರೇಮದಿಂದ ಸ್ವಲ್ಪವೂ ಭೇದಭಾವವಿಲ್ಲದಂತೆ, ಭಾವೈಕ್ಯತೆಯಿಂದ ನಡೆದು ಕೊಂಡಿರುವ ಆದರ್ಶವಾದ ಅಣ್ಣತಮ್ಮಂದಿರನ್ನೂ ಬಹಳ ಅಪರೂಪವಾಗಿ ಕಾಣಬಹುದು. ಆದರೂ ನಮ್ಮ ಉಪನ್ಯಾಸದ ವಿಷಯಕ್ಕೆ "Oneness and the united oneness of man" "ಮಾನವನ ಏಕತ್ವ ಮತ್ತು ಸಂಘಟಿತ ಏಕತ್ವ, ಸಂಯೋಜಿತ ಏಕತ್ವ" ಎನ್ನುವ ಶಿರೋನಾಮವು ಹೆಚ್ಚು ಉಚಿತ ವಾಗಿರುತ್ತಿತ್ತು. "ಅತ್ಯಂತ ಸೂಕ್ಷ್ಮವಾದ ಏನೋ ಒಂದು ತತ್ತ್ವವೆಂಬ ಆತ್ಮನ ವಿಷಯವನ್ನೇ ನೀವು ಯಾವಾಗಲೂ ಹೇಳುತ್ತಿರುತ್ತೀರಿ. ನಮಗದು ಸುಲಭವಾಗಿ ತಿಳಿಯುವದಿಲ್ಲ; ನೀವದನ್ನು ಬಿಡುವದಿಲ್ಲ. ಆದ್ದರಿಂದ ಪುನಃ ಆ ಆತ್ಮನ ವಿಷ ಯದ ಊಹಾಪೋಹ ವಿಚಾರಗಳನ್ನೇ ನಮಗೆ ಹೇಳಿ ನಮ್ಮನ್ನು ಪೀಡಿಸಬೇಡಿ," ಎಂದು ನೀವು ಬೇಸರದಿಂದ ಹೇಳಬಹುದು. ಒಳ್ಳೆಯದು, ಆಗಲಿ. ಆ ಆತ್ಮನ ವಿಷಯವನ್ನು ಕೇಳುವದಕ್ಕೆ ನಿಮಗೆ ಇಷ್ಟವಿಲ್ಲವಾದರೆ ಮಾತಿಗೆ ಅವಕಾಶವೇ ಇಲ್ಲ. ಆ ಕೂಡಲೇ ಹೇಳುವ ಕಷ್ಟವು ರಾಮನಿಗೂ ತಪ್ಪುತ್ತದೆ. ಕೇಳುವ ಕಷ್ಟವು ನಿಮಗೂ ತಪ್ಪುತ್ತದೆ. ನಿಮ್ಮ ಇಷ್ಟವೇ ರಾಮನ ಇಷ್ಟ. ಹಾ! ಆ ಅಭಿಪ್ರಾಯದಲ್ಲಿ ಯಾದರೂ ನಾವೆಲ್ಲರೂ ಒಂದೇ ಆಗಿದ್ದೇವೆ. ಎಲ್ಲರೂ ಒಂದಾಗಿರುವದೇ ರಾಮನಿಗೆ ಬೇಕಾಗಿರುವದು. ನಮಗೆ ಬೇಡವೆಂದಲ್ಲಿ ಯಾವ ಶಬ್ದವೂ ಮುಟ್ಟಲಾರದು. ನಮ್ಮ ಏಕತ್ವದ ಸ್ಥಿತಿಯಲ್ಲಿ ಯಾವ ಭಾಷೆಯೂ ಬರಲಾರದು, ಅದನ್ನು ವರ್ಣಿ ಸಲೂ ಆರದು. ಶಬ್ದದ ವಿವರಣೆಯನ್ನು ಮೀರಿದ ಆತ್ಮನ ವಿಚಾರವನ್ನು ಕೇಳು ವದು ನಿಮಗೆ ಬೇಡವಾದರೆ, ರಾಮನು ಅತ್ಯಂತ ಸ್ಥೂಲವಾದ ದೃಷ್ಟಿಯಿಂದ ವಿಚಾರ ವನ್ನು ತೆಗೆದುಕೊಳ್ಳುತ್ತಾನೆ. ನಾವು ಸ್ಥೂಲಶರೀರದ ವಿಚಾರದಿಂದ ಪ್ರಾರಂಭಿ ಸೋಣ. ಇದು ಅತ್ಯಂತ ಸ್ಥೂಲ ವಿಷಯ. ಇದನ್ನು ತಿಳಿಯುವದು ನಿಮಗೆ ಕಷ್ಟವಾಗುವದಿಲ್ಲ. ನಾವು ಆತ್ಮಸ್ವರೂಪದ ವಿಚಾರವನ್ನು ಕೈಬಿಟ್ಟು, ಕೇವಲ ಸ್ಥೂಲಶರೀರದ ದೃಷ್ಟಿಯಿಂದ ವಿಚಾರಮಾಡಿದರೂ ನಾವೆಲ್ಲರೂ ಒಂದೇ ಎಂಬದು ಸಿದ್ಧವಾಗುತ್ತದೆ. ಎಲ್ಲರ ಶರೀರಗಳೂ ಪಾಂಚಭೌತಿಕವಾದ ಸಪ್ತ ಧಾತುಗಳಿಂದಲೇ ಆಗಿವೆ. ಶರೀರಗಳ ನಾಮರೂಪಗಳು ಬೇರೆ ಬೇರೆಯೇ ಹೊರತು ಅವುಗಳ ರಚನೆಗೆ

ಕಾರಣವಾದ ವಸ್ತುವು ಮಾತ್ರ ಒಂದೇ—ಭೌತಿಕವಾದುದು. ಎಲ್ಲರ ಸ್ಥೂಲ ಶರೀರಗಳನ್ನೂ ಜೀವಂತವಾಗಿ ಇಟ್ಟಿರುವ ಪ್ರಾಣಮಯಶರೀರವನ್ನು ತೆಗೆದುಕೊಂಡರೆ, ಎಲ್ಲರೂ ಬದುಕಿರುವದು, ಎಲ್ಲೆಡೆಯಲ್ಲಿಯೂ ತುಂಬಿರುವ ಒಂದು ವಾಯುವನ್ನು ಉಸಿರಾಡುವದರಿಂದಲೇ ಅಲ್ಲವೆ? ನಾವು ಬಿಟ್ಟ ಉಸಿರನ್ನು ಇತರರೂ, ಇತರರು ಬಿಟ್ಟ ಉಸಿರನ್ನು ನಾವೂ ಸೇವಿಸುತ್ತಿಲ್ಲವೆ? ಸಮುದ್ರದಲ್ಲಿ ಜೀವಿಸಿರುವ ಎಲ್ಲಾ ಜಲಚರಗಳಿಗೂ ಒಂದೇ ನೀರು ಆಧಾರವಾಗಿರುವಂತೆ, ನಮ್ಮೆಲ್ಲರ ಬದುಕಿಗೂ ಒಂದೇ ವಾಯುಮಂಡಲವು ಸಾಧನವಾಗಿದೆ. ನಮ್ಮೆಲ್ಲರ ಬದುಕಿಗಾಗಿಯೂ ಭೋಗಕ್ಕಾಗಿಯೂ ನಾವು ನಿತ್ಯವೂ ಸೇವಿಸುತ್ತಿರುವ ಬಗೆಬಗೆಯ ಆಹಾರಪದಾರ್ಥಗಳನ್ನೂ ಧಾನ್ಯಗಳನ್ನೂ ಸೊಪ್ಪು, ಕಾಯಿ, ಹಣ್ಣು, ತರಕಾರಿಗಳನ್ನೂ ಬೆಳೆಯುವದು ಬಗೆಬಗೆಯ ಗುಣಗಳುಳ್ಳ ಒಂದು ಭೂಮಿಯಿಂದಲೇ. ನಮ್ಮ ಶ್ರಮದಿಂದ ತಯಾರಿಸಿದ ಪದಾರ್ಥಗಳಿಂದ ಇತರರೂ ಇತರರ ದುಡಿಮೆಯಿಂದ ಉತ್ಪನ್ನವಾದ ವಸ್ತುಗಳಿಂದ ನಾವೂ ಸುಖ ಪಡುತ್ತಿದ್ದೇವೆ. ಎಲ್ಲರೂ ಕುಡಿಯುವ ನೀರಿನಲ್ಲಿ ಮೂಲಭೂತವಾದ ಭೇದವಿಲ್ಲ. ಹೀಗೆ ನಾವೆಲ್ಲರೂ ಸ್ಥೂಲ ಭೌತಿಕ ಭೂಮಿಕೆಯಲ್ಲಿಯೂ ಪ್ರಾಣ ಭೂಮಿಕೆಯಲ್ಲಿಯೂ ಒಂದಾಗಿದ್ದೇವೆ. ಇನ್ನು, ಮಾತಿನಿಂದಲೂ ಲೇಖನದಿಂದಲೂ ಭಾಷಣದಿಂದಲೂ ನಮ್ಮ ಭಾವನೆಯನ್ನು ಇತರರೂ ಇತರರ ಭಾವನೆಯನ್ನು ನಾವೂ—ಪ್ರಿಯವಾಗಲೀ —ಅಪ್ರಿಯವಾಗಲೀ—ಅರ್ಥಮಾಡಿಕೊಂಡು ಅರಗಿಸಿಕೊಳ್ಳುವ್ರದರಿಂದಲೂ ನಮ್ಮೆಲ್ಲರ ಭಾವನೆಗಳೂ ಪರಸ್ಪರವಾಗಿ ಪ್ರಭಾವಿತವಾಗುವದರಿಂದಲೂ ನಮ್ಮೆಲ್ಲರ ಮನಸ್ಸೂ ಒಂದಾಗಿ, ಭಾವಭೂಮಿಕೆಯಲ್ಲಿಯೂ ನಾವೆಲ್ಲರೂ ಒಂದಾಗಿದ್ದೇವೆ. ಹೀಗೆಯೇ ಜಗತ್ತಿನಲ್ಲೆಲ್ಲಾ ದೇಶ—ದೇಶಾಂತರಗಳ ಪರಸ್ಪರ ವಿಚಾರ ವಿನಿಮಯದಿಂದ ನಾವೆಲ್ಲರೂ ಬುದ್ಧಿ ಭೂಮಿಕೆಯಲ್ಲಿಯೂ ಒಂದಾಗಿದ್ದೇವೆ. ನಮ್ಮ ಸುಖದುಃಖಗಳು ಇತರರಲ್ಲಿಯೂ ಇತರರ ಸುಖದುಃಖಗಳು ನಮ್ಮಲ್ಲಿಯೂ ಪ್ರತಿಕ್ರಿಯೆಗಳನ್ನುಂಟುಮಾಡುವದರಿಂದ ವೇದನಾ ಭೂಮಿಕೆಯಲ್ಲಿಯೂ ನಾವೆಲ್ಲರೂ ಒಂದಾಗಿದ್ದೇವೆ. ಹೀಗೆ ಕ್ರಿಯಾಶಕ್ತಿಯ ಕ್ಷೇತ್ರದಲ್ಲಿಯೂ ಪ್ರಾಣಶಕ್ತಿಯ ಕ್ಷೇತ್ರದಲ್ಲಿಯೂ ಭಾವನಾಶಕ್ತಿಯ ಕ್ಷೇತ್ರದಲ್ಲಿಯೂ ಬುದ್ಧಿಶಕ್ತಿಯ ಕ್ಷೇತ್ರದಲ್ಲಿಯೂ ವೇದನಾ ಶಕ್ತಿಯ ಕ್ಷೇತ್ರದಲ್ಲಿಯೂ ಮಾನವ ಜನಾಂಗವೆಲ್ಲಾ ಒಂದಾಗಿರುವದನ್ನು ನಾವೆಲ್ಲರೂ ವಿಚಾರದಿಂದ ಅರಿತು, ಹೃದಯದಲ್ಲಿ ತೀವ್ರವಾಗಿ ಭಾವಿಸಿ, ನಮ್ಮ ನಿತ್ಯ ಜೀವನದಲ್ಲಿ ಆ ತತ್ತ್ವಕ್ಕೆ ಅನುಗುಣವಾದ ಭ್ರಾತೃಭಾವನೆಯಿಂದಲೂ ಭಾವೈಕ್ಯತೆಯಿಂದಲೂ ವ್ಯವಹರಿಸದಿದ್ದರೆ ಆ ಅತ್ಯಂತ ಪವಿತ್ರವಾದ ಸತ್ಯಧರ್ಮಗಳ ನಿಯಮವನ್ನು ಉಲ್ಲಂಘಿಸಿದಂತೆಯೂ ಭಂಗಪಡಿಸಿದಂತೆಯೂ ಆಗುತ್ತದೆ. ರಾಜ್ಯದ ಕಾಯಿದೆಗಳನ್ನೂ ನಿಯಮ ನಿಬಂಧನೆಗಳನ್ನೂ ಮುರಿಯುವವರು ಶಿಕ್ಷೆಗೆ ಗುರಿಯಾಗದೆ ತಪ್ಪಿಸಿಕೊಳ್ಳಲಾರರೆಂದು ನಿಮಗೆಲ್ಲಾ ಗೊತ್ತಿದೆ. ಹಾಗೆಯೇ ವಿಶ್ವಭ್ರಾತೃತ್ವವನ್ನು ಅರಿತು, ಭಾವಿಸಿ, ನಿತ್ಯಜೀವನದಲ್ಲಿ ಅದರಂತೆ ನಡೆಯದೇ ಇರತಕ್ಕವರು ಕಷ್ಟಕ್ಕೆ

ಗುರಿಯಾಗುತ್ತಾರೆ. ಈ ಅತ್ಯಂತ ಪವಿತ್ರ ನಿಯಮವೂ ಎಲ್ಲಾ ನಿಯಮಗಳ ನಿಯಮವೂ ಈ ಅತ್ಯಂತ ಪವಿತ್ರಸತ್ಯವೂ ಆದ ಮಾನವನ ಭ್ರಾತೃತ್ವವನ್ನು—ಅಲ್ಲ ಅಲ್ಲ ಪ್ರತಿಯೊಬ್ಬನ ಮತ್ತು ಎಲ್ಲರ ಏಕತ್ವವನ್ನು ಭಂಗಪಡಿಸುವ ಪ್ರಯತ್ನವೇ ಈ ವಿಶ್ವದಲ್ಲಿರುವ ಎಲ್ಲಾ ಕಷ್ಟಗಳಿಗೂ ಎಲ್ಲಾ ದುಃಖದುರವಸ್ಥೆಗಳಿಗೂ ಎಲ್ಲಾ ಸಂಕಟ ಗಳಿಗೂ ಕಾರಣವಾಗಿದೆ.

ಈಗ ನಮ್ಮ ಎಲ್ಲಾ ಭೌತಿಕ ದೇಹಗಳೂ ಒಂದೇ ಎಂದು ವಿಚಾರಮಾಡಿದೆವು. ಸಹೋದರರೆ, "ಇದು ಹೇಗಾಗಬಲ್ಲದು? ಆ ಶರೀರವು ಅಲ್ಲಿ ಕುಳಿತಿದೆ; ಈ ಶರೀರವು ಇಲ್ಲಿ ನಿಂತಿದೆ. ಇವು ಹೇಗೆ ಒಂದಾಗ ಬಲ್ಲವು?" ಎಂದು ನೀವು ಕೇಳ ಬಹುದು. ನೋಡಿ, ಸಮುದ್ರದಲ್ಲಿ ಒಂದು ತೆರೆಯು ಇಲ್ಲಿರುತ್ತದೆ, ಇನ್ನೊಂದು ಅಲೆಯು ಅಲ್ಲಿರುತ್ತದೆ. ಅವು ಬೇರೆ ಬೇರೆ ಸ್ಥಳಗಳಲ್ಲಿ ಇದ್ದಂತೆಯೂ ಬೇರೆ ಬೇರೆ ರೂಪ—ಗಾತ್ರಗಳಿಂದ ಕೂಡಿದಂತೆಯೂ ಕಾಣುತ್ತವೆ. ಆದರೆ ಒಂದೇ ನೀರಿನಲ್ಲಿ ತೋರತಕ್ಕವುಗಳಾದ್ದರಿಂದ, ಈ ಎರಡು ತೆರೆಗಳು ಅಥವಾ ಅಲೆಗಳು ವಾಸ್ತವವಾ ಗಿಯೂ ಒಂದೇ ಆಗಿವೆ. ಒಂದು ಸಮುದ್ರವೇ ಈ ಬೇರೆ ಬೇರೆ ತೆರೆಗಳ ರೂಪದಿಂದ ತೋರಿಕೊಳ್ಳುತ್ತಿದೆ. ಈ ತೆರೆಯನ್ನು ರಚಿಸಿರುವ ನೀರೇ ಸ್ವಲ್ಪ ಕಾಲದ ಮೇಲೆ ಆ ಇನ್ನೊಂದು ತೆರೆಯನ್ನು ಅಥವಾ ಅಲೆಯನ್ನು ರಚಿಸುತ್ತದೆ. ಆ ತೆರೆಗಳ ವಿಷಯವು ಹೇಗೋ ನಿಮ್ಮ ಭೌತಿಕ ಶರೀರಗಳ ವಿಷಯವೂ ಹಾಗೆಯೇ. ಈ ಶರೀರವನ್ನು ಈಗ ರಚಿಸಿರುವ ಭೌತವಸ್ತುವೇ ಕೆಲವು ಕಾಲದ ಮೇಲೆ ಇನ್ನೊಂದು ಶರೀರವನ್ನು ರಚಿಸುತ್ತದೆ. ಇಷ್ಟೇ ಅಲ್ಲ; ಇದಕ್ಕಿಂತಲೂ ಹೆಚ್ಚಾಗಿ, ರಾಮನ ಶರೀರವೆಂದು ಕರೆಯುತ್ತಿರುವ ಈ ಶರೀರವನ್ನು ರಚಿಸಿರುವಂತೆ ತೋರುತ್ತಿರುವ ವಸ್ತುವಿನ ಕಣ ಗಳೇ ಇನ್ನೊಂದು ಶರೀರದೊಳಗೆ, ನಾವು ಬದುಕಿರುವ ಕಾಲದಲ್ಲಿಯೇ ಹೋಗು ತ್ತವೆ. ನಮ್ಮ ಶ್ವಾಸೋಚ್ಛ್ವಾಸವೂ ಇದನ್ನೇ ತೋರಿಸುತ್ತದೆ. ನೀವು ಆಮ್ಲ ಜನಕವನ್ನು ಉಸಿರಿನಿಂದ ಒಳಗೆ ತೆಗೆದುಕೊಳ್ಳುತ್ತೀರಿ. ಅದನ್ನು ಇಂಗಾಲಾಮ್ಲ ವನ್ನಾಗಿ ಪರಿವರ್ತಿಸಿ ಹೊರಗೆ ಕಳಿಸುತ್ತೀರಿ. ಇದನ್ನೇ ಸಸ್ಯಗಳು ತಮ್ಮ ಉಸಿರಿ ನಿಂದ ಒಳಗೆ ತೆಗೆದುಕೊಳ್ಳುತ್ತವೆ ಮತ್ತು ಸಸ್ಯಗಳು ಆಮ್ಲಜನಕವನ್ನು ಬಿಡುಗಡೆ ಮಾಡುತ್ತವೆ. ಆ ಆಮ್ಲಜನಕವನ್ನು ನೀವು ಉಸಿರಿನಿಂದ ಒಳಗೆ ಎಳೆದುಕೊಳ್ಳು ತ್ತೀರಿ. ಪುನಃ ಇಂಗಾಲಾಮ್ಲವನ್ನು ಹೊರಗೆ ನಿಶ್ವಾಸ ರೂಪದಿಂದ ಬಿಡುತ್ತೀರಿ. ಇದನ್ನೇ ಸಸ್ಯಗಳು ಉಸಿರಿನ ಮೂಲಕ ತೆಗೆದುಕೊಳ್ಳುತ್ತವೆ. ಇದರಿಂದ ನಾವು ಸಸ್ಯಗಳಿಗೆ ಸಹ ಸಹೋದರಭಾವದಿಂದ ಸಂಬಂಧಪಟ್ಟಿದ್ದೇವೆ ಎನ್ನುವದು ವ್ಯಕ್ತ ವಾಗುತ್ತದೆ. ನಮ್ಮ ಉಸಿರು ಸಸ್ಯಗಳಲ್ಲಿ ಹರಿಯುತ್ತದೆ; ಸಸ್ಯಗಳ ಉಸಿರು ನಮ್ಮಲ್ಲಿ ಪ್ರವಹಿಸುತ್ತದೆ. ನಾವು ಸಸ್ಯಗಳಲ್ಲಿಯೂ ಸಸ್ಯಗಳು ನಮ್ಮೊಳಗೂ ಉಸಿರಾಡುವದರಿಂದ ನಾವು ಸಸ್ಯಗಳೊಡನೆಯೂ ಒಂದಾಗಿದ್ದೇವೆ. ನಾವು ವನ ಗಳಲ್ಲಿಯೂ ಉದ್ಯಾನವನಗಳಲ್ಲಿಯೂ ಗಿಡಮರಬಳ್ಳಿಗಳೊಡನೆ ಒಂದಾಗಿದ್ದೇವೆ.

ಇದನ್ನೇ ಇನ್ನೊಂದು ದೃಷ್ಟಿಯಿಂದ ವಿಚಾರಮಾಡಬಹುದು. ನೀವು ಆಮ್ಲ ಜನಕವನ್ನು ತೆಗೆದುಕೊಂಡು, ಹೊರಬಿಟ್ಟ ಇಂಗಾಲಾಮ್ಲದಿಂದ ಸಸ್ಯಗಳು ಬಿಡುಗಡೆ ಮಾಡಿದ ಆಮ್ಲ ಜನಕವನ್ನೇ ನಿಮ್ಮ ಸಹೋದರನು ತನ್ನ ಉಸಿರಿನಿಂದ ಹೀರಿಕೊಳ್ಳು ತ್ತಾನೆ. ಈಗ ನಿಮ್ಮ ದೇಹದಲ್ಲಿದ್ದ ಗಾಳಿಯೇ ಇನ್ನೊಂದು ಕ್ಷಣದಲ್ಲಿ ನಿಮ್ಮ ಸಹೋದರನ ದೇಹದಲ್ಲಿರುತ್ತದೆ. ಅವನ ದೇಹದಲ್ಲಿರುವ ಗಾಳಿಯೇ ಮತ್ತೊಂದು ಕ್ಷಣದಲ್ಲಿ ನಿಮ್ಮ ದೇಹದೊಳಗೆ ಬರುತ್ತದೆ. ನಾವೆಲ್ಲರೂ ಒಂದೇ ಗಾಳಿಯನ್ನು ಉಸಿ ರಾಡುತ್ತಿದ್ದೇವೆ. ಉಸಿರಾಟದಿಂದ ನಿಮ್ಮೆಲ್ಲರ ದೇಹಗಳೂ ಒಂದೇ ಎಂಬದನ್ನು ಸ್ವಲ್ಪ ಭಾವಿಸಿರಿ; ಚೆನ್ನಾಗಿ ಭಾವಿಸಿರಿ. ನೀವೆಲ್ಲರೂ ಜೀವಿಸಿರುವದು ಒಂದು ಭೂಮಿಯ ಮೇಲೆಯೆ. ನಮ್ಮ ಸುತ್ತಲೂ ಇರುವ ವಾತಾವರಣವೂ ಸೂರ್ಯ ಚಂದ್ರ ನಕ್ಷತ್ರಗಳೂ ನಮಗೆಲ್ಲರಿಗೂ ಒಂದೇ. ನೀವು ಹಣ್ಣುಗಳನ್ನೂ ತರಕಾರಿ ಗಳನ್ನೂ ಧಾನ್ಯಗಳನ್ನೂ ಅಥವಾ ಮಾಂಸವನ್ನೂ ತಿನ್ನುತ್ತೀರಿ. ಅವು ನಿಮ್ಮ ದೇಹ ವನ್ನು ರಚಿಸುತ್ತವೆ. ಅವುಗಳ ನಿಸ್ಸಾರವಾದ ಭಾಗವನ್ನು ಮಲವಾಗಿ ವಿಸರ್ಜನೆ ಮಾಡುತ್ತೀರಿ. ನಿಮ್ಮ ಮಲವೇ ಗೊಬ್ಬರವಾಗಿ, ಸಸ್ಯಗಳನ್ನು ಪೋಷಣೆಮಾಡಿ, ಧಾನ್ಯ ಗಳ ರೂಪದಿಂದಲೂ ಸೊಪ್ಪು, ತರಕಾರಿ, ಕಾಯಿ, ಹಣ್ಣುಗಳ ರೂಪದಿಂದಲೂ ತೋರಿ ಕೊಳ್ಳುತ್ತದೆ. ನಿಮ್ಮ ಶರೀರದಿಂದ ಹೊರಗೆ ಬಂದ (ಮಲ) ಪದಾರ್ಥವೇ ಧಾನ್ಯ, ತರಕಾರಿ, ಹಣ್ಣು ಮೊದಲಾದ ಆಹಾರ ವಸ್ತುಗಳಾದಾಗ ನಿಮ್ಮ ಸಹೋದರರೆಲ್ಲಾ— ಯೋಚನೆ ಮಾಡದೆ—ಅವನ್ನು ರುಚಿ ರುಚಿಯಾಗಿ ಸವಿದು ಸೇವಿಸುತ್ತಾರೆ. ನೀವು ಸವಿಯುತ್ತಿರುವ ಆಹಾರ ವಸ್ತುಗಳೂ ಅವರ ಶರೀರಗಳಿಂದ ಹೊರಬಂದ ವಸ್ತು ಗಳಿಂದ ಉತ್ಪನ್ನವಾದುದಿರಬಹುದು. ಹೀಗೆ ಗಾಳಿಯು ಮಾತ್ರವೇ ಅಲ್ಲ, ನಿಮ್ಮ ಶರೀರದಲ್ಲಿರುವ ವಸ್ತುಗಳು ಇತರರ ಶರೀರದಲ್ಲಿಯೂ ಇತರರ ಶರೀರದಲ್ಲಿರುವ ವಸ್ತುಗಳು ನಿಮ್ಮ ಶರೀರದಲ್ಲಿಯೂ ಪ್ರವಹಿಸುತ್ತಿರುತ್ತವೆ.

ಸೂಕ್ಷ್ಮದರ್ಶಕ 'ಲೆನ್ಸ್' ಮೂಲಕ ನಮ್ಮ ಚರ್ಮವನ್ನು ನೋಡಿಕೊಂಡರೆ, ಬಹಳ ಸಣ್ಣ ಜೀವಂತ ಕಣಗಳು ನಮ್ಮ ದೇಹಗಳಿಂದ ಹೊರಹೊಮ್ಮುತ್ತಿರುವದನ್ನು ಕಾಣುತ್ತೇವೆ. ಅವುಗಳು ಹೊರಹೋಗುವದೇ ಅಲ್ಲ ; ಅಂಥಾ ಅತ್ಯಂತ ಸೂಕ್ಷ್ಮ ಕಣಗಳೇ ನಮ್ಮ ದೇಹದೊಳಕ್ಕೂ ಬರುತ್ತಿರುವದನ್ನೂ ಕಾಣುತ್ತೇವೆ. ನಮ್ಮ ಶರೀರದಿಂದ ಹೊರಬಂದ ಜೀವಕಣಗಳು ವಾತಾವರಣದಲ್ಲಿ ಹರಡಿಕೊಂಡು ಬೇರೆ ಯವರ ಶರೀರದ ಒಳಗೂ ಅವರ ಶರೀರದಿಂದ ಹೊರಹೊರಟ ಸಜೀವ ಕಣಗಳು ನಮ್ಮ ಶರೀರದ ಒಳಗೂ ಪ್ರವೇಶಿಸುತ್ತವೆ. ಹೀಗೆ ನಮ್ಮೆಲ್ಲರ ಶರೀರಗಳ ಒಳ ಹೊರಗೂ ಜೀವಾಣುಗಳ ನಿರಂತರ ಪ್ರವಾಹವಿರುವದರಿಂದ ನಮೆಲ್ಲರ ಭೌತಿಕ ಶರೀರಗಳೂ ಒಂದೇ ಎಂದು ವಿಜ್ಞಾನವು ಸಂದೇಹಕ್ಕೇ ಅವಕಾಶವಿಲ್ಲದಂತೆ ಸಿದ್ಧ ಮಾಡಿ ತೋರಿಸುತ್ತದೆ. ಆದರೂ ಇದು ಹೇಗೆ ಸಾಧ್ಯ? ಎಂದು ನಿಮಗೆ

ಸಂದೇಹವಾಗಬಹುದು. ಒಳ್ಳೆಯದು, ವಿಚಾರ ಮಾಡೋಣ. ಸುಗಂಧವಾಗಲೀ, ದುರ್ಗಂಧವಾಗಲಿ ಹೇಗೆ ಉಂಟಾಗುತ್ತದೆ? ಗಂಧವುಳ್ಳ ವಸ್ತುಗಳು ಸೂಕ್ಷ್ಮವಾದ ಜೀವಕಣಗಳನ್ನು ಹೊರಚೆಲ್ಲುವದೇ ಗಂಧಕ್ಕೆ ಕಾರಣವೆಂದು ನಿಮಗೆ ಗೊತ್ತಿದೆ. ಸುಗಂಧವಾದ ಸಣ್ಣ ಜೀವಕಣಗಳನ್ನು ಹೊರ ಚಿಮ್ಮುವದರಿಂದಲೇ ಹೂವುಗಳು ಸುಗಂಧವೆನಿಸಿವೆ. ಇದನ್ನು ವಿಜ್ಞಾನವು ವಾಸ್ತವವೆಂದು ತೋರಿಸಿಕೊಡುತ್ತದೆ. ಇಲ್ಲಿ ನಿಮ್ಮ ಶರೀರಗಳಿವೆ ; ಇವುಗಳಿಂದ ವಾಸನೆ ಬರುವದಿಲ್ಲವೆ? ಅದನ್ನು ಗ್ರಹಿಸುವಷ್ಟು ನಿಮ್ಮ ಘ್ರಾಣೇಂದ್ರಿಯ ಶಕ್ತಿಯು ಸೂಕ್ಷ್ಮವಿಲ್ಲದೇ ಇರಬಹುದು. ಕೆಲವು ಕಾರಣ ಗಳಿಂದ ದೇಹದ ವಾಸನೆಯು ಹೆಚ್ಚಾದಾಗ ಎಲ್ಲರಿಗೂ ತಿಳಿದೇ ತಿಳಿಯುತ್ತದೆ. ಕೆಲವು ಸಮಯ ನಿಮ್ಮ ದೇಹವು ವಾಸನೆಯಾಗಿರುವದು ನಿಮಗೇ ತಿಳಿಯುತ್ತದೆ. ನಾಯಿ ಗಳು ನಿಮ್ಮನ್ನು ವಾಸನೆಯಿಂದಲೇ ಗುರುತಿಸುತ್ತವೆ. ನಿಮ್ಮ ದೇಹಗಳಿಂದ ವಾಸನೆಯು ಹೊರಹೊಮ್ಮದಿದ್ದರೆ ನಾಯಿಗಳು ನಿಮ್ಮನ್ನು ಕಣ್ಣಿನಿಂದ ನೋಡದಿದ್ದಾಗಲೂ ಹೇಗೆ ಗುರುತಿಸುತ್ತಿದ್ದವು? ನಿಮ್ಮ ದೇಹಗಳಿಂದ ಜೀವಕಣಗಳು ಹೊರಹರಿಯುತ್ತಿರುವ ದರಿಂದಲೇ ವಾಸನೆಯು ಬರುತ್ತದೆ. ಹೀಗೆ ಇವು ಒಬ್ಬರ ದೇಹದಿಂದ ಒಬ್ಬರ ದೇಹಕ್ಕೆ ಪರಸ್ಪರವಾಗಿ ಹರಿಯುತ್ತಿರುವದರಿಂದ ನೀವೆಲ್ಲರೂ ಒಂದಾಗಿದ್ದೀರಿ. ಓ! ನಮಗೆಲ್ಲರಿಗೂ ಇರುವದು ಒಂದೇ ದೇಹ ; ನಿಮ್ಮ ದೇಹವೇ ನನ್ನ ದೇಹ, ನನ್ನ ದೇಹವೇ ನಿಮ್ಮ ದೇಹ. ನಿಮ್ಮೆಲ್ಲರ ದೇಹಗಳೂ ನನ್ನವೇ. ಆ ದೃಷ್ಟಿ ಯಿಂದ ನಮಗೆಲ್ಲರಿಗೂ ಇರುವದು ಒಂದೇ ಭೌತಿಕ ದೇಹ. ರೋಗಿಯು ಮಲ ಗಿರುವ ಕೋಣೆಯೊಳಗೆ ಹೋದರೆ, ಅವನ ರೋಗದ ವಾಸನೆಯೇ ಅಲ್ಲಿ ತುಂಬಿರು ವದನ್ನು ಕಾಣಬಹುದು. ಕಾಲರಾ, ಸಿಡುಬು, ಪ್ಲೇಗು ಮೊದಲಾದ ಸಾಂಕ್ರಾಮಿಕ ರೋಗಗಳು ಒಬ್ಬರಿಂದ ಒಬ್ಬರಿಗೆ ಹರಡುವದಕ್ಕೂ ಜೀವಕಣಗಳ ಪ್ರಸಾರವೇ ಕಾರಣ ವೆಂದು ಸ್ಪಷ್ಟವಾಗುತ್ತದೆ. ನೆಗಡಿಯಿಂದ ನರಳುತ್ತಿರುವವನ ಸಂಗಡಲೂ ಕ್ಷಯ ರೋಗಿಯ ಸಮೀಪದಲ್ಲಿಯೂ ಸೂಕ್ಷ್ಮ ಪ್ರಕೃತಿಯವರು ಇದ್ದರೆ ಅವರಿಗೂ ಆ ರೋಗವು ಅಂಟುತ್ತದೆ. ಇವೆಲ್ಲಕ್ಕೂ ಜೀವಾಣುಗಳ ಅಥವಾ ರೋಗಾಣುಗಳ ಪ್ರಸಾರವೇ ಕಾರಣ. ನಮ್ಮ ಆತ್ಮದ ವಿಷಯವು ಹೇಗಾದರೂ ಇರಲಿ, ಈ ಮೇಲಿನ ಅನೇಕ ಕಾರಣಗಳಿಂದ ಭೌತಿಕ ಭೂಮಿಕೆಯಲ್ಲಿ ನಾವೆಲ್ಲರೂ ಒಂದೇ ಎನ್ನು ವದು ಸಿದ್ಧವಾಗುತ್ತದೆ. ಈ ವಿಚಾರಸರಣಿಯಿಂದ ವಿಲಕ್ಷಣವಾದ ಸಿದ್ಧಾಂತವು ನಿರ್ಮಾಡುತ್ತದೆ. ನಮ್ಮ ದೇಹಗಳಿಂದ ರೋಗಾಣುಗಳು ಹೊರಹೊಮ್ಮಿ ಹರಡಿ ಇತರರನ್ನೂ ರೋಗಕ್ಕೆ ಗುರಿಪಡಿಸುವದರಿಂದ ನಾವು ರೋಗಗ್ರಸ್ತರಾಗುವದಕ್ಕೆ ನಮಗೆ ಅಧಿಕಾರವೇ ಇಲ್ಲ. ನಮ್ಮ ರೋಗವು ಇಡಿಯ ಜಗತ್ತನ್ನು ರೋಗಿಯನ್ನಾಗಿಯೂ ನಮ್ಮ ಆರೋಗ್ಯವು ಇಡಿಯ ಜಗತ್ತನ್ನು ಆರೋಗ್ಯ ಸಂಪನ್ನವಾಗಿಯೂ ಮಾಡುವದ ರಿಂದ ನಮ್ಮ ಜವಾಬ್ದಾರಿಯು ಅಸಾಮಾನ್ಯವಾದುದು. ಆದ್ದರಿಂದ ಪ್ರತಿಯೊಬ್ಬರೂ ಬಹಳ ಎಚ್ಚರಿಕೆಯಿಂದಿರಬೇಕು. ಆದ್ದರಿಂದ ವ್ಯಾಧಿಯು ಕೇವಲ ದೈಹಿಕ

ವ್ಯಾಧಿಯಾಗದೆ ನೈತಿಕ ವ್ಯಾಧಿಯೂ ಆಗುತ್ತದೆ. ಆದ್ದರಿಂದ ಎಲ್ಲಾ ಜನರ ಸುಖದ ದೃಷ್ಟಿಯಿಂದ ನಿಮ್ಮ ದೇಹಗಳನ್ನು ಆರೋಗ್ಯವಾಗಿಯೂ ಸಶಕ್ತವಾಗಿಯೂ ಇಟ್ಟು ಕೊಳ್ಳುವದಕ್ಕೆ ಪ್ರಯತ್ನಮಾಡಬೇಕು. ನೀವು ತಿನ್ನುವಾಗಲೂ ಕುಡಿಯುವಾಗಲೂ ಕೇವಲ ನಿಮ್ಮ ದೇಹದ ವೈಯಕ್ತಿಕ ಸೌಖ್ಯಕ್ಕಾಗಿಯೇ ಅಲ್ಲ; ಆದರೆ ಇಡಿಯ ಜಗತ್ತಿನ ಕ್ಷೇಮಕ್ಕಾಗಿಯೂ ಬಹಳ ಎಚ್ಚರಿಕೆಯನ್ನು ವಹಿಸಬೇಕು. ಅತಿಯಾಗಿ ತಿನ್ನ ಬಾರದು; ಅತಿಯಾಗಿ ಕುಡಿಯಬಾರದು, ಎಲ್ಲದರಲ್ಲಿಯೂ ಬಹಳ ಮಿತವಾಗಿರ ಬೇಕು ; ಹಿತವಾಗಿರಬೇಕು.

ಹಾಗಾದರೆ, ರೋಗಿಗಳ ವಿಷಯದಲ್ಲಿ ಆರೋಗ್ಯವಂತರ ಕರ್ತವ್ಯವೇನು? ಆರೋಗ್ಯವಂತರು ಉಪಕಾರ ದೃಷ್ಟಿಯಿಂದಾಗಲೀ ವರಪ್ರದಾನ ದೃಷ್ಟಿಯಿಂದಾಗಲೀ ಅಲ್ಲದೆ, ಇಡಿಯ ಜಗತ್ತಿನ ಕ್ಷೇಮದ ದೃಷ್ಟಿಯಿಂದ ರೋಗಿಗಳಿಗೆ ಚಿಕಿತ್ಸೆಯನ್ನೂ ಉಪಚಾರವನ್ನೂ ನಡೆಸಬೇಕು. ಸಮಸ್ತ ಲೋಕದ ಹಿತಕ್ಕಾಗಿಯೂ ಮಾನವ ಕುಲದ ಸುಖಕ್ಕಾಗಿಯೂ ಸತ್ಯದ ಗೌರವಕ್ಕಾಗಿಯೂ ವಿಶ್ವಸಹೋದರತ್ವದ ರಕ್ಷಣೆ ಗಾಗಿಯೂ ನಿಮ್ಮ ಸ್ವಂತ ಕಲ್ಯಾಣಕ್ಕಾಗಿಯೂ ರೋಗಿಗಳನ್ನು ಸೇವಿಸಬೇಕು. ರೋಗಿ ಗಳ ಮೇಲೆ ಅನುಗ್ರಹ ತೋರಿಸುವದಕ್ಕಾಗಿ ಅಲ್ಲ, ಮಾನವ ಜನಾಂಗಕ್ಕೇ ನೀವು ಸಲ್ಲಿಸಬೇಕಾದ ಕರ್ತವ್ಯ ರೂಪವಾಗಿ ಅವರ ಶುಶ್ರೂಷೆಮಾಡಿ ಗುಣಪಡಿಸಬೇಕು. ಇದ ರಿಂದ, ಇಷ್ಟು ಬೇರೆ ಬೇರೆಯಾಗಿ ಕಾಣುವ ನಮ್ಮ ಭೌತಿಕ ದೇಹಗಳು ಒಂದಕ್ಕಾಗಿ ಇನ್ನೊಂದು ಎಷ್ಟು ಕಷ್ಟಪಡಬೇಕಾಗಿದೆಯೆಂಬದು ವ್ಯಕ್ತವಾಗುತ್ತದೆ. ನಾವು ಭೌತಿಕ ಭೂಮಿಕೆಯ ಮೇಲೆ ಸಮಾನ ರಕ್ತಮಾಂಸಗಳ ಅತ್ಯಂತ ಪವಿತ್ರವಾದ ಪಾಶ ದಿಂದ ಬದ್ಧರಾದ–ಸಂಯುಕ್ತರಾದ–ಸಹೋದರರಾಗಿದ್ದೇವೆ. ಪ್ರತಿಯೊಂದು ಏಳು ವರ್ಷಗಳಿಗೊಮ್ಮೆ ಮನುಷ್ಯನ ಶರೀರವು ಪೂರ್ಣವಾಗಿ ಬದಲಾಯಿಸುವದೆಂದು ವೈದ್ಯವಿಶಾರದರು ತೋರಿಸಿಕೊಡುತ್ತಾರೆ. ಶರೀರದ ಪ್ರತಿಯೊಂದು ಕಣದ ಸ್ಥಳದಲ್ಲಿ ಹೊಸಕಣಗಳು ಹುಟ್ಟಿಕೊಳ್ಳುತ್ತವೆ; ಅಥವಾ ಪ್ರತಿಯೊಂದು ಹಳೆಯ ಕಣಕ್ಕೆ ಬದಲಾಗಿ ಹೊಸಕಣಗಳು ತೋರಿಕೊಳ್ಳುತ್ತವೆ. ನಮ್ಮ ದೇಹದ ಪ್ರತಿ ಯೊಂದು ಕಣವೂ ಯಾವಾಗಲೂ ಬದಲಾಗುತ್ತಲೇ ಇರುವದರಿಂದ ನಿರಂತರ ವ್ಯತ್ಯಾಸ ಹೊಂದುತ್ತಿರುವ ಈ ಶರೀರವನ್ನು ಪ್ರತ್ಯೇಕವಾಗಿ ನನ್ನದೆಂದು ಅಥವಾ ನಿನ್ನದೆಂದು ತಿಳಿಯಲೂ ಹೇಳಿಕೊಳ್ಳಲೂ ಅಧಿಕಾರವೇ ಇಲ್ಲ. ಈ ಶರೀರವನ್ನು ತನ್ನದೆಂದೂ ಆ ಶರೀರವನ್ನು ನಿಮ್ಮದೆಂದೂ ಕರೆಯಲು ರಾಮನಿಗೆ ಅಧಿಕಾರವೇ ಇಲ್ಲ. ರಾಮನು ತನ್ನದೆಂದು ಕರೆಯುವ ಈ ಶರೀರವು ಬದಲಾಗದೇ ಇರುವದಿಲ್ಲ; ಇದು ಪ್ರತಿ ನಿಮಿಷವೂ ಬದಲಾಗುತ್ತಲೇ ಇರುತ್ತದೆ. ರಾಮನು ತನ್ನದೆಂದು ಕರೆದು ಕೊಳ್ಳುತ್ತಿರುವದು ಏನು? ಈಗ ರಾಮನದಾಗಿ ತೋರುವ ಶರೀರವು ಏಳು ವರ್ಷ ಗಳ ಹಿಂದೆ ಬೇರೊಬ್ಬರ ಶರೀರವಾಗಿದ್ದಿತು. ಹದಿನಾಲ್ಕು ವರ್ಷಗಳ ಹಿಂದೆ

ರಾಮನದಾಗಿ ತೋರುತ್ತಿದ್ದ ಶರೀರವು ಈಗ ಯಾರದಾಗಿದೆಯೊ? ಅದು ಅನೇಕರಿಗೆ ಸೇರೀರಬೇಕು. ಆದ್ದರಿಂದ ನಿಮ್ಮದೆಂದು ಕರೆದುಕೊಳ್ಳುತ್ತಿರುವ ಈ ಶರೀರವು ಪ್ರತಿಯೊಬ್ಬರಿಗೂ ಎಲ್ಲರಿಗೂ ಸೇರಿದೆ. ದಯವಿಟ್ಟು ಇದನ್ನು ಹೃದಯದಲ್ಲಿ ತೀವ್ರವಾಗಿ ಭಾವಿಸಿರಿ. ಕೇವಲ ಭೌತಿಕ ಭೂಮಿಕೆಯಲ್ಲಿ ಸಹ ನೀವೆಲ್ಲರೂ ಒಂದೇ.

ಈಗ ನಾವು ಮಾನಸಿಕ ಭೂಮಿಕೆಗೆ ಬರೋಣ. ನಿಮ್ಮ ಕೂದಲು ಬೆಳೆಯುತ್ತದೆ; ರಕ್ತವು ಧಮನಿಗಳಲ್ಲಿ ಹರಿಯುತ್ತದೆ. ಸ್ವಲ್ಪ ಗಮನಿಸಿ. ನಿಮ್ಮ ಕೂದಲು ಬೆಳೆಯುವಂತೆಯೂ ರಕ್ತವು ಹರಿಯುವಂತೆಯೂ ಆಹಾರವು ಪಚನವಾಗುವಂತೆಯೂ ಮಾಡುವದು ಯಾವ ಶಕ್ತಿ? ಅದು ಯಾವ ಶಕ್ತಿಯೋ ಇತರ ಪ್ರತಿಯೊಬ್ಬರಲ್ಲಿಯೂ ಎಲ್ಲರಲ್ಲಿಯೂ ಕೂದಲು ಬೆಳೆಯುವಂತೆಯೂ ರಕ್ತವು ಹರಿಯುವಂತೆಯೂ ಆಹಾರವು ಜೀರ್ಣವಾಗುವಂತೆಯೂ ಮಾಡುವದು ಅದೇ ಶಕ್ತಿಯಲ್ಲವೆ? ಈ ತತ್ತ್ವವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಒಂದು ಸೆಕೆಂಡ್ ಆದರೂ ಇದನ್ನು ಭಾವಿಸಿರಿ. ಓ! ಆಶ್ಚರ್ಯವೋ ಆಶ್ಚರ್ಯ; ರಾಮ ಯಾರು? ಶ್ವಾಸೋಚ್ಛ್ವಾಸ, ರಕ್ತಸಂಚಾರ, ಆಹಾರಪಚನ ಮೊದಲಾದ ಎಲ್ಲರ ದೇಹಗಳ ಎಲ್ಲಾ ಕ್ರಿಯೆಗಳನ್ನೂ, ನಡೆಸುತ್ತಿರುವ ಶಕ್ತಿಯೇ ರಾಮನಲ್ಲವೆ? ಆ ಶಕ್ತಿಯೇ ರಾಮನಾದರೆ, ಅವನು ಅವಿಭಕ್ತನಾಗಿ ಪ್ರತಿಯೊಬ್ಬರ ಮತ್ತು ಎಲ್ಲರ ದೇಹಗಳಲ್ಲಿಯೂ ಇರತಕ್ಕವನೇ. ರಾಮನು ಎಲ್ಲಾ ದೇಹಗಳನ್ನೂ ಪಾಲನ–ನಿಯಂತ್ರಣ ಮಾಡುತ್ತಿರುವ ಅವಿಭಕ್ತವೂ ಅವರ್ಣನೀಯವೂ ಅವಿನಾಶಿಯೂ ಆದ ಶಕ್ತಿ. ದಯವಿಟ್ಟು ಇದನ್ನು ಭಾವಿಸಿರಿ. ನೀವೆಲ್ಲರೂ ಒಂದೇ, ನೀವೆಲ್ಲರೂ ಒಂದೇ, ಯಾವ ಭೇದವೂ ಇಲ್ಲ. ದಯವಿಟ್ಟು ಇದನ್ನು ಚೆನ್ನಾಗಿ ಭಾವಿಸಿರಿ. ಇದು ಮನೋ ಭೂಮಿಕೆಯ ಮೇಲೆ ನಿಮ್ಮದೆಂದುಕೊಳ್ಳುವ ಇದೊಂದು ದೇಹವು ಉಪವಾಸಬಿದ್ದರೆ ಏಕೆ ವ್ಯಥೆಪಡುತ್ತೀರಿ? ಈ ಪ್ರಪಂಚದಲ್ಲಿ ಚೆನ್ನಾಗಿ ಪೋಷಿತವಾಗುತ್ತಿರುವ ಎಲ್ಲಾ ದೇಹಗಳೂ ನಿಮ್ಮವೇ ಅಲ್ಲವೆ? ನಿಮ್ಮದೆಂದುಕೊಳ್ಳುವ ಈ ಒಂದು ದೇಹವು ಅಸ್ವಸ್ಥವಾದರೆ ಏಕೆ ಚಿಂತೆ ಮಾಡುತ್ತೀರಿ? ಏಕೆ ಸಂಕಟಪಡುತ್ತೀರಿ? ಈ ಪ್ರಪಂಚದಲ್ಲಿ ಎಷ್ಟು ಜನರು ಆರೋಗ್ಯವಾಗಿದ್ದಾರೋ ಅವರೆಲ್ಲಾ ನೀವೇ ಅಲ್ಲವೆ? ಈ ಸತ್ಯವನ್ನು ಚೆನ್ನಾಗಿ ಭಾವಿಸಿರಿ, ತೀವ್ರವಾಗಿ ಭಾವಿಸಿರಿ. ಮತ್ತೊಬ್ಬರ ವಿಷಯದಲ್ಲಿ ನಿಮ್ಮ ಕರ್ತವ್ಯವೇನು? ಆಲೋಚನೆ ಮಾಡಿ. ಇತರ ಜನರು ರೋಗಗ್ರಸ್ತರಾದಾಗ, ಅವರನ್ನು ನಿಮ್ಮಲ್ಲಿಗೆ ತಂದು, ಆ ದೇಹಗಳು ನಿಮ್ಮವೇ ಎಂದು ತಿಳಿದು ಭಾವಿಸಿ. ನಿಮ್ಮ ಸ್ವಂತದ್ದೆಂದುಕೊಳ್ಳುವ ದೇಹಕ್ಕೆ ಹೇಗೆ ಚಿಕಿತ್ಸೆಮಾಡಿಕೊಳ್ಳುತ್ತಿರೋ ಹಾಗೇ ಚಿಕಿತ್ಸೆಮಾಡಿ ಉಪಚರಿಸಿ. ಇತರರ ಕಷ್ಟನಷ್ಟಗಳಿಗಾಗಿ ನೀವು ಮರುಗಬೇಕು. ಸಹಾನುಭೂತಿಯನ್ನು ತೋರಿಸಿ, ಅವರ ಕಷ್ಟಕಾರ್ಪಣ್ಯಗಳನ್ನು ಪರಿಹರಿಸಿ, ಅವರನ್ನು ಮೇಲೆತ್ತಬೇಕು. ಇದು ನಿಮ್ಮ ಕರ್ತವ್ಯ. ಆದರೆ ಯಾರ ಸೇವೆಯನ್ನಾದರೂ ಮಾಡುವದಕ್ಕಾಗಿ ನಿಮ್ಮ ದೇಹವನ್ನು ಮೊದಲು ಆರೋಗ್ಯವಾಗಿಯೂ

ಬಲಶಾಲಿಯಾಗಿಯೂ ಇಟ್ಟುಕೊಳ್ಳಬೇಕು. ಇದು ಮೊದಲ ಕರ್ತವ್ಯ. ಎಲ್ಲಾ ಬಗೆಯ ಸಂದರ್ಭಸನ್ನಿವೇಶಗಳಲ್ಲಿಯೂ ನೀವು ಉಲ್ಲಸಿತರಾಗಿಯೂ ಸಂತೋಷವಾಗಿಯೂ ಇರಬೇಕು. ಎಲ್ಲಾ ಬಗೆಯ ಚಿಂತೆಗಳನ್ನೂ ಕಳವಳಗಳನ್ನೂ ಚಡಪಡಿಕೆಗಳನ್ನೂ ಬಿಟ್ಟುಬಿಡಿ.

ಭಾವಭೂಮಿಕೆಯಲ್ಲಿ ಎಲ್ಲರೂ ಒಂದೇ ಎನ್ನುವದನ್ನು ತಿಳಿಯುವದಕ್ಕಾಗಿಯೂ ತಿಳಿಸುವದಕ್ಕಾಗಿಯೂ ಒಂದು ಪ್ರಯೋಗವನ್ನು ನಡೆಸಬಹುದು. ವೀಣೆ, ತಂಬೂರಿ ಮೊದಲಾದ ತಂತೀವಾದ್ಯಗಳಲ್ಲಿ ಎರಡು ವಾದ್ಯಗಳನ್ನು ಒಂದೇ ಕೋಣೆಯಲ್ಲಿ ಒಂದಕ್ಕೊಂದು ಸ್ವಲ್ಪ ದೂರದಲ್ಲಿಟ್ಟು ಎರಡನ್ನೂ ಒಂದು ಗೊತ್ತಾದ ಶ್ರುತಿಗೆ ಅಳವಡಿಸಿ ಒಂದನ್ನು ನುಡಿಸುವದಕ್ಕೆ ತೊಡಗಿದರೆ ಇನ್ನೊಂದು ವಾದ್ಯದಲ್ಲಿ ತನ್ನಿಂದ ತಾನೇ ಅದೇ ಮಿಡಿತದ ಧ್ವನಿಯುಂಟಾಗುತ್ತದೆ. ಇದಕ್ಕೆ ಕಾರಣ ವೇನು? ನಾವು ಬಾರಿಸುವ ವಾದ್ಯದಲ್ಲಿ ಶಬ್ದವನ್ನುಂಟುಮಾಡುವ ಸ್ಪಂದನಗಳು ಇನ್ನೊಂದು ವಾದ್ಯವನ್ನೂ ಆವರಿಸಿ ಅದೇ ಬಗೆಯ ಶಬ್ದವುಂಟಾಗುವಂತೆ ಪ್ರೇರಿಸುತ್ತದೆ, ಮಿಡಿಯುತ್ತದೆ. ನೀವು ಯಾವ ಬಗೆಯಿಂದ ಭಾವಿಸುವಿರೋ ಕೂಡಲೇ ಅದೇ ಬಗೆಯಿಂದ ಭಾವಿಸಲು ನಿಮ್ಮ ಸಮೀಪದಲ್ಲಿ ಇರುವವರಿಗೂ ಪ್ರೇರಣೆಯಾಗುತ್ತದೆ. ಒಬ್ಬರು ಅತ್ತರೆ, ಸಮೀಪದಲ್ಲಿರುವವರಿಗೆ ಅಳುವಂತಾಗುತ್ತದೆ; ಒಬ್ಬರು ನಕ್ಕರೆ ನೆರೆಯವರೂ ನಗುವಂತಾಗುತ್ತದೆ. ರಂಗಭೂಮಿಯ ಮೇಲೆ ನಾಟಕಗಳಲ್ಲಿ ನಟ—ನಟಿಯರು ಬಗೆ ಬಗೆಯ ಭಾವನೆಗಳನ್ನು ಅಭಿನಯಮಾಡಿ ತೋರಿಸುತ್ತಾರೆ. ಆ ಅಭಿನಯದಲ್ಲಿ ಪ್ರಾಮಾಣಿಕತೆ ಇರುವದಿಲ್ಲ. ಅವರು ಪರದೆಯ ಮುಂದೆ ಬಂದಾಗ ಅಳುತ್ತಾರೆ; ಪರದೆಯ ಹಿಂದೆ ಒಳಗೆ ಹೋದೊಡನೆಯೇ ನಗುತ್ತಾರೆ. ರಂಗಭೂಮಿಯ ಮೇಲೆ ಪರದೆಯ ಹಿಂದೆ ರಾವಣನ ಮೀಸೆಯನ್ನು ಅಥವಾ ಮೀಸೆಗಳನ್ನು ರಾಮನು ತಿದ್ದಿ ಹುರಿಮಾಡುತ್ತಿರುತ್ತಾನೆ; ರಾವಣನು ರಾಮನ ಹಣೆಯ ಮೇಲಿನ ತಿಲಕವನ್ನು ತಿದ್ದಿ ಕಿರೀಟವನ್ನು ಸರಿಪಡಿಸುತ್ತಾನೆ. ಆಗಲೇ ಒಂದು ನಿಮಿಷದಲ್ಲಿ ಪರದೆಯ ಮುಂದೆ ಪ್ರೇಕ್ಷಕರ ಎದುರಿಗೆ ಬಂದೊಡನೆಯೇ ರಾಮ—ರಾವಣರು ಪರಸ್ಪರ ಭಯಂಕರ ಕೋಪವನ್ನು ತೋರಿಸಿ, ಘೋರವಾದ ಯುದ್ಧ ಮಾಡುತ್ತಾರೆ. ಅವರ ಭಾವನೆಯಲ್ಲಿ ಪ್ರಾಮಾಣಿಕತೆ ಹೇಗೆ ಬರಬೇಕು? ಆದರೂ ಶ್ರೇಷ್ಠನಾದ ನಟನು ಭಾವಪೂರ್ಣವಾಗಿ ಮಾತನಾಡುತ್ತಾ ಕಷ್ಟವನ್ನೂ ಶೋಕವನ್ನೂ ವಾಸ್ತವವೋ ಎನ್ನುವಂತೆ ಅಭಿನಯಿಸಿದರೆ, ಎಲ್ಲಾ ಸಭಿಕರೂ ಪ್ರೇಕ್ಷಕರೂ ತಮ್ಮನ್ನು ತಾವು ಮರೆತು ಆ ನಟನ ಪಾತ್ರದಲ್ಲಿ ತನ್ಮಯರಾಗಿ, ಒಂದಾಗಿ, ಎಲ್ಲರೂ ಅಳುವದಕ್ಕೆ ತೊಡಗುತ್ತಾರೆ. ಅದೇಕೆ? ಒಂದು ವೀಣೆಯನ್ನು ಮಿಡಿದರೆ, ನಿಮ್ಮೆಲ್ಲರ ಹೃದಯ ವೀಣೆಗಳನ್ನೂ ಮೀಟಿದಂತಾಗಿ ನುಡಿಯುವದಕ್ಕೆ ತೊಡಗುತ್ತವೆ. ನಿಮ್ಮೆಲ್ಲರ ಮನಸ್ಸುಗಳೂ ಭಾವಗಳೂ ಒಂದೇ ಆಗಿಲ್ಲದಿದ್ದರೆ, ಅಥವಾ

ಅನ್ಯೋನ್ಯ ಸಹೋದರ ಸಂಬಂಧವಿಲ್ಲದಿದ್ದರೆ, ಇದು ಹೇಗೆ ಸಾಧ್ಯವಾಗುತ್ತಿತ್ತು? ನಿಮ್ಮೆಲ್ಲರ ಮನಸ್ಸುಗಳು ಒಂದೇ ಸಮುದ್ರದ ಅಲೆಗಳಂತೆ ಪರಸ್ಪರ ಸಂಬಂಧವಿಲ್ಲದವಾಗಿದ್ದರೆ ಈ ಬಗೆಯ ಬಂಧು ಭಾವನೆಯು ಅಸಾಧ್ಯವಾಗುತ್ತಿತ್ತು. ಒಂದು ವಸ್ತುವು ಇನ್ನೊಂದು ವಸ್ತುವಿನ ಮೇಲೆ ಕಾರ್ಯ ನಡೆಸುವದಾದರೆ, ಪರಿಣಾಮ ಮಾಡುವದಾದರೆ, ಆ ಎರಡರ ನಡುವೆ ಒಂದು ಭೌತವಸ್ತು ಎಡೆಬಿಡದೆ ಇರಬೇಕು; ಅವಿಚ್ಛಿನ್ನವಾಗಿರಬೇಕು. ಈ ಅವಿಚ್ಛಿನ್ನತೆಯ ನಿಯಮವನ್ನು ಮುರಿದು ಯಾವ ಶಕ್ತಿಯೂ ಕೆಲಸಮಾಡಲಾರದು. ಇಲ್ಲಿ ಒಂದು ಘನವೂ ಗಟ್ಟಿಯೂ ಗಡಸೂ ಆದ ಮರದ ಮೇಜು ಇದೆ. ಇದರಲ್ಲಿ ಯಾವದಾದರೂ ಒಂದು ಬಿಂದುವನ್ನು ಅಥವಾ ಭಾಗವನ್ನು ಅಲ್ಲಾಡಿಸಿದರೆ, ಈ ಬಿಂದುವು ಇತರ ಬಿಂದುಗಳೊಡನೆ ಗಡುಸಾಗಿ ಕೂಡಿಕೊಂಡಿರುವದರಿಂದ, ಇಡಿಯ ಮೇಜೇ ಅಲ್ಲಾಡುತ್ತದೆ. ಯಾವ ಶಕ್ತಿಯಾದರೂ ಕಾರ್ಯಮಾಡಬೇಕಾದರೆ ಅದು ಅವಿಚ್ಛಿನ್ನ ಕಾರ್ಯಪರಂಪರೆಯಲ್ಲಿಯೇ ಕೆಲಸ ಮಾಡಬೇಕು. ಇಲ್ಲಿ ಒಬ್ಬ ಮನುಷ್ಯನ ವೇದನೆಗಳು ಇತರರಿಗೆ ವಹಿಸಲ್ಪಟ್ಟವು, ಅಥವಾ ಪ್ರವಹಿಸಿದವು. ಒಬ್ಬನ ಹೃದಯವು ಇನ್ನೊಬ್ಬನ ಹೃದಯದೊಂದಿಗೆ ಯಾವದೊಂದು ಅವಿಚ್ಛಿನ್ನ ಮಧ್ಯವರ್ತಿಯಿಂದ (continuous medium) ಸಂಬಂಧಪಡದಿದ್ದರೆ ಇದು ಸಾಧ್ಯವೇ ಆಗುತ್ತಿರಲಿಲ್ಲ. ಹೀಗೆಯೇ ನಿಮ್ಮೆಲ್ಲರ ಹೃದಯಗಳೂ ಒಂದರೊಡನೊಂದು ಅಖಂಡವಾಗಿಯೂ ಗಡುಸಾಗಿಯೂ ಸಂಬಂಧಪಡದಿದ್ದರೆ, ಒಬ್ಬರ ಭಾವನೆಗಳೂ ವೇದನೆಗಳೂ ಇನ್ನೊಬ್ಬರಿಗೆ ಹರಿದುಹೋಗುತ್ತಿರಲಿಲ್ಲ. ಇದು ಬಹಳ ಸತ್ಯ. ಇದರಿಂದ ನಿಮ್ಮೆಲ್ಲರ ಮನಸ್ಸುಗಳೂ, ಎಲ್ಲವೂ ಕೂಡಿದ ಒಂದೇ ಅಖಂಡ ವಸ್ತುವೋ ಎನ್ನುವಂತೆ ಪರಸ್ಪರ ಸಂಬಂಧ ಪಟ್ಟಿವೆಯೆಂದು ಸಿದ್ಧವಾಗುವದಿಲ್ಲವೆ? ಭಾವನೆಗಳ ಹಾಗೂ ವಿಚಾರಗಳ ಘನೀಕರಣವಿದೆ. ರಾಮನು ಉಪನ್ಯಾಸದಲ್ಲಿ ನಕ್ಕರೆ, ಎಲ್ಲರೂ ನಗುತ್ತಾರೆಯೆಂಬುದನ್ನು ಅವನು ಗಮನಿಸಿದ್ದಾನೆ. ಒಬ್ಬನು ಅಳುತ್ತಿದ್ದರೆ ಅದನ್ನು ಅರ್ಥಮಾಡಿಕೊಂಡವರ ಮನಸ್ಸುಗಳೂ ಕರಗಿ ಮೃದುವೂ ಕೋಮಲವೂ ಆಗುತ್ತವೆ. ಒಬ್ಬನು ಹಾಡುತ್ತಿದ್ದರೆ ಅವನ ಸುತ್ತಲೂ ಇದ್ದವರೆಲ್ಲಾ ಆ ಸ್ಪಂದನವನ್ನು ಅನುಭವಿಸುತ್ತಾರೆ. ಕೆಲವು ಸಮಯ ಒಬ್ಬನು ಹಾಡುತ್ತಿದ್ದರೆ ಅದರಿಂದ ಪ್ರಭಾವಿತರಾಗಿ ಇತರರೂ ಹಾಡಲು ತೊಡಗುತ್ತಾರೆ. ಇದು ವಾಸ್ತವ ವಿಷಯ. ನಮ್ಮೆಲ್ಲರ ಭಾವನೆಗಳೂ ಅಥವಾ ವೇದನೆಗಳೂ ಅಥವಾ ಮನಸ್ಸೂ ಒಂದಾಗಿರದಿದ್ದರೆ ಇದು ಹೇಗೆ ಸಾಧ್ಯವಾಗುತ್ತಿತ್ತು? ದಯವಿಟ್ಟು ಇದನ್ನು ಸ್ವಲ್ಪ ಗಮನಿಸಿ; ನಾವು ನಮ್ಮ ಹಿರಿಯರಿಂದಲೂ ಉಪಾಧ್ಯಾಯರಿಂದಲೂ ಮಿತ್ರರಿಂದಲೂ ಇತರ ಜನರಿಂದಲೂ ಅನೇಕ ವಿಚಾರಗಳನ್ನು ಕಲಿಯುತ್ತೇವೆ. ಕಲಿಯತಕ್ಕವರಿಗೂ ಕಲಿಸತಕ್ಕವರಿಗೂ ಒಂದೇ ಮನಸ್ಸು ಇಲ್ಲವಾಗಿದ್ದರೆ, ಅವರ ಮನೋ ಭೂಮಿಕೆಯಲ್ಲಿ ಸಹೋದರತ್ವವಿಲ್ಲವಾಗಿದ್ದರೆ, ಕಲಿಸುವದೂ ಕಲಿಯುವದೂ ಹೇಗೆ ಸಾಧ್ಯವಾಗುತ್ತಿತ್ತು? ಇಲ್ಲಿ ಒಂದು ಮನಸ್ಸು ಇನ್ನೊಂದು ಮನಸ್ಸಿನೊಡನೆ ನೇರ ಸಂಪರ್ಕವನ್ನು ಪಡೆಯುತ್ತದೆ.

ಕಲಿಸುವ ಗುರುವಿನ ಜ್ಞಾನವು ಕಲಿಯುವ ಶಿಷ್ಯನ ಜ್ಞಾನವಾಗುತ್ತದೆ. ಈ ಎರಡು ಮನಸ್ಸುಗಳೂ ನೇರ ಸಂಬಂಧವನ್ನು ಹೊಂದಿರದಿದ್ದರೆ ಇದು ಹೇಗೆ ಸಾಧ್ಯವಾಗುತ್ತಿತ್ತು? ನೀವು ನಿಮ್ಮ ಸ್ನೇಹಿತರಿಗಾಗಿ ಪ್ರೇಮದಿಂದಲೂ ದಯದಿಂದಲೂ ಕರುಣೆಯಿಂದಲೂ ಮೆಚ್ಚುಗೆಯಿಂದಲೂ ಭಾವಿಸುತ್ತಿರುವಾಗ, ಆ ಸ್ನೇಹಿತನು ಸಹಸ್ರಾರು ಮೈಲಿಗಳ ದೂರದಲ್ಲಿದ್ದರೂ ತಪ್ಪದೇ ಆ ಭಾವಸ್ಪಂದನಗಳಿಂದ ಪ್ರಭಾವಿತನಾಗುತ್ತಾನೆ; ವೇದನೆಯನ್ನು ಹೊಂದುತ್ತಾನೆ. ರಾಮನು ಈ ವಿಚಾರದ ಸತ್ಯತೆಯನ್ನು ಪರೀಕ್ಷಿಸಿದ್ದಾನೆ; ನಿತ್ಯವೂ ಇದರ ಪರೀಕ್ಷಾ ಪ್ರಯೋಗಗಳನ್ನು ನಡೆಸುತ್ತಲೇ ಇದ್ದಾನೆ; ಇದು ಸತ್ಯವೆಂದು ಮನಗಂಡಿದ್ದಾನೆ. ಭಾವಸಂಚಾರಕ್ಕೆ ಸಹಸ್ರಾರು ಮೈಲಿಗಳು ಒಂದು ದೂರವೇ ಅಲ್ಲ. ನಿಮ್ಮ ಎಲ್ಲಾ ಮನಸ್ಸುಗಳೂ ಒಂದೇ ಭೂಮಿಕೆಯ ಮೇಲೆ ನಿಕಟಸಂಬಂಧ ಹೊಂದಿವೆಯೆಂದು ಇದರಿಂದ ತೋರುವದಿಲ್ಲವೆ? ಮನೋಭೂಮಿಕೆಯ ಮೇಲೆ ನೀವೆಲ್ಲರೂ ಸಹೋದರರು.

ಈ ಜಗತ್ತಿನಲ್ಲಿ ಅಪಾದಿತರೂ ಅಪರಾಧಿಗಳೂ ಪಾತಕಿಗಳೂ ಉಂಟಾಗುವದು ಹೇಗೆ? ಒಬ್ಬ ದುಷ್ಟ ಮನುಷ್ಯನು ಬಂದು ನಿಮ್ಮ ಮನಸ್ಸನ್ನು ನೋಯಿಸುತ್ತಾನೆ. ನಿಮಗೆ ಅವನ ಮೇಲೆ ಬಹಳ ಸಿಟ್ಟು ಬರುತ್ತದೆ. ಆದರೆ ಅವನು ನಿಮಗಿಂತಲೂ ಹೆಚ್ಚು ಬಲಿಷ್ಠನಾಗಿರುವುದರಿಂದ ಅವನ ವಿಷಯದಲ್ಲಿ ದ್ವೇಷ ಭಾವನೆಯನ್ನು ಹೊರ ಚೆಲ್ಲುತ್ತೀರೇ ಹೊರತು ಕಾರ್ಯತಃ ಏನೂ ಮಾಡುವದಕ್ಕೆ ಆಗುವದಿಲ್ಲ. ಅದೇ ದುಷ್ಟನು ಇನ್ನೊಬ್ಬ ಸೌಮ್ಯ ಮನುಷ್ಯನ ಮನಸ್ಸನ್ನೂ ನೋಯಿಸುತ್ತಾನೆ. ಈ ಮೃದು ಸ್ವಭಾವದ ಮನುಷ್ಯನೂ ಅಸಮಾಧಾನ ಹೊಂದುತ್ತಾನೆ, ಕೋಪಗೊಳ್ಳುತ್ತಾನೆ. ಅವನಿಂದ ಆ ಖಲನ ವಿಷಯದಲ್ಲಿ ಕೆಟ್ಟ ಭಾವನೆಗಳು ಹೊರ ಹೊಮ್ಮುತ್ತವೆ. ಆದರೆ ಆ ದುಷ್ಟನು ಬಲಿಷ್ಠನಾಗಿರುವುದರಿಂದ ಆ ಸಾಧುಮನುಷ್ಯನು ಸ್ವತಃ ಪ್ರತೀಕಾರ ಮಾಡಲಾರದವನಾಗಿರುತ್ತಾನೆ. ಆ ಬಲದರ್ಪಿತನು ಮತ್ತೊಬ್ಬ ಮನುಷ್ಯನಿಗೂ ಹೊಡೆಯುತ್ತಾನೆ, ಅಪಮಾನಮಾಡುತ್ತಾನೆ. ಆದರೆ ಅವನೂ ತೀವ್ರವಾಗಿ ನೊಂದುಕೊಂಡರೂ ಸೇಡುತೀರಿಸಿಕೊಳ್ಳಲಾರದವನಾಗಿರುತ್ತಾನೆ. ಹೀಗೆಯೇ ಹತ್ತು, ಇಪ್ಪತ್ತು, ಐವತ್ತು ನೂರು ಜನರು ಆ ಒಬ್ಬ ದುರುಳನಿಂದ ಬಹಳವಾಗಿ ನೊಂದುಕೊಳ್ಳುತ್ತಾರೆ. ಹೀಗೆಯೇ ಆಗುತ್ತಾ ಆಗುತ್ತಾ ಒಂದು ದಿನ ಈ ಬಲಿಷ್ಠ ಮನುಷ್ಯನು ಅವನಿಗೆ ಸಮಾನನೂ ಅಥವಾ ಹೆಚ್ಚಿನವನೂ ಆದ ಮತ್ತೊಬ್ಬ ಬಲಿಷ್ಠ ಮನುಷ್ಯನನ್ನು ಸಾಮಾನ್ಯವಾಗಿ ಸ್ವಲ್ಪ ಅಪಮಾನಗೊಳಿಸುತ್ತಾನೆ. ಆದರೆ ಅಷ್ಟರಿಂದಲೇ ಇವನು ಒಮ್ಮೆಗೇ ಉದ್ರಿಕ್ತನಾಗಿ ತನಗಾದ ಅಪಮಾನದ ತಾರತಮ್ಯವನ್ನು ಸಹ ವಿವೇಚಿಸದಂತೆ—ಕ್ರೋಧವು ಸ್ಫೋಟಗೊಂಡು—ಕುಳಿತಿದ್ದವನು ನೆಗೆದೆದ್ದು ಬಂದೂಕನ್ನು ಎಳೆದುಕೊಂಡು ಆ ನಿಂದಕನನ್ನು 'ಷೂಟ್' ಮಾಡಿಯೇ ಬಿಟ್ಟನು. ಮೂಲ ಅಪರಾಧಿಯು ವಧಿಸಲ್ಪಟ್ಟಿದ್ದಾನೆ. ಅವನನ್ನು ಗುಂಡಿನಿಂದ ಉಡಾಯಿಸಿದ ಎರಡನೆಯ

ಅಪಾದಿತನನ್ನು ಪೋಲೀಸಿನವರು ಹಿಡಿದುಕೊಂಡು ಹೋಗಿ ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸುತ್ತಾರೆ. ನ್ಯಾಯಾಧೀಶರು ವಿಚಾರಣೆ ನಡೆಸುತ್ತಾರೆ. ಕೊಲೆಯಾದವನು ಮಾಡಿದ ಅಪರಾಧಕ್ಕೂ ಆಪಾದಿತನಲ್ಲಿ ಉರಿದೆದ್ದ ಕೋಪಕ್ಕೂ ಅವನು ಕೊಟ್ಟ ಶಿಕ್ಷೆಗೂ ಸಂಬಂಧವೇ ಇರಲಿಲ್ಲ. ಶಿಕ್ಷೆಯು ಅಳತೆಯನ್ನು ಅತಿಯಾಗಿ ಮೀರಿತ್ತು. ಅಲ್ಪಾಪರಾಧಕ್ಕೆ ಘೋರ ಶಿಕ್ಷೆ. ವಧೆಯಾದವನು ಮಾಡಿದ ಅಷ್ಟು ಸಣ್ಣ ತಪ್ಪಿಗೆ ವಧಿಸಿದವನಲ್ಲಿ ಅಂಥ—ನರಹತ್ಯೆಮಾಡುವಂಥ—ಭಯಂಕರ ಕೋಪೋದ್ರೇಕವು ಏಕೆ ಉಂಟಾಯಿತು ?—ಎಂದು ನ್ಯಾಯಾಧಿಪತಿಗಳಿಗೆ ಆಶ್ಚರ್ಯ. ವರ್ತಮಾನ ಪತ್ರಿಕೆಗಳು ಇದನ್ನು ಕೋಲಾಹಲದ ವರ್ತಮಾನವಾಗಿ ಪ್ರಕಟಿಸುತ್ತವೆ. ಅಷ್ಟು ಸಣ್ಣ ತಪ್ಪು ಅಷ್ಟು ಭೀಕರ ಕ್ರೋಧವನ್ನು ಏಕೆ ಕೆರಳಿಸಿತು ?—ಎನ್ನುವದನ್ನು ಮ್ಯಾಜಿಸ್ಟ್ರೇಟರೇ ಆಗಲಿ, ಪತ್ರಿಕೆಗಳೇ ಆಗಲಿ ವಿವರಿಸಲಾರವು. ವೇದಾಂತವು ಅದಕ್ಕೆ ಕಾರಣವನ್ನು ಹೇಳುತ್ತದೆ. ಮನೋ ಭೂಮಿಕೆಯ ಮೇಲೆ ಕೂಡು ಬಂಡವಾಳದ ಕಂಪೆನಿ ( Joint Stock Company ) ಇತ್ತೆಂದು ವೇದಾಂತವು ಹೇಳುತ್ತದೆ. ಜಾಯಿಂಟ್ ಸ್ಟಾಕ್ ಕಂಪನಿಗಳಲ್ಲಿ ಷೇರ್ ಹೋಲ್ಡರುಗಳು—ಷೇರುದಾರರು—ಬಂಡವಾಳ ಪಾಲುದಾರರುಗಳು ಅನೇಕರಿರುತ್ತಾರೆ. ಅದಕ್ಕೆ ಅಧ್ಯಕ್ಷರು ಅಥವಾ ವ್ಯವಸ್ಥಾಪಕರು ಒಬ್ಬರಿರುತ್ತಾರೆ. ಮೂಲ ಅಪರಾಧಿಯು ನಿಮ್ಮನ್ನು ರೇಗಿಸಿದಾಗ, ನೀವು ಅವನ ವಿರುದ್ಧವಾಗಿ ದ್ವೇಷೋದ್ರೇಕ ಭಾವಗಳನ್ನು ಹೊರ ಚೆಲ್ಲುತ್ತೀರಿ. ಅದರಿಂದ ಆ ಕೊಲೆಯ ವ್ಯವಹಾರದಲ್ಲಿ ನೀವೂ ನಿಮ್ಮ ಭಾಗದ ಕೋಪದ ಬಂಡವಾಳವನ್ನು ಹಾಕಿದ ಪಾಲುದಾರರಾಗುತ್ತೀರಿ. ಆ ದುಷ್ಟನು ಎರಡನೇ ಮನುಷ್ಯನನ್ನು ಅಪಮಾನ ಮಾಡಿದಾಗ, ಅವನೂ ತನ್ನ ಕ್ರೋಧದ ಪಾಲನ್ನು ಮೊದಲನೆಯವನ ಮೂಲ ಬಂಡವಾಳಕ್ಕೆ ಸೇರಿಸುತ್ತಾನೆ. ಹೀಗೆಯೆ ಮೂರನೆಯ ಮನುಷ್ಯನೂ ನಾಲ್ಕನೆಯವನೂ ಹತ್ತನೆಯವನೂ......... ನೂರನೆವನೂ ಆ ದುಷ್ಟನಿಂದ ಅವಮಾನ ಹೊಂದಿ ತಮ್ಮ ತಮ್ಮ ಕ್ರೋಧವನ್ನು ಸೇರಿಸುತ್ತಾ ಬಂದಾಗ, ಅವುಗಳ ಒಟ್ಟಿನ ಪರಿಣಾಮವು ಕಾರ್ಯಶೀಲವಾಗುವ ಸಮಯವು ಬರುತ್ತದೆ. ಆಗ ಆ ಸಂಸ್ಥೆಯ ಉದ್ದಿಷ್ಟವಾದ ವ್ಯವಹಾರವನ್ನು ನಡೆಸುವದಕ್ಕೆ ಸಮರ್ಥನಾದ ಒಬ್ಬ ಬಲಿಷ್ಠ ಮನುಷ್ಯನು ಬರುತ್ತಾನೆ. ಈ ಅಧ್ಯಕ್ಷನೂ ಅವಮಾನಿತನಾದಾಗ, ಆಧ್ಯಾತ್ಮಿಕ ಆಕರ್ಷಣೆಯ ನಿಯಮದ ಪ್ರಕಾರ, ಮೂಲ ಅಪರಾಧಿಯಿಂದ ಅಪಮಾನಿತರಾದ ಎಲ್ಲಾ ನೂರು ಜನರ ಕ್ರೋಧ ಭಾವಗಳೂ ಒಟ್ಟು ಸೇರಿ ಆ ಬಲಿಷ್ಠ, ಅಧಿಕಾರಿಯಲ್ಲಿಗೆ ಸೆಳೆಯಲ್ಪಟ್ಟು ಅವನ ಉದ್ರೇಕದ ಬೆಂಕಿಗೆ ಪೆಟ್ರೋಲ್ ಸುರಿದಂತಾಗಿ ಭಗ್ಗನೆ ಗುಂಡು ಹಾರಿಸಿ ಆ ನಿಂದಕನನ್ನು ಅವನು ಕೊಲೆ ಮಾಡಿ ತಾನೇ ರಾಜ್ಯದ ಮಹಾಪರಾಧಿಯಾಗುತ್ತಾನೆ. ರಾಜ್ಯ ಸರಕಾರವು ಅವನನ್ನು ಶಿಕ್ಷಿಸುತ್ತದೆ. ಆದರೆ ದೇವರ ದೃಷ್ಟಿಯಲ್ಲಿ ಅಥವಾ ಸತ್ಯದ ದೃಷ್ಟಿಯಲ್ಲಿ ಆ ಮೂಲ ಅಪರಾಧಿಯಿಂದ ಮನನೊಂದುಕೊಂಡು ಅವನನ್ನು ದ್ವೇಷಿಸಿದವರೆಲ್ಲರೂ—ಆ

ನೂರು ಜನರೂ—ಆ ಕೊಲೆಯಲ್ಲಿ ಷೇರುದಾರರಾದ ಕೊಲೆಪಾತಕರೇ ಸರಿ. ಕೊನೆಗೆ ಕೊಲೆ ಮಾಡಿದವನು ಎಷ್ಟು ಅಪರಾಧಿಯೋ ಅವನನ್ನು ದ್ವೇಷಿಸಿದವರೆಲ್ಲರೂ ಅಷ್ಟೇ ಅಪರಾಧಿಗಳು. ಆದ್ದರಿಂದ ಕೊಲೆ ಮಾಡದೇ ಇದ್ದ ಮಾತ್ರಕ್ಕೆ ಸಾಲದು ; ಯಾರನ್ನೂ ದ್ವೇಷಿಸಲೂ ಬಾರದು, ಎಂದು ಕ್ರಿಸ್ತನು ಹೇಳುತ್ತಾನೆ. ಆದ್ದರಿಂದಲೇ ಕೊಲೆಗೆ, ಕೊಲೆಗಾರನ ಕ್ರೋಧವು ಮಾತ್ರ ಕಾರಣವಾಗದೆ ಕೊಲೆಯಾದವನಿಂದ ನೊಂದಿದ್ದ ಎಲ್ಲರ ಕ್ರೋಧ ಭಾವಗಳೂ ಕಾರಣವಾಗುತ್ತವೆ. ಇದರಿಂದ, ಅಪಮಾನವು ಅಲ್ಪವಾದರೂ ಅದರಿಂದ ಉಂಟಾಗುವ ಪ್ರತಿಕ್ರಿಯಾತ್ಮಕ ಕೋಪೋದ್ರೇಕವು ಭಯಂಕರವಾಗಿ, ಪಿಶಾಚಿಯ—ಆವೇಶವಾದವನಂತೆ ಎಚ್ಚರ ತಪ್ಪಿ, ಹುಚ್ಚು ಕಾರ್ಯ ಮಾಡುತ್ತಾನೆ. ಕಡ್ಡಿಯಷ್ಟು ತಪ್ಪಿಗೆ ಗುಡ್ಡದಷ್ಟು ಸಿಟ್ಟು ಏಕೆ ಬಂದಿರಬಹುದೆಂದು ಜನರು ಆಶ್ಚರ್ಯಪಡುತ್ತಾರೆ.

ಈ ಜಗತ್ತಿನಲ್ಲಿ ಕೆಲವು ಕೊಲೆಗಾರರು ಆಗುವದೇ ಹೀಗೆ. ಜಗತ್ತಿನ ಇತಿಹಾಸವನ್ನು ನೋಡಿದರೆ, ಭಯೋತ್ಪಾದಕವಾದ ಒಂದು ಆಳಿಕೆಯೂ ರಕ್ತಪಾತದ ಒಂದು ರೌದ್ರ ಪ್ರಭುತ್ವವೂ ಮುಗಿದ ಮೇಲೆ ಸ್ವೇಚ್ಛಾವರ್ತಿಗಳಾದ ಜನಜಂಗುಳಿಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಕಠೋರವಾಗಿ ಆಳತಕ್ಕವರು ಬೇಕೆಂದು ಯೋಗ್ಯರಾದ ಜನರೆಲ್ಲರೂ ಕಾತರದಿಂದ ಹಂಬಲಿಸುವದು ಕಾಣುತ್ತದೆ. ಆ ಶಕ್ತಿ ಇರತಕ್ಕವರು ಬಹಳ ವಿರಳ. ಹಿಂದೆ, ಫ್ರಾನ್ಸಿನಲ್ಲಿ ಅಂಥಾ ಒಂದು ಪ್ರಸಂಗದಲ್ಲಿ, ಜನರ ಇಚ್ಛೆಯು ನೆಪೋಲಿಯನ್ ರೂಪದಲ್ಲಿ ಅವತರಿಸಿತು. ಅವನಲ್ಲಿ ಸಹಸ್ರಾರು ಜನರ, ಲಕ್ಷಾಂತರ ಜನರ ಇಚ್ಛಾಶಕ್ತಿ ಇದ್ದಿತು. ಅಂಥಾ ಮಹಾವೀರರಲ್ಲಿ ಆ ಮಹಾ ಶಕ್ತಿಯು ಏಕಿರುತ್ತದೆ?—ಎಂದರೆ ಲಕ್ಷಾಂತರ ಜನರ ಇಚ್ಛಾಶಕ್ತಿಯೇ ಅವನಲ್ಲಿ ಪ್ರತಿಫಲನವಾಗುವದರಿಂದ ಒಮ್ಮೆ ನೆಪೋಲಿಯನ್‌ನನ್ನು ಸೆರೆ ಹಿಡಿಯಬೇಕೆಂದು ಒಂದು ದೊಡ್ಡ ಸೈನ್ಯವೇ ಬಂದಿತು. ಅವನೊಬ್ಬನೇ ಮಹಾ ಧೈರ್ಯದಿಂದ, ವೀರಾವೇಶದಿಂದ, ನೇರವಾಗಿ ಮುನ್ನುಗ್ಗಿ ಹೋಗಿ "Avaunt" 'ನಡೆಯಿರಿ, ತೊಲಗಿರಿ'—ಎಂದು ಆಜ್ಞೆ ಮಾಡಿದನು. ಅವನನ್ನು ಬಂಧಿಸುವದಕ್ಕಾಗಿಯೇ ಬಂದಿದ್ದ ಸಹಸ್ರಾರು ಸೈನಿಕರು ಬೆಪ್ಪಾಗಿ ನಿಂತುಬಿಟ್ಟರು. ಇದು ಹೇಗೆ ಸಾಧ್ಯವೆಂದು ಜನರು ಆಶ್ಚರ್ಯಪಡಬಹುದು. ಇದು ವಾಸ್ತವ; ಇದರ ಕಾರಣವನ್ನು ವೇದಾಂತವು ವಿವರಿಸುತ್ತದೆ.

ಸಹಸ್ರಾರು ಜನರ ಭಾವನೆಗಳೂ ವಿಚಾರಗಳೂ ಇಚ್ಛೆಗಳೂ ಒಬ್ಬ ಮನುಷ್ಯನಲ್ಲಿ ಸಂಗ್ರಹವಾಗಿ ಅವನ ಮೂಲಕ ಅದ್ಭುತ ಕಾರ್ಯವನ್ನು ನಡೆಸುತ್ತವೆ. ಆದ್ದರಿಂದ ನೆಪೋಲಿಯನ್ ಆಗಲಿ, ಯಾವ ವೀರನೇ ಆಗಲಿ, ತನ್ನ ಶೌರ್ಯಕ್ಕೆಲ್ಲಾ ತಾನೇ ಕಾರಣನೆಂದು ಜಂಬಹೇಳಿಕೊಳ್ಳುವದಕ್ಕೆ ಅಧಿಕಾರವಿಲ್ಲ. ಎಲೈವೀರ! ನಿನ್ನಲ್ಲಿ ಲಕ್ಷಾಂತರ ಜನರ ಶಕ್ತಿ ಇದ್ದರೆ, ನೀನು ಲಕ್ಷಾಂತರ ಜನರಿಗೆ ಸಮಾನ. ಲಕ್ಷಾಂತರ ಜನರ ಭಾವನೆಯೂ ಇಚ್ಛೆಯೂ ನಿನ್ನ ದೇಹದಲ್ಲಿ ಕೆಲಸ ಮಾಡುತ್ತವೆ. ನಿನ್ನಲ್ಲಿ

ಅಂಥಾ ಅಸಾಧಾರಣ ದೈವಬಲ ಏನಿದೆ? ಲಕ್ಷಾಂತರ ಜನರ ಇಚ್ಛೆಯೇ ನಿನ್ನಲ್ಲಿ ಕೆಲಸಮಾಡುತ್ತಿದೆ. ಆಗಿನ ಕಾಲದಲ್ಲಿ ಆ ಜನರಿಗೆ ಮಹಾ ನಾಟಕಕಾರನಾದ ಒಬ್ಬ ಷೇಕ್ಸ್‌ಪಿಯರ್ ಬೇಕಾಗಿತ್ತು. ಷೇಕ್ಸ್‌ಪಿಯರ್ ಅವತರಿಸಿದ. ಆಗ ಜನರಿಗೆಲ್ಲಾ ನಾಟಕದ ಹುಚ್ಚು ಹಿಡಿದಿತ್ತು. ಅವರಿಗೆ ನಾಟಕಗಳೂ ನಾಟಕ ಬರೆಯತಕ್ಕವರೂ ಅಭಿನಯಿಸತಕ್ಕವರೂ ಬೇಕಾಗಿತ್ತು. ಆದ್ದರಿಂದ ಆಗಿನ ಜನರ ಭಾವನೆಗಳೂ ವಿಚಾರಗಳೂ ಆಲೋಚನೆಗಳೂ ಷೇಕ್ಸ್‌ಪಿಯರ್ ರೂಪದಿಂದ ತೋರಿಕೊಂಡವು. ಷೇಕ್ಸ್‌ಪಿಯರ್ ಆಗಲಿ, ಮತ್ತಾವನೇ ಮಹಾಪುರುಷನಾಗಲಿ ಒಂಟಿಯಾಗಿ ತೋರಿಕೊಳ್ಳುವದಿಲ್ಲ. ಷೇಕ್ಸ್‌ಪಿಯರ್‌ನ ಜೊತೆಗೆ ಮಾರ್ಲೋ ( Marlow ), ಬ್ಯೂಮಂಟ್ ( Beaumont ), ಫ್ಲೆಚರ್ ( Fletcher ) ಮೊದಲಾದ ಮೇಧಾವಿಗಳೂ ಪ್ರತಿಭಾವಂತರೂ ತತ್ತ್ವಜ್ಞಾನಿಗಳೂ ಆದವರ ಸಮಗ್ರ ತೇಜಃ ಪ್ರವಾಹವೇ ಇದೆ. ನಮ್ಮೆದುರಿಗೆ ನಾವು ಒಂದೇ ಬಗೆಯ ಸಾಹಿತ್ಯದ ಸಂಪೂರ್ಣ ಪ್ರಭುತ್ವವನ್ನೇ ಪಡೆದಿದ್ದೇವೆ. ಇಲ್ಲಿ, ಜನರ ಸಂದರ್ಭಗಳೂ ಸನ್ನಿವೇಶಗಳೂ ಒಂದು ದಿಶೆಯಲ್ಲಿ ಆಲೋಚನೆಗಳನ್ನೂ ಭಾವನೆಗಳನ್ನೂ ಹರಿಸುತ್ತವೆ ; ಈ ಎಲ್ಲಾ ಮನೋವೃತ್ತಿಗಳೂ ರಾಸಾಯನಿಕ ನಿಯಮದ ಪ್ರಕಾರ ಒಂದು ದೇಹದಲ್ಲಿ ಒಂದು ವ್ಯಕ್ತಿಯಲ್ಲಿ ಸಂಯೋಜಿತವಾಗಿ ಒಟ್ಟುಗೂಡಿ ಷೇಕ್ಸ್‌ಪಿಯರ್, ಕಾಳಿದಾಸರಂಥವರನ್ನು ತರುತ್ತವೆ. ಕೋಟಿ ಕೋಟಿ ಜನರ ಭಾವನೆಗಳೂ ಇಚ್ಛೆಗಳೂ ಬೇರೆ ಬೇರೆ ಶರೀರಗಳಲ್ಲಿ ಶೇಖರವಾಗದಿದ್ದರೆ ಸುಸಂಸ್ಕೃತ ವಾಗ್ವೈಖರಿಯ ಷೇಕ್ಸ್‌ಪಿಯರನೂ ಸಹಸ್ರಾರು ಜನ ಸಭಿಕರನ್ನು ಆಶ್ಚರ್ಯ ಭಯಭಕ್ತಿಗಳಲ್ಲಿ ಪರವಶರಾಗುವಂತೆ ಸೆರೆ ಹಿಡಿದಿಟ್ಟುಕೊಳ್ಳಬಲ್ಲ ಮಹಾವಾಗ್ಮಿಗಳೂ ಸಹಸ್ರಾರು ಜನರನ್ನು ತನ್ನ ವಶದಲ್ಲಿಟ್ಟುಕೊಳ್ಳಬಲ್ಲ ಜನನಾಯಕನೂ ಲಕ್ಷಾಂತರ ಜನರಿಗೆ ಒಂದು ಮಾತೇ ಶಾಸನವಾಗಬಲ್ಲ ಮಹಾ ಸೈನ್ಯಾಧಿಪತಿಯೂ ಕೋಟಿ ಕೋಟಿ ಜನರಿಗೆ ಶಕ್ತಿಯನ್ನೂ ಕಾರ್ಯೋತ್ಸಾಹವನ್ನೂ ತುಂಬಬಲ್ಲ ರಾಷ್ಟ್ರ ನಾಯಕನೂ ಹೇಗೆ ನಿರ್ಮಾಣವಾಗುತ್ತಿದ್ದರು? ಈ ದೃಷ್ಟಿಯಿಂದ ನೋಡಿದರೆ ಷೇಕ್ಸ್‌ಪಿಯರ್, ನೆಪೋಲಿಯನ್ ಮೊದಲಾದವರೆಲ್ಲಾ ನಿಮ್ಮಿಂದಲೇ ಸೃಷ್ಟಿಯಾದವರು. ನಿಮ್ಮ ಭಾವನೆಗಳೂ ವಿಚಾರಗಳೂ ಅವರ ಭಾವನೆಗಳೂ ವಿಚಾರಗಳೂ ಆಗುತ್ತವೆ. ಇವೆಲ್ಲಾ ಐತಿಹಾಸಿಕ ಸತ್ಯಗಳು ; ನಿತ್ಯವೂ ನಮ್ಮ ಸುತ್ತಲೂ ಇವನ್ನೇ ನೋಡುತ್ತೇವೆ. ಹೀಗೆ ಮಾನಸ ಭೂಮಿಕೆಯ ಮೇಲೆ ನೀವೆಲ್ಲರೂ ಒಂದೇ.

ಕ್ರೈಸ್ತ ಪುಣ್ಯಭೂಮಿಯಾದ ಪ್ಯಾಲೆಸ್ಟೈನನ್ನು ಮಹಮ್ಮದೀಯರಿಂದ ಹಿಂದಕ್ಕೆ ಕಿತ್ತುಕೊಳ್ಳಲು ಕ್ರೈಸ್ತರು ಕೈಕೊಂಡ ದಂಡಯಾತ್ರೆಗಳು ( Crusade ) ಹೇಗೆ ನಡೆದವು? ಜೆರೂಸಲೆಂನ ಸ್ಥಿತಿಯನ್ನು ನೋಡಿ ಒಬ್ಬ ಕ್ರೈಸ್ತನಿಗೆ ತುಂಬಾ ದುಃಖವಾಯಿತು. ಅವನು ಯೂರೋಪಿಗೆ ಹಿಂದಿರುಗಿ ಬಂದು, ಜೆರೂಸಲೆಂನ ಸ್ಥಿತಿಯನ್ನು

ಯೂರೋಪ್ ಕ್ರೈಸ್ತರಿಗೆ ಮನಸ್ಸು ಕರಗುವಂತೆ ಬೋಧಿಸಿ, ಅತ್ತುಕರೆದು, ಗೋಳಾಡಿದನು. ಇದೆಲ್ಲಾ ಒಬ್ಬ ಮನುಷ್ಯನ ಭಾವನೆ—ವೇದನೆ. ಇದು ಜನರಲ್ಲಿ ಸಾಂಕ್ರಾಮಿಕವಾಯಿತು. ಒಬ್ಬ ಮನುಷ್ಯನ ಭಾವನೆಯು ಅನೇಕರ ಭಾವನೆಯಾಯಿತು. ಎಲ್ಲರೂ ಮಹಮ್ಮದೀಯರ ವಿರುದ್ಧವಾಗಿ ಯುದ್ಧ ಹೂಡಿದರು. ಕ್ರೈಸ್ತರ 'ಕ್ರೂಸೇಡ್ಸ್' ಧರ್ಮಯುದ್ಧಗಳು ಉಂಟಾದ ಬಗೆ ಹೀಗೆ. ನಿಮ್ಮ ಸ್ವಾತಂತ್ರ್ಯ ಯುದ್ಧದ ಕಾರಣವಾದರೂ ಏನು? ಇದೇ ರೀತಿ. ಜನರು ಯಾವಾಗ ಅವನೊಡನೆ ಒಪ್ಪಲಿಲ್ಲವೋ ಆಗ, ಅಮೆರಿಕಾದ ಮೊದಲನೆಯ ಕಾಂಗ್ರೆಸ್ ಅಧ್ಯಕ್ಷನು ಕತ್ತಿಯನ್ನು ಹಿರಿದನು. ಅವನು ಒರೆಯಿಂದ ಕತ್ತಿಯನ್ನು ಹಿರಿದು "ನಾನೊಬ್ಬನು ಮಾತ್ರ ಯುದ್ಧ ಮಾಡುವದಕ್ಕೇ ನಿಶ್ಚಯಿಸಿದ್ದೇನೆ; ನನಗೆ ಬೇಕಾದುದು ಯುದ್ಧ, ಯುದ್ಧ, ಯುದ್ಧ". ಎಂದು ಘೋಷಿಸಿದ ಕೂಡಲೇ ಎಲ್ಲಾ ಜನರೂ ಅದರಿಂದ ಪ್ರಭಾವಿತರಾದರು. ಯುದ್ಧದ ವಿರುದ್ಧವಾಗಿಯೂ ಅಧ್ಯಕ್ಷರ ವಿರುದ್ಧವಾಗಿಯೂ ಇದ್ದ ಕಾಂಗ್ರೆಸ್ ಸದಸ್ಯರೇ ಅಧ್ಯಕ್ಷರ ಇಚ್ಛೆಗೂ ತೀರ್ಮಾನಕ್ಕೂ ವಿಧೇಯರಾಗಿ ನಡೆದುಕೊಳ್ಳಬೇಕಾಯಿತು. ಇಲ್ಲಿ ಒಂದು ಸ್ಪಷ್ಟವಾಗುತ್ತದೆ. ನಿಮ್ಮೆಲ್ಲರ ಹೃದಯಗಳೂ ಮನಸ್ಸುಗಳೂ ಒಂದಾಗದಿದ್ದರೆ, ಅಂಥಾ ಅದ್ಭುತ ಕಾರ್ಯಗಳು ಹೇಗೆ ನಡೆಯುತ್ತಿದ್ದವು? ನಾವೆಲ್ಲರೂ ಒಂದೇ. ಇದನ್ನು ತೀವ್ರವಾಗಿ ಭಾವಿಸಿರಿ.

ನಾವೀಗ ಇನ್ನೊಂದು ಭೂಮಿಕೆಗೆ ಬರೋಣ. ನಿಮ್ಮ ಗಾಢ ನಿದ್ರೆಯಲ್ಲಿ ನೀವೆಲ್ಲರೂ ಒಂದೇ. ನಿದ್ರೆಯು ಮಹಾ ಸಮತಾವಾದಿಯು, ಸಮತಾ ಸಾಧಕವು. ಗಾಢನಿದ್ರೆಯಲ್ಲಿ ಯಾವ ಭೇದವೂ ಉಳಿಯುವದಿಲ್ಲ. ಹಂಸತೂಲಿಕಾತಲ್ಪದಲ್ಲಿ ಮೃದುವೂ ನಯವೂ ಆದ ಮಖಮಲ್ಲಿನ ಹಾಸಿಗೆಯ ಮೇಲೆ ಭವ್ಯವಾದ ಅಮೂಲ್ಯ ಹೊದಿಕೆಗಳನ್ನು ಹೊದ್ದುಕೊಂಡು ಮಲಗಿರುವ ರಾಜನೂ, ರಾಜಬೀದಿಯ ಪಕ್ಕದ ಕಾಲುನಡಿಗೆಯ ಹಾದಿಯಲ್ಲಿ ಮಲಗಿರುವ ಬಡ ಭಿಕಾರಿಯೂ ನಿದ್ರೆಯ ಸಮಯದಲ್ಲಿ ಒಂದೇ ಸ್ಥಿತಿಯಲ್ಲಿರುತ್ತಾರೆ. ಗಾಢ ನಿದ್ರಾಸ್ಥಿತಿಯಲ್ಲಿ ಅವರಿಬ್ಬರ ಸ್ವರೂಪವೇನು? ವಿಚಾರಮಾಡಿ. ಅವರಿಬ್ಬರಿಗೂ ಸ್ವಲ್ಪವಾದರೂ ಭೇದವಿದೆಯೆ? ಇಬ್ಬರೂ ಒಂದೇ ಸಮಾನರು. ಹಾಗಾದರೆ, ನಿಮ್ಮ ಗಾಢನಿದ್ರೆಯಲ್ಲಿ ನೀವೆಲ್ಲರೂ ಒಂದೇ, ನಿಮ್ಮ ಎಚ್ಚರದಲ್ಲಿ ನಿಮ್ಮೆಲ್ಲರ ಭೌತಿಕ ದೇಹಗಳೂ ಒಂದೇ, ಕನಸಿನ ರಾಜ್ಯದಲ್ಲಿ ಜೀವಿಸಿರುವ ನಿಮ್ಮೆಲ್ಲರ ಮನಸ್ಸುಗಳೂ ಭಾವನೆಗಳೂ ಒಂದೇ. ಈಗ ನಿಜವಾದ ಆತ್ಮನನ್ನು, ನಿಜವಾದ ಸತ್ಯವನ್ನು ವಿಚಾರಮಾಡೋಣ. ಓ! ನಿಜವಾದ ಆತ್ಮನಲ್ಲಿ ಮಾತಿಗೂ ಭೇದಕ್ಕೂ ಅವಕಾಶವೇ ಇಲ್ಲ. ಅಲ್ಲಿ ಅಲೆಯೂ ಇಲ್ಲ; ಸುಳಿಯೂ ಇಲ್ಲ. ಮನಸ್ಸನ್ನೂ ಮಾತನ್ನೂ ಎಲ್ಲಾ ಭೇದಗಳನ್ನೂ ಮೀರಿದ ಆತ್ಮಭೂಮಿಕೆಯಲ್ಲಿ ನಾವೆಲ್ಲರೂ ಒಂದೇ. ನೀವು ವ್ಯವಹಾರ ದೃಷ್ಟಿಯಿಂದ ಹೀಗೆ ಹೇಳಬಹುದು: "ಎಲ್ಲರೂ ಒಂದೇ ಎನ್ನುವದು ಹೇಗೆ? ನೀವು ಏನು ಯುಕ್ತಿಗಳನ್ನು ಹೇಳಿದರೂ

ನಮಗೆ ಒಪ್ಪಿಗೆಯಾಗುವದಿಲ್ಲ. ನನ್ನ ಮಗನನ್ನು ನನ್ನವನು ಎನ್ನುವಂತೆ ಬೇರೆಯ ಹುಡುಗನನ್ನು ನನ್ನವನು ಎನ್ನುವದು ಹೇಗೆ? ನೀವು, ಎಲ್ಲರೂ ನಿಮ್ಮವರೇ ಎಂದು ಹೇಳುವದಾದರೆ ನಿಮ್ಮದು ತಪ್ಪು. ಎಲ್ಲರೂ ಒಂದೇ ಅಲ್ಲ." ನೀವು ಹೀಗೆ ಹೇಳಿದರೆ, ಇದು ಸರಿಯಲ್ಲ. ನಿಮ್ಮದು ತಪ್ಪು ತಿಳಿವಳಿಕೆ. ನಿಮ್ಮ ಮಗನು ಎಷ್ಟರ ಮಟ್ಟಿಗೆ ನಿಮ್ಮವನೋ ನೀವು ಬೇರೆಯವರೆಂದು ತಿಳಿದವರೂ ಅಷ್ಟರ ಮಟ್ಟಿಗೇ ನಿಮ್ಮವರು. ನಿಮ್ಮ ಹಿಂದಿನ ಜನ್ಮಗಳಲ್ಲಿ ನೀವು ಒಬ್ಬರೊಡ ನೊಬ್ಬರು ಸಹೋದರರಾಗಿಯೋ ಮಕ್ಕಳಾಗಿಯೋ ಹೆಣ್ಣು ಮಕ್ಕಳಾಗಿಯೋ ತಂದೆ ಗಳಾಗಿಯೋ ಎಷ್ಟೆಷ್ಟು ಸಲ ಸಂಬಂಧಪಟ್ಟಿದ್ದಿರೋ? ನಿಮಗೇನಾದರೂ ಅದು ಗೊತ್ತಿದೆಯೆ? ಈಗ ನಿಮಗೆ ಶತ್ರುವಾಗಿರತಕ್ಕವನು ಹಿಂದಿನ ಜನ್ಮದಲ್ಲಿ ನಿಮ್ಮ ತಂದೆಯೋ ಮಗನೋ ಆಗಿರಬಹುದು. ಈಗ ನಿಮ್ಮ ತಂದೆಯಾಗಿರತಕ್ಕವರು ಮುಂದಿನ ಜನ್ಮದಲ್ಲಿ ತಂದೆಯಾಗದೇ ಇರಬಹುದು. ಮುಂದಿನ ಜನ್ಮದಲ್ಲಿ ನೀವು ಬೇರೆ ತಂದೆ ತಾಯಿಗಳಲ್ಲಿ ಹುಟ್ಟಬಹುದು. ನಿಮ್ಮ ಭಾವನೆಗಳೂ ಸಹಾನುಭೂತಿ ಗಳೂ ನಿರಂತರವಾಗಿ ಬದಲಾವಣೆ ಹೊಂದುತ್ತಿರುವಂತೆ ನಿಮ್ಮ ಬಂಧುಗಳೂ ಸ್ನೇಹಿ ತರೂ ಸಹೋದರರೂ ಸಹೋದರಿಯರೂ ನಿರಂತರವಾಗಿ ಬದಲಾಯಿಸುತ್ತಿರು ತ್ತಾರೆ. ಒಂದೇ ಮನೆಯಲ್ಲಿ ಕೆಲವು ಬಾಲಕಿಯರ ಮತ್ತು ಬಾಲಕರ ಜೊತೆಯಲ್ಲಿ ಹುಟ್ಟಿದವರು, ಅವರನ್ನು ಮತ್ತೆಂದೂ ನೋಡದಂತೆ, ಜೀವಮಾನವನ್ನೆಲ್ಲಾ ಅವ ರಿಂದ ಬೇರೆಯಾಗಿಯೇ ಕಳೆಯುವದಿಲ್ಲವೆ? ಈ ದೇಶದಲ್ಲಿ ಹುಟ್ಟಿದವರು ತಮ್ಮ ಜೀವಮಾನವನ್ನೆಲ್ಲಾ ಬೇರೆ ದೇಶಗಳಲ್ಲಿ ಕಳೆಯುವದಿಲ್ಲವೆ? ಬೇರೆ ದೇಶಗಳಲ್ಲಿ ಹುಟ್ಟಿ ದವರು ಅವರ ಆಧ್ಯಾತ್ಮಿಕ ಬಂಧುಗಳಾಗಿರುವದೇ ಇದಕ್ಕೆ ಕಾರಣ. ಆದ್ದರಿಂದ ನಿಮ್ಮ ಸಹೋದರ, ಸಹೋದರಿಯರಿಗೂ ಗಂಡ ಹೆಂಡರಿಗೂ ಮಾತ್ರ ಈ ಬಂಧು ಭಾವವನ್ನು ಸೀಮಿತ ಮಾಡಬಾರದು. ಎಲ್ಲರೂ ಪ್ರತಿಯೊಬ್ಬರೂ ನಿಮ್ಮ ಆತ್ಮರೇ. ಇದನ್ನು ನಿಮ್ಮ ಅನುಭವದಲ್ಲಿ ಮನಗಾಣಿರಿ. ವಿಜ್ಞಾನವು ಇದನ್ನೇ ಸಿದ್ಧಮಾಡಿ ತೋರಿಸುತ್ತದೆ.

ರಾಮನು ಈಗ, ಇದುವರೆಗೆ ಹೇಳಿದ್ದನ್ನೆಲ್ಲಾ ಸಂಗ್ರಹಿಸಿ ಹೇಳುವದೇನೆಂದರೆ: ಅನೇಕ ಅವಯವಗಳಿಂದ ಕೂಡಿದ, ನೀವೆಂದುಕೊಳ್ಳುವ ನಿಮ್ಮ ದೇಹವನ್ನು ಒಟ್ಟು ಒಂದು, ಅಖಂಡವಾದ ಒಂದು, ಎಂದು ತಿಳಿದಿದ್ದೀರಿ. ನಿಮ್ಮ ದೇಹದ ಎಲ್ಲಾ ಕಣಗಳಲ್ಲಿಯೂ ಅಖಂಡತೆಯ ನಿಯಮವೇ ವ್ಯಾಪಿಸಿದೆ. ಎಲ್ಲಾ ಕಣಗಳೂ ದೇಹ ದಲ್ಲಿ ಅನ್ಯೋನ್ಯ ಎಡೆಬಿಡದ—ತುಂಡಾಗದ—ಸಂಬಂಧ ಹೊಂದಿವೆ. ಆದ್ದರಿಂದ ಅನೇಕ ಅವಯವಗಳಿಂದಲೂ ಭಾಗಗಳಿಂದಲೂ ಕೂಡಿಕೊಂಡಿದ್ದರೂ ಎಲ್ಲಾ ಕಣಗಳಲ್ಲಿಯೂ ಅಖಂಡ ನಿಯಮವೇ ತುಂಬಿರುವದರಿಂದ ನಮ್ಮ ದೇಹವು ಒಟ್ಟು ಒಂದು ಅಖಂಡ ವಸ್ತುವೆಂಬ ಭಾವನೆ ಬರುತ್ತದೆ; ಅದು ಅವಿಭಕ್ತವಾದ ಇಡಿಯ

ವಸ್ತುವೆಂದು ತೋರುತ್ತಿದೆ. ಈ ಆಧಾರದ ಮೇಲೆ ನಮ್ಮ ದೇಹದಲ್ಲಿ ತಲೆಯಿಂದ ಕಾಲಿನ ವರೆಗೂ ಒಂದೇ ಶಕ್ತಿಯು—ಆತ್ಮವು—ತುಂಬಿದೆಯೆಂದು ಅನುಭವ ಬರುತ್ತದೆ. ವಿಕಾಸಹೊಂದದಿರುವ ಅತ್ಯಂತ ಕನಿಷ್ಠ ಜೀವದ್ರವ್ಯದ ( Protoplasm ) ಪಕ್ಕದಲ್ಲಿ ಅದಕ್ಕಿಂತಲೂ ಹೆಚ್ಚು ವಿಕಸಿತವಾದ ಜೀವದ್ರವ್ಯವನ್ನೂ ಅದರ ಪಕ್ಕದಲ್ಲಿ ಅದಕ್ಕಿಂತಲೂ ಹೆಚ್ಚು ವಿಕಸಿತವಾದ ಜೀವದ್ರವ್ಯವನ್ನೂ ಹೀಗೆ ಈ ವಿಶ್ವದಲ್ಲಿ ಎಲ್ಲ ವಸ್ತುಗಳನ್ನೂ ಸರಿಯಾದ ಕ್ರಮದಲ್ಲಿ ವ್ಯವಸ್ಥೆ ಮಾಡುವದು ಸಾಧ್ಯವಾದರೆ, ಈ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲಿಯೂ ಅವಿಚ್ಛಿನ್ನತೆಯ—ಸಂತತ ಪ್ರವಾಹದ ಧಾರಾಕಾರ ನಿಯಮವೇ ಹರಿಯುತ್ತಿದೆಯೆಂದೂ ಬೇರೆ ಬೇರೆ ವಸ್ತುಗಳು ಪರಸ್ಪರ ಹೀಗೆಯೇ ಸಂಬಂಧಪಟ್ಟಿವೆಯೆಂದೂ ವಿಜ್ಞಾನವು ಸಿದ್ಧಮಾಡಿ ತೋರಿಸುತ್ತದೆ. ಎಷ್ಟು ಮಾತ್ರವೂ ಮುರಿಯಲಿಕ್ಕೂ ಮೀರಲಿಕ್ಕೂ ಬಾರದ ಅವಿಚ್ಛಿನ್ನ —ನೈರಂತರ್ಯ ನಿಯಮವೇ ಇಡೀ ಜಗತ್ತಿಗೆ ಆಧಾರವಾಗಿದೆ. ಹೀಗಿರುವದರಿಂದ ಇಡಿಯ ವಿಶ್ವವೇ ಒಡೆಯಲಿಕ್ಕಾಗದ—ಅವಿಭಾಜ್ಯ—ಅಖಂಡೈಕ ವಸ್ತುವು. ಇಡಿಯ ಒಂದು ಶರೀರದಲ್ಲಿ ಕಣ್ಣು, ಕಿವಿ, ಕೈ, ಕಾಲು ಮೊದಲಾದ ಎಲ್ಲಾ ಅವಯವಗಳಲ್ಲಿಯೂ ಒಂದೇ ಆತ್ಮವು ತುಂಬಿದೆಯೆಂದು ಹೇಗೆ ನೀವು ಅವಶ್ಯವಾಗಿ ನಂಬಲೇ ಬೇಕಾಗಿದೆಯೋ ಹಾಗೆ ಸಮಗ್ರ ವಿಶ್ವವು ಅಖಂಡೈಕ ವಸ್ತುವಾಗಿರುವದರಿಂದ ಇದರಲ್ಲಿಯೂ ಅತ್ಯಂತ ಸೂಕ್ಷ್ಮವಾದ ಜೀವಾಣುವಿನಿಂದ ಅತ್ಯಂತ ಶ್ರೇಷ್ಠ ದೇವತೆಯವರೆಗೂ ಒಂದೇ ಆತ್ಮವು ತುಂಬಿದೆಯೆಂದು ನಂಬಲೇ ಬೇಕಾಗಿದೆ. ಆದ್ದರಿಂದ ಆ ಮಹಾದೇವನ ಆತ್ಮವೂ ಅತ್ಯಂತ ಕ್ಷುದ್ರವಾದ ಕ್ರಿಮಿಯ ಆತ್ಮವೂ ಒಂದೇ. ಅಲ್ಲಿ ಆತ್ಮನ ದೃಷ್ಟಿಯಿಂದ ನೀವೆಲ್ಲರೂ ಒಂದೇ.

ಈಗ, ಇದುವರೆಗೆ ಮಾನವನ ಭ್ರಾತೃತ್ವವನ್ನು ಸತ್ಯವೆಂದು ಸ್ಥಾಪಿಸುವದಕ್ಕೆ ಸಾಧಕವಾದ ಕಾರಣಗಳನ್ನೂ ಯುಕ್ತಿಗಳನ್ನೂ ಕೆಲವು ಮಟ್ಟಿಗೆ ನಿಮ್ಮೆದುರಿಗೆ ಮಂಡಿಸಿದ್ದಾಗಿದೆ. ಇಲ್ಲಿ ರಾಮನು ಆ ಸತ್ಯವನ್ನು ವ್ಯವಹಾರದಲ್ಲಿ ಅನ್ವಯಿಸುವದನ್ನೂ ಉಪಯೋಗಿಸುವದನ್ನೂ ಒತ್ತಿ ಹೇಳುತ್ತಾನೆ. ನೀವು ಬೌದ್ಧಿಕವಾಗಿ ವಿಚಾರದಿಂದ ಈ ಸತ್ಯವನ್ನು ಒಪ್ಪಿಕೊಳ್ಳದಿದ್ದರೆ, ನೈತಿಕ ನಿಯಮಗಳು ನಿಮ್ಮ ಮೇಲೆ ಈ ಸತ್ಯವನ್ನು ಒತ್ತಾಯದಿಂದ ಪ್ರಯೋಗಿಸುತ್ತವೆ. ನೀವು ಬದುಕಬೇಕಾದರೆ ಇದರಂತೆ ನಡೆಯಲೇ ಬೇಕು; ಇಲ್ಲವಾದರೆ ಸಾಯಬೇಕು. ಬೇರೆ ಮಾರ್ಗವೇ ಇಲ್ಲ. ಒಮ್ಮೆ ನಮ್ಮ ದೇಹದಲ್ಲಿರುವ ಕೈಗೆ ಸ್ವಾರ್ಥ ಬುದ್ಧಿಯು ಬಂದು ವಿಶ್ವಭ್ರಾತೃತ್ವದ ಅಥವಾ ಏಕತ್ವದ ನಿಯಮವನ್ನು ಮುರಿಯಬೇಕೆಂದು "ನಾನು ದಿವಸವೆಲ್ಲಾ ಕಷ್ಟಪಟ್ಟು ಕೆಲಸ ಮಾಡಿ ಆ ಶ್ರಮದ ಫಲವಾಗಿ ಬಂದುದ್ದನ್ನೆಲ್ಲಾ ಸ್ವಲ್ಪವೂ ಶ್ರಮ ಪಡದೇ ಇರುವ ಈ ಬಾಯಿಗೂ ಹೊಟ್ಟೆಗೂ ತಿನ್ನಿಸಬೇಕಾಗಿದೆ ; ಈ ದೇಹದಲ್ಲಿ ಸೋಮಾರಿಗಳಾಗಿರುವ ಎಲ್ಲಾ ಭಾಗಗಳೂ ನನ್ನಿಂದ ಲಾಭ ಪಡೆಯುತ್ತಿವೆ; ಆದ್ದರಿಂದ ನಾನು ಸಂಪಾದಿಸಿದ್ದನ್ನು

ಈ ಬಾಯಿಗೂ ಹಲ್ಲುಗಳಿಗೂ ನಾಲಿಗೆಗೂ ಹೊಟ್ಟೆಗೂ ಕೊಡದೆ ನಾನೇ ಎಲ್ಲವನ್ನೂ ತಿನ್ನುತ್ತೇನೆ," ಎಂದು ವಿಚಾರಮಾಡಿ ತೀರ್ಮಾನಿಸಿತು. ಊಟಕ್ಕೆ ಕುಳಿತಾಗ ತಟ್ಟೆಯಲ್ಲಿ ಬಡಿಸಿದ ಹಣ್ಣು, ಹಾಲು, ತರಕಾರಿ, ಮೇಲೋಗರ ಮೊದಲಾದ ಎಲ್ಲವನ್ನೂ ಬಾಯಿಗೆ ತಿನ್ನಿಸದೇ ಕೈಯು ತಾನೇ ತಿನ್ನಬೇಕಾಯಿತು. ಆದ್ದರಿಂದ ಕೈಯು ಸೂಜಿಯಿಂದ ತನ್ನಲ್ಲಿ ಒಂದು ತೂತುಮಾಡಿಕೊಂಡು ಹಾಲನ್ನು ಅದರಲ್ಲಿ ಹೊಯ್ದುಕೊಂಡಿತು. ಬಾಯಿಗೆ ತನ್ನಿಂದ ಪ್ರಯೋಜನವಾಗಬಾರದೆಂದು ಹಾಲನ್ನು ತನ್ನಲ್ಲಿಯೇ 'ಇಂಜೆಕ್ಟ್' ಮಾಡಿಕೊಂಡಿತು. ಆದರೆ ಅದರಿಂದ ಕೈಗೆ ತುಂಬಾ ಬಾಧೆಯಾಯಿತೇ ಹೊರತು ಪ್ರಯೋಜನವಾಗಲಿಲ್ಲ. ಅದು ಇನ್ನೊಂದು ರೀತಿಯಿಂದ ಪ್ರಯತ್ನ ಮಾಡಿತು; ತಾನು ಪುಷ್ಟವಾಗುವದಕ್ಕಾಗಿ ಜೇನು ತುಪ್ಪವನ್ನು ಸೇವಿಸಬೇಕೆನಿಸಿತು. ಜೇನು ತುಪ್ಪವು ಬರುವದು ಎಲ್ಲಿಂದ? ಜೇನುಹುಳದಿಂದ. ಆದ್ದರಿಂದ ಕೈಯು ಜೇನು ಹುಳವನ್ನು ಹಿಡಿದು ತಂದು, ಕಡಿಸಿಕೊಂಡಿತು. ಕೈಯು ಆ ವಿಷದಿಂದಲೂ ನೋವಿನಿಂದಲೂ ಬಾತುಕೊಂಡು ಪುಷ್ಟವಾಯಿತು. ಎಲ್ಲಾ ಜೇನು ತುಪ್ಪವೂ ಕೈಯೊಳಗೇ ಇದ್ದಂತಾಯಿತು! ಆದರೆ ಅದಕ್ಕೆ ಬಹಳ ವ್ಯಥೆಯಾಯಿತು. ಕೈಯು ಈ ರೀತಿಯ ಅವಿವೇಕದಿಂದ ಬಹಳ ಸಂಕಟಪಟ್ಟ ಮೇಲೆ ಅದಕ್ಕೆ ಸ್ವಲ್ಪ ವಿವೇಕ ಬಂದಿತು. ಆಗ ಕೈಯು "ಆಹಾ! ನಾನು ಸಂಪಾದಿಸಿದ್ದನ್ನೆಲ್ಲಾ ನಾನೊಬ್ಬನೇ ತಿನ್ನಬಾರದು. ನಾನು ದುಡಿದದ್ದೆಲ್ಲಾ ಬಾಯಿಯಿಂದ ಹೊಟ್ಟೆಯೊಳಗೆ ಹೋಗಬೇಕು. ಆ ಆಹಾರವು ಅಲ್ಲಿ ಜೀರ್ಣವಾಗಬೇಕು; ರಕ್ತಗತವಾಗಬೇಕು. ಅದರಿಂದ ಪೋಷಕದ್ರವ್ಯವು ಎಲ್ಲಾ ಅವಯವಗಳಲ್ಲಿಯೂ ವ್ಯಾಪಿಸಿ ಇಡಿಯ ದೇಹವು ತುಷ್ಟಿಯನ್ನೂ ಪುಷ್ಟಿಯನ್ನೂ ಶಕ್ತಿಯನ್ನೂ ಪಡೆಯಬೇಕು. ಅದರಿಂದಲೇ ನಾನೂ ತುಷ್ಟಿಯನ್ನೂ ಪುಷ್ಟಿಯನ್ನೂ ಶಕ್ತಿಯನ್ನೂ ಆರೋಗ್ಯವನ್ನೂ ಪಡೆಯಬಹುದು; ಅದಿಲ್ಲದೆ ಬೇರೆ ದಾರಿಯೇ ಇಲ್ಲ." ಎಂದು ವಿಚಾರಮಾಡಿ ಸಮಾಧಾನ ಹೊಂದಿತು. ತನ್ನ ಆತ್ಮವು ತನ್ನೊಳಗೆ ಮಾತ್ರವೇ ಪರಿಮಿತವಾಗಿಲ್ಲ; ಇಡೀ ದೇಹದ ಆತ್ಮವು ತೃಪ್ತವಾದಾಗ ತನ್ನ ಆತ್ಮವು ತೃಪ್ತವಾಗುತ್ತದೆ; ತನ್ನ ಆತ್ಮವೇ ಕಣ್ಣು, ಕಿವಿ, ಮೂಗು ಮೊದಲಾದ ಎಲ್ಲಾ ಅವಯವಗಳಿಗೂ ಇಡಿಯ ದೇಹಕ್ಕೂ ಆತ್ಮವಾಗಿದೆ – ಎನ್ನುವದನ್ನು ಕೈಯು ಒತ್ತಾಯದಿಂದ ಒಪ್ಪಲೇಬೇಕಾಯಿತು. ಆದ್ದರಿಂದ ಅವಿವೇಕಿಯೂ ಸ್ವಾರ್ಥಿಯೂ ಆದ ಕೈಯು ಮಾಡಿದ ವಿಚಾರವನ್ನೂ ವಾದವನ್ನೂ ಯಾರು ಸಾಧನೆಮಾಡಿದರೂ ಸಂಕಟಪಡಬೇಕಾಗುತ್ತದೆ. ಮಾನವಕುಲದ ಒಟ್ಟಿನ ಸಂಬಂಧದಿಂದ ಯಾರು ಪ್ರತ್ಯೇಕವಾಗಿರುವದಕ್ಕೂ ಆ ದೈವೀ ನಿಯಮವು ಅವಕಾಶ ಕೊಡುವದಿಲ್ಲ. ಎಲ್ಲರೊಡನೆ ನಾನು ಒಂದಲ್ಲವೆಂದು ಭಾವಿಸಿದ ಕೂಡಲೇ ಅತ್ಯಂತ ಪವಿತ್ರವಾದ ಸತ್ಯಕ್ಕೆ ಅಪಚಾರಮಾಡಿದಂತಾಗುತ್ತದೆ. ಗಿರಾಕಿಗಳ ಹಿತವನ್ನು ತಮ್ಮ ಹಿತವೆಂದು ಕಾಣದಿರುವ ವ್ಯಾಪಾರಿಯನ್ನು ಜನರು ತಿರಸ್ಕರಿಸಿ ಕೈಬಿಡುತ್ತಾರೆ. ವ್ಯಾಪಾರಿಯೂ ತನಗೆ ತಾನು ಹಾನಿಮಾಡಿಕೊಂಡಂತೆ ಆಗುತ್ತದೆ. ನೀವು

ನಿಮ್ಮ ಜೀವನದಲ್ಲಿ ಇದನ್ನು ಅರಿತರೆ ಮಾತ್ರ ಅಭಿವೃದ್ಧಿಯನ್ನು ಹೊಂದುತ್ತೀರಿ. ಓ ಕೈಯೇ ! ನಿನ್ನ ಆತ್ಮವೇ ಇಡಿಯ ವಿಶ್ವದ ಆತ್ಮವು. ನಿನ್ನ ಆತ್ಮವೇ ಕಣ್ಣು, ಕಿವಿ, ಕಾಲು, ಹಲ್ಲು, ಮೊದಲಾದ, ದೇಹದ ಎಲ್ಲಾ ಅವಯುವಗಳಿಗೂ ಆತ್ಮವು. ಇದನ್ನು ಅರಿತು ಭಾವಿಸಿ. ಶೋಕ—ಮೋಹಗಳನ್ನು ಮೀರಿ, ನೀವು ಸುಖಿಗಳಾಗಬೇಕಾದರೆ, ಪ್ರತಿಯೊಬ್ಬರೊಡನೆಯೂ ಎಲ್ಲರೊಡನೆಯೂ ನೀವು ಒಂದಾಗಿರುವದನ್ನು ಅರಿತು ಭಾವಿಸಿ, ಅನುಭವದಲ್ಲಿ ಅಳವಡಿಸಿಕೊಳ್ಳಬೇಕು. ನೀವು ಈ ಏಕತ್ವವನ್ನು ಭಾವಿಸಿ ಅನುಭವದಲ್ಲಿ ತಂದು ಕೊಂಡರೆ, ಈ ಸತ್ಯದ ಮೇಲೆ ನಿಮ್ಮ ಮನಸ್ಸನ್ನು ನೀವು ಸಂಯಮಮಾಡಿದರೆ, ಕೈಯು ತನ್ನ ಮೈಯ ಯಾವ ಭಾಗಕ್ಕಾದರೂ ಕೂಡಲೇ ಸಹಾಯಮಾಡುವಂತೆ, ನಿಮ್ಮ ಸುತ್ತಲೂ ಇರತಕ್ಕವರು ನಿಮ್ಮ ಸಹಾಯಕ್ಕೆ ಬಂದೇ ಬರುತ್ತಾರೆಂಬುದನ್ನು ನಿಮ್ಮ ಸಾಧನವೂ ಅನುಭವವೂ ತೋರಿಸಿಕೊಡುತ್ತದೆ. ಎಲ್ಲರ ಆತ್ಮವೇ ತನ್ನ ಆತ್ಮವೆಂದು ಭಾವಿಸುವವನಿಗೆ ಅವಶ್ಯವಾದಾಗ ಕೂಡಲೇ ಯಾರಿಂದ ಲಾದರೂ ಸಹಾಯವು ಒದಗಿಯೇ ಒದಗುತ್ತದೆ. ಇದು ಅನುಭವದ ವಿಷಯ ವಾದ ರಿಂದ ಪರೀಕ್ಷಾ ಪ್ರಯೋಗಗಳನ್ನು ಮಾಡಿ ಸಾಧನೆಯಿಂದ ಮನಗಾಣಬೇಕು.

ಓಂ ! ಓಂ ! ಓಂ !

# THE SPIRIT OF YAJNA

# ಯಜ್ಞದ ಚೇತನಶಕ್ತಿ—ಮನೋಭಾವ

ಬ್ರಹ್ಮನ ಮಹಾಯಜ್ಞ ಭೂಮಿಯಾದ ಪುಷ್ಕರದಲ್ಲಿ ವಾಸಮಾಡುತ್ತಿದ್ದಾಗ ರಾಮತೀರ್ಥರಿಗೆ ಒಂದು ಪತ್ರ ಬಂದಿತು. ರಾಷ್ಟ್ರೀಯ ಐಕ್ಯತೆಯನ್ನೂ ಭಾವೈಕ್ಯತೆಯನ್ನೂ ಸಾಧಿಸುವ ಉಪಾಯವಾಗಿ ಹಳೆಯ ಯಜ್ಞ ಕಾರ್ಯಕಲಾಪಗಳನ್ನು ಪುನರುಜ್ಜೀವನ ಮಾಡುವ ಆವಶ್ಯಕತೆಯ ಹಾಗೂ ಅಪೇಕ್ಷೆಯ ವಿಷಯದಲ್ಲಿ ಅವರ ಅಭಿಪ್ರಾಯವನ್ನು ತಿಳಿಸಬೇಕೆಂದು ಆ ಪತ್ರದಲ್ಲಿ ರಾಮತೀರ್ಥರನ್ನು ಪ್ರಾರ್ಥಿಸಲಾಗಿತ್ತು. ಆ ಪತ್ರಕ್ಕೆ ಹೀಗೆ ಉತ್ತರವನ್ನಿತ್ತರು:—

ಹೆಸರಿಲ್ಲದುದಾ ಶ್ರೇಷ್ಠತಮ ಸದ್ಗುಣವು.
ಮಹತ್ತಮ ಪರಿಶುದ್ಧಿಯೆನೆ ಲಜಾಸ್ಪದವು.
ನಿಜವಾದ ವಿಜ್ಞಾನದಲಿ ಲೇಶ ಭರವಸೆಯು ತೋರದಿಹುದು.
ಸಹಜ ಸೌಜನ್ಯವತ್ಯಂತವಪೂರ್ವವಾಗಿ ತೋರುವದು.
ಪರಿವರ್ತನಾಶೂನ್ಯ ಪರಿವರ್ತನೆಯೆ ಚಿರಜೀವಿಯತ್ಯಂತ.
ಅತ್ಯುಚ್ಚ ಧ್ವನಿಯನೆಂದುಂ ಯಾರು ಕೇಳಿಲ್ಲ.
ಬೃಹತ್ತಮ ವಸ್ತುವಹ ಬ್ರಹ್ಮಕ್ಕೆ ರೂಪನಾಮಗಳಿಲ್ಲ.

ಬೊಂಬಾಯಿಯ ಮಾವಿನ ಹಣ್ಣುಗಳಿಗೆ ಸೂರ್ಯನು "ಹಿಮಾಲಯದ ದೇವದಾರು ವೃಕ್ಷಗಳಿಗೂ ಭೂರ್ಜ ವೃಕ್ಷಗಳಿಗೂ ನಾನು ಬೆಳಕನ್ನೂ ಬಿಸಿಯನ್ನೂ ಕೊಡುವಂತೆ ನಿಮಗೆ ಕೊಡುವದಿಲ್ಲ; ನಾನು ಆ ಸುಂದರವಾದ ದೈತ್ಯಪರ್ವತಗಳಿಗೆ ಪ್ರಕಟಪಡಿಸಿರುವ ಉಪಕಾರ ಮತ್ತು ಶಕ್ತಿಯ ಸಹಾಯದಿಂದಲೇ ನೀವೂ ಬೆಳೆದು ಅಭಿವೃದ್ಧಿ ಹೊಂದಬೇಕು." ಎಂದು ಹೇಳಿದ್ದರೆ ಬೊಂಬಾಯಿಯಲ್ಲಿ ಮಾವಿನ ಹಣ್ಣುಗಳೇ ಉಳಿಯುತ್ತಿರಲಿಲ್ಲ. ಹಣ್ಣಿನ ತೋಟಗಳಲ್ಲಿ ಸೇಬಿನ ಹಣ್ಣಿನ ಮೇಲೆ ಬೀಳುವ ಬಿಸಿಲಿನಿಂದಲೇ ಮೈದಾನದಲ್ಲಿರುವ 'ಲಿಲಿ' ಹೂವುಗಳು ಬದುಕಿರುವದು ಸಾಧ್ಯವಲ್ಲ. ಬುದ್ಧನಿಗೊ ಕ್ರಿಸ್ತನಿಗೂ ಮಹಮ್ಮದನಿಗೂ ಆದ ದಿವ್ಯದರ್ಶನದಿಂದ ಷೇಕ್ಸ್‌ಪಿಯರ್, ನ್ಯೂಟನ್ ಅಥವಾ ಸ್ಪೆನ್ಸರ್, ಜ್ಞಾನವನ್ನು ಪಡೆಯುವದು ಸಾಧ್ಯವೆ? ಹಿಂದೆ ಕಳೆದು ಹೋದ ಅತ್ಯಂತ ಪೂಜ್ಯ ಮಹರ್ಷಿಗಳ ಅಥವಾ ಮಹಾತ್ಮರ ಕಣ್ಣುಗಳಿಂದಲೇ ಹಣಿಕಿ ನೋಡುತ್ತಿರದೆ, ನಮ್ಮ ಕಣ್ಣುಗಳಿಂದಲೇ ನಾವು ನೋಡಲು ತೊಡಗಿ ನಮ್ಮ ಸಮಸ್ಯೆಯನ್ನು ನಾವೇ ಬಿಡಿಸಿಕೊಳ್ಳಬೇಕು.

ಪ್ರತಿಯೊಂದು ಸ್ಮೃತಿಯೂ "ನಿನ್ನೆಯೇನೋ ನಾವು ಒಪ್ಪಿ ಈ ನಿಯಮ ಗಳನ್ನು ಮಾಡಿಕೊಂಡೆವು; ಆದರೆ ಈ ವಿಧಿ–ನಿಷೇಧಗಳ ವಿಷಯದಲ್ಲಿ ಇವತ್ತು ನಿಮ್ಮ ಅಭಿಪ್ರಾಯವೇನು? ಪ್ರತಿಯೊಂದು ಸಂಸ್ಥೆಯೂ ನಮ್ಮ ನಮ್ಮ ಭಾವ ಚಿತ್ರದ ಮುದ್ರೆಯೊತ್ತಿರುವ ಚಲಾವಣೆಯಲ್ಲಿರುವ ಒಂದು ಕಾಲದಲ್ಲಿ ಪ್ರಚಲಿತ ವಾಗಿರುವ–ನಾಣ್ಯವು. ಚಲಾವಣೆಯಲ್ಲಿರುವ ನಾಣ್ಯವು ಬೇಗ ಸವಕಲಾಗುವದ ರಿಂದ, ಗುರುತು ಸಿಗದಂತಾಗುತ್ತದೆ. ಕಾಲಕ್ರಮದಲ್ಲಿ ಅದನ್ನು ಟಂಕಸಾಲೆಗೆ ಹಿಂದಿ ರುಗಿಸಿ, ಕರಗಿಸಿ, ಪುನಃ ಹೊಸದಾಗಿ ಛಾಪಿಸಬೇಕು. ಪ್ರಕೃತಿಯು ತನ್ನ ಹರಳು ಗಳನ್ನು ರಚಿಸಿ, ಕರಗಿಸಿ, ಪುನರ್ರಚನೆ ಮಾಡುವದರಲ್ಲಿ ನಿತ್ಯೋತ್ಸಾಹಿಯಾಗಿದೆ. ಪರಿ ವರ್ತನಾಶೂನ್ಯ ಪರಿವರ್ತನೆಯೇ ಸಾರಭೂತವಾದ ಸ್ಥಿತಿಯು.

ಯಾರು ನಿರಂತರವಾಗಿ ಭೂತಕಾಲದ ಸ್ಥಿತಿಗತಿಗಳನ್ನೇ ತಮ್ಮ(ಕಣ್ಣ)ಮುಂದೆಯೂ ತಮ್ಮ ಭವಿಷ್ಯವನ್ನು ಹಿಂದೆಯೂ ಕಾಣುವರೋ ಅವರ ಹೊರತು ಯಾರಿಗೂ– ಅಯ್ಯೋ ಪಾಪ! ಎಂದು–ಮರುಗಬೇಕಾದುದೂ ವಿಷಾದಪಡಬೇಕಾದುದೂ ಇಲ್ಲ. ಮುಂದೆ ನಿರೂಪಿಸಿರುವ ವಿಚಾರ ಸರಣಿಯಲ್ಲಿ ಉದ್ದಿಷ್ಟವಾದ ವಿಷಯವನ್ನು ಸಮ ರ್ಥನೆ ಮಾಡಲು ಗೀತೆಯಿಂದಲೂ ಮನುಸ್ಮೃತಿಯಿಂದಲೂ ಶ್ರುತಿಯಿಂದಲೂ ಅನೇಕ ಪ್ರಮಾಣಗಳನ್ನು ಉದಾಹರಿಸಬಹುದು. ಆದರೆ ಅದರಿಂದ ವಿಷಯಾಂತರಗಳೂ ಪ್ರಶ್ನಾಂ ತರಗಳೂ ಸಮಸ್ಯಾಂತರಗಳೂ ಹುಟ್ಟಬಹುದೆಂದೂ, ಪ್ರತಿಪಕ್ಷಿಗಳು ಹೂಡಬಹುದಾದ ವಿರುದ್ಧ ಪ್ರಮಾಣಗಳಿಗೆ ಉತ್ತರ ನೀಡುವ ಸಡಗರದಲ್ಲಿ ಹಳೆಯ ಪ್ರಮಾಣಗಳ ನಿಸ್ಸಾರ ವಾದ ಒಣಮೂಳೆಯನ್ನೇ ಕಡಿಯಬೇಕಾಗುವದೆಂದೂ ಯೋಚಿಸಿ, ಆ ತೊಡಕನ್ನು ತಪ್ಪಿಸುವದಕ್ಕಾಗಿ ಉದ್ದೇಶಪೂರ್ವಕವಾಗಿಯೂ ಪ್ರಯತ್ನಪೂರ್ವಕವಾಗಿಯೂ ಶಾಸ್ತ್ರ ಪ್ರಮಾಣಗಳನ್ನು ತೋರಿಸುವದನ್ನು ಬಿಟ್ಟಿದೆ. ಅಲ್ಲದೆ, ಜೀವನದಲ್ಲಿ ವಾಸ್ತವ ಘಟನೆ ಗಳನ್ನೂ ವಿಷಯಗಳನ್ನೂ ಪರಿಶೀಲಿಸುವದಕ್ಕಿಂತಲೂ ಹೆಚ್ಚಿನ ಸ್ಥಾನವನ್ನು ಪುಸ್ತಕಗಳ ಅಭ್ಯಾಸಕ್ಕೆ ಕೊಡುವ ತಪ್ಪುದಾರಿಯ ಶಿಕ್ಷಣವನ್ನು ಪ್ರೋತ್ಸಾಹಿಸಿದ ಪ್ರತ್ಯಕ್ಷ ಪಾಪವನ್ನು ನಿವಾರಿಸುವದಕ್ಕಾಗಿಯೂ ಸ್ವತಂತ್ರವಾಗಿ ವಿಚಾರಮಾಡಿದೆ.

ತಮ್ಮ ತತ್ತ್ವಜ್ಞಾನದ ದಿವ್ಯಜ್ಯೋತಿಯನ್ನು ಸ್ವತಂತ್ರವಾಗಿ ಬೆಳಗದೆ, ಶಾಸ್ತ್ರ ಪ್ರಮಾಣಗಳ ಮರೆಯಲ್ಲಿ ಮೆರೆಸಿದುದೇ ಮಹಾಪುರುಷರಾದ ಶಂಕರಾಚಾರ್ಯರ ಮಹಾದೋಷ. ಯಾವದು ಅವರಿಗೆ ವೈಯಕ್ತಿಕ ಸ್ವಾನುಭವದ ವಿಷಯವಾಗಿತ್ತೋ ಯಾವದಕ್ಕಿಂತಲೂ ಹೆಚ್ಚಿನ ಪ್ರಮಾಣಗಳಿಲ್ಲವೋ ಅಂಥ ಸತ್ಯವನ್ನು ಹಿಂಡಿ ತೆಗೆ ಯಲು ಹಳೆಯ ಶಾಸ್ತ್ರಗಳನ್ನು ಚಿತ್ರಹಿಂಸೆ ಮಾಡುವದರಲ್ಲಿ ಅವರು ವ್ಯರ್ಥವಾಗಿ ಕಾಲವನ್ನು ಕಳೆಯಬಾರದಾಗಿತ್ತು. ಮುಂದಿನ ವ್ಯಾಖ್ಯಾನಕಾರರುಗಳೂ ಬೇರೆ ಆಚಾ ರ್ಯರುಗಳೂ ಬಂದು. ಸಹಾಯಶೂನ್ಯವಾದ ಅದೇ ಶಬ್ದಗಳನ್ನೂ ಶಾಸ್ತ್ರಗಳನ್ನೂ ತೆಗೆದುಕೊಂಡು ತಮತಮಗೆ ಬೇಕಾದ ಅರ್ಥಗಳನ್ನೂ ತತ್ತ್ವಗಳನ್ನೂ ವಾದಗಳನ್ನೂ

ಸಿದ್ಧಾಂತಗಳನ್ನೂ ಅದೇ ಶಾಸ್ತ್ರಗಳಿಂದಲೇ ಹಿಂಡಿ ಹಿಚುಕಿ ಹೊರಡಿಸಿ ತೆಗೆದು ತೋರಿಸಿದರು. ಸದುದ್ದೇಶಪೂರಿತವಾದುದೇ ಆದ ಶಂಕರರ ಪ್ರಯತ್ನದಿಂದ ತತ್ತ್ವಾನ್ವೇಷಣೆಯ ಮುನ್ನಡೆಯ ವೇಗವು ಹೆಚ್ಚಾಗದೆ ಕುಂಠಿತವಾಯಿತು. ಸರಳವಾದ ಮಾತಿನಲ್ಲಿ ಸುಲಭವಾಗಿ ಹೇಳುವದಾದರೆ, ಹಳೆಯ ಪುಸ್ತಕಗಳ ಭೂತ ಪ್ರೇತಗಳಿಗೆ ಜೀವಂತವಾದ ಆತ್ಮವನ್ನು ದಾಸ್ಯದಲ್ಲಿ ದೂಡಿದ, ತಲೆಕೆಳಗಾದ, ಅಸ್ವಾಭಾವಿಕ ಕ್ರಮವೇ ಇಂಡಿಯಾದೇಶದ ವರ್ತಮಾನಕಾಲದ ಕಷ್ಟಕ್ಕೆ ಕಾರಣವಾಗಿದೆ. ವೇದಮಾತೆಯ ಮಕ್ಕಳಲ್ಲಿ ಒಬ್ಬನು ಆಕೆಯ ಸುಂದರವಾದ ಕೇಶರಾಶಿಯನ್ನು ಹಿಡಿದು, ಒಂದು ದಿಕ್ಕಿಗೆ ಎಳೆಯುತ್ತಿರುವಾಗ, ಇನ್ನೊಬ್ಬನು ಇನ್ನೊಂದು ದಿಕ್ಕಿಗೂ ಮತ್ತೊಬ್ಬನು ಬಂದು ಮತ್ತೊಂದು ದಿಕ್ಕಿಗೂ ಹೀಗೆಯೇ ಅನೇಕರು ಅನೇಕ ದಿಕ್ಕುಗಳಿಗೆ ನಿರ್ದಯವಾಗಿ ಎಳೆದೆಳೆದು ಚಿತ್ರಹಿಂಸೆ ಮಾಡುವ ದುರ್ದಶೆಗೆ ಆ ದಿವ್ಯಮಾತೆಯನ್ನು ಗುರಿಪಡಿಸಿದಂತಾಯಿತು. ತಮ್ಮ ತಮ್ಮ ಸತ್ಯಸಂಧತೆಯ ಶೀಲವನ್ನು ಕಳಂಕಗೊಳಿಸುವಂತೆ ಪ್ರತಿಯೊಬ್ಬರೂ ತಾವು ತಾವು ಹೇಳಬೇಕಾದುದನ್ನೇ ಶ್ರುತಿಯ ಅಭಿಪ್ರಾಯವೆಂದು ತೋರಿಸುತ್ತಾ ಬೋಧಿಸತೊಡಗಿದರು. ಓ! ಪ್ರಾಚೀನ ಭಾರತದ ಮಹರ್ಷಿಗಳೆ! ಮಹಾತ್ಮರೆ! ಇನ್ನೇನೂ ಮಾತಿನ ಬಳಕೆಯಲ್ಲಿ ಇಲ್ಲದಿರುವ ಭಾಷೆಗೆ ಸಂಬಂಧಪಟ್ಟ ವ್ಯಾಕರಣನಿಯಮಗಳಿಗೆ ಹೊಂದಿಸಿ ನೋಡಿ, ನಿಮ್ಮ ಮಕ್ಕಳು ತಮಗೆ ಒಡನೆಯೇ ಬೇಕಾಗಿರುವ ವಿಷಯಸಂಬಂಧವಾಗಿಯೂ ತಮಗೇ ನೇರವಾಗಿ ಸಂಬಂಧಪಟ್ಟ ವರ್ತಮಾನ ಘಟನೆಗಳ ವಿಷಯದಲ್ಲಿಯೂ ತೀರ್ಮಾನ ತೆಗೆದುಕೊಳ್ಳಬೇಕಾದ ಶೋಚನೀಯ ಸ್ಥಿತಿಯು ಬಂದಿತೆ?

ಪ್ರೇಮಾತ್ಮರೆ! ನಿಯಮ ನಿಬಂಧನೆಗಳಾಗಲೀ ಸಂಸ್ಥೆಗಳಾಗಲೀ ಮನುಷ್ಯನಿಗಾಗಿಯೇ ಹೊರತು, ಮನುಷ್ಯನು ಅವುಗಳಿಗಾಗಿ ಅಲ್ಲ. "ಭಾಷ್ಯದ ಮೂಲಕವಾಗಿ ಭವಿಷ್ಯವು ಭೂತಕಾಲದೊಡನೆ ಭದ್ರವಾಗಿ ಹೆಣೆದುಕೊಂಡಿದೆ" ಎಂದು ಕೆಲವರು ಹೇಳುತ್ತಾರೆ. ಈ ಮಾತು ಎಷ್ಟು ಸುಂದರವಾಗಿದೆ! ಮತ್ತು ಎಂಥ ನ್ಯಾಯಸಮ್ಮತವಾಗಿ ಕಾಣುವ ಭಾವನೆ! ಆದರೆ ಈಗಾಗಲೇ ನಮ್ಮ ಹಳೆಯ ಬಟ್ಟೆಗಳಿಗೆ ಎಷ್ಟೊಂದು ತೇಪೆಗಳನ್ನೂ, ಹೊಲಿಗೆಗಳನ್ನೂ ಅತೀವವಾಗಿ ಹಾಕಿಲ್ಲ! ಸತ್ಯಕ್ಕೆ ರಾಜಿಯ ಆವಶ್ಯಕತೆ ಇಲ್ಲ. ಇಡಿಯ ಜಗತ್ತು ಬೇಕಾದರೆ ಸೂರ್ಯನ ಸುತ್ತಲೂ ತಿರುಗಬೇಕೇ ಹೊರತು, ಸೂರ್ಯನು ಜಗತ್ತಿನ ಸುತ್ತಲೂ ತಿರುಗಬೇಕಾಗಿಲ್ಲ. ಭೂತಕಾಲವನ್ನು ಭವಿಷ್ಯದೊಡನೆ ಚೆನ್ನಾಗಿ ಹೆಣೆಯಬೇಕೆಂಬ ದೃಷ್ಟಿಯಿಂದ ಭೌತ ವಿಜ್ಞಾನದ ಶೋಧಗಳನ್ನು ಕ್ರೈಸ್ತರ ಬೈಬಲ್ಲಿನ ಸಿದ್ಧಾಂತಗಳಿಗೋ ಅಥವಾ ಭಾಷ್ಯಗಳಂಥ ಬೇರೆ ಧರ್ಮಗ್ರಂಥಗಳಿಗೋ ಟಾಕು ಹಾಕುವುದಕ್ಕೆ ಸಾಧ್ಯವಾಗಬಹುದೆ? ದೇವರಿಂದಲೇ ಪ್ರೇರಿತವಾಗಿ ಬಂದಿರುವ ಪವಿತ್ರವಾದ ಮೂಲಗ್ರಂಥಗಳು ಯಥಾರ್ಥವಾಗಿ ಏನು ಹೇಳುವುವೋ ಎಂಬುದನ್ನು ನೇರವಾಗಿ ಕೇಳಬೇಕು. ನ್ಯಾಯಾಧಿಪತಿಯು

ನಿಷ್ಪಕ್ಷಪಾತತೆಯನ್ನು ತೋರಿಸಿಕೊಳ್ಳುತ್ತಾ ಆದರೆ ನ್ಯಾಯವಾದಿಯ (ಲಾಯರ್) ಕುಟಿಲ ನೀತಿಯನ್ನು ಸಾಧಿಸುತ್ತಾ ಇರುವ ಭಾಷ್ಯಕಾರರಿಂದಲೊ ವ್ಯಾಖ್ಯಾನಕಾರರಿಂದಲೋ ಟೀಕಾಕಾರರಿಂದಲೋ ಅಥವಾ ಸ್ವಯಂಪ್ರೇರಿತ ಧರ್ಮ ಪ್ರಸಾರಕರಿಂದಲೋ ಅಪೌರುಷೇಯವಾದ ವೇದಶಾಸ್ತ್ರಗಳಲ್ಲಿರುವ ದೇವರ ನಿಜವಾದ ಅಭಿಪ್ರಾಯವು ಪ್ರಕಟವಾಗುವವರೆಗೂ ಪ್ರಪಂಚವು ಸಹಸ್ರಾರು ವರ್ಷಗಳು ಅಜ್ಞಾನ ಕತ್ತಲೆಯಲ್ಲಿ ತಪ್ಪುಗಳಿಂದ ತಪ್ಪುಗಳಿಗೆ ಮುಗ್ಗರಿಸುತ್ತಾ ಹೊಯ್ದಾಡುತ್ತಾ ನಡೆದು ಕಾಯ್ದಿರುವಂತೆ ಮಾಡುವಂಥ ದ್ವಂದ್ವಾರ್ಥವುಳ್ಳ ಮಾತನ್ನು ಆಡದೇ ಇರುವಷ್ಟು ಭಗವಂತನು ಖಂಡಿತವಾಗಿಯೂ ಸಂಪನ್ನತೆಯುಳ್ಳವನೆಂದು ನಂಬಬಹುದು. ಪ್ರಮಾಣಗಳೂ ಅಧಿಕಾರಗಳೂ ಸತ್ಯವನ್ನು ಸ್ಥಾಪಿಸಬಲ್ಲವೆ? ಸೂರ್ಯನನ್ನು ತೋರಿಸುವದಕ್ಕೆ ಸಣ್ಣದೀಪವು ಬೇಕೆ? ನಾಲ್ಕನ್ನು ಮೂರರರಿಂದ ಗುಣಿಸಿದರೆ, ಗುಣಲಬ್ಧವು ಹನ್ನೆರಡು ಎನ್ನುವ ಸಾಮಾನ್ಯವಾದ ಗಣಿತಶಾಸ್ತ್ರದ ಸತ್ಯಕ್ಕೆ ಕ್ರಿಸ್ತನೂ ಮಹಮ್ಮದನೂ ಬುದ್ಧನೂ ಜೊರೋಸ್ಟರನೂ ವೇದಗಳೂ ಎಲ್ಲವೂ ಬಂದು ಸಾಕ್ಷಿಯನ್ನು ಹೇಳಿದರೆ ಅಣುಮಾತ್ರವಾದರೂ ಆ ಸತ್ಯದ ಬೆಲೆ ಹೆಚ್ಚಾಗಬಹುದೆ? ನೇರವಾದ ಪ್ರಯೋಗಗಳಿಂದಲೇ ರಾಸಾಯನಿಕ ಸತ್ಯಗಳು ನಮಗೆ ತಿಳಿಯುತ್ತವೆ. ಅವುಗಳ ವಿಷಯದಲ್ಲಿ ಬರೀ ನಂಬಿಕೆಯಿಂದ ಮಿದುಳನ್ನು ತುಂಬಿ ತುರುಕುವದು, ಬುದ್ಧಿಯನ್ನು ಬಗ್ಗುಬಡಿಯುವ ಪಾಪಮಯವಾದ ವೃತ್ತಿಯೇ ಸರಿ. "ಹಿಂದೂ ಇಂದೂ ಮುಂದೂ ಒಂದೇ ಆಗಿರುವ" ದೆಂದು ವಿವರಿಸಲ್ಪಟ್ಟಿರುವ ಸತ್ಯವನ್ನು ಒಂದು ವಿಶಿಷ್ಟ ಘಟನೆಯೆಂದು ತಪ್ಪಾಗಿ ತಿಳಿಯಬೇಡಿ. ಸತ್ಯವು ಸ್ವತಃ ಪ್ರಮಾಣವಾದುದು. ಪ್ರಮಾಣಗಳ ಮೂಲಕ ಪ್ರಮೇಯಗಳನ್ನು ತಿಳಿಯುವ ಪ್ರಮಾತೃವಿಗೂ ಮೊದಲು ಸ್ವಯಂ ಸಿದ್ಧವಾಗಿರುವದೇ ಸತ್ಯವು. ಯಾವ ಪ್ರಮಾಣಕ್ಕೂ ಸತ್ಯವು ಪ್ರಮೇಯವಾಗಲಾರದು. ಆದ್ದರಿಂದ ಅಂತಃಕರಣಕ್ಕೆ ಕಾರಣವಾದ ಅವಿದ್ಯೆಯು ನಾಶವಾಗಿ, ವಿದ್ಯೆಯಿಂದ ಮನಸ್ಸು ಸತ್ಯ—ಜ್ಞಾನ—ಆನಂದರೂಪ ಆತ್ಮನಲ್ಲಿ ಲಯವಾದಾಗ ಸತ್ಯದ ಸ್ವರೂಪವು ಅನುಭವದಲ್ಲಿ ತಾನೇ ತಾನಾಗಿ ಬೆಳಗಬೇಕು; ಸ್ಫುರಿಸಬೇಕು. ಘಟನೆಗಳನ್ನಾದರೋ ನಂಬುವದಕ್ಕೆ ಪ್ರಮಾಣಗಳು ಬೇಕು; ಆಧಾರಬೇಕು. ಪ್ರಮಾಣ—ಸಾಕ್ಷ್ಯ—ರುಜುವಾತುಗಳ ಮೇಲೂ ಯುಕ್ತಿವಾದಗಳ ಮೇಲೂ ವೇದಾಂತವು ನಿಂತಿದೆಯೇ? ಸರಿಯಾದ ರೀತಿಯಲ್ಲಿ ಅದರ ಕೇವಲ ಪ್ರತಿಪಾದನೆಯೇ ವೇದಾಂತ ಸತ್ಯಕ್ಕೆ ನಿರ್ವಿವಾದ ಸಾಕ್ಷ್ಯ—ಪ್ರೂಫ್. ಸೌಂದರ್ಯವು ಆಕರ್ಷಕವೆಂದು ರುಜುವಾತು ಮಾಡಲು ಹೊರಗಡೆಯ ಶಿಫಾರಸು ಬೇಕೆ?

ಸೋಮಾರಿತನದ ನಿದ್ರೆಯನ್ನು ಬೆಳೆಸುವದಕ್ಕಾಗಿ ಮೋಹಕವಾದ ಮಧುರ ಗೀತೆಗಳನ್ನು ಗಾನಮಾಡುವದರಿಂದಲೂ ಇಲ್ಲವೆ ಇಂಪಾದ ಜೋಗುಳಗಳನ್ನು ಹಾಡುವದರಿಂದಲೂ ಜನಜಂಗುಳಿಯನ್ನು ವಿನೋದಗೊಳಿಸುವದರಿಂದಲೂ ಅಜ್ಞಜನರನ್ನು

ಮುಖಸ್ತುತಿ ಮಾಡುವದರಿಂದಲೂ ಅಸಂಖ್ಯಾತ ಶಿಷ್ಯರನ್ನು ಸಂಪಾದಿಸುವದೇನೂ ಕಷ್ಟವಾದ ಕೆಲಸವಲ್ಲ. ಆದರೆ ಆತ್ಮವೊಂದೇ ಸತ್ಯವು, ಚರಾಚರ ಜಗತ್ತೆಲ್ಲವೂ ಮಿಥ್ಯವು; ಆದ್ದರಿಂದ ತೋರಿಕೆಯ ನಾಮರೂಪಗಳಿಗಾಗಿ ಸತ್ಯವನ್ನು ಬಲಿಕೊಡತಕ್ಕವನಿಗೆ ವಿಪತ್ತೂ ವಿನಾಶವೂ ಕಾದಿರುವದೇ ಸರಿ. ಸತ್ಯವು ಸ್ವೇಚ್ಛೆಯಾಗಿ ಸ್ಫೋಟವಾಗಲಿ. ಹೇಗೆ ಉದಯವಾಗಬೇಕೆಂಬದನ್ನು ಸತ್ಯಸ್ವರೂಪ ಸೂರ್ಯನು ಚೆನ್ನಾಗಿ ಬಲ್ಲನು. ಬಾಂಬುಗಳ, ಸಿಡಿಗುಂಡುಗಳ ಗಾನದಿಂದ ಗುಡುಗುತ್ತಲೂ ಗರ್ಜಿಸುತ್ತಲೂ ಬಹು ದೀರ್ಘ ನಿದ್ರೆಯಲ್ಲಿರತಕ್ಕವರನ್ನು ಅಲ್ಲಾಡಿಸುತ್ತಲೂ ಎಚ್ಚರಿಸುತ್ತಲೂ ಹೋಗಲಿ. ನಾನೇ ಸತ್ಯಸ್ವರೂಪನಾದುದರಿಂದ ಈ ದೇಹದ ಮಹೋತ್ಕರ್ಷಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುವದಿಲ್ಲ.

ಈಗ ಯಜ್ಞದ ಪ್ರಶ್ನೆಯನ್ನು ತೆಗೆದುಕೊಂಡು, ಬೇರೆ ಬೇರೆ ದೃಷ್ಟಿಕೋಣಗಳಿಂದ ಅದನ್ನು ಸ್ವತಂತ್ರವಾಗಿಯೂ ನಿಷ್ಪಕ್ಷಪಾತವಾಗಿಯೂ ವಿಚಾರಮಾಡೋಣ.

ಸಾಮಾನ್ಯ ತಿಳಿವಳಿಕೆಯಲ್ಲಿ ಹವನ ಕ್ರಿಯೆಯೇ ಯಜ್ಞದಲ್ಲಿ ಅತ್ಯಂತ ಮುಖ್ಯವೂ ಅತ್ಯವಶ್ಯವೂ ಆದ ಕಲಾಪವು. "ಹವನವು ವಾತಾವರಣವನ್ನು ಶುದ್ಧಿಮಾಡಿ, ಮಧುರವಾದ ಸುಗಂಧವನ್ನು ಉಂಟುಮಾಡುವದು" ಎನ್ನುವದು ಅದರ ಈಗಿನ ಕಾಲದ ನಿಕಟ ಭಕ್ತರಲ್ಲಿ ಕೆಲವರ ಅತ್ಯಂತ ಸಾಮಾನ್ಯವಾದವಾಗಿದೆ. ಅದು ಬಹಳ ದೂರವಾದ ಅನ್ವಯವೇ ಸರಿ. ಇತರ ಎಲ್ಲಾ ಉತ್ತೇಜಕಗಳಂತೆ ಮಧುರವಾದ ಸುಗಂಧಗಳೂ "ಶರೀರವಿಜ್ಞಾನದ ಬಿಳಿಯ ಸುಳ್ಳುಗಳು". ಅವು ತತ್ಕಾಲದಲ್ಲಿ ಮನಸ್ಸನ್ನು ಉಲ್ಲಾಸಗೊಳಿಸಿದರೂ ಚೇತನಶಕ್ತಿಯನ್ನು ಕುಗ್ಗಿ ಕುಸಿಯುವಂತೆ ಮಾಡುವ ಪ್ರತಿಕ್ರಿಯೆಯನ್ನು ಹೊಂದಿವೆ. ಉತ್ತೇಜಕಗಳು ನಮ್ಮ ಭಾವೀ ಶಕ್ತಿಯ ಭಂಡಾರದಿಂದ ಸಾಲ ತೆಗೆದುಕೊಳ್ಳುವದಕ್ಕೆ ಸಹಾಯಮಾಡಬಹುದು; ಆದರೆ ಅವು ಯಾವಾಗಲೂ ಚಕ್ರ ಬಡ್ಡಿಯ ಮೇಲೆ ಸಾಲ ಪಡೆದರೂ ಸಾಲವನ್ನು ಎಂದೂ ಹಿಂದಿರುಗಿ ಪಾವತಿ ಮಾಡುವದಿಲ್ಲ.

ಆದರೆ, ಮಧುರ ಸುಗಂಧವು ಹವನದ ಅಲ್ಪವಾದ ಫಲಿತಾಂಶ. ಆದರೆ ಇಂಗಾಲಾಮ್ಲವೇ (ಕಾರ್ಬನ್ ಡೈ ಆಕ್ಸೈಡ್) ಹವನದ ಅತ್ಯಂತ ಮಹತ್ವವಾದ ಉತ್ಪನ್ನವು. ಅದು ವಾಸ್ತವವಾಗಿಯೂ ವಿನಾಶಕರವಾದುದು.

ಇಂಡಿಯಾ ದೇಶದಲ್ಲಿ ಜನಸಂಖ್ಯೆ ಕಡಿಮೆಯಾಗಿಯೂ ಅರಣ್ಯಗಳೇ ಹೆಚ್ಚಾಗಿಯೂ ಇದ್ದ ಕಾಲವೊಂದಿತ್ತು. ಸಸ್ಯವರ್ಗದ ಅನಿಲಾಹಾರವಾದ ಇಂಗಾಲಾಮ್ಲವನ್ನು ಉತ್ಪನ್ನಮಾಡಿ, ಸಸ್ಯವೃದ್ಧಿಗೆ—ಎಷ್ಟೇ ಅಲ್ಪ ಪ್ರಮಾಣದಿಂದಲಾದರೂ—ಸಹಾಯಮಾಡುವದಕ್ಕಾಗಿ ನೂರಾರು ವರ್ಷಗಳ ಹಿಂದೆ ಘೃತ (ತುಪ್ಪ) ಮೊದಲಾದ ಹೈಡ್ರೋ ಕಾರ್ಬೋನೇಟ್‌ಗಳನ್ನು ಹವನದಲ್ಲಿ ಸುಡುವ ಆಗತ್ಯವಿದ್ದಿರಬಹುದು.

ಆದರೆ, ಈಗಿನ ಕಾಲದಲ್ಲಿ ಆ ಪರಿಸ್ಥಿತಿಯು ವ್ಯತಿರಿಕ್ತವಾಗಿದೆ. ಈಗ ನಮ್ಮಲ್ಲಿ ಅರಣ್ಯಗಳೇ ಇಲ್ಲ. ಜನಸಂಖ್ಯೆಯಾದರೋ ಅತಿಶಯ ವೃದ್ಧಿಯಾಗಿ ಸ್ಫೋಟವಾಗುವ ಅಸಾಧಾರಣ ಸ್ಥಿತಿಯನ್ನು ಪಡೆದಿದೆ. ಈಗ ಉಸಿರಾಟದಿಂದ ವಾತಾವರಣದಲ್ಲಿ ಅತಿಯಾದ ಇಂಗಾಲಾಮ್ಲವು ತುಂಬಿಕೊಂಡಿದೆ. ಅದು ಜನರನ್ನು ಮತ್ತಷ್ಟು ಸೋಮಾರಿಗಳನ್ನಾಗಿ ಮಾಡುತ್ತದೆ. ಈಗಿನ ಕಾಲದಲ್ಲಿ ಇಂಡಿಯಾ ದೇಶದಲ್ಲಿ ಹೆಚ್ಚು ಆಮ್ಲಜನಕವೂ ಸಾಂದ್ರೀಕೃತ ಆಮ್ಲಜನಕವೂ (Oxygen and Ozone) ಅವಶ್ಯವಾಗಿವೆಯೇ ಹೊರತು—ಇಂಗಾಲಾಮ್ಲವಲ್ಲ. ವಾಯು ಮಂಡಲದ ಮೇಲೆ ಪರಿಣಾಮಮಾಡುವ ಹವನದ ರಾಸಾಯನಿಕ ಫಲಗಳೂ ಜನರನ್ನು ಭೋಜನಮಾಡಿಸುವ ಫಲಗಳೂ ಒಂದೇ ಎಂಬುದನ್ನು ನೆನಪಿನಲ್ಲಿಡಬೇಕು. ಈಗ ಅಮೂಲ್ಯವಾದ ತುಪ್ಪವನ್ನು ಕೃತಕವಾದ ಅಗ್ನಿಮುಖದಲ್ಲಿ ಹೊಯಿದು ಹಾಳುಮಾಡುವದಕ್ಕೆ ಬದಲಾಗಿ ಉಪವಾಸ ಸಾಯುತ್ತಿರುವ ಲಕ್ಷೋಪಲಕ್ಷ ಜೀವಂತ ನಾರಾಯಣರ ರಕ್ತಮಾಂಸಗಳನ್ನೂ ಮೂಳೆಗಳನ್ನೂ ಸುಟ್ಟು ತಿನ್ನುವ ಜಠರಾಗ್ನಿಯಲ್ಲಿ ಗಟ್ಟಿಯಾದ ಒಣಕಲು ರೊಟ್ಟಿಯ ಚೂರುಗಳನ್ನಾದರೂ ಏಕೆ ಅರ್ಪಿಸಬಾರದು? ಈಗ ಇಂಡಿಯಾ ದೇಶದಲ್ಲಿ ಈ ಬಗೆಯ ಹವನವು ಹೆಚ್ಚು ಅವಶ್ಯವಾಗಿದೆ.

ಮತ್ತೇನೆಂದರೆ, ಸಾವಿರಾರು ಬಡ ಜನರನ್ನು ಒಂದು ದಿನ ಊಟಮಾಡಿಸಿದ ಮಾತ್ರಕ್ಕೇ ಏನಾಯಿತು? ಈ ವಿವೇಚನಾಶೂನ್ಯವಾದ ದಾನಶೀಲತೆಯು ಸುಮ್ಮನೆ ಗೌರವನೀಯ ಭಿಕಾರಿಗಳನ್ನು ಪೋಷಿಸುವದಕ್ಕೆ ಮಾತ್ರ ಸಹಾಯವಾಗುತ್ತದೆ.

"Charity," says a French writer, "causes half the suffering she relieves, but she cannot relieve half the sufferings she has caused."

"ಔದಾರ್ಯವು—ದಾನವು—ಆಕೆ ಕಳೆಯುವ ಕಷ್ಟದಲ್ಲಿ ಅರ್ಧವನ್ನು ಮತ್ತೆ ಉಂಟುಮಾಡುತ್ತಾಳೆ; ಆದರೆ ಆಕೆ ಉಂಟುಮಾಡಿದ ಕಷ್ಟದಲ್ಲಿ ಅರ್ಧವನ್ನು ಸಹ ಕಳೆಯಲಾರಳು" ಎಂದು ಒಬ್ಬ ಫ್ರೆಂಚ್ ಲೇಖಕನು ಹೇಳುತ್ತಾನೆ.

ಒಂದು ದಾನವು ಯೋಗ್ಯವೋ ಅಯೋಗ್ಯವೋ ಎನ್ನುವದನ್ನು ಅದರಿಂದಾಗುವ ಫಲದ ಮೇಲೆ ನಿರ್ಣಯ ಮಾಡಬೇಕೇ ಹೊರತು, ದಾತೃವಿನ ಉದ್ದೇಶದ ಮೇಲಲ್ಲ.

Charity is to be judged not by its motives but by its results. The weak-minded yatri who pays a pittance to the persistent beggar-drone may compliment himself on having done something

to save his soul in the next world. Be it as it may, there is not the least doubt that he has done something to ruin the nation here now.

ದುರ್ಬಲ ಮನಸ್ಸಿನ ಯಾತ್ರಿಕನು, ಬಿಡದೇ ಕಾಡುತ್ತಿರುವ ಮೈಗಳ್ಳ ಭಿಕ್ಷುಕನಿಗೆ ಒಂದು ಕಿಲುಬು ಕಾಸನ್ನೋ ಹಿಡಿಗೂಳನ್ನೋ ಕೊಟ್ಟು ಪರಲೋಕದಲ್ಲಿ ತನ್ನ ಆತ್ಮರಕ್ಷಣೆಗಾಗಿ ತಾನೊಂದು ಪುಣ್ಯಕಾರ್ಯ ಮಾಡಿರುವದಾಗಿ ಆತ್ಮ ಶ್ಲಾಘನೆಮಾಡಿ ಕೊಳ್ಳಬಹುದು. ಅದು ಏನಾದರೂ ಇರಲಿ; ಇಲ್ಲಿಯೇ ಈಗಲೇ ನಮ್ಮ ರಾಷ್ಟ್ರ ವನ್ನು ನಾಶಮಾಡುವದರಲ್ಲಿ ತನ್ನ ಕಾಣಿಕೆಯನ್ನೂ ಆ ದಾನಿಯು ಒಪ್ಪಿಸಿದಂತಾಯಿತು— ಎನ್ನುವದರಲ್ಲಿ ಮಾತ್ರ ಲೇಶವೂ ಸಂಶಯವಿಲ್ಲ.

ಸರಿಯಾದ ರೀತಿಯ ಯಜ್ಞವನ್ನು ಮಾಡುವದೇ ನಮ್ಮೆದುರಿಗೆ ಇರುವ ಸಮಸ್ಯೆ. ಬಡವರನ್ನು ಸೇವಿಸುವದು ಮತ್ತು ರಕ್ಷಿಸುವದೇ ಯಜ್ಞ. ಆದರೆ ತನ್ನ ಉದ್ದೇಶವನ್ನೇ ತಾನು ಕೆಡಿಸದ ರೀತಿಯಲ್ಲಿ ಅದನ್ನು ಮಾಡಬೇಕು. ಜ್ಞಾನ ದಾನವೇ ಅತ್ಯಂತ ಶ್ರೇಷ್ಠವಾದ ದಾನ. ನೀವು ಇವತ್ತು ಒಬ್ಬನಿಗೆ ಊಟಮಾಡಿಸ ಬಹುದು. ಆದರೆ ಅವನು ನಾಳೆ ಪುನಃ ಅಷ್ಟೇ ಹಸಿದುಕೊಳ್ಳುತ್ತಾನೆ. ಅವ ನಿಗೆ ಒಂದು ಉದ್ಯೋಗವನ್ನು ಕಲಿಸಿದರೆ ಅವನು ಬದುಕಿರುವವರೆಗೂ ತನ್ನ ಜೀವನ ವನ್ನು ತಾನು ಸಂಪಾದಿಸುವದಕ್ಕೆ ಅವನನ್ನು ಶಕ್ತನನ್ನಾಗಿ ಮಾಡಿದಂತಾಗುತ್ತದೆ. ಸುಖ ವಾಗಿಯೂ ಗೌರವವಾಗಿಯೂ ಬಾಳುವದಕ್ಕೆ ಸಹಾಯಕವಾಗುವ ವೃತ್ತಿಜ್ಞಾನವು ಬೇಕು. ಇವತ್ತು ಪಾದರಕ್ಷೆಯನ್ನು ಮಾಡುವ ಕಸುಬನ್ನು ಕಲಿಯುವದು ಬಹಳ ಮುಖ್ಯವಾದುದು.

ಇಂಡಿಯಾ ದೇಶದ ಪ್ರತಿಯೊಬ್ಬನೂ ಸ್ಥಾನಮಾನಗಳಲ್ಲಿಯೂ ಐಶ್ವರ್ಯ ದಲ್ಲಿಯೂ ಜ್ಞಾನದಲ್ಲಿಯೂ ಶಕ್ತಿಯಲ್ಲಿಯೂ ಕೊರತೆಯಾಗಿರತಕ್ಕವರನ್ನು ಸಹಾಯ ಪಡೆಯುವದಕ್ಕೆ ಅರ್ಹರಾದ ತನ್ನ ಮಕ್ಕಳಂತೆ ಭಾವಿಸಲಿ. ಫಲ ಸಂಪಾದನೆಯ ಮೇಲೆ ದೃಷ್ಟಿಯೇ ಇಲ್ಲದೆ, ಪ್ರೋತ್ಸಾಹ, ಜ್ಞಾನ ಮತ್ತು ಪ್ರೇಮ ಮೊದಲಾದ ಆತ್ಮದ ಆಹಾರವನ್ನು ಅವರಿಗೆ ಸಲ್ಲಿಸುವ ತಾಯಿಯ ಸೇವೆಯ ಪರಮ ಭಾಗ್ಯವನ್ನು ಪ್ರತಿಯೊಬ್ಬನೂ ಪಡೆದುಕೊಳ್ಳಲು ಪ್ರಯತ್ನ ಮಾಡಬೇಕು. ಇದೇ ದಿವ್ಯವಾದ ನಿಷ್ಕಾಮ ಯಜ್ಞ.

ಇಂಡಿಯಾ ದೇಶದಲ್ಲಿರುವ ಕರ್ಮಕಾಂಡದ ಇತಿಹಾಸವನ್ನು ಮುಂದೆ ಎಂದಾ ದರೂ ಒಂದು ಸಂದರ್ಭದಲ್ಲಿ ವಿಸ್ತಾರವಾದ ವಿವರಣೆಯನ್ನು ಕೊಡೋಣ. ಆ ಅತಿ ಪ್ರಾಚೀನ ಕಾಲದಲ್ಲಿ, ಸಮಾಜವು ಇಷ್ಟು ಕೃತಕವಾಗಿಲ್ಲದಿದ್ದಾಗ, ಭಾರತೀಯರು ಆಹಾರ, ವಸ್ತ್ರ, ವಸತಿಗಳ ರೀತಿ ನೀತಿಗಳ ಮತ್ತು ರೂಢಿಯ ವಿಷಯದಲ್ಲಿ ಹೆಚ್ಚು ಗಮನವನ್ನು

ಕೊಡುವ ಅಗತ್ಯವಿಲ್ಲದಿದ್ದಾಗ, ಕಾಶ್ಮೀರ ದೇಶದ ಕೆಲವು ಭಾಗಗಳಲ್ಲಿ ಈಗಲೂ ಇರುವಂತೆ ಸ್ವೇಚ್ಛೆಯಾಗಿ ಬೆಳೆದ ಫಲ ವೃಕ್ಷಗಳ ಸಮೃದ್ಧಿಯಿದ್ದಾಗ, ಈಗಲೂ ಅಮೆರಿಕಾದ ಇಂಡಿಯನರು ಇರುವಂತೆ ಬಟ್ಟೆಗಳಿಲ್ಲದೆ ಭಾರತೀಯರೂ ಇರುತ್ತಿದ್ದಾಗ, ದಟ್ಟವಾದ ನೆರಳುಳ್ಳ ಮರಗಳೂ ಗುಹೆಗಳೂ ಚರ್ಮಗಳ—ಚಾಪೆಗಳ—ತೊಗಟೆಗಳ ಡೇರೆಗಳೂ ಸಾಕಷ್ಟು ರಕ್ಷಣೆಯನ್ನು ಕೊಡುತ್ತಿದ್ದಾಗ, ಭಾರತೀಯರ ಬಂಧಿಸಿಟ್ಟ ಊಹಾಪೋಹ ಶಕ್ತಿಗಳೂ ಕಲ್ಪನಾ ಶಕ್ತಿಗಳೂ ಭೌತಿಕ—ದೈಹಿಕ ಶಕ್ತಿಗಳೂ ಹೊರ ಹರಿಯುವದಕ್ಕೆ ಬೇರೆ ದಾರಿಯಿಲ್ಲದೆ, ಅನೇಕ ವಿಧವಾದ—ಯಜ್ಞಗಳ ಮೂಲಕ ದೇವತೆಗಳೊಡನೆ ವ್ಯವಹಾರ ಮಾಡುವದರಲ್ಲಿ ವ್ಯಕ್ತವಾಗತೊಡಗಿತು. ಈ ಎಲ್ಲಾ ಯಜ್ಞಗಳೂ ಮೂಲತಃ ದೇವತೆಗಳೊಡನೆ ವಿಹಿತವೂ ವ್ಯವಸ್ಥಿತವೂ ಆದ ವ್ಯವಹಾರಕ್ಕಿಂತಲೂ ಹೆಚ್ಚಿನದೇನೂ ಆಗಿರಲಿಲ್ಲ. ಆ ಯಜ್ಞಗಳಲ್ಲಿ ದಾಸಾನುದಾಸರಂತೆ ಅತಿ ದೈನ್ಯದಿಂದ ಹಲ್ಲುಗಿಂಜುವದಾಗಲೀ, ಮರೆಮಾಚುವದಾಗಲೀ ಶರಣಾಗತಿಯಾಗಲೀ ತನ್ನನ್ನು ತಾನೇ ಖಂಡಿಸಿಕೊಳ್ಳುವದಾಗಲೀ ಬೇಡುವದಾಗಲೀ ಏನೂ ಇರಲಿಲ್ಲ. ಅವು, ಪ್ರಾಚೀನರು ತಿಳಿದುಕೊಂಡಿದ್ದಂತೆ ಪ್ರಕೃತಿ ಶಕ್ತಿಗಳೊಡನೆ ಯೋಗ್ಯವಾದ ಸಮಾನಧರ್ಮದ ನಡವಳಿಕೆಯ ಆಚರಣೆಯಾಗಿತ್ತು. ವ್ಯಕ್ತೀಕರಣವಾದ ಭೂತತತ್ತ್ವಗಳೊಡನೆ ಅವು ಒಂದು ಬಗೆಯಾದ ಅಂಗಡಿ ವ್ಯಾಪಾರದಂತಿತ್ತು—ಎನ್ನಬಹುದು. ಆದರೆ ಅವು ಪರಿಹಾರವನ್ನೋ ಪ್ರತಿಫಲವನ್ನೋ ಕೊಡುವ ವ್ಯವಹಾರದಲ್ಲಿ 'ಕೊಂಡು—ಪಡಿ' ಎನ್ನುವ ರೂಪದಲ್ಲಿದ್ದರೂ ಖಂಡಿತವಾಗಿಯೂ ಈಗಿನಂತೆ ವ್ಯಾಪಾರ ಮನೋಭಾವದಲ್ಲಿರಲಿಲ್ಲ.

ಈ ಎಲ್ಲಾ ಯಜ್ಞಗಳೂ ಒಂದು "ರೆ" ಸುತ್ತಲೂ ತಿರುಗುತ್ತಿದ್ದವು. ನಿಮಗೆ ಮಳೆ ಬೇಕಾದರೆ ಈ ಯಜ್ಞ ಮಾಡಿ ; ನಿಮಗೆ ಮಕ್ಕಳು ಬೇಕಾದರೆ ಆ ಯಜ್ಞ ಮಾಡಿ; ನಿಮಗೆ ಜಯವೂ ಯಶಸ್ಸೂ ಬೇಕಾದ 'ಠೆ' ಇಂಥ ಯಜ್ಞವನ್ನು ಮಾಡಿ; ನಿಮಗೆ ಸಂಪತ್ತು ಬೇಕಾದರೆ ಅಂಥ ಯಜ್ಞವನ್ನು ಮಾಡಿ ; ಇತ್ಯಾದಿ.

ಹೀಗೆ ಅವರವರ ಬಯಕೆಗಳ 'ಠೆ' ತಿರುಗಣೆಯ ಸುತ್ತಲೂ ತಿರುಗುತ್ತಿದ್ದ ಈ ಯಜ್ಞಗಳು ಮೊದಲು ಮೊದಲು ಹಲವು ಕರ್ತವ್ಯಗಳಂತೆ ಐಚ್ಛಿಕವಾಗಿದ್ದವೇ ಹೊರತು ಕಡ್ಡಾಯವಾಗಿ ನಿತ್ಯ ವಿಧಾಯಕವಾಗಿರಲಿಲ್ಲ. ಕ್ರಮೇಣ ಅವು ನೀಟಾದ ಸೊಗಸಿನ ( of fashion ) ಸಂಪ್ರದಾಯವೂ ಪದ್ಧತಿಯೂ ಆದುದರಿಂದ ತಮ್ಮ ಮೇಲೆ ತಾವೇ ಹೇರಿಕೊಂಡ ಅವಶ್ಯಕರ್ತವ್ಯದ ಬಂಧನವಾಯಿತು.

ಅನಂತರ ಇಂಡಿಯಾ ದೇಶದ ಇತಿಹಾಸದಲ್ಲಿ ಪೌರಾಣಿಕ ಕರ್ಮಕಾಂಡವು ಯಜ್ಞಗಳಿಗೆ ಬದಲಾದ ಆಚರಣೆಯಾಯಿತು. ಪೌರಾಣಿಕ ಕರ್ಮಕಾಂಡವು ಯಜ್ಞಗಳ ಸ್ಥಾನವನ್ನು ಆಕ್ರಮಿಸಿಕೊಂಡಿತು. ಮಹಾಭಾರತದ ಸ್ವಜನಯುದ್ಧದಿಂದ ಅನೇಕ

ವಾಸ್ತವಿಕವಾದ ಬದಲಾವಣೆಗಳಾದವು. ಧಾರ್ಮಿಕವೂ ರಾಜಕೀಯವೂ ಆದ ಕ್ರಾಂತಿಯಿಂದ ರಾಷ್ಟ್ರದ ವ್ಯವಸ್ಥೆಯೇ ಸಂಪೂರ್ಣವಾಗಿ ತಲೆ ಕೆಳಗಾಯಿತು. ಪ್ರಾಚೀನ ದೇವತೆಗಳ ವಿಷಯದಲ್ಲಿ ಮನೋಭಾವವೇ ಬದಲಾಯಿತು. ಭೌತಿಕ–ಆವಶ್ಯಕತೆಗಳು ಅನಂತವಾಗಿ ಬೆಳೆದವು. ಒಂದು ಯಜ್ಞಕ್ಕಾಗಿ ಜನರು ಎಷ್ಟೋ ತಿಂಗಳನ್ನು ವರ್ಷಗಳನ್ನೂ ಕಳೆಯುವದು ಸಾಧ್ಯವಿಲ್ಲವಾಯಿತು. ಆದ್ದರಿಂದ ಹಳೆಯ ಯಜ್ಞಗಳಿಗೆ ಬದಲಾಗಿ ಪೌರಾಣಿಕ ಕರ್ಮಕಾಂಡವು ಏರ್ಪಟ್ಟಿತು. ನಮ್ಮ ಧರ್ಮಕ್ಕೆ ಸ್ವಲ್ಪವೂ ಹಾನಿಮಾಡದಂತೆ, ಕರ್ಮಕಾಂಡದಲ್ಲಿ ಈಗ ಅವಶ್ಯವಾದ ಬದಲಾವಣೆಗಳನ್ನೂ ಮಾಡಬಹುದೆಂಬುದಕ್ಕೆ ಈ ವಿಷಯವು ಪ್ರಬಲವಾದ ಪೂರ್ವ ಸಾಧನೆಯನ್ನು ಆದರ್ಶವಾಗಿ ತೋರಿಸುತ್ತದೆ.

ಧರ್ಮಶಾಸ್ತ್ರಗಳೂ ಪದ್ಧತಿಗಳೂ ಸಂಪ್ರದಾಯಗಳೂ ಒಂದೇ ದೇಶದ ಬೇರೆ ಬೇರೆ ಪ್ರಾಂತ್ಯಗಳಲ್ಲಿಯೂ ಕಾಲಗಳಲ್ಲಿಯೂ ಬೇರೆ ಬೇರೆಯೇ ಆಗಿವೆ. ಮತ್ತು ಸಮಾಜದ ಆರೋಗ್ಯವೂ ಹಿತವೂ ಶ್ರೇಯಸ್ಸೂ ನಿರಂತರವಾದ ಬದಲಾವಣೆಯಲ್ಲಿಯೂ ಬೆಳವಣಿಗೆಯಲ್ಲಿಯೂ ವಿಹಿತವಾದ ಮಾರ್ಪಾಡುಗಳಲ್ಲಿಯೂ ಇವೆ. "ಬದಲಾವಣೆ ಹೊಂದು, ಇಲ್ಲವೇ ನಾಶವಾಗು" ಎನ್ನುವದೇ ಪ್ರಕೃತಿಯ ಉಗ್ರವಾದ ಎಚ್ಚರಿಕೆಯ ನುಡಿಯಾಗಿದೆ.

ವಿಕಾಸವಾದಿಗಳಲ್ಲಿ ಈಗ ಅತ್ಯಂತ ಶ್ರೇಷ್ಠರೂ ಪ್ರಸಿದ್ಧರೂ ಆದ ಡಾಕ್ಟರ್ ಡೇವಿಡ್ ಸ್ಟಾರ್ ಜೋರ್ಡನ್ ( Dr. David Starr Jordan ) ರವರು "ನವ ಸಾಮಾಜಿಕ ವಿಕಾಸದ ವಿಚಾರದಲ್ಲಿ ಸಾಮಾಜಿಕವಾದ ಉತ್ಕೃಷ್ಟ ಪರಿಪೂರ್ಣತೆಯೇ ಯಾವಾಗಲೂ ಅಪರಿಪೂರ್ಣತೆಯಾಗಿ ತೋರಬೇಕು ; ಏಕೆಂದರೆ ಅತ್ಯುನ್ನತವಾಗಿ ಬೆಳವಣಿಗೆಯನ್ನು ಪಡೆದಿರುವ ಸಮಾಜವು ಪ್ರಬಲವಾದ ಪ್ರಗತಿ ಶಕ್ತಿಯನ್ನು ಪಡೆದಿರಬೇಕು. ಒಂದು ಸ್ಥಿತಿಯನ್ನು ಪಡೆದಿರುವ ಸಮಾಜವು ಎಲ್ಲಾ ಅಭಿವೃದ್ಧಿಯೂ ಕುಂಠಿತವಾದ ಸ್ಥಿತಿಯಲ್ಲಿರುತ್ತದೆ. ಅತ್ಯಂತ ಶ್ರೇಷ್ಠವಾಗಿ ಬೆಳವಣಿಗೆಯನ್ನು ಹೊಂದಿರುವ ಜೀವಿಯು ಅತ್ಯಂತ ಮಹತ್ತಾದ ಅಸಂಪೂರ್ಣತೆಗಳನ್ನು ತೋರಿಸುತ್ತದೆ" ಎಂದು ಹೇಳಿದ್ದಾರೆ. ಒಂದು ಪರಿಸ್ಥಿತಿಗೆ ಅತ್ಯಂತ ಪೂರ್ಣತೆಯಿಂದ ಹೊಂದಿಕೊಂಡಿರುವ ವಸ್ತು ಸಹ, ಪರಿಸ್ಥಿತಿಗಳೇ ಅತ್ಯಂತ ವೇಗವಾಗಿ ಬದಲಾವಣೆ ಹೊಂದುತ್ತಿರುವದರಿಂದ ಪುನಃ ಪುನಃ ಹೊಂದಿಕೊಳ್ಳುತ್ತಲೇ ಇರಬೇಕಾಗುತ್ತದೆ. ಹೋರಾಟವೂ ಬದಲಾವಣೆಯೂ ನಿಂತ ಮೇಲೆ, ಎಲ್ಲರೂ ಭದ್ರವಾಗಿಯೂ ಸುಖವಾಗಿಯೂ ಇದ್ದಾಗ, ಸ್ಥಿರವಾದ ಧರ್ಮ ಯುಗವೂ ಭೂವೈಕುಂಠವೂ ಸ್ಥಾಪನೆಯಾಗುವವೆಂಬ ಕನಸಿಗೆ ನಮಗಿರುವ ಮಾನವನ ಮತ್ತು ಪ್ರಪಂಚದ ಜ್ಞಾನದಲ್ಲಿ ಆಧಾರವೇ ಇಲ್ಲ.

ಆದ್ದರಿಂದ ನಮ್ಮ ಕರ್ಮಕಾಂಡವನ್ನು ನಮ್ಮ ಆಗಾಗಿನ ಪರಿಸ್ಥಿತಿಗಳಿಗೆ ಅನುಗುಣವಾಗಿ ಹೊಂದಿಸಿಕೊಳ್ಳುತ್ತಿರಬೇಕು. ವೇದಕಾಲದ ಋಷಿಗಳ ಆವಶ್ಯಕತೆಗಳಿಂದ ನಮ್ಮ ಆವಶ್ಯಕತೆಗಳು ಪ್ರತ್ಯೇಕವಾಗಿವೆ. ಯಾವದರ ಸುತ್ತಲೂ ಇಡಿಯ ಕರ್ಮಕಾಂಡವೇ ಸುತ್ತುತ್ತಿದೆಯೋ ಆ "ರ"ಗಳೇ ಚಲಿಸಿವೆ, ಬದಲಾಯಿಸಿವೆ. "ನಿಮಗೆ ಹೆಚ್ಚು ಗೋಸಂಪತ್ತು ಬೇಕಾದರೆ ಇಂದ್ರನನ್ನು ಕುರಿತು ಯಜನ ಮಾಡಿ; ನಿಮಗೆ ಹೆಚ್ಚು ಸಂತಾನ ಬೇಕಾದರೆ ಪ್ರಜಾಪತಿಗೆ ಹೋಮಮಾಡಿ; ಇತ್ಯಾದಿ. ಆದರೆ ವರ್ತಮಾನ ಕಾಲದ ಕರ್ಮ ಕಾಂಡವು, ಹೀಗೆ ಬದಲಾವಣೆ ಹೊಂದುತ್ತದೆ; "ಉದ್ಯೋಗ ಮತ್ತು ಕಲೆ, ಕಸುಬುಗಳ ಅಭಿವೃದ್ಧಿಯ ಮುನ್ನಡೆಯ ಈ ಶತಮಾನದಲ್ಲಿ ನೀವು ಅಂಗುಲ ಅಂಗುಲವಾಗಿ ರಾಜಕೀಯಕ್ಕೆ ಬಲಿಯಾಗಿ ಸಾಯದೆ, ಬದುಕಬೇಕಾದರೆ, ವಿದ್ಯುಚ್ಛಕ್ತಿಯ ಮಾತರಿಶ್ವನನ್ನು ವಶಪಡಿಸಿಕೊಳ್ಳಿ; ಆವಿಯ (ಉಗೆಯ) ವರುಣನನ್ನು ಸೇವಕನನ್ನಾಗಿ ಮಾಡಿಕೊಳ್ಳಿ; ವ್ಯವಸಾಯ ವಿಜ್ಞಾನದ ಕುಬೇರನನ್ನು ಸ್ನೇಹ ಮಾಡಿಕೊಳ್ಳಿ." ಈ ವಿದ್ಯೆಗಳಲ್ಲಿ ಶಿಕ್ಷಣ ಕೊಡುವ ವಿಜ್ಞಾನಿಯೂ ಕಲಾವಿದನೂ ನಿಮಗೆ ಈ ದೇವತೆಗಳ ಪರಿಚಯ ಮಾಡಿಸುವ ಪುರೋಹಿತರು.

ರಾಮನು ಸಂಪ್ರದಾಯ ಬಾಹಿರವಾದ ಭಾಷೆಯನ್ನು ಉಪಯೋಗಿಸುವ ಪಾಷಂಡವಾದಿಯೆಂದು ಆಪಾದಿಸಬೇಡಿ. ಈ ಪ್ರಪಂಚದಲ್ಲಿ ಪ್ರತಿಯೊಂದೂ ಬದಲಾವಣೆ ಹೊಂದುತ್ತಿದೆಯೆಂಬದನ್ನು ನೆನಪಿನಲ್ಲಿಡಬೇಕು. ನಮ್ಮ ದೇಶದ ಮುಖವೇ ಬಹಳ ಮಟ್ಟಿಗೆ ಸಂಪೂರ್ಣವಾಗಿ ಬದಲಾವಣೆಯಾಗಿದೆ; ಸರಕಾರವು ಬದಲಾವಣೆಯಾಗಿದೆ; ಭಾಷೆ ಬದಲಾವಣೆಯಾಗಿದೆ, ಈ ದೇಶದ ನಿವಾಸಿಗಳ ಬಣ್ಣವು ಸಹ ಬದಲಾವಣೆಯಾಗಿದೆ; ಆದರೆ, ವೇದಕಾಲದ ದೇವತೆಗಳು ಮಾತ್ರ ಕಾಲದೊಡನೆ ಬೆಳೆಯದೆ, ಮೇಲೆ ಸ್ವರ್ಗದಲ್ಲಿ ಅವರ ತೊಟ್ಟಿಲುಗಳಲ್ಲಿಯೇ ಶಿಶುಗಳಾಗಿ ಜೋಕಾಲಿಯಾಡುತ್ತಿರಬೇಕೆ? ಅವರು ಕೆಳಗಿಳಿದು ಬಂದು ನಮ್ಮೊಡನೆ ಸ್ವೇಚ್ಛೆಯಾಗಿ ಸೇರಿ ಮಾನವರಿಗೆ ಹೆಚ್ಚು ಪರಿಚಿತರಾಗುವದು ಬೇಡವೆ?

ಭಾರತ ದೇಶದ ಅತ್ಯಂತ ಪ್ರಿಯ ಪುಣ್ಯ ಜನರೆ! ಹಿಂದಿನ ಪೂಜ್ಯ ಮಹರ್ಷಿಗಳಂತೆ ಗುಡುಗು, ಸಿಡಿಲು, ಮಿಂಚುಗಳಲ್ಲಿಯೂ ಸೂರ್ಯ ಚಂದ್ರರಲ್ಲಿಯೂ, ಗಾಳಿ, ಬೆಂಕಿ, ನೀರು, ಭೂಮಿಗಳಲ್ಲಿಯೂ "ಏಕಂ ಸತ್" ಎಂಬ ಒಬ್ಬನೇ ದೇವರನ್ನು ನೀವು ನೋಡಬಾರದೆಂದು ಹೇಳುವದಕ್ಕೆ ರಾಮನು ಬಹಳ ದೂರನೆಂದು ತಿಳಿಯಿರಿ. ದೇವರನ್ನು ಪ್ರಕೃತಿಯಲ್ಲಿ ಪ್ರಕೃತಿರೂಪವಾಗಿಯೇ ತೋರುತ್ತಿರುವಂತೆ ಖಂಡಿತ ನೋಡಿರಿ, ಆದರೆ ಇನ್ನೂ ಸ್ವಲ್ಪ ಹೆಚ್ಚಾಗಿ, ಅವನು ಎಲ್ಲದರಲ್ಲಿಯೂ ಎಲ್ಲವಾಗಿಯೂ ಇರುವಂತೆ ನೋಡಿರಿ. ಅವನನ್ನು ಭೌತವಿಜ್ಞಾನ ಮಂದಿರದಲ್ಲಿಯೂ ಪ್ರಯೋಗ ಮಂದಿರದಲ್ಲಿಯೂ ನೋಡಿರಿ. ನಿಮಗೆ ಯಜ್ಞವೇದಿಕೆಯೂ ಹೋಮಕುಂಡದ

ಅಗ್ನಿಯೂ ಎಷ್ಟು ಪವಿತ್ರವೋ ರಸಾಯನ ಶಾಸ್ತ್ರಜ್ಞನ (ರಸಾಯನ ವಿಜ್ಞಾನಿಯ) ಪ್ರಯೋಗ ವೇದಿಕೆಯೂ ( Table ) ಅಷ್ಟೇ ಪವಿತ್ರವಾಗಿ ಕಾಣಲಿ. ಪೂರ್ವ ಕಾಲದ ಯಾಗಾಗ್ನಿಯನ್ನೂ ಹೋಮಾಗ್ನಿಯನ್ನೂ ನೀವು ಪುನರುಜ್ಜೀವನ ಮಾಡಲು ಸಾಧ್ಯವಿಲ್ಲವಾದರೂ ಆ ಹಿಂದಿನ ಪ್ರೇಮಪೂರ್ಣವಾದ ಚೇತನಶಕ್ತಿಯನ್ನೂ ಪೂಜ್ಯ ಭಾವನೆಯನ್ನೂ ಭಯಭಕ್ತಿಯನ್ನೂ ನಿಶ್ಚಿತವಾಗಿಯೂ ಪುನಶ್ಚೇತನಕ್ಕೆ ತರಬಹುದು. ಈ ಶುದ್ಧ ಭಾವನೆಗಳನ್ನು ಬೆಳೆಸಿಕೊಂಡು ಈಗಿನ ಕಾಲಕ್ಕೆ ವಿಹಿತವಾದ ಕರ್ತವ್ಯ ಕರ್ಮಗಳನ್ನು ನಡೆಸಬೇಕು. ಅಗಾಸಿಸ್ಸನು ( Agassiz ) ಹೇಳುವಂತೆ "ಪ್ರಕೃತಿಯ ತತ್ತ್ವಗಳನ್ನು ಅಭ್ಯಾಸಮಾಡುವದು ದೇವರ ವಿಚಾರಗಳನ್ನೇ ಪುನಃ ಆಲೋಚನೆ ಮಾಡುವುದಲ್ಲವೆ?" ನಿಮ್ಮ ಎಲ್ಲಾ ಕಾರ್ಯಗಳ ಮೇಲೂ ಪವಿತ್ರ ಹಾಗೂ ಪರಿಶುದ್ಧ ಭಾವನೆಯು ಉಸಿರಾಡಲಿ. ರಾಮನು ಯಜ್ಞದ ಅಗ್ನಿಯನ್ನು ಹೊತ್ತಿಸಲಾರನಾದ್ದರಿಂದ ಕಮ್ಮಾರನ ಕುಲುಮೆಯ ಬೆಂಕಿಯನ್ನೇ ಶ್ರೌತಾಗ್ನಿಯಷ್ಟೇ ಪವಿತ್ರವಾಗಿ ಭಾವಿಸುತ್ತಾನೆ. ಪ್ರೇಮಾತ್ಮರೆ! ನಿಮಗೆ ರಾಮನ ದೃಷ್ಟಿಯಿದ್ದರೆ, ರೈತನ ಎತ್ತಿನ ಗಾಡಿಯನ್ನೇ ಇಂದ್ರನ ರಥವನ್ನಾಗಿ ಭಾವಿಸಬಹುದು. ಈ ದೇವರ ದೃಷ್ಟಿಯನ್ನು ಬೆಳೆಸುವದೇ ನಿಜವಾದ ಯಜ್ಞದ ಮನೋಭಾವ.

ವರ್ತಮಾನಕಾಲದ ರಾಷ್ಟ್ರೀಯ ಸ್ಥಿತಿಯಲ್ಲಿ ನಿಮ್ಮ ಸ್ಥಾನವನ್ನೂ ಕರ್ತವ್ಯ ವನ್ನೂ ಅರಿಯದಿದ್ದರೆ ನೀವು ನಿಮ್ಮ ಲೋಕಾಂತರ ಜೀವನವನ್ನೂ ಆತ್ಮನನ್ನೂ ಪೂರ್ಣವಾಗಿ ಕಡೆಗಂಡಂತೆ ಆಗುತ್ತದೆ. ಇಂಥಾ ಭಯಂಕರ ನಾಸ್ತಿಕರು ನೀವಾಗಬೇಡಿ. ನಿಮ್ಮ ಜೀವನದಲ್ಲಿ, ನಿಮ್ಮ ಸಾರ್ವಭೌಮ ಕರ್ತವ್ಯವಿರುವದು ನಿಮ್ಮ ಅನಂತರ— ಆತ್ಮದ ( After Self ) ವಿಷಯದಲ್ಲಿ. ನೀವು ಮುಂದೆ ಏನಾಗಬೇಕೆಂದು ನಿಮ್ಮ ಆದರ್ಶವೂ ಗುರಿಯೂ ಇದೆಯೋ ಅದೇ ನಿಮ್ಮ ಅನಂತರದ ಆತ್ಮ. ಅದು ಕಾಲಾಂತರದಲ್ಲಿ ಸಾಧ್ಯವಾಗುವಂತೆಯೂ ವಾಸ್ತವವಾಗುವಂತೆಯೂ ಬಾಳಿ, ಐವತ್ತು ವರ್ಷಗಳ ಅನಂತರ ನಿಮ್ಮ "ಅನಂತರ—ಆತ್ಮನು" ಈಗಿನ ನಿಮ್ಮ ವಿಷಯದಲ್ಲಿ ನಾಚಿಕೆಪಟ್ಟುಕೊಳ್ಳದಿರಲಿ. ಇಂಡಿಯಾದ ಮುಂದಿನ ಸಂತಾನವು ತನ್ನ ನೈರಾಶ್ಯದ ನಷ್ಟವನ್ನು ತಾನು ಕಾಣದ ರೀತಿಯಲ್ಲಿ ನಿಮ್ಮ "ಅನಂತರ—ಆತ್ಮ"ನ ಬಾಳನ್ನು ಬಾಳಿರಿ.

ಸಂಪ್ರದಾಯಬದ್ಧರಾದ ಹಿಂದೂಗಳೆ! ನಿಮ್ಮ ಅಂತರಾತ್ಮನನ್ನು ಶುದ್ಧಿಮಾಡಿ ಕೊಳ್ಳಿ. ನಿಮಗೆ "ಕರ್ಮ—ಪ್ರಭು" ಗಳಿಬ್ಬರ ಆವಶ್ಯಕತೆಯಿಲ್ಲ. ಈಗ ನಿಮಗೆ ಅಗತ್ಯ ವಾದ ಉಡುಗೆಗಳಿಗೆ ಅಕಾಲಿಕವೂ ಅಸಂಗತವೂ ಹಳೆಯ ಕಾಲದ ಪ್ರಪಂಚದ ಸ್ಮಾರ ಕವೂ ಆದ ನಿಮ್ಮ ಪೂರ್ವಜರ ಶೇಷವಸ್ತ್ರಗಳನ್ನು ಸೇರಿಸಿಕೊಳ್ಳಬೇಡಿ. ಮುಖ್ಯ ವಾದ ಧ್ಯೇಯವನ್ನು ಬಿಟ್ಟು ನಿಮ್ಮ ಜೀವನಗತಿಯಿಂದ ಬೇರೆಯಾದ ವೃತ್ತಿಯನ್ನು ಸೇವಿಸುವದೇ ಜನರನ್ನೂ ದೇಶಗಳನ್ನೂ ದಿವಾಳಿಯೆಬ್ಬಿಸುವ ಮಹಾಪರಾಧ. ಜೀವನದಲ್ಲಿ

ಒಂದು ಉದ್ದೇಶವುಳ್ಳ ಮನುಷ್ಯನು ಅದಕ್ಕೆ ಸಾಧನವಾಗದ ಕರೆಗಳಿಗೂ ಆಹ್ವಾನಗಳಿಗೂ ವೃತ್ತಿಗಳಿಗೂ "ಇಲ್ಲ" ಎನ್ನುತ್ತಾನೆ.

ಯಜ್ಞವೆಂದರೆ ದೇವತೆಗಳಿಗೆ ಅರ್ಪಣಮಾಡುವದು. ಈಗ 'ದೇವ' ಎಂದರೆ ವೇದಾಂತದಲ್ಲಿಯೂ ವೇದದಲ್ಲಿಯೂ ಅರ್ಥವೇನು? ದೇವ ಎಂದರೆ ಪ್ರಕಾಶ ಮತ್ತು ಪ್ರಾಣವನ್ನು ನೀಡುವ ಶಕ್ತಿ. ದೇವತೆಗಳೆಂದರೆ ಹೊರಗಿನ (ವಿಷಯರೂಪ) ಶಕ್ತಿಗಳಾಗಿಯೋ ಒಳಗಿನ (ವಿಷಯಿಯ) ಧೀಶಕ್ತಿಗಳಾಗಿಯೋ ಬಗೆಬಗೆಯಾಗಿ ತೋರಿಕೊಳ್ಳುವ ದೈವೀಶಕ್ತಿ. ಮತ್ತೇನೆಂದರೆ, ದೇವತಾ ಎನ್ನುವದು ಅನೇಕ ಸಂದರ್ಭಗಳಲ್ಲಿ ಆಧ್ಯಾತ್ಮಿಕಕ್ಕೆ ವ್ಯತಿರಿಕ್ತವಾದ, ವಿಶ್ವದಲ್ಲಿರುವ ಆಧಿದೈವಿಕವಾದ ಒಂದು ಶಕ್ತಿಯನ್ನೇ ಹೇಳುತ್ತದೆ. ಚಕ್ಷು ಅಥವಾ ದೃಷ್ಟಿ ಎಂದರೆ, ಒಂದು ವ್ಯಕ್ತಿಯ ದೃಷ್ಟಿ; ಆದರೆ ಚಕ್ಷುರಿಂದ್ರಿಯದ ದೇವತೆಯೆಂದರೆ, ಎಲ್ಲಾ ಜೀವರಲ್ಲಿರುವ ದೃಷ್ಟಿಶಕ್ತಿ, ದರ್ಶನಶಕ್ತಿ. ಇದೇ ಆದಿತ್ಯ. ಹೊರಗಿನ ಸೂರ್ಯನು ಅಥವಾ ಪ್ರಪಂಚದ ನೇತ್ರವು ಇದಕ್ಕೆ ಸಂಕೇತ ಮಾತ್ರ. ಕರ್ಮೇಂದ್ರಿಯವಾದ ಹಸ್ತವೆಂದರೆ ಮನುಷ್ಯನ ಕೈಗಳಲ್ಲಿರುವ ಶಕ್ತಿ. ಆದರೆ ಹಸ್ತಗಳ ದೇವತೆಯೆಂದರೆ ಎಲ್ಲರ ಕೈಗಳಿಗೂ ಚಾಲಕವಾದ ಶಕ್ತಿ. ವಿಶ್ವದೃಷ್ಟಿಯಿಂದ ನೋಡಿದಾಗ ಈ ಶಕ್ತಿಯೇ ಇಂದ್ರ. ಹೀಗೆಯೇ ಇತರ ದೇವತೆಗಳ ವಿಚಾರವೂ ಇದೆ. ಇಂದ್ರಿಯ ದೇವತೆಗಳೆಂದು ಹೇಳುವಾಗಲೆಲ್ಲಾ ಇದೇ ಅರ್ಥ.

ಈಗ ವಿಚಾರದೃಷ್ಟಿಯಿಂದ ನೋಡಿದರೆ, ಯಜ್ಞದಲ್ಲಿ ದೇವತೆಗಳಿಗೆ ಆಹುತಿ ಕೊಡುವದೆಂದರೆ ವಿನು? ನನ್ನ ನೆರೆಹೊರೆಯವರನ್ನೆಲ್ಲಾ ನಾನೇ ಎಂದು ತಿಳಿದು, ದೇವರ ಇಚ್ಛೆಯಲ್ಲಿ ನನ್ನ ಇಚ್ಛೆಯನ್ನು ಮುಳುಗಿಸಿ, ನನ್ನ ಆತ್ಮನನ್ನು ಎಲ್ಲರ ಆತ್ಮನೆಂದು ಭಾವಿಸಿ, ನನ್ನ ವೈಯಕ್ತಿಕ (ವ್ಯಷ್ಟಿಯ) ಧೀಶಕ್ತಿಗಳನ್ನು ಅಥವಾ ಕರಣಶಕ್ತಿಗಳನ್ನು ವಿಶ್ವದ (ಸಮಷ್ಟಿಯ) ಆಯಾ ದೇವತಾಶಕ್ತಿಗಳಿಗೆ (ಎಲ್ಲವೂ ಸ್ವರೂಪದಲ್ಲಿ ಒಂದೇ ಎಂದು) ಒಪ್ಪಿಸುವದೇ ಯಜ್ಞದಲ್ಲಿ ದೇವತೆಗಳಿಗೆ ಆಹುತಿಕೊಡುವದು. ಉದಾಹರಣೆಗಾಗಿ, ಆದಿತ್ಯನಿಗೆ ಅರ್ಪಣವೆಂದರೆ, ಅಯೋಗ್ಯವಾದ ವರ್ತನೆಯಿಂದ ಯಾರ ಕಣ್ಣಿಗೂ ನೋವನ್ನುಂಟುಮಾಡುವದಿಲ್ಲವೆಂದು ದೃಢವಾದ ನಿಶ್ಚಯಮಾಡಬೇಕು. ಯಾವ ಕಣ್ಣುಗಳಿಗಾದರೂ ನೀವು ಪ್ರೇಮವನ್ನೂ ನಗುವನ್ನೂ ಒಳ್ಳೆಯತನವನ್ನೂ ಆಶೀರ್ವಾದವನ್ನೂ ಮೆಚ್ಚುವಂತೆ ತೋರಿಸುವದು ಎಲ್ಲಾ ಕಣ್ಣುಗಳಲ್ಲಿಯೂ ದೇವರನ್ನೇ ನೋಡುವದಕ್ಕೆ ನಿಮ್ಮ ಮೇಲೆಯೇ ಹಿಂದಿರುಗಿ ಪರಿಣಾಮವಾಗಿ ಅನುಗ್ರಹರೂಪವಾಗುತ್ತದೆ. ಇದೇ ಆದಿತ್ಯನಿಗೆ ಅರ್ಪಣೆ.

ಇಂದ್ರನಿಗೆ ಅರ್ಪಣೆಯೆಂದರೆ ನಾಡಿನಲ್ಲಿರುವ ಎಲ್ಲಾ ಕೈಗಳಿಗೂ ಒಳ್ಳೆಯದಾಗುವಂತೆ ಕೆಲಸಮಾಡುವದು. ಪ್ರತಿಯೊಂದೂ ಅದರದರ ಸರಿಯಾದ ಆಹಾರವನ್ನು ಸರಿಯಾಗಿ ತೆಗೆದುಕೊಳ್ಳುವದರಿಂದಲೇ ಬೆಳೆಯುತ್ತದೆ. ಕೈಯೂ

ಶ್ರೋಳೂ ಮತ್ತು ಮಾಂಸಖಂಡಗಳೂ ಆಹಾರವನ್ನು ಸೇವಿಸಿ ಬೆಳೆದು, ತಮ್ಮ ಕೆಲಸವೆಂಬ ವ್ಯಾಯಾಮದಿಂದ ಬಲಗೊಳ್ಳುತ್ತವೆ. ಹೀಗೆ ಇಂದ್ರನಿಗೆ ಆಹುತಿ ನೀಡು ವದೆಂದರೆ ದೇಶದಲ್ಲಿ ಉದ್ಯೋಗವನ್ನು ಬಯಸುವಂಥ ಲಕ್ಷಾಂತರ ಬಡವರ ಕೈಗಳಿಗೆ ಉದ್ಯೋಗಗಳನ್ನು ಕಂಡುಹಿಡಿದು ಒದಗಿಸುವದು. ಹೌದು, ಸರಿ, ಇಂದ್ರನನ್ನು ತೃಪ್ತಿಪಡಿಸಿದರೆ, ದೇಶದಲ್ಲಿ ಸಮೃದ್ಧಿಯ ಅನುಗ್ರಹವಾಗುವದು ಸ್ವಾಭಾವಿಕ. ಎಲ್ಲಾ ಕೈಗಳೂ ಉದ್ಯೋಗಗಳಲ್ಲಿ ತೊಡಗಿದರೆ ಬಡತನವೆಲ್ಲಿ ಬರಬೇಕು? ಇಂಗ್ಲೆಂಡಿನಲ್ಲಿ ವಾಸ್ತವವಾಗಿಯೂ ಯಾವ ಬೆಳೆಯನ್ನೂ ಬೆಳೆಯುವದಿಲ್ಲ, ಆದರೂ ಆ ದೇಶವು ಸಂಪದ್ಭರಿತವಾಗಿದೆ. ಏಕೆ? ಏಕೆಂದರೆ, ಕೈಗಳ ದೇವರಾದ ಇಂದ್ರನು ಕಲೆಗಳಿಂದಲೂ ಕಸುಬುಗಳಿಂದಲೂ ಉದ್ಯೋಗಗಳಿಂದಲೂ ಅಜೀರ್ಣವಾಗುವವರೆಗೂ ಔತನ ದಿಂದ ಸೇವಿಸಲ್ಪಡುತ್ತಾನೆ. ಸಕಲರ ಸುಖಕ್ಕಾಗಿಯೂ ಎಲ್ಲರ ಕೈಗಳನ್ನೂ ಸ್ನೇಹ ಸಹಕಾರಗಳಿಂದ ಒಟ್ಟುಗೂಡಿಸಿ ಕಾರ್ಯಗಳನ್ನು ಮಾಡುವದು ಇಂದ್ರನಿಗೆ ತೃಪ್ತಿ ಪಡಿಸುವ ಯಜ್ಞ. ವಿಶ್ವಹಿತಕ್ಕಾಗಿ ಎಲ್ಲರ ತಲೆಗಳನ್ನೂ ಒಟ್ಟುಸೇರಿಸಿ, ಯೋಚನೆ-ಯೋಜನೆಗಳನ್ನು ಮಾಡುವದೇ ಬೃಹಸ್ಪತಿಯ ಯಜ್ಞ. ಎಲ್ಲರ ಹೃದಯಗಳನ್ನೂ ಒಟ್ಟುಗೂಡಿಸಿ ಪ್ರೇಮದಿಂದ ಎಲ್ಲರ ಹಿತವನ್ನು ಸಾಧಿಸುವದೇ ಹೃದಯ ದೇವತೆಯಾದ ಚಂದ್ರನ ಯಜ್ಞ—ಸೋಮಯಾಗ.

ಸಂಕ್ಷೇಪವಾಗಿ ಹೇಳುವದಾದರೆ ದೇವತೆಗಳಿಗೆ ತೃಪ್ತಿಪಡಿಸುವ ಯಜ್ಞವೆಂದರೆ ದೇಶದ ಎಲ್ಲಾ ಕೈಗಳೊಡನೆ ನನ್ನ ಕೈಗಳನ್ನೂ ಲೋಕಹಿತಸಾಧನೆಯಲ್ಲಿ ಅರ್ಪಿಸು ವದು, ನನ್ನ ಕಣ್ಣುಗಳನ್ನು ಎಲ್ಲರ ಕಣ್ಣುಗಳೊಡನೆ ಅರ್ಪಿಸುವದು, ನನ್ನ ಮನಸ್ಸನ್ನು ಎಲ್ಲರ ಮನಸ್ಸಿನೊಡನೆ ಅರ್ಪಿಸುವದು; ನನ್ನ ಹಿತಗಳನ್ನೆಲ್ಲಾ ದೇಶದ ಹಿತಗಳಲ್ಲಿ ಮುಳುಗಿಸುವದು; ಎಲ್ಲರನ್ನೂ ನನ್ನ ಆತ್ಮವೆಂದೇ ಭಾವಿಸುವದು; ಅಥವಾ 'ತತ್ತ್ವ ಮಸಿ' 'ಅದೇ ನೀನಾಗಿದ್ದಿ' ಎಂಬದನ್ನು ವ್ಯವಹಾರದಲ್ಲಿ ಸಾಧಿಸುವದು. ಜೀವಾ ತ್ಮನ ಮಾಂಸಮಯ ದೇಹವನ್ನು ಬಲಿಗೊಟ್ಟಮೇಲೆ ಎಲ್ಲವೂ ನಾನೇ ಎಂಬ (ಅರಿವಿನ) ಪುನರುಜ್ಜೀವನ. ಇದೇ ವೇದಾಂತ.

ಪ್ರಭುವೆ! ಎನ್ನ ಜೀವನವ ಸ್ವೀಕರಿಸು,
ಶುಭವ ನಿನಗೊಪ್ಪಿಸುವೆ, ಬಿಡದೆ ಹರಸು.
ತೆಗೆದುಕೋ ಎನ್ನ ಹೃದಯವ ದೇವ,
ಪ್ರೇಮದಿಂ ತುಂಬಿ ತುಳುಕಲಿ ಎನ್ನ ಭಾವ,
ತೆಗೆದುಕೋ ಎನ್ನ ಕಂಗಳನು ಗುರುದೇವ,
ನಿನ್ನ ಸೌಂದರ್ಯಸುಖಸಂಪದದಿ ಮದಿಸಲವು
ತೆಗೆದುಕೋ ಎನ್ನ ಕೈಗಳನು, ಅವುಗಳೆಂದೆಂದು
ಶ್ರಮದಿಂದೆ ಬೆವರಿಡಲಿ, ಸತ್ಯಶಿವ ನಿನಗಾಗಿ

ಶಿಷ್ಯವರ! ಎದ್ದೇಳು, ಬಳಲಿಕೆಯ ಲೆಕ್ಕಿಸದೆ,
ನಿನ್ನೆದೆಯ ಉದಯರಾಗವಿ ಮೀಯಿಸಲು ಓಡು ತ್ವರದೆ.

ಈ ಪದ್ಯದಲ್ಲಿರುವ ಪ್ರಭು, ಎಂಬ ಶಬ್ದಕ್ಕೆ ಮೋಡಗಳ ಮೇಲೆ ಸ್ವರ್ಗದಲ್ಲಿ ಕುಳಿತು ಶೀತದಿಂದ ಸೆಟೆದು ಹೋಗುತ್ತಿರುವ ಅದೃಶ್ಯವಾದ ಪೀಡೆಯೆಂದು ಅರ್ಥವಲ್ಲ; ಪ್ರಭು ಎಂದರೆ ಸರ್ವ; ಸರ್ವ ಮಾನವ ಕುಲ.

ಈ ಯಜ್ಞವನ್ನು ಪ್ರತಿಯೊಬ್ಬರೂ ಆಚರಿಸಬೇಕು. ಇದು ವಿಶ್ವ–ಧರ್ಮವಾಗಬೇಕು. ಇಂಡಿಯ! ಈ ವಿಶ್ವಧರ್ಮವೇ ನಿನ್ನದಾದರೆ ಬಾಳು, ಇಲ್ಲವೆ ಸಾಯಿ. ಈ ಎರಡರ ಹೊರತು ಬೇರೆ ಗತಿಯಿಲ್ಲ.

ಯಜ್ಞಕರ್ಮವನ್ನು ನಡೆಸುವಾಗ ದೇವತೆಗಳು ದರ್ಶನಕೊಡುತ್ತಿದ್ದರೆಂದು ನಿಮ್ಮ ಶಾಸ್ತ್ರಗಳು ಹೇಳುವದು ಅಕ್ಷರಶಃ ಸತ್ಯವೆಂದು ನಿಮಗೆ ರಾಮನು ಹೇಳುತ್ತಾನೆ. ಆದರೆ ಅದು ಕೇವಲ ಸಾಮೂಹಿಕ ಸಂಯಮದ ( Collective Concentration ) ಶಕ್ತಿಯನ್ನು ತೋರಿಸುತ್ತದೆ. ಒಂದು ಸಂದರ್ಭದಲ್ಲಿ ಉಪಸ್ಥಿತರಾಗಿರುವ ಏಕ ಮನಸ್ಸಿನ ಜನರ ಸಂಖ್ಯೆಯ ವರ್ಗಕ್ಕೆ ಅನುಗುಣವಾಗಿ ಸಂಯಮದ ಪರಿಣಾಮವು ವೃದ್ಧಿಯಾಗುವದೆಂದು ಮನಶ್ಶಾಸ್ತ್ರದ ಅತ್ಯಾಧುನಿಕ ಸಂಶೋಧನೆಗಳು ತೋರಿಸುತ್ತಿವೆ. ( The square of the number, The square of 9 is 81=9ರ ವರ್ಗ 81; 9 is a perfect square=9 ಪೂರ್ಣವರ್ಗ ಸಂಖ್ಯೆ; ಅಂದರೆ 9 ಕ್ಕೆ —3— ಪೂರ್ಣ ಸಂಖ್ಯೆಯ ವರ್ಗಮೂಲ square root ಇದೆ. $3 \times 3=9$. $1 \times 1=1$, $2 \times 2=4$, $3 \times 3=9$, $4 \times 4=16$, $5 \times 5=25$...5ರ ವರ್ಗ 25; 25ರ ವರ್ಗಮೂಲ 5.)

ಇದೇ ಸತ್ಸಂಗದ ಪ್ರಭಾವ. ಈಗ, ರಾಮನೊಬ್ಬನೇ ತನಗೆ ಇಷ್ಟವಾದ ಯಾವ ಭಾವನೆಯನ್ನಾದರೂ ಮೂರ್ತಿಮತ್ತಾಗಿ ಕಾಣುವಂತೆ ಮಾಡುವದು ಸಾಧ್ಯವಾದರೆ, ಒಂದೇ ಮನಸ್ಸಿನಿಂದ ಒಂದೇ ಮಂತ್ರವನ್ನು ಉಚ್ಚರಿಸುತ್ತಾ ಒಂದೇ ರೂಪವನ್ನು ಭಾವಿಸುತ್ತಾ ಇರುವ ನೂರಾರು ಸಾವಿರಾರು ಜನರು ಆ ರೂಪವನ್ನು ಮೂರ್ತಿಮಂತಾಗಿ ಕಾಣುವಂತೆ ಮಾಡುವದು ಸಾಧ್ಯವಿರಲಿಲ್ಲವೆ?

ಆದರೆ ಅದರಿಂದ ಏನು ಸಿದ್ಧವಾಗುತ್ತದೆ? (ನೀವೇ)–ಸರ್ವವೂ ಆದ ನಿಮ್ಮ ನಿಜವಾದ ಆತ್ಮನೇ — ಸಕಲದೇವತೆಗಳ ಸೃಷ್ಟಿಕರ್ತನೆಂದು ಸ್ಪಷ್ಟವಾಗಿ ತೋರಿಸುತ್ತದೆ. ಆದರೆ ನಿಮ್ಮ ಭಾವನೆಗಳೇ ಆದ ಈ ದೇವತೆಗಳೇ ಹುಸಿ ತೋರಿಕೆಯೂ ಪರಿಮಿತವೂ ಆದ ನಿಮ್ಮ ಅಹಂಕಾರವನ್ನು ನಿಯಮಿಸುತ್ತಲೂ ಪ್ರೇರಿಸುತ್ತಲೂ ಇವೆ. ನಿಮ್ಮ ನಿಮ್ಮ ಅದೃಷ್ಟದ ನಿರ್ಮಾಣಕರ್ತರು ನೀವೇ. ಹೊಲಸಿನಲ್ಲಿಯೂ ಹೇಸಿಕೆಯಲ್ಲಿಯೂ ಬಿದ್ದು ಹೊರಳಾಡುವ ಹೀನ ಗುಲಾಮರಾಗಿಯಾದರೂ ಇರಿ;

ಅಥವಾ ನಿಮ್ಮ ಜನ್ಮಸಿದ್ಧ ಹಕ್ಕಾಗಿರುವ ಮಹಿಮಾ ವೈಭವದ ಕಿರೀಟವನ್ನಾದರೂ ಧರಿಸಿರಿ. ನಿಮಗೆ ಇಷ್ಟವಾದಂತೆಯೂ ಯಥೋಚಿತವಾಗಿಯೂ ನಡೆಯಿರಿ. ಒಂದು ಭಾವನೆಯನ್ನೋ ಸೂಚನೆಯನ್ನೋ ಹೃದಯಂಗಮವನ್ನಾಗಿ ಮಾಡುವದರಲ್ಲಿ ವಿಹಿತವಾದ ಪ್ರತೀಕಗಳ ಹಾಗೂ ಸಂಕೇತಗಳ ಅದ್ಭುತ ಪರಿಣಾಮವೇನೆನ್ನುವ ದನ್ನು ರಾಮನು ಮನೋ ವಿಜ್ಞಾನದ ದೃಷ್ಟಿಯಿಂದ ಅರಿತಿದ್ದಾನೆ. ಸಮರ್ಪಣ ಭಾವದ ಕೇಂದ್ರೀಕೃತ ನಿಶ್ಚಯದಿಂದ ಲೀನವಾದ ಮನಸ್ಸುಳ್ಳವನು, ವಿಶ್ವಹಸ್ತ ಗಳಿಗೆ ತನ್ನ ಹಸ್ತಗಳನ್ನು ವಿವಾಹದಲ್ಲಿಯೋ ಎನ್ನುವಂತೆ, ತುಂಬಿದ ಭಕ್ತಿಯಿಂದಲೂ ಪವಿತ್ರ ನಿರ್ಧಾರದಿಂದಲೂ ಇಡಿಯ ಶರೀರವೆಲ್ಲಾ ಕಂಪಿತವಾಗಿ ಒಪ್ಪಿಸುತ್ತಿರುವಾಗ ಮಂತ್ರೋಚ್ಚಾರಣ ಪೂರ್ವಕವಾಗಿ ತನ್ನ ಅಲ್ಪಾತ್ಮನನ್ನು ವಿಶ್ವಶಕ್ತಿಯಲ್ಲಿ ಸುರಿಯು ತ್ತಿರುವದಕ್ಕೆ ಸಂಕೇತವಾಗಿ ಹೊರಗಡೆಯೂ ಅಗ್ನಿಯಲ್ಲಿ ಕೊನೆಗೆ ಉಚ್ಚವಾಗಿ ಸ್ವಾಹಾ ಎನ್ನುತ್ತ ಆಹುತಿಗಳನ್ನು ಒಪ್ಪಿಸುತ್ತಿದ್ದರೆ, ಆ ದಿವ್ಯವಾದ ಪ್ರತೀಕೋಪಾಸನೆಯಿಂದ ಆ ಪವಿತ್ರ ಕರ್ಮದ ಮೇಲೆ ಎಂಥಾ ಧೀರ ಗಂಭೀರವಾದ ಮುದ್ರೆಯನ್ನು ಒತ್ತಿ ದಂತಾಗುವದಿಲ್ಲ! ಆದರೆ, ಆಹಾ! ಯಾವ ಕರ್ಮವೂ ಇಲ್ಲದೆ ಮುದ್ರೆಯೊಂದೇ ಎಲ್ಲಿ ಸರ್ವಸ್ವವಾಗಿದೆಯೋ ಅಂಥಾ ಹಾಸ್ಯಾಸ್ಪದ ನಟನೆಯಿಂದ ಯಾವ ಫಲ ವನ್ನು ನಿರೀಕ್ಷಿಸಬಹುದು? ನಮ್ಮ ಮೇಲೆ ಕಡ್ಡಾಯವಾಗಿ ಹೇರಲ್ಪಟ್ಟ ಅರ್ಥ ರಹಿತವೂ ಭಾವನಾಶೂನ್ಯವೂ ಆದ ಆಚಾರವು ಅಥವಾ ಪ್ರತೀಕವು, ಜೀವವಿಲ್ಲದ ಹೆಣದಂತೆ ಅಪಾಯಕರವೂ ವಿನಾಶಕವೂ ಆದುದರಿಂದ ಆ ಶವವನ್ನು ಪೋಷಿಸದೆ ಕೂಡಲೇ ಸುಟ್ಟುಹಾಕಬೇಕು. ಮತ್ತು ಜೀವಂತವಾದ ಹೊಸ ರೂಪಗಳಿಗೆ ಲಕ್ಷ್ಯ ಕೊಡಬೇಕು.

"ಹೊಳೆಯು ತನ್ನ ಹಳೆಯ ಪಾತ್ರದಲ್ಲಿಯೇ ಹರಿಯುವದು ಅದಕ್ಕೆ ಹೆಚ್ಚು ಸುಲಭವಾದ್ದರಿಂದ ಹಳೆಯ ಸಂಸ್ಥೆಗಳಲ್ಲಿ ಹೊಸ ಜೀವವನ್ನು ತುಂಬಲು ಪ್ರಯತ್ನ ಮಾಡಬೇಕು" ಎಂದು ಕೆಲವರು ಹೇಳುತ್ತಾರೆ. ರಾಮನು ಹೇಳುವದೇನೆಂದರೆ "ಅದು ಅಸ್ವಾಭಾವಿಕ; ಒಂದು ಸಲ ಬಿಟ್ಟುಹೋದ ಹಳೆಯ ಹರಿಯಲ್ಲಿಯೇ ಹರಿಯಲು ತೊಡಗಿದ ಒಂದೇ ಒಂದು ಹೊಳೆಯ ಹೆಸರನ್ನಾದರೂ ಹೇಳಿ ನೋಡೋಣ. ಅಥವಾ ಹಳೆಯ ಜೀವವು ತೊರೆದು ಬಿಟ್ಟ ದೇಹದಲ್ಲಿ ಹೊಸಜೀವವನ್ನು ತುಂಬಿದ ಒಂದೇ ಒಂದು ಸಂದರ್ಭವನ್ನು ತೋರಿಸಿ. ಹಳೆಯ ಸೀಸೆಗಳಲ್ಲಿ ಹೊಸ ಹೆಂಡ ವನ್ನು ಹಾಕಿಡುವದು ಪ್ರಯೋಜನವಿಲ್ಲ. ರಸವು ಬತ್ತಿಹೋಗಿರುವ ಕಬ್ಬು, ಪುನಃ ತನ್ನಲ್ಲಿಯೇ ಜೀವರಸವನ್ನು ಪಡೆಯಲಾರದು. ಅದನ್ನು ಸುಟ್ಟು ಹಾಕಬೇಕು. ರಚನೆಗಳೂ ಮತ್ತು ವಸ್ತುಗಳೂ ತಮ್ಮ ರೂಪಗಳನ್ನೂ ಸಂಬಂಧಗಳನ್ನೂ ಬದ ಲಾಯಿಸಿಕೊಳ್ಳುತ್ತವೆ; ಮತ್ತು ಅವು ಒಂದುಸಲ ಬಿಟ್ಟುಹೋದ ರೂಪಗಳಿಗೂ ಸಂಬಂಧಗಳಿಗೂ ಮತ್ತೆಂದೂ ಹಿಂದಿರುಗುವದಿಲ್ಲ". ನಾವು ಜ್ಞಾನಾಗ್ನಿಯಲ್ಲಿ

ಯಜ್ಞಾಹುತಿಗಳನ್ನು ಆಹುತಿ ಹಾಕಿಬಿಡೋಣ. ಈಗಿನ ಸಮಯಗಳಿಗೆ ಉಚಿತವಾಗಿ ಒಪ್ಪುವ ರೂಪಗಳಲ್ಲಿ ನಿಜವಾದ ಯಜ್ಞದ ಮನೋಭಾವವನ್ನೂ ಚೇತನಶಕ್ತಿಯನ್ನೂ ಉಳಿಸಿಕೊಳ್ಳೋಣ. ಹಿಂದಿನ ಕಾಲದ ಅದೃಶ್ಯವಾದ ಮಹಿಮಾ ವೈಭವಗಳ ಮೇಲೆಯೇ ಯಾವಾಗಲೂ ಅಭಿಮಾನದಿಂದ ಚಿಂತಿಸುತ್ತಿರುವದೇ ರಾಷ್ಟ್ರಭಕ್ತಿ ಎಂದು ಕೆಲವರು ತಿಳಿದಿದ್ದಾರೆ. ಹೊಸ ಸನ್ನಿವೇಶಗಳಲ್ಲಿಯೂ ಹಳೆಯ ಮನೆಯ ಹೊರೆಯನ್ನು ತಮ್ಮ ಬೆನ್ನಮೇಲೆ ಹೊತ್ತು ತಿರುಗುವ ಅತಿ ಭಾನಸದ ಬಸವನ ಹುಳುವಿನ ಜಾತಿಯವರು ಅವರು. ದಿವಾಳಿಯೆದ್ದ ಬ್ಯಾಂಕ್‌ಧನಿಯು ಬಹಳ ಹಿಂದೆಯೇ ಹಳೆತಾಗಿ ಕೆಲಸಕ್ಕೆ ಬಾರದ ಲೇವಾದೇವಿಯ ದಾಖಲೆಗಳ ಮೇಲೆಯೇ ತನ್ನ ಗಮನವನ್ನು ಸುರಿಯುತ್ತಿರುವದು ಈಗ ಪ್ರಯೋಜನವಿಲ್ಲ! ಭಾರತದ ವೈಭವವು ಹಿಂದೆ ಹೇಗಿತ್ತೆಂಬುದನ್ನು ಆಲೋಚಿಸುವದರಲ್ಲಿ ಕಾಲವನ್ನು ವ್ಯರ್ಥವಾಗಿ ಕಳೆಯಬೇಡಿ. ನಿಮ್ಮ ಅನಂತವಾದ ಎಲ್ಲಾ ಶಕ್ತಿಗಳನ್ನೂ ಸ್ಮರಿಸಿ ಆಹ್ವಾನಿಸಿರಿ. ಇಂಡಿಯಾ ಮುಂದೇನಾಗಬೇಕು, ಆಗುತ್ತದೆ ಎಂಬದನ್ನು ಭಾವಿಸಿ, ಭಾವಿಸಿರಿ.

ಬಹುಜನರು ಒಂದೆಡೆ ಸೇರಿ, ಅವರ ಕಣ್ಣುಗಳೂ ಕೈಗಳೂ ಕೂಡಿದಾಗ ಅವರ ಹೃದಯಗಳೂ ಸಂಧಿಸಿ ಒಂದುಗೂಡುವದಕ್ಕೆ ಸಹಾಯವಾಗುತ್ತದೆ. ಆಗ ಅರಿತೋ ಅರಿಯದೆಯೋ ಭಾವನೆಗಳ ಮತ್ತು ವಿಚಾರಗಳ ಪರಸ್ಪರ ವಿನಿಮಯವಾಗಿ ಜನರು ಭಾವದ ಸಮಾನವಾದ ಕಾವಿಗೂ ಒಂದೇ ಬಗೆಯ ವಿಚಾರಭೂಮಿಕೆಗೂ ಸಮಾನ ಸಮರ್ಥ ಆಧ್ಯಾತ್ಮಿಕತೆಗೂ ಬರುವ ಒಲವನ್ನು ಪಡೆಯುತ್ತಾರೆ. ಹೀಗೆ ಬಂಧುಭಾವವೂ ಐಕ್ಯತೆಯೂ ಸಾಧಿಸಲ್ಪಡುತ್ತದೆ. ಅವಿದ್ಯಾವಂತರೂ ಕಲಹಕಾರಿಗಳೂ ಕದನ ಕುತೂಹಲಿಗಳೂ ಆದ ಅರಬರನ್ನು ದಿನಕ್ಕೆ ಐದುಸಲವಾದರೂ ದೇವರ ಮುಂದೆ ಪ್ರಾರ್ಥನೆಗಾಗಿ ಒಂದುಗೂಡುವಂತೆ ಮಾಡುವದರಲ್ಲಿ ಮುಹಮ್ಮದನ ಜಾಣತನ ವಿದ್ದಿತು. ಹೀಗೆ ಮಾಡುವದರಿಂದ ಕೇವಲ ಅವ್ಯವಸ್ಥಿತ ಜನಾಂಗದಲ್ಲಿ ಒಂದು ಸುವ್ಯವಸ್ಥಿತ ರಾಷ್ಟ್ರೀಯತೆಯನ್ನು ಮುಹಮ್ಮದನು ಸೃಷ್ಟಿ ಮಾಡಲಿಲ್ಲವೆ?

ಯಜ್ಞಗಳೂ ತೀರ್ಥಗಳೂ ಮೇಳಗಳೂ ಮಂದಿರಗಳೂ ನ್ಯಾಯಸ್ಥಾನಗಳೂ ಛತ್ರಗಳೂ ಮದುವೆಗಳೂ ಮರಣಗಳೂ ಸಭೆಗಳೂ ಸಮಾಜಗಳೂ ವಾರ್ಷಿಕೋತ್ಸವಗಳೂ ಇತ್ತೀಚೆಗೆ ಸಮ್ಮೇಳನಗಳೂ ಕಾಂಗ್ರೆಸ್ ಅಧಿವೇಶನಗಳೂ ಇಂಡಿಯಾದೇಶದಲ್ಲಿ ಜನರನ್ನು ಒಟ್ಟುಗೂಡಿಸುವ ಒಳ್ಳೆಯ ಸನ್ನಿವೇಶಗಳಾಗಿವೆ. ಪಾಶ್ಚಿಮಾತ್ಯ ದೇಶಗಳಲ್ಲಿ ಚರ್ಚ್‌ಗಳೂ ಹೊಟೇಲ್‌ಗಳೂ ವಸ್ತುಪ್ರದರ್ಶನಾಲಯಗಳೂ ವಿಹಾರ ಪ್ರವಾಸಗಳೂ ವಿಶ್ವವಿದ್ಯಾನಿಲಯಗಳೂ ಸಾರ್ವಜನಿಕ ಉಪನ್ಯಾಸಗಳೂ 'ಕ್ಲಬ್' ಗಳೂ ರಾಜಕೀಯ ಗೋಷ್ಠಿಗಳೂ ಸಾಮಾನ್ಯವಾಗಿ ಜನರು ಸೇರುವದಕ್ಕೆ ಸಹಾಯಕಗಳಾಗುತ್ತವೆ. ಆದರೆ ನಾವು ಸೌಮ್ಯವಾದ ಆಧ್ಯಾತ್ಮಿಕಭಾವದಿಂದ ಎಲ್ಲಿ ಸಂಧಿಸುತ್ತೇವೋ ಆ ಗೋಷ್ಠಿಗಳಲ್ಲಿ ಮಹತ್ತಾದ ಏಕೀಕರಣಶಕ್ತಿ ಇರುತ್ತದೆ. ಅಲ್ಲಿ

ಪ್ರೇಮದ ಪವಿತ್ರ ತೀರ್ಥವು ಆ ಮಿಳನವನ್ನು—ಒಕ್ಕೂಟವನ್ನು—ಭದ್ರಪಡಿಸಿ ಸ್ಥಿರೀಕರಿಸುತ್ತದೆ. ಹೃದಯಗಳು ಕೂಡಿದಲ್ಲಿಯೇ ಐಕ್ಯತೆಯು ಶಾಶ್ವತವಾಗುತ್ತದೆ. ಬರಿಯ ಚರ್ಮಗಳ ಸಂಪರ್ಕದಿಂದ ಯಾವ ಉದಾತ್ತವಾದ ಪ್ರೋತ್ಸಾಹಕರ ಫಲವೂ ಉಂಟಾಗುವದಿಲ್ಲ; ಆದರೆ ದ್ವೇಷಾಸೂಯೆಗಳಿಗೆ ಅವಕಾಶವಾಗುತ್ತದೆ. ಒತ್ತಾಯದ ಮೇಲು ಮೇಲಿನ ಕೂಟಕ್ಕೆ—ಐಕ್ಯತೆಗೆ—ಪ್ರಯತ್ನಮಾಡುವದು ಅವಶ್ಯವಿಲ್ಲ. ಹೃದಯಗಳು ಒಂದುಗೂಡದ ಮೈತ್ರಿಯು ಸಿಡಿಮದ್ದಿಗೆ ಕಿಡಿಬಿದ್ದಾಗುವ ಸ್ಫೋಟಕ್ಕಿಂತಲೂ ಕೇಡಾಗುತ್ತದೆ. ಕಾಲುಗಳ ಶ್ರಮವು ಯಾವಾಗಲೂ ಎರಡು ಮನಸ್ಸುಗಳನ್ನು ಸಮೀಪಕ್ಕೆ ತರುವದಿಲ್ಲ. ನಮಗೆ ನಿಜವಾಗಿ ಬೇಕಾಗಿರುವದೂ, ನಾವು ಲೆಕ್ಕಿಸಬೇಕಾದುದೂ ಸ್ನೇಹಿತರ ಮತ್ತು ಅನುಯಾಯಿಗಳ ಸಾಮೀಪ್ಯವಲ್ಲ. ಸಮಸ್ತ ಜೀವದ ಅಕ್ಷಯವೂ ಸಾರ್ವಕಾಲಿಕವೂ ಆದ ಉಗಮಕ್ಕೂ ಮೂಲಕ್ಕೂ ಸಮೀಪ ವರ್ತನದಿಂದ ನಮ್ಮ ಸುತ್ತಲೂ ಗೆಳೆಯರನ್ನೂ ಒಡನಾಡಿಗಳನ್ನೂ ಕಾಣುತ್ತೇವೆ. ನೀರಿನ ಹತ್ತಿರ ಬೆಳೆಯುವ ಮರಗಳು ನೀರಿನ ದಿಕ್ಕಿನಲ್ಲಿಯೇ ಬೇರುಗಳನ್ನು ಕಳಿಸುತ್ತವೆ. ಆದ್ದರಿಂದ ಸಮಸ್ತ ಜೀವದ ಶಾಶ್ವತಮೂಲದಿಂದ ಹೊರಹೊಮ್ಮಿದರೆ ನಮ್ಮ ಸುತ್ತ ಮುತ್ತಲೂ ಸಜಾತೀಯ ಜೀವಿಗಳನ್ನೇ ಹೇರಳವಾಗಿ ಕಾಣುತ್ತೇವೆ. ಮೊಟ್ಟಮೊದಲು ಸತ್ಯದ ಚಿಲುಮೆಯ ನೆರೆಯಲ್ಲಿಯೇ ಇರಬೇಕಾದುದು ಅವಶ್ಯ.

ದೂರದರ್ಶಕದಲ್ಲಿರುವ ಕನ್ನಡಿಗಳ ನಾಭಿದೂರಗಳು (focal lengths) ಸರಿಯಾಗಿ ಹೊಂದಿಸಲ್ಪಟ್ಟರೇ ಅವು ಪರಸ್ಪರ ಹೊಂದಿಕೆಯಿಂದ ಕೆಲಸಮಾಡಬಲ್ಲವು. ಬೇರೆ ಬೇರೆ ಗ್ರಹಗಳ ಪಥಗಳು ಉಚಿತ ಪ್ರಮಾಣದಲ್ಲಿರುವುದರಿಂದಲೇ ಸೌರವ್ಯೂಹವು ಸುಸಂಗತವಾದ ಏಕತೆಯಾಗಿದೆ. ಆಪ್ತತೆಯಲ್ಲಿ ಹೆಚ್ಚು ಸಮೀಪವಾದರೂ ಅಥವಾ ಹೆಚ್ಚು ದೂರವಾದರೂ ಕೆಲವು ಗೆಳೆಯರೊಡನೆ ನಾವು ಕೆಲಸಮಾಡಲಾಗುವದಿಲ್ಲ. ಮೈತ್ರಿಯ ಸೌರವ್ಯೂಹದಲ್ಲಿಯೂ ಚಿರಕಾಲ ಉಳಿಯುವ ಪ್ರೀತಿಯ ಐಕ್ಯತೆಯನ್ನು ಉಳಿಸಿಕೊಳ್ಳಬೇಕಾದರೆ ಆಧ್ಯಾತ್ಮಿಕ ದೂರಗಳಲ್ಲಿ ಉಚಿತವಾದ ಪರಿಮಾಣಗಳನ್ನು ಇಟ್ಟುಕೊಳ್ಳಬೇಕಾದುದು ಅವಶ್ಯವಾಗಿದೆ. ಹೆಚ್ಚು ಸಮೀಪ ಬರುವ ತಪ್ಪಿನಿಂದಲೋ ಅಥವಾ ದೂರ ಸರಿವ ತಪ್ಪಿನಿಂದಲೋ ಬಾಧೆಪಟ್ಟಿರುವ ಜನರು ಹಲವು ವೇಳೆ ಪ್ರತಿಯೊಬ್ಬರನ್ನೂ ಸಂಶಯದಿಂದಲೂ ಅಪನಂಬಿಕೆಯಿಂದಲೂ ನೋಡುತ್ತಾರೆ. ಜನರಿಂದ ಸರಿಯಾದ ಬೇರೆ ಬೇರೆ ದೂರಗಳನ್ನು ಇಟ್ಟುಕೊಳ್ಳುವದರಿಂದಲೇ ಪ್ರೇಮವನ್ನೂ ಸಮಶ್ರುತಿಯನ್ನೂ ಐಕ್ಯತೆಯನ್ನೂ ಕಾಪಾಡಿಕೊಳ್ಳಬಹುದು. ಎಲ್ಲಾ ವರ್ಗದ ಜನರೂ ಒಟ್ಟುಗೂಡುವದಕ್ಕೆ ಅನುಕೂಲವಾದ ಸಂದರ್ಭಗಳು ಒದಗುವಂತೆ ರಾಷ್ಟ್ರೀಯ ಹಬ್ಬಗಳನ್ನೂ ಉತ್ಸವಗಳನ್ನೂ ಸುಧಾರಣೆ ಮಾಡಬೇಕು. ಅವರವರಿಗಿರುವ ಆಧ್ಯಾತ್ಮಿಕ ಆಕರ್ಷಣೆಯಿಂದ ಪ್ರಕೃತಿ ನಿಯಮಗಳಿಗನುಗುಣವಾಗಿ ತಮ್ಮ ಪರಸ್ಪರ ಸಂಬಂಧದ ದೂರಗಳನ್ನು ಅವರವರೇ ಏರ್ಪಡಿಸಿಕೊಳ್ಳಬೇಕು. ಚಳಿಗಾಲದ ರಾಷ್ಟ್ರೀಯ

ಹಬ್ಬವನ್ನು ದಕ್ಷಿಣಭಾರತದ ಹಿತವಾದ ವಾಯುಗುಣದಲ್ಲಿಯೂ ಬೇಸಿಗೆಯ ರಾಷ್ಟ್ರೀಯ ಹಬ್ಬವನ್ನು ಉತ್ತರಭಾರತದ ಭವ್ಯವಾದ ಪರ್ವತ ದೃಶ್ಯಗಳಲ್ಲಿಯೂ ವಸಂತಕಾಲದ ಹಬ್ಬಗಳನ್ನು ಬಂಗಾಳದಲ್ಲಿಯೂ ನಡೆಸಬಹುದು. ಶರತ್ಕಾಲದಲ್ಲಿ ಎಲ್ಲರೂ ಪಶ್ಚಿಮಭಾರತದಲ್ಲಿ ಸೇರಬಹುದು. ಈ ಹಬ್ಬಗಳು ಜಾತಿಮತಗಳ ಸಂಕುಚಿತ ಎಲ್ಲೆಕಟ್ಟನ್ನು ಮೀರಿ ರಾಷ್ಟ್ರೀಯವಾಗಬೇಕು. ಎಲ್ಲಾ ವರ್ಗಗಳ ಪ್ರತಿನಿಧಿಗಳ ಸಮಿತಿಗಳಿಂದಲೂ ಇವು ನಿರ್ದೇಶಿಸಲ್ಪಡಬೇಕು. ಆ ಸಮಯದಲ್ಲಿ ಆಯಾ ಸ್ಥಳಗಳಲ್ಲಿ ಏರ್ಪಡಿಸಲಾಗುವ ಕಲೆ ಮತ್ತು ಉದ್ಯೋಗಗಳ ಪ್ರದರ್ಶನಗಳೂ ಎಲ್ಲಾ ಬಗೆಯ ಅಂಗಡಿಗಳೂ ವಸ್ತುಪ್ರದರ್ಶನಶಾಲೆಗಳೂ ಗ್ರಂಥಭಂಡಾರಗಳೂ ವಿಜ್ಞಾನ ಪ್ರಯೋಗಶಾಲೆಗಳೂ ಕ್ರೀಡಾರಂಗಗಳೂ ಉಪನ್ಯಾಸ ಕ್ಷೇತ್ರಗಳೂ ಸಾಮಾಜಿಕ ಸಂಘಗಳೂ ಸಭೆಗಳೂ ಕಾಂಗ್ರೆಸ್ ಶಿಬಿರಗಳೂ ಕೊನೆಗೆ ಆದರೂ ಕನಿಷ್ಠವಲ್ಲದ ರಾಷ್ಟ್ರೀಯ ನಾಟಕ—ಸಾಹಿತ್ಯ—ಕಲೆಗಳ ಮಂದಿರಗಳೂ ಸಭಾಭವನಗಳೂ ಬೇರೆ ಬೇರೆ ಪ್ರಾಂತ್ಯಗಳಿಂದ ಭಿನ್ನ ಭಿನ್ನ ಮತಧರ್ಮಗಳ ಜನರನ್ನು ಸೆಳೆದು ಒಂದುಗೂಡಿಸುತ್ತವೆ. ಅಲ್ಲಿ ಜೀವನದ ಉಲ್ಲಾಸಶೀಲ—ಉತ್ಸವಶೀಲ—ಸ್ವಭಾವದೊಂದಿಗೆ ಗಂಭೀರಶೀಲ ಸ್ವಭಾವವೂ ಮೆರೆಯಲಿ. ಪ್ರಾಚೀನ ಭಾರತದಲ್ಲಿ ಇದ್ದಂತೆ, ಅಲ್ಲಿ ಅಕ್ಕತಂಗಿಯರು ಅಣ್ಣತಮ್ಮಂದಿರೊಡನೆ ನಡೆದಾಡಲಿ, ಆಟವಾಡಲಿ ; ಹೆಂಡಿರು ಅವರ ಗಂಡಂದಿರೊಡನೆ ಸರಸವಾಡಲಿ, ಬೊಂಬಾಯಿ ಪ್ರಾಂತ್ಯದಲ್ಲಿರುವ ಪದ್ಧತಿಯಂತೆ ಮಕ್ಕಳು ತಾಯಿಯರಿಗೆ ಮೈಗಾವಲಾಗಿರಲಿ. ಎಲ್ಲಾ ವರ್ಗಗಳ ಸಂಪ್ರದಾಯಗಳ ಮತಧರ್ಮಗಳ ಭಾಷಣಕಾರರಿಗೂ ಅವರವರ ಪ್ರೇಮದ ವಾಗ್ವೈಖರಿಯನ್ನು ಮೆರೆಯುವದಕ್ಕೆ ಸರ್ವಸಮವಾದ ಒಂದು ವೇದಿಕೆ ಇರಬೇಕು.

ರಾಷ್ಟ್ರೀಯ ಸಾಹಿತ್ಯವನ್ನು ಸೃಷ್ಟಿ ಮಾಡುವದೂ ಸುಧಾರಣೆ ಮಾಡುವದೂ ಅಭಿವೃದ್ಧಿ ಮಾಡುವದೂ ಜೀವಂತವಾದ ತಾಯ್ನುಡಿಯ ಅಥವಾ ಪ್ರಾಂತೀಯ ಭಾಷೆಗಳ ಐಕ್ಯವನ್ನು ಸಾಧಿಸುವದೂ ರಾಷ್ಟ್ರೀಯ ಐಕ್ಯತೆಯ ಸಾಧನೆಗೆ ಸಹಾಯಕವಾದ ಇನ್ನೊಂದು ಹೆಜ್ಜೆ.

ಅನೇಕ ಸ್ಥಳಗಳಲ್ಲಿ ಓಂ ಮಂದಿರಗಳನ್ನು ಸ್ಥಾಪಿಸಬೇಕು. ಅಲ್ಲಿ ಪ್ರವೇಶಕ್ಕೂ ಗ್ರಂಥಾವಲೋಕನಕ್ಕೂ ಧ್ಯಾನಸಾಧನೆಗೂ ಮೌನಪ್ರಾರ್ಥನೆಗೂ ಮಾತನಾಡದೆ ಸಹಾನುಭೂತಿ—ದಯಾ—ಪ್ರೀತಿಗಳ ದೃಷ್ಟಿವಿನಿಮಯಕ್ಕೂ ಎಲ್ಲಾ ಧರ್ಮದವರಿಗೂ ಸ್ವಾಗತವಿರಬೇಕು.

ಬಯಲಲ್ಲಿ ರಾಮನ ಸಂಪ್ರದಾಯದಂತೆ, ಹಿಂದೆ ಹೇಳಿದ ಪ್ರಕಾರ, ಮಾನಸ ಕ್ರಿಯೆಯಾದ ಉಪಾಸನೆಯ ಮೇಲೆ ದೈವೀ ಮುದ್ರೆಯನ್ನು ಒತ್ತುವದರಲ್ಲಿ, ಅಗ್ನಿಯಲ್ಲಿ ಅರ್ಪಿಸುವ ಆಹುತಿಗಳು ಮಾಡುವ ಕಾರ್ಯವನ್ನೇ ಪ್ರಬಲ ಸೂಚಕ

ಆಧ್ಯಾತ್ಮಿಕ ಸಂಕೇತವಾದ—ಪ್ರತಿಯೊಂದು ದೈಹಿಕ ಚಲನವಲನವೂ ಮಾಡುವಂತೆ ತರುಣರು ವ್ಯಾಯಾಮ ಮಾಡಬಹುದು.

ಸ್ನಾನಮಾಡುವಾಗ ಪವಿತ್ರ ಭಾವನೆಯನ್ನುಂಟು ಮಾಡುವ ವಿಹಿತವಾದ ಮಂತ್ರಗಳನ್ನು ಗಾನಮಾಡೋಣ; ಆದರೆ ಅರ್ಥವಾಗದಿರುವ ಭಾಷೆಯಲ್ಲಿ ಬೇಡ.

ನದಿಯ ದಂಡೆಗಳಲ್ಲಿ ಮರಳುರಾಶಿಯ ಮೇಲೆ ಮರಗಳ ನೆರಳಿನಲ್ಲಿ ಅಥವಾ ಹುಲ್ಲು ಮೈದಾನದ ಮೇಲೆ ಅಂತರಿಕ್ಷವಿತಾನದ ಕೆಳಗೆ (ಹವಾಮಾನವು ಅವಕಾಶ ಕೊಟ್ಟಂತೆ) ಯುವಕರು ಕುಳಿತು ಒಟ್ಟುಗೂಡಿ ಊಟಮಾಡಲಿ. ಆಹಾರದ ಪ್ರತಿಯೊಂದು ತುತ್ತಿನ ಜೊತೆಗೆ ಒಳಗೂ ಹೊರಗೂ "ಓಂ ಓಂ" ಎಂದು ಓಂಕಾರದ ಉಚ್ಚಾರಣೆಯಾಗಲಿ. "ಉರಿಯುತ್ತಿರುವ ಶಬ್ದಗಳಿಂದಲೂ ಉಸುರುತ್ತಿರುವ ಭಾವಗಳಿಂದಲೂ ತುಂಬಿರುವ ರಾಷ್ಟ್ರಗೀತೆ" ಗಳನ್ನು ಎಲ್ಲರೂ ಕೂಡಿ ಒಂದೇ ದನಿಯಿಂದ ಹಾಡುವದು ಏಕೀಕರಣಕ್ಕೆ ಸಮರ್ಥ ಸಾಧನೆ.

ಹವನಕ್ಕಾಗಿ ಕೃತಕವಾದ ಲೌಕಿಕಾಗ್ನಿಯನ್ನು ಹಚ್ಚುವದಕ್ಕೆ ಬದಲಾಗಿ, ಧರ್ಮಶ್ರದ್ಧೆಯುಳ್ಳ ಯುವಕನು, ಪ್ರಾತಃಕಾಲದ ಅಥವಾ ಸಾಯಂಕಾಲದ ಸೂರ್ಯಬಿಂಬದ ಜ್ವಲಂತ ವೈಭವವನ್ನು ತನ್ನ ಪರಿಮಿತ—ಕುಬ್ಜ—ಅಹಂಕಾರವನ್ನು ಹವನಮಾಡುವದಕ್ಕಾಗಿ ಯಜ್ಞವೇದಿಯ ಅಗ್ನಿಯನ್ನಾಗಿ ಉಪಯೋಗಿಸಿಕೊಳ್ಳಲಿ.

ಆ ಮಹಿಮಾವೈಭವದ ಸಮುದ್ರದಲ್ಲಿ ಮುಳುಗಿ, ಪ್ರಕಾಶಪ್ರವಾಹವಾದ ನೀನೇ ಅದರಿಂದ ಹೊರಚಿಮ್ಮಿ ಬಂದು ಇಡಿಯ ಜಗತ್ತನ್ನು ನಿನ್ನ ಸ್ವರ್ಗೀಯ ಪ್ರಭೆಯಿಂದ ಮೀಯಿಸು. ಇದೇ ಹವನ.

ಬೀದಿಗಳಲ್ಲಿ ನಿರ್ಭಯವಾಗಿ ಸತ್ಯ—ಧರ್ಮವನ್ನು ಘೋಷಣೆ ಮಾಡುತ್ತಾ ಉಜ್ಜ್ವಲವಾದ ಪ್ರದರ್ಶನಗಳಲ್ಲಿಯೂ ವೈಭವದ ಮೆರವಣಿಗೆಗಳಲ್ಲಿಯೂ ಹಾಡುತ್ತಾ ಕುಣಿಯುತ್ತಾ 'ನಗರ ಕೀರ್ತನೆ' ಗಳನ್ನು ನಡೆಸುವದು ಜನಜಂಗುಳಿಯಲ್ಲಿ—ಆದರಲ್ಲಿಯೂ ಮುಖ್ಯವಾಗಿ ಹೆಂಗಸರಲ್ಲಿಯೂ ಮಕ್ಕಳಲ್ಲಿಯೂ—ಪ್ರೀತಿಯನ್ನೂ ಐಕ್ಯತೆಯನ್ನೂ ಹುಟ್ಟಿಸುವದಕ್ಕೆ ಪರಿಣಾಮಕಾರಿಯಾದ ಪದ್ಧತಿಯಾಗಿದೆ.

ಸತ್ಯವನ್ನು ಎತ್ತಿ ಹಿಡಿಯುವ ಒಬ್ಬ ರಾಷ್ಟ್ರನಾಯಕನ ಕ್ರೂರವಾದ ಹಿಂಸೆಯೂ ಬಲಿದಾನದ ಮರಣವೂ ದೇಶದಲ್ಲಿ ಐಕಮತ್ಯವನ್ನು ಉಂಟುಮಾಡುವದಕ್ಕೆ ಅತ್ಯಂತ ಪರಿಣಾಮಕಾರಿಯಾದ ಶಕ್ತಿ. ಆದರೆ, ಒಂದು ರಾಷ್ಟ್ರವನ್ನೇ ಅಲ್ಲ ; ಕೊನೆಗೆ ಎಲ್ಲಾ ರಾಷ್ಟ್ರಗಳನ್ನೂ ಜೀವಂತ ಮರಣವೇ, ಅಲ್ಲ, ನಿಸ್ಸ್ವಾರ್ಥವಾದ ಮೃತ ಜೀವನವೇ ಒಂದುಗೂಡಿಸುವ ಸಾಧನವಾಗುತ್ತದೆ. ಒಬ್ಬನೇ ಒಬ್ಬನು ದೇವರಲ್ಲಿ—ದೇವರಾಗಿ—ಜೀವಿಸಲಿ ; ಇಡೀ ರಾಷ್ಟ್ರವೇ ಅವನ ಮೂಲಕ ಒಕ್ಕೂಟವಾಗಬಹುದು.

ಧೈರ್ಯ, ಸತ್ಯಸಂಧತೆಯ ಶೀಲ, ಆತ್ಮಬಲಿದಾನದ ಮನೋಭಾವ, ಮತ್ತು ಅನೇಕ ಸದ್ಗುಣಗಳು ರಕ್ತ ಮತ್ತು ಅಗ್ನಿಯ ಸೈನಿಕಶಿಕ್ಷಣದ ದೀಕ್ಷೆಯನ್ನು ಪಡೆದ ತರುಣರಲ್ಲಿ ಪೋಷಿತವೂ ಪ್ರಕಾಶಿತವೂ ಆಗುತ್ತವೆ.

ಹೆಂಗಸರು, ಮಕ್ಕಳು ಮತ್ತು ಶ್ರಮಜೀವಿಗಳ ವಿದ್ಯಾಭ್ಯಾಸವನ್ನು ಕಡೆಗಾಣುವ ವೆಂದರೆ, ನಮಗೆ ಆಧಾರವಾದ ಕೊಂಬೆಗಳನ್ನೇ ಕಡಿದು ಕೆಡವಿದಂತೆ—ಅಲ್ಲ—ಸಮಗ್ರ ರಾಷ್ಟ್ರೀಯತಾ ವೃಕ್ಷದ ಬೇರಿಗೇ ಘಾತಕವಾದ ಹೊಡೆತವನ್ನು ಕೊಟ್ಟಂತೆ ಆಗುತ್ತದೆ.

ಇಪ್ಪತ್ತನೆಯ ಶತಮಾನದ ಋಷಿ ವಂಶದವರೆ ! ನೀವು ನಿಮ್ಮ ಶ್ರುತಿಯ ಉಪ ದೇಶಗಳನ್ನು ತಿಳಿದುಕೊಂಡಿದ್ದೇ ಆದರೆ, ಸ್ಮೃತಿಗಳು ನಿಮ್ಮ ಮೇಲೆ ಹೇರಿರುವ ಸಂಕು ಚಿತವಾದ, ಪ್ರಾಣವನ್ನು ಹಿಂಡುತ್ತಿರುವ, ಸಾಮಾಜಿಕ ವರ್ಗದ ಮತ್ತು ಜಾತಿಮತ ಗಳ ಪರಿಮಿತಿಯ ಚಿಪ್ಪನ್ನು ಒಡೆದೊಡೆದುಕೊಂಡು ಹೊರಬೀಳಬೇಕಾಗುತ್ತದೆ. ಆದರೆ ನಿಮ್ಮ ನಿಜವಾದ ಆತ್ಮನನ್ನು ತಿಳಿಯದೆ, ಶ್ರುತಿಗೂ ಲಕ್ಷ್ಯಕೊಡದೆ, ಬಹಳ ಹಿಂದಿನ ಚಳಿಗಾಲಕ್ಕಾಗಿ ಹೊಲಿಸಿದ್ದ ದಪ್ಪ ಕಂಬಳಿಗಳನ್ನೇ ಮೈಗುಳ್ಳೆ ಬರುವ ಬಿರುಬೇಸಿಗೆ ಯಲ್ಲಿಯೂ ಉಪಯೋಗಿಸಬೇಕೆಂದರೆ, ನಿಮ್ಮ ಪೂರ್ವಜರ ದಿವ್ಯಜ್ಞಾನದ ಹೆಸರಿ ನಲ್ಲಿ ದಯವಿಟ್ಟು ನಿಮ್ಮ ಅವಸ್ಥೆ—ದುರವಸ್ಥೆ—ಏನೆಂಬದನ್ನು ವಿಚಾರಮಾಡಿ. ಈ ತೋರಿಕೆಯ ಮನುಷ್ಯನು ಕಾಲದಲ್ಲಿ ಮಾತ್ರ ವಾಸಮಾಡುವದಿಲ್ಲ. ದೇಶದಲ್ಲಿಯೂ ವಾಸಮಾಡುತ್ತಾನೆ. ರೇಖಾಂಶದ ಪ್ರಕಾರ (ಕಾಲದಲ್ಲಿ) ನೀವು ಹಿಮಾಲಯದ ಋಷಿ ಗಳ ವಂಶಕ್ಕೆ ಸೇರಿರಬಹುದು. ಆದರೆ ಅಕ್ಷಾಂಶದ ಪ್ರಕಾರ (ದೇಶದಲ್ಲಿ) ಸಾಹಿತ್ಯ, ಕಲಾ ಮತ್ತು ವಿಜ್ಞಾನಗಳ ಪ್ರಯೋಗಶಾಲಿಗಳಾದ ವ್ಯವಹಾರನಿಪುಣರಾಗಿರುವ ಯುರೋಪಿಯನ್ ಮತ್ತು ಅಮೆರಿಕನ್ ಜನಾಂಗದೊಡನೆ ನೀವು ಸಹಜೀವಿಗಳಾಗಿ ರುವಿರೆಂಬ ಸಂಬಂಧವನ್ನು ನಿರಾಕರಿಸಲಾರಿರಿ. ಪ್ರಾಚೀನ ಭಾರತದ ಉಪನಿಷತ್ತುಗಳ ವಿಜ್ಞಾನವನ್ನು ತಪ್ಪದೆ ಪೂರ್ವಜರ ಉತ್ತರಾಧಿಕಾರದಿಂದ ಸಂಪಾದಿಸಿರಿ; ಆದರೆ ಭೌತಿಕ ಭೂಮಿಕೆಯ ಮೇಲೆ ಜಪಾನ್ ಮತ್ತು ಅಮೆರಿಕಾ ಜನತೆಯ ಪ್ರಯೋಗಶೀಲ ಪದ್ಧತಿಗಳನ್ನು ಹೀರಿಕೊಂಡು ಜೀರ್ಣಿಸಿಕೊಳ್ಳುವದರಿಂದ ನೀವು ಬದುಕುವದಕ್ಕೆ ಶಕ್ತರಾಗುತ್ತೀರಿ. ಕೋಮಲವಾದೊಂದು ಎಳೆ ಗಿಡವು ತನಗೆ ಕಾರಣವಾದ ಬೀಜದ ಗುಣಗಳನ್ನೇ ಬಡಾಯಿ ಕೊಚ್ಚಿಕೊಳ್ಳುತ್ತ ತನ್ನ ಸುತ್ತಲಿರುವ ಮಣ್ಣನ್ನೂ ನೀರನ್ನೂ ಗಾಳಿಯನ್ನೂ ಬೆಳಕನ್ನೂ ಉಪಯೋಗಿಸಿಕೊಂಡು, ಅವುಗಳಲ್ಲಿರುವ ಸಾರವನ್ನು ಹೀರಿಕೊಳ್ಳುವದಿಲ್ಲವೆಂದು ತಿರಸ್ಕರಿಸಿದರೆ ಬೇಗ ಸತ್ತುಹೋಗುತ್ತದೆ. ನಿಮ್ಮ ರಾಷ್ಟ್ರೀಯ ವೈಶಿಷ್ಟ್ಯವನ್ನು ಬಿಟ್ಟುಬಿಡಬೇಕೆಂದು ನಿಮಗೆ ಹೇಳುವದು ರಾಮನಿಂದ ಬಹಳ ದೂರವಿರಲಿ. ಆದರೆ ನಿಮ್ಮ ಪ್ರಾಚೀನ ದಿವ್ಯಜ್ಞಾನವನ್ನು ಅವರು ಹೇಗೆ ಜೀರ್ಣಿಸಿಕೊಳ್ಳುತ್ತಿದ್ದಾರೋ ಹಾಗೇ ನೀವೂ ಅವರ ವಿಜ್ಞಾನವನ್ನೂ, ಇಂದಿನದನ್ನೂ ಹಿಂದಿನದನ್ನೂ ಹೀರಿಕೊಂಡು ಬೆಳೆಯಬೇಕೆಂದು ರಾಮನು ನಿಮ್ಮಿಂದ ಬಯಸುತ್ತಾನೆ.

ಒಂದು ಮರದ ಆರೋಗ್ಯವು ಸಕಾಲದಲ್ಲಿ ಅದರ ಹೆಚ್ಚಿನ ಭಾಗಗಳನ್ನು ಕತ್ತರಿಸಿ ಹಾಕುವದನ್ನು ಹೇಗೆ ಅವಲಂಬಿಸಿದೆಯೋ ಹಾಗೆಯೇ ಒಂದು ರಾಷ್ಟ್ರದ ಹಿತವೂ ಹೆಚ್ಚಿನ ಜನರು ದೇಶಾಂತರಕ್ಕೆ ವಲಸೆ ಹೋಗುವದನ್ನು ಅವಲಂಬಿಸಿದೆಯೆಂದು ಇತಿಹಾಸವೂ ರಾಜ್ಯ ನೀತಿಯ ಮಿತವ್ಯಯವಿಜ್ಞಾನವೂ ತೋರಿಸುತ್ತವೆ. ಜನವಸತಿಯು ಇಷ್ಟು ನಿಬಿಡವಾಗಿಲ್ಲದಿರುವ ಪ್ರಪಂಚದ ಭಾಗಗಳಿಗೆ ಬಡವರೂ ಇಲ್ಲಿ ಕೆಲಸವಿಲ್ಲದೆ ಉಪವಾಸ ಸಾಯುತ್ತಿರುವವರೂ ಆದ ಇಂಡಿಯಾ ಜನರನ್ನು ಅಲ್ಲಿ ಶ್ರಮಪಟ್ಟು ಕೆಲಸ ಮಾಡಿ ಜೀವಿಸುವದಕ್ಕಾಗಿ ಕಳಿಸಿದರೆ, ಅವರೂ ಬದುಕುತ್ತಾರಲ್ಲದೆ, ಇಂಡಿಯಾದೇಶವು ಅವರ ಮೂಲಕ ಪ್ರಪಂಚದ ದೂರ ಭಾಗಗಳಲ್ಲಿ ತನ್ನ ಬೇರುಗಳನ್ನು ಚಾಚಿದಂತಾಗುತ್ತದೆ. ಇದರಿಂದ ಹಳೆಯ ಭಾರತದ ಜಡತೆಯನ್ನು ಒಡೆದಂತಾಗಿ ಆಕೆಯು ಹೊರುವ ಹೊರೆಯೂ ಹಗುರವಾಗುವದಲ್ಲದೆ, ಈಗ ವಾತಾವರಣವನ್ನು ವಿಷಮಯವಾಗಿ ಮಾಡುತ್ತಿರುವ ಆಯಾಸಕರವಾದ ಇಂಗಾಲಾಮ್ಲದ ಉತ್ಪತ್ತಿಯೂ ಕಡಿಮೆಯಾಗುತ್ತದೆ. ನೀವು ಪ್ರೀತಿಯಿಂದ ಹೀಗೆ ಮಾಡಿದರೆ, ದೇವತೆಗಳನ್ನು ನಿಮ್ಮ ರಥಕ್ಕೆ ಎಳೆದುತಂದು ಹೂಡಿದಂತೆಯೇ ಆಗುತ್ತದೆ. ಹೀಗೆ ಮಾಡದಿದ್ದರೆ, ಅವಿಶ್ರಾಂತವಾಗಿ ತಿರುಗುತ್ತಿರುವ ದೇವತೆಗಳ ನಿರ್ದಯವಾದ ಚಕ್ರವು ಅದರ ಬೀಸಿನಲ್ಲಿ ಸಿಕ್ಕಿದವರನ್ನೆಲ್ಲಾ ನುಚ್ಚುನೂರಾಗಿ ಕತ್ತರಿಸುತ್ತದೆ ; ನಿಮ್ಮನ್ನು ನೀವು ಘಾತಕವಾದ ಜಡತೆಯಿಂದ ಸಂರಕ್ಷಿಸಿಕೊಳ್ಳಲಾರಿರಿ, ಆದ್ದರಿಂದ ದೇವರು ತನ್ನ ಕೋಮಲವಾದ ಕರುಣೆಯಲ್ಲಿ ಕ್ಷಾಮ—ರೋಗಾದಿಗಳ (ಪ್ಲೇಗ್ ಇತ್ಯಾದಿಗಳ) ಮೂಲಕ ಜನತೆಯ ಹೆಚ್ಚಿನ ಬೆಳೆಯನ್ನು ಸವರಿ, ಕತ್ತರಿಸಿ, ಪರಿಷ್ಕರಿಸುವ ಕೆಲಸವನ್ನು ಮಾಡಬೇಕಾಗುತ್ತದೆ. "ಪ್ರಕೃತಿ ನಿಯಮವನ್ನು ಅರಿತು ಅದಕ್ಕೆ ಅನುಗುಣವಾಗಿ ನಡೆಯುವ ಮನುಷ್ಯನು ಸುಖವಾಗಿ ಬದುಕುತ್ತಾನೆ; ಅವನು ವಿವೇಕಪೂರ್ವಕವಾದ ಪ್ರಯತ್ನದಿಂದ ಮಾಡಿದ ಸ್ವಾಭಾವಿಕ ಜೀವನವು ಅವನನ್ನು ಹೋರಾಟದಿಂದ ವಿಮುಕ್ತನನ್ನಾಗಿ ಮಾಡುತ್ತದೆ." ಅಂಥಾ ಮನುಷ್ಯನೊಬ್ಬನೇ ಪೂರ್ಣಮುಕ್ತ.

ಈಗ ಕೆಲವರು, "ಈ ಭೂಮಿಯ ನಿರುದ್ಯೋಗಿಗಳಾದ ಬಡ ಮಕ್ಕಳನ್ನು ಅವರ ತೌರುನೆಲದಿಂದ ಏಕೆ ದೇಶಭ್ರಷ್ಟರನ್ನಾಗಿ ಕಳಿಸಬೇಕು ?" ಎಂದು ಕೇಳಬಹುದು. ಸಂಕುಚಿತವಾದ ಮನೆಯ ಅಭಿಮಾನವು ಈ ಪ್ರಶ್ನೆಗೆ ಕಾರಣವಾಗಿದೆ. ನೀವು ಹುಟ್ಟಿದ ನಾಲ್ಕು ಗೋಡೆಗಳ ನಡುವಿನ ಮನೆಯನ್ನು ಬಿಟ್ಟು, ಬೀದಿಗಾದರೂ ಏಕೆ ಬರುತ್ತೀರಿ ? ನೀವು ದೇವಲೋಕದ ಮಕ್ಕಳಾಗಿರುವದಕ್ಕಿಂತಲೂ ಹೆಚ್ಚಾಗಿ ಏನೂ ಧೂಳುಮಣ್ಣಿನ ಮಕ್ಕಳಾಗಿಲ್ಲ. ನೀವು ಸ್ವರ್ಗಲೋಕದ ಮಕ್ಕಳಾಗಿದ್ದೀರಿ ; ಅಲ್ಲ, ಸ್ವರ್ಗವೇ ಆಗಿದ್ದೀರಿ. ಎಲ್ಲೆಲ್ಲಿಯೂ ನಿಮ್ಮ ಮನೆ ಇದೆ. "ಇದೊಂದೇ ನಮ್ಮ ಮನೆ" ಎಂದು ಯಾವದೊಂದು ಸ್ಥಳಕ್ಕೆ ಗೂಟಹೊಡೆದುಕೊಳ್ಳಬೇಡಿ. ಇವತ್ತು ಇಂಡಿಯಾದೇಶವು ತಾನು ಪ್ರಪಂಚದಿಂದ ಹೊರಗಿರುತ್ತೇನೆಂದು ಬೇರೆ ಇರಲಾರದು. ಇಂಡಿಯಾ,

ಪರ್ಷಿಯಾ, ಈಜಿಪ್ಟ್ ಮೊದಲಾದ ದೇಶಗಳು ಬೇರೆ ಬೇರೆಯಾಗಿದ್ದ ಕಾಲವೊಂದಿತ್ತು. ಆದರೆ ಇತ್ತೀಚಿನ ಕಾಲದಲ್ಲಿ ಆವಿ ಮತ್ತು ವಿದ್ಯುಚ್ಛಕ್ತಿಗಳ ಮೂಲಕ ದೇಶಕಾಲಗಳು ನಿರ್ನಾಮವಾದಂತಾಗಿವೆ. ನಾಗರವು ಅಡ್ಡಿಯಾಗುವದಕ್ಕೆ ಬದಲು ರಾಜಮಾರ್ಗವಾಗಿದೆ. ಮೊದಲಿನ 'ನಗರಗಳು' ಈಗ 'ಬೀದಿ' ಗಳಾಗಿವೆ. ಮೊದಲಿನ 'ನಾಡುಗಳು' ಈಗ 'ಪ್ರಪಂಚ' ವೆಂಬ ಸಣ್ಣ ಭೂಭಾಗದಲ್ಲಿ 'ನಗರಗಳು' ಆಗಿವೆ. ಜನ್ಮಭೂಮಿ, ಸ್ವದೇಶ, ತಾಯಿನಾಡು ಎಂಬ ಭಾವಗಳನ್ನು ವಿಶಾಲವಾಗಿ ಬೆಳೆಸಿಕೊಳ್ಳುವದಕ್ಕೆ ಇದು ಹೆಚ್ಚಿನ ಸಮಯವಾಗಿದೆ. ಎಲ್ಲಾ ದೇಶಗಳೂ ಸಮವಾಗಿಯೇ ನಿಮದಾಗಿವೆ. ದೇವರ ಮತ್ತು ಪ್ರಕೃತಿಯ ಮಕ್ಕಳೆ! ಎಲ್ಲಾ ಮಾನವರೂ ನಿಮ್ಮ ಸಹೋದರ ಸಹೋದರಿಯರು. ಹಿಂದೂ ಜನಾಂಗಕ್ಕೆ ಈಗಾಗಲೇ ಹೆಣ ಭಾರವಾಗಿರುವ ಲಕ್ಷಾಂತರ ಭಿಕ್ಷುಕರ ಸಂಖ್ಯೆಯನ್ನು ಬೆಳೆಸುವದಕ್ಕೆ ಬದಲು ನಿಮಗೂ ದೇಶಕ್ಕೂ ಉಪಯೋಗವಾಗುವ ರೀತಿಯಲ್ಲಿ ನೀವು ಎಲ್ಲಿ ಸರ್ವೋತ್ತಮವಾಗಿ ಬಾಳಬಹುದೋ ಆ ದೇಶಕ್ಕೆ ಹೋಗಿ. ಹೋಗಿ, ದೇವರ ಹೆಸರಿನಲ್ಲಿಯೂ ಸಮಗ್ರವಾದ ಮಾನವ ಕುಲದ ಹೆಸರಿನಲ್ಲಿಯೂ ಮಾನವ ಪ್ರೇಮದಿಂದ ಧೈರ್ಯವಾಗಿ ಹೋಗಿ.

ಇಂಡಿಯಾ ದೇಶದವರ ಕಷ್ಟವನ್ನು ಉಪಶಮನಮಾಡುವದು ಕೆಲವರಿಗೆ ರಾಷ್ಟ್ರೀಯ ಸಮಸ್ಯೆಯಾಗಿದೆ; ಆದರೆ ಅದು ರಾಮನಿಗೆ ಅಂತರರಾಷ್ಟ್ರೀಯ ಸಮಸ್ಯೆಯಾಗಿದೆ. ಕೆಲವರಿಗೆ ಅದು ರಾಷ್ಟ್ರಭಕ್ತಿಯ ಪ್ರಶ್ನೆಯಾಗಬಹುದು ; ರಾಮನಿಗೆ ಅದು ಮಾನವಕುಲದ ಪ್ರಶ್ನೆ. ನನ್ನ ಮಕ್ಕಳು ನನ್ನ ಕಣ್ಣೆದುರಿಗೆ ಸಾಯುವದಕ್ಕಿಂತಲೂ ದೂರ ದೇಶದಲ್ಲಿಯಾದರೂ ಬದುಕಲಿ. ಕಣ್ಣುಗಳಲ್ಲಿ ಪ್ರೇಮ ಬಾಷ್ಪಗಳನ್ನು ಸುರಿಸುತ್ತಾ ರಾಮನು ಹೋಗಿ ಬನ್ನಿ ! ನಿಮಗೆ ಒಳ್ಳೆಯದಾಗಲಿ ! ಸ್ವಸ್ತಿ ! ಶುಭಮಸ್ತು ! ಎಂದು ಪ್ರೇಮಗದ್ಗದ ಕಂಠದಿಂದ ಹೇಳುತ್ತಾನೆ.

ಪರದೇಶಗಳಲ್ಲಿ ನಿಮ್ಮ ಅಥವಾ ನಿಮ್ಮ ಕುಟುಂಬದ ಜೀವನಕ್ಕೆ ಅಗತ್ಯವಿರುವದಕ್ಕಿಂತಲೂ ಹೆಚ್ಚು ಸಂಪಾದಿಸಿದಾಗ ಬೇಕಾದರೆ ನಿಮ್ಮ ತಾಯಿನಾಡಿಗೆ ಹಿಂದಿರುಗಿರಿ. ಜಪಾನಿನ ಯುವಕರು ಪಾಶ್ಚಾತ್ತ್ಯ ಪ್ರಯೋಗಶೀಲ ಜ್ಞಾನವನ್ನು ತಮ್ಮ ಜನ್ಮಭೂಮಿಗೆ ತಂದಂತೆ, ನೀವು ಹಿಂದಿರುಗಿ ಬಂದು, ವಿದೇಶದಲ್ಲಿ ಸಂಪಾದಿಸಿದ ಜ್ಞಾನವನ್ನು ನಿಮ್ಮ ತಾಯಿನಾಡಿಗೆ ಅನುಗ್ರಹಿಸಿರಿ. ಆದರೆ ಅಲ್ಲಿ ನಿಮ್ಮ ಜೀವನದ ಆವಶ್ಯಕತೆಗಿಂತಲೂ ಹೆಚ್ಚಿನ ಸಂಪಾದನೆ ಇಲ್ಲವಾದರೆ, ಅಲ್ಲಿಯೇ ಉಳಿದುಕೊಳ್ಳಿ. ಆದರೆ, ನೀವು ನೋವಿನಿಂದ ನರಳುತ್ತಿರುವ ಭಾರತಮಾತೆಯ ವಕ್ಷಸ್ಥಲದ ಮೇಲೆ ನಿರುದ್ಯೋಗಿಗಳಾಗಿ ಹರಿದಾಡುತ್ತಿರುವ ಜಿಗುಣೆಗಳಂತೆ ರಕ್ತ ಹೀರುತ್ತಿರುವದಾದರೆ, ಅರೇಬಿಯಾ ಸಾಗರದಲ್ಲಿ ಹಾರಿಕೊಳ್ಳಿ. ಭಾರತಭೂಮಿಯ ಮೇಲೆ ಪುನಃ ಕಾಲಿಡುವದಕ್ಕಿಂತಲೂ ಆ ಸಮುದ್ರದಲ್ಲಿ ಅರೇಬಿಯಾದ ಅತಿಥಿಸತ್ಕಾರವನ್ನು ಭೋಗಿಸಿರಿ. ಮಾತೃಭೂಮಿಯ ಪ್ರೇಮವೂ ನಿಜವಾದ ರಾಷ್ಟ್ರಭಕ್ತಿಯೂ ನಿಮ್ಮಿಂದ ಇಷ್ಟನ್ನು ಬಯಸುತ್ತದೆ.

ರಾಮನು ಎಲ್ಲಾ ಪ್ರಾಣಿಗಳನ್ನೂ ಮನುಷ್ಯರಂತೆ ಕಲ್ಲುಗಳನ್ನೂ ಮತ್ತು ಮಂಗಗಳನ್ನೂ ದೇವರಂತೆಯೇ ಪ್ರೀತಿಸುತ್ತಾನೆ. ಆದರೆ ವಾಸ್ತವಾಂಶವು ವಾಸ್ತವಾಂಶವೇ ಸರಿ ; ಸುಳ್ಳುಹೇಳತಕ್ಕವನಿಗೆ ಕೇಡು ತಪ್ಪಿದ್ದಲ್ಲ. ಪ್ರತಿವರ್ಷವೂ ಸಹಸ್ರಾವಧಿಯ ಬಡ ಐರಿಷ್ ಜನರು ಅಮೆರಿಕಾದೊಳಗೆ ವಲಸೆ ಹೋಗುವದಕ್ಕೆ ತೊಡಗಿ ಹರಿದು ಸುರಿದದ್ದೇ ಇಂಗ್ಲಿಷ್ ಜನಾಂಗದ ಕಪಿಮುಷ್ಟಿಯ ವಶದಲ್ಲಿ ಅವರು ಸಾಧಿಸಿದ ಅಲ್ಪ ಪರಿಹಾರದ ಒಂದೇ ಹಾದಿ.

ರಾಮನು ತನ್ನ ಪ್ರಿಯ ಅಮೆರಿಕೆಯ ಮೇಲಾಗಲೀ ಬೇರೆ ದೇಶಗಳ ಮೇಲಾಗಲೀ ಹಿಂದೂಗಳ ಅಪ್ರಯೋಜಕ ಸೋಮಾರಿ ಸಾಮಗ್ರಿಗಳ ಹೆಚ್ಚಿನ ಹೊರೆಯನ್ನು ಹೊರಿಸಬೇಕೆಂದು ಇಚ್ಛಿಸುವದಿಲ್ಲ. ವಾಸ್ತವವಾಗಿ ವಿಚಾರಮಾಡಿದರೆ, ನೀವು ಪರದೇಶಗಳಿಗೆ ಹೋಗುವದು ನಿಮ್ಮ ಆರೋಗ್ಯಕ್ಕೂ ಹಿತವಾಗಿರುವದು. ಮರಗಳು ಒಟ್ಟುಗೂಡಿ ದಟ್ಟವಾಗಿ ಬೆಳೆದರೆ, ಎಲ್ಲವೂ ದುರ್ಬಲವೂ ಬಡಕಲೂ ಆಗುತ್ತವೆ. ಅವುಗಳಲ್ಲಿಯ ಯಾವದಾದರೊಂದನ್ನು ಮೂಲ ತೋಪಿನಿಂದ ಕಿತ್ತು ದೂರದಲ್ಲಿ ನೆಟ್ಟರೆ ಅದು ರಾಜವೈಭವದ ದೈತ್ಯನಾಗಿ ಬೆಳೆಯುತ್ತದೆ. ನೀವು ಬೇರೆಡೆಗೆ ಹೋದರೆ, ನೀವು ಹೋಗಿ ಸೇರಿ ಬೆಳೆಯುವ ಆ ನಾಡಿಗೆ ಒಂದು ಗೌರವದ ವ್ಯಕ್ತಿಯಾಗುತ್ತೀರಿ. ವರ್ತಮಾನಕಾಲದಲ್ಲಿ ಉದಾತ್ತರಾದ ಅಮೆರಿಕಾಜನರ ವಿಷಯವು ಹಾಗಿತ್ತು. ಅವರಲ್ಲಿ ಹೆಚ್ಚು ಭಾಗದ ಜನರು ಮೂಲತಃ ಯೂರೋಪಿನ ಬಡ ವಲಸೆಗಾರರಾಗಿದ್ದಾರೆ. ಸಂಚರಿಸುತ್ತಾ ಪ್ರವಹಿಸುತ್ತಿರುವ ವಲಸೆಗಾರರಲ್ಲಿ ಉತ್ತಮವೂ ಹಿತಕರವೂ ಆದ ಬದಲಾವಣೆಗಳಾಗುವವೆಂದು ಎಲ್ಲಾ ರಾಷ್ಟ್ರಗಳ ಇತಿಹಾಸದ ಪರಿಶೀಲನೆ ಮಾಡಿದರೆ ವ್ಯಕ್ತವಾಗುವದು.

ಯಜ್ಞದ ವಿಷಯದಲ್ಲಿ ಇನ್ನು ಕೆಲವು ಮಾತುಗಳನ್ನು ಹೇಳಬೇಕಾಗಿದೆ: ಯಜ್ಞವೆಂದರೆ, ಕೆಲವು ಸಮಯ ತ್ಯಾಗವೆಂದು ಅರ್ಥಮಾಡುತ್ತಾರೆ. ಈಗ 'ತ್ಯಾಗ' ಎಂಬ ದಿವ್ಯವಾದ ಶಬ್ದವನ್ನು ನಿಷ್ಕ್ರಿಯವಾದ ಅಸಹಾಯಕತೆಯೆಂದೂ ಶರಣಾಗತಿಯ ದೌರ್ಬಲ್ಯವೆಂದೂ ಎಣಿಸಬಾರದು. ಅಥವಾ ಅದು ಗರ್ವದ ತಪಶ್ಚರ್ಯೆಯೆಂದೂ ತಪ್ಪಾಗಿ ತಿಳಿಯಬಾರದು. ಎಡೆತಡೆಯೇ ಇಲ್ಲದೆ ಕ್ರೂರವಾದ ಮಾಂಸಾಹಾರಿ ತೋಳಗಳು ದೇವರ ಪವಿತ್ರ ದೇವಾಲಯವಾದ ದೇಹವನ್ನು ತಿಂದು ನುಂಗಿ ಬಿಡುವದಕ್ಕೆ ಅವಕಾಶ ಕೊಡುವದು ತ್ಯಾಗವೇನಲ್ಲ. ಅನ್ಯಾಯಕ್ಕೂ ಮಿತಿಮೀರಿದ ದುಷ್ಟತನಕ್ಕೂ ಅವಕಾಶ ಕೊಡುವದಕ್ಕೆ—ಬಲಿಯಾಗುವದಕ್ಕೆ—ನಿಮಗೇನು ಅಧಿಕಾರವಿದೆ? ಅಪವಿತ್ರತೆಯ ಗುಲಾಮನೊಬ್ಬನ ದುರಾಕ್ರಮಣಕ್ಕೆ ತನ್ನ ಪವಿತ್ರ ದೇವಮಂದಿರವಾದ ದೇಹವನ್ನು ಬಿಟ್ಟು ಕೊಡುವದು ಸದ್ಗುಣಶೀಲ ತ್ಯಾಗವಲ್ಲ. ಸತ್ಯ–ಧರ್ಮಗಳಿಗೆ ಸಕಲವನ್ನೂ ಸಮರ್ಪಿಸುವದೇ ನಿಜವಾದ ತ್ಯಾಗ. ಈ ದೇಹವೂ ಈ ಆಸ್ತಿಯೂ ದೇವರದು. ಯಾವಾಗಲೂ ಎಚ್ಚರವಾಗಿರಿ. ನೀವು ಸದ್ವಿನಿಯೋಗ

ಮಾಡಬೇಕೆಂದು ದೇವರು ವಿಶ್ವಾಸದಿಂದ ನಿಮಗೆ ವಹಿಸಿದ್ದ (ನಿಮ್ಮ ದೇಹವೆಂಬ) ಆಸ್ತಿಯನ್ನು ಅನ್ಯಾಯವೂ ಅಧರ್ಮವೂ ಪಕ್ಷಪಾತವೂ ಕೆಡಿಸುವದಕ್ಕೆ ಅವಕಾಶ ಕೊಡಬಾರದೆಂಬ ಹೊಣೆಗಾರಿಕೆಯು ನಿಮ್ಮ ಮೇಲಿದೆ. ಸತ್ಯದಿಂದ ನೀವು ಬೇರೆಯಾಗಿ ನಿಂತು ಧರ್ಮದ ಹೆಸರಿನಲ್ಲಿ ತ್ಯಾಗಮಾಡಲು ತೊಡಗಿದರೆ, ನಿಮ್ಮದಲ್ಲದ್ದನ್ನು ನೀವು ಅಪಹರಿಸಿ, ದುರುಪಯೋಗ ಮಾಡಿದಂತಾಗುತ್ತದೆ. ನಿಮ್ಮದಲ್ಲದ್ದನ್ನು ದಾನಮಾಡುವದು ಪಾಪವಲ್ಲವೆ? ಜಾಜ್ವಲ್ಯವಾದ ಸತ್ಯದ ಸೂರ್ಯನಂತೆ ಪ್ರಕಾಶಿಸಿರಿ. ಸತ್ಯವೇ ಆಗಿರಿ. ಇದೊಂದೇ ನ್ಯಾಯವಾದ ತ್ಯಾಗ. ಒಂದು ನಿಮಿಷ ತಾಳಿ, ಅದನ್ನು ನಾವು ತ್ಯಾಗವೆಂದಾದರೂ ಅನ್ನಬಹುದೆ? ಅದು ದೈವೀ ಸಾರ್ವಭೌಮತ್ವವಲ್ಲವೆ? ಹೌದು, ದೈವತ್ವವೂ ತ್ಯಾಗವೂ ಒಂದೇ ಅರ್ಥದ ಶಬ್ದಗಳು. ಸಂಸ್ಕೃತಿಯೂ ಶೀಲವೂ ಅದರ ಹೊರಗಿನ ತೋರಿಕೆಗಳು.

ಹಿಂದಿನ ವೇದಕಾಲದಲ್ಲಿಯೂ ಅಹಂಕಾರದಲ್ಲಿ ಬೇರು ಬಿಟ್ಟುಕೊಂಡ ಕರ್ಮಕಾಂಡವು ಮೋಕ್ಷವನ್ನು ಕೊಡುವದೆಂದು ತಿಳಿದಿರಲಿಲ್ಲ. ಯಾವಾಗಲೂ ಜ್ಞಾನದಿಂದಲೇ ಮೋಕ್ಷವೆನ್ನುವದು ನಿಜ. ಆದ್ದರಿಂದ ವರ್ತಮಾನಕಾಲದಲ್ಲಿ ಹುಚ್ಚು ತರಾತುರಿಯುಳ್ಳ ಸ್ವಾರ್ಥತೆಯ ನಾಗರಿಕ ಗುಲಾಮರ ಕರ್ತವ್ಯಾಧೀನ ಕರ್ಮಕಾಂಡವು ಪಾಪದಿಂದಲೂ ತಾಪದಿಂದಲೂ ಯಾರನ್ನೂ ರಕ್ಷಿಸಲಾರದು. ಪ್ರಪಂಚದ ಐಶ್ವರ್ಯಗಳನ್ನೆಲ್ಲಾ ಒಬ್ಬನು ತನ್ನಲ್ಲಿಯೇ ಕೂಡಿಹಾಕಿಕೊಂಡರೂ ತಾನೇ ಎಲ್ಲರ ಆತ್ಮನೆಂದು ತಿಳಿದ ಹೊರತು ಶಾಂತಿಯು ಲಭಿಸುವದಿಲ್ಲ. ಆತ್ಮಾನುಭವವೇ ಜಗತ್ತಿನ ಎಲ್ಲಾ ಬದಲಾವಣೆಗಳಿಗೂ ಸನ್ನಿವೇಶಗಳಿಗೂ ಆಧಾರವಾಗಿಯೂ ಅನುಸ್ಯೂತವಾಗಿಯೂ ಇರುವ ಒಂದೇ ಉದ್ದೇಶವಾಗಿದೆ. ಮನುಷ್ಯನ ಜೀವನವು ಕೃತ್ರಿಮತೆಯ ಮೇಲೂ ಕೇವಲ ಮೇಲ್ಮೈಯ ಅಥವಾ ತೋರಿಕೆಗಳ ಮೇಲೂ ನೆಲೆಸಿರುವವರೆಗೂ ಪ್ರತಿಯೊಂದು ಹೊಸ ಬದಲಾವಣೆಯೂ ಮತ್ತು ಸುಧಾರಣೆಯೂ ನೋಟಕ್ಕೆ, ಫಲವತ್ತಾದ ಮಣ್ಣನ್ನು ತರದೆ, ಒಣ ಹೊಲಸಿನ ಹೊಸದೊಂದು ಪದರನ್ನು ಮಾತ್ರ ಹೊರಗೆತ್ತಿ ತೋರಿಸುತ್ತದೆ. ನಿಮ್ಮನ್ನು ಪರಿಪೂರ್ಣರೆಂದೂ ಅಖಂಡರೆಂದೂ ಭಾವಿಸುವದರಿಂದ ಪೂರ್ಣಾರೋಗ್ಯವನ್ನು ನೀವು ಸಾಧಿಸುವವರೆಗೂ ನಿಮ್ಮ ಎಲ್ಲಾ ನಾಗರಿಕತೆಯ ಪ್ರದರ್ಶನವೂ ದುಃಖರೂಪವಾದ ದೇಹವೇ ತಾನೆಂಬ ಅರಿವಿನ ಬಾವೇರಿದ ಹುಣ್ಣನ್ನು ಮುಚ್ಚಿಟ್ಟಿರುವ "ಲಿನನ್ ಬ್ಯಾಂಡೇಜ್" ಮಾತ್ರವಾಗಿರುತ್ತದೆ. ವೇದಗಳ ಜ್ಞಾನಕಾಂಡವೇ ನಿಜವಾದ ವೇದವು. ಹಿಂದೂ ತತ್ತ್ವಜ್ಞಾನದ ಷಡ್ದರ್ಶನಕಾರರೂ ಜೈನ ಮತ್ತು ಬೌದ್ಧ ಶಾಸ್ತ್ರಕಾರರೂ ಇದನ್ನೇ ಶ್ರುತಿ (ದೈವಪ್ರೇರಿತವೂ ಅಪೌರುಷೇಯವೂ ಆದ ಜ್ಞಾನಪ್ರಕಾಶನ) ಎಂದು ನಿರ್ದೇಶಿಸಿರುವದು. ಆಯಾ ಕಾಲಕ್ಕೆ ಅಗತ್ಯವಾದ ರೀತಿಯಲ್ಲಿ ಸ್ಮೃತಿಗಳನ್ನೂ ಕರ್ಮಕಾಂಡಗಳನ್ನೂ ಬದಲಾಯಿಸಿಕೊಳ್ಳಬೇಕು. ಹೀಗೆ ನೀವು ಹಿಂದೂ ಜನಾಂಗದ ವೈಶಿಷ್ಟ್ಯವನ್ನು ಉಳಿಸಿಕೊಳ್ಳಬಹುದಲ್ಲದೆ

ವಿಕಾಸವಾಗಿ ಬೆಳೆದು ಹಿಂದೂಗಳಾಗಿಯೂ ನಿಜವಾದ ಗುರುಗಳಾಗಿಯೂ ಜಗತ್ತಿಗೆ ಉಪದೇಶಕರಾಗಿಯೂ ಆಗಬಹುದು. ಹೀಗೆ ನೀವು ಪ್ರತ್ಯೇಕತಾ ಜಡತೆಯ ರೋಗವನ್ನು ಗುಣಪಡಿಸಿಕೊಂಡು, ಎಲ್ಲವನ್ನೂ ಒಳಕೊಳ್ಳುವ ಹೊಸತನವನ್ನು ಉಸಿರಿಡಬಹುದು. ಆತ್ಮಜ್ಞಾನವಿಲ್ಲದೆ ಕೆಲಸಮಾಡುವ ಮನುಷ್ಯನು ಕತ್ತಲೆಯ ಕೋಣೆಯಲ್ಲಿ ಗೋಡೆಗೆ ತಲೆಯನ್ನು ಬಡಿಸಿಕೊಳ್ಳುತ್ತಾ, ಮೇಜಿಗೆ ಮೊಣಕಾಲನ್ನು ಹೊಡೆಸಿಕೊಳ್ಳುತ್ತಾ, ಕುರ್ಚಿಯ ಮೇಲೆ ಮುಗ್ಗರಿಸುತ್ತಾ, ಡಿಕ್ಕಿ ಹೊಡೆದುಕೊಳ್ಳುತ್ತಾ, ಬೀಳುತ್ತಾ, ಏಳುತ್ತಾ ಕೆಲಸಮಾಡುತ್ತಿರುವ ಮನುಷ್ಯನನ್ನು ಹೋಲುತ್ತಾನೆ. ಬೆಳಕಿನಲ್ಲಿ ಕೆಲಸಮಾಡುವವನಿಗೆ ಒದ್ದಾಟವೇ ಇಲ್ಲ, ಕಷ್ಟವೇ ಇಲ್ಲ. ಜ್ಞಾನವಿಲ್ಲದ ಮನುಷ್ಯನು ಕುದುರೆಯ ಬಾಲವನ್ನು ಹಿಡಿದುಕೊಂಡು ಉದ್ದಕ್ಕೂ ಒದಿಸಿಕೊಳ್ಳುತ್ತಾ ಓಡುತ್ತಿರುವವನಂತೆ ಆಗುತ್ತಾನೆ. ಜ್ಞಾನಿಯು ಮಾತ್ರ ಸುಲಭವಾಗಿಯೂ ಸುಖವಾಗಿಯೂ ಕುದುರೆಯ ಬೆನ್ನಮೇಲೆ ಸವಾರಿ ಮಾಡುತ್ತಾನೆ. ಆತ್ಮಜ್ಞಾನಿಗೆ ಕರ್ಮವು ಕರ್ಮವೇ ಅಲ್ಲ. ಆತ್ಮನಿಷ್ಠನಿಗೆ ಅತ್ಯಂತ ಮಹತ್ತಾದ ದೈತ್ಯ ಕಾರ್ಯಗಳೂ ಬೇಸಿಗೆಯ ಮಂದಮಾರುತನಿಗೆ ಹೂವಿನ ಪರಿಮಳವಿದ್ದಂತೆ ಹಗುರವಾಗಿರುತ್ತವೆ. ಆತ್ಮಜ್ಞಾನಿಯು ಕರ್ಮಮಾಡುವದೇ ಇಲ್ಲವೆಂದು ಶಂಕರರು ಹೇಳುತ್ತಾರೆ. ಇದು ನಿಜ, ಜ್ಞಾನಿಯ ದೃಷ್ಟಿಯಿಂದ ಕರ್ಮವಿಲ್ಲ. ಅವನಲ್ಲಿ ಕರ್ತೃತ್ವವೇ ಇಲ್ಲವಾದ್ದರಿಂದ ಅವನಿಗೆ ಯಾವ ಕರ್ಮವೂ ಶ್ರಮವಾಗಿ ಕಾಣುವದಿಲ್ಲ. ಎಲ್ಲಾ ಕಾರ್ಯಗಳೂ ಅವನಿಗೆ ತಮಾಷೆಯಾಗಿ ಆಟವಾಗಿಯೂ ಆನಂದವಾಗಿಯೂ ತೋರುತ್ತವೆ. ಅವನು ಮಾಡಲೇ ಬೇಕಾದ ಕರ್ತವ್ಯವಿಲ್ಲ. ಅವನಿರುವ ಸ್ಥಿತಿಗತಿಗಳಿಗೆ ಅವನೇ ಪ್ರಭು. ಅವನೆಂದೂ ಕ್ಲೇಶ ಪಡುವದಿಲ್ಲ, ಪೇಚಾಡುವದಿಲ್ಲ, ಚಡಪಡಿಸುವದಿಲ್ಲ, ಅವಸರ ಪಡುವದಿಲ್ಲ. ಅವನಿಗೆ ಎಲ್ಲಾ ಮುಗಿದಿದೆ; ಅವನು ಕೃತಕೃತ್ಯನಾಗಿರುವದರಿಂದ ಗೊಣಗುವದಿಲ್ಲ, ವಿಷಾದಪಡುವದಿಲ್ಲ. ಅವನು ಯಾವಾಗಲೂ ನವನವೋಲ್ಲಾಸಭರಿತನಾಗಿಯೂ ಸ್ಥಿರವಾಗಿಯೂ "ಕೆಲಸ, ಕೆಲಸ, ಕೆಲಸ" ಎಂಬ ಜ್ವರದಿಂದ ಬಿಡುಗಡೆ ಹೊಂದಿದವನಾಗಿಯೂ ಇರುತ್ತಾನೆ.

ನಿತ್ಯಾನಂದ, ನಿತ್ಯೋಲ್ಲಾಸಭರಿತನಾದ ಅಂಥ ಒಬ್ಬ ಜ್ಞಾನಿಯು ಅಲಸಿಯಾಗಿಯೂ ಸೋಮಾರಿಯಾಗಿಯೂ ಮೈಗಳ್ಳನಾಗಿಯೂ ಇರುವದು ಸಾಧ್ಯವೆ? "ನೀವು ಬೇಕಾದರೆ ಪ್ರಕೃತಿಯನ್ನು ಆಲಸ್ಯಗೇಡಿಯೆಂದೂ ಸೂರ್ಯನನ್ನು ಸೋಮಾರಿಯೆಂದೂ ಕರೆಯಬಹುದು" ನಿಷ್ಕ್ರಿಯೆಯ (ನೈಷ್ಕರ್ಮ್ಯದ) ಅದ್ಭುತ ಧರ್ಮಪ್ರಸಾರಕರಾದ ಶಂಕರರನ್ನೇ ನೋಡಿ. ಅಷ್ಟು ಅತ್ಯಲ್ಪ ಕಾಲದಲ್ಲಿ ಒಂದೇ ವ್ಯಕ್ತಿಯಿಂದ ಅಷ್ಟು ಅದ್ಭುತ ಕಾರ್ಯವು ಹರಿದು ಬಂದ ಬೇರೆ ಒಂದೇ ಒಂದು ದೃಷ್ಟಾಂತವನ್ನು ಇಡೀ ಜಗತ್ತಿನ ಇತಿಹಾಸದ ವ್ಯಾಪ್ತಿಯಲ್ಲಿ ತೋರಿಸಿ. ಅವರು ಅನೇಕ ಗ್ರಂಥಗಳನ್ನು ಬರೆದು ಸಂಸ್ಥೆಗಳನ್ನೂ ಮಠಗಳನ್ನೂ ಸ್ಥಾಪಿಸಿ, ರಾಜರುಗಳನ್ನು ಪರಿವರ್ತನೆಮಾಡಿ ಭಾರತದ ಆದ್ಯಂತವಾಗಿ ದಿವ್ಯವಾದ ವಿದ್ವತ್‌ಸಭೆಗಳನ್ನೂ ತಾತ್ತ್ವಿಕಚರ್ಚೆಗಳನ್ನೂ

ಏರ್ಪಡಿಸಿದರು. ನಕ್ಷತ್ರದಿಂದ ಪ್ರಕಾಶವು ಪ್ರಸರಣವಾಗುವಂತೆಯೂ ಹೂವಿನಿಂದ ಸುಗಂಧವು ಹೊರಹೊಮ್ಮುವಂತೆಯೂ ಕಾರ್ಯಗಂಗೆಯು ಅವರಿಂದ ಪ್ರವಹಿಸಿತು. ಮನುವಿನ ಮಾತಿನಂತೆ, ಅಂತರಂಗದ ಮಹಿಮೆಯ ಸ್ವಂತವಾದ ಸಿಂಹಾಸನದ ಸ್ವರಾಜ್ಯಕ್ಕೆ ಆತ್ಮಯಜ್ಞವನ್ನು ತರುವ ಮಹತ್ತಾದ ಬ್ರಹ್ಮಯಜ್ಞದ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳದೆ ಈ ಯಜ್ಞದ ವಿಷಯವನ್ನು ಮುಗಿಸುವಂತಿಲ್ಲ. ನಿಮ್ಮ ಎಲ್ಲಾ ಸ್ವತ್ತು ಅಥವಾ ಆಸ್ತಿಯ ಭಾವನೆಯನ್ನೂ ಎಲ್ಲಾ ಆಸಕ್ತಿಗಳನ್ನೂ ಉದ್ದೇಶಗಳನ್ನೂ ಎಲ್ಲಾ ನನ್ನದು ನಿನ್ನದು ಎಂಬ ಅಭಿಮಾನವನ್ನೂ ಪ್ರೀತಿ—ದ್ವೇಷಗಳನ್ನೂ ಕಾಮವನ್ನೂ ಕ್ರೋಧ—ಅನುಗ್ರಹಗಳನ್ನೂ ರೀತಿನೀತಿಗಳನ್ನೂ ತನು—ಮನಗಳನ್ನೂ ಬಂಧುಗಳನ್ನೂ ಸಂಬಂಧಗಳನ್ನೂ ಒಪ್ಪು—ತಪ್ಪುಗಳನ್ನೂ ಋಣ—ಧನಗಳನ್ನೂ ಪ್ರಶ್ನೆಗಳನ್ನೂ ಎಲ್ಲಾ ನಾಮರೂಪಗಳನ್ನೂ ಎಲ್ಲಾ ಹಕ್ಕುಗಳನ್ನೂ ರಂಜನೆಗಳನ್ನೂ ಜ್ಞಾನಾಗ್ನಿಯಲ್ಲಿ ತ್ಯಾಗಮಾಡಿ, ಅರ್ಪಣೆಮಾಡಿ. ದಿವ್ಯಜ್ಞಾನದ ಅಗ್ನಿಯಲ್ಲಿ ಅವುಗಳನ್ನು ಆಹುತಿಯಾಗಿ ಸುರಿಯಿರಿ. "ತತ್ತ್ವಮಸಿ" ಎಂಬ ಜ್ಞಾನಾಗ್ನಿಯ ಉರಿಯುತ್ತಿರುವ ವೇದಿಕೆಯ ಮೇಲೆ ಆ ಎಲ್ಲಾ ಪ್ರಾಪಂಚಿಕ ಭಾವಗಳ ಧೂಪವನ್ನು ಹಾಕಿ, ಅವು ಸುಡುತ್ತಿರುವಾಗ ಅದರ ಮಧುರಗಂಧವನ್ನು ಆಘ್ರಾಣಿಸಿರಿ. ನಿಮ್ಮ ದೇವತ್ವದ ನಿಶ್ಚಿತವಾದ ಭಾವನೆಯಿಂದ ಎಲ್ಲಾ ವ್ಯಾಮೋಹಗಳನ್ನೂ ದೌರ್ಬಲ್ಯಗಳನ್ನೂ ಮೀರಿ ನಿಲ್ಲಿ. ತಾನೇ ತಾನಾದ ಯಾವ ಮನುಷ್ಯನಾದರೂ ಹಾಯ್ದು ಹೋಗಗೊಡಲು ಪ್ರಪಂಚವು ಸ್ವಲ್ಪ ಅತ್ತಲಾಗಿ ತಿರುಗಬೇಕು. ನಿಮ್ಮ ಪ್ರಪಂಚದ ಮೇಲೆ ನೀವು ದೇವರಾಗಿರಿ; ಇಲ್ಲವಾದರೆ ಅದು ನಿಮ್ಮ ಮೇಲೆ ಪ್ರಭುತ್ವಮಾಡುತ್ತದೆ. ಯಾರು ಸಂಶಯಗ್ರಸ್ತರೋ ಮೂಢಭಾವನೆಯುಳ್ಳವರೋ ಅವರಿಗೆ ಯಾವ ಭರವಸೆಯೂ ಇಲ್ಲ. ಅಂಥವರು "ನಾನಿದ್ದೇನೆ" ಎಂಬ ಹೆಸರಿನಲ್ಲಿ ಅಭಿಮಾನದಿಂದ ವ್ಯರ್ಥವಾಗಿ ಪ್ರತಿಜ್ಞೆಮಾಡುತ್ತಾರೆ. ನಿಮ್ಮ ದೇವತ್ವದ ವಿಷಯದಲ್ಲಿಯೇ ನಿಮಗೆ ಸಂಶಯವಿದೆಯೇ? ನಿಮ್ಮ ಹೃದಯದಲ್ಲಿ ಸಂಶಯವನ್ನು ಇಟ್ಟುಕೊಳ್ಳುವದಕ್ಕೆ ಬದಲು ತುಪಾಕಿಯ ಗುಂಡನ್ನು ಇಟ್ಟುಕೊಳ್ಳುವದು ಉತ್ತಮ. ನಿಮ್ಮ ಹೃದಯವು ನಿಮ್ಮನ್ನು ಸೋಲಿಗೆ ಗುರಿಪಡಿಸುವದಾದರೆ, ಅದನ್ನು ಹೊರಗೆ ಕಿತ್ತುತೆಗೆದು ಎಸೆದುಬಿಡಿ. ನಗುವದಕ್ಕೂ ಸತ್ಯದಲ್ಲಿ ಪ್ರವೇಶಿಸುವುದಕ್ಕೂ ಧೈರ್ಯಮಾಡಿರಿ. ಏನು, ನಿಮಗೆ ಭಯವೆ?

ಯಾವದಕ್ಕಾಗಿ ಭಯ?
ದೇವರ ಭಯ? ಅಸಂಬದ್ಧ.
ಮನುಷ್ಯನ ಭಯ? ಹೇಡಿತನ
ಪಂಚಭೂತಗಳ ಭಯ? ಅವನ್ನು ಎದುರಿಸಿ.
ನಿಮಗೆ ನಿಮ್ಮಲ್ಲಿಯೇ ಭಯವೋ? ನಿಮ್ಮನ್ನು ಅರಿಯಿರಿ.
"ನಾನೇ ದೇವರು" ಎಂದು ಹೇಳಿ.

ಓಂ! ಓಂ!! ಓಂ!!!

# CRITICISM AND UNIVERSAL LOVE

# ಗುಣ–ದೋಷವಿಮರ್ಶೆ, ಟೀಕೆ, ದೋಷಹುಡುಕುವಿಕೆ ಮತ್ತು ವಿಶ್ವಪ್ರೇಮ

## A Message for the Indian people and the World
## ಭಾರತದ ಜನತೆಗೂ ಜಗತ್ತಿಗೂ ಒಂದು ಸಂದೇಶ

ಯಾವಾಗಲಾದರೂ ಆಶಾಜನಕವಾದ ಒಂದು ಚಳವಳಿ ಪ್ರಾರಂಭವಾದರೆ ಇಂಡಿಯಾದಲ್ಲಿರುವ ಪಕ್ಷದ ಅಭಿಮಾನವು ನಾಯಕನ ಶೀಲದಲ್ಲಿರುವ ಕತ್ತಲೆಯ ಕಡೆಗೆ ಸಾರ್ವಜನಿಕರ ಲಕ್ಷ್ಯವನ್ನು ಸೆಳೆಯುತ್ತದೆ. ಹೀಗೆ ಪ್ರತಿಯೊಂದು ಹೂವನ್ನು ಮೊಗ್ಗಿನಲ್ಲಿಯೇ ಚಿವುಟಿಹಾಕುತ್ತಾರೆ. ಆದರೆ ನಿಷ್ಪಕ್ಷಪಾತವಾಗಿ ವಿಚಾರಮಾಡಿ ದರೆ ಯಾರಲ್ಲಿ ಕತ್ತಲೆಯ ಭಾಗವಿರುವದಿಲ್ಲ?– ದೋಷವಿರುವದಿಲ್ಲ? (ಸ್ವಾಮಿ ವಿವೇಕಾನಂದರ ಹಿತಕರವೂ ಆಶಾಪೂರ್ಣವೂ ತುಂಬಾ ಭರವಸೆಯುಳ್ಳದ್ದೂ ಆದ ಯೋಜನೆಗಳೂ ಧೀರೋದಾತ್ತ ಬೋಧೆಗಳೂ ಅವರ ಆಹಾರ ಪಾನೀಯ ಅಭ್ಯಾಸ ಗಳನ್ನು ಹೆಚ್ಚು ಬೆಳಕಿಗೆ ತರುವದರಿಂದ ತಿರಸ್ಕರಿಸಲ್ಪಟ್ಟಿವೆ.) ಆಕ್ಷೇಪಕರವಾದ ಒಂದು ವರ್ತನೆಯನ್ನು ಸಾರ್ವಜನಿಕರಲ್ಲಿ ಪ್ರಕಾಶಪಡಿಸುವದರಿಂದ ಕಾಶೀ ಕೃಷ್ಣಾನಂದ ಸ್ವಾಮಿಗಳನ್ನು ಶಕ್ತಿಕುಂಠಿತರನ್ನಾಗಿ ಮಾಡಿದ್ದಾರೆ. ಆದರೆ, ವಾಸ್ತವವಾಗಿಯೂ ಆ ದೋಷವು ಅವರಿಗೆ ಸೇರಿದ್ದಾಗಿರಲಿಲ್ಲ.

'ಸಾಧಾರಣ ಧರ್ಮ' ಚಳವಳಿಯನ್ನೂ 'ಧರ್ಮಮಹೋತ್ಸವ' ಸಭೆಗಳನ್ನೂ– ಆ ಮಾರ್ಗಗಳಲ್ಲಿ ನಾಯಕತ್ವವನ್ನು ವಹಿಸಿದ ವ್ಯಕ್ತಿಯಲ್ಲಿ ಆರೋಪಿತವಾದ ಕೆಲವು ವೈಯಕ್ತಿಕ ದೋಷ–ದೌರ್ಬಲ್ಯಗಳ ನೆಪದ ಮೇಲೆ, ತಪ್ಪಿಸಬೇಕೆಂದೂ ಕೆಡಿಸಬೇಕೆಂದೂ ಪ್ರಯತ್ನಗಳು ನಡೆಯುತ್ತಿವೆ. ಕತ್ತೆಯಿಂದ ಕೆಳಗೆ ಬಿದ್ದವನು ಕತ್ತೆಯ ಚಾಲಕನ ಮೇಲೆ ಉರಿದುಬೀಳುವದು ವಿಲಕ್ಷಣವಾದ ತರ್ಕ.

ಇನ್ನೊಂದು ದಿನ ಹಾಲುಮಾರುವ ಹುಡುಗನು ಒಂದು ಮನೆಯೊಳಗೆ ಕೆಲವು ಶೀಶೆಗಳಲ್ಲಿ ಹಾಲನ್ನು ಒಯ್ದನು. ಅವನ ಕೈಯಿಂದ ಆಕಸ್ಮಾತ್ತಾಗಿ ಒಂದು ಶೀಶೆಯು ಜಾರಿಬಿದ್ದು ಒಡೆದುಹೋಯಿತು. ಅವನು ಸಿಟ್ಟೇರಿ ಹುಚ್ಚೆದ್ದವನಂತೆ ಮಿಕ್ಕ ಹಾಲಿನ ಶೀಶೆಗಳನ್ನೂ ಬೀದಿಯಲ್ಲಿ ಎಸೆದು ಬಿಟ್ಟನು.

ಒಬ್ಬರೊಡನೊಬ್ಬರು ವ್ಯವಹಾರಮಾಡುವಾಗ ಜನರು ನಡೆದುಕೊಳ್ಳುವ ರೀತಿಯು ಹೀಗೆ. ಒಂದು ವಿಶಿಷ್ಟದಿಶೆಯಲ್ಲಿ ನಡೆಯುತ್ತಿರುವ ಒಬ್ಬ ಸ್ನೇಹಿತನಲ್ಲಿ

ಸಣ್ಣ ದೋಷಗಳನ್ನು ಕಂಡು ಅವನಲ್ಲಿರುವ ಸದ್ಗುಣಗಳಿಗೆ ಇರಬೇಕಾದ ಗೌರವವನ್ನು ಗುಡಿಸಿ ಬಿಸಾಕುವ ಎಂಥಾ ಬಲವಾದ ಒಲವು ನಮ್ಮಲ್ಲಿದೆ!

ಜಲಬಲಸಮತಾವಿಜ್ಞಾನ ಶಾಸ್ತ್ರದಲ್ಲಿ (Hydrostatics) ಒಟ್ಟಿನ ಒತ್ತಡ ಮತ್ತು ಒಟ್ಟು ಪರಿಣಾಮರೂಪ ಒತ್ತಡ—ಎಂದು ಎರಡಿವೆ. ಒಂದು ವಸ್ತುವಿನ ಮೇಲೆ ಒಟ್ಟಿನ ಒತ್ತಡವು (Total Pressure) ಅನಂತವಾಗಿರಬಹುದು ಮತ್ತು ಪರಿಣಾಮದ ಒತ್ತಡವು ( Resultant Pressure ) ಏನೂ ಇಲ್ಲದೆ ಇರಬಹುದು. ಇಂಡಿಯಾದಲ್ಲಿರುವ ಕೋಟ್ಯನುಕೋಟಿ ಶಕ್ತಿಗಳು ಪರಸ್ಪರ ವಿರುದ್ಧವಾಗಿ ಒಂದನ್ನೊಂದು ಎದುರಿಸುತ್ತಾ ಇರುವದರಿಂದ ಶೂನ್ಯಪ್ರಾಯವಾಗಿ ಪರಿಣಾಮದ ಒತ್ತಡವೂ ಶೂನ್ಯವಾಗುತ್ತದೆ. ಇದು ಶೋಚನೀಯವಲ್ಲವೆ? ಏನು ಕಾರಣ? ಪ್ರತಿಯೊಂದು ಪಕ್ಷವೂ ತನ್ನ ನೆರೆಯವನ ದೋಷದಲ್ಲಿಯೇ ಲಕ್ಷ್ಯವನ್ನು ಕೇಂದ್ರೀಕರಿಸುತ್ತದೆ. ಹೀಗಾಗಿ ಒಬ್ಬರಿಗೊಬ್ಬರಿಗೆ ಸ್ನೇಹ ಸಂಬಂಧವೇ ಇಲ್ಲವಾಗುತ್ತದೆ. ಸಂಶಯದ ಮೇಲೆ ಆಧರಿಸಿರುವ ಲಕ್ಷ್ಯದ ಈ ಏಕಾಗ್ರತೆಯೇ ಆಕ್ಷೇಪಕರವಾದ ಶೀಲವನ್ನು ಉಂಟುಮಾಡುವದಕ್ಕೆ ದ್ವೇಷಾಸೂಯೆಗಳ ಶಕ್ತಿಯಾಗುತ್ತದೆ. "ಒಬ್ಬನನ್ನು ಕಳ್ಳನೆಂದು ಕರೆದರೆ ಅವನು ಕದಿಯುವದಕ್ಕೇ ತೊಡಗುತ್ತಾನೆ" ಎನ್ನುವ ಮಾತು ಬಹಳ ಸತ್ಯ.

ಎಲ್ಲರಿಗೂ ಸಮಾನವಾದ ಒಂದು ಭೂಮಿಕೆಯಿಲ್ಲವೆ? ನಮ್ಮ ನೆರೆಹೊರೆಯವರಲ್ಲಿ ಶ್ಲಾಘನೀಯವಾದ ಗುಣಗಳೇ ಇಲ್ಲವೆ? ಇಂಡಿಯಾದಲ್ಲಿರುವ ಬೇರೆ ಬೇರೆ ಮತ ಪಂಥಗಳು ಒಂದುಗೂಡುವುದಕ್ಕೆ ಯಾವ ಬಂಧನ ಶಕ್ತಿಯೂ ಒಡಂಬಡಿಕೆಯೂ ಇಲ್ಲವೆ? ಯಾರ ಬಹಿರಂಗ ಸಾರ್ವಜನಿಕ ವರ್ತನೆಯು ದೇಶಕ್ಕೇ ಸಹಾಯಕವಾಗಿದೆಯೋ ಅವರ ಖಾಸಗಿ ವೈಯಕ್ತಿಕ ವರ್ತನೆಯಲ್ಲಿ—ಶೀಲಶುದ್ಧಿ ಅಥವಾ ಅಶುದ್ಧಿಯ ದೃಷ್ಟಿಯಿಂದ ದೇವರ ಪತ್ತೇದಾರಿಯ ಪೋಲೀಸಿನ ಸ್ವಯಂಚುನಾಯಿತ ಸದಸ್ಯರಂತೆ—ಇಣಿಕಿ ನೋಡುವದಕ್ಕೆ ನಮಗೇನು ಅಧಿಕಾರವಿದೆ? ಅವರ ಸ್ವಂತವಾದ ವ್ಯಕ್ತಿಗತ ನಡವಳಿಕೆಯು ಅವರಿಗೂ ದೇವರಿಗೂ ನಡುವಿನ ಪ್ರಶ್ನೆ. ಅವರ ಮಧ್ಯದಲ್ಲಿ ಪ್ರವೇಶಮಾಡುವದಕ್ಕೆ ನಾವು ಯಾರು? ಇತರರ ಗುಣ ಶೀಲಗಳನ್ನು ವಿಮರ್ಶೆ ಮಾಡುವದರಲ್ಲಿ ಹಾಳುಮಾಡುವ ನಮ್ಮ ಶಕ್ತಿಯನ್ನು ನಮ್ಮ ಆದರ್ಶಗಳಿಗೆ ಸರಿಯಾಗಿ ನಾವು ಜೀವಿಸುವದಕ್ಕೆ ಉಪಯೋಗಿಸಬೇಕಾಗಿದೆ. ಹೊರಗಿನ ಒತ್ತಾಯವು ಒಬ್ಬ ಮನುಷ್ಯನನ್ನು ಸ್ವಲ್ಪವಾದರೂ ನೀತಿವಂತನನ್ನಾಗಿ ಮಾಡಬಲ್ಲದೆ? ಅಥವಾ ಕೃತ್ರಿಮ ಸಂಪ್ರದಾಯಾನುಸಾರಿಯಾದ, ಎಲ್ಲರ ಮೆಚ್ಚಿಗೆಯನ್ನು ಬಯಸುವ ವರ್ತನೆಯನ್ನು ಶುದ್ಧವೆಂದು ಕರೆಯಬಹುದೆ? ಇದನ್ನು ಪರಿಶುದ್ಧಿಯೆಂದು ತಪ್ಪಾಗಿ ತಿಳಿಯಬೇಡಿ; ಅದು ದೌರ್ಬಲ್ಯ. ಮುಳ್ಳುಗಳಿವೆಯೆಂದು ನಾವು ಗುಲಾಬಿಯನ್ನು ಕೈಬಿಡುತ್ತೇವೆಯೆ? ಮಿಠಾಯಿಗಾರನು ಹೊಟ್ಟುತೌಡುಗಳನ್ನು ತಿಂದು ಜೀವಿಸುತ್ತಿರಬಹುದು;

ಆದರೆ ಆ ಕಾರಣದಿಂದ ಅವನು ತಯಾರು ಮಾಡಿದ ಮಿಠಾಯಿಗಳನ್ನು ತಿನ್ನದೇ ಬಿಡಬೇಕಾದುದಿಲ್ಲ. ಮನುಷ್ಯನಿಂದ ಹೊರಬಂದ ವಸ್ತುವು ಅವನನ್ನು ಮಲಿನಮಾಡುವದೇ ಹೊರತು ಅವನ ಒಳಗೆ ಹೋದವಸ್ತುವು ಅವನನ್ನು ಹೊಲಸು ಮಾಡುವದಿಲ್ಲ. ಸ್ವಾಮಿವಿವೇಕಾನಂದರು ಕೆಲವು ಪದಾರ್ಥಗಳನ್ನು ತಿಂದರೆ, ಕುಡಿದರೆ ಏನಾಯಿತು? ಅವರಿಂದ ಹಿತಕರವಾದ ಉಪದೇಶಗಳು ಬರುವವರೆಗೂ ಅವರೊಳಗೆ ಆಹಾರರೂಪವಾಗಿ ಏನು ಹೋಗುತ್ತದೆಯೆಂಬುದನ್ನು ಗಮನಿಸಬೇಕಾದುದಿಲ್ಲ. ಬೋಧಕನ ವ್ಯಕ್ತಿತ್ವದ ಕಡೆ ಹೆಚ್ಚು ಲಕ್ಷ್ಯಕೊಡದೆ, ಅವನ ಬೋಧನೆಯೂ ಬುದ್ಧಿವಾದವೂ ಉತ್ತಮ ಯೋಗ್ಯತೆಯುಳ್ಳದಾದರೆ ಸ್ವೀಕರಿಸಬೇಕು. ರೇಖಾಗಣಿತ ಶಾಸ್ತ್ರದ ಮೂಲತತ್ತ್ವಗಳಿಗೆ ಯೂಕ್ಲಿಡ್‌ನ ವ್ಯಕ್ತಿತ್ವದ ಸಂಬಂಧವೇನಿದೆ? ಚಿತ್ರಗಾರನು ಕುರೂಪಿಯಾಗಿದ್ದಾನೆಂದು ಅವನು ಬರೆದ ಸುಂದರ ಚಿತ್ರವನ್ನು ಬಿಟ್ಟು ಬಿಡೋಣವೇ? ಸರ್ ಫ್ರಾನ್ಸಿಸ್ ಬೇಕನ್ನನು ಲಂಚಗಳನ್ನು ತೆಗೆದುಕೊಳ್ಳುತ್ತಿದ್ದನೆಂದು ಅವನಿಂದ ರೂಪಿತವಾದ ಅನುಮಾನ ತರ್ಕವನ್ನು ಬಿಸಾಡಿ ಬಿಡೋಣವೆ? ಈ ಇಪ್ಪತ್ತನೆಯ ಶತಮಾನದಲ್ಲಿಯೂ ವ್ಯಕ್ತಿಗಳನ್ನೂ ಉಪದೇಶಗಳನ್ನೂ ಮಿಶ್ರಮಾಡದೇ ಕೇವಲ ವಸ್ತುನಿಷ್ಠವಾಗಿ (objective) ನೋಡುವ ವಿವೇಕವು ನಮ್ಮಲ್ಲಿ ಉದಯವಾಗುವದಕ್ಕೆ ಇದು ಮೀರಿದ ಕಾಲವಾಗಿದೆ. ಕೆಸರಿನಲ್ಲಿ ಬೆಳೆದಿದೆಯೆಂದು ಮನೋಹರವಾದ ಕಮಲವನ್ನು ಪರಿತ್ಯಜಿಸೋಣವೆ? ಒಂದು ಬಗೆಯಾದ ಮೂಗಿನ ಆರೋಗ್ಯಶಾಸ್ತ್ರವನ್ನು ಬೆಳೆಸಿಕೊಂಡು, ಸತ್ತ ಪ್ರಾಣಿಗಳ ಮೂಳೆಗಳನ್ನು ಮುಟ್ಟುವದಕ್ಕೆ ಅಸಹ್ಯಪಟ್ಟುಕೊಳ್ಳುತ್ತಾ ಎಲ್ಲಾ ಬಗೆಯ ಮುರುಕಲುಗುಪ್ಪೆಯೆನ್ನುವದನ್ನು ಹೀಯಾಳಿಸುತ್ತಾ ಕಸವನ್ನು ರಸಮಾಡಿಕೊಳ್ಳಲಾರದೇ ಕಸವೆಂದು ಜರಿಯುತ್ತಾ ಇರುವದೇ ಇಂಡಿಯಾದ ಬಡತನಕ್ಕೆ ಅತ್ಯಂತ ಮಹತ್ವಾದ ಕಾರಣವಾಗಿದೆ. ಕೀಳೆಂದು ತಿಳಿದಿರುವ ಈ ವಸ್ತುಗಳನ್ನು ಉಪಯೋಗಿಸುತ್ತಿರುವದೇ ಯೂರೋಪ್ ಮತ್ತು ಇತರ ನಾಗರಿಕ ದೇಶಗಳನ್ನು ಶ್ರೇಷ್ಠವಾಗಿ ಮಾಡುವದಕ್ಕೆ ಕಾರಣವಾಗಿದೆ. ಹೊಲಸು ನಾರುತ್ತಿರುವ ಗೊಬ್ಬರದಿಂದ ಸುಂದರವಾದ ಹೂತೋಟಗಳನ್ನು ಬೆಳೆಸುವದಿಲ್ಲವೆ? ಅತ್ಯಂತ ಮಲಿನವಾದ ಹೊಗೆಯನ್ನೂ ಹೊಲಸು ಕಲ್ಲಿದ್ದಲನ್ನೂ ಉಪಯೋಗ ಮಾಡುತ್ತಿರುವ ಯೂರೋಪ್ ಅಮೇರಿಕಾ ದೇಶಗಳ (ಕಬ್ಬಿಣ—ಉಕ್ಕು ಮೊದಲಾದವುಗಳನ್ನು ತಯಾರು ಮಾಡುವ) ಕಾರ್ಖಾನೆಗಳಲ್ಲಿ ಅವು ಆಶ್ಚರ್ಯಕರವಾದ ಶಕ್ತಿಯಾಗಿವೆ. ಕೀಳುಕೆಲಸದ ಮಂಗಗಳನ್ನು ಅದ್ಭುತಸೈನ್ಯಗಳಾಗಿ ಮಾಡಿದ್ದರಲ್ಲಿ ಶ್ರೀರಾಮನ ಮಹಾಶಕ್ತಿ ಇತ್ತು. ಪರಿಶುದ್ಧರೂ ಧರ್ಮಶ್ರದ್ಧೆಯುಳ್ಳವರೂ ಆದ ಜನರೊಡನೆ ಯಾರು ತಾನೇ ಶಾಂತಿಯಿಂದ ಇರಲಾರರು? ಆದರೆ, ಯಾರು ತಮ್ಮ ವಿಶಾಲವಾದ ದಯೆಯಿಂದಲೂ ಸಹಾನುಭೂತಿಯಿಂದಲೂ ತಾಯಿಯ ಹೃದಯದಿಂದಲೂ ಪತಿತರನ್ನೂ ಪಾಪಿಗಳನ್ನೂ ಸಹ ವಿಶ್ವವ್ಯಾಪಿಯಾದ ಬೀಸಿನಲ್ಲಿ ಆಲಿಂಗನ ಮಾಡಿಕೊಳ್ಳುವರೋ ಅವರೇ ಮಹಾತ್ಮರು.

ಭೌತಿಕ ಮತ್ತು ಆಧ್ಯಾತ್ಮಿಕ ಅವನತಿಗೆ ಕಾರಣವಾದ ಕ್ಷುದ್ರವಾದ ಪಾಕ ಶಾಲೆಯ ಮೂಢಾಚರಣೆಗಳ ಧೂಳಿನ ಬಿರುಗಾಳಿಯಿಂದ ನಿಜಾತ್ಮ ಸೂರ್ಯನಿಗೆ ಗ್ರಹಣ ಹಿಡಿಸುವ ಪ್ರಯತ್ನದಲ್ಲಿ ನಮ್ಮ ಬಾಳನ್ನು ಹಾಳು ಮಾಡಿಕೊಳ್ಳುವದು ಬೇಡ. ಅನಂತವಾದ ಅಮೃತಾತ್ಮವು ಪರದೇಶೀಯರ ಸಾರಿನಿಂದ (ಆಹಾರದಿಂದ) ಕಳಂಕಿತವಾಗುವದೆನ್ನುವ ಅಡಿಗೆ ಮನೆಯ ಧರ್ಮವು ಶೋಚನೀಯವೇ ಸರಿ. ದಯ ವಿಟ್ಟು ಹರಿದು ಚಿಂದಿಯಾದ ಜಾತಿ ಮತಗಳ ವಸ್ತ್ರಗಳ ಕೆಳಗೆ (ಒಳಗೆ) ನೋಡಿರಿ. ಅನಂತವೂ ನಿರ್ಮಲವೂ ನಿಷ್ಕಳಂಕವೂ ಆದ ಎಲ್ಲರ ಅಮೃತಾತ್ಮವೇ ನಿಮ್ಮ ಆತ್ಮವು. ಒಳಗಿನ ವಾಸ್ತವವಾದ ಈ ಸಮಾನತೆಯನ್ನು ಅಲಕ್ಷ್ಯಮಾಡುವದೇ ಪ್ರಪಂಚದಲ್ಲಿ ರುವ ಎಲ್ಲಾ ತೋರಿಕೆಯ ಅನರ್ಥಗಳಿಗೂ ಕಾರಣವಾಗಿದೆ. ತಮ್ಮ ನೆರೆಹೊರೆ ಯವರ ವ್ಯಕ್ತಿಶೀಲದ ವಿರುದ್ಧವಾಗಿ ಹೋರಾಡಿ ತಿರಸ್ಕರಿಸುವದರಲ್ಲಿ ದುಷ್ಪ್ರೇರಿತ ರಾದ ಉನ್ಮತ್ತನೀತಿವಂತರು ಪ್ರವಾಹದ ಮೇಲು ಮೇಲಿನ ನೊರೆ—ಬುರುಗುಗಳನ್ನು ತೆಗೆಯುವದಕ್ಕೆ ಪ್ರಯತ್ನಮಾಡುತ್ತಾರೆ. ಅವರು ತಳದಲ್ಲಿರುವ ನಿಜವಾದ ಕಾರಣ ವಾದ ಅಸಮಾನತೆಯನ್ನು ಸಮೀಪಿಸಲಾರರು.

ನಷ್ಟರಾದವರನ್ನು ಸಂರಕ್ಷಿಸಲು ಹೋಗುವ ನೀವು ಯಾರು? ಸ್ವತಃ ನೀವು ಪಾರಾಗಿದ್ದೀರಾ?

ಯಾರು ತಮ್ಮ ಸ್ವಂತ ಜೀವವನ್ನು ಉಳಿಸಿಕೊಳ್ಳಬೇಕೋ ಅವರು ಅದನ್ನು ಕಳೆದುಕೊಳ್ಳಬೇಕೆಂಬುದನ್ನು ಬಲ್ಲಿರಾ? ಹಾಗಾದರೆ ನೀವೂ ನಷ್ಟರಾದವರಲ್ಲಿ ಒಬ್ಬರೆ? ನಷ್ಟರಾದವರಲ್ಲಿ ನೀವೂ ಒಬ್ಬರಾಗಬಲ್ಲಿರಾ? ಆಗುತ್ತೀರಾ? ಹಾಗಾದರೆ ಏಳಿ, ಉದ್ಧಾರಕರೂ ವಿಮೋಚಕರೂ ಸಂರಕ್ಷಕರೂ ಆಗಿರಿ.

ಒಬ್ಬ ವೇಶ್ಯಾಂಗನೆಯ ಮನೆಯಲ್ಲಿ ಬುದ್ಧನು ಆಗಾಗ ಪದೇ ಪದೇ ಅತಿಥಿ ಯಾಗಿರುತ್ತಿದ್ದನು. "ಮೊದಲ ಕಲ್ಲನ್ನು ಎಸೆಯತಕ್ಕವರಾರು?" ಎಂಬ ಕ್ರಿಸ್ತನು ಅಂಥಾ ಮರ್ಯಾದಸ್ಥಳಲ್ಲದ ಮೇರಿ ಮ್ಯಾಗ್ಡಲೀನ್ ಸಹವಾಸ ಮಾಡುವದಕ್ಕೆ ನಾಚಿಕೆ ಪಟ್ಟುಕೊಳ್ಳಲಿಲ್ಲ, ಅವಮಾನವೆಂದು ಎಣಿಸಲಿಲ್ಲ. ಓ! ಅಪಮಾನಕರವಾದ ಅಭಿ ಮಾನವೇ! (O disrespectable respectability!) ಒಬ್ಬರೊಬ್ಬರ ತಪ್ಪುಗಳನ್ನು ಎತ್ತಿ ತೋರಿಸುತ್ತಿರುವ ವರೆಗೂ ಆ ದೇಶದಲ್ಲಿ ಐಕಮತ್ಯವಾಗಲಿ ಪ್ರೇಮವಾಗಲೀ ಇರಲಾರದು. ಶಿಶುಗಳಾಗಲಿ ಹಿರಿಯರಾಗಲಿ ಎಲ್ಲಾ ಮಕ್ಕಳೂ ಪ್ರೀತಿಪಾತ್ರರಾಗಿರುವ ತಾಯಿಯ ಹೃದಯವನ್ನು ಬೆಳೆಸಿಕೊಳ್ಳುವದರಲ್ಲಿಯೇ ಜೀವನದ ಯಶಸ್ವೀ ಕಲೆಯ ರಹಸ್ಯವಿರುವದು. ನಿಜವಾದ ವಿದ್ಯೆಯೆಂದರೆ, ದೇವರ ಕಣ್ಣಿನಿಂದ ವಿಶ್ವವನ್ನು ನೋಡುವದು.

ಪ್ರತಿಯೊಬ್ಬರೂ ದೈಹಿಕವಾಗಿ ಹೇಗೆ ಶೈಶವ, ಬಾಲ್ಯ ಮೊದಲಾದ ವಯೋ ಮಾನದ ಬೇರೆ ಬೇರೆ ಅವಸ್ಥೆಗಳನ್ನು ಪಡೆಯಬೇಕೋ ಹಾಗೆಯೇ ನೈತಿಕ ಮತ್ತು

ಆಧ್ಯಾತ್ಮಿಕ ಭೂಮಿಕೆಗಳ ಮೇಲೂ ಶೈಶವ, ಬಾಲ್ಯ ಮೊದಲಾದ ಸ್ಥಿತಿಗಳನ್ನೂ ಅತ್ಯವಶ್ಯವಾಗಿ-ಅಲ್ಲ-ಅನಿವಾರ್ಯವಾಗಿ ಪಡೆಯಲೇಬೇಕು. ಪಾಪಿಗಳೆನ್ನಿಸಿಕೊಳ್ಳತಕ್ಕವರು ನೈತಿಕ ಶಿಶುಗಳು. ಮಗುವಿನದೇ ಆದ ಸೌಂದರ್ಯವಿರುವದಿಲ್ಲವೆ? "ಬಿದ್ದವರು" ಎಂದು ಯಾರನ್ನು ಕರೆಯುತ್ತೀರೋ ಅವರಿನ್ನೂ "ಮೇಲೆದ್ದಿಲ್ಲ" ಅಷ್ಟೇ. ನೀವು ಹೇಗೆ ಒಂದಾನೊಂದು ಕಾಲದಲ್ಲಿ ವಿಶ್ವವಿದ್ಯಾಲಯದ ಹೊಸ ಮನುಷ್ಯರಾಗಿದ್ದಿರೋ ಅವರೂ ಈಗ ಹಾಗೆಯೇ ಇದ್ದಾರೆ.

ಕೆಲವರು ವಿಶ್ವಪ್ರೇಮದ ವಿಷಯವಾಗಿ ಬಹಳ ರಂಪ ರಾದ್ಧಾಂತ ಮಾಡುತ್ತಾರೆ. ಆದರೆ ತಮ್ಮ ಆಶ್ರಿತರ ಶೀಲದಲ್ಲಿಯ ಹೇಯವಾದ ಗುಣಗಳಲ್ಲಿಯೇ ದೃಷ್ಟಿಯನ್ನು ಕೀಲಿಸಿರುತ್ತಾರೆ, "ಪಾಪವನ್ನು ದ್ವೇಷಿಸಬಹುದು; ಆದರೆ ಪಾಪಿಯನ್ನು ಪ್ರೀತಿಸಬೇಕು" ಎನ್ನುವ ಸುಭಾಷಿತವನ್ನು ಹೇಳಿ ತಮ್ಮ ಪೂರ್ವಾಪರ ವಿರುದ್ಧ-ಅಸಂಬದ್ಧವಾದ ನಡವಳಿಕೆಯನ್ನು ಮುಚ್ಚಿಕೊಳ್ಳುತ್ತಾರೆ.

ಓ ಪ್ರಿಯ ಜನರೆ! ಎಲ್ಲಿಯವರೆಗೆ ನೀವು ಒಂದು ವಸ್ತುವಿನಲ್ಲಿ ಕುತ್ಸಿತವಾದ ಗುಣವನ್ನು ಅಥವಾ ಅಸಹ್ಯವಾದ ದೋಷವನ್ನು ನೋಡುತ್ತೀರೋ ಅಲ್ಲಿಯವರೆಗೆ ನೀವೆಂದಿಗೂ ಆ ವಸ್ತುವನ್ನು ಪ್ರೀತಿಸಲಾರಿರಿ. ಪ್ರೇಮವೆಂದರೆ ಸೌಂದರ್ಯದರ್ಶನ.

ಕತ್ತಲೆಯೊಡನೆ ಕದನ ಮಾಡಿದರೆ ಕತ್ತಲೆಯನ್ನು ಎಂದಿಗೂ ಕಳೆಯಲಾರದು. ಕತ್ತಲೆಯ ಕೋಣೆಯಲ್ಲಿ, ಎಲ್ಲಾ ದಿಕ್ಕುಗಳಿಗೂ ಕಲ್ಲುಗಳನ್ನು ಎಸೆಯುತ್ತಾ ಎಡಕ್ಕೂ ಬಲಕ್ಕೂ ದೊಣ್ಣೆಯಿಂದ ಹೊಡೆಯುತ್ತಾ ಕಿಟಕಿ-ಕನ್ನಡಿಗಳನ್ನು ಒಡೆಯುತ್ತಾ ಮೇಜಿನ ಮೇಲೆ ತಟ್ಟುತ್ತಾ ಮಸಿದೌತಿಗಳನ್ನು ಚೆಲ್ಲುತ್ತಾ ಎಲ್ಲ ಕಾಲದಲ್ಲಿಯೂ ದೂಷಿಸುತ್ತಾ ಅಭಿಶಾಪ ಹಾಕುತ್ತಾ ಇದ್ದರೆ ಅದು ಕತ್ತಲೆಯನ್ನು ಕಳೆಯಬಲ್ಲದೆ ? ಬೆಳಕನ್ನು ಒಳಗೆ ತಂದ ಮಾತ್ರಕ್ಕೆ ಅಲ್ಲಿ ಎಂದೂ ಕತ್ತಲೆ ಇರಲೇ ಇಲ್ಲವೆನಿಸುತ್ತದೆ. ಹೀಗೆ ನಿಷೇಧ ಮುಖವಾಗಿ ದೂಷಿಸುತ್ತಾ ಧೈರ್ಯಗೆಡಿಸುತ್ತಾ ಉತ್ಸಾಹ ಭಂಗ ಮಾಡುತ್ತಾ ಇರುವ ವಿಧಾನವೂ ಎಂದೂ ಪರಿಸ್ಥಿತಿಯನ್ನು ಸುಧಾರಿಸುವದಿಲ್ಲ. ಬೇಕಾಗಿರುವದೆಲ್ಲಾ ವಿಧಾಯಕವೂ ಉಲ್ಲಾಸಕರವೂ ಆಶಾದಾಯಕವೂ ಪ್ರೇಮಮಯವೂ ಪ್ರೋತ್ಸಾಹಕರವೂ ಆದ ಮನೋಭಾವವೇ ಹೊರತು ಇದಕ್ಕೆ ವಿರುದ್ಧವಾದುದಲ್ಲ. ಗ್ರಾಮಸಾರಾದಿ ಚರಂಡಿಯ ಹೊಲಸನ್ನೆಲ್ಲಾ ಬೀದಿಗಳ ಮೇಲೆ ಬಿಟ್ಟರೆ, ಅದು ಊರನ್ನೆಲ್ಲಾ ಉದ್ಧಾರಮಾಡುವ ಫಲವನ್ನು ಕೊಟ್ಟೀತೆ? ಎಂದಿಗೂ ಇಲ್ಲ. ಆದ್ದರಿಂದ ಇತರರಲ್ಲಿರುವ ದೋಷಗಳನ್ನು ಎತ್ತಿಹೇಳುವದರಿಂದ ಏನೂ ಒಳ್ಳೆಯದಾಗಲಾರದು. ಶಾಂತಿ ಮತ್ತು ಅಭಿಮಾನ-ವಿಶ್ವಾಸಗಳ ಹೊಸನೀರಿನ ಪ್ರವಾಹವು ಚರಂಡಿಯ ಮೇಲೆ ಹರಿದು ಹೋದರೆ, ಎಲ್ಲಾ ಕೊಳೆಯನ್ನೂ ಕೊಚ್ಚಿಕೊಂಡು ಹೋಗುತ್ತದೆ. ಅಕ್ಬರನು ಒಂದು ಗೆರೆಯನ್ನು ಎಳೆದು, ಜಾಣನಾದ ಬೀರಬಲನನ್ನು ಕರೆದು

ಆ ಗೆರೆಯನ್ನು ಯಾವ ಕಡೆಯೂ ಕತ್ತರಿಸದೆ, ಅಳಿಸದೆ ಸಣ್ಣದನ್ನಾಗಿ ಮಾಡಬೇಕೆಂದು ಹೇಳಿದನಂತೆ. ಕೂಡಲೇ ಬೀರ್‌ಬಲ್‌ನು ಆ ಗೆರೆಯ ಪಕ್ಕದಲ್ಲಿ ಸಮದೂರದಲ್ಲಿ ಅದಕ್ಕಿಂತಲೂ ಹೆಚ್ಚು ಉದ್ದವಾದ ಇನ್ನೊಂದು ಗೆರೆಯನ್ನು ಎಳೆದನಂತೆ. ಆದರಿಂದ ಅಕ್‌ಬರನ ಗೆರೆಯು ಸಣ್ಣದಾಯಿತಂತೆ. ಅದು ಹೀಗೇ ಸರಿ. ಹೆಚ್ಚು ಉದ್ದವಾದ ಗೆರೆಯನ್ನು ಎಳೆಯುವದೇ ಜಾಣತನ. ತನ್ನ ಗೆರೆಯು ಸಣ್ಣದಾಯಿತೆಂದು ಅಕ್ಬರನಿಗೆ ಒಳಗೆ ಮನವರಿಕೆಯಾಗುವ ರೀತಿಯಲ್ಲಿ ಬೀರ್‌ಬಲನು ಮಾಡಿದಂತೆ ಜನರು ಹೇಗೆ ತಿಳಿಯಬೇಕೆಂದು ನೀವು ಹೊರಗಿನಿಂದ ಇಚ್ಛಿಸುವಿರೋ ಅವರು ಒಳಗೆ ಹಾಗೆ ಭಾವಿಸುವಂತೆ ಮಾಡುವದೇ ಸರ್ವೋತ್ತಮವಾದ ಟೀಕೆ. ಎಲ್ಲಾ ಗೊಣಗಾಟವೂ "ಓ, ಮಲ್ಲಿಗೆ ಏಕೆ ಅಶ್ವತ್ಥವಾಗಲಿಲ್ಲ !" ಎಂದು ದೂರಿದಂತೆಯೇ ಸರಿ. ಪ್ರತಿಯೊಂದ ರಲ್ಲಿಯೂ ಇರುವ ಸೌಂದರ್ಯವನ್ನು ಕಂಡು, ಮೆಚ್ಚಿ, ಆನಂದ ಪಡಬೇಕು "ಕೆಟ್ಟದರ ವಿರುದ್ಧವಾಗಿ ಬೊಗಳಬೇಡ, ಬಯ್ಯಬೇಡ; ಆದರೆ, ಒಳ್ಳೆಯದರ ಸೌಂದರ್ಯ ವನ್ನು ಸ್ತುತಿಸುತ್ತಿರು, ಗುಣಗಾನಮಾಡುತ್ತಿರು." "ಎಲ್ಲಾ ಜೀವನದ ದ್ರಾಕ್ಷಿ ಗಳಿಂದಲೂ ಒತ್ತಿ, ಹಿಂಡಿ ಮಧುರವಾದ ದ್ರಾಕ್ಷಾರಸವನ್ನು ತೆಗೆಯುತ್ತೇನೆ."

"ಪ್ರಿಯ ಆಕ್ಷೇಪಕನೆ, ದೋಷದರ್ಶಿಯೆ, ನಿನ್ನನ್ನು ನಾನು ಪ್ರೀತಿಸುತ್ತೇನೆ; ಆದರೆ ನೀನು ಯಾರನ್ನು ಆಕ್ಷೇಪಿಸುತ್ತೀಯೋ ಟೀಕಿಸುತ್ತೀಯೋ ಅವರನ್ನು ಸಮಾನವಾಗಿಯೇ ಪ್ರೀತಿಸಿ ಗೌರವಿಸುತ್ತೇನೆ."

ಹೋರಾಟದಲ್ಲಿ—ಬದುಕಿನ ಹೋರಾಟದಲ್ಲಿ—ಗೆಲ್ಲುವದು ಯಾವದು ? ಪ್ರೇಮ ! ಯಾವ ಸಂಘಗಳು, ಸಮಾಜಗಳು, ತಮ್ಮ ಹೃದಯಗಳನ್ನೆಲ್ಲಾ ಒಟ್ಟುಸೇರಿಸಿ, ತಲೆ ಗಳನ್ನೆಲ್ಲಾ ಸಮಶ್ರುತಿಯಲ್ಲಿಯೂ ಕೈಗಳನ್ನೆಲ್ಲಾ ಪ್ರೀತಿಯ ಸೇವೆಯಲ್ಲಿಯೂ ಇಡ ಬಲ್ಲವೋ ಅವು ಸಂಖ್ಯೆಯಲ್ಲಿ ಕಡಿಮೆ ಇದ್ದರೂ ಒಡೆದೊಡೆದು ಬೇರೆ ಬೇರೆಯಾದ ಶಕ್ತಿಗಳುಳ್ಳ ತುಂಬಿ ತುಳುಕುತ್ತಿರುವ ಲಕ್ಷಾಂತರ ಜನರ ವಿರುದ್ಧ ಹೋರಾಟದಲ್ಲಿ ಜಯಶಾಲಿಗಳಾಗಬಲ್ಲವು.

ಹೋರಾಟವು ಮೂರು ಬಗೆಯಾಗಿದೆ : (1) ವಿಜಾತೀಯರೊಡನೆ, (2) ಸಜಾತೀಯರೊಡನೆ, (3) ಪ್ರಕೃತಿಯ ವಿರುದ್ಧವಾಗಿ.

ದ್ವೇಷಾಸೂಯೆಗಳಿಂದಲೂ ಪಕ್ಷಾಭಿಮಾನದಿಂದಲೂ ಸಜಾತೀಯರೊಡನೆ ಹೋರಾಡಿ ಶಕ್ತಿಯನ್ನು ವ್ಯರ್ಥವಾಗಿ ಹಾಳು ಮಾಡಿಕೊಳ್ಳದೆ, ಮೈತ್ರಿಯನ್ನು ಸಾಧಿಸಿ ದರೆ, ವಿಜಾತೀಯರೊಡನೆ ಹೋರಾಟದಲ್ಲಿ ಖಂಡಿತವಾಗಿಯೂ ವಿಜಯವನ್ನು ಸಂಪಾದಿಸಬಹುದು.

"ಎಲ್ಲಾ ಬಗೆಯ ಪೀಡನೆಯೂ ಉಪದ್ರವವೂ ದಬ್ಬಾಳಿಕೆಯೂ ಕರುಣೆಯಲ್ಲಿ ಪ್ರಾರಂಭವಾಗುತ್ತದೆ" ಎಂಬ ಮಾತು ತೀರಾ ಸತ್ಯ.

ಎಲ್ಲಿ ವಿಜಾತೀಯವಾದುದರಲ್ಲಿ ಸಹ ಪ್ರೇಮವಿದೆಯೋ ಅಲ್ಲಿ ಪ್ರಕೃತಿಯ ವಿರುದ್ಧ ಹೋರಾಟದಲ್ಲಿ ಜಯ—ವಿಜಯಗಳು ಖಾತರಿಯಾಗಿವೆ; ಭದ್ರವಾಗಿರುತ್ತವೆ. ಪಂಚ ಭೂತಗಳ ಜಯವೂ ಆಗ ಸುಲಭವಾಗುತ್ತದೆ. ಪ್ರಕೃತಿಯೊಡನೆ ನಡೆಸುವ ಹೋರಾಟ ದಿಂದ "ಸಮಸ್ತವನ್ನೂ ಆಳುವ ಚೈತನ್ಯ ಪ್ರಭು—ಸರ್ವೇಶ್ವರ—ನಾನೇ" ಎನ್ನುವ ಸತ್ಯವನ್ನು ಭೌತಿಕ ಭೂಮಿಕೆಯಲ್ಲಿ ಅನುಭವಕ್ಕೆ ತಂದುಕೊಳ್ಳುವದಾಗುತ್ತದೆ.

ಪ್ರಪಂಚದಲ್ಲಿ ಆಕ್ಷೇಪಕ ಮನೋಭಾವವು ಇಷ್ಟು ಸಾಮಾನ್ಯವಾಗಿ—ಸಾರ್ವ ತ್ರಿಕವಾಗಿ—ಏಕಿದೆ ?

ಆಕ್ಷೇಪಕ ಮನೋಭಾವವು ಮನ ನೋಯಿಸುವ ಆಕ್ರಮಣಕಾರಿಯೆಂದು ತೋರುತ್ತದೆ; ಆದರೆ ಬಹಳ ಮಟ್ಟಿಗೆ ಅದಕ್ಕೆ ಆತ್ಮಪಾಲನೆಯ ಸಂರಕ್ಷಕ ಮನೋ ಭಾವವೇ ಕಾರಣವಾಗಿದೆ. ಅಂಥಾ ಒಂದು ಆಕ್ಷೇಪಕವಾದ ರೂಢಿಯನ್ನು ಅಥವಾ ಅಭ್ಯಾಸವನ್ನು ತಪ್ಪಿಸಲು ಅದರ ದುಷ್ಪರಿಣಾಮಗಳನ್ನೆಲ್ಲಾ ತೋರಿಸುವ ತೀಕ್ಷ್ಣವಾದ ಆಕ್ಷೇಪಕರ ಟೀಕೆಯು ಆವಶ್ಯಕವಾಗಿದೆ. ಇತರರು ಆ ಬಗೆಯ ಅಭ್ಯಾಸದಿಂದ ಕ್ಲೇಶ ಪಡುತ್ತಿದ್ದಾಗ ಅವರಿಂದ ಆಗಬಹುದಾದ ಸಾಂಕ್ರಾಮಿಕ ಸೂಚನೆಯ ಭಯಕ್ಕಾಗಿ ಅವರ ಸಹವಾಸವನ್ನು ಸ್ವಾಭಾವಿಕವಾಗಿ ತೊರೆದು ದೂರವಿರುತ್ತೇವೆ. ಹಳೆಯ ಅಭ್ಯಾಸವನ್ನು ಮುರಿದ ಕೂಡಲೇ ಹೊಸದೊಂದು ನೋಟವೂ ಅಭ್ಯಾಸವೂ ರೂಪಿತವಾಗುತ್ತದೆ. ಪ್ರಪಂಚದಲ್ಲಿ ಸುಧಾರಣೆಗೆ ಅವಕಾಶವಿರುವವರೆಗೂ ಆಕ್ಷೇಪಣೆಯ ಮತ್ತು ಹೋಲಿಸುವ ಮನೋಭಾವವು ಇದ್ದೇ ಇರುತ್ತದೆ. ದೋಷಾನ್ವೇಷಣೆಯ ಅಥವಾ ಒಬ್ಬರೊಡ ನೊಬ್ಬರನ್ನು ಹೋಲಿಸುವ ಮನೋಭಾವವು ಮಾತ್ರ ಅನಿಷ್ಟವಲ್ಲ ಅಥವಾ ನಿರ್ಮೂಲ ಮಾಡಲು ಸಾಧ್ಯವೆಂದಲ್ಲ; ಆದರೆ ಅದರಲ್ಲಿರುವ ವಿಷವು ನಿರ್ಮೂಲವಾಗಬೇಕು. ವಿಮರ್ಶಕರಿಗೆ ಅದು ಒಂದು ಬಗೆಯ ವ್ಯಕ್ತಿತ್ವವನ್ನು ಕೊಡುತ್ತದೆ. ನಮ್ಮಲ್ಲಿಯೂ ಪರರಲ್ಲಿಯೂ ಪಾಪಕ್ಕೆ ಕಾರಣವಾದ, ಟೀಕೆಯಿಂದ ಇರಿಯಲಾಗುವ ಕ್ಷುದ್ರ ಅಹಂಕಾರ ವನ್ನು ಅತ್ತಲಾಗಿ ಎಸೆಯೋಣ. ಎಲ್ಲಾ ದುಃಖವೂ ಪರಿಹಾರವಾದರೆ ನಾವು ಸಕಲ ಕರ್ಮ ಗಳನ್ನೂ ನಮ್ಮ ಸುತ್ತಲಿರುವ ಜನರನ್ನೂ ವೈಜ್ಞಾನಿಕ ಅನಾಸಕ್ತಿಯಿಂದಲೂ ರಸಾಯನ ವಿಜ್ಞಾನಿಯ ಅಥವಾ ಸಸ್ಯ ವಿಜ್ಞಾನಿಯ ತಾತ್ತ್ವಿಕ ಶಾಂತಿಯಿಂದಲೂ ನೋಡಬಹುದು. ಪರೀಕ್ಷೆಗೆ ವಿಷಯವಾಗಿರುವ ರಾಸಾಯನಿಕ ವಸ್ತುಗಳಲ್ಲಿಯೂ ಸಸ್ಯಗಳಲ್ಲಿಯೂ ಸಿಕ್ಕಿ ಬೀಳುವ ಭಯವಿಲ್ಲದೆ, ರಸಾಯನ ಶಾಸ್ತ್ರಜ್ಞನಂತೆಯೂ ಸಸ್ಯ ಶಾಸ್ತ್ರಜ್ಞನಂತೆಯೂ ಪ್ರತಿಯೊಂದನ್ನೂ ಅತ್ಯಂತ ನಿಷ್ಪಕ್ಷಪಾತವಾಗಿಯೂ ನಿಷ್ಕೃಷ್ಟವಾಗಿಯೂ ಸೂಕ್ಷ್ಮ ವಾಗಿಯೂ ಪರೀಕ್ಷಿಸಬಹುದು. ಸೂರ್ಯನಂತೆ ಸಾಕ್ಷಿಯಾಗಿ ಮುಳ್ಳು ಪೊದೆಗಳನ್ನೂ ಗುಲಾಬಿಗಳನ್ನೂ ಪಾಳು ಭೂಮಿಗಳನ್ನೂ ತೋಟಗಳನ್ನೂ ಗಂಡು ಹೆಣ್ಣುಗಳನ್ನೂ ಗಿಡಗಳನ್ನೂ ಇರುವೆಗಳನ್ನೂ ಮೋಡಗಳನ್ನೂ ಎಲ್ಲವನ್ನೂ ಎಚ್ಚರವಾಗಿ ನಿರೀಕ್ಷಿಸುತ್ತಾ ಎಲ್ಲಕ್ಕೂ ಸಹಾಯ ಮಾಡುತ್ತಾ ಇರಬಹುದು.

ವ್ಯಾಧಿಗಳನ್ನು ತಪ್ಪಿಸಿಕೊಳ್ಳಬೇಕಾದರೆ, ಆರೋಗ್ಯ ನಿಯಮದಂತೆ ಜೀವಿಸುವದೊಂದೇ ದಾರಿಯಾಗಿದೆ. ಪರಕೀಯ ರಾಜಕಾರಣದಿಂದ ಪಾರಾಗಬೇಕಾದರೆ ಆಧ್ಯಾತ್ಮಿಕ ಸ್ವಸ್ಥತೆಯ ನಿಯಮದಂತೆ—ನೆರೆಹೊರೆಯವರಲ್ಲಿ ಪ್ರೇಮ ಮಾಡುವ ನಿಯಮದಂತೆ-- ಜೀವಿಸುವುದೊಂದೇ ಪರಿಹಾರ.

ಉಚಿತವಾದ ತ್ಯಾಗವನ್ನು ಮಾಡಬಹುದಾದರೆ ಮಾತ್ರ ನೀಚ—ನಿರ್ಭಾಗ್ಯ ಸ್ಥಿತಿಯಲ್ಲಿರುವದು ಎಷ್ಟು ಸುಲಭವೋ ಅಭಿವೃದ್ಧಿ ಸ್ಥಿತಿಯಲ್ಲಿರುವದೂ ಅಷ್ಟೇ ಸುಲಭವಾಗುತ್ತದೆ. "ಯಜ್ಞವು ಅನರ್ಥವನ್ನು ನಿವಾರಿಸುತ್ತದೆ ; ಕೆಡುಕನ್ನು ಹಿಮ್ಮೆಟ್ಟಿಸುತ್ತದೆ." ಈ ಮಾತು ಸಹಸ್ರಾರು ವರ್ಷಗಳ ಹಿಂದೆ ಎಷ್ಟು ಸತ್ಯವಾಗಿತ್ತೋ ಇವತ್ತೂ ಅಷ್ಟೇ ಸತ್ಯವಾಗಿದೆ. ಆದರೆ ಅದು ನಿರಪರಾಧಿಗಳಾದ ಮೂಕ ಪ್ರಾಣಿಗಳ ಪರಾರ್ಥಕವಾದ ಯಜ್ಞವು ಮಾತ್ರ ಅಲ್ಲ. ಈ ಪ್ರಪಂಚದಲ್ಲಿ ನಮಗೆ ಸ್ವರ್ಗವನ್ನು ತಂದುಕೊಡುವ ಪ್ರೇಮದ ಬಲಿಪೀಠದ ಮೇಲೆ ನಮ್ಮ ಸ್ವಪಕ್ಷಾಭಿಮಾನ, ಜಾತಿ ಮತಗಳ ಭಾವನೆ, ದ್ವೇಷಾಸೂಯೆಗಳು ಮೊದಲಾದುವುಗಳ ಯಜ್ಞ—ಹವನ—ನಡೆಯಬೇಕು.

## ಆಕ್ಷೇಪಣೆಗೆ ಗುರಿಯಾದ ವ್ಯಕ್ತಿಗೆ

ಆಕ್ಷೇಪಣೆಗೆ ಗುರಿಯಾದ ವ್ಯಕ್ತಿಗೆ ಆಕ್ಷೇಪಣೆಯು ಸಮತೋಲನಕಾರನಂತೆ ಬರುತ್ತದೆ. ಗಿಡಗಳ ಹೆಚ್ಚಿನ ಕೊಂಬೆಗಳನ್ನು ಕತ್ತರಿಸುವದರಿಂದ ಗಿಡಗಳು ಹೆಚ್ಚು ಹುಲುಸಾಗಿ ಬೆಳೆಯುವಂತೆ ದೇವರು ನಮ್ಮ ಅಧಿಕ ಪ್ರಸಂಗಗಳನ್ನೂ ಅನುಚಿತ ಪ್ರಸಂಗಗಳನ್ನೂ ಕತ್ತರಿಸಿ, ನಮ್ಮನ್ನು ಹೆಚ್ಚು ಸುಂದರವಾಗಿ ಬೆಳೆಸುವದಕ್ಕಾಗಿ ಆಕ್ಷೇಪಕರನ್ನು ಇಟ್ಟಿದ್ದಾನೆ. ದೋಷಾರೋಪಣೆಯ ಕತ್ತರಿಯು ಪ್ರಯೋಗವಾದಾಗ ನಿಮ್ಮೊಳಗೇ ಏನು ನಡೆಯುತ್ತಿದೆಯೆಂಬುದನ್ನು ಸ್ವಲ್ಪ ಹಿಂದಿರುಗಿ ನೋಡಿರಿ. ಕೀಳಾದ ಭಾವಗಳಿಗೆ ಹರಿದು ಹೋಗುವದಕ್ಕೆ ಇರಬಹುದಾದ ಒಲವಿಗೆ ಇದೊಂದು ಎಚ್ಚರವಾಗಬಹುದು. ಬಂಡೆಗಳಿಂದ ತುಂಬಿರುವ ವಕ್ರ ವಕ್ರವಾದ ಕಾಲುವೆಯಲ್ಲಿ ನಡೆಸಿಕೊಂಡು ಹೋಗುತ್ತಿರುವ ಹಗುರವಾದ ದೋಣಿಯಲ್ಲಿ ಕುಳಿತಿರುವ ಮನುಷ್ಯನು ಗೊತ್ತಿಲ್ಲದ ಸಮುದ್ರದೆಡೆಗೆ ಪ್ರವಾಹದಿಂದ ಕೊಚ್ಚಿ ಒಯ್ಯಲ್ಪಡುತ್ತಿರಬಹುದು. ಆದರೆ ಅಲ್ಲಿರುವ ಅಪಾಯಗಳು ಅವನನ್ನು ಎಚ್ಚರವಾಗಿಟ್ಟಿರುತ್ತವೆ. ಅವನ ದೋಣಿಯು ಬಂಡೆಗಳಿಗೆ ಬಡಿದಾಗ ಅವನು ತವಕಪಡಬೇಕು. ಈ ಅಡೆತಡೆಗಳಿಗೆ ಅವನು ಗಮನ ಕೊಟ್ಟು, ಮುಂದೆ ಬರಬಹುದಾದ ಹೆಚ್ಚಿನ ಆಪಾಯಕ್ಕೆ ಇದು ಪೂರ್ವ ಸೂಚನೆ ಇರಬಹುದೆಂದು ಎಚ್ಚರಗೊಳ್ಳದಿದ್ದರೆ ಅದರಿಂದ ಅವನಿಗೆ ಪ್ರಯೋಜನವಾಗುವದಿಲ್ಲ. ನಾವು ನೋವು—ದುಃಖ ಎಂದು ತಿಳಿದಿರುವದೆಲ್ಲಾ ಅವಶ್ಯವಾದ ಅಪಾಯ ಸೂಚನೆಗಳು. ಜೀವಿಗಳ ಸತ್ಯಶೀಲತೆಗೆ ಇದು ಅವಶ್ಯವಾದ ಪ್ರಚೋದನೆ.

ಮಿತ್ರರಿಂದಾಗಲೀ ಶತ್ರುಗಳಿಂದಾಗಲೀ ಬರುವ ನೋವನ್ನುಂಟುಮಾಡುವ ಆಕ್ಷೇಪವು ನಿಮ್ಮ ನಿಜಾತ್ಮನೇ ದೇವರೆಂದು ಎಚ್ಚರ ಹುಟ್ಟಿಸುವ ಸ್ವಪ್ನ ಪಿಶಾಚಿ. ನೀವು ಎಚ್ಚರವಾದ ಮೇಲೆ ಸ್ವಪ್ನ ಪಿಶಾಚಿ ಎಲ್ಲಿ? ಅದೆಂದೂ ಇರಲೇ ಇಲ್ಲ. ಪ್ರೇಮದ ನಿಯಮದ ಪ್ರಕಾರ ನಮ್ಮನ್ನು ನಾವು ಸರಿಪಡಿಸಿಕೊಂಡ ಕ್ಷಣದಲ್ಲಿಯೇ ಎಲ್ಲಾ ನಷ್ಟಗಳೂ ಪ್ರತ್ಯಕ್ಷ ಲಾಭಗಳಾಗಿ ಪರಿಣಮಿಸುತ್ತವೆ. ಬಡಪಾಯಿ ಸಿಂಡ್ರೆಲ್ಲಾ ತನ್ನ ಜೋಡನ್ನು ಕಳೆದುಕೊಂಡಳು ; ಆಕೆಯ ಮುಗ್ಧತೆಯು ಜೋಡನ್ನೂ ಹಿಂದಿರುಗಿ ಪಡೆಯಿತಲ್ಲದೆ, ತನ್ನ ಜೀವಮಾನದ ಸಂಗಾತಿಯನ್ನಾಗಿ ದೊರೆಯ ಸಹವಾಸದ ಲಾಭವನ್ನೂ ಗಳಿಸಿತು.

ಆದರೆ, ಸರ್ವವೂ ನಾವೇ ಆಗಿರುವಾಗ ಯಾವ ಮೋಸಗಾರರೂ ನಮ್ಮ ಹತ್ತಿರ ಬರುವದಕ್ಕೆ ಧೈರ್ಯ ಮಾಡಲಾರರು. ಮನೆಯಲ್ಲಿ ಬೆಳಕಿಲ್ಲದಿರುವಾಗ ಕಳ್ಳರು ನುಸುಳಿಕೊಂಡು ಬರುತ್ತಾರೆ. ಜನತೆಯ ನಾಯಕನಾಗುವದಕ್ಕೆ ಯೋಗ್ಯತೆಯುಳ್ಳವನು ಸಹಾಯಕರ ಅವಿವೇಕಕ್ಕಾಗಲೀ ಅನುಯಾಯಿಗಳ ಅವಿಶ್ವಾಸಕ್ಕಾಗಲೀ ಮಾನವ ಜನತೆಯ ಕೃತಘ್ನತೆಗಾಗಲೀ ಸಾರ್ವಜನಿಕರ ಮೆಚ್ಚಿಗೆಯಿಲ್ಲದಿರುವದಕ್ಕಾಗಲೀ ಗೋಳಾಡುವದಿಲ್ಲ ಮತ್ತು ದೂರು ಹೇಳಿಕೊಳ್ಳುವದಿಲ್ಲ. ಈ ಎಲ್ಲಾ ಘಟನೆಗಳೂ ದುರ್ಘಟನೆಗಳೂ ನಮ್ಮ ಜೀವನದ ಮಹತ್ತಾದ ಆಟದಲ್ಲಿಯೂ ಪೇಚಾಟದಲ್ಲಿಯೂ ಬರುವ ಅನಿವಾರ್ಯವಾದ ಅಂಶಗಳು. ನಿರುತ್ಸಾಹದಲ್ಲಿಯೂ ಸೋಲಿನಲ್ಲಿಯೂ ಆ ಪ್ರತಿಕೂಲ ಸನ್ನಿವೇಶಗಳಿಗೆ ಮಣಿಯದಂತೆ ಅವನು ಎದುರಿಸುವದೇ ನಮ್ಮ ಆಧ್ಯಾತ್ಮ ನಿಷ್ಠಾಶಕ್ತಿಗೆ ಅಂತಿಮ ಸಾಕ್ಷಿಯು, ಕೊನೆಯ ಪ್ರಮಾಣವು. ಅನಾವಶ್ಯಕವಾದ ಘರ್ಷಣೆಯೂ ಮನಸ್ಸಿನ ನಿರ್ಲಕ್ಷ್ಯವಾದ ಅಪಕ್ಷೇಯತೆಯೂ ಸೊರಗೂ ಸವಕಲೂ ನಿವಾರಿಸಲ್ಪಟ್ಟರೆ, ಈ ಜಗತ್ತಿನಲ್ಲಿ ಯಾವದನ್ನು ಅತ್ಯಂತ ತೃಪ್ತಿಕರವಾಗಿ ಸಾಧಿಸಲು ಸಾಧ್ಯವಾಗುವದಿಲ್ಲ !

ಓ ಪ್ರೇಮ, ಮಧುರ ಪ್ರೇಮ,
ಯುಗ ಯುಗದಿ ನೀನೆನ್ನನಣಕಿಸಿದೆ, ವಂಚಿಸಿದೆಯೇಕೆ?
ಈಗ ಮಿತ್ರರ ಹಿಂದೆ, ಆಗ ಶತ್ರುಗಳ ಹಿಂದೆ ಅಡಗಿ,
ತೆಗಳಿಕೆಗಳಲಿ ಮೇಣ್ ಹೊಗಳಿಕೆಗಳಲಿ ಈಗ ಕಣ್ಮರೆಯಾಗಿ,
ಸುಖಗಳಲಿ, ಹೆಮ್ಮೆಯಲಿ, ಹಮ್ಮಿನಲಿ ಕಳೆಯುತೀಗ,
ಕಷ್ಟಗಳಲಿ, ನೋವಿನಲಿ, ಮುಚ್ಚುಮರೆಯಾಗಿ,
ಜೀವನದ ಕಠಿಣ ಪರೀಕ್ಷೆಗಳಲಿ ತೋರದಲೆ ಹಾರಿ,
ಲಾಭ ನಷ್ಟಗಳಲಿ, ಸೊಕ್ಕು ಸೊರಗಿನಲಿ ಮರೆತು,
ಓ ಪ್ರೇಮವೆ, ಸವಿ ಸೊಗಸಿನಾ ಪ್ರೇಮವೇ,
ಯುಗ ಯುಗದಿ ನೀನೆನ್ನ ವಂಚಿಸಿದೆ ಹಲವು ತೆರದಿ.

* * *

ಕಳವಳವು ತಳಮಳವು ಪರೀಕ್ಷೆ—ಹರ್ಷಗಳು
ಬಿರುಸಿನೇಟುಗಳು ಹೊಡೆತಗಳು ಎಲ್ಲ ನಗು—ನಿಟ್ಟುಸಿರು
ಅದ್ಭುತ ರಸಾಯನ ವಿಜ್ಞಾನದೊಡನೆ, ವಿಲಕ್ಷಣ ವಿದ್ಯುತ್ತಿನೊಡನೆ,
ಶುದ್ಧೀಕರಣ ಸಾಧನವೊಂದು, ತೊಪಕಿನಿಂ ಕಳಚಿಕೊಳ್ಳುವ ವಿಶ್ಲೇಷೆ
ಪ್ರೇಮದಿಂ, ದ್ವೇಷದಿಂ, ಚಿಂತೆಯಿಂ, ಆಸಕ್ತಿಯಿಂ, ಸಂಗದಿಂ
ಭಾವೋದ್ವೇಗಗಳ ಲೋಹದಿಂ ವಿಕರ್ಷಣೆಗಳು
ಎನ್ನ ಹೃದಯದಿಂ ಸೆಳೆದು ತಂದು ಮಹಿಮಾವಿಕಿರಣ.
ಓ, ಎಂಥಾ ವಿಚಿತ್ರ ಕಥಾಶ್ರವಣ !
ಓ ಪ್ರೇಮ ; ಮಧು—ಮಧುರ ಪ್ರೇಮ,
ಯುಗ ಯುಗದಿ ನೀನೆನ್ನ ನಗೆಗೀಡುಮಾಡಿ ಜರೆದೆಯೇಕೆ ?

* * *

ಎನ್ನ ಹೃದಯಾಖ್ಯ 'ರೇಡಿಯಂ' ಧಾತುವಿಂದೆ,
'ಎಕ್ಸ್‌ರೇ'ಗಳು ಹೊರಹೊಮ್ಮಿ ,
ಎಲ್ಲ ಪದಾರ್ಥಗಳಿಗು
ಎಲ್ಲಾ ಕಡೆಗಳಲಿ ಭಾಗಗಳಲಿ
ಪಾರದರ್ಶಕತೆಯ ನೀಡುತಿಹವು ;
ಇದೆಂಥ ಅದ್ಭುತ ಕಲಾ ಲೀಲೆ !
ಓ ಪ್ರೇಮ, ಸವಿಸೊಗದ ಪ್ರೇಮ,
ಯುಗ ಯುಗದಿ, ನೀನೆನ್ನನಪಹಾಸ ಗೈದೆಯೇಕೆ ?
ಅತಿ ತೀಕ್ಷ್ಣ ಕಟು ನುಡಿಗಳಿರಿತದಿಂ
ಎಲ್ಲ ತೂಗುವವು ತೊನೆಯುವವು ಊರೆಗಂಬಗಳು ;
ಹಗೆಗಳು, ಗೆಳೆಯರು, ಅಂಗಡಿ ಮಳಿಗೆಗಳು
ನೀವು ಅವಿತು ಬೈತಿಡುವ ಗೋಡೆಗಳು
ಇನ್ನೇನು ನಿಷ್ಪಾರದರ್ಶಕವಲ್ಲ,
ನಿಮ್ಮನೆಲ್ಲ ಬೆಳಕಿಗೆಳೆಯುವವು.
ಓ ರತ್ನಗಳ ರತ್ನ !
ಎನ್ನ ಆತ್ಮ ಪರಿಶುದ್ಧ ರೇಡಿಯಂ,
ನೀ ನಕ್ಷತ್ರದಂತೆ ಬೆಳಗುತಿರುವೆ
ನೀನುರಿಸುತಿರುವೆ ಉರುವಲಿನಂತೆ
ಎಲ್ಲ ಸಂಪುಟಗಳ, ಹಣದ ಚೀಲಗಳ,
ಕೈ ಪೆಟ್ಟಿಗೆ, ಸಂದೂಕು, ಅಭಿಶಾಪಗಳ

ಬಾಗಿಲು, ಬೀಗಗಳ, ಪೆಟ್ಟಿಗೆಗಳ
ಎಲ್ಲ ಅಸಹ್ಯ ಆಸ್ತಿಪಾಸ್ತಿಗಳ,
ಓ ಸತ್ಯ, ರೇಡಿಯಂ ಪರಿಶುದ್ಧ,
ಓ ಆತ್ಮ, ಸರ್ವಭಕ್ಷಕ ಸತ್ಯ !
ಓ ಪ್ರೇಮ, ಅಮೃತಾತ್ಮ ಪ್ರೇಮ,
ಯುಗ ಯುಗಕು ನೀನೆನ್ನ ಹೀಯಾಳಿಸಿದೆಯೇಕೆ ?

* * *

## ನಿರ್ಮಲ ದೃಷ್ಟಿ

ಮಕ್ಕಳು ಎಲ್ಲವನ್ನೂ ವ್ಯಕ್ತೀಕರಣ ಮಾಡುತ್ತಾರೆ. ಒಂದು ಮೋಡದ ಗುಡುಗು ಸಹ ಮೇಲಿನ ಲೋಕದಲ್ಲಿರುವ ಕೋಪಾವಿಷ್ಟ ಪುರುಷನ ಕ್ರೋಧದ ಗರ್ಜನೆ ಹೊರತು ಬೇರೆಯಲ್ಲ. ಹಾಗೆಯೇ ಬೆಳೆದ [ಮೀಸೆ ಬಂದ] ಮಕ್ಕಳು ಸಹ ಕಂಡ ಕಂಡವರಿಗೆಲ್ಲಾ ಹೆಪ್ಪುಗಟ್ಟಿದ [ಘನೀಭೂತ] ಪುರುಷಾಕೃತಿಯನ್ನು ಕೊಡುತ್ತಾರೆ. ಯಾವಾಗಲಾದರೂ ಸ್ಪಷ್ಟವಾಗಿಯೂ ತಪ್ಪಾಗಿದ್ದರೆ, ಪ್ರೇಮದ ನಿಯಮದ ಪ್ರಕಾರ ತನ್ನನ್ನು ತಾನು ತಿದ್ದಿಕೊಳ್ಳುವದಕ್ಕೆ ಬದಲಾಗಿ, ಸನ್ನಿವೇಶಗಳೊಡನೆ ಜಗಳವಾಡುವ ದೆಂದರ, ಕಾಣದಿರುವ ದೂರದ ತುದಿಯಲ್ಲಿರುವ ಸ್ನೇಹಿತರಿಂದ ಕೆಟ್ಟ ಸುದ್ದಿಯನ್ನು ಕೇಳಿದ್ದಕ್ಕೋಸ್ಕರ, ದೂರವಾಣಿಯ [ಕರ್ಣ] ಗ್ರಾಹಕವನ್ನು [Telephone receiver] ಸಿಟ್ಟಿನಿಂದ ಕುಟ್ಟಿ ಪುಡಿಪುಡಿ ಮಾಡಿದಂತೆಯೇ ಸರಿ.

ಆಸ್ಟ್ರೇಲಿಯಾದ ಕಪ್ಪು ಜನರು, ತಮ್ಮ ಗೂಢವಾದ ಮಂತ್ರೋಚ್ಚಾರಣೆಯಿಂ ದಲೂ 'ಮೇಲ್ಕಾ' ಎನ್ನುವ ಆ ಬಗೆಯ ಇತರ ವಿಧಾನಗಳಿಂದಲೂ ತಾವೇ ಮಳೆಯನ್ನು ತರಿಸುತ್ತಿರುವದಾಗಿ ನಂಬುತ್ತಾರೆ. "ನಮ್ಮ ಪ್ರವಾಸದಲ್ಲಿ ಉಷ್ಣವಲಯದ ರಭಸ ವಾದ ಬಿರುಗಾಳಿ ಮಳೆಗಳಿಂದ ನಾವು ರಾಚಲ್ಪಟ್ಟಾಗ ನನ್ನ ಜೊತೆಗಿದ್ದ ಕಪ್ಪು ಜನರು ಆ ಚಂಡಮಾರುತಕ್ಕೆ ಕಾರಣರೆಂದು ನಂಬಿದ್ದ ಪರಕೀಯ ಕಪ್ಪು ಜನರ ಮೇಲೆ ಕೋಪೋದ್ರಿಕ್ತರಾಗುತ್ತಿದ್ದರು." ಎಂದು ಪ್ರಸಿದ್ಧ ಪ್ರವಾಸಿಯೊಬ್ಬನು ಬರೆದಿದ್ದಾನೆ.

ನೆರೆಹೊರೆಯವರ ತಪ್ಪುಗಳ ಮೇಲೆ ಯಾವದಾದರೂ ಬಗೆಯಿಂದ ವ್ಯಥೆ ಪಡುತ್ತಾ ಸಿಡಿಮಿಡಿಗುಟ್ಟುತ್ತಿರುವವರಲ್ಲಿ ಆ ಅಸಂಸ್ಕೃತ ಕಪ್ಪು ಜನರಲ್ಲಿರುವ ಆ ಬಗೆಯ ಹಳೆಯ ಕಪ್ಪು ಅಜ್ಞಾನವೇ ತುಂಬಿಕೊಂಡಿದೆಯೆನ್ನಬಹುದು. ಮಳೆ ಬೀಳುವದಕ್ಕೆ ವ್ಯಕ್ತಿಗುಣರಹಿತವಾದ ಪ್ರಕೃತಿ ನಿಯಮವೇ ಕಾರಣವಲ್ಲದೆ ಯಾವ ವ್ಯಕ್ತಿಯೂ ಕಾರಣವಲ್ಲ. ಹೂವು ಅರಳುವದಕ್ಕೂ ಅಮೂರ್ತವಾದ ಪ್ರಕೃತಿ

ನಿಯಮವೇ ಕಾರಣವಲ್ಲದೆ ಬೇರೆ ಇಲ್ಲ. ಹಾಗೆಯೇ ಯೇಸು ಕ್ರಿಸ್ತನನ್ನು ವಿಶ್ವಾಸ ಘಾತಕತನದಿಂದ ಶತ್ರುವಶಮಾಡಿದ ಅವನ ಪರಮ ದ್ರೋಹಿಯಾದ ಶಿಷ್ಯ ಜೂಡಾಸ್ ತಿಳಿಯದಿದ್ದರೂ ಅವನ ಮೋಸದ ಮುತ್ತಿನಲ್ಲಿ ಪ್ರೇಮದ ನಿಯಮವೇ ಪೂರ್ಣ ಶಕ್ತಿಯಿಂದ ಕೆಲಸಮಾಡಿತು. ಆ ಸುಳ್ಳು ಮುತ್ತಿನ ಅನಂತರ ಕೂಡಲೇ ಆ ಘಟನೆ ನಡೆಯದಿದ್ದರೆ, ಇಷ್ಟರ ವರೆಗೂ ಮುಂದೂ ಆ ಕ್ರಿಸ್ತನನ್ನು ಯಾರೂ ನೆನೆಯು ತ್ತಿರಲಿಲ್ಲ.

ಕ್ಷಮಾಯಾಚನೆ ಮಾಡಿದ ಸಹೋದರರಿಗೆ ಸುಂದರ ಜೋಸೆಫ್‌ನು ಹೇಳುವ ದೇನೆಂದರೆ, "ನನ್ನನ್ನು ಬಾವಿಯೊಳಗೆ ಹಾಕಿದ್ದು ನೀವಲ್ಲ. ಈಜಿಪ್ಟಿನಲ್ಲಿ ನನ್ನನ್ನು ಘನತೆ ಗೇರಿಸುವದಕ್ಕಾಗಿ ಪ್ರೇಮ ಪ್ರಭುವಿಗೆ ನನ್ನ ಸ್ವಂತ ಸಹೋದರರ ಹೊರತು ಬೇರೆ ಉತ್ತಮ ಪ್ರೇಮಿಗಳು ಕಾಣಲಿಲ್ಲ."

ನನ್ನ ಬೆರಳುಗಳೊಳಗೆ ಪ್ರತಿಯೊಂದೂ ಬಹಳ ಬದಲಾವಣೆ ಹೊಂದುತ್ತಿರು ವಂತೆಯೂ ಹಾರಿಹೋಗುತ್ತಿರುವಂತೆಯೂ ಕರಗುತ್ತಿರುವಂತೆಯೂ ತೋರುತ್ತಿದೆ. ನಾವು ಯಾವ ವಸ್ತುವಿಗೂ ಸ್ಥಿರಭಾವವನ್ನೂ ವ್ಯಕ್ತಿತ್ವವನ್ನೂ ಕೊಡಲಾರೆವು ; ಆದ್ದ ರಿಂದ ಯಾವದನ್ನಾದರೂ ನಾವು ಹೇಗೆ ಆಕ್ಷೇಪಿಸಬೇಕು ? ಒಂದು ಕೋಲು ಮಿಂಚು ಫಳಾರನೆ ಹೊಳೆಯುವದರೊಳಗೆ ಪೂರ್ಣ ವೇಗದಿಂದ ಓಡುತ್ತಿರುವ ಒಂದು ರೈಲ್ವೇ ಟ್ರೇಯಿನ್‌ನನ್ನೋ ಅಥವಾ ಹಾರಿಹೋಗುತ್ತಿರುವ ಒಂದು ಮೋಡವನ್ನೋ ಕಾಣು ತ್ತೇವೆ; ಅದು ಅಚಲವಾಗಿ ನಿಂತಿರುವದೆಂದು ತಿಳಿಯುತ್ತೇವೆ ; ಆದರೆ ಅದರ ವಿಷಯದಲ್ಲಿ ಹೆಚ್ಚಿನ ವಿಚಾರವನ್ನು ತಿಳಿದಮೇಲೆ ನಮ್ಮ ಭಾವನೆಯನ್ನು ಬದಲಾ ಯಿಸಿಕೊಳ್ಳಬೇಕಾಗುತ್ತದೆ. ಹಾಗೆಯೇ ಜನರು ಮಾಯೆಯ ತೋರಿ ಹಾರುವ ಬೆಳಕಿ ನಲ್ಲಿ ಮಾತ್ರ ವಸ್ತುಗಳನ್ನು ನೋಡುತ್ತಾರೆ. ಸ್ಥಿರತೆ, ವ್ಯಕ್ತಿತ್ವ, ಸ್ವತ್ವಗಳು ಮೊದ ಲಾದ ಕಲ್ಪನೆಗಳನ್ನೆಲ್ಲಾ ಆ ಆಧಾರದ ಮೇಲೆಯೇ ರೂಪಿಸಿಕೊಳ್ಳುತ್ತಾರೆ. ಪ್ರಾಪಂ ಚಿಕ ಜಾಣತನವೆಂಬದು ಇದೇ. ಒಳಗಿರುವ ಅನಂತವೂ ಶಾಶ್ವತವೂ ಆದ ಸತ್ಯದ ಹಗಲು ಬೆಳಕಿನಲ್ಲಿ ವಸ್ತುಗಳನ್ನು ನೋಡಿ , ಅಮೃತ ಶಾಂತಿಯೊಡನೆ ನೀವು ಒಂದಾಗುತ್ತೀರಿ.

ಜನರ ಚರ್ಚೆಗಳೂ ವಾದ ವಿವಾದಗಳೂ ಯಾವಾಗಲೂ ವ್ಯರ್ಥವಾಗುವದೆಂದು ಸಿದ್ಧವಾಗುತ್ತವೆ. ವಾದದಿಂದ ಭೇದ ಭಾವಗಳನ್ನು ಬಗೆಹರಿಸಿಕೊಳ್ಳಬೇಕೆಂದು ಮಾಡುವ ಎಲ್ಲಾ ಪ್ರಯತ್ನಗಳೂ ಭಿನ್ನಾಭಿಪ್ರಾಯಗಳನ್ನೂ ಅತೃಪ್ತಿಯನ್ನೂ ಅಸ ಮಾಧಾನವನ್ನೂ ಬೆಳೆಸುತ್ತವೆ ; ಮೇಲಿನ ಕಟ್ಟಡವನ್ನು ಎಬ್ಬಿಸುವದಕ್ಕೆ ಮುಂಚೆ ಅಸ್ತಿ ಭಾರವನ್ನು ಸರಿಯಾಗಿ ಹಾಕಬೇಕು. ಮೊದಲು ಹೃದಯವನ್ನು ಗೆದ್ದು, ಅನಂತರ ಬುದ್ಧಿಗೆ ಅಥವಾ ವಿಚಾರಕ್ಕೆ ಮನವಿ ಮಾಡಿಕೊಳ್ಳಬೇಕು ; ಮೊರೆಯಿಡಬೇಕು.

ಯುಕ್ತಿ ವಿಚಾರಕ್ಕೆ ನಿರಾಶೆಯಾದಲ್ಲಿ ಪ್ರೇಮಕ್ಕೆ ಭರವಸೆಯುಂಟಾಗಬಹುದು. ಆ ಕತೆಯಲ್ಲಿ ಗಾಳಿಯು ಎಷ್ಟು ಜೋರಾಗಿ ಬೀಸಿದರೂ ಪ್ರಯಾಣಿಕನ ಅಂಗಿಯನ್ನು ತೆಗೆಸಲಾರದೆ ಹೋಯಿತು ; ಆದರೆ ಆ ಸೂರ್ಯ–ಮಾರುತರ ಸ್ಪರ್ಧೆಯಲ್ಲಿ ಸೂರ್ಯನ ಉರಿಬಿಸಿಲು ಅಂಗಿಯನ್ನು ತೆಗೆಸಿತು.

ವಿಚಾರ ಮತ್ತು ಮತಗಳಲ್ಲಿ ಒಪ್ಪಿಗೆಯೂ ಏಕಾಭಿಪ್ರಾಯವೂ ಇರಬೇಕೆಂದು ಜನರು ಅತಿಯಾಗಿ ಕಾತರರಾಗಿರುತ್ತಾರೆ. ಅವರು ಆತ್ಮಗಳ ಸಂಯೋಗಕ್ಕೆ ಕಾಯುವದಿಲ್ಲ. ಅರಿಯುವದೆಂದರೆ, ತೋರಿಕೆಯ ರೂಪಗಳ ಮತ್ತು ಭಾವಗಳ ಕೆಳಗೆ ನಿಂತುಕೊಳ್ಳುವದು (Understanding is Standing under). ಇದು ಪ್ರೇಮದಿಂದ ಉಂಟಾಗುತ್ತದೆ. ನೀವು ಎಲ್ಲವದೂ ಆಗಿ ಭಾವಿಸಿದಲ್ಲದೆ, ನೀವು ಎಲ್ಲವನ್ನೂ ಅರಿಯಲಾರಿರಿ. ನೀವು ಅದಕ್ಕಾಗಿ ಮುಳುಗಬೇಕಾದಷ್ಟು ಆಲೋಚನೆ ಮಾಡಬೇಕಾಗಿಲ್ಲ. ಪ್ರೇಮವು ನೇಮವನ್ನು ಮುರಿದರೆ, ಅದು ನೇಮದ ಸಾಫಲ್ಯವೇ–ಪರಿಪೂರ್ತಿಯೇ–ಸರಿ. ಬೇರೆ ಯಾವದಾದರೂ ನಿಯಮವನ್ನು ಮುರಿದರೆ ಅದು ಧರ್ಮಾಂಧತೆ, ದುರಭಿಮಾನ ಮತ್ತು ಕ್ರಾಂತಿಯೇ ಸರಿ. ಪ್ರೇಮ ಒಂದೇ ದಿವ್ಯವಾದ ನಿಯಮ. ಇತರ ನಿಯಮಗಳು ವ್ಯವಸ್ಥಿತ ದರೋಡೆ. ನೇಮವನ್ನು ಮುರಿಯುವ ಅಧಿಕಾರ ಪ್ರೇಮ ಒಂದಕ್ಕೇ ಇದೆ. ತನ್ನದೆಂದು ಒಪ್ಪಿಕೊಳ್ಳುವದಾಗಲೀ ಒಡೆತನವಾಗಲೀ ಸ್ವೀಕಾರವಾಗಲೀ ಸ್ವಾಮ್ಯವಾಗಲೀ ಪ್ರೇಮದ ಮೂಲಕವಾದರೆ ಅದು ದೈವಿಕವಾದುದು ; ಆದರೆ ನಿಯಮದ ಮೂಲಕವಾಗಿ ಒಪ್ಪಿಕೊಳ್ಳುವದೂ ಒಡೆತನವೂ ನ್ಯಾಯವಿರುದ್ಧವಾದುದು.

ಇಂಡಿಯಾ ದೇಶದ ರಾಜಕಾರಣಿಗಳೇ, ಗುಣ–ದೋಷ ವಿಮರ್ಶೆಯನ್ನೂ ಆಕ್ಷೇಪವನ್ನೂ ಹೃದಯವನ್ನು ಸುಡುವಂಥ ಅಪಾದನೆಯನ್ನೂ ಪ್ರತಿಭಟಿಸುವ ಪದ್ಧತಿಯನ್ನು ಸಾಧಿಸುತ್ತಿದ್ದೀರಿ, ಆದರೆ ವಿದ್ಯಮಾನಗಳು ನಿತ್ಯವೂ ಹೆಚ್ಚು ಕೆಡುವ ತಿರುವನ್ನೂ ಒಲವನ್ನೂ ಪಡೆದಿವೆ. ಈಗ ನಾವು ಸರಿಯಾದ ದಾರಿಯಲ್ಲಿ ಸಾಧಿಸೋಣ; ಇನ್ನೊಂದು ಪಕ್ಷವು ತಪ್ಪುಮಾಡಿತೆಂದು ಅದಕ್ಕೆ ಪ್ರತಿಯಾಗಿ ತಪ್ಪು ಮಾಡುವದು ಮೊದಲಿನ ಕಪ್ಪಿಗೆ ಮತ್ತೊಂದು ಕಪ್ಪನ್ನು ಸೇರಿಸಿದಂತೆ ಮಾತ್ರ ಆಗುತ್ತದೆ ; ಆದರೆ ಅದನ್ನು ಬೆಳ್ಳಗೆ ಮಾಡಿದಂತೆ ಆಗುವದಿಲ್ಲ. ಬಾಲಕನೊಬ್ಬನು ತನಗೆ ಅಗೌರವ ಮಾಡಿದನೆಂದು ಹಿರಿಯ ಮನುಷ್ಯನೊಬ್ಬನು "ಮುಟ್ಠಾಳ, ಹೀಗೇಕೆ ಅಯೋಗ್ಯವಾಗಿ ವರ್ತಿಸಿದೆ ?" ಎಂದು ಹೊಡೆಯುವದರಲ್ಲಿದ್ದನು; ಆಗ ಆ ಬಾಲಕನು "ಸ್ವಾಮಿ, ನೀವು ಹೇಳಿದಂತೆಯೇ ನಾನು ಮುಟ್ಠಾಳನಾದುದರಿಂದ ದುರ್ವರ್ತನೆ ಮಾಡಿದೆ. ಈಗ ನೀವೇನೋ ಬಹಳ ಜಾಣರು, ನಿಮಗೆ ಹೇಗೆ ಯೋಗ್ಯವೋ ಹಾಗೆ ನಡೆದುಕೊಳ್ಳಿ" ಎಂದು ಹೇಳಿದನು.

ವಿದ್ಯುತ್‌ಪೂರಿತವಾದ ಒಂದು ವಸ್ತು ಇನ್ನೊಂದು ವಸ್ತುವಿನೊಡನೆ ನೇರ ಸಂಪರ್ಕ ಪಡೆಯದೆ ಸಮೀಪದಲ್ಲಿ ಮಾತ್ರ ಬಂದರೆ, ಆ ಎರಡನೆಯ ವಸ್ತುವಿನಲ್ಲಿ ಆಗುವ ಪರಿಣಾಮಕ್ಕೆ ಚೋದನೆಯಿಂದ (by induction) ವಿದ್ಯುತ್ ಪೂರಣವಾಗುತ್ತದೆ ಎನ್ನುತ್ತಾರೆ; ಅಂದರೆ ಎರಡನೆಯ ವಸ್ತುವಿನಲ್ಲಿ ವಿರುದ್ಧ ಬಗೆಯ ವಿದ್ಯುತ್ತು ಉತ್ಪತ್ತಿಯಾಗುತ್ತದೆ. ಆದರೆ ಎರಡಕ್ಕೂ ವಾಸ್ತವವಾದ ಸಂಪರ್ಕವಾದರೆ ಅಥವಾ ಸಂಯೋಗವಾದರೆ ಮಾತ್ರ ಸಜಾತೀಯ ವಿದ್ಯುತ್ತಿನ ಉತ್ಪತ್ತಿಯಾಗುತ್ತದೆ. ಜಾತಿ—ಮತ ಭಾವನೆಯ ಹಾಗೂ ಜನಾಂಗದ ಭಾವನೆಯ ಗಾಢನ ಗೋಡೆಯು ಹೃದಯಗಳನ್ನು ಒಂದುಗೂಡುವದಕ್ಕೆ ಅವಕಾಶ ಕೊಡದಿರುವಾಗ, ಕೇವಲ ವಾದಗಳಿಂದಲೂ ತರ್ಕದಿಂದಲೂ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಳ್ಳುವದಕ್ಕೆ ಪ್ರಯತ್ನಪಟ್ಟರೆ ಅಪಾಯಕರವಾದ ಸಾಮೀಪ್ಯಕ್ಕೆ ಬರುತ್ತೀರಿ. ಆದರಿಂದ ನಿಮ್ಮ ಇಚ್ಛೆಗೆ ನೇರಾ ವಿರುದ್ಧವಾದ ಪರಿಣಾಮವುಂಟಾಗುತ್ತದೆ. ಒಬ್ಬ ಮನುಷ್ಯನನ್ನು ಮೊದಲು ಪ್ರೀತಿಸಿದ ಹೊರತು ನೀವು ಅವನನ್ನು ಅರಿಯಲಾರಿರಿ.

ವಾದಗಳು ಚರ್ಚೆಗಳು ವಿಚಾರಗಳು ನಿರಾಶಾಜನಕವಾದಲ್ಲಿ ಪ್ರೇಮವು ಆಶಾಜನಕವಾಗಬಹುದು.

ಮತ ಧರ್ಮಗಳನ್ನೂ ಜಾತಿ ಮತಗಳನ್ನೂ ವರ್ಗಭೇದಗಳ ಹೆಸರುಗಳನ್ನೂ ಜನರು ಕೊರಳಲ್ಲಿ ತಾಯಿತಿಯನ್ನು ಧರಿಸುವಂತೆ ಧರಿಸುತ್ತಾರೆ. ಎಲ್ಲಾ ಬಗೆಯ ಒಳ್ಳೆಯ ಗುಣಗಳೂ ಪ್ರಭಾವಗಳೂ ಅವುಗಳಿಗೆ ಸೇರಿರುವವೆಂದು ಹೇಳುತ್ತೇವೆ. ಆದರೆ ಕಟ್ಟಕಡೆಗೆ ನಾವು ಪಡೆಯುವ ಅಲ್ಪ ಸ್ವಲ್ಪ ಪ್ರಯೋಜನವೂ ನಮ್ಮ ಅಚ್ಚುಮೆಚ್ಚಿನ ದೈವಿಕ ಶಕ್ತಿಯ ರಕ್ಷೆಗಳೆಂದು ನಾವು ಭಾವಿಸಿರುವ ತಾಯಿತಿಗಳಿಗೆ ಸ್ವಲ್ಪವೂ ಸಂಬಂಧ ಪಡದೆ ಸಂಪೂರ್ಣಸ್ವತಂತ್ರವಾಗಿರುತ್ತದೆ. ನಮ್ಮ ಪೌರುಷವನ್ನು ನಾವು ರಕ್ಷಿಸಿಕೊಂಡು ಆ ಹುಚ್ಚು ಮೆಚ್ಚಿನ ಮೂಢ ನಂಬಿಕೆಗಳನ್ನು ಮೀರಿ ಏರಬೇಕು. ಆ ನಾಮ ರೂಪಗಳ ಕ್ರೀಡಾ ವಸ್ತುಗಳಿಗೆ ಎಷ್ಟು ಕಾಲ ಜೋತು ಬೀಳುತ್ತೀರಿ?

ಹೌದು, ನೀವು ನಿಮ್ಮ ಅಭಿಮಾನಾಸ್ಪದವಾದ ಪೂರ್ವಕಲ್ಪಿತ ಅಭಿಪ್ರಾಯಗಳನ್ನೂ ಸ್ವತ್ತುಗಳನ್ನೂ ಅಂಟಿಕೊಂಡಿರುವ ಅಭಿಮಾನಗಳನ್ನೂ ಆಸಕ್ತಿಗಳನ್ನೂ ಒಂದೊಂದಾಗಿ ಬಿಟ್ಟುಬಿಡಬೇಕು. ನಿಮ್ಮ ಸ್ವತ್ತುಗಳು ನಿಮ್ಮನ್ನು ಪಿಶಾಚಿಯಂತೆ ಹಿಡಿದು ಆಕ್ರಮಿಸುತ್ತವೆ. ಮೊದಲು ನಿಮ್ಮೊಳಗೆ ಬೇಲಿಯನ್ನು ಹಾಕಿಕೊಂಡು ಆವರಣವನ್ನು ಕಲ್ಪಿಸಿಕೊಳ್ಳದೆ, ಇನ್ನೊಬ್ಬರ ಸುತ್ತ ಬೇಲಿಯನ್ನು ಹಾಕಿ ಅವರನ್ನು ಹೊರಗಿಡುವದಕ್ಕೆ ಆಗುವದಿಲ್ಲ. ನೋವನ್ನುಂಟುಮಾಡುವ ಈ ಸುಲಿಗೆಯ ದರೋಡೆಯೊಳಗೇ ಆನಂದಮಯ ಯಶಸ್ಸಿನ ನಿಧಿಯು ಅಡಗಿಕೊಂಡಿದೆ. ರಾಮನಿಗೆ ಅತ್ಯಂತ ಪ್ರಿಯವಾದ ದೇವರ ನಾಮವೆಂದರೆ ಹರಿ; ಹರಿ ಎಂದರೆ ಅಪಹರಿಸುವವನು,

ದರೋಡೆಗಾರ ಎಂದರ್ಥ. ಓ ಮಧುರ ಹರಿ! ಕೆಲವರು ಹೀಗೆ ಆಕ್ಷೇಪಿಸಬಹುದು: "ಓ! ನಾನು ನನ್ನ ಶತ್ರುವನ್ನು ಪ್ರೀತಿಸಿ, ಅವನಿಗೆ ಬಗ್ಗಿದರೆ, ಸಗ್ಗಿದರೆ, ವಶನಾದರೆ, ಅವನು ನನ್ನನ್ನು ತಿಂದುಬಿಡುತ್ತಾನೆ." ಇದಕ್ಕೆ ರಾಮನು ಹೇಳುವದೇನೆಂದರೆ, "ಓ, ಭ್ರಾಂತನಾದ ಕಪಟಿ! ನೀನು ಎಂದಾದರೂ ಈ ಪ್ರಯೋಗದಲ್ಲಿ ನಿಜವಾದ ಪ್ರಯತ್ನ ಮಾಡಿದ್ದೀಯ?"

ಜೀವನದ ಎಲ್ಲಾ ದ್ವಾರಗಳ ಮೇಲೂ [pull] "ಎಳೆ" ಎಂದು ಬರೆದಿರುವದನ್ನು ಸರಿಯಾಗಿ ಓದಿಕೊಳ್ಳದೆ, [push] "ತಳ್ಳು" ವದಕ್ಕೆ ತೊಡಗುತ್ತೀರಿ. ಹಾಗಾದರೆ ಬಾಗಿಲು ಹೇಗೆ ತೆರೆಯಬೇಕು? ತಳ್ಳುವದೆಂದರೆ ವಾದಿಸುವದು. ಎಳೆಯುವದೆಂದರೆ ಪ್ರೇಮದಿಂದ ನಿಮ್ಮೊಳಗೇ ಎಳೆದುಕೊಳ್ಳುವದು. ಸ್ಫೂರ್ತಿಯ ಅಥವಾ ಭಗವತ್ಪ್ರೇರಣೆಯ ಆನಂದೋತ್ಸಾಹ ಮಂದಿರಕ್ಕೆ ಹೃದಯವೇ ದ್ವಾರ; ಮಸ್ತಕವೇ ನಿಷ್ಕ್ರಮಣದ್ವಾರವು, ಹೊರ ಹೋರಡುವ ಬಾಗಿಲು. ಪ್ರೇಮವು ಹೃದಯಕ್ಕೆ ಸ್ಫೂರ್ತಿಯನ್ನೂ ಆವೇಶವನ್ನೂ ಕೊಡುತ್ತದೆ; ಶಿರಸ್ಸು ವಿಚಾರಮಾಡಿ ನಿರೂಪಿಸುತ್ತದೆ. ವಸ್ತ್ರಗಳಿಗೆ ಮೊದಲು ದೇಹವಿರುವಂತೆ ಆಲೋಚನೆಗೆ ಮೊದಲು ಭಾವನೆಯಿದೆ. ಒಂದು ವ್ಯಕ್ತಿಯಲ್ಲಿರುವ ಭಾವನೆಗಳನ್ನು ಬದಲಾಯಿಸಿದರೆ ಅವನ ವಿಚಾರಕ್ರಮದಲ್ಲಿಯೇ ಕ್ರಾಂತಿಯಾಗುತ್ತದೆ.

ಜೀವನವೆಂದರೇನು? ಎಡೆತಡೆಗಳ ಪರಂಪರೆ. ಹೌದು, ಜೀವನದ ಮೇಲೆ ಮೇಲೆ ತೇಲುತ್ತಿರುವ ಜನರಿಗೆ ಅದು ಹಾಗೆಯೇ ಸರಿ; ಆದರೆ ಯಾರು ಜೀವನವಾಗಿಯೇ—ಪ್ರೇಮವಾಗಿಯೇ—ಬದುಕುತ್ತಾರೋ ಅವರಿಗೆ ಹಾಗಲ್ಲ. ಗೊಡ್ಡು ಹರಟೆ ಹೊಡಿಯುವವರ, ದೃಶ್ಯವನ್ನು ಸತ್ಯವೆಂದು ನಂಬತಕ್ಕವರ, ಮತ್ತು ನಾಚಿಕೆಗೇಡಿ ಗೌರವದ ನಾಚಿಕೆಗೆಟ್ಟ ಗುಲಾಮರ ಸಹವಾಸದಷ್ಟು ವಿಷಮಯವಾದುದು ಯಾವದೂ ಇಲ್ಲವೆಂಬುದು ಸತ್ಯ. ಆದರೆ ಎಲ್ಲಿ ಪ್ರಭುಪ್ರೇಮವು—ಪ್ರೇಮಪ್ರಭುವು—ಬೀಡು ಬಿಟ್ಟಿದೆಯೋ ಅಲ್ಲಿ ಅವಿನೀತ—ಅಧಿಕಪ್ರಸಂಗಿತನದ —ಕಾಲು ಸಪ್ಪಳವು ಸುತ್ತಿ ಸುಳಿದಾಡಲಾರದು. ಅವರ ಸಂಗವನ್ನು ದೂರವಿಡುವ ಅಗತ್ಯವಿಲ್ಲ. ಅವರ ಸೇವೆಯು ಅವಶ್ಯವಾಗಿರುವಾಗ ಹೊರತು ಬೇರೆ ಸಮಯದಲ್ಲಿ, ಕರೆಯದೆ ಒಳ ನುಗ್ಗುವವರು ನಿಮ್ಮ ಮೇಲೆ ಅತಿಕ್ರಮಣ ಮಾಡುವಷ್ಟು ಧೈರ್ಯಮಾಡಿದರೆ ನಿಯಮವು ನಿಯಮವೇ ಅಲ್ಲ; ಪ್ರಕೃತಿಯು ಕೊಳೆಗಿಂತಲೂ ಹೆಚ್ಚಿನದಲ್ಲ.

ಪಂಜಾಬಿನ ಘನೀಮತ್ ಎಂಬ ಲೇಖಕನು ತನ್ನ ನೈರಂಗ್—ಇ—ಇಷ್ಕ್ ಗ್ರಂಥದಲ್ಲಿ ಷಾಹಿದ್ ಎಂಬ ತನ್ನ ವಿದ್ಯಾರ್ಥಿನಿಯಲ್ಲಿ ಹುಚ್ಚು ಪ್ರೇಮದಲ್ಲಿ ಬಿದ್ದ ಒಬ್ಬ ಬಡ ಶಾಲಾ ಉಪಾಧ್ಯಾಯನಾದ ಅಜೀಜ್‌ನ ವಿಷಯವನ್ನು ಹೇಳಿದ್ದಾನೆ. ಅವನು

ತನ್ನ ವಿದ್ಯಾರ್ಥಿಗಳಿಗೆ ಬರೆಯಲು ನಿಯಮಿಸಿದ ಅಭ್ಯಾಸ ಪಾಠಗಳನ್ನು ತಿದ್ದುಪಡಿ ಮಾಡುವಾಗ ಆ ಮತಿಗೆಟ್ಟ ಮಾಸ್ತರನು ಆ ಶಾಲೆಯಲ್ಲಿ ಆರಂಭ ದೆಶೆಯಲ್ಲಿದ್ದ ಆ ವಿದ್ಯಾರ್ಥಿನೀ ಗುರುವಿನ ತೋಚಿದಂತೆ ಗೀಚಿ ಹಾಕಿದ್ದ, ಮಸಿಚೆಲ್ಲಿದ, ಅಂದಗೆಟ್ಟ, ಕಾಕಲಿಪಿಯನ್ನೇ ಸರ್ವೋತ್ಕೃಷ್ಟವಾದುದೆಂದು ಮೆಚ್ಚಿಕೊಳ್ಳುತ್ತಾನೆ. ಆಹಾ ! ಅವನು ಚೆನ್ನಾಗಿ ಮಾಡಿದ. ಎಷ್ಟು ನಿಜ ! ಪ್ರೀತಿಯ ಕೊರತೆಯಿಂದ ಕಣ್ಣಿಗೆ ಕಾಮಾಲೆ ಬಂದಾಗ ದೋಷಗಳು ಕಾಣುತ್ತವೆ. ನಮ್ಮ ಹೃದಯದಲ್ಲಿ ಪ್ರೇಮಪ್ರಭುವು ಬೀಡು ಬಿಟ್ಟಾಗ ಅಂತರಿಕ್ಷದಲ್ಲಿ ಇನ್ನೊಬ್ಬ ಸೂರ್ಯನು ಉದಿಸಿದನೋ ಎಂಬಂತೆ ಹಗಲಿಗೆ ಹಗಲು ಸೇರಿದಂತೆ ಆಗುತ್ತದೆ.

## ಸತ್ಯಶೀಲತೆ

ಪರಿಶುದ್ಧಿಯ ಹೆಸರಿನಲ್ಲಿ ಕೆಲವರು, ಪ್ರೇಮವಿಲ್ಲದೆ ಪರಿಶುದ್ಧಿಯು ಕ್ಷಣ ಮಾತ್ರವಾದರೂ ಜೀವಿಸಲು ಉಸಿರಾಡಬಲ್ಲದೇನೋ ಎಂಬಂತೆ, ಪ್ರೇಮರಾಜನ ವಿರುದ್ಧವಾಗಿ ಕತ್ತಿ ಎತ್ತುತ್ತಾರೆ. ಕೆಲವರು ಪ್ರೇಮಕ್ಕಾಗಿ ಸಾಯುತ್ತಾರೆ; ಇತರರು ದ್ವೇಷದಿಂದ ಸಾಯುತ್ತಾರೆ. ಜನರಿಗೆ ಅಪ್ರಿಯವಾದರೂ ಸತ್ಯಸಂಪನ್ನವಾದ ಪ್ರೇಮವನ್ನು ಹೃದಯದಲ್ಲಿ ಇಟ್ಟುಕೊಳ್ಳುವದಕ್ಕಿಂತಲೂ ಡಾಂಭಿಕ ಶುದ್ಧಿಯಿಂದ ಕೂಡಿದ ದ್ವೇಷವನ್ನು ಹೃದಯದಲ್ಲಿ ಪೋಷಿಸುವದು ಬಹಳ ಹೆಚ್ಚಿನ ಘೋರ ಅಪರಾಧವು. ಪ್ರಪಂಚದಲ್ಲಿ ಅಶುದ್ಧಿಯ ಗುಲಾಮರು ಸಾಕಷ್ಟು ಜನರಿದ್ದಾರೆ. ಆದರೆ ನೀತಿಯ ಹೆಸರಿನಲ್ಲಿ ತಮ್ಮ ದೌರ್ಬಲ್ಯವನ್ನು ಮುಚ್ಚಿಕೊಂಡಿರುವ ಪರಿಶುದ್ಧಿಯ ಗುಲಾಮರು ಪ್ರಾಯಶಃ ಹೆಚ್ಚು ಅಪಾಯಕಾರಿಗಳಾಗಿದ್ದಾರೆ. ನಿಮಗೆ ನೀವು ದ್ರೋಹಿಗಳಾಗದೆ ಸತ್ಯಸಂಧರೂ, ನಿಷ್ಕಪಟಿಗಳೂ ಆಗಿರಿ. ನಿಮ್ಮ ಅನುಭವದಲ್ಲಿ ನೀವು ಜೀವಿಸಿರಿ. ನಿಮ್ಮ ಸ್ವಂತ ಅನುಭವಕ್ಕಿಂತಲೂ ಹೆಚ್ಚು ಗುರುತ್ವವುಳ್ಳ ಗುರು ಯಾರೂ ಇಲ್ಲ.

ತಮ್ಮ ಸ್ವಂತ ಅನುಭವದ ಮೂಲಕವಾಗಿ ಅಲ್ಲದೆ ಯಾರೂ ಎಂದೂ ಹೃದಯದಲ್ಲಿ ಶುದ್ಧರಾಗಿರಲಿಲ್ಲ. ಕೇವಲ ಅತ್ಯಲ್ಪವಾದ ಹೊರಗಿನ ಶುದ್ಧಿಗೆ, ಇಲ್ಲವೇ ಸ್ತ್ರೀ ದ್ವೇಷಕ್ಕೆ, ಅನುಚಿತವಾದ ಮಹತ್ವವನ್ನು ಕೊಡುವದರಿಂದ ನಿಜವಾದ ಒಂದೇ ಶುದ್ಧಿಯಾಗಿರುವ ಆತ್ಮಾನುಭವದಿಂದ ನಿಮ್ಮನ್ನು ದೂರವಾಗಿಡುತ್ತದೆ. ಕಾಮವಿಲ್ಲದಿರುವಿಕೆಗೂ ವಾಸ್ತವ ಷಂಡತ್ವಕ್ಕೂ ಮಿತಿ ಮೀರಿದ ಗೌರವ ಕೊಡುವದರಿಂದ, ನಿಜವಾದ ಮಂಡಲ ಪಥದಿಂದ ತಪ್ಪಿ ಅಲೆದು ಅಸಂಬದ್ಧವಾದ ಯಾವದೋ ದಾರಿಯಲ್ಲಿ ಎತ್ತಲೋ ಬುದ್ಧಿ ಭ್ರಮಣೆಯಿಂದ ಪರದಾಡಿದಂತಾಗುತ್ತದೆ.

ಕೃತಕ ನೀತಿ ಪ್ರಚಾರಕರು ಜನರನ್ನು ಕೈಬಿಟ್ಟರೆ ಸಾಕು ; ಆರೋಗ್ಯ ಶಾಸ್ತ್ರದ ಸರಳವಾದ ಆರೋಗ್ಯ ನಿಯಮದ ಪ್ರಕಾರ ನಿತ್ಯವೂ ಒಬ್ಬನು ತನ್ನ ಕೈಗಳನ್ನು

ತೊಳೆಯುವದಕ್ಕೆ ಕಲಿಯುವಂತೆ ದೈಹಿಕ—ಮಾನಸಿಕವೆನ್ನುವ ನೈರ್ಮಲ್ಯವನ್ನು ಸುಲಭ ವಾಗಿಯೂ ಸ್ವಾಭಾವಿಕವಾಗಿಯೂ ಕಲಿಯುತ್ತಾನೆ. ಕಾಮದ ವಿರುದ್ಧವಾಗಿ ಅತಿ ಯಾದ ಗಲಾಟೆಮಾಡುವದರಿಂದ, ದೈವೀ ಸಂಪತ್ತುಳ್ಳ ಮನುಷ್ಯನು ಯಾವದರಿಂದ ಬಿಡುಗಡೆ ಹೊಂದಿದ್ದಾನೋ ಅದನ್ನೇ ಅವನಲ್ಲಿ ಹುಟ್ಟಿಸಿದಂತಾಗುತ್ತದೆ. ನಿಮ್ಮ ಶಕ್ತಿಯು ಹೆಚ್ಚು ಉನ್ನತವಾದ ವಿಚಾರಗಳ ಕಡೆ ಪ್ರೇರಿಸಲ್ಪಟ್ಟರೆ, ಕಾಮುಕತೆಯ ಗಂಧವುಳ್ಳ ಏನನ್ನಾದರೂ ಆಲೋಚಿಸುವದಕ್ಕೆ ಸಮಯವೇ ಇರುವದಿಲ್ಲ.

ಜನರು ತಮಗೆ ತಾವೇ ಸ್ವತಂತ್ರವಾಗಿ ವಿಚಾರ ಮಾಡುವಂತೆ ತಯಾರುಮಾಡುವ ದಕ್ಕೆ ಬದಲಾಗಿ ಬೌದ್ಧಿಕ ಭಿಕಾರಿಗಳನ್ನಾಗಿ ಮಾಡುವ ಒಲವುಳ್ಳ ಶಾಲೆಗಳಿವೆ. ನೀತಿ ಧರ್ಮಗಳ ವಿಧಾಯಕ ಬೋಧೆಯಿಂದ ನೈತಿಕ ದಾರಿದ್ರ್ಯ ಉಂಟಾಗುತ್ತದೆ. ಮುಗ್ಧ ರಾದ ಬಾಲಕ ಬಾಲಕಿಯರ ಮೇಲೆ ಮತ ಧರ್ಮಗಳ ನಂಬಿಕೆಗಳನ್ನು ಒತ್ತಾಯವಾಗಿ ಹೇರುವದರಿಂದ ಆಧ್ಯಾತ್ಮಿಕ ದಾರಿದ್ರ್ಯವುಂಟಾಗುತ್ತದೆ. ಆಧ್ಯಾತ್ಮಿಕ ದಾರಿದ್ರ್ಯವೂ ಧಾರ್ಮಿಕ ಅಸಹಿಷ್ಣುತೆಯೂ [ಅಥವಾ ಧರ್ಮಾಂಧತೆಯೂ] ಕ್ರಮವಾಗಿ ಒಂದೇ ರೋಗದ ನಿಷ್ಕ್ರಿಯ ಹಾಗೂ ಸಕ್ರಿಯ ಅವಸ್ಥೆಗಳು.

ಎಲ್ಲಾ ನದಿಗಳೂ ಒಂದೇ ಸಮುದ್ರಕ್ಕೆ ಹರಿದು ಬರಿದಾಗುತ್ತವೆ. ಎಲ್ಲಾ ಪ್ರೇಮಗಳೂ ಒಂದೇ [ಭಗವತ್] ಪ್ರೇಮದಲ್ಲಿ ಹರಿದು ತುಂಬಿಕೊಳ್ಳುತ್ತವೆ. ದೇವರ ವಕ್ಷಸ್ಥಲದಲ್ಲಿ ಸೌಂದರ್ಯವು ಬೆಳೆಯುತ್ತದೆ. ಈ ಕಮಲವು ಬ್ರಹ್ಮನ ನಾಭಿಯಿಂದ ಉದಯವಾಗುತ್ತದೆ. ಯಾರು ಸೌಂದರ್ಯವನ್ನು ಪ್ರೀತಿಸುವರೋ ಅವರು ನೀರಿನ ಮೇಲೆ ಮಲಗತಕ್ಕವನ ಮೂಲಕ ಅದನ್ನು ಸಾಧಿಸಿ ಪಡೆಯಬೇಕು. ನಿಜವಾಗಿಯೂ ಸೌಂದರ್ಯವು ಚೈತನ್ಯದ ನೆಲೆ; ಸೌಂದರ್ಯವೇ ಆತ್ಮನ ಆಹಾರ. ಸೌಂದರ್ಯದ ಪ್ರಜ್ಞೆಯಿಲ್ಲದ ಆತ್ಮವು ದ್ರೋಹಕ್ಕೂ ವಂಚನೆಗೂ ಲೂಟಿಗೂ ಮಾತ್ರ ಅರ್ಹವಾಗು ತ್ತದೆ. ಆದರೆ ಸೌಂದರ್ಯವೆಲ್ಲಿದೆ? ಅದು ನೀಲಿಯ ಕಣ್ಣುಗಳ, ಗುಲಾಬಿಯ ಗಲ್ಲ ಗಳ, ಕೋಕಿಲ ಕಂಠದ, ಆಕರ್ಷಕ ಪ್ರಕೃತಿ ದೃಶ್ಯದ ಅಥವಾ ಕುಶಲಕಲೆಗಳ ಮಾಯಾಜಾಲದಲ್ಲಿದೆಯೆ? ಈ ಎಲ್ಲವುಗಳ ಮೋಹನ ವಿದ್ಯೆಯಲ್ಲಿ ಸೌಂದರ್ಯ ವಿದ್ದೇ ಇದೆ; ಆದರೆ ಅದು ಅಲ್ಲಿಯೇ ಪರಿಮಿತವಾಗಿಲ್ಲ. ವಸಂತವು ಸಂತಸವನ್ನು ತರುವ ವರೆಗೆ ಶಿಶಿರ ಋತುವಿನ ಚಳಿಗಾಲದಲ್ಲೆಲ್ಲಾ ನಡುಗುತ್ತಾ ಕಾದು ಕುಳಿತಿರುವ ಸೌಂದರ್ಯೋಪಾಸನೆಯ ಅಭಿರುಚಿಯು ಶೋಚನೀಯವಾದುದೇ ಸರಿ; ಕೋಕಿಲೆಯ ಕಂಠದಿಂದ ಒಂದು ಇಂಪಾದ ಸ್ವರವು ಹೊರಟು ಕಿವಿಗೆ ಬೀಳುವದರೊಳಗೆ ನೂರಾರು ಸಲ ನೊಂದುಕೊಳ್ಳುವ ಸೂಕ್ಷ್ಮಾಭಿರುಚಿಯುಳ್ಳ ಗಾನಪ್ರಿಯನ ಸ್ಥಿತಿಯು ದಯ ನೀಯವೇ ಸರಿ; ಯಾರ ಸುಖವು ಪ್ರಕೃತಿ ದೃಶ್ಯಗಳನ್ನೂ ಉದ್ಯಾನವನಗಳನೂ ಪ್ರಿಯ ಜನರ ಸಹವಾಸ, ಜೇನು ನುಡಿ ಇವೇ ಮೊದಲಾದ ಹೊರಗಿನ ವಸ್ತುಗಳನ್ನು ಅವಲಂಬಿಸಿದೆಯೋ ಅವನು ದುಃಖಿಯೇ ನಿಜ. ಯಾರ ಒಳಗಿನ ಜ್ಞಾನ ಪ್ರಕಾಶದಿಂದ

ಸುತ್ತಲೂ ಎಲ್ಲರ ಮೇಲೂ ಸೌಂದರ್ಯದ ಪ್ರಭಾ ಮಂಡಲವು ಬಿದ್ದಿದೆಯೋ ಮತ್ತು ಯಾರಿಂದ ದೈವೀ ಪ್ರೇಮದ ಹೊರತು ಬೇರೇನೂ ಹೊರಸೂಸುವದಿಲ್ಲವೋ ಅವನೇ ಮುಕ್ತಾತ್ಮನು. ಚೈತನ್ಯಮಹಾಪ್ರಭುಗಳ ಸನ್ನಿಧಿಯಲ್ಲಿ ಬಂದ ದರೋಡೆಕೋರರಲ್ಲಿಯೂ ಕುಡುಕರಲ್ಲಿಯೂ ಸಹ ಸ್ವಾಭಾವಿಕವಾಗಿ ಅಡಗಿ ಕೊಂಡಿದ್ದ ದೈವೀ ಸ್ವಭಾವವು ಆಕರ್ಷಿತವಾಗಿ ಹೊರಚಿಮ್ಮುತ್ತಿತ್ತು.

ಪೂಜ್ಯನಾದ ಪ್ರಾಚೀನ ಸೂರ್ಯನು ಅವನ ಸಂಚಾರದಲ್ಲಿ ಬೆಳಕಿನ ಹೊರತು ಬೇರೆ ಏನನ್ನೂ ಎಂದೂ ಕಂಡಿಲ್ಲ.

ಮುಕ್ತಾತ್ಮರಾದ ಯೋಗಿಗಳ ಪ್ರೇಮ ಪೂರ್ಣವಾದ ಸನ್ನಿಧಿಯಲ್ಲಿ ಪಶು ಪ್ರಾಣಿಗಳಲ್ಲಿರುವ ಕ್ರೌರ್ಯವು ಮಾಯವಾಗಿ ಅವುಗಳಲ್ಲಿ ಸ್ವಾಭಾವಿಕವಾಗಿರುವ ಪ್ರೇಮವು ಪ್ರಕಟವಾಗುತ್ತದೆಯೆಂದು ಪಾತಂಜಲ ಯೋಗದರ್ಶನ ಸೂತ್ರವು ಹೇಳುವದು ತಪ್ಪೆ? ಈ ಜೀವಂತ ಪ್ರೇಮವೇ ಸ್ವರ್ಗವಲ್ಲವಾದರೆ, ಎಲ್ಲಾ ಧರ್ಮಗಳೂ ಬೋಧಿಸುವ ಸ್ವರ್ಗವು ಎಂದೆಂದಿಗೂ ಕನಸಾಗಿಯೇ ಉಳಿಯಬೇಕೆ?

## ಪರಿಶುದ್ಧಿ ಎಂದರೇನು? ಯಾವುದು?

ಬಯಕೆಯಿಂದಲೂ ಅತಿ ದೈನ್ಯದ ಬೇಡಿಕೆಯ ಪರಿಮಿತಿಯ ಆಲೋಚನೆಗಳಿಂದಲೂ ವ್ಯಕ್ತಿತ್ವ ಭಾವನೆಯಿಂದಲೂ ನಮ್ಮ ದೇವತ್ವವನ್ನು ಕಳಂಕಿತವಾಗಿ ಮಾಡದೇ ಇರುವದೇ ಪರಿಶುದ್ಧಿ. ಸಂಪೂರ್ಣ ಪರಿಶುದ್ಧಿ ಎಂದರೆ ಹೊರಗಿನ ಯಾವ ಪ್ರಭಾವಗಳ ಪ್ರಭುತ್ವಕ್ಕೂ ಒಳಗಾಗದಿರುವದು. ನಿರ್ಮಲಾತ್ಮನ ಅನುಭವದಿಂದ ತನಗೆ ಭಿನ್ನವಾಗಿ ಯಾವದನ್ನೂ ನೋಡದೆ, ಪ್ರಾಪಂಚಿಕವಾದ ಶೋಕ ಮೋಹಗಳನ್ನೂ ಆಕರ್ಷಣ-ವಿಕರ್ಷಣಗಳನ್ನೂ ಮೀರಿ, ರಾಗ ದ್ವೇಷಗಳಿಂದ ವಿಚಲಿತನಾಗದೇ ಇರುವದೇ ಪರಿಶುದ್ಧಿ. ಸುಂದರ ಸ್ತ್ರೀಯು ಕನ್ನಡಿಯಲ್ಲಿ ತನ್ನನ್ನೇ ತಾನು ನೋಡಿಕೊಂಡು ಸಂತೋಷದಿಂದ ನಗುವಂತೆ ಎಲ್ಲಾ ನಾಮರೂಪಗಳ ಕನ್ನಡಿಯಲ್ಲಿ ತನ್ನ ಒಳಗಿನ ಸ್ವರ್ಗಸಾಮ್ರಾಜ್ಯವನ್ನೇ ನೋಡಿಕೊಂಡು ಪ್ರಕೃತಿದೃಶ್ಯಗಳನ್ನೂ ಆಕರ್ಷಕವಾದ ನೋಟಗಳನ್ನೂ ನೋಡಿ ಶುದ್ಧಾತ್ಮನೊಬ್ಬನೇ ಸಂತೋಷಪಡಬಲ್ಲನು. ದೌರ್ಬಲ್ಯವನ್ನುಂಟುಮಾಡುವ ಆಸಕ್ತಿಯಿಲ್ಲದೆ, ನೀರಸವಾದ ಭಾವಾತಿರೇಕವೂ ಅಲ್ಲದೆ, ಯಾವ ಸ್ಫೂರ್ತಿದಾಯಕವಾದ ಪ್ರೇಮದಲ್ಲಿ, ನೀವು ಬೀಳದೆ ಏಳಬಲ್ಲಿರೋ ಆ ಪ್ರೇಮವನ್ನು ನಿಜವಾಗಿಯೂ ಶುದ್ಧನಾಗಿರುವವನು ಮಾಡಬಲ್ಲನು. ನಿಜವಾದ ಪರಿಶುದ್ಧಿಯೊಂದೇ ನಿಜವಾದ ಪ್ರೇಮ; ನಿಜವಾದ ಪ್ರೇಮ ಒಂದೇ ನೈಜವಾದ ಶುದ್ಧಿ. ಆಸಕ್ತಿಯು ಹೇಗೆ ಪ್ರೀತಿ ಎನ್ನುವ ಹೆಸರಿನಿಂದ ಮೆರೆಯುತ್ತದೆಯೋ ಹಾಗೆಯೇ ಕೆಲವು ಸಮಯ ನೈತಿಕ ದೌರ್ಬಲ್ಯವೇ ಪರಿಶುದ್ಧಿ ಎನ್ನುವ ಹೆಸರಿನಲ್ಲಿ ಬೆಳಗಬಹುದು.

ನೀವು ಒಂದು ವಸ್ತುವಿನಲ್ಲಿ ಆಸಕ್ತಿ ವಹಿಸಿದ ಮೇಲೆ ಅದರಿಂದ ಸುಖ ಪಡಲಾರಿರಿ. ಒಬ್ಬ ಅನಾಸಕ್ತನಾದ ಪ್ರಕೃತಿಪ್ರೇಮಿಯು ಒಂದು ಹೂದೋಟವನ್ನು ನೋಡಿ ಸಂತೋಷ ಪಡಬಲ್ಲನು ; ಆದರೆ ಆ ತೋಟದ ಯಜಮಾನನೆನ್ನಿಸಿಕೊಂಡವನಿಗೆ ಆ ಹೂವಿನ ಆಸ್ತಿಯು ನಿರಂತರ ಚಿಂತಾತಂಕಗಳ ಮೂಲವಾಗಿರುತ್ತದೆ. ನಮಗೆ ಬೇಕಾಗಿರುವದು ಈ ಪರಿಶುದ್ಧಿ ಅಥವಾ ಪ್ರೇಮ [ವಿಶ್ವಪ್ರಜ್ಞೆ] ; ಮಿಕ್ಕ ಎಲ್ಲಾ ವಸ್ತುಗಳೂ ಅವಶ್ಯವಾಗಿ ಬಂದು ತಾವಾಗಿ ನಮ್ಮನ್ನು ಸೇರಿಕೊಳ್ಳಲೇ ಬೇಕು.

## ಅದು ಹೇಗೆ ಬರುತ್ತದೆ ?

ನಿಮ್ಮ ವರ್ತಮಾನ ಸ್ಥಿತಿಯು ಏನೇ ಇದ್ದರೂ ಅದನ್ನು ಘನತೆಗೇರಿಸಿ, ಶ್ಲಾಘಿಸು-ವದರಿಂದ—ವರ್ತಮಾನವನ್ನು ಉತ್ಕರ್ಷಮಾಡುವದರಿಂದ—ನಿಮ್ಮ ಮೇಲೆ ಪರಮಾತ್ಮ ಪ್ರಜ್ಞೆಯು ತಾನೇ ತಾನಾಗಿ ಉದಯವಾಗುತ್ತದೆ. ಆತ್ಮ ಸಾಕ್ಷಾತ್ಕಾರವು ಎಲ್ಲಿಯೋ ಬೇರೆ ದೂರವಾಗಿರುವಂತೆ, ಅದರ ಬೆನ್ನ ಹತ್ತಿ ಓಡುವದರಿಂದ ಅದು ಪ್ರಾಪ್ತಿಯಾಗುವದಿಲ್ಲ. ಒಂದು ಮಗುವು ತನ್ನ ಆಟಗಳಿಗೂ ಅಭಿರುಚಿಗಳಿಗೂ ನೈಜವಾಗಿರುವದರಿಂದ ಬಾಲ್ಯವನ್ನು ಮೀರಿ ಬೆಳೆದು ತಾರುಣ್ಯವನ್ನು ಪಡೆಯುತ್ತದೆಯಲ್ಲದೆ ಬೆಳೆದ ಹುಡುಗರ ನಡೆನುಡಿಗಳನ್ನು ಕಪಿಯಂತೆ ಅನುಕರಣ ಮಾಡುವದರಿಂದ ಅಲ್ಲ.

## ಸೌಂದರ್ಯವೆಂದರೇನು ?

ತ್ಯಾಗ :— ಅಹಂಕಾರ ಪೂರ್ವಕವಾದ ಜೀವನವನ್ನು ಬಿಡುವದು. ನಿಜವಾಗಿಯೂ, ನಿಜವಾಗಿಯೂ ವ್ಯಕ್ತಿರೂಪದ ಕಿಕ್ಕಿರಿದ ಜೀವನವನ್ನು ಕಳೆದುಕೊಳ್ಳುವದರಲ್ಲಿಯೇ ಶಾಶ್ವತವಾದ ಜೀವನವಿದೆ. ಸೂರ್ಯಕಿರಣಗಳಲ್ಲಿರುವ ಎಲ್ಲಾ ಬಣ್ಣಗಳನ್ನೂ ಹೀರಿ ಅಂತರ್ಗತ ಮಾಡಿಕೊಳ್ಳುವ ಸ್ವಾರ್ಥಮಯವಾದ ಒಲವು ವಸ್ತುಗಳನ್ನು ಕಾಳಕಪ್ಪಗೆ ಕುರೂಪಿಗಳನ್ನಾಗಿ ಮಾಡುತ್ತದೆ. ಕಿರಣಗಳಲ್ಲಿರುವ ಬಣ್ಣಗಳನ್ನು ಉದಾರವಾಗಿ ಉಚಿತದಾನ [ತ್ಯಾಗ] ಮಾಡುವ ಸರಳ ನಿಷ್ಕಪಟ ಸ್ವಭಾವವು ವಸ್ತುಗಳನ್ನು ಬೆಳ್ಳಗೆ ಥಳಥಳಿಸುವಂತೆ ಮಾಡುತ್ತದೆ. ಎಲ್ಲಾ ಆಕರ್ಷಣೆಗೂ ಗುರುತ್ವಾಕರ್ಷಣೆಗೂ ಕೇಂದ್ರವೂ ನಾಭಿಯೂ ಆಗಿರುವ ಸೂರ್ಯನು ನಿರಂತರವಾಗಿ ಬೆಳಕನ್ನೂ ಬಿಸಿಯನ್ನೂ ತನ ಸುತ್ತಲೂ ಕೋಟಿ ಕೋಟಿ ಮೈಲುಗಳ ದೂರ, ಕೋಟಿ ಕೋಟಿ ವರ್ಷಗಳಿಂದ ಚೆಲ್ಲುತ್ತಲೇ ಇದ್ದಾನೆ.

ಮಕ್ಕಳು ಮಂದವೂ ಜಡವೂ ಆದ ಅಹಂಕಾರದಲ್ಲಿ ಬಂಧಿಸಲ್ಪಟ್ಟಿರುವದಿಲ್ಲವಾದುದರಿಂದ ಆಕರ್ಷಕವಾಗಿಯೂ ಮಧುರವಾಗಿಯೂ ಇರುತ್ತಾರೆ. ಯಾವ ಪಕ್ಷವು ಆತ್ಮಾರ್ಪಣೆಯ ಭಾವನೆಯನ್ನೂ ನಿಸ್ಸ್ವಾರ್ಥ ಭಕ್ತಿಯನ್ನೂ ತೋರಿಸುವದೋ ಅದು

ತಡೆಯಲಾಗದಷ್ಟು ಮೋಹವನ್ನೂ ಆಕರ್ಷಣೆಯನ್ನೂ ಉಂಟುಮಾಡುತ್ತದೆ. ಪ್ರೇಮಿಯನ್ನು ಎಲ್ಲರೂ ಪ್ರೇಮಿಸುತ್ತಾರೆ. ಮತಧರ್ಮಗಳೇ ! ಶಾಸ್ತ್ರದ ವಾಗ್ವಾದಗಳೇ ತತ್ತ್ವಶಾಸ್ತ್ರದ ವಾದ ವಿವಾದಗಳೇ ತೊಲಗಿರಿ ! ರಾಮನಿಗೆ ಗೊತ್ತಿದೆ. ಸೌಂದರ್ಯವೇ ಪ್ರೇಮ ; ಪ್ರೇಮವೇ ಸೌಂದರ್ಯ. ಈ ಎರಡೂ ತ್ಯಾಗವೇ. ಇಂಗ್ಲೆಂಡಿನ ಸಂನ್ಯಾಸಿಯಾದ ಇ. ಕಾರ್ಪೆಂಟರ್ [E. Carpenter] ಹೇಳಿರುವದೇನೆಂದರೆ, "ನಿಮ್ಮ ವಿಷಯದಲ್ಲಿ ನೀವು ಆಲೋಚನೆಯನ್ನು ಪೂರಾ ಬಿಟ್ಟ ಹೊರತು ಸುಖವಿಲ್ಲ. ಆದರೆ ಅದನ್ನು ನೀವು ಅರ್ಧಮರ್ಧವಾಗಿ ಮಾಡಬಾರದು. ಅಲ್ಪವಾದ ಅಹಂಕಾರದ ಕನಿಷ್ಠಕಣ ಮಾತ್ರವೇ ಉಳಿದರೂ ಅದು ಎಲ್ಲವನ್ನೂ ಹಾಳುಮಾಡುತ್ತದೆ. ಅದು ಕಷ್ಟವಲ್ಲವೆಂದು ಹೇಳುವದಿಲ್ಲ ; ಆದರೆ ನಿಜವಾದ ಸುಖಕ್ಕೆ ಬೇರೆ ಗತಿಯೇ ಇಲ್ಲವೆಂದು ಮಾತ್ರ ನಾನು ಬಲ್ಲೆ."

ಓ ಜೀವಂತ ಮಾನವ ! ಬಾಳುವದಾದರೆ ಪ್ರೇಮವೇ ನೀನಾಗಿ ಬಾಳು. ಬುದ್ಧರ, ಕ್ರಿಸ್ತರ, ಸ್ವಾಮಿಗಳ ಮತ್ತು ಇತರ ಹಿಂದಿನ ಆದರ್ಶಗಳ ಅಪೂರ್ಣ ಉದಾಹರಣೆಗಳು ನಿಮ್ಮ ಮನಸ್ಸನ್ನು ಮೋಡದಂತೆ ಮುಸುಕದಿರಲಿ. "ಒಬ್ಬನೇ ಮನುಷ್ಯನ ಇಚ್ಛೆಯಾದರೂ ಅವನ ಇಚ್ಛೆಯ ಮುಂದೆ ಇತಿಹಾಸವೇ ಉಡುಗಿ ಹೋಗುತ್ತದೆ." ದೇಶ—ಕಾಲ—ನಿಮಿತ್ತಗಳು ನಿಮ್ಮನ್ನು ಭಯ ಪಡಿಸದಿರಲಿ. ನೀವು ಪ್ರೇಮವೇ ಆಗಿ ಬಾಳಿದರೆ ಎಲ್ಲಾ ಪ್ರಕೃತಿ ನಿಯಮಗಳೂ ನಿಮ್ಮೊಳಗೆ ಅಡಗಿಯೂ ಅರಗಿಯೂ ಹೋಗುತ್ತವೆ. ಒಳಗಿನ ಸಮಶ್ರುತಿ—ಸಂಗಾನದೊಡನೆ ನೀವು ಧ್ವನಿಗೂಡಿಸಿದರೆ ಕಾಲವು ನಿಮ್ಮೊಡನೆ ವೇಳೆಯನ್ನು ಇಟ್ಟು ಕೊಳ್ಳುತ್ತದೆ.

ಓ, ಗಡಿಯಾರದ ಪುಟ್ಟ ಕೈಗಳೇ ! ಎಂಥ ಕಬ್ಬಿಣದ ಕೈಗಳಿಂದ ಅವು ಪ್ರಪಂಚವನ್ನು ಆಳುತ್ತವೆ ! ಆಹಾ ! ಅಮೃತಾತ್ಮನಾದ ಮಾನವ, ಗಡಿಯಾರದ ಮುಖಫಲಕದ ಸಂಕುಚಿತವಾದ ಅಧಿಕಾರ ವ್ಯಾಪ್ತಿಯಲ್ಲಿ ಸೇಡಿನ ಮನೋಭಾವದಿಂದ ಗುಲಾಮನಂತೆ ನೀನು ಎಸೆಯಲ್ಪಟ್ಟಿದ್ದಿ. ಎಂಥಾ ದೈವ ದುರ್ವಿಪಾಕ ! ವಿಧಿ ವಿಡಂಬನ ! ಅದೃಷ್ಟದ ಅಣಕ ! ಪ್ರಕೃತಿಯ ಒಕ್ಕಟ್ಟಿನಲ್ಲಿಯೂ ಐಕಮತ್ಯದ ನಿಯಮಶೀಲತೆಯಲ್ಲಿಯೂ ನಂಬಿಕೆಯಿಲ್ಲದೆ ಜನರು ತಲ್ಲಣಿಸುತ್ತಾರೆ. ಓ ನಾಸ್ತಿಕತೆ ! ಸಂದೇಹ ಪಡುತ್ತೀಯ ? ಇತರ ದೇಹಗಳಲ್ಲಿ ಜೀವಿಸಿರುವವರು ಬೇರೆ—ಎಂಬಂತೆ ! ರಾಮನ ಹತ್ತಿರ ಗಡಿಯಾರವಿಲ್ಲ ; ಆದರೂ ಹೊತ್ತಿಗೆ ಎಂದೂ ಹಿಂದೆ ಬಿದ್ದಿಲ್ಲ. ಕಾಲವು ಪ್ರೇಮಭಾವದಿಂದಲೇ ಅವಶ್ಯವಾಗಿ ಜೊತೆಗೂಡುತ್ತದೆ. ಒಂದು ಗಾಳಿಯಂತ್ರವನ್ನು ಸರಿಯಾಗಿ ಸ್ಥಾಪಿಸಿದರೆ, ನಾಲ್ಕು ದಿಕ್ಕಿನ ಗಾಳಿಗಳೂ ತಮಗೆ ತಾವೇ ಬಂದು ಕೂಡಿಕೊಳ್ಳುತ್ತವೆ. ಹಾಗೆ ಪ್ರಕೃತಿಯು ತಾನೇ ನಿಮ್ಮ ಜೊತೆಗೆ ಕೆಲಸ ಮಾಡುತ್ತದೆ. ಪ್ರೇಮದಲ್ಲಿಯೇ ನೀವು ಕೇಂದ್ರೀಕರಿಸಿರುವಾಗ ಎಲ್ಲಾ ಪವಾಡಗಳೂ, ಆಶ್ಚರ್ಯ ಅಲೌಕಿಕ ಘಟನೆಗಳೂ ಸಾಧ್ಯವಾಗುತ್ತವೆ.

ನಮ್ಮ ರಿಯಾಯಿತಿಗಳಿಗೂ ವಿನೀತತೆಗೂ ದಯಾಪರತೆಗೂ ದೇವತೆಗಳು ತಮ್ಮೊಳಗೇ ನಗುತ್ತಾರೆ. ಓ, ನಮ್ಮ ಅತ್ಯಂತ ಸಮೀಪದ ನೆರೆಯವನಾದ ಆತ್ಮಕ್ಕೆ ದ್ರೋಹಮಾಡಿ. ದೂರದ ನೆರೆಯವನಿಗೆ ವಿಶ್ವಾಸಿಗಳಾಗುವದಕ್ಕೆ ಪ್ರಯತ್ನ ಮಾಡುವದರಲ್ಲಿ ಎಂಥಾ ನಗೆಗೀಡಾದ ಸುಳ್ಳು ಸಾಕ್ಷ್ಯವನ್ನು ಹೇಳುತ್ತೇವೆ. ಒಬ್ಬ ಬಡ ಅಲೆಮಾರಿ ಭಿಕ್ಷುಕನು ದನಗಾವಲಿನ ಗೊಲ್ಲತಿಯಿಂದ ರೊಟ್ಟಿಯನ್ನು ಬೇಡುತ್ತಾನೆ. ಆಕೆ, ಪಾಪ, ಬಡಪಾಯಿ! ಮನೆಯಿಲ್ಲದೆ, ನೆಲೆಯಿಲ್ಲದೆ, ತೊಳಲಾಡುವ ಆ ಅಲಮಾರಿಯ ಸ್ವಾತಂತ್ರ್ಯವನ್ನು ಕಂಡು ಅಸೂಯೆ ಪಡುತ್ತಾಳೆ. ಆ ಭಿಕಾರಿಯು ಹೋದ ಮೇಲೆ ಆಕೆಯು ತನ್ನ ತಾಯಿಯು ಸತ್ತಳೆಂದು ಪತ್ರ ಬಂದಿರುವದಾಗಿ ಗಂಡನ ಮುಂದೆ ಹೇಳಿ ಶೋಕವನ್ನು ನಟಿಸುತ್ತಾಳೆ. ಆಕೆಯ ಸತ್ತ ತಾಯಿಯು ತಮಗೇನಾದರೂ ಆಸ್ತಿಯನ್ನು ಬಿಟ್ಟಿರಬಹುದೇನೋ ಎಂದು ಆಕೆಯ ತೌರುಮನೆಗೆ ಹೋಗುವದಕ್ಕೆ ಆ ಸಂಜೆ ಆಕೆಯ ಗಂಡನು ಅನುಮತಿ ಕೊಡುತ್ತಾನೆ. ಆಕೆಯು ಹತ್ತಿರಿರುವ ರೈಲ್ವೇ ಸ್ಟೇಷನ್ನಿನಲ್ಲಿ ಟಿಕೆಟ್ಟನ್ನು ಕೊಂಡು ಪ್ರಯಾಣ ಮಾಡುತ್ತಾಳೆ. ಬಹುಕಾಲ ಬೇಸರ—ಬಳಲಿಕೆಗಳ ಸೆರೆಮನೆಯ ವಾಸದ ಅನಂತರ ಪಂಜರದಿಂದ ಬಿಡುಗಡೆಹೊಂದಿದ ಪಕ್ಷಿಯಂತೆ ಅರಣ್ಯದೊಳಗೆ ಓಡಿಹೋಗಿ, ಹೊಟ್ಟೆ ಒಡೆಯುವಂತೆ ನಕ್ಕು ನಕ್ಕು ತನ್ನ ಬಹುಕಾಲದ ಬಳಲಿಕೆಯ ಹೊರೆಯನ್ನು ಇಳಿಸಿಕೊಳ್ಳುತ್ತಾಳೆ. ಆಕೆ ಸ್ವಚ್ಛಂದವಾಗಿ ಸುತ್ತಾಡಿ, ಸುತ್ತಲ ಹಳ್ಳಿಯ ರೈತರಿಂದ ಕೊಂಡು ತಂದು ಊಟಮಾಡಿ, ಸೂರ್ಯ ಮುಳುಗಿದಾಗ ಒಂದು ಹುಲ್ಲು ಬಣವೆಯ ಕೆಳಗೆ ಮಲಗಿದಳು. ಮರುದಿನ ಬೆಳಿಗ್ಗೆ ಆಕೆಯು ಪುನಃ ಸ್ವಚ್ಛಂದವಾಗಿ ಸುತ್ತುವದಕ್ಕೆ ತೊಡಗಿದಳು. ಆದರೆ ಅಯ್ಯೋ! ಆಕೆಯು ತನ್ನ ಗಂಡನ ಧ್ವನಿಯನ್ನೇ ದೂರದಲ್ಲಿ ಕೇಳಿ ಶೀರಾ ಹೌಹಾರಿದಳು. ಹಿಂದಿನ ದಿನದ ಭಿಕ್ಷುಕನೊಡನೆ ಆಕೆಯ ಗಂಡನೂ ಸ್ವೇಚ್ಛೆಯಾಗಿ ತಿರುಗಾಡಲು ಬಂದಿದ್ದನು. ಆತನೂ ಆಕೆಯಂತೆಯೇ ಬೇಸರ—ಬಳಲಿಕೆಗಳ ಸಂಕಟಕರವಾದ ಹೊರೆಯಿಂದ ನರಳುತ್ತಿದ್ದನು. ಆದ್ದರಿಂದ ಕೆಲವು ಕಾಲ ಸ್ವೇಚ್ಛೆಯಾಗಿರುವ ವಿರಾಮ ಜೀವನವನ್ನು ಅವನೂ ಬಯಸಿದ್ದನು. ಅವಿಶ್ವಾಸವನ್ನು ತೋರಿಸಿಕೊಳ್ಳಬೇಕಾದೀತೆಂಬ ಭಯದಿಂದ ಗಂಡ ಹೆಂಡರಿಬ್ಬರು ತಮ್ಮ ಹೃದಯಗಳಲ್ಲಿದ್ದ ವ್ಯಥೆಯನ್ನು ಪರಸ್ಪರ ಹೇಳಿಕೊಳ್ಳಲಾರದವರಾಗಿದ್ದರು. ಇತರರನ್ನು ಸಂತೋಷಪಡಿಸುವ ನಮ್ಮ ಎಲ್ಲಾ ವ್ಯಥೆಗಳೂ ಈ ಬಗೆಯವೇ ಇವೆ. ನಿಮ್ಮ ಆತ್ಮಕ್ಕೆ ನೀವು ಸತ್ಯವಾಗಿರಿ; ಕ್ರೈಸ್ತಶಾಸ್ತ್ರದ ಕಲ್ಪನೆಯಂತೆ ಜಗದಾದಿ ದಂಪತಿಗಳಾದ ಆಡಂ—ಈವ್ ಪ್ರಸಂಗವನ್ನು ಹಿಂಬಾಲಿಸಿ ರಾತ್ರಿ ಬಂದಂತೆ ಮುಚ್ಚಿಟ್ಟುಕೊಳ್ಳುವ ನಾಚಿಕೆಯ ಭಾವನೆಯೇ ಇವತ್ತು ಮಿಕ್ಕ ಎಲ್ಲಾ ಪಾಪಗಳ [ಜನನೀ] ಜನಕ ವಾಗುತ್ತದೆ. ಬೇರೆಯವರ ಇರುವಿಕೆಯಿಂದಲೇ ತುಳಿಯಲ್ಪಟ್ಟಂತೆ ಭಾವನೆ ಬಂದರೆ, ಅದು ಪರಮ ಶ್ರೇಷ್ಠ ಆತ್ಮನಾದ ಒಬ್ಬನೇ ದೇವರ ವಿರುದ್ಧ ಅತ್ಯಂತ ಹೀನವಾದ ದೂಷಣೆಯೇ ಸರಿ. ಪರಮಾತ್ಮನಾದ ತನ್ನ ಪ್ರತ್ಯಗಾತ್ಮನಿಗೆ ಪ್ರಾಮಾಣಿಕ ನಿಷ್ಠೆಯಿಂದ ಇರುವದರಿಂದ ಮಾತ್ರ ಒಬ್ಬನು ಪ್ರಪಂಚಕ್ಕೇ

ಬೆಳಕಾಗಬಲ್ಲನು. ಅತ್ಯಂತ ಶ್ರೇಷ್ಠ ವ್ಯಕ್ತಿಭಾವನೆಯು ಪರಾರ್ಥಭಾವನೆಯೇ ಆಗುತ್ತದೆ. ವಾಸ್ತವವಾಗಿಯೂ ಪರಾರ್ಥ ವಾದವೆಂಬುದೇ ತಪ್ಪು ಹೆಸರು ; ಅಪ ಪ್ರಯೋಗ. ಪರಹಿತ ಸಾಧನೆಯ ಭಾವನೆಯು ಗುರುತ್ವಾಕರ್ಷಣ ಕೇಂದ್ರವನ್ನು ನಮ್ಮಿಂದ ಹೊರಗೆಸೆಯುತ್ತದೆ. ಯಾವದರಿಂದ ನ್ಯೂಟನ್ ಮಹಾಶಯನು ಮಾನವ ಕುಲದ ಪರಮೋಪಕಾರಿಗಳಲ್ಲಿ ಒಬ್ಬನೆನಿಸಿದನೋ ಅಂಥಾ ಗುರುತ್ವಾಕರ್ಷಣ ನಿಯಮ ವನ್ನು ಅವನು ಕಂಡು ಹಿಡಿಯುತ್ತಿದ್ದಾಗ ನಿಜವಾಗಿಯೂ ಅವನೆಂದಿಗೂ ಪರರ ಚಿಂತೆ ಯನ್ನು ಮಾಡುತ್ತಿರಲಿಲ್ಲ. ಎಲ್ಲಾ ಅಪಪ್ರಯೋಗಗಳನ್ನೂ ನಾವು ಕೈಬಿಡೋಣ. ಡಾಕ್ಟರ್ ಜಾನ್‌ಸನ್ "ಒಬ್ಬ ಬಾಲಕನು ಯಾವದೋ ಒಂದು ಕಿಟಕಿಯಿಂದ ನೋಡಿ, ಇನ್ನೊಂದು ಕಿಟಕಿಯಿಂದ ನೋಡಿದನೆಂದರೆ ಅವನನ್ನು ಬಾರುಕೋಲಿನಿಂದ ಬಾರಿಸಿ," ಎಂದು ಹೇಳಿದ್ದಾನೆ.

## ಪ್ರೇಮ ಅಥವಾ ನೇಮ (ನಿಯಮ) ?

ರಾಮನು ಯಾವ ವಾದಗಳ ನಿಯಮವನ್ನೂ ಒತ್ತಾಯ ಪಡಿಸಿ ಹೇಳುವದಿಲ್ಲ; ಆದರೆ ಘಟನೆಗಳ ನ್ಯಾಯವನ್ನು ಹೇಳುತ್ತಾನೆ. "ನಿಯಮವು ಅದಕ್ಕೆ ಅವಕಾಶ ಕೊಡುತ್ತದೆ", ಎಂದು ಯಾರಾದರೂ ಹೇಳಿದರೆ, ಆ ಆಸಾಮಿ ಏನೋ ಕೇಡು ಮಾಡ ಬಹುದೆಂದು ತಿಳಿಯಬೇಕು. ಪ್ರೇಮದಲ್ಲಿ ಜೀವಿಸುವವನು ಯಾರಾದರೂ ನಿಯಮ ರೂಪವಾದ ನಿಯಮವನ್ನು ಮೀರಿ ಜೀವಿಸುತ್ತಾನೆ. ಒಂದೇ ನ್ಯಾಯವಾದ ನಿಯಮ ವೆಂದರೆ ಪ್ರೇಮ. ಪ್ರೇಮದಲ್ಲಿ ಜೀವಿಸುವದೆಂದರೆ, ನಿಮಗೆ ನೀವು ಸತ್ಯವಾಗಿ ಬಾಳು ವದು. ನಿಜವಾದ ನಿಯಮವೆಂದರೆ ನಾನೇ. ನನಗೆ ಅಧಿಕಾರವಾಣಿಯಿಂದ ನಿಯಮ ವನ್ನು ನೇಮಕಮಾಡುವದೆಂದರೆ ಅದನ್ನು ನನ್ನಿಂದ ಕತ್ತರಿಸಿದಂತೆ. ಮಗುವು ಉಸಿ ರಾಡುವದಕ್ಕೂ ಬೆಳೆಯುವದಕ್ಕೂ ಆಡುವದಕ್ಕೂ ಬದುಕುವದಕ್ಕೂ ಯಾವದಾದರೂ ನಿಯಮಗಳನ್ನು ವಿಧಿಸಬೇಕೆ? ಮಗುವಿನ ಜೀವನವೇ ನಿಯಮವಲ್ಲವೆ? ಸ್ವೇಚ್ಛೆ ಯಾದ ಹಕ್ಕಿಯಂತೆ ಮಗುವು ಹಾಡುತ್ತದೆ, ನಗುತ್ತದೆ, ತಾನಾಗಿಯೇ ಮಾತನಾಡು ತ್ತದೆ. ಅಧಿಕ ಪ್ರಸಂಗಿಗಳಾದ ಅಭ್ಯಾಗತರೂ ಭೇಟಿಕಾರರೂ ಬಂದು ಹಾಡಬೇಕೆಂದೂ ಮಾತಾಡಬೇಕೆಂದೂ ನಗಬೇಕೆಂದೂ ಮಗುವನ್ನು ಒತ್ತಾಯ ಮಾಡುತ್ತಾರೆ. ಕೂಡಲೇ ಮಗುವು ಸುಮ್ಮನಾಗುತ್ತದೆ. ಮಗುವಿಗೆ ಅಷ್ಟು ಸ್ವಾಭಾವಿಕವಾಗಿದ್ದ ಆಟದ ಹೊರ ತೋರಿಕೆಗಳು, ಅವಕ್ಕೆ ಅವನು ಅನ್ಯನೆಂಬ ಅರಿವನ್ನು ಹುಟ್ಟಿಸಿದ ಕ್ಷಣವೇ ಅವು ಅಸ್ವಾ ಭಾವಿಕವಾಗಿ ಬಿಡುತ್ತವೆ. ತನ್ನ ಆತ್ಮಕ್ಕೆ ವಂಚನೆಯಿಲ್ಲದೆ, ನಿಜವಾಗಿ, ಪ್ರಾಮಾಣಿಕ ವಾಗಿ, ದೈವಿಕವಾದ ನಿರ್ಲಕ್ಷ್ಯತೆಯಿಂದ ಯಾರು ಸ್ವಚ್ಛಂದವಾದ ಮುಕ್ತ ಜೀವನ ವನ್ನು ನಡೆಸುವರೋ ಅವನಿಗೆ ಪ್ರಪಂಚದ ಸಮಸ್ತ ನಿಯಮಗಳೂ—ಅವನ ಸ್ವರೂ ಪವೇ ಆದುದರಿಂದ—ಅವಿರೋಧವಾಗುತ್ತವೆ. ಅವನು ಯಾವದನ್ನೂ ಹೇಯವಾಗಿ

ಕಾಣುವದಿಲ್ಲ. ಅವನು ಯಾವದಕ್ಕೂ ವಕ್ರನಾಗುವದಿಲ್ಲ ; ಅವನು ಯಾವದಕ್ಕೂ ಸಂಕೋಚ ಪಡುವದಿಲ್ಲ; ಹಿಂಜರಿಯುವದಿಲ್ಲ.

ರೋಗವೆಂದರೆ ಏನು? ಪ್ರೇಮದ ಕೊರತೆಯಿಂದ ಸಂಕೋಚನ; ನೆರಳುಗಳ ಅಲುಗಾಟವನ್ನು ನೋಡಿಯೇ ನಡಗುವದು ; ಅಪಾಯದ ಹಗಲು ಕನಸಿನಿಂದ ಕೂಗಿ ಕೊಳ್ಳುವದು—ಇವೇ ರೋಗ. ನಿಜವಾಗಿ ನೋಡಿದರೆ ಭಯ ಪಡುವದಕ್ಕೆ ಕಾರಣವೇ ಇಲ್ಲ. ಸುತ್ತಲೆಲ್ಲಾ ಮುಂದೆ ಎಂದೆಂದಿಗೂ ಎಲ್ಲಾ ದೇಶದಲ್ಲಿಯೂ ಪರಮಾತ್ಮನ ಹೊರತು, ಇನ್ನೊಂದಿಲ್ಲ; ಅದು ನನ್ನ ಆತ್ಮವೇ, ನಾನೇ. ಯಾರಿಗೆ ಭಯಪಡಲಿ? ಹಗಲಿನಷ್ಟೇ ರಾತ್ರಿಯೂ ಒಳ್ಳೆಯದೇ. ಸೂರ್ಯ ಪ್ರಕಾಶದಷ್ಟೇ ಬಿರುಗಾಳಿ ಮಳೆಯೂ ಆವಶ್ಯಕ. ಎಷ್ಟೋ ದಿನಗಳು ಎವೆಯಿಕ್ಕುವಷ್ಟು ಹೊತ್ತೂ ನಿದ್ರೆಯಿಲ್ಲದೆ, ಇಡೀ ರಾತ್ರಿಗಳು ಕಳೆದು ಹೋಗುತ್ತವೆ. ಆದರೂ ರಾಮನು ಹಗಲಲ್ಲಿ ಉಲ್ಲಾಸ ವಾಗಿ ಹೊಸಬನಾಗಿಯೇ ಇರುತ್ತಾನೆ. ಏಕೆಂದರೆ ನಿದ್ರೆಯಿಲ್ಲದ ಕಾರಣಕ್ಕಿಂತಲೂ ನಿದ್ರೆಯಿಲ್ಲವೆಂಬ ಚಡಪಡಿಕೆಯಿಂದಲೇ ಹೆಚ್ಚು ಬಳಲಿಕೆ ಉಂಟಾಗುತ್ತದೆ. ಪ್ರಭು ವಾದ ಪ್ರೇಮವು ನಮ್ಮನ್ನು ಎಚ್ಚರವಾಗಿ ಇಟ್ಟಿರುವಾಗ ಜಾಗರಣೆ ಮಾಡಿದವರು ಎಷ್ಟು ಸುಖವಾಗಿರುತ್ತಾರೆ! ಶರೀರಕ್ಕೆ ಆಹಾರದ ಅಗತ್ಯವಿರುವಾಗ ಆಹಾರದ ರುಚಿ ಯನ್ನೂ ಸುಖವನ್ನೂ ಅನುಭವಿಸುತ್ತೇವೆ. ಆದರೆ ಕೆಲವು ವೇಳೆ ಭೋಜನದ ಆವಶ್ಯ ಕತೆ ಕಾಣದಿರುವಾಗ ಉಪವಾಸವೂ ಅಷ್ಟೇ ಸುಖವಾಗುತ್ತದೆ. ಕಣ್ಣೀರಿನ ಬಿರು ಮಳೆಯು ಸಂತೋಷದ ಪ್ರವಾಹವನ್ನೇ ತರುತ್ತದೆ ; ಏಕೆಂದರೆ ಆ ಬಿರುಮಳೆಯನ್ನು ಪ್ರೇಮವು ಸವಾರಿ ಮಾಡುತ್ತದೆ, ಪ್ರಭುತ್ವ ಮಾಡುತ್ತದೆ. ನಗುವಿನ ಹೊನಲುಗಳು ಸ್ವೇಚ್ಛೆಯಾಗಿ ಹರಿಯುತ್ತವೆ. ಸಂತೋಷದ ಕಣ್ಣೀರಿಗಿಂತಲೂ—ಆನಂದಬಾಷ್ಪ ಕ್ಕಿಂತಲೂ ನಗುವಿನಲ್ಲಿರುವ ಸಂತೋಷವು ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ. ಎಲ್ಲಾ ರಾಮನ ಆತ್ಮವೇ ಆಗಿರುವಾಗ ಅವನು ಯಾವದನ್ನು ತಡೆಗಟ್ಟಬೇಕು? ಅವನು ಯಾವ ದರಿಂದ ತಪ್ಪಿಸಿಕೊಳ್ಳಬೇಕು? ಓ! ಎಂಥಾ ಪರಮಾವಧಿಯಾದ ನಿರ್ಲಕ್ಷ್ಯತನ! ಉದಾ ಸೀನತೆ!

ಜ್ವರವು ಶರೀರಕ್ಕೆ ಭೇಟಿ ಕೊಟ್ಟಾಗ ರಾಮನು ಗೊಣಗುವದಿಲ್ಲ. ರಾಮನು ಅದನ್ನು ಸ್ನೇಹಿತನಂತೆ ಸ್ವಾಗತಿಸುತ್ತಾನೆ. ಬೇರೆ ಸಮಯದಲ್ಲಿ ಹೊಳೆಯದಿರುವ ಆಧ್ಯಾತ್ಮಿಕ ತತ್ತ್ವಗಳು ಜ್ವರ ಬಂದಾಗ ಹೊಳೆಯುತ್ತವೆ. ಎಲ್ಲವೂ ಆರೋಗ್ಯವೇ. ಜಾಗ ರಣವು ಒಂದು ಬಗೆಯಾದ ಆರೋಗ್ಯವಾದರೆ, ನಿದ್ರೆಯು ಅದರದೇ ಇನ್ನೊಂದು ಬಗೆ. ಸೌಮ್ಯವಾದ ಶಾಂತಿಯು ಸುಂದರವಾಗಿರುತ್ತದೆ. ಆದರೆ ತೀಕ್ಷ್ಣವಾದ ಜ್ವರದ ಚಂಡ ಮಾರುತದಲ್ಲಿ ಅದರದೇ ಆದ ಒಂದು ಸಮ್ಮೋಹವಿದೆ. ದೇವರಲ್ಲಿ ನಂಬಿಕೆಯೂ ವಿಶ್ವಾಸವೂ ಇರುವದಕ್ಕಿಂತಲೂ ಒಳ್ಳೆಯತನದಲ್ಲಿ ನಂಬಿಕೆಯೂ ವಿಶ್ವಾಸವೂ ಇರುವದು ನಿಜವಾದ ಧರ್ಮ. ಅಂಥಾ ಬಿರುಗಾಳಿ ಎಂದೆಂದೂ ಅದುವರೆಗೆ

ಬಂದಿರಲಿಲ್ಲವಾದರೂ ಅದು ಆರೋಗ್ಯವೂ ನಿಷ್ಕಪಟವೂ ಆದ ಕಿವಿಗೆ ವಾಯುದೇವನು ಬಾಜಿಸಿದ ತಂತಿವಾದ್ಯದ ಗಾನವಾಗಿತ್ತು.

"ಎಲ್ಲಿಯವರೆಗೆ ಹೊರಗಿನ ಹಂಗೂ ದಾಕ್ಷಿಣ್ಯವೂ ಅವಶ್ಯ ಕರ್ತವ್ಯವೂ ಇರುವದೋ ಮತ್ತು 'ನೀನು ಮಾಡಿಯೇ ತೀರಬೇಕು' 'ನೀನು ಮಾಡಕೂಡದು' ಎಂಬ ಸ್ಪಷ್ಟವಾದ ಆಜ್ಞೆಯಿರುವದೋ ಅಲ್ಲಿಯವರೆಗೆ ನಿಜವಾದ ಶುದ್ಧಿಯ ಆಧ್ಯಾತ್ಮಿಕ ಅಭಿವೃದ್ಧಿಗೆ ಅವಕಾಶವಿರುವದಿಲ್ಲ" ವೆಂದು ಗುಡುಗಿನ ಗರ್ಜನೆಯಿಂದ ಘೋಷಿಸಲ್ಪಡಲಿ. ವಿಧಿರೂಪದ ಆಜ್ಞಾರ್ಥಕ ಭಾವವೂ ಮಧ್ಯಮ ಪುರುಷದ ನೀನು ಎನ್ನುವ ಭಾವವೂ ನಮ್ಮಲ್ಲಿ ಪರಿಮಿತವಾದ ವ್ಯಕ್ತಿತ್ವವನ್ನು ಜೀವಂತವಾಗಿ ಇಟ್ಟಿರುತ್ತದೆ; ಎಲ್ಲಿ ಪರಿಮಿತಿ ಇದ್ದರೂ ಅಲ್ಲಿ ಆನಂದವಿರುವದಿಲ್ಲ: ಆಕರ್ಷಣ—ವಿಕರ್ಷಣಗಳಿಂದ ತಪ್ಪಿಸಿಕೊಳ್ಳುವದಾಗಲೀ ರಾಗ—ದ್ವೇಷಗಳಿಂದ ವಿಮೋಚನೆಯಾಗಲೀ ಹೊಯ್ದಾಟದಿಂದಲೂ ಚಾಪಲ್ಯದಿಂದಲೂ ಬಿಡುಗಡೆಯಾಗಲೀ ಇರುವದಿಲ್ಲ. ಎಲ್ಲಿಯವರೆಗೆ ಇತರ ಶರೀರಗಳಿಂದ ಸುತ್ತುವರಿಯಲ್ಪಟ್ಟು ಒಂದು ಪರಿಮಿತ ಶರೀರವು ದೇಶ ಕಾಲಗಳಲ್ಲಿ ಉಳಿದಿದೆಯೋ ಅಲ್ಲಿಯವರೆಗೆ ಅದು ಗುರುತ್ವಾಕರ್ಷಣೆಯನ್ನು ಹೇಗೆ ತಿರಸ್ಕರಿಸುವದು? ಆಕರ್ಷಣ—ವಿಕರ್ಷಣ ನಿಯಮಗಳ ಕಣ್ಣುಗಳೊಳಗೆ ಮಣ್ಣನ್ನು ಹೇಗೆ ಎರಚುವದು? ಪ್ರಕೃತಿಯನ್ನು ವಂಚಿಸುವದು ಹೇಗೆ? ಮತ್ತು ಹೊರಗಿನ ಪ್ರಭಾವಗಳಿಂದ ತಪ್ಪಿಸಿಕೊಳ್ಳುವದು ಹೇಗೆ? ಬೇರೆ ಬೇರೆ ಇಂದ್ರಿಯಗಳು ಮಾಡುವ ಬೇರೆ ಬೇರೆ ವ್ಯಾಪಾರಗಳಿಂದ ಭೇದವು ತೋರುತ್ತಿದ್ದರೂ ಮನುಷ್ಯನು ತನ್ನ ಒಂದು ಶರೀರದಲ್ಲಿ ತಾನೊಬ್ಬನೇ ಎಂಬ ಅರಿವಿನಿಂದ ಜೀವಿಸುತ್ತಾನೆ. ಈ ಶರೀರದಲ್ಲಿ ನೋಡುವವನೂ ಕೇಳುವವನೂ ನಡೆಯುವವನೂ ಮಾತನಾಡುವವನೂ ಎಲ್ಲಾ ನಾನೊಬ್ಬನೇ ಎಂದು ತಿಳಿಯುತ್ತಾನೆ. ಹಾಗೆಯೇ ಮುಕ್ತಾತ್ಮನು ಇಡೀ ಜಗತ್ತಿನ ವಿಷಯದಲ್ಲಿ ಜಗದಾತ್ಮನು (ವಿಶ್ವಾತ್ಮನು) ಒಬ್ಬನೇ ಎಂಬ ಅರಿವಿನಲ್ಲಿ ಜೀವಿಸುತ್ತಾನೆ; ಒಂದು ವ್ಯಕ್ತಿಯ ಶರೀರದಲ್ಲಿ ಆಹಾರ ಪಚನವೂ ಉಸಿರಾಟವೂ ರಕ್ತ ಸಂಚಾರವೂ ದೇಹದ ಬೆಳವಣಿಗೆಯೂ ಪ್ರಯತ್ನವಿಲ್ಲದೆ ತಮ್ಮಿಂದ ತಾವೇ ಹೇಗೆ ನಡೆಯುವವೋ ಹಾಗೆ ಜಗತ್ತಿನಲ್ಲಿರುವ ಅನೇಕ ವ್ಯಾಪಾರಗಳೂ ತಮ್ಮಿಂದ ತಾವೇ ನಡೆಯುವವು. ನಮ್ಮ ಅನಂತ ಸ್ವರೂಪವನ್ನು ಅನುಭವ ಮಾಡುವದರಿಂದಲೂ ಎಲ್ಲಾ ಭೇದ ಭಾವಗಳನ್ನೂ ಜಯಿಸುವದರಿಂದಲೂ ಎಲ್ಲವದರೊಡನೆ ನಮ್ಮ ಏಕಾತ್ಮತೆಯನ್ನು ಮನಗಾಣುವದರಿಂದಲೂ ನಕ್ಷತ್ರಗಳನ್ನೂ ಪ್ರಕೃತಿ ಸೌಂದರ್ಯವನ್ನೂ ನದಿಗಳನ್ನೂ ಎಲ್ಲವನ್ನೂ ಪ್ರೇಮದಿಂದ ನಮ್ಮದೆಂದೇ ತಿಳಿದರೆ ಪ್ರಲೋಭನೆಗಳೂ ದುಷ್ಪ್ರೇರಣೆಗಳೂ ಚಾಪಲ್ಯಗಳೂ ನಮ್ಮ ಮೇಲೆ ಪ್ರಭಾವ ಬೀರುವ ಶಕ್ತಿಯನ್ನು ಕಳೆದುಕೊಳ್ಳುತ್ತವೆ.

ಮಹತ್ತಾದ ಸೂರ್ಯನು ಪ್ರಕಾಶಿಸುತ್ತಿರುವಾಗ ಅಲ್ಪವಾದ ದೀಪದ ಹುಳುವು ಯಾವ ಬೆಳಕನ್ನು ಚೆಲ್ಲೀತು? ಎಲ್ಲವೂ ನನಗೆ ಸೌಂದರ್ಯವೇ ಆಗಿ, ಅದೇ

ನಾನಾಗಿರುವಾಗ ಯಾವದನ್ನು ನಾನು ಬೆನ್ನು ಹತ್ತಿಕೊಂಡು ಓಡಬೇಕು? ಯಾರು ಆಕರ್ಷಕವಾದ ಎಲ್ಲಾ ವಸ್ತುಗಳೊಡನೆ ಒಂದಾಗಿದ್ದಾರೋ ಅವರನ್ನು ಆಕರ್ಷಿಸುವದಕ್ಕೆ ಇಡೀ ಪ್ರಪಂಚದ ಭಾಗ್ಯ ಭಂಡಾರದಲ್ಲಿ ಯಾವದು ಶಕ್ತವಾಗಬಹುದು? ಪ್ರಕಾಶಗಳಿಗೆಲ್ಲಾ ಪ್ರಕಾಶವಾದ ಆತ್ಮನನ್ನು—ತಾನು ದೇವರಿಂದ ಬೇರೆಯೆಂದು ಭಾವಿಸುವ ಆತ್ಮಘಾತಕವಾದ ಸುಳ್ಳಿನ ಹಿಂದುಗಡೆ ಮುಚ್ಚಿಡಬೇಕೆನ್ನುವ ಕೃಪಣ ಕಳ್ಳನು ಯಾವ ಕೇಡನ್ನು ಮಾಡಲಾರ?

## ಶ್ರಮ ಮತ್ತು ಪ್ರೇಮ

ಬಡವನಾದ ಶ್ರಮಜೀವಿಯ ಆತ್ಮಕ್ಕೆ ಆಹಾರವನ್ನು ಕೊಡಿ. ಅವನಿಗೆ ನೀವು ಪ್ರೇಮವನ್ನು ಕೊಟ್ಟರೆ, ಅವನು ತನ್ನ ದೇಹಕ್ಕೆ ಆಹಾರವನ್ನು ಸಹ ಕೇಳದೆ ನಿಮಗಾಗಿ ಕೆಲಸ ಮಾಡುತ್ತಾನೆ. ನೀವು ಕೆಲಸಗಾರರನ್ನು ಪ್ರೇಮಿಸಿ; ಕೆಲಸಗಾರನು ನಿಮ್ಮ ಕೆಲಸವನ್ನು ಪ್ರೀತಿಸುತ್ತಾನೆ. ಯಾವ ಶ್ರಮದ ದುಡಿಮೆಯು ಪ್ರೇಮದಿಂದ ಪ್ರೇರಿತವಾಗಿರುತ್ತದೆಯೋ ಅದನ್ನು ಶ್ರಮವೆನ್ನಬಹುದೆ? ಇಲ್ಲ, ಅದು ವಿನೋದರೂಪವಾದ ಕ್ರೀಡೆ.

ಕಲೆ ಎಂದರೆ ಏನು? ನಾವು ಮುಟ್ಟಿದ್ದರಲ್ಲಿ ಸೌಂದರ್ಯವನ್ನು ಹೊರತರುವದು. ಭೂಮಿಯಲ್ಲಿ ಆಗಲಿ ಸ್ವರ್ಗದಲ್ಲಿ ಆಗಲಿ ಸೌಂದರ್ಯವನ್ನು ಹೊರ ತೋರಿಸುವದು—ಅನಾವರಣ ಮಾಡುವದು ಯಾವದು? ಏಕೆ? ಅದು ಪ್ರೇಮದ ಹೊರತು ಬೇರೆ ಯಾವದಿದ್ದೀತು?

ಹೀಗೆ ನಮ್ಮ ಶ್ರಮಪೂರಿತ ಕಾರ್ಯದ ಮೇಲೆ ಪ್ರೇಮ ಭಾವವು ಬೆಳಗುವದರಿಂದ ನಮ್ಮ ಉದ್ಯೋಗವನ್ನೂ ಕೈಗಾರಿಕೆಯನ್ನೂ ಕಲಾಪೂರ್ಣವಾಗಿ ಮಾಡುತ್ತದೆ. ಇದರಿಂದ ಕೈಗಾರಿಕೆಯ ಕಲೆಗಳು ಉತ್ಪತ್ತಿಯಾಗುತ್ತವೆ. ಈ ಕಾಲದಲ್ಲಿ ಇಂಡಿಯಾದೇಶದಲ್ಲಿ ನೂತನ ರಚನೆಗಳೂ ಸಂವಿಧಾನಗಳೂ ಸೌಂದರ್ಯಾಭಿರುಚಿಯುಳ್ಳ ಕಾರ್ಯಕೌಶಲಗಳೂ ಹೆಸರಿಗೆ ತಕ್ಕ ಯೋಗ್ಯತೆಯುಳ್ಳ ಕೈಗಾರಿಕೆಯ ಕಲೆಯೂ ಏಕೆ ಅಭಿವೃದ್ಧಿಯನ್ನು ಪಡೆಯುತ್ತಿಲ್ಲ? ಏಕೆಂದರೆ, ಕೆಲಸಗಾರರ ಮೇಲೆ ಸಾಕಷ್ಟು ಪ್ರೇಮವನ್ನು ತೋರಿಸುತ್ತಿಲ್ಲ. ಬಡವರಾದ ಕೆಲಸಗಾರ ಜನಾಂಗವನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವದಕ್ಕೆ ಬದಲು, ಅವರ ಗುಡಿಸಲುಗಳಿಂದಲೇ ಓಡಿಸುತ್ತಿದ್ದಾರೆ.

ಎಲ್ಲಿ ದುಡಿಮೆಯನ್ನು ತುಚ್ಛವಾಗಿ ಕಾಣುತ್ತಾರೋ ಅಲ್ಲಿ ಜಡತೆಯೂ ಕ್ಷೀಣದಶೆಯೂ ನಾಶವೂ ಫಲವಾಗುತ್ತದೆ; ಕಲೆಯು ಬಹಳ ಪ್ರಯಾಸವಾಗುತ್ತದೆ. ಎಲ್ಲಿ ಶ್ರಮವನ್ನು ಪ್ರೀತಿಸುತ್ತಾರೋ ಅಲ್ಲಿ ಪ್ರಾಣವೂ ಪ್ರಕಾಶವೂ ಸ್ಥಿರವಾಗಿರುತ್ತವೆ; ಶ್ರಮವು

ಕಲಾಮಯವೂ ಆಗುತ್ತದೆ. ಓ, ಮಹಾಪ್ರಭು! ಪ್ರೇಮ! ಅಂಥಾ ದುಸ್ಥಿತಿಗೆ ಬಂದಿದೆಯೆ? ಪ್ರೇಮ ಎಂಬ ಶಬ್ದವನ್ನು ಉಚ್ಚರಿಸಿದ ಮಾತ್ರಕ್ಕೆ ನಮ್ಮ ಪ್ರಿಯಜನರಿಗೆ ಅದು ದೈವಾವೇಶದ ಜ್ವಾಲೆಯನ್ನು ಸೂಚಿಸುವದಕ್ಕೆ ಬದಲು ಕಾಮವನ್ನೂ ಅವಿವೇಕವನ್ನೂ ಸೂಚಿಸುತ್ತದೆ. ಕೆಲವು ಸಮಯ ದೈವೀಪ್ರೇಮ, ಭಕ್ತಿ, ಉಪಾಸನಾ ಮೊದಲಾದ ವಿಷಯಗಳಲ್ಲಿ ಬಹಳ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾರೆ. ವಾಸ್ತವವಾಗಿ, ಸಂಸ್ಕೃತ ಭಾಷೆಯಲ್ಲಿರುವ ಮಂತ್ರಗಳನ್ನು—ಭಾವನೆಯಂತು ಇರಲಿ—ಅರ್ಥವನ್ನು ಸಹ ತಿಳಿಯದೆ ಹೇಳುವಂತೆ ಪ್ರೇಮ—ಭಕ್ತಿಗಳ ವಿಷಯದಲ್ಲಿ ದೊಡ್ಡ ದೊಡ್ಡ ಭಾಷಣವನ್ನು ಮಾಡುವದೂ ಆಗುತ್ತದೆ. ಮಸಿಯಿಲ್ಲದ ತುಪಾಕಿಯ ವ್ಯರ್ಥವಾದ ಗುಂಡುಗಳ ಹಾಗೆ! ಚೈತನ್ಯದ ನೈಜವೂ ನಿಷ್ಕಪಟವೂ ಆದ ಉತ್ಕಟ ಪ್ರೇಮದಿಂದ ಉರಿಯುತ್ತಿರುವ ಹೃದಯದ ಖೋಟಾ ಅನುಕರಣ!

ದೇವಾಲಯಗಳಿಂದ ಅತ್ಯಂತ ಶ್ರೇಷ್ಠವಾದ ಗಾನಪದ್ಧತಿಯಲ್ಲಿ ಸ್ತೋತ್ರಗಳನ್ನೂ ಪದಗಳನ್ನೂ ತಮ್ಮ ತಾಯ್ನುಡಿಯಲ್ಲಿಯೇ ಹಾಡುತ್ತಾರೆ. ಆದರೆ, ಆಹಾ! ಆಶ್ಚರ್ಯ! ಪ್ರೇಮದ ಒಂದಾದರೂ ಪವಿತ್ರವಾದ ಕಣ್ಣೀರು ಬೀಳುವದಿಲ್ಲ.

ಪುಣ್ಯವಂತರಾದ ಹಿಂದುಸ್ಥಾನಿಗಳೇ! ನಿಮ್ಮನ್ನು ನೀವು ಪಾಪಿಗಳೆಂದೂ ಗುಲಾಮರೆಂದೂ ಕರೆದುಕೊಂಡ ಮಾತ್ರದಿಂದ ದೇವರನ್ನು ಮೋಸಪಡಿಸಿ ಅವನ ಪ್ರೇಮವನ್ನು ಗೆಲ್ಲಲಾರಿರಿ. ನೀವು ಭಾವಿಸಿದಂತೆಯೇ ಅವಶ್ಯವಾಗಿ ಆಗಿಯೇ ತೀರುವಿರಿ. ಕರ್ಮದ ಕಠೋರವಾದ ನಿಯಮವು ಸೇಡಿನಿಂದ ಎಂಬಂತೆ ಕಾರ್ಯ ಮಾಡುತ್ತದೆ; ನೀವು ಪ್ರಾರ್ಥಿಸಿದಂತೆ ನಿಮ್ಮನ್ನು ಪಾಪಿಗಳನ್ನಾಗಿಯೂ ಗುಲಾಮರನ್ನಾಗಿಯೂ ಮಾಡುತ್ತದೆ. ಅದೇನೂ ಭಕ್ತಿಯಲ್ಲ.

ನನ್ನ ದರಿದ್ರ ಶ್ರೀಮಂತರೇ! ನಿಮ್ಮ ಉನ್ನತ—ಶ್ವೇತ ದೇವಾಲಯಗಳೂ ನಿಮ್ಮಿಂದ ಸ್ಥಾಪಿತವಾದ ಶಿಲಾ ವಿಷ್ಣುಗಳೂ ನಿಮ್ಮ ಹೃದಯದ ಜ್ವರವನ್ನು ಶಮನ ಮಾಡಲಾರವು. ನೀವು ದುಃಖಿತರೆಂದು ರಾಮನು ಬಲ್ಲನು. ನಿಮ್ಮ ಸ್ವಾಭಿಮಾನವೂ ಗರ್ವವೂ ಅದನ್ನು ಒಪ್ಪಿಕೊಳ್ಳದಿರಬಹುದು. ದೇಶದಲ್ಲಿ ಹಸಿದಿರುವ ನಾರಾಯಣರನ್ನೂ ಶ್ರಮಿಸುತ್ತಿರುವ ವಿಷ್ಣುಗಳನ್ನೂ ಪೂಜಿಸಿರಿ. ಉಪಯುಕ್ತವಾದ ಕಲೆಗಳನ್ನೂ ಉದ್ಯೋಗಗಳನ್ನೂ ಕಲಿತುಕೊಂಡು ಬರಲು ಬಡ ಹಿಂದೂಸ್ಥಾನೀ ವಿದ್ಯಾರ್ಥಿಗಳನ್ನು ಅಮೆರಿಕೆಗೆ ಕಳಿಸಿರಿ. ಅವರು ಅಮೆರಿಕಾದಿಂದ ಹಿಂದಿರುಗಿ ಬಂದ ಮೇಲೆ ಉಪವಾಸ ಸಾಯುತ್ತಿರುವ ನೂರಾರು—ಅಲ್ಲ—ಸಾವಿರಾರು ಜನರಿಗೆ ತಮಗೆ ತಾವು ಸಹಾಯ ಮಾಡಿಕೊಳ್ಳುವ ವಿದ್ಯೆಯನ್ನು ಕಲಿಸಿ ಅವರನ್ನು ರಕ್ಷಿಸುತ್ತಾರೆ.

ನಿಜಾಮಿಯ ಲೈಲೀ—ಮಜ್ನೂ ಕಾವ್ಯವನ್ನು ಓದಿದ ಮೇಲೆ ಒಬ್ಬ ಪ್ರಣಯಿಯು ಆ ಗ್ರಂಥದಿಂದ ಲೈಲಿಯ ಚಿತ್ರವನ್ನು ಕತ್ತರಿಸಿ ತೆಗೆದು, ತನ್ನ ಎದೆಗೆ ಅಪ್ಪಿಕೊಂಡು ಅತಿ

ಪ್ರೀತಿಯಿಂದ ಮುದ್ದಿಸುತ್ತಾ ಮುತ್ತಿಡುತ್ತಾ ಇದ್ದನು. "ಇದೇನು ನಿನ್ನ ಹುಚ್ಚು?" ಎಂದು ಅವನ ಗೆಳೆಯನೊಬ್ಬನು ಅವನನ್ನು ಕೇಳಿದನು. ಅದಕ್ಕೆ ಅವನು "ಲೈಲಿಯು ನನ್ನ ಪ್ರಾಣಪ್ರಿಯೆ, ಹೃದಯೇಶ್ವರಿ, ಪ್ರಿಯತಮೆಯಾದ ಸಾಮ್ರಾಜ್ಞಿ" ಎಂದು ಮೋಹಾವೇಶದಿಂದ ಹೇಳಿದನು. ವಿವೇಕಿಯಾದ ಆ ಹಿರಿಯ ಮಿತ್ರನು. "ಮೂರ್ಖ! ಪಾಪ, ಆ ಬಡಪಾಯಿ ಮಜ್ನುವಿನ ಆರಾಧ್ಯ ದೇವತೆಯನ್ನು ಏಕೆ ಕಸಿದುಕೊಳ್ಳುತ್ತಿ? ನಿನ್ನಲ್ಲಿ ಮಜ್ನುವಿನ ಪ್ರೇಮ ಜ್ವಾಲೆ ಇರಬಹುದು; ಆದರೆ ನಿನ್ನ ಪ್ರಣಯಕ್ಕಾಗಿ ನಿನ್ನವಳೇ ಆದ ಜೀವಂತ ಪ್ರೇಯಸಿಯನ್ನು ಸಂಪಾದಿಸಿಕೊ" ಎಂದು ಬುದ್ಧಿವಾದ ಹೇಳಿದನು.

ಭಾರತ ದೇಶದ ಭಕ್ತರೆ! ನೀವೆಲ್ಲರೂ ವ್ರಜಗೋಪಿಯರ ಮತ್ತು ಚೈತನ್ಯನ ಹೃದಯಾರಾಧ್ಯ ದೇವನನ್ನು ಕಸಿದುಕೊಳ್ಳುವದಕ್ಕೆ ಆತುರರಾಗಿದ್ದೀರಿ. ಆದರೆ ನಿಮ್ಮಲ್ಲಿ ಎಷ್ಟು ಜನರಿಗೆ ಆ ಗೋಪಿಕಾ ಸ್ತ್ರೀಯರ ಮತ್ತು ಗೌರಾಂಗ ಪ್ರಭುವಿನ ಪ್ರೀತಿಯ ಕಾತುರತೆ ಇದೆ? ಉರಿಯುತ್ತಿರುವ ಪ್ರೇಮ ಜ್ವಾಲೆಯಿದೆ? ನೀವು ಯಾವಾಗ ಆ ಗೋಪಾಲನನ್ನು ಬರಿಯ ಕಲ್ಲಿನ ಮೂರ್ತಿಗಳಲ್ಲಿಯೇ ಸೆರೆಹಾಕಿ ಇಡದೆ, ಚಂಡಾಲನಲ್ಲಿಯೂ ಕಳ್ಳನಲ್ಲಿಯೂ ಪಾಪಿಯಲ್ಲಿಯೂ ಪರಕೀಯನಲ್ಲಿಯೂ ಎಲ್ಲರಲ್ಲಿಯೂ ಕಾಣಬಲ್ಲಿರೋ ಆಗ ಆ ಮಧುರತಮ ಮಧುರಾನಾಥನಿಗೆ ನೀವು ಅತ್ಯಂತ ಪ್ರೀತಿಪಾತ್ರರಾಗುತ್ತೀರಿ. ಭಕ್ತಿ ಎಂದರೆ, ಅತ್ತು ಗೋಳಾಡಿ ಬೇಡಿಕೊಳ್ಳುವ ನಿಷೇಧಾರ್ಥಕ ಅಥವಾ ಅಭಾವ ಸ್ಥಿತಿಯಲ್ಲ. ಭಕ್ತಿ ಎಂದರೆ ಅವರ್ಣನೀಯವಾದ ಸಮಾನತೆ, ಉಜ್ಜ್ವಲ ಮಾಧುರ್ಯ, ದೈವಿಕ ನಿರ್ಲಕ್ಷ್ಯತೆ. ಕಾಣುವ ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಎಲ್ಲವನ್ನು ನೋಡುವದೇ ಭಕ್ತಿ. ನಿಮ್ಮ ದೃಷ್ಟಿ ಬಿದ್ದಲ್ಲೆಲ್ಲಾ ನಿಮ್ಮನ್ನು ನೀವು ನೋಡುವದೇ ಭಕ್ತಿ. ಸಕಲವೂ ಸೌಂದರ್ಯವೇ, ನಾನೂ ಅದೇ—ಎಂದು ತಿಳಿಯುವದೇ ಭಕ್ತಿ. ತತ್ತ್ವಮಸಿ—ಅದೇ ನೀನಾಗಿದ್ದಿ.

ಓ, ಚೋರ! ಅಪವಾದಕಾರ, ಓ, ಲೂಟಿಕೋರ ಪ್ರಿಯಬಾರ!
ಬಾರ, ಬಾರ, ಒಳಿತು ಬಾರ, ಬೇಗ ಬಾರ, ಓ ಹೆದರದಿರು ಬಾರ.
ನಾನೇ ನಿನ್ನವನು, ನೀನೆ ನನ್ನವನು.
ಅಹುದು, ನೀ ಯೋಚಿಸದಿರೆ, ದಯಮಾಡಿ ತೆಗೆದುಕೋ,
ನೀ ಎನ್ನದೆಂದು ತಿಳಿದಿರುವ ಈ ಎಲ್ಲವನು ಪಡೆದುಕೋ.
ಅಹುದಹುದು, ಮತ್ತೆ ನಿನಗದು ಯೋಗ್ಯವೆನಿಸಿದರೆ,
ಒಂದೆ ಕಡಿತಕ್ಕೆ ಕೊಲ್ಲು ಈ ತನುವ, ಅಥವಾ ಮಾಡು ತುಂಡು
ದೇಹವನು ಹೊಯ್, ಇಲ್ಲವೆ, ಒಯ್ ಇಷ್ಟ ಬಂದೋಲು ತುಂಡಗೆಯ್
ಹೆಸರು ಕೀರ್ತಿಗಳ ಕೊಂಡೋಡು, ತೊಲಗು,

ಪಾಡೋಹು, ಬಿಡದೆ ತೊಲಗು.
ಆದರೂ ನೀ ಸುತ್ತು ತಿರುಗಿ ನೋಡಿದೊಡೆ,
ನಾನೊಬ್ಬನೇ ಸುಖವಾಗಿ ಸುರಕ್ಷಿತವಾಗಿಹುದ ನೀ ಕಾಂಬೆ.
ಪ್ರಿಯ ಚೋರ, ದರೋಡೆಕೋರ, ನಮಸ್ತೇ ನಿನಗೆ ಶುಭವಾಗಲಿ !

ಮಹಮ್ಮದೀಯರೇ ! ನೀವು ರಾಮನನ್ನು ಕಡಿದು ಹಾಕಬಹುದು ; ಆದರೆ ರಾಮನ ಹೃದಯವು ನಿಮಗಾಗಿ ಪ್ರೇಮದಿಂದ ಸುಡುತ್ತದೆ. ಕ್ರೈಸ್ತರೇ ! ನೀವು ರಾಮನನ್ನು ತಪ್ಪು ತಿಳಿಯಬಹುದು; ರಾಮನು ನಿಮ್ಮನ್ನು ಪ್ರೀತಿಸುತ್ತಾನೆ. ಹೊಲೆಯರೆ ! ರಝಾಡಮಾಲಿಗಳೆ ! ನಿಮ್ಮ ಹೊಲಸಾದ ರೋಗಗ್ರಸ್ತ ಗುಡಿಸಲುಗಳನ್ನು ಯಾರೂ ಪ್ರವೇಶಿಸದಿದ್ದರೆ, ರಾಮನನ್ನು ನಿಮ್ಮೊಡನೆ ಅಲ್ಲಿ ನೋಡುವಿರಿ.

ನಟನೆಯ ಪ್ರೇಮವೂ ಸುಳ್ಳು ಭಾವನೆಗಳೂ ತೋರಿಕೆಯ ಭಾವಾತಿರೇಕಗಳೂ ದೇವರಿಗೆ ಅಪಮಾನಕರವಾದವು. ಕೀಳಾದ ರಾಗಭಾವಗಳೊಡನೆ ಜೊತೆಗೂಡಿದ್ದರೂ ತಪ್ಪಲ್ಲ, ಕೃತ್ರಿಮವಲ್ಲದ ಪ್ರೇಮ ಜ್ವಾಲೆಯು ಅಗತ್ಯವಿದೆ.

ತೋರಿಕೆಗಳ ಸತ್ತ ಹೊರೆಯಿಂದ ಜಗ್ಗುತ್ತಿರುವ ಯುವಕರ ಹೃದಯದ ಅಂತರಾಳದಲ್ಲಿ ನಿಗಿನಿಗಿ ಮಿರುಗುತ್ತ ಉರಿಯುತ್ತಿರಬಹುದಾದ ಸತ್ಯಸಂಪನ್ನ ಭಾವನೆಯ ಕಿಡಿಯನ್ನು ಸಂಪ್ರದಾಯಶೀಲತೆ, ಪದ್ಧತಿ ಬದ್ಧತೆ, ಅನುಕರಣ ಶರಣತೆ, ಲಜ್ಜೆ, ಕೀರ್ತಿ ಕಾಮನೆ—ಇತ್ಯಾದಿಗಳು ಹೊಟ್ಟು ಮತ್ತು ಇದ್ದಲಿನಂತೆ ಇಂಗಾಲಾಮ್ಲದಿಂದ ಉಸಿರು ಕಟ್ಟಿಸಿ ಆರಿಸುವ ಕೆಲಸಮಾಡುತ್ತವೆ. ಓ ಸತ್ಯವೆ ! ನಿನಗೆ ಸುಸ್ವಾಗತ. ನೀನೊಂದೇ ನನ್ನ ಬಂಧು, ಮಿತ್ರ, ಇನಿಯ(ಳು), ನನ್ನ ಒಡೆಯ, ಸ್ವಾಮಿ, ಪ್ರಭು, ಮತ್ತು ನನ್ನ ಆತ್ಮ.

ರಾಜರೆ ! ನಿಯಮಗಳೆ ! ಸಮಾಜ–ಸಮುದಾಯಗಳೆ ! ನಿಮಗೆ ಒಳ್ಳೆಯದಾಗಲಿ, ಆದರೆ, ರಾಮನಿಂದ ಯಾವ ರಾಜಿ–ಒಪ್ಪಂದಗಳನ್ನೂ–ಸಮನ್ವಯಗಳನ್ನೂ ಒತ್ತಾಯದಿಂದ ಸೆಳೆದು ಕೊಳ್ಳುವ ಶಕ್ತಿ ನಿಮಗಿಲ್ಲ. ನಿಮ್ಮ ಬೆದರಿಕೆಗಳನ್ನೂ ಅನುಗ್ರಹಗಳನ್ನೂ ಆಗ್ರಹಗಳನ್ನೂ ನಿಮ್ಮಲ್ಲಿಯೇ ಉಳಿಸಿಕೊಳ್ಳಿ, ತಡೆಹಿಡಿಯಿರಿ. ನನ್ನ ಮಹಾರಾಜನೂ ನಿರಂಕುಶ ಮಹಾ ಪ್ರಭುವೂ ಆದ ಸತ್ಯವು ಕೋಟ್ಯಾನುಕೋಟಿ ಚಕ್ರವರ್ತಿಗಳಿಗಿಂತಲೂ ದಬ್ಬಾಳಿಕೆಯ ದೊರೆಗಳಿಗಿಂತಲೂ ಸ್ವೇಚ್ಛಾವರ್ತಿಗಳಾದ ಪ್ರಭುಗಳಿಗಿಂತಲೂ ಇವರೆಲ್ಲರ ಒಟ್ಟಿನ ಬಲಕ್ಕಿಂತಲೂ ಹೆಚ್ಚು ಪ್ರಬಲವಾಗಿದೆ.

ಪನಾಮಾ ರೈಲ್ವೆಯ ಪ್ರತಿಯೊಂದು ಹೆಜ್ಜೆಗೂ [ಗಂಟೆಗೂ, ಕಟ್ಟಿಗೂ] ಒಂದೊಂದು ನರಬಲಿಯಾಗಿದೆಯೆಂದು ಹೇಳುತ್ತಾರೆ. ಇದು ನಿಜವಾಗಲೀ ಸುಳ್ಳಾಗಲೀ ಅಂತು ಮಾನವರ ತಲೆ ಬುರುಡೆಗಳನ್ನು ಹದಿಸಿ ಹಾಸಿರುವ ರಸ್ತೆಯ ಮೇಲೆ ನಿರಂಕುಶ ಸತ್ಯವು

ಹಾಯ್ದು ಹೋಗಿದೆ ಎಂಬದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಕಠೋರ ಸತ್ಯದ ಅಟ್ಟಿ ಹಾಸದ ಹೆಜ್ಜೆಗಳಿಂದ ಅನುಗೃಹೀತವಾದ ತಲೆಗಳೇ ಸುಖಿಗಳಾದುವು. ಧನ್ಯವಾದವು.

ಸತ್ಯ ಸಂಧತೆಯಿಲ್ಲದಲ್ಲಿ ಪ್ರೇಮವಿರಲಾರದು. ಪ್ರಭುವಾದ ಪ್ರೇಮವು ನಿರಂಕುಶ. ಪ್ರಭುವಾದ ಸತ್ಯದ ಪ್ರತಿನಿಧಿಯು. ಇದು ತಿರುವು ಮುರುವೂ ಆಗಬಹುದು. ಪ್ರಾಯಶಃ ಎರಡೂ ಒಂದೇ. ಆದೊಡಾ ದೇವ ಪೇಳ್ದ ಅದೆಂತೆನೆ,

"ಉರಿಯೊಳಗೆ ಹೊಗೆ ಇಹುದರಿಂ
ಶುದ್ಧ ತರವಿಹ ಕೊಡುಗೆಯನು ಕೊಳ್ವೆ".
ಪ್ರಿಯ ನಯನಗಳು ಆಳ—ಆಳದಲಿಹವು
ಶೀಘ್ರದಾಹ್ಯ ತೈಲದುರಿಯ ಸವಿಯಿಂ ತುಂಬಿಹವು,
ಎಲ್ಲಿ ಅವರ ಕುಡಿ ನೋಟಗಳ ಕೂಟವಿಹುದೋ,
ಅಲ್ಲಿ ಆ ಮಧುಬಿಂದುವೇ ಸ್ವರ್ಗ.
ಅವರ ಸಂಪರ್ಕವಿನ್ನೂ ಹೆಚ್ಚು ಪರಿಪೂರ್ಣ
ಆ ನೋಟಕೆಲ್ಲಿಯೂ ಎಲ್ಲೆಯೇ ಇಲ್ಲ
ಸೂರ್ಯ ಪ್ರಕಾಶದನಿತು ಸ್ವಚ್ಛ ಆ ಕಣ್ಣುಗಳ ಅಕ್ಷ
ಅದೇ ಗ್ರಹಗೋಳಗಳ ಅಕ್ಷ ಅಂತರಿಕ್ಷ.

—ಎಮರ್‌ಸನ್

ಪರ್ವತಗಳಿಂದ ಹರಿಯುತ್ತಿರುವ ರಭಸ ಪ್ರವಾಹಗಳೇ! ಘೋರ್ಗರೆಯಿರಿ. ಅಬ್ಬರಿಸು ಓ ಸಾಗರವೆ! ಆರ್ಭಟಿಸು ಮಂದ ಪ್ರಕಾಶದ ನಕ್ಷತ್ರಗಳ ಕೆಳಗೆ: ಓ ಮೃತ್ಯು ಮುಖ ಕಂದರವೆ! ಆಕಳಿಸು ವಿಶ್ವದಗಲಕ್ಕೆ, ಕಪ್ಪು ಕತ್ತಲೆಯ ಪಾತಾಳದಾಳಕ್ಕೆ. ಆದರೆ ಓ! ಎನ್ನ ಹೃದಯಾರಾಧ್ಯ ಮಹಾ ಪ್ರಭುವೆ ಪ್ರೇಮ ದೇವ! ಪರ್ವತಾರಣ್ಯ ಸಮುದ್ರ ಗಳ ಮೇಲೂ ಅಗಲವೂ ಆಳವೂ ಆದ ಸಾವಿನ ಬಾಯಿಯ ಕಾಳ ಬಿರುಕಿನ ಮೇಲೂ ಭಯಂಕರ ವೇಗದಾತುರದಿಂದ ನೀನು ಸವಾರಿ ಮಾಡಿ ಸಾಗುವೆಯೆಂದು ನಾನು ಬಲ್ಲೆ. ಓ ಕಠೋರ ಸತ್ಯ! ಜೀವರನ್ನು ನಿರಂತರ ಬೇಟೆಯಾಡುತ್ತಿರುವ ಸನಾತನ ಬೇಟೆಗಾರ! ಹಸಿದ ಗಾಳಿಗಳೂ ಅಲೆ—ಉಬ್ಬರಗಳೂ ನಿನ್ನ ಪುಟ ನೆಗೆತಗಳು. ನಿನ್ನ ಎಲ್ಲೆಕಟ್ಟುಗಳು.

ಗಾಳಿಯು ತಮಗೆ ವಿರುದ್ಧವಾದುದರಿಂದ ಶಿಷ್ಯರೆಲ್ಲಾ ಅತ್ಯಾತುರದಿಂದ ಹುಟ್ಟು ಹಾಕಿ ದೋಣಿಯನ್ನು ಸಾಗಿಸುತ್ತಿರುವದನ್ನೂ ಮೈಮುರಿದು ಹೆಣಗಾಡುತ್ತಿರುವದನ್ನೂ ಆರಾಧನಾ ಮಂದಿರದ ಮುಂದ ಪ್ರಕಾಶದಲ್ಲಿ ಗುರುವು ನೋಡಿದನು. ಆದರೆ ಆ ಹೆಣ ಗಾಟವೂ ಹೋರಾಟವೂ ಗುರುವಿಗಿರಲಿಲ್ಲ. ಪ್ರಕ್ಷುಬ್ಧವಾದ ಆ ಸಮುದ್ರ ತರಂಗಗಳ ಮೇಲೆ ನಡೆದು ಹೋಗಬಲ್ಲ ಗುರುವು ಆ ಭೀಕರವಾದ ಚಂಡಮಾರುತನ ಮಧ್ಯದಲ್ಲಿ

ಮಡಿಲಲ್ಲಿ—ಏಕೆ ನಿಶ್ಚಿಂತೆಯಿಂದ ಮಲಗಿ ನಿದ್ರಿಸಬಾರದು? ಓ! ಆನಂದವೇ ಆನಂದ! ನನ್ನ 'ಪ್ರಭು' ಪ್ರೇಮವು ಬಿರುಗಾಳಿಗಳನ್ನೂ ಬೆಟ್ಟದಂಥ ತೆರೆಗಳನ್ನೂ ಸವಾರಿ ಮಾಡುತ್ತದೆ.

ಜಪಾನಿನಲ್ಲಿ ಮುನ್ನೂರು ವರ್ಷಗಳ ವಯಸ್ಸಿನ ದೇವದಾರು ಪೀತದಾರು [pine] ಮರಗಳನ್ನು ನೀರುಳ್ಳಿ ಗಿಡದಷ್ಟು ಕುಳ್ಳಗೆ ಮಾಡಿ ಇಟ್ಟುಕೊಂಡಿದ್ದಾರೆ. ಹೊರಗಡೆಯ ಬೆಳವಣಿಗೆಯನ್ನು ಕುಗ್ಗಿಸುವದರಿಂದಲೇ? ಇಲ್ಲ, ಅವುಗಳ ಒಳಗಿನ ಬೇರುಗಳನ್ನು ಕತ್ತರಿಸುವದರಿಂದ, ಭೂಮಿಯೊಳಗೆ ಆಳವಾಗಿ ಬೇರುಗಳನ್ನು ಇಳಿಸುವದಕ್ಕೆ ಅವಕಾಶ ಕೊಡದೇ ಇರುವದರಿಂದ ಅವುಗಳು ಸ್ವಾಭಾವಿಕವಾಗಿ ಮೇಲೆ ಎತ್ತರವಾಗಿ ಚಿಮ್ಮಿ ಬೆಳೆಯಲಾರವು. ಹಾಗೆಯೇ ಅಸ್ವಾಭಾವಿಕವಾದ ಶಿಕ್ಷಕರಿಂದ ಸ್ತ್ರೀ ಪುರುಷರ ಸ್ವಾಭಾವಿಕ ಬೆಳವಣಿಗೆಯು ಕುಂಠಿತವಾಗುತ್ತದೆ.

ಮೂರ್ಖ ನೀತಿಬೋಧಕರೆ! ಧಾರ್ಮಿಕ ಪಿಶಾಚಿಗಳೆ! ಕೈ ತೆಗೆಯಿರಿ! ಹೊಸ ಯುವಜನರಿಗೆ ಬೋಧಿಸುವ, ವಿಧಿಸುವ ಅಧಿಕಾರ ನಿಮಗಿಲ್ಲ. ಸೇವಿಸುವದಕ್ಕೆ ಮಾತ್ರ ಯಾರಿಗಾದರೂ ಅಧಿಕಾರವಿದೆ. ಪ್ರಕೃತಿಗೇ ನಾವು ಪೂರ್ಣ ಸ್ವಾತಂತ್ರ್ಯವನ್ನುಕೊಟ್ಟರೆ, ಅದು ಎಂದಿಗೂ ತಪ್ಪು ಮಾಡುವದಿಲ್ಲ. ಅತ್ಯಂತ ನಣ್ಣದಾದ ಚಲ ಜೀವಾಣುವಿನಿಂದ ದಿವ್ಯವಾದ ಮಾನವರೂಪದವರೆಗೆ ವಿಕಾಸವನ್ನು ಬೆಳೆಸಿದ ಪ್ರಕೃತಿ ನಿಯಮವನ್ನು ಅಥವಾ ದೇವರನ್ನು ನಾವು ಖಂಡಿತವಾಗಿಯೂ ನಂಬಬಹುದು. ಮಾನವನು ಅಸೂಯೆಯಿಂದ ಕರೆದಿರುವ ಪಶುಕಾಮವೆಂಬದನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದರಲ್ಲಿ ವನ ಕರುಗಳೂ ಬೇರೆ ಪ್ರಾಣಿಗಳೂ ಏಕೆ ಹೆಚ್ಚು ನಿಯಮಶೀಲವಾಗಿಯೂ ನಿರ್ಮಲವಾಗಿಯೂ ಉತ್ತಮ ವರ್ತನೆಯುಳ್ಳವುಗಳಾಗಿಯೂ ಇವೆ? "ನೀನು ಹೀಗೆಯೇ ಮಾಡಬೇಕು", "ನೀನು ಹೀಗೆಂದೂ ಮಾಡಬಾರದು" ಎಂದು ಆ ಪಶು ಪ್ರಾಣಿಗಳನ್ನು ಯಾರೂ ಪೀಡಿಸುವದಿಲ್ಲವೆಂಬದೇ ಸರಳವಾದ ಕಾರಣ. ಸೇವೆ ಮತ್ತು ಪ್ರೇಮ ಇವೇ ಉತ್ತಮವಾದ ಬೆಳವಣಿಗೆಗೆ ಹಿತವಾದ ವಾತಾವರಣವನ್ನು ಕಲ್ಪಿಸುವದೇ ಹೊರತು ವಿಧಿಗಳೂ ಆಜ್ಞೆಗಳೂ ನಿರ್ಬಂಧಗಳೂ ಅಲ್ಲ.

ಹೂವುಗಳು ಬೆಳೆಯುವಂತೆ ಹೇಗೆ ಮಾಡಬೇಕು? ಅವನ್ನು ಪ್ರೇಮಿಸುವದರಿಂದ ಹೆಂಗಸೊಬ್ಬಳು ಸುಂದರವಾದ ಹೂವುಗಳನ್ನು ಅವುಗಳಿಗೆ ಅತ್ಯಂತ ಅಹಿತವಾದ ಹವಾಮಾನದಲ್ಲಿ ಬೆಳೆಸಿದಳು. ಅದು ಹೇಗೆ ಸಾಧ್ಯವಾಯಿತೆಂದು ಆಶ್ಚರ್ಯದಿಂದ ಆಕೆಯನ್ನು ಒಬ್ಬರು ಕೇಳಿದರು. "ಅವುಗಳನ್ನು ನಾನು ಪ್ರೀತಿಸಿದೆ; ಉತ್ತಮವಾಗಿ ಬೆಳೆಸುವದಕ್ಕೆ ಉಪಾಯಗಳು ತಾವಾಗಿಯೇ ಹೊಳೆದವು" ಎಂದಳು. ಪ್ರೀತಿಯ ಉಲ್ಲಾಸಕರವಾದ ಶಾಖವೊಂದೇ (ಹಕ್ಕಿಯ ಮೊಟ್ಟೆಗಳಿಂದ ಮರಿಮಾಡುವ) ಕೃತಕ ಶಾಖೋಪಕರಣ (ಕಾವು, ಪೆಟ್ಟಿಗೆ). ಪ್ರೇಮವು ಉದ್ಯೋಗಗಳನ್ನೂ ಕೈಗಾರಿಕೆಗಳನ್ನೂ

ಕಲಾಪೂರ್ಣವಾಗಿ ಮಾಡುವದಲ್ಲದೆ ಕೆಲಸದಲ್ಲಿ ಸೌಂದರ್ಯವನ್ನು ತರುತ್ತದೆ. ಪ್ರೇಮವನ್ನು ಆಸಕ್ತಿ ಎಂದು ತಪ್ಪು ತಿಳಿಯಬಾರದು. ನಿಮ್ಮ ಹೆಂಡತಿ, ಮಕ್ಕಳು ನಿಮ್ಮ ಪ್ರೀತಿಗೆ ಸುತ್ತಲೂ ಆವರಣ ಕಲ್ಪಿಸುವ ಬೇಲಿಗಳಾಗದೆ ಇಡೀ ಜಗತ್ತಿಗೆ ಪ್ರೇಮವನ್ನು ಪ್ರಸರಣ ಮಾಡುವ ಕೇಂದ್ರವಾಗಬೇಕು. "ನಾನು ನನ್ನ ಕುಟುಂಬವನ್ನು ನನ್ನ ವ್ಯಕ್ತಿಗಿಂತಲೂ ಹೆಚ್ಚು ಪ್ರೀತಿಸುತ್ತೇನೆ; ನನ್ನ ದೇಶವನ್ನು ಕುಟುಂಬಕ್ಕಿಂತಲೂ—ಹೆಚ್ಚಾಗಿ ಪ್ರೀತಿಸುತ್ತೇನೆ; ಮತ್ತು ಇಡಿಯ ಪ್ರಪಂಚವನ್ನು ನನ್ನ ದೇಶಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ" ಎಂದು ಜೀನ್‌ಪಾಲ್ ರಿಚರ್ [Jean Paul Richter] ಹೇಳಿದ್ದಾನೆ.

ಯುದ್ಧಕ್ಕೆ ಹೋಗುವಾಗ ಲೌಲೇಸನು [ Lovelace ] ಲೂಕ್ಯಾಸ್ಟರಿಗೆ [ Lucaster ] ಹೇಳಿರುವ ಮಾತು ಎಷ್ಟು ಉದಾತ್ತವಾಗಿವೆ?— "ಪ್ರಿಯೆ! ನಾನು ನಿನ್ನನ್ನು ಅಷ್ಟೊಂದು ಪ್ರೀತಿಸಲು ಸಾಧ್ಯವಾಗಲಿಲ್ಲ. ಏಕೆಂದರೆ, ನನ್ನ ದೇಶವನ್ನು ನಾನು ಇನ್ನೂ ಹೆಚ್ಚಾಗಿ ಪ್ರೀತಿಸಲಿಲ್ಲವೆ?"

ನಿಜವಾದ ಪ್ರೇಮವು, ಸೂರ್ಯನಂತೆ, ಆತ್ಮವನ್ನು ವಿಕಾಸಗೊಳಿಸುತ್ತದೆ. ಹಿಮದಂತೆ ಮೋಹವು ಆತ್ಮವನ್ನು ಗೆಡ್ಡೆ ಕಟ್ಟಿಸಿ ಸಂಕುಚಿತಮಾಡುತ್ತದೆ.

"ನಿಮಗೆ ಪ್ರೇಮದ ಹೊರತು ಬೇರೆ ದೇವರು ಇಲ್ಲದಿರಲಿ" ಎನ್ನುವದೇ ಮೋಸೆಸ್ಸನ ಮೊದಲನೆಯ ನಿಯಮ. ಈ ಅಸೂಯಾಪರನಾದ ಪ್ರಭು 'ಪ್ರೇಮ'ವು ಕಾಮ—ಮೋಹಗಳ ಮೂರ್ತಿಗೆ ತನ್ನ ಭವ್ಯ ಸಿಂಹಾಸನವನ್ನು ಆಕ್ರಮಿಸಲು ಅವಕಾಶ ಕೊಡುವದಿಲ್ಲ.

ತಾಯಿಯೊಬ್ಬಳು ಬಂದು ತನಗಿದ್ದ ಒಂದೇ ಮಗುವು ಸತ್ತು ಹೋಯಿತೆಂದು ಗೋಳಾಡಿದಳು. "ನೀನು ಒಂದು ನೀಗ್ರೋ ಮಗುವನ್ನು ದತ್ತು ತೆಗೆದುಕೊಂಡು, ನಿನ್ನ ಸ್ವಂತ ಮಗುವಿನಂತೆ ಅದನ್ನು ಮುದ್ದಿಸಿ ಬೆಳೆಸಬಲ್ಲೆಯಾ? ನೀನು ಅದಕ್ಕೆ ಸಿದ್ಧಳಾಗಿದ್ದೀಯ?" ಎಂದು ರಾಮನು ಆಕೆಯನ್ನು ಕೇಳಿದನು. ಆಕೆ "ಇಲ್ಲ, ಅದೆಂದೂ ಸಾಧ್ಯವಲ್ಲ" ಎಂದಳು. "ಅದಕ್ಕಾಗಿಯೇ ನೀನು ನಿನ್ನ ಮಗುವನ್ನು ಕಳೆದು ಕೊಂಡೆ" ಎಂದು ರಾಮನು ಹೇಳಿದನು. ಸ್ವರ್ಗಸುಖವನ್ನು ತೆರೆದು ತೋರುವದು ಎಲ್ಲವನ್ನೂ ಒಳಗೊಳ್ಳುವ ಪ್ರೇಮವೇ ಹೊರತು, ತನ್ನ ಮಮತೆಯ ವಸ್ತುವನ್ನು ಹೊರತು ಮಿಕ್ಕ ಎಲ್ಲವನ್ನೂ ಹೊರಹಾಕುವ ಮೋಹವಲ್ಲ, ಆಸಕ್ತಿಯಲ್ಲ.

ಜನರು ಇತರರ ಕೃತಘ್ನತೆಯ ವಿಷಯದಲ್ಲಿ ಆಕ್ಷೇಪ ಮಾಡುತ್ತಾರೆ. ಮಾಡಿದ ಅಲ್ಪಸ್ವಲ್ಪ ಸಹಾಯಕ್ಕಾಗಿ ಬಹಳ ಹೆಚ್ಚಿನ ದುಬಾರಿ ಬಡ್ಡಿಯನ್ನು ಕಿತ್ತುಕೊಳ್ಳಲು ಪ್ರಯತ್ನ ಪಡುವ 'ಷೈಲಾಕ್' ಜನರು. ಶಾಂತಿ! ಅಲ್ಪ ಗೊಣಗಾಟಗಾರರೆ! ದೇವರಿಗೆ ಒಂದೇ ಕೈ ಇಲ್ಲ. ಎಲ್ಲಾ ಕೈಗಳೂ ಅವನವೇ. ಎಲ್ಲಾ ಕಣ್ಣುಗಳೂ ದೇವರ ಕಣ್ಣುಗಳೇ;

ಎಲ್ಲಾ ಮನಸ್ಸುಗಳೂ ಅವನ ಮನಸ್ಸುಗಳೇ. ಯಾರೊಡನಾದರೂ ನೀವು ವ್ಯವಹಾರ ಮಾಡುವಾಗ ಒಬ್ಬ ಮನುಷ್ಯನು ತೆಗೆದುಕೊಂಡ ಕೈಯಿಂದಲೇ ಹಿಂದಿರುಗಿ ಕೊಡುವನೋ ಹೇಗೆಂಬದನ್ನು ಎಚ್ಚರಿಕೆಯಿಂದ ಗಮನಿಸಿದ್ದೀರಾ? ಅವನು ಕೊಡುವಾಗ ಇನ್ನೊಂದು ಕೈಯನ್ನು ಉಪಯೋಗಿಸಬಹುದು. ಅದರಿಂದೇನು? ನಿಮ್ಮ ಗಿರಾಕಿಯು ಕೈಯಲ್ಲ; ಆದರೆ ಕೈಯನ್ನು ಉಪಯೋಗಿಸುವ ಯಜಮಾನನು.

ಹಾಗೆ, ನಿಜವಾಗಿಯೂ ನಿಮ್ಮ ಕಾರ್ಯವಿರುವದು ದೇವರ [ನಿಯಮದ] ಹತ್ತಿರ; ಶತ್ರುಗಳಾಗಿಯೋ ಮಿತ್ರರಾಗಿಯೋ ಕಾಣುವ ಕೇವಲ ನಾಮರೂಪಗಳೊಡನೆ ಅಲ್ಲ. ತನ್ನ ಸಾಲವನ್ನು ತೀರಿಸುವ ಕರ್ತವ್ಯದಲ್ಲಿ ದೇವರು ಎಂದಿಗೂ ಎಚ್ಚರ ತಪ್ಪುವವನಲ್ಲ. ಯಾವ ನಿಸ್ವಾರ್ಥವಾದ ಕಾರ್ಯವಾದರೂ ದೇವರನ್ನು ಋಣದಲ್ಲಿ ಹಾಕುತ್ತದೆ. ತೆಗೆದು ಕೊಳ್ಳುವಾಗ ಉಪಯೋಗಿಸಿದ ಕೈಯಿಂದಲೇ ಅವನು ಕೊಡದಿರಬಹುದು. ಆದರೆ ಬೇರೆ ಕೈಯಿಂದ [ವ್ಯಕ್ತಿಯಿಂದ] ಅವನು ಬಡ್ಡಿ ಸಹಿತವಾಗಿ ನೀಡುತ್ತಾನೆ.

ಸ್ವಸ್ಥತೆಯಿಲ್ಲದ ನಾಸ್ತಿಕನೆ! ಏಕೆ ಚಡಪಡಿಸುತ್ತಿ, ತಳಮಳಿಸುತ್ತಿ? ವಿಶ್ವದ ಮೇಲೆ ನಿನ್ನ ಮಧುರವಾದ ಆತ್ಮಕ್ಕೆ [ದಿವ್ಯ ನಿಯಮಕ್ಕೆ] ಹೊರತು ಬೇರೆ ಯಾರಿಗೂ ಪ್ರತ್ಯೇಕವಾದ ಪ್ರಭುತ್ವವಿಲ್ಲ.

## ವಿಗ್ರಹಾರಾಧನೆ ಯಾವದು?

ಶತ್ರು–ಮಿತ್ರರ ನಾಮರೂಪಗಳಿಗೆ ವ್ಯಕ್ತಿ ಭಾವನೆಯನ್ನೂ ಪ್ರತ್ಯೇಕ ಅಸ್ತಿತ್ವವನ್ನೂ ಸತ್ಯತೆಯನ್ನೂ—ಅವುಗಳ ಮುಸುಕಿನಲ್ಲಿರುವ ಅಮೂರ್ತವೂ ಅವಿಭಕ್ತವೂ ಆದ ನಿಜವಾದ ಆತ್ಮನನ್ನು ಅಥವಾ ನಿಯಮವನ್ನು ಮರೆಯುವಷ್ಟು ದೂರ–ಕೊಡುವದೇ ಮೂರ್ತಿಪೂಜೆ ಅಥವಾ ವಿಗ್ರಹಾರಾಧನೆ.

ಕಾಡುಗಳು, ಪ್ರಕೃತಿ ಸೌಂದರ್ಯಗಳು, ನದಿಗಳು, ಸರೋವರಗಳು ಹಸಿರು ಬೆಟ್ಟಗಳು— ಇವುಗಳ ನೋಟವು ಸ್ಫೂರ್ತಿಯನ್ನು ಕೊಡುವದೂ ಮನಸ್ಸನ್ನು ಮೇಲೆತ್ತುವದೂ ಆಕರ್ಷಿಸುವದೂ ಆನಂದೋನ್ಮಾದವನ್ನು ಉಂಟುಮಾಡುವದೂ ಏಕೆ? ಏಕೆ? ಏಕೆಂದರೆ ಅದು ಪರಿಮಿತ ವ್ಯಕ್ತಿತ್ವದ ಭಾವನೆಯನ್ನು ಕಳೆಯುತ್ತದೆ; ಜನಭರಿತವಾದ ರಸ್ತೆಗಳಲ್ಲಿ ನಮ್ಮನ್ನು ಹೊರೆಯಾಗಿ ಹತ್ತಿಕ್ಕುವ ನಮ್ಮ ರೋಗವನ್ನೆಲ್ಲಾ ಅದು ತೆಗೆದು ಹಾಕುತ್ತದೆ. ದಿವ್ಯವಾದ ವೃಕ್ಷಗಳೂ ಪ್ರಿಯಕರವಾದ ಜಲವೂ ತಮ್ಮ ಮೃದು ಸ್ವಭಾವದಿಂದ—ಅಲ್ಲ—ಮಧುರ ಸ್ವಭಾವದಿಂದ ನಮ್ಮ ಮೇಲೆ ಅಲ್ಪತೆಯ ಭಾವನೆಯನ್ನೇನೂ ಒತ್ತಾಯದಿಂದ ಹೊರಿಸುವದಿಲ್ಲ.

ಗುಲಾಬಿಯ ತೋಟದಲ್ಲಿಯೂ ದೇವದಾರುವಿನ ತೋಪಿನಲ್ಲಿಯೂ ಸ್ಫೂರ್ತಿಯನ್ನು ಕೊಡುವ ಅಪೂರ್ವವಾದ ಪ್ರಾಣಶಕ್ತಿಯ ಉಸಿರನ್ನೇ ಸ್ತ್ರೀ ಪುರುಷರ ಗುಂಪುಗಳಲ್ಲಿಯೂ ನೋಡುವದರಿಂದ ಇಡಿಯ ಜಗತ್ತನ್ನು ಸ್ವರ್ಗದ ನಂದನ ವನವನ್ನಾಗಿ ಪರಿವರ್ತಿಸುವ ಪುಣ್ಯವಂತರೇ ನಿಜವಾದ ಸುಖಿಗಳಾಗಿರುತ್ತಾರೆ.

## -ಉರಿಯುತ್ತಿರುವ ವಿಶ್ರಾಂತಿ.

ದುಂದುಗಾರಿಯಾದ ಪ್ರಕೃತಿಯಿಂದ ಪ್ರತಿನಿತ್ಯವೂ ಲಕ್ಷಾಂತರ ಖನಿಜಗಳೂ ಸಸ್ಯಗಳೂ ಪ್ರಾಣಿಗಳೂ ವ್ಯರ್ಥವಾಗಿ ಪೋಲಾಗುತ್ತಿವೆ. ಒಳ್ಳೆಯದು, ಆಗಲಿ. ಪ್ರಕೃತಿಯೂ ರಾಮನೂ ಲಕ್ಷಾಂತರ ಜೀವಗಳನ್ನೂ ಸಂಪತ್ತುಗಳನ್ನೂ ಪ್ರತಿಘಳಿಗೆಯಲ್ಲಿಯೂ ದುಂದು ವೆಚ್ಚದಿಂದ ಹಾಳುಮಾಡಲು ಶಕ್ತರಾಗಿರುತ್ತಾರೆ. ವಸ್ತುವು ಎಲ್ಲಿ ನಷ್ಟವಾಗುತ್ತದೆ? ಅದು ಎಲ್ಲಿ ಹೋದರೂ ನನ್ನಲ್ಲಿಯೇ ಇರುತ್ತದೆ. ಪ್ರಾಚೀನ ಭಾರತದ ಅಪಾರವಾದ ಐಶ್ವರ್ಯವು ಹಿಂದೆ ನನ್ನ ಎಡಗೈಯಿನ ಜೇಬಿನಲ್ಲಿತ್ತು; ಈಗ ಅದೆಲ್ಲಾ ಇಂಗ್ಲೆಂಡಿನಿಂದ ಶೋಷಿಸಲ್ಪಟ್ಟಿರುವದರಿಂದ ನನ್ನ ಬಲಗೈ ಜೇಬಿನಲ್ಲಿದೆ. ನಾನೇ ಸಮುದ್ರವಾಗಿರುವದರಿಂದ ಉಬ್ಬರವಿಳಿತಗಳೆರಡೂ ನನ್ನವೇ. ವಿರೋಧವನ್ನೂ ಪ್ರತೀಕಾರ ಭಾವನೆಯನ್ನೂ ಬೆಳೆಸುವದರಿಂದ ಯಾವ ಒಳಿತೂ ಆಗಲಾರದು. ಆದರೆ ನಿಮ್ಮ ಭಾಗದ ಪ್ರೇಮವನ್ನು ತೋರಿಸುವದರಿಂದ 'ಪ್ರೇಮವು ಸಮಸ್ತವನ್ನೂ ಜಯಿಸುತ್ತದೆ' ಎನ್ನುವದು ದುಡುಕಿ ಆಡಿದ ಅರ್ಥವಿಲ್ಲದ ಮಾತಲ್ಲ. ತನ್ನ ಸ್ವಂತವೆಂದು ಮಾಡಿಕೊಳ್ಳುವದು ವ್ಯಮೋಹಿತದ ದುಡುಮೆಯಿಂದ ಸಂಗ್ರಹಿಸಿದ್ದನ್ನು ಒಳಕೊಳ್ಳುವದರಿಂದ ಅಲ್ಲ. "ಕರ್ಪೂರ, ಕರ್ಪೂರ, ನಿನ್ನನ್ನು ನಾನು ಸ್ವಾಧೀನ ಪಡಿಸಿಕೊಂಡು ನನ್ನ ಸ್ವಂತವನ್ನಾಗಿ ಮಾಡಿಕೊಳ್ಳುತ್ತೇನೆ. ಇಲ್ಲಿಯೇ ಇರು" ಎಂದು ಆಜ್ಞೆ ಮಾಡುವದರಿಂದ ಒಂದು ಚೂರು ಕರ್ಪೂರವನ್ನು ಸಹ ಇಟ್ಟುಕೊಳ್ಳಲಾರೆವು. ಆದರೆ ಪ್ರೇಮದ ಮೂಲಕವಾಗಿ ಇಡೀ ಜಗತ್ತನ್ನು "ನನ್ನದೇ, ನನ್ನ ಸ್ವಂತವಾದುದೇ" ಎಂದು ಮಾಡಿಕೊಳ್ಳಬಹುದು. ಪ್ರೇಮ ಒಂದರಿಂದಲೇ ನ್ಯಾಯವಾದ ಸ್ವಕೀಯತ್ವವನ್ನು ಸಾಧಿಸಿಕೊಳ್ಳಬಹುದು. ಮಿಕ್ಕ ಎಲ್ಲಾ ಸ್ವಾಮಿತ್ವವೂ—ಮನುಷ್ಯನ ಸ್ವಾರ್ಥಪರವಾದ ಒಲವಿನಿಂದ ನ್ಯಾಯವಾದುದೆಂದು ಹೇಳಿ ಕೊಂಡರೂ—ದೈವಿಕ ನಿಯಮವನು ಮುರಿಯುವದರಿಂದ ಕಳ್ಳತನವೂ ದರೋಡೆಯೂ ಆಗುತ್ತದೆ.

ಪರ್ಷಿಯಾ ದೇಶವನ್ನು ಗೆದ್ದು ತೊಂಬತ್ತು ಸಹಸ್ರ ಮನುಷ್ಯ ತಲೆಗಳ ಗೋಪುರದಿಂದ ವಿಜಯೋತ್ಸವವನ್ನು ಮಾಡಿದ ದುಷ್ಟ ತೈಮೂರನು, ತನ್ನ ಪ್ರಸಿದ್ಧ "ಅಗರ್ ಆನ್ ಟರ್ಕ್—ಇ—ಷಿರಾಜಿ", ಇತ್ಯಾದಿ ಗೀತೆಯನ್ನು ಬರೆದಿದ್ದ ಹಫೀಜ್ ಕವಿಯನ್ನು ತನ್ನ ಎದುರಿನಲ್ಲಿ ಕರೆತರಲು ಆಜ್ಞೆ ಮಾಡಿದನು.

"ಷಿರಾಜಿನ ಆ ತುರುಕನು ನನ್ನ ಹೃದಯವನ್ನು ಸೂರೆ ಮಾಡಿದರೆ."

"ಆ ಪ್ರಿಯ ಪೀಡೆಯ ಮುಖದ ಮೇಲಿನ ಕಪ್ಪು ಮಚ್ಚೆಗಾಗಿ ಸಮರ್‌ಕಂದ್ ಮತ್ತು ಬುಖಾರಾ ನಗರಗಳನ್ನು ಕೊಟ್ಟು ಬಿಡಬಲ್ಲೆ" ಎಂದು ಅವನ ಕವಿತೆಯಲ್ಲಿ ಬರೆದಿದ್ದನು.

"ನಿನ್ನ ಪ್ರೇಯಸಿಗೆ ನನ್ನ ಎರಡು ಅತ್ಯಂತ ದೊಡ್ಡ ನಗರಗಳನ್ನು ದಾನಮಾಡಲು ಧೈರ್ಯಮಾಡಿದ ಮನುಷ್ಯನು ನೀನೇ ಏನಯ್ಯ ?" ಎಂದು ತೈಮೂರನು ಸಿಟ್ಟಿನಿಂದ ಗದರಿಸಿ ಕೇಳಿದನು.

"ಹೌದು, ಮಹಾಪ್ರಭು, ಮತ್ತು ಅಂಥಾ ಔದಾರ್ಯದ ಕಾರ್ಯಗಳಿಂದಲೇ ನಾನು ಸರ್ವಸ್ವವನ್ನೂ ಕಳೆದುಕೊಂಡಿದ್ದೇನೆ" ಎಂದು ಆ ಕವಿಯು ನಿರ್ಭೀತಿಯಿಂದ ಹೇಳಿದನು.

ಆ ಕವಿಯು ನಿಜವನ್ನು ಹೇಳಲಿಲ್ಲ. ಅವನು ಆ ವಿಷಯವನ್ನು ಈ ರೂಪದಲ್ಲಿ ಹೇಳಬೇಕಾಗಿತ್ತು: "ಪ್ರೇಮಕ್ಕಾಗಿ ಸಕಲವನ್ನೂ ಸಮರ್ಪಿಸಿದ್ದರಿಂದ ಇಹಲೋಕ—ಪರಲೋಕ, ಈ ಎರಡು ಲೋಕಗಳನ್ನೂ ದಾನಮಾಡಿ ಬಿಡುವಷ್ಟು ಐಶ್ವರ್ಯವನ್ನು ತಂದಿದ್ದೆ. ಆದರೆ ಓ, ಪೀಡಕ ಪ್ರಭುವೆ ! ಹೆಚ್ಚು ಹೆಚ್ಚಾಗಿ ಸಂಪಾದಿಸಬೇಕೆಂಬ ನಿನ್ನ ದುರಾಶಾಜ್ವರದಿಂದ ನಿನ್ನ ಕಾಲನ್ನೂ ಕಳೆದುಕೊಂಡು, ಸಮಾಧಾನವನ್ನೂ ಕಳೆದುಕೊಂಡೆ. ಆದರೆ, ನಾಳೆ ನಿನ್ನನ್ನು ಹೂಳುವದಕ್ಕೆ ಸಹ ನಿನಗೆ ಭೂಮಿ ಉಳಿಯಲಾರದು. ಒಬ್ಬ ಮನುಷ್ಯನು ಎಷ್ಟು ತ್ಯಾಗಮಾಡಬಲ್ಲನೋ ಅವನು ಅಷ್ಟು ಐಶ್ವರ್ಯವಂತನೆಂದು ಹೇಳಬಹುದು."

ಎಲ್ಲಾ ದೈವಪ್ರೇರಿತ ಧರ್ಮೋಪದೇಶಕರಿಗೂ ಕವಿಗಳಿಗೂ, ಕಲೆಯಲ್ಲಿಯೂ ವಿಜ್ಞಾನದಲ್ಲಿಯೂ ಶ್ರಮಿಸುವ ಸಂಶೋಧಕರಿಗೂ ನೂತನ ನಿರ್ಮಾಪಕರಿಗೂ, ತತ್ತ್ವಶಾಸ್ತ್ರದ ಕನಸುಗಾರರಿಗೂ ಪ್ರೇಮವೇ ಸ್ಫೂರ್ತಿಮೂಲವಾಗಿದೆ. ಆದರೆ, ಅದು ಕೆಲವು ಸಂದರ್ಭಗಳಲ್ಲಿ ಮಾತ್ರ ಹೆಚ್ಚು ಸ್ಪಷ್ಟವಾಗಿದೆ. ಕೃಷ್ಣ, ಚೈತನ್ಯ, ತುಲಸೀದಾಸ, ಷೇಕ್ಸ್‌ಪಿಯರ್, ಜೀಸಸ್, ರಾಮಕೃಷ್ಣ ಮೊದಲಾದವರು ಪ್ರೇಮದಿಂದ ಎಷ್ಟು ಕಾತರರಾಗಿದ್ದರೋ ಅಷ್ಟು ಸ್ಫೂರ್ತಿಯನ್ನು ಪಡೆದರು.

ಎಲ್ಲಾ ಬಗೆಯ ವಿಷಯಾಸಕ್ತಿ—ಇಂದ್ರಿಯ ಲೋಲುಪತೆಗಳಿಂದ ನಿರ್ಮುಕ್ತವಾದ ಪ್ರೇಮವೇ ಆಧ್ಯಾತ್ಮಿಕ ಜ್ಞಾನಪ್ರಕಾಶವಾಗಿದೆ.

ಪ್ರೇಮ ಅಥವಾ ತತ್ತ್ವಮಸಿ; ದೃಷ್ಟಿ ಬಿದ್ದಲ್ಲೆಲ್ಲಾ—ಅದೇ ನೀನು ಎನ್ನುವ ಅವರ ಸ್ಫೂರ್ತಿಯ ನಿಜವಾದ ಗುಟ್ಟನ್ನು ಜನರಿಗೆ ತಿಳಿಸುವಷ್ಟು, ಬೆಳಕಾಗಲೀ ಧೈರ್ಯವಾಗಲೀ ಆ ಪ್ರವಾದಿಗಳಲ್ಲಿಯ ಹೇಡಿಗಳಿಗೆ ಯಾವಾಗಲೂ ಇರಲಿಲ್ಲ.

ಜನರು ಗ್ರಹಗಳಂತೆ ಧರ್ಮೋಪದೇಶಕ ಸೂರ್ಯನಿಂದ ಆಕರ್ಷಿಸಲ್ಪಟ್ಟು ಉಚ್ಛೃಂಖಲ ಉತ್ಸಾಹದಿಂದ ಅವನೆಡೆಗೆ ಧಾವಿಸುತ್ತಾರೆ. ಪ್ರೇಮದ ಈ ಅಭಿವ್ಯಕ್ತತೆಯಲ್ಲಿ ಅವರು ದೈವಾವೇಶವುಳ್ಳ ಧರ್ಮೋಪದೇಶಕರೇ. ಆದರೆ ಕೆಲವು ಕಾಲದ ಅನಂತರ ಕೇಂದ್ರದಿಂದ ಹೊರಕ್ಕೆ ಚಿಮ್ಮುವ [ಕೇಂದ್ರಾಪಗಾಮಿ] ಶಕ್ತಿಯು ಅಥವಾ ಆಧ್ಯಾತ್ಮಿಕ ಜಡತೆಯು, ಕೇಂದ್ರಸೂರ್ಯನಿಂದ ದೂರವಾಗಿ, ಅವರು ಬೇರೆ ಬೇರೆ ಮತ ಪಂಥಗಳ ಪಥಗಳಿಗೆ ಕಟ್ಟುಬಿದ್ದು ತಮ್ಮ ತಮ್ಮ ಮತಗಳೇ ಶ್ರೇಷ್ಠವೆಂಬ ಉನ್ಮತ್ತಾಭಿಮಾನದಿಂದ ಸುತ್ತಲೂ ತಿರುಗುತ್ತಿರುವಂತೆ ಮಾಡುತ್ತದೆ. ಕೆಲವರು ಕೇಂದ್ರ ಸತ್ಯದಿಂದ ಬಹಳ ದೂರದ ಪಥದಲ್ಲಿ ಸುತ್ತುತ್ತಿರುತ್ತಾರೆ. ಇತರರು ಸುತ್ತುವ ಪಥಗಳು ಹೆಚ್ಚು ಸಮೀಪ ಸಮೀಪವಿರುತ್ತವೆ. ರಾಮನು ಈ ಧಾರ್ಮಿಕ ಸೌರವ್ಯೂಹದ ಸುಖವನ್ನು ಅನುಭವಿಸುತ್ತಾನೆ. ಆದರೆ, ಉಪನಿಷತ್ತೆಂಬ [ಪ್ರಕಾಶಗಳಿಗೆಲ್ಲಾ ಪ್ರಕಾಶವಾದ] ಮಹಾ ಪ್ರಕಾಶದಲ್ಲಿ [ಉಪ] ಸಮೀಪ, ಸಮೀಪಗತವಾಗುತ್ತಾ ನಿಜವಾಗಿಯೂ [ನಿ] ನಾನು—ನೀನು, ನನ್ನದು—ನಿನ್ನದು ಎಂಬ ಎಲ್ಲಾ ನ್ಯಾಮ್ಯದ ಮತ್ತು ಸ್ವತ್ತಿನ ಭಾವನೆಯೂ [ಷದ್] ನಾಶವಾಗಿ. ಕ್ಷುದ್ರವಾದ ಅಹಂಕಾರವು [ಜೀವವು] ಸುಟ್ಟುಹೋಗುವ ದೀಪದ ಹುಳುವಿನ ಪಾತ್ರವನ್ನು ಆಚರಿಸುವದಕ್ಕೆ ಯಾರು ಲಕ್ಷ್ಯಮಾಡುತ್ತಾರೆ? ತತ್ತ್ವಮಸಿ; ಅದೇ ನೀನಾಗಿದ್ದಿ.

ನಾಗರಿಕತೆಯ ನವವಿಭವೋದ್ಧತರೆ! ನಿಮ್ಮ ವಿಜ್ಞಾನಗಳಿಗೂ ಕಲೆಗಳಿಗೂ ನಾವು ಅವಕಾಶ ಕೊಡುತ್ತೇವೆ; ಆದರೆ ಅವುಗಳನ್ನು ದಯವಿಟ್ಟು ಅತಿಯಾಗಿ ಮುಂದೊತ್ತಬೇಡಿ. ಪ್ರಪಂಚದ ವಿಜ್ಞಾನಗಳೆಲ್ಲಾ ಗ್ರಹೋಪಗ್ರಹಗಳಂತೆ ಯಾವ ಸೂರ್ಯನ ಸುತ್ತಲೂ ಸುತ್ತಬೇಕೋ ಆ ಸೂರ್ಯನೇ ಪ್ರಭುವಾದ ಪ್ರೇಮ.

ಭೂವಿಜ್ಞಾನ ಶಾಸ್ತ್ರವು ಮನುಷ್ಯನಿಂದ ಬಹಳ ದೂರವಿರುವ ಧಾತು—ಲೋಹ—ಪಾಷಾಣಗಳ ವಿಷಯವನ್ನು ವಿಚಾರಮಾಡುತ್ತದೆ. ಸಸ್ಯವಿಜ್ಞಾನ ಶಾಸ್ತ್ರವು ಧಾತು—ಲೋಹಾದಿಗಳಿಗಿಂತಲೂ ಸ್ವಲ್ಪ ಮೇಲಾದ ವಿಷಯವನ್ನು ವಿಚಾರಮಾಡುತ್ತದೆ. ಖಗೋಳ ವಿಜ್ಞಾನವು ಕೋಟಿ ಕೋಟಿ ಮೈಲಿಗಳ ದೂರದಲ್ಲಿರುವ ನಕ್ಷತ್ರಗಳ ವಿಷಯವನ್ನು ವಿಚಾರ ಮಾಡುತ್ತದೆ. ಶರೀರ ವಿಜ್ಞಾನವು ಮನುಷ್ಯನ ಮೂಳೆಗಳ, ಹೊರಗಿನ ಅಸ್ಥಿಪಂಜರದ ವಿಷಯವನ್ನು ವಿಚಾರಮಾಡುತ್ತದೆ. ಮನಶ್ಶಾಸ್ತ್ರವು ಕೇವಲ ಮನಸ್ಸಿನ ಬೇರೆ ಬೇರೆ ವ್ಯಾಪಾರಗಳ ವಿಷಯವನ್ನು ವಿಚಾರಮಾಡುತ್ತದೆ. ಆದರೆ ಪ್ರೇಮವು ಮನುಷ್ಯನಲ್ಲಿಯೂ ಪ್ರಕೃತಿಯಲ್ಲಿಯೂ ಇರುವ ಅತ್ಯಂತ ಸತ್ಯವಾದ ಸತ್ಯದ ವಿಷಯವನ್ನು ವಿಚಾರಮಾಡುತ್ತದೆ. ಅದು ಕಲೆಯೂ ಆಗಿದೆ. ವಿಜ್ಞಾನವೂ ಆಗಿದೆ. ವೈಜ್ಞಾನಿಕ ಸಂಶೋಧನೆಗಳು ಏಕತ್ವ ಭಾವನೆಯ ಪ್ರೇಮಾಗ್ನಿಯಾದ ಭವ್ಯವಾದ ಸೂರ್ಯನಿಂದ ಹೊರಚಿಮ್ಮುವ ಕಿಡಿಗಳೂ ಜ್ವಲಂತ ಕಣಗಳೂ ಮಾತ್ರ ಆಗಿವೆ.

ಚಿಕ್ಕ ವಯಸ್ಸಿನ ಫ್ರ್ಯಾಂಕ್ಲಿನ್ನನು ಗಾಳಿಯ ಪಟವನ್ನು ಹಾರಿಸುತ್ತಿದ್ದಾಗ ಆ ಪಟದ ಟ್ವೈನ್ ದಾರಕ್ಕೆ ಅಡ್ಡಲಾಗಿರುವ ಕಾಂತತೆಯ ಸೂಜಿಯನ್ನು ಅವನ ತಂದೆಯಾದ ಬೆಂಜಾಮಿನ್ನನು ಏಕಾಗ್ರತೆಯಿಂದ ತನ್ಮಯನಾಗಿ ನೋಡುತ್ತಿದ್ದಾನೆ. ಈಗ ಅವನನ್ನು ನೋಡಿ; ಅವನ ದೇಹವು ಈಗ ಎಷ್ಟು ನಿಶ್ಚಲವಾಗಿಯೂ ಉಸಿರಾಡದೆಯೂ ಇದೆ! ಯಾವ ಭೂಮಿಯ ಮೇಲೆ ಅವನ ಶರೀರವು ಸಿಶ್ಲೇಷ್ಟವಾಗಿದೆಯೋ ಆ ಭೂಮಿಯಿಂದ ಅದು ಪ್ರತ್ಯೇಕವಾಗಿರುವಂತೆ ತೋರುತ್ತದೆಯೆ? ಅವನು ತನ್ನ ಸುತ್ತಲಿರುವ ಎಲ್ಲದರೊಡನೆ ಒಂದಾಗಿಲ್ಲವೆ? ಅವನು ಒಂದು ಚೂರು ಕಲ್ಲು ಬಂಡೆಯಂತೆ ಇಲ್ಲವೆ? ಪ್ರಕೃತಿಯ ಉಬ್ಬೇರುತ್ತಿರುವ ಎದೆಯೊಡನೆ ಅವನ ವಕ್ಷಸ್ಥಳವು ಮಿಡಿಯುತ್ತಿದೆ; ಸ್ಪಂದಿಸುತ್ತಿದೆ; ಇದರಿಂದ ಪ್ರಕೃತಿಯ ರಹಸ್ಯಗಳೆಲ್ಲಾ ಅವನ ರಹಸ್ಯಗಳಾಗುತ್ತವೆ. ಅಂತರಿಕ್ಷದಲ್ಲಿರುವ ಮಿಂಚು ಭೂಮಿಯ ಮೇಲಿರುವ ವಿದ್ಯುತ್ ಕಣವೆಂದು—ಕಿಡಿಯೆಂದು—ತೋರಿಸಿಕೊಳ್ಳುತ್ತದೆ. ಹೊರಗಿನ ಬೆಳಕು ಒಳಗಿನ ಬೆಳಕಿನೊಡನೆ ಒಂದಾಗಿದೆಯೆಂದು ತೋರಿಸಿಕೊಳ್ಳುತ್ತದೆ.

ಪ್ರೇಮವು ಅಥವಾ ಏಕತ್ವಭಾವನೆಯು ಎರಡು ವ್ಯಕ್ತಿಗಳ ನಡುವೆ ಕಾರ್ಯಶೀಲವಾದಾಗ ಭೇದಭ್ರಾಂತಿಯನ್ನು ತೊಲಗಿಸುತ್ತದೆ. ಒಂದು ಪಕ್ಷದ ಭಾವನೆಗಳು ಇನ್ನೊಂದು ಪಕ್ಷದ್ದಾಗುತ್ತವೆ. ಒಂದು ಹೃದಯದಲ್ಲಿ ನಡೆಯುವ ವ್ಯಾಪಾರಗಳೆಲ್ಲಾ ಇನ್ನೊಂದು ಹೃದಯದಲ್ಲಿ ವೇದ್ಯವಾಗುತ್ತವೆ. ದಿವ್ಯದೃಷ್ಟಿಯು ವಾಸ್ತವವೆಂದು ಸಿದ್ಧವಾಗುತ್ತದೆ. ಅದರ ಸ್ಫುಟವಾದ ನಿದರ್ಶನವು ಲಭಿಸಿದಂತಾಗುತ್ತದೆ.

"ಬೇರೆ ಬೇರೆ ಮಣಿಗಳನ್ನು ಒಂದೇ ದಾರವು ಪೋಣಿಸಿಕೊಂಡಿರುವಂತೆ ಈ ಎಲ್ಲವೂ ನನ್ನಿಂದಲೇ ನಿಜವಾಗಿಯೂ ವ್ಯಾಪ್ತವಾಗಿವೆ."

ಓ ಮನುಜ! ನೀನಾವದನು ಪ್ರೀತಿಸುವೆ,
ನೀನು ಸಹ ತಪ್ಪದೆ ಅದಾಗಿಯೇ ತೀರುವೆ.
ದೇವರೇ ಆಗುವೆ, ನೀ ಪ್ರೀತಿಸಿದೊಡೆ ದೇವರನೆ,
ಧೂಳೆ ಆಗುವೆ, ನೀ ಪ್ರೀತಿಸಿದೊಡೆ ಧೂಳನೇ.

ಆಹಾ! ನಮ್ಮ ಹೃದಯವನ್ನು ನಾವೇ ತಿಂದರೆ, ಎಂಥಾ ದಿವ್ಯವಾದ ಆಹಾರ, ರುಚಿಕರವಾದ ಆಹಾರ, ಸುಖಕರವಾದ ಆಹಾರವಾಗುತ್ತದೆ! ಬೇರೆ ಯಾವದೂ ಅಷ್ಟು ಮಧುರವಾಗಿರುವದಿಲ್ಲ. ರಾಮನ ವಿಷಯದಲ್ಲಿ ಕೆಲವು ಸಮಯ ಹಾಲು ಆ ಮಧುರಾಹಾರಕ್ಕೆ ಪ್ರತಿಯಾಗಿ ಕಾಲೋಚಿತ ಹಿತವಾದ ಆಹಾರವಾಗಿ ಉಪಯೋಗವಾಗುತ್ತದೆ.

ಶಶಿಯು ಮೇಲೇರಿಹನು; ಶಶಿಯ ನೋಳ್ಪರು ಜನರು,
ದೇವ ನಿನ್ನಯ ಹುಬ್ಬಿನ ಬೆಳಕನೀಂಟುವೆನು ನಾನು.
ನಿನ್ನ ನೋಡಲು ದೊಡ್ಡ ಜಾತ್ರೆಯೆ ನೆರೆಯುವದು, ಬೇಗ,
ನಾನಾದೊಡಾ ಬೆಳಕಿನ ಮೂಲವಹ ನಿನ್ನನೆ ನಿರುಕಿಸುವೆನೀಗ.
ಬೇಡ, ವೈದ್ಯರನು, ಶಸ್ತ್ರವೈದ್ಯರನು ಯಾರನೂ ಕರೆಯಬೇಡ,
ಎನಗಾದೊಡಾ ನೋವೆ ಎಲ್ಲ ನಲಿವಾಗಿಹುದು ನೋಡಾ,
ನಾಗರಿಕರೇ, ನಗರಗಳೆ, ನಿಮಗೆ ಸ್ವಸ್ತಿ, ನಮಸ್ತೇ !
ಓ, ಸ್ವಾಗತವು ತಲೆಸುತ್ತಿಸುವ ಸ್ವರ್ಗೀಯ ಶಿಖರಗಳೆ !
ಓ, ನೀಟುಗಾರಿಕೆಯೆ, ವಾಡಿಕೆಯೆ, ಗುಣದೋಷಗಳೆ,
ಓ ನಿಯಮಗಳೆ, ಕಲ್ಪನೆಗಳೇ, ಸಮಾಧಾನ—ಸಂಗ್ರಾಮಗಳೆ,
ಓ ಮಿತ್ರರೇ—ಶತ್ರುಗಳೆ, ಬಂಧು—ಬಾಂಧವರೆ,
ಆಸ್ತಿ—ಪಾಸ್ತಿಗಳೆ, ರಾಗ—ದ್ವೇಷಗಳೆ, ಸರಿ—ತಪ್ಪುಗಳೆ,
ಓ ದೇಶ ಕಾಲಗಳೆ, ನಮಸ್ತೇ, ನಮಸ್ತೇ,
ಓ ಜಗವೆ, ಶುಭಮಸ್ತು, ಹಗಲು ರಾತ್ರಿಗಳೆ,
ಎನ್ನ ಪ್ರೇಮವೆ ಹೂವು, ಹಾಡು, ಹೊಳಪು, ಬೆಳಕು.
ಎನ್ನ ಪ್ರೇಮವೆ ಹಗಲು, ಎನ್ನ ಪ್ರೇಮವೆ ರಾತ್ರಿ.
ಕರಗಿ ಹೋಗಿವೆ ಎನ್ನೊಳಗೆಲ್ಲ ಬೆಳಕು ಕತ್ತಲೆಯು.
ಓ, ಎಂತಹ ಶಾಂತಿ, ಆನಂದ !
ಓ, ಬಿಡಿ ಎನ್ನನೋರ್ವನೆ, ನಾನು, ನನ್ನ ಪ್ರೇಮ, ಇಷ್ಟೆ ಸಾಕು.
ಸ್ವಸ್ತಿ ! ಶುಭಮಸ್ತು ! ನಮಸ್ತೇ ! ನಮಸ್ತೇ !

* * * *

ನಾಚಿ ಕೆನ್ನೆಗೆಂಪೇರಿದ ನವವಧುವು ಪ್ರೇಮದಲಿ ನಿಂತು,
ಕುಡಿನೋಟದಲಿ ಒಪ್ಪಿಗೆಯ ಸೂಚಿಸಿ, ಕೈಯನಿತ್ತು,
ನಮಸ್ತೇ ಪೂಜ್ಯ ಜನನೀ ಜನಕರೆ,
ನಮಸ್ತೇ ಭ್ರಾತೃಭಗಿನಿಯರೆ,
ಪತಿದೇವನೊಡನೆ ತೆರಳುವೆ,—ಎನುವಾಗ
ಓ ಮಿತ್ರ, ರೋಮಾಂಚನವಾಗುತಿದೆ,
ಕಂಠ ಗದ್ಗದಿತವಿದೆ, ಹರ್ಷಬಾಷ್ಪ ಸುರಿಯುತಿದೆ.

* * * *

ಸ್ವಾಗತವು ನಿನಗೆ ಅಂತಹ ಬೆಳಕಿನಾ ಜಗಕೆ,
ಸ್ವಾಗತವು ಎಮ್ಮ ಮೇಲಿನ ದೈವಕೃಪಾದೃಷ್ಟಿಗೆ,
ಆದರೆ ಚೆನ್ನಾಗಿ ನೆನಪಿರಲಿ,
ಇದೆ ನಮ್ಮ ಕೊನೆಯ ಮಾತಿರಲಿ,
ಓ ಮಿತ್ರ ರೋಮಾಂಚನವಾಗುತಿದೆ,
ಕಂಠ ಗದ್ಗದಿತವಿದೆ, ಮೋದಬಾಷ್ಪ ಸುರಿಯುತಿದೆ.

ದೊಡ್ಡ, ಸಣ್ಣ, ಒಳ್ಳೆಯ, ಕೆಟ್ಟ, ಅವಲಕ್ಷಣ—ಆಕರ್ಷಕ—ಈ ಬೇರೆ ಬೇರೆ ಎಲ್ಲಾ ವಸ್ತುಗಳೂ ಜೀವಂತ ಪ್ರೇಮಿಗೆ ವಿಲಕ್ಷಣವಾದ ಗುಪ್ತ ಸಂಕೇತಗಳು. ಎಲ್ಲಾ ಅವನಿಗೆ ಒಂದು ಪ್ರೇಮವನ್ನೇ ಸೂಚಿಸುತ್ತವೆ. ಅಂದವಾದ ಅಕ್ಷರಗಳು ಎಲ್ಲಾ ಆತ್ಮವನ್ನೇ ತಿಳಿಸುತ್ತವೆ. ಸುಂದರವಾದ ಚಿತ್ರಗಳೆಲ್ಲಾ ಪ್ರಿಯ ಪ್ರಭುವಿನ ಪ್ರತೀಕಗಳು. ಸೌಂದರ್ಯದ ಬೇರೆ ಬೇರೆ ಉಡುಗೆಗಳು, ಮಧುರ ಪ್ರೇಮದ ಆತ್ಮನೇ ಧರಿಸಿರುವ ವಸ್ತ್ರಗಳು.

ಓ, ಎಂಥಾ ಸೌಂದರ್ಯ ಸಾಗರ! ಎಂಥಾ ಪ್ರೇಮ ಸಾಗರ! ಪ್ರೇಮಿಗೆ ತನ್ನ ಇಷ್ಟ ದೇವನ ಕಪ್ಪು ಕೇಶರಾಶಿಗಳು ಅವನ ಪ್ರಕಾಶಮಾನವಾದ ಮುಖದಷ್ಟೇ ಸಮ್ಮೋಹಕವಾಗಿವೆ. ಆದ್ದರಿಂದ ರಾಮನು ಹಗಲಿನಷ್ಟೇ ರಾತ್ರಿಗೂ ಸ್ವಾಗತಮಾಡುತ್ತಾನೆ. ಅವನಿಗೆ ಸಾವೂ ಜೀವನದಷ್ಟೇ ಸವಿಯಾಗಿದೆ; ಆರೋಗ್ಯದಷ್ಟೇ ಜ್ವರಕ್ಕೂ ಸ್ವಾಗತ ; ಶತ್ರುಗಳೂ ಮಿತ್ರರಷ್ಟೇ ಪ್ರಿಯರಾಗಿದ್ದಾರೆ.

ಯಾರ ಸ್ವತ್ತುಗಳು ಕಳವಾಗಿವೆಯೋ ಅವರು ಎಷ್ಟು ಪುಣ್ಯಾತ್ಮರು! ಯಾವನ ಹೆಂಡತಿಯು ಓಡಿಹೋಗುತ್ತಾಳೋ ಅವನು ಮೂರು ಪಟ್ಟು ಅನುಗ್ರಹ ಪಡೆದಂತೆ ಆಗುತ್ತಾನೆ. ಆದರೆ ಅದರಿಂದ ಅವನು ಸರ್ವಪ್ರೇಮದೊಡನೆ ನೇರ ಸಂಪರ್ಕ ಪಡೆಯಬೇಕು. ಒಮ್ಮೆ ಎಬ್ರಾಹಿಂನು ಸಮುದ್ರಯಾನ ಮಾಡಬೇಕೆಂದು ಇಚ್ಛೆ ಮಾಡಿದನೆಂದು ಮಹಮ್ಮದೀಯ ಸಂಪ್ರದಾಯ ಹೇಳುತ್ತದೆ. ಆ ನೌಕೆಗೆ ಖಿಜಾರ್ ಅಥವಾ ನೆಪ್ಚ್ಯೂನನು ನಮ್ರ ನಾಯಕನಾಗಿ ಸೇವೆಯನ್ನು ಸಲ್ಲಿಸುವದಾಗಿ ಹೇಳಿದನು. ಎಬ್ರಾಹಿಂನು ಮೊದಲು ಅವಿವೇಕದಿಂದ ಒಪ್ಪಿಗೆಯನ್ನು ಕೊಟ್ಟನು. ಆದರೆ ಪುನರಾಲೋಚನೆ ಮಾಡಿ, ಖಿಜಾರನ ಕ್ಷಮೆಯನ್ನು ಬೇಡಿದ. "ನನ್ನ ಅತ್ಯಂತ ದಯಾಳುವಾದ ಸಹೋದರನೆ! ದಯವಿಟ್ಟು ನನ್ನನ್ನು ಕ್ಷಮಿಸು. ನನ್ನ ನೌಕೆಗೆ ಯಾವ ಯಜಮಾನನೂ ಬೇಡವೆಂದೂ ಪ್ರೇಮದ ಕೈಯಿಂದಲೇ ಅದು ನೇರವಾಗಿ ನಡೆಸಲ್ಪಡಬೇಕೆಂದೂ ಆಶಿಸುತ್ತೇನೆ. ಸಮುದ್ರದ ಪ್ರಭುವಾದ ನೀನು ಕೈಯಲ್ಲಿ ಹುಟ್ಟನ್ನು ತೆಗೆದು ಕೊಂಡರೆ, ಪ್ರಯಾಣವು ಸುರಕ್ಷಿತವಾಗಿರುವದೇ ಸರಿ. ಆದರೆ, ಅದು ಅತಿ ಸುರಕ್ಷಿತವಾದುದಾಗುವದು! ನಾನು ದೇವರನ್ನು ನೇರವಾಗಿ ನಂಬದೆ, ನಿನ್ನನ್ನು ನಂಬುವಂತೆ ಮಾಡುವದು. ನನಗೂ

ನನ್ನ ದೇವರಿಗೂ ಮಧ್ಯದಲ್ಲಿ ದಯವಿಟ್ಟು ನಿಲ್ಲಬೇಡ. ನನ್ನ ಸಹೋದರ ಖಿಜಾರನ ಎದೆಯ ಮೇಲೆ ಸಹ ನಿಲ್ಲುವದಕ್ಕಿಂತಲೂ ದೇವರ ವಕ್ಷಸ್ಥಲದ ಮೇಲೆ ನೇರಾಗಿ ನಿಲ್ಲುವದರಲ್ಲಿ ನನಗೆ ಹೆಚ್ಚು ಸಂತೋಷವಿದೆ" ಎಂದು ಹೇಳಿದನು.

ಹುಚ್ಚು ಸಾಹಸಿಯೂ ಹತಾಶನೂ ಆದ ಪ್ರೇಮಿಯು :– ಓ ಮಿಂಚೇ! ಥಳಾರನೆ ಸೆಳೆದುಹೊಳಿ, ಎಂದು ಪ್ರಾರ್ಥಿಸುತ್ತೇನೆ. ಓ ಗುಡುಗೆ! ಗರ್ಜಿಸು, ಅಬ್ಬರಿಸು; ಚಂಡಮಾರುತವೆ! ಬೀಸು, ಬೀಸು, ರೋಷಾವೇಶದಿಂದ; ಓ ಬಿರುಗಾಳಿಗಳೆ! ಹುಯ್ಯಲಿಡಿ; ಬೊಬ್ಬೆಯಿಡಿ. ನಿಮಗೆ ವಂದನೆ, ವಂದನೆ, ಧನ್ಯವಾದ! ಓ ದಿವ್ಯವಾದ ಗುಡುಗು ಸಿಡಿಲುಗಳೆ! ಕ್ಷಣಕಾಲ ನನಗೆ ತೆಕ್ಕೆ ಬೀಳುವದಕ್ಕಾಗಿ ಕೋಮಲ ಪ್ರೇಮವನ್ನು ನೀವು ಬೆದರಿಸುವಿರಿ. ಆಹಾ! ಜೀವನದ ಕಹಿಗಳು ಎಷ್ಟು ಅಪಾರ ಮಾಧುರ್ಯವುಳ್ಳವು! ಭಗವತ್ ಪ್ರೇಮದ ಹಿತಕರವಾದ ವಿರಹವ್ಯಥೆಯ ಮಧುರವಾದ ಮಧು [ಮದ್ಯ]ವನ್ನು ಅದರ ದ್ರಾಕ್ಷಿಗಳಿಂದ ನಾವು ಹಿಂಡಿ ತೆಗೆಯಬಹುದು.

ಓ ಪ್ರಭುವೆ! ಎನ್ನ ಬಾಳನೇ ಸ್ವೀಕರಿಸು,
ನಾನಿನಗೆ ಭಕ್ತಿಯಲಿ ಸಮರ್ಪಿಸಿಹೆನು,
ಎನ್ನ ಹೃದಯವ ಕೋ, ಅದು
ನಿನ್ನ ಪ್ರೇಮದಿಂ ತುಂಬಿ ತುಳುಕುತಿರಲಿ.
ಓ ದೇವ! ಎನ್ನ ಕಂಗಳನೆ ಕೋ,
ಅವು ನಿನ್ನ ಪ್ರೀತಿಯಿಂದಮಲೇರಿ ತೊಳಗಲಿ.
ಎನ್ನ ಕೈಗಳನು ತೆಗೆದುಕೋ, ಅವು ನಿನಗಾಗಿ
ಸತ್ಯ ಧರ್ಮದಲಿ ಶ್ರಮಿಸಿ ಸೇವಿಸುತಿರಲಿ.

ಪ್ರಿಯ ಧನ್ಯವಾಚಕರೆ! ಪ್ರೇಮಕ್ಕಾಗಿ ಎಲ್ಲವನ್ನೂ ತೆತ್ತು, ಪ್ರೇಮದಲ್ಲಿ—ನಿಸ್ಸ್ವಾರ್ಥ ಪ್ರೇಮದಲ್ಲಿ—ನಿಮ್ಮನ್ನು ನೀವು ಕಳೆದುಕೊಳ್ಳುವ—ಅಲ್ಲ—ಮೇಲೇಳುವ ಸುಯೋಗವು—ಸೌಭಾಗ್ಯವು—ನಿಮಗೆ ಎಂದಾದರೂ ಲಭಿಸಿತ್ತೆ? ಹಾಗಾದರೆ ನೀವು ಇಂಥಾ ಭಾವನೆಗಳನ್ನು ಮೆಚ್ಚಿಕೊಳ್ಳುತ್ತೀರಿ :

ಓ ದೇವ! ನಿನ್ನ ಚಪ್ಪಲಿಗಳಿಗೆ ಎನ್ನ ಮೃದು ಚರ್ಮವನೆ ಕೋ,
ಎನ್ನ ಹೃದಯದ ನರಗಳ ಹುರಿಗಳಿಂದಾ ಜೋಡುಗಳ ಬಿಗಿ,
ಆ ಪಾದಗಳ ಮುತ್ತಿಡಲು ಕಾತರಿಸುತಿಹ ತುಟಿಗಳ ಮೇಲೆ ನಡಿ,
ಓ, ಎನ್ನ ಪೂಜ್ಯ ಪ್ರಭುವೆ! ನಿನ್ನ ಪಾದದ ಅತ್ಯಂತ ನಮ್ರ ಸೇವಕನೆಂದು
ಪರಿಗ್ರಹಿಸು.

ಪ್ರೇಮವು ಆಶೀರ್ವದಿಸಿ ಅಂದಗೊಳಿಸದ ಅಧಿಕಾರ ಸ್ಥಾನ ಯಾವದಿದೆ?

## ಪ್ರಭುಜೀ ! ಮಾಯಿನ್ ಚರಣನ್ ಕಿ ದಾಸಿ.

## (PRABHUJI ! MAIN CHARANAN KI DASF)

ಪ್ರೇಮವಿದ್ದಲ್ಲಿ ದೊಡ್ಡದಿಲ್ಲ, ಸಣ್ಣದಿಲ್ಲ, ಕೀಳಿಲ್ಲ, ಮೇಲಿಲ್ಲ. ಪ್ರೇಮಭಾವವು ನಮ್ಮನ್ನು ಪ್ರೇರಿಸುವಾಗ ಅತ್ಯಂತ ಕಠಿಣ ಕಾರ್ಯವೂ ನಮಗೆ ಸ್ವರ್ಗೀಯ ಪ್ರಸಾದವಾಗುತ್ತದೆ. ಸ್ವಾರ್ಥ ಭಾವನೆಯು ಅತ್ಯಂತ ಉನ್ನತ ಸ್ಥಾನವನ್ನು ಸಹ ಅತ್ಯಂತ ಶ್ರಮಪೂರಿತವಾಗಿಯೂ ಬೇಸರ ತರುವದಾಗಿಯೂ ಮಾಡುತ್ತದೆ. ಸಮಾಜದಲ್ಲಿ ನಿಮ್ಮ ಸ್ಥಾನಮಾನಗಳೂ ನಿಮ್ಮ ಜೀವನದ ಸನ್ನಿವೇಶಗಳೂ ಏನೇ ಇರಲಿ, ಪ್ರೇಮವು ಅದನ್ನು ಮಧುರಮಯವಾಗಿ ಮಾಡುತ್ತದೆ. ಎಲ್ಲಾ ತೊಂದರೆಗಳೂ ಕ್ಷೋಭೆಗಳೂ ವ್ಯಥೆಗಳೂ ಕ್ಲೇಶಗಳೂ ಕೇವಲ ಆಸ್ತಿಯನ್ನು ಸಂಪಾದಿಸುವ, ಸಂವರ್ಧಿಸುವ ಮನೋಭಾವದಿಂದಲೇ ಉದಯವಾಗುತ್ತವೆ. ನಾವು ಅದನ್ನೇ ಪ್ರೀತಿಸುವಾಗ ನರಕದ ನೋವಾದರೂ ಎಲ್ಲಿರುತ್ತದೆ? ನಮ್ಮ ಎಲ್ಲಾ ತೊಂದರೆಗಳೂ ಸಂಕ್ಷೋಭೆಗಳೂ ಒಂದು ಬಗೆಯಿಂದ—ನಾವು ಎಚ್ಚರಗೊಂಡು ಪ್ರೇಮದ ಆಲಿಂಗನದಲ್ಲಿ ಸೇರಿಕೊಳ್ಳುವದಕ್ಕಾಗಿ—ಪ್ರೇಮವೇ ಮಾಡುವ ಪೀಡನೆಯಾಗಿದೆ. ಈ ಏಳಿತ—ವಸೆತಗಳೂ ತುಯ್ಯು—ತೊನೆತಗಳೂ ಮುದ್ದು—ಗುದ್ದುಗಳೂ ನಮಗುಂಟಾಗುವದು ಮಧುರ ಪ್ರೇಮದಿಂದಲ್ಲದೆ ಬೇರೆ ಕಾರಣದಿಂದಲ್ಲ. ದೇವರು, ಮಧುರಾನಾಥನಾದ ಮಧುರ ಮಧುಸೂದನನು, ಹರಿಯು, ಪ್ರೇಮ ಸುಧೆಯ ಸೋನೆಯನ್ನು ಸುರಿಸಿ ನಿಮ್ಮನ್ನು ಎಚ್ಚರಗೊಳಿಸುತ್ತಾನೆ.

ಹಾಗಾದೊಡೆ ಏಳು, ಎಚ್ಚರಗೊಳ್ಳು.
ತೆಂಗು ತಾಳೆಗಳ ಸುಯ್ಲು ಕೇಳುತಿಹೆಯ?
ನಿನ್ನ ತುಟಿಗಳ ನುಡಿಯನಾಲಿಸಲು,
ನಿನ್ನ ನೋಟದಲಿ ನೋಟವನು ಕೀಲಿಸಲು,
ಎನ್ನ ಹೃದಯವೆ ನಿಡು ಸುಯ್ಯುತಿಹುದು.
ಹಾಗಾದೊಡೆ ಏಳು ! ಎಚ್ಚರಗೊಳ್ಳು ! ಏಳು !
ಎಷ್ಟೆಷ್ಟು ಬೆಳೆದರೂ ಎಂದೆಂದು ಬಳಲದಿಹ
ಹಿಮಾಲಯದ ಮಂಜುಗಳ ನೋಡು, ನೋಡು.
ಎನ್ನ ಉರಿಯುತಿಹ ಪ್ರೇಮವನು ಅವೂ ತಣಿಸಲಾರವು,
ಅಥವಾ ಎನ್ನ ಆತ್ಮದ ಬಯಕೆಯನು ಶಮನ ಗೈಯಲಾರವು.
ಹಾಗಾದರೆ ಏಳು ! ಎಚ್ಚರಗೊಳ್ಳು ! ಏಳು !
ಪವಿತ್ರ ಗಂಗಾ ನದಿಯ
ಪ್ರವಾಹದ ಘೋಷ ಕೇಳುತಿಹೆಯ?
ಆದರೆ ಎನ್ನ ಆತ್ಮದ ಪ್ರೇಮಾವೇಶ
ಎಂದೆಂದಿಗೂ ಹೆಚ್ಚು ಆಳದಲಿ ಹರಿಯುತಿಹುದು.
ಏಳು ! ಎಚ್ಚರಗೊಳ್ಳು ! ಏಳು !

## ನಗೆಗೇಡಿನ ದಿಗಿಲು

ಅವನೊಬ್ಬ, ಪಾಪ, ಪೈಸೆಯೂ ಇಲ್ಲದ ಹೈದ,
ಕಳೆದುಕೊಳ್ಳಲೇನೂ ಏನೂ ಇಲ್ಲದ ಮಾದ.
ಆದರೂ ಕಳ್ಳರು ಬೆನ್ನಹತ್ತಿಹರೆಂದು ಕೇಳಿದನು,
ಎಲ್ಲಿಗೋಡಿದರೂ ತನ್ನ ಬಿಡಲಾರರೆಂದು ಬೆದರಿದನು.
ಪಿಶಾಚಿ ಬೆನ್ನಟ್ಟಿದಂತೆ ಕಂಡನೆಡೆಬಿಡದೆ ಮನದಿ ಕಳ್ಳರ ಸುಳಿದಾಟ
ಅವರಿಂದ ತಪ್ಪಿಸಿಕೊಳಲು ಬೆಟ್ಟದಲಿ ಕಾಡಿನಲವನ ಪರದಾಟ,
ಆತುರದಿ ಕಾತರದಿ ಭಯದಲೋಡಿದನು ನೋಡಿದನು,
ಓಟದಲಿ, ಬೇಟದಲಿ ಬಳಲಿದನು, ಮನದಿ ಪೇಚಾಡಿದನು.
ಆದರವ ಕಳೆದುಕೊಳಲೇನೂ ಏನೂ ಇಲ್ಲದ ಹೈದ,
ಅವನೋರ್ವ, ಪಾಪ, ಪೈಸೆಯೂ ಇರದಿದ್ದ ಮಾದ.
ಓ ಪ್ರಪಂಚದ ಮೂಢ ! ಹೀಗಿಹುದು ನಿನ್ನ ದುರ್ದಶೆಯು
ನಿನ್ನ ಶೋಚನೀಯ ಅಜ್ಞಾನ—ಭಯದ ದುರ್ಗತಿಯು
ಓ ಗಾಬರಿಯ ಗೆಳೆಯ, ನಿನ್ನ ನೀನೆ ತಿಳಿ;
ಕಳವು—ಕಳ್ಳರ ಭಯವ ಕಳಿ.
ಏಳು, ಮೇಲೇಳು, ಎಚ್ಚರಗೊಳ್ಳು, ನೋಡು ನೀನಾರೆಂಬುದನು;
ಕಳೆದುಕೊಳಲು ಭಯಪಡಲು ನಿನ್ನೊಡನೆ ಇರುವದೇನು ?
ನಿನಗೆಂದೂ ಯಾವ ಕೇಡೂ ಅಪಾಯವೂ ಇಲ್ಲ,
ಆದರು, ನಿನ್ನ ಅವಿವೇಕ ಚಿಂತೆಗಳೆ ಕಾಡುತಿಹವಲ್ಲ !

## ವ್ಯಾವಹಾರಿಕ ಜಾಣತನ.

ದಯಾ ದಾಕ್ಷಿಣ್ಯ ಸಹಾನುಭೂತಿಗಳಿಲ್ಲದೆ ಯಾರಾದರೂ ಒಂದು ಫರ್ಲಾಂಗ್ ದೂರ ನಡೆಯುವದಾದರೆ ಅವನು ತನ್ನ ಹೆಣದ ಬಟ್ಟೆಯಲ್ಲಿ ತನ್ನ ಶವ ಸಂಸ್ಕಾರಕ್ಕೆ ಹೋಗುತ್ತಿರುವನೆಂದು ತಿಳಿಯಬೇಕು.

ವಿವೇಕವೂ ವಿದ್ಯೆಯೂ ಒಂದೇ ಅಲ್ಲ. ಯಾವಾಗಲೂ ಅವೆರಡಕ್ಕೂ ಮಾತಿನಲ್ಲಿ ಹೊಂದಿಕೆಯಿಲ್ಲ. ವಿದ್ಯೆಯು ಹಿಂದಕ್ಕೆ ಭೂತ ಕಾಲಕ್ಕೆ ನೋಡುತ್ತದೆ. ವಿವೇಕವೂ ವಿಜ್ಞಾನವೂ ಮುಂದಕ್ಕೆ ಭವಿಷ್ಯಕ್ಕಾಗಿ ನೋಡುತ್ತವೆ.

ಅನಂತರ ಮುಂದೆ ಏನು ಮಾಡಬೇಕೆಂಬುದನ್ನು ತಿಳಿಯುವದೇ ವಿವೇಕವೆಂದೂ ಜಾಣತನವೆಂದೂ ವಿವರಿಸಿದೆ. ಅದನ್ನು ಮಾಡುವದೇ ಸದ್ಗುಣ.

ಸದ್ಗುಣ—ಸಚ್ಛೀಲವಿಲ್ಲದ ವಿವೇಕವು—ಜಾಣತನವು—ಮಾಂಸಮಯ ಮಿದುಳಿನ ಆಯಾಸವು ಮಾತ್ರ. ಆದರೆ, ಹೇಗೆ ಸಂಕಲ್ಪವು ಕ್ರಿಯೆಯಲ್ಲಿಯೂ ಭೌತ ವಿಜ್ಞಾನವು ಕಲೆಯಲ್ಲಿಯೂ ಜ್ಞಾನವು ಶಕ್ತಿಯಲ್ಲಿಯೂ ಪರಿಣಾಮಹೊಂದುವವೋ ಹಾಗೆ ವಿವೇಕವು ಸೌಶೀಲ್ಯದಲ್ಲಿ ಫಲಿತವಾಗಬೇಕು. ಆದರೆ ಎಲ್ಲಿ ಆಲೋಚನೆಯು ಕ್ರಿಯೆಯಲ್ಲಿ ಪರಿಣಾಮವಾಗುವದಿಲ್ಲವೋ ಅಲ್ಲಿ ಮಾನಸಿಕ ಅಜೀರ್ಣವ್ಯಾಧಿಯೂ ನೈತಿಕ ಮಲಬದ್ಧತೆಯೂ ಉಂಟಾಗುತ್ತವೆ. ಬರೀ ಆಲೋಚನೆಗಳಿದ್ದರೂ ಕಾಲಿಲ್ಲದ ಮನುಷ್ಯರು ಬೌದ್ಧಿಕ ಸಹಸ್ರಪದಿ (ಜರಿ)ಗಳಿಗಿಂತಲೂ ಹೆಚ್ಚಿನವರಲ್ಲ.

ಒಬ್ಬ ಅಮೇರಿಕಾದ ಹಾಸ್ಯಪ್ರಿಯ ಲೇಖಕನು ಹೇಳುವದೇನೆಂದರೆ,
"ನನ್ನ ಚಿಕ್ಕಪ್ಪನು ಹೇಳುತಿದ್ದಂತೆ,
ನಾನು ಜನರ ಮತ್ತು ವಸ್ತುಗಳ ವಿಷಯದಲಿ ಆಲೋಚಿಸಿ
ಆಲೋಚಿಸಿ ಇಟ್ಟಿದೇನೆ ;
'ಜನರು ಪ್ರಾರ್ಥಿಸಿದಂತೆ ಕೆಲಸಮಾಡದಿರೆ,
ಏಕೆ? ಆ ಪ್ರಾರ್ಥನೆಯಿಂದ ಯಾವ ಪ್ರಯೋಜನವೂ ಇಲ್ಲ.'
ನಿಮಗೇನೋ ಬೇಕಾಗಿದ್ದರೂ ಸತ್ತಂತೆ ಬಿದ್ದಿದ್ದರೆ,
ಎರಡು ಕಣ್ಣುಗಳಿಂದಲೂ ನೀರು ಸುರಿಸುತಾ ಅಂಗಲಾಚಿದರೆ,
ನಿಮಗೆ ಬೇಕಾದುದನು ಕಣ್ಣೀರು ತರಬಲ್ಲದೆ? :
ಏಕೆ? ಶ್ರಮಪಟ್ಟು ಬೆವರು ಸುರಿಸುವ ಪ್ರಯತ್ನ ಮಾಡಿ.
ಇದನೆ ಹೇಳುತಿದ್ದ ನನ್ನ ಚಿಕ್ಕಪ್ಪ."

ಸ್ವಸ್ಥ ಬುದ್ಧಿಯ ಮತ್ತು ವಿವೇಕದ ಮುಖ್ಯ —ಅಗತ್ಯ— ಗುಣವೇನೆಂದರೆ ಹೊರಗಿನ ಸ್ಥಿತಿಗತಿಗಳಿಗೆ ಸುರಕ್ಷಿತವೂ ಕರಾರುವಾಕ್ಕೂ ಆದ ಉತ್ತರವನ್ನು ಕೊಡುವದೇ ಆಗಿದೆ. ಆವಶ್ಯಕತೆಗೆ ಉಚಿತವಾದ ಕ್ರಿಯೆಯನ್ನು ಹೊಂದಿಸಿಕೊಳ್ಳುವದಕ್ಕೆ ಬೇಕಾದ ಯೋಗ್ಯತೆಯಿಲ್ಲದಿರುವದೇ ಅಸ್ವಸ್ಥ ಬುದ್ಧಿಯ—ಅಥವಾ ಹುಚ್ಚಿನ—ಗುಣ. "ಬದಲಾಯಿಸು ಇಲ್ಲವಾದರೆ ಸಾಯಿ" ಎನ್ನುವದೇ ಪ್ರಕೃತಿಯ ಉಗ್ರವಾದ ಸಾಂಕೇತಿಕ ವಾಣಿ. ಮುಂದೆ ಮುಂದೆ ಓಡುತ್ತಿರುವ ಕಾಲದೊಡನೆ ನೀವೂ ಹೆಜ್ಜೆ ಹಾಕಿ ನಡೆದರೆ ಜೀವನದ ಹೋರಾಟದಲ್ಲಿ ನೀವು ಬದುಕಬಹುದು. (ಇಂಡಿಯ ! ಇದನ್ನು ಗಮನಿಸು.)

ಎಲ್ಲಾ ವ್ಯಾವಹಾರಿಕ ಜಾಣತನದ ಸತ್ತ್ವವನ್ನೂ ಕೃಷ್ಣನು ತನ್ನ ಸರಳವೂ ಸುರಕ್ಷಿತವೂ ಆದ ಉಪದೇಶದಲ್ಲಿ ಸಂಕ್ಷೇಪವಾಗಿ ಸಂಗ್ರಹಮಾಡಿದ್ದಾನೆ :

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ।**
**ಮಾ ಕರ್ಮ ಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**

ನಿನಗೆ ಕರ್ಮವನ್ನು ಮಾಡುವದಕ್ಕೆ ಮಾತ್ರ ಅಧಿಕಾರವಿದೆ; (ಜ್ಞಾನ ನಿಷ್ಠೆಯಲ್ಲಿ ಅಧಿಕಾರವಿಲ್ಲ.) ಅದರಿಂದ ದೊರೆಯುವ ಫಲಕ್ಕೆ ಎಂದಿಗೂ ಅಧಿಕಾರವಿಲ್ಲ. ಕರ್ಮ ಫಲದಲ್ಲಿ ಎಂದಿಗೂ ಆಶೆಯುಳ್ಳವನಾಗಬೇಡ; ಫಲಾಪೇಕ್ಷೆಯಿಂದ ನೀನು ಕರ್ಮ ವನ್ನು ಮಾಡಿದರೆ ಅದು ಜನ್ಮಕ್ಕೆ ಕಾರಣವಾಗುತ್ತದೆ. ಕರ್ಮ ಫಲವನ್ನು ಬಯಸ ದಿರುವಾಗ ದುಃಖರೂಪವಾದ ಕರ್ಮದ ಹಂಗಾದರೂ ನನಗೇನು? ಎಂದು ನಿಷ್ಕ್ರಿ ಯೆಗೆ ಗುಲಾಮನಾಗಬೇಡ.

ಹೋರಾಟದಲ್ಲಿರು ; ಅದೇ ನಿನ್ನ ಕರ್ತವ್ಯ. ಪ್ರಿಯನು ತನ್ನ ಪ್ರೇಯಸಿಯನ್ನು ಎಂದೂ ಓಲೈಸುವಂತೆ ನಿಜವಾದ ವೀರನು ಕರ್ಮವನ್ನು—ಉದ್ಯೋಗವನ್ನು— ಪ್ರೀತಿಸುತ್ತಾನೆ. ಯುದ್ಧರಂಗದಲ್ಲಿ ನೀನು ಸತ್ತರೆ, ಸ್ವರ್ಗಕ್ಕೆ ಕೀರ್ತಿಯನ್ನೂ ವಿಜಯ ವೈಭವವನ್ನೂ ತರುತ್ತಿ. (ಅಂದರೆ, ಅತ್ಯಂತ ಸಮರ್ಥವಾದುದನ್ನು ಬಾಳಗೊಡುವ ದರಿಂದ ವಿಕಾಸಕಾರ್ಯಕ್ಕೂ ವಿಶ್ವದ ಮುನ್ನಡೆಗೂ ಸಹಾಯ ಮಾಡಿದಂತೆ ಆಗು ತ್ತದೆ.) ಅಥವಾ ನೀನು ಜಯಿಸಿದರೆ, ನಿಜವಾದ ಶಕ್ತಿಯು, ಸತ್ಯವು ನಿನ್ನ ಮೂಲಕ ಪ್ರಕಾಶಿಸುವದಕ್ಕೆ ಅವಕಾಶಕೊಟ್ಟಂತೆ ಆಗುತ್ತದೆ. ನಿಜವಾಗಿಯೂ ಜಯಶೀಲ ವಾಗುವ ಸತ್ಯವೇ ನೀವು ; ಹೋರಾಟದಲ್ಲಿ ನಾಶವಾಗುವ ಈ ದೇಹವು ನೀವಲ್ಲ. ನೀವು ಎಂದೆಂದಿಗೂ ವಿಜಯಶಾಲಿಗಳೇ. ಸತ್ಯದ ಆತ್ಮನಾಗಿ, ಜೀವಶಕ್ತಿಯಾಗಿ ಪ್ರಕಾಶಿಸಿ.

ಅಥವಾ—ಕೊಲೆಯಾದೊಡೆ—
ನೀನು ಸ್ವರ್ಗದ ಸುರಕ್ಷಣೆಯ ಜಯಿಪೆ ; ಅಥವಾ— ಬದುಕಿ
ಗೆಲಿದೊಡೆ,— ಪೃಥ್ವೀಪತಿಯಾಗಿ ಆಳುವೆ,
ಅದರಿಂದೆ, ಏಳು ಸತ್ಯಪುತ್ರ ! ಬಿಗಿಕಟ್ಟು
ಕಾಳಗಕೆ ಶಸ್ತ್ರಾಸ್ತ್ರಗಳ, ಎದುರಿಸಲು ಎದೆಗಾರನಾಗು,
ಸಮನಾಗಿ ಕಾಣು – ದುಃಖವಾಗಲಿ, ಸುಖವಾಗಲಿ,
ಲಾಭವಾಗಲೀ ನಷ್ಟವಾಗಲೀ ಗೆಲವಾಗಲೀ ಸೋಲಾಗಲೀ,
ಈ ತೆರದ ಮನದಿ, ರಣಕಾಗಿ ನಡುಕಟ್ಟು, ಹೀಗಾದರೆ,
ನಿನಗೆ ಪಾಪ ತಟ್ಟದು.

ಗೆಲುವಿನ ನಿಜವಾದ ಮಾನದಂಡವು ಆಧ್ಯಾತ್ಮಿಕ ಬೆಳವಣಿಗೆಯೇ ಹೊರತು, ಹೊರಗಿನ ಲಾಭ–ನಷ್ಟಗಳಲ್ಲ. ಸೋಲು ಗೆಲುವಿನಷ್ಟೇ ಘನತೆ—ಗೌರವವುಳ್ಳದು.

ಓ ಭಾಗ್ಯಶಾಲಿ ವೀರ ! ನೀನು ಈ ಪ್ರಪಂಚವೆಂಬ ಕ್ರೀಡಾರಂಗದಲಿ ಆಟವಾಡು ತ್ತಿದಿ ; ಹೊಡಿ, ಹೊಡಿ, ಹೆದರದೆ, ಹಿಂದಡಿಯಿಡದೆ, ಮುನ್ನುಗ್ಗಿ ಹೊಡಿ.

ಯಾರು ಎಷ್ಟು ಅಗ್ನಿ ಪರೀಕ್ಷೆಗಳಿಗೆ ಗುರಿಯಾಗಿರುತ್ತಾರೋ ಅವರು ತಮ್ಮ ಶೀಲದಲ್ಲಿ ಅಷ್ಟು ಬಲವನ್ನು ಬೆಳೆಸಿರುತ್ತಾರೆ.

ಹಾಗಾದೊಡೆ, ಸಮವಾದ ಭೂಮಿಯನು ಒರಟಾಗಿ ಮಾಳ್ಪ,
ಪ್ರತಿಯೊಂದು ತಡೆ—ತಿರಸ್ಕಾರವನು ಸ್ವಾಗತಿಸು.
ಒಂದೊಂದು ಕುಟುಕೂ ಕೂರಗೊಡಿಸದು, ನಿಲ್ಲಗೊಡದು, ಓಡಿಪ್ಪುದು !
ನಮ್ಮ ನಲಿವಿನ ಮೂರು ಪಟ್ಟು ನೋವು
ಹೋರಾಡು, ಶ್ರಮವ ಲಘುವಾಗಿ ಎಣಿಸು,
ಕಲಿ, ಯಾತನೆಯನೆಣಿಸಬೇಡ, ಧೈರ್ಯಮಾಡು,
ಶೂಲೆಯಿಂದೆಂದಿಗೂ ಕೊಸರಿಕೊಳಬೇಡ.
ಇದೊಂದು ಜೀವನದ ವಿರೋಧಾಭಾಸ,
ಪರಿಹಾಸ ಮಾಡುತಲೆ ಸಂತೈಸುವದು,
ತೋರಿಕೆಯ ಪರಾಜಯದಿ ಜೀವನವು ಜಯಿಸುವದು.

## ಯೋಜನೆಯಿಲ್ಲದ ಯೋಜನೆ.

ಎಲ್ಲಾ ಬಗೆಯ ಸಂಪ್ರದಾಯಗಳನ್ನೂ ಮೇಲು ಮೇಲಿನ ಮಾತಿನ ಬಗೆಯನ್ನೂ ಬಿಟ್ಟು, ನಮ್ಮ ಅತ್ಯಂತ ಒಳಗಿನ ಅನುಭವದ ವಿದ್ಯಮಾನಗಳಿಗೆ ಗಮನ ಕೊಟ್ಟರೆ, ಎಲ್ಲಾ ವಿವೇಕದ ಹಿತೋಪದೇಶಗಳೂ ಆಚಾರ ನಿಯಮಗಳೂ ಅಧಿಕಾರಯುತ ಕರ್ತವ್ಯದ ಕರಾರುಗಳೂ ಆತ್ಮಸಾಕ್ಷಿಯ ಆದೇಶವೇ ನೀತಿಯ ಪರಮ ಪ್ರಮಾಣವೆಂಬ ತತ್ತ್ವವೂ 'ಹೀಗೆ ಮಾಡು' 'ಹೀಗೆ ಮಾಡಬೇಡ' ಎಂಬ ವಿಧಿಗಳೂ ಪರಮಾತ್ಮನಿಷ್ಠೆಯಿಲ್ಲದವರಲ್ಲಿ ಜೀವಶಕ್ತಿಯನ್ನೂ ಪ್ರಜ್ಞಾಶಕ್ತಿಯನ್ನೂ ತುಂಬುವ ವ್ಯರ್ಥವಾದ ಪ್ರಯತ್ನಗಳು ಮಾತ್ರ. ತಿಳಿದೋ ತಿಳಿಯದೆಯೋ ಇವೆಲ್ಲಾ ಬಹಳವೆಂದರೆ, ಮಾಂಸಪಿಂಡಗಳನ್ನು ಅಥವಾ ಸತ್ತಹೆಣವನ್ನು ಚಲಿಸುವಂತೆ ಮಾಡುವ ವಿದ್ಯುಚ್ಛಕ್ತಿಗೆ ಹೋಲಿಕೆಯಾಗಿವೆ. ಇವು ಕಪಟ ಜೀವನವನ್ನು ಪ್ರೇರಿಸಬಲ್ಲವೇ ಹೊರತು ಹೆಚ್ಚಿನ ಸ್ಫೂರ್ತಿಯನ್ನು ಎಂದೂ ಕೊಡಲಾರವು.

"ಯಾವದು ಒತ್ತಾಯ ಮಾಡಲ್ಪಡುತ್ತದೆಯೋ ಅದೆಂದೂ ಸತ್ತ್ವಯುತವಾಗುವದಿಲ್ಲ."

ಪ್ರೇಮವು ಮನೆಯನ್ನು ಕಟ್ಟಿದಿದ್ದರೆ, ಕಟ್ಟತಕ್ಕವರ ಶ್ರಮವು ವ್ಯರ್ಥವೇ ಸರಿ. ಪ್ರತಿಭಾವಂತರ ಪವಾಡಗಳೆಲ್ಲಾ ಯಾವಾಗಲೂ ಉದ್ಯೋಗಶೀಲತೆಯ—ದುಡಿಮೆಯ—ಪವಾಡವೇ ಹೊರತು ಬೇರಲ್ಲ." ಬೇರೆಯವರ ದೃಷ್ಟಿಯಲ್ಲಿ ಕಷ್ಟದ ದುಡಿಮೆಯೆಂದು ಕಂಡುದು ಪ್ರತಿಭಾವಂತರಿಗೆ ಅತ್ಯಂತ ಸಂತೋಷಕರವಾದ ಆಟವಾಗುತ್ತದೆ.

ಅಯ್ಯೋ! ಇದನ್ನು ನಾನು ಬಹಳ ಕಷ್ಟಪಟ್ಟು ಮಾಡಬೇಕು... ಎಂದು ಅಹಂಕಾರವು ಗೋಳಾಡಿ ಹೇಳಿಕೊಳ್ಳುವ ನಿರ್ಜೀವವೂ ನಿಸ್ಸಾರವೂ ಆದ ಕಾರ್ಯವನ್ನು ಮಾಡದೇ ಬಿಟ್ಟರೇ ಒಳ್ಳೆಯದು. ಆತ್ಮನಿಂದ ಶಕ್ತಿ ಪ್ರವಾಹವು ಹರಿದಂತೆ ಕಾರ್ಯವು ತನ್ನಿಂದ ತಾನೇ ಆಗಬೇಕು. ನಿಮ್ಮ ಪ್ರಯಾಸದ ಪ್ರಯತ್ನವು ಅದನ್ನು ನಡೆಸುವದಕ್ಕೆ ಅಲ್ಪವಾದ ಕ್ಷಮೆಯನ್ನು ಒದಗಿಸುತ್ತದೆ. ಮೆಚ್ಚಿಗೆಯನ್ನು ಬೆನ್ನು ಹತ್ತಿ ಬೇಟೆಯಾಡುವ ಅಲ್ಪವಾದ ಮಾಯಿಕ ಅಹಂಕಾರವು ಅಂಥಾ ಕಲಾಹೀನವೂ ನೀರಸವೂ ಆದ ಕಾರ್ಯವನ್ನು ಬೇಸರದಿಂದ ಎಳೆದಾಡುತ್ತಾ ಮಾಡುವದು ಬಂಧನಕ್ಕೆ ಕಾರಣವೆಂದು ಶಂಕರರು ಹೇಳಿದ್ದಾರೆ.

ಒಬ್ಬ ಹುಡುಗನು ಬೀದಿಯಲ್ಲಿ ಉಲ್ಲಾಸದಿಂದ ತಮಾಷೆಯಾಗಿ ಸಿಳ್ಳು ಹೊಡೆಯುತ್ತಾ ಸೀಟಿ ಹಾಕುತ್ತಾ ಹೋಗುತ್ತಿದ್ದನು. ಒಬ್ಬ ಪೋಲೀಸಿನವನು ಅವನನ್ನು ಆಕ್ಷೇಪಿಸಿದನು. ಆ ಹುಡುಗ ಹೇಳುತ್ತಾನೆ: "ನಾನು ಸಿಳ್ಳು ಹಾಕುತ್ತೇನೆಯೆ? ಇಲ್ಲಾ ಸಾರ್ ಅದು ತನ್ನಿಂದ ತಾನೇ ಸೀಟಿ ಹಾಕುತ್ತದೆ."

ಒಂದು ಬುಲ್ ಬುಲ್ ಹಕ್ಕಿಯೋ ಕೋಗಿಲೆಯೋ ಪಾರಿವಾಳವೋ ಭವ್ಯವಾದ ಒಂದು ದೇವದಾರು ವೃಕ್ಷದ ತುದಿಯಲ್ಲಿ ಅಥವಾ ಸಂಪಿಗೆಯ ಮರದ ತಲೆಯಲ್ಲಿ ಕುಳಿತುಕೊಳ್ಳಲಿ. ಆ ಕ್ಷಣವೇ ಆ ಹಕ್ಕಿಯಿಂದ ಇಂಪಾದ ತುಂಬುಗಾನವು ತಾನೇ ತಾನಾಗಿ ಹರಿಯುವದಕ್ಕೆ ತೊಡಗುತ್ತದೆ.

ಈ ಅಲ್ಪವಾದ ಅಹಂಕಾರವನ್ನು ಅನಂತದಲ್ಲಿ ಎತ್ತಿ ಎಸೆಯಿರಿ. ಏಳಿರಿ, ಎಚ್ಚರಗೊಳ್ಳಿರಿ, ಪ್ರಾಣವೂ ಪ್ರಕಾಶವೂ ಪ್ರೇಮವೂ [Life, Light and Love] —ಸಚ್ಚಿದಾನಂದ— ನೀವೆಂದು ತಿಳಿಯಿರಿ. ಆ ಕ್ಷಣವೇ ಹೃದಯ ಕೇಂದ್ರದಲ್ಲಿರುವ ಆನಂದವು ಸುಖವಾದ ವೀರ ಕರ್ಮರೂಪವಾಗಿ—ವಿವೇಕವೂ ಸಚ್ಛೀಲವೂ ಆಗಿ—ನಿಮ್ಮಿಂದ ಚಿಮ್ಮುವದಕ್ಕೆ ತೊಡಗುತ್ತದೆ. ಇದೇ ದೈವಾವೇಶದ ಜೀವನ, ದಿವ್ಯಸ್ಫೂರ್ತಿಯ ಜೀವನ, ಇದು ನಿಮ್ಮ ಜನ್ಮಸಿದ್ಧವಾದ ಹಕ್ಕು. ಕೋಲ್‌ರಿಡ್ಜನು ಹೇಳುವದೇನೆಂದರೆ:

"ಅವನಿಂದ ಅವನೇ ಹಾರುತೋಡುವನು.
ಬಿಸಿಲಿನಲಿ ನಿಲ್ಲುವನು, ಕೋರಿ ನೋಟದಿಂದಲ್ಲ,
ಸಮಸ್ತ ಸೃಷ್ಟಿಯನು ವೀಕ್ಷಿಸುವ, ಅದನೆಲ್ಲವನು ಪ್ರೀತಿಸುವ
ಆಶೀರ್ವದಿಸುವನದನು, ಬಹಳ ಒಳಿತೆಂದು ಕರೆಯುವನು."

"ತನ್ನೊಳಗೇ ಸುಖವನ್ನು ಕಂಡು ಕೊಳ್ಳುವದು ಕಷ್ಟವು. ಆದರೆ, ಹೊರಗೆ ಇನ್ನೆಲ್ಲಿಯೂ ಅದನ್ನು ಕಾಣುವದು ಅಸಾಧ್ಯವು." ಎಂದು ಷೋಪೆನ್‌ಹೇರ್ ಹೇಳುತ್ತಾನೆ. ವ್ಯವಹಾರ ಚತುರ ಅಲ್ಪಾತ್ಮನು ಎಷ್ಟೇ ಅಭಿಮಾನವನ್ನೂ ಕರ್ತೃತ್ವವನ್ನೂ

ವಹಿಸಿದರೂ ಎಲ್ಲಾ ಮಹಾ ಕಾರ್ಯಗಳೂ ವ್ಯಕ್ತಿತ್ವ ಭಾವನೆಯಿಲ್ಲದಿರುವಾಗಲೇ ತಮ್ಮಿಂದ ತಾವೇ ಆಗುತ್ತವೆ. ಅಹಂಕಾರವು ಏನನ್ನೂ ಮಾಡಲಾರದು. ಸೂರ್ಯನು ಅನಾಸಕ್ತ ಸಾಕ್ಷಿಯಾದ ಪ್ರಕಾಶದಂತೆ ತನ್ನ ಸ್ವಂತ ಮಹಿಮಾವೈಭವದಲ್ಲಿ ತಾನು ಸುಮ್ಮನೆ ಬೆಳಗುತ್ತಿರುತ್ತಾನೆ. ಆಹಾ ! ನದಿಗಳು ಅವುಗಳ ಮಂಜಿನ ತೊಟ್ಟಿಲು ಗಳಿಂದ ಬೇಗಬಿಚ್ಚಿ ಹರಿಯುತ್ತವೆ. ಮಂದಮಾರುತಗಳು ಹರ್ಷದಿಂದ ಕುಣಿಯು ತೊಡಗುತ್ತವೆ ; ಪ್ರಕೃತಿಯಲ್ಲಿ ಚಲನವಲನವುಂಟಾಗುತ್ತದೆ ; ಪ್ರಾಣಿಗಳು ಎಚ್ಚರ ಗೊಳ್ಳುತ್ತವೆ ; ಸಸ್ಯಗಳು ಬೆಳೆಯುತ್ತವೆ. ನೇರಿಳೆ ಬಣ್ಣದ ಹೂಗಳೂ ಗುಲಾಬಿ ಹೂಗಳೂ ಅರಳುತ್ತವೆ ; ಸ್ತ್ರೀಯರ, ಪುರುಷರ, ಮಕ್ಕಳ ಥಳ ಥಳಿಸುವ ಕಣ್ಣು ಗಳೆಂಬ ಕಮಲಗಳು ತೆರೆದು ಪ್ರಫುಲ್ಲಿತವಾಗುತ್ತವೆ. ಇಷ್ಟೆಲ್ಲಾ ಅನಂತ ವಿಧವಾದ ಚಟುವಟಿಕೆಗಳೂ ಪರಿಣಾಮಗಳೂ ಸೂರ್ಯ ತೇಜಸ್ಸಿನ ದಿವ್ಯ ಮಹಿಮಾ ಸಾನ್ನಿ ಧ್ಯಮಾತ್ರದಿಂದ ನಡೆಯುತ್ತವೆ.

ಓ ದಿವ್ಯಾತ್ಮ ! ಆನಂದದ ಉಗಮವೂ ಬೆಳಕಿನ ಮೂಲವೂ ಸರ್ವಾತ್ಮವೂ ಆಗಿ—ಎಂದೆಂದಿಗೂ ಆಗಿಯೇ ಇರುವೆನೆಂಬ ನಿಶ್ಚಯ ಜ್ಞಾನದಿಂದ—ಸುಮ್ಮನೆ ಬೆಳಗಬೇಕು; ಹಾಗಾದರೆ ಶಕ್ತಿಯೂ ಪ್ರಾಣವೂ ಕ್ರಿಯೆಯೂ ನಿಮ್ಮಿಂದ ಸ್ವಾಭಾವಿಕ ವಾಗಿಯೇ ಪ್ರಸರಣವಾಗುತ್ತವೆ. ಹೂವು ಅರಳಿದರೆ, ಸುಗಂಧವು ತಾನಾಗಿಯೇ ಹೊರಹೊಮ್ಮುತ್ತದೆ.

ಈಜಿನ ಕಲೆಯು ಬಾರದಿರುವವನು ಆಕಸ್ಮಾತ್ತಾಗಿ ಸರೋವರದಲ್ಲಿ ಬಿದ್ದರೆ, ಅವನು ನೀರಿನಿಂದ ಸ್ವಾಭಾವಿಕವಾಗಿಯೇ ತೇಲಿಸಲ್ಪಡುತ್ತಾನೆ; ಆದರೆ ಅವನು ಗಾಬರಿ ಯಿಂದ ಹತಾಶನಾಗಿ, ಹುಚ್ಚು ಸಾಹಸದಿಂದ ಕೈಕಾಲುಗಳನ್ನು ಬಡಿದು ಒದ್ದಾಡಿ ಹೆಣಗಾಡಿ, ಸಹಾಯಶೂನ್ಯನಾಗಿ ಮುಳುಗುತ್ತಾನೆ. ಆದ್ದರಿಂದ ಚಿಂತಾತಂಕಗಳಿಂದ ಕ್ಷೀಣವಾಗಿ ಹೋರಾಡುವ ಕ್ಷುದ್ರವಾದ ಅಹಂಕಾರವೇ ಮನುಷ್ಯನಿಗೆ ಮುಳುಗಿಸಿ ಪ್ರಾಣ ಕಳೆಯುವ ಮೃತ್ಯುವಾಗಿದೆ. ಜಲಾಲ್–ಇ—ರುಮಿ ಹೇಳುವದೇನೆಂದರೆ:

ಕಾಡಿನಲಿರ್ದ ಇಸ್ರೇಯೆಲರಿಗೆ ನಿತ್ಯದಲಿ,
ಸ್ವರ್ಗೀಯ ಅಮೃತಾಹಾರವನು (ಮನ್ನಾ) ದೇವ ಸುರಿಸಿದನು;
ಕೆಲ ನಾಚಿಕೆಗೇಡಿ ಅಪಹಾಸಕರು, ಮೋಸೆಸ್‌ನ ಪಡೆಯೊಳಗೆ,
ನೀರುಳ್ಳಿಗಳ ಧೃಷ್ಟತನದಿ ಕೇಳಲ್ಕೆ
ಕಳೆದುಕೊಂಡರವರಾ ದೇವ ಪ್ರಸಾದ "ಮನ್ನ" ವನು.

ತಲೆಯು ನೋಯುವದಕ್ಕೂ ಬೆನ್ನು ಬಗ್ಗುವದಕ್ಕೂ ಎದೆಯಲ್ಲಿ ಉಸಿರು ಕಟ್ಟುವದಕ್ಕೂ ಕಾರಣವೇನು ? ಕಾಲಿನಿಂದ ನಡೆಯುವದಕ್ಕೆ ಬದಲು ತಲೆಯಿಂದ

ನಡೆಯುವ ಪ್ರಯತ್ನವೇ ಕಾರಣ. ನಿಮ್ಮ ಕಾಲುಗಳು ಭೂಮಿಯ ಮೇಲಿರಲಿ; ತಲೆಯು ದಿವ್ಯವಾದ ಆನಂದದಿಂದ ತುಂಬಿ ಗಾಳಿಯಲ್ಲಿ ತೇಲಾಡುತ್ತಿರಲಿ. ಈ ದೈವ ನಿಯಮವನ್ನು ತಲೆ ಕೆಳಗುಮಾಡಬೇಡಿ. ತಲೆಯ ಮೇಲೆ ಭೂಮಿಯನ್ನು ಹೊತ್ತು ಅದನ್ನು ವಿವೇಕ ಜೀವನವೆಂದು ಕರೆಯಬೇಡಿ. ತೋರಿಕೆಗಳನ್ನು ದಿವ್ಯವಾದ ನಿಜಾತ್ಮಕ್ಕಿಂತಲೂ ಹೆಚ್ಚು ಸತ್ಯವೆಂದು ತಿಳಿಯಬೇಡಿ.

ನಾಯಿ ಕೊಡೆ (ಅಣಬೆ) ಗಳನ್ನು ಹುಡುಕಿಕೊಂಡು ಅಡವಿಯಲ್ಲಿ ತಿರುಗುವವರು ಕಾಲು ಕೆಳಗೆ ಎತ್ತರವಾದ 'ಓಕ್' ಮರಗಳನ್ನು ತುಳಿದಾಡುವರೆಂದು ಹೇಳುವರು. ಪ್ರೇಮಾತ್ಮ ! ಶಾಶ್ವತವಾದ ಆನಂದ (ಆತ್ಮ)ವನ್ನು ಕಳೆದು ಕೊಳ್ಳುವದಕ್ಕಾಗಿ ಕ್ಷುದ್ರವಾದ ಲಾಭ ನಷ್ಟಗಳ ಮೇಲೆ ನಿಮ್ಮ ಲಕ್ಷ್ಯವನ್ನು ಏಕೆ ವ್ಯುತ್ಯುವಾಗಿ ಇರಿಸುತ್ತಿ ? ಯಾವ ಕಾರ್ಯವನ್ನಾದರೂ ಹೊಣೆಗಾರಿಕೆ ಹೊತ್ತ, ಕರ್ತವ್ಯಹತವಾದ ಗೌರವ ಭರಿತ ಮಿಥ್ಯಾ ಅಹಂಕಾರವೇ ಸಾಧಿಸುವದು ? ಕುದುರೆಯ ಬೆನ್ನಿನ ಮೇಲೆ ಕುಳಿತಿರುವ ಒಂದು ಚಿಗಟವು— ಕೀಟವು— ಅದೇ ರೀತಿಯಲ್ಲಿ ಕುದುರೆಯನ್ನೂ ಸಾರೋಟನ್ನೂ ತಾನೇ ಓಡಿಸುತ್ತಿದ್ದೇನೆಂದು ಹಕ್ಕಿನಿಂದ ಹೇಳಿಕೊಳ್ಳಬಹುದು.

ಆನಂದಾವಿಷ್ಟ ಸತ್ಯದ ಪ್ರಜ್ವಲಿಸುವ ಸ್ಫೋಟದ ಹಾದಿಯಲ್ಲಿ ಅಹಂಕಾರವು ನುಗ್ಗಿ ತಲೆಹಾಕದಂತೆ ನೋಡಿಕೊಳ್ಳಿ. ಆ ಶಕ್ತಿಯನ್ನು ನಂಬಿ, ನಂಬಿ. ಯಾವ ನಿಜಾತ್ಮನ ಇರುವಿಕೆಯು ಅತ್ಯಂತ ಕನಿಷ್ಠವಾದ ಬಡಪಾಯಿ ಜೀವಾಣುವನ್ನು ದಿವ್ಯವಾದ ನಿಮ್ಮ ಮಾನವ ರೂಪದವರೆಗೆ ಅರಿಯದೆ ವಿಕಾಸವಾಗುವಂತೆ ಮಾಡಿದೆಯೋ ಆ ಅತ್ಯಂತ ಶ್ರೇಷ್ಠವಾದ ಆತ್ಮವು—ಆ ದೈವೀ ನಿಯಮವು—ಈಗಲೂ ಸರ್ವಸಮರ್ಥವಾಗಿ ಇದೆ. ಆ ದೇವರು ನಿದ್ರಿಸಿಯೂ ಇಲ್ಲ, ಸತ್ತೂ ಇಲ್ಲ ಆದ್ದರಿಂದ ನಿಮಗೆಂದೂ ಪತನದ ಭಯವಿಲ್ಲ.

ಪ್ರವಾಹವು ಎತ್ತ ಹರಿಯುವದೆಂಬದನು ಅರಿಯದಲೆ,
ಕಡಲ ಮೇಲೆ ನಿದ್ರಿಸುವ ವಿಹಗಗಳಂತೆ,
ತಾರಾ ಸೂರ್ಯರ ಆವರಿಸಿಹ ದೇವರ
ಅನಂತಾನಂದದ ಮೇಲೆ ಪವಡಿಸಿಹೆವು.

ಅಮೆರಿಕಾದ ಬ್ರಹ್ಮಚಾರಿ ಥೋರೋ ಹೇಳಿರುವದೇನೆಂದರೆ,
ದೇವರಿಗೆ ನಾವು ಬಿಡುವದನೆಲ್ಲ ಅವನೆ ಮಾಡುವನು,
ಮತ್ತೆ ಎಮ್ಮನನುಗ್ರಹಿಸುವನು ;
ನಮ್ಮದೆಂದೇ ಆರಿಸಿಕೊಳುವ ಕಾರ್ಯವನು
ನಮ್ಮದೆಂದೇ ಕೈಬಿಡುವನು.

ತಾನು ನೆರೆಯಾಳೆಂದೂ ಪರಿಸ್ಥಿತಿಗಳಿಗೂ ಸನ್ನಿವೇಶಗಳಿಗೂ ತಾನು ಗುಲಾಮನೆಂದೂ ಭಾವಿಸುವದಕ್ಕೆ ಇನ್ನೊಂದು ಹೆಸರೇ ಸಂಕಷ್ಟ, ತೊಂದರೆ, ನೋವು—ಎನ್ನಬಹುದು. 'ನಾನು ಪ್ರತ್ಯೇಕ ಸ್ವತಂತ್ರ ಎನ್ನುವ ಎಲ್ಲಾ ನಾಸ್ತಿಕ ಭ್ರಮೆಗಳನ್ನೂ ಜಾಡಿಸಿ ಹಾಕಿ, ತೊಲಗಿಸಿ. ಹೊರಗಿನ ಪ್ರಕೃತಿಯನ್ನು ಆಳುವ ಆತ್ಮಶಕ್ತಿಯು ನಿಮ್ಮ ಆತ್ಮಶಕ್ತಿಯಿಂದ ಬೇರೆಯಾಗಿದ್ದರೆ ಕೈಕೈ ಹಿಸುಕಿಕೊಂಡು, ತಲೆಯನ್ನು ತಗ್ಗಿಸಿ, ಭಂಗ ಪಡೆಯಬೇಕಾಗಿತ್ತು.' ಆದರೆ ನಿಜವಾಗಿರುವದೇನೆಂದರೆ, ಒಂದು ದೃಷ್ಟಿಯಿಂದ ನೀವು ಸುತ್ತಲ ಸನ್ನಿವೇಶಗಳ ಭದ್ರವಾದ ಕೋಟೆಯೊಳಗೆ ಸಿಕ್ಕಿಕೊಂಡಂತೆ, ಸೆರೆಯಾಳಾಗಿರುವಂತೆ ಕಂಡರೆ, ಇನ್ನೊಂದು ದೃಷ್ಟಿಯಿಂದ ಆ ಸನ್ನಿವೇಶ—ಪರಿಸ್ಥಿತಿಗಳೇ ನೀವಾಗಿ ಕಾಣುತ್ತೀರಿ. ಕನ್ನಡಿಯು ನನ್ನಲ್ಲಿ (ನನ್ನ ಕೈಯಲ್ಲಿ)ಯೂ ಇದೆ; ನಾನು ಕನ್ನಡಿಯಲ್ಲಿಯೂ ಇದ್ದೇನೆ.

ಎನ್ನ ಬಾಗಿಲ ಮೇಲೆ ತಟ್ಟಿದೇಟು ಬಲವಾದ ಪೆಟ್ಟು, ಕೇಳಿದೆನು;
"ಹೋ! ಯಾರದು?" ಎಂದು ಕೂಗಿದೆನು.
ಬೆರಗಾಗಿ ಮೈಮರೆತು ಕಾದೆ ಕುತೂಹಲದಿ,
ಓ! ಮಿದುವಾಗಿ ಸವಿಯಾಗಿ ಪ್ರೇಮ ಪಿಸುಗುಟ್ಟಿತು ನಯದಿ,
"ತಟ್ಟಿದವ ನೀನೆ ಎಂಬುದನರಿಯೆಯ?"

ಮುಸಲ್ಮಾನರ ಶಾಸ್ತ್ರಗಳ ನಿಜವಾದ ವ್ಯಾಖ್ಯಾನದಂತೆ ಮಾನವನಲ್ಲಿರುವ ಪರಮೋತ್ತಮ (ಪರಮಾತ್ಮ)ನನ್ನು ಗುರುತಿಸುವದಕ್ಕೂ ಗೌರವಿಸುವದಕ್ಕೂ ನಿರಾಕರಿಸಿದ್ದಕ್ಕಾಗಿ ಆತ್ಮನಾಶದ ಅಧಃಪಾತದಲ್ಲಿ ಬೀಸಿ ಎಸೆಯಲ್ಪಟ್ಟನು. (ಅಲಾಸ್ತು ಕ್ವಾಲುಬಾಲ... ಇತ್ಯಾದಿ.) ಮತ್ತು ಮನುಷ್ಯನಲ್ಲಿ (ಅಹಮದ್) ದೇವರನ್ನು (ಅಹದ್) ಮನಗಾಣುವದರ ಮೂಲಕ ಪರಮ ಪಾಪಿಷ್ಠರೂ ಸ್ವರ್ಗಕ್ಕೆ ಹಕ್ಕುದಾರರಾಗುತ್ತಾರೆ.

"ನನ್ನ ಆತ್ಮವೇ ಮಿಕ್ಕ ಎಲ್ಲರ ಆತ್ಮ" ಎನ್ನುವ ವ್ಯವಹಾರ ಸಾಧ್ಯವಾದ, ಜೀವಂತ ದರ್ಶನವೇ ಇಸ್ಲಾಂ ಮತದ —ಶ್ರದ್ಧೆಯ— ನಿಜವಾದ ಅಭಿಮತವು.

ಇದನ್ನು ಬರಿ ನಂಬಿಕೆಯೆಂದು ಹೇಳುವದು ಅದಕ್ಕೆ ನ್ಯಾಯವನ್ನು ಮಾಡಿದಂತೆ ಆಗುವದಿಲ್ಲ. ವೇದಾಂತವು ಕಟ್ಟ ಕಡೆಯ ವಿಜ್ಞಾನ (Ultimate science). ಅದು ಕಲೆಗಳಿಗೆಲ್ಲಾ ಕಲೆ.

ಸತ್ಯದ ಅಂತಿಮ ಪರೀಕ್ಷೆಯು "ಇದು ಪ್ರಯೋಗಸಾಧ್ಯವೆ? ಇದನ್ನು ನಂಬಿ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬಹುದೆ?" ಎಂಬ ಪ್ರಶ್ನೆಯ ಉತ್ತರದಲ್ಲಿದೆ— ಎಂದು ಡಾಕ್ಟರ್ ಡಿ. ಎಸ್. ಜೋರ್ಡನ್ ಹೇಳಿದ್ದಾರೆ.

ಎಲ್ಲಾ ಪ್ರಕೃತಿ ವಿಲಾಸಕ್ಕೂ ಆಧಾರವಾದ ಸತ್ಯಕ್ಕೆ—"ನಾನೂ ನನ್ನ ತಂದೆಯೂ ಒಂದೇ" ತತ್ತ್ವಮಸಿ—"ಅದೇ ನೀನಾಗಿದ್ದಿ"—ಎಂಬ ಪರ ತತ್ತ್ವಕ್ಕೆ ನಿಮ್ಮ ಜೀವನವನ್ನೂ ಎಲ್ಲವನ್ನೂ ಸುರಕ್ಷಿತವಾಗಿ ಒಪ್ಪಿಸಬಹುದು.

ಗುರುತ್ವಾಕರ್ಷಣ ನಿಯಮವಾದರೂ ನಿಮ್ಮ ನಂಬಿಕೆಯನ್ನು ವಂಚಿಸಬಹುದು; ಆದರೆ ಆಧ್ಯಾತ್ಮಿಕ ಏಕತ್ವದ ನಿಯಮವು ಮಾತ್ರ ಎಂದೂ ವಂಚಿಸುವದಿಲ್ಲ. ಈ ಏಕತ್ವವನ್ನು ತೀವ್ರವಾಗಿ ಭಾವಿಸಿದರೆ ಸಾಕು; ಸಮಸ್ತ ಸೃಷ್ಟಿಯೂ ನಿಮ್ಮ ಸ್ವಂತ ದೇಹ ದಂತೆ ವರ್ತಿಸುವದನ್ನು ಕಾಣುತ್ತೀರಿ. ಓ ಮೂಢನಾದ ಅಮೃತಾತ್ಮ! ನೀನು ಪ್ರಾಣಕ್ಕೆ ಪ್ರಾಣ, ಸೂರ್ಯ ನಕ್ಷತ್ರಾದಿಗಳ ಪ್ರಕಾಶಕ್ಕೆ ಪ್ರಕಾಶ. ಬೆಳ್ಳಿ ಬಂಗಾರಗಳಿಗೆ ಕಳೆಯನ್ನು ಕೊಡುವಾತನೂ ನೀನೇ.

ಹೊರಗಿನ ಅಭಿಪ್ರಾಯಗಳ ಹೊರೆ, ಕೃತಕ ಸಂಪ್ರದಾಯಗಳು ಮೊದ ಲಾದವುಗಳ ಭಾರ,—ಇವು ಮಹತ್ತಾದ ಹಿಮಾಲಯದಂತೆ ಬೆನ್ನಮೇಲೆ—ಅಲ್ಲ, ಎದೆಯ ಮೇಲೆ ಕುಳಿತಿರುವದರಿಂದ ಜನರು ವೇಗವಾಗಿ ಮುಂದುವರಿಯುವದಿಲ್ಲ; ಅವರು ಒಂದು ಹೆಜ್ಜೆಯನ್ನು ಮುಂದಿಡುವದೂ ಕಷ್ಟವಾಗುತ್ತದೆ. ಅಸ್ವಸ್ಥತೆಗೆ ಕಾರಣ ವಾದ ಎಲ್ಲಾ ಪರಿಮಿತಿಯ ಮೂಢ ನಂಬಿಕೆಗಳಿಂದಲೂ ನಿಮ್ಮನ್ನು ನೀವು ಬಿಡುಗಡೆ ಮಾಡಿಕೊಳ್ಳಿ. ತನ್ನೊಳಗೆ ಪ್ರಪಂಚವನ್ನು ಬಿಟ್ಟ ಕೂಡಲೇ ಕರಗಿಸಿಬಿಡುವ ಒಂದು ರಾಸಾಯನಿಕ ದ್ರವವು ನಿಮ್ಮ ಮನಸ್ಸಿನಲ್ಲಿ ಇರಬೇಕು.

ವಿಶ್ವವನ್ನೇ ಕರಗಿಸುವ ಜ್ಞಾನವು ವಿಶ್ವವನ್ನು ಲೀನಗೊಳಿಸಿ ತನ್ನ ದ್ರವ ಸ್ಥಿತಿ ಯಲ್ಲಿ ಇಟ್ಟುಕೊಂಡರೂ ಎಂದಿನಂತೆ ಶಿಥಿಲ ಪಾರದರ್ಶಕವಾಗಿರುತ್ತದೆ: ನೀವು ಸರಿಯಾಗಿ ವಿಚಾರಮಾಡಿದ್ದೇ ಆದರೆ, ಸ್ವರ್ಗವು ಕಳಚಿ ಬಿದ್ದರೂ ಭೂಮಿಯು ಬಾಯಿ ತೆರೆದರೂ ನಿಮ್ಮ ಮುನ್ನಡೆಗೆ ಸಹಾಯವಾಗುವ ಸಂಗೀತವೇ ಆಗುತ್ತದೆ. ಯಾವ ಶತ್ರುವೂ ನಿಮ್ಮನ್ನು ಎಂದೂ ನೋಡಲಾರನು ; ನೀವೂ ಶತ್ರುವನ್ನು ನೋಡಲಾರಿರಿ. ನಿಮ್ಮ ಮನಸ್ಸಿನಲ್ಲಿ ಶತ್ರು ಎನ್ನುವ ಕಲ್ಪನೆ ಸಹ ಬರಲಾರದು.

ಸಂಗೀತದಲ್ಲಿ ಬೇರೆ ಬೇರೆ ಸ್ವರಗಳು ಕಾರಣ—ಕಾರ್ಯ ಪರಂಪರೆಯಲ್ಲಿ ಕ್ರಮ ವಾಗಿ ಒಂದನ್ನೊಂದು ಅನುಸರಿಸಿ ಬರಬಹುದು. ಸ್ವರಮೇಳವು ಸ್ವರ ಸಾಂಗತ್ಯ—ಸಾಮರಸ್ಯಗಳು ಕೇವಲ ಸ್ವರಗಳ ಆರೋಹಣ— ಅವರೋಹಣಗಳ ಪರೀಕ್ಷೆಯಿಂ ದಾಗಲೀ ಹೋಲಿಕೆಯಿಂದಾಗಲೀ ತಿಳಿಯುವದಿಲ್ಲ. ಆದರೆ ಆ ಸಂಗೀತ ಕೃತಿಯನ್ನು ಅಥವಾ ಆ ರಾಗವನ್ನು ಪ್ರೇರಿಸಿ, ವಿಸ್ತರಿಸಿ, ಆಲಾಪನೆ ಮಾಡುವದಕ್ಕೆ ಮೂಲ ಪ್ರಚೋದಕವಾದ ಅತ್ಯಂತ ಆಳವಾದ ಭಾವನೆ ಯಾವದು? ಅದಕ್ಕೂ ಆ ಕೀರ್ತನೆಗೂ ಸಂಬಂಧವೇನು? ಆ ಗೀತಾಗಾನದ ಆದಿ ಯಾವದು? ಅಂತಿಮ ಪರಿಣಾಮವೇನು?

ಆ ಕೀರ್ತನೆಯ "ಶ್ರೀಃ—ಓಂ" ನಾಮದ, ಅ—ದಿಂದ ಕ್ಷ—ದ ವರೆಗೆ ಅನುಭವದಿಂದ ವಿಮರ್ಶೆಮಾಡಿದಾಗ ಮಾತ್ರ ಅದರ ಸಮಸ್ತ ಸ್ವಾರಸ್ಯವೂ ವೇದ್ಯವಾಗುತ್ತದೆ.

ಹೀಗೆಯೇ ಆಳವಿಲ್ಲದ ಮೇಲು ಮೇಲಿನ ಪ್ರಕೃತಿ ನಿಯಮಗಳನ್ನು ಮತ್ತು ಹೊರಹೊರಗಿನ ಕಾರಣಗಳನ್ನು ವಿಚಾರಮಾಡುವದರಿಂದ ಮಾತ್ರ ಪ್ರಕೃತಿ ರಹಸ್ಯಗಳನ್ನು ತಿಳಿಯುವದಕ್ಕೂ ವಿವರಿಸುವದಕ್ಕೂ ಸಾಧ್ಯವಾಗುವದಿಲ್ಲ. ಆದರೆ "ಪ್ರಕೃತಿಯು ಮನುಷ್ಯನ ಶರೀರವೇ ಆಗಿರುವದರಿಂದ" ಅವನಿಗೆ ಅದರ ತತ್ತ್ವವು ಅರ್ಥವಾಗುವದಕ್ಕೆ ಸಾಧ್ಯವಾಗಿದೆ.

"Unless you feel all, you know not all"

"ನೀವು ಸಕಲವನ್ನೂ ಭಾವಿಸಿ, ಸಕಲದರಲ್ಲಿ ಒಂದಾಗಿ ಅನುಭವ ಮಾಡಿದ ಹೊರತು, ಸಕಲವನ್ನೂ ತಿಳಿಯಲಾಗುವದಿಲ್ಲ." ನೈಜವಾದ ಇರುವಿಕೆಯೊಳಗೆ ಆಳವಾಗಿ ಮುಳುಗಿ, ನಾಮರೂಪಗಳ ಕೆಳಗೆ ತಳವನ್ನು ಪರೀಕ್ಷಿಸಿ, ಕಂಡು ಹಿಡಿದು, ಅರಣ್ಯಗಳಲ್ಲಿಯೂ ಹೊಲ–ಹುಲ್ಲುಗಾವಲುಗಳಲ್ಲಿಯೂ ಪರ್ವತಗಳಲ್ಲಿಯೂ ನದಿಗಳಲ್ಲಿಯೂ ರಾತ್ರಿಯಲ್ಲಿಯೂ ಹಗಲಲ್ಲಿಯೂ ಮೋಡಗಳಲ್ಲಿಯೂ ನಕ್ಷತ್ರಗಳಲ್ಲಿಯೂ ಸ್ತ್ರೀಯರಲ್ಲಿಯೂ ಪುರುಷರಲ್ಲಿಯೂ ಪ್ರಾಣಿಗಳಲ್ಲಿಯೂ ದೇವತೆಗಳಲ್ಲಿಯೂ ಪ್ರತಿಯೊಂದರ ಸಕಲರ ಆತ್ಮವಾಗಿ ಸ್ವಚ್ಛಂದತೆಯಿಂದ ವಿಹರಿಸುವದೇ ಆತ್ಮಜ್ಞಾನ, ಮುಕ್ತಜೀವನ ಇದೇ ವ್ಯವಹಾರ ಯೋಗ್ಯವಾದ ಜಾಣತನ, ವಿವೇಕ. (This is practical wisdom)

ಇಡೀ ಜಗತ್ತಿನೊಡನೆ ಯಾರು ಒಂದಾಗಿ ತಿಳಿಯುತ್ತಾರೋ ಅವರೊಡನೆ ಇಡೀ ಜಗತ್ತೇ ಸಹಕಾರದಿಂದ ಕೆಲಸಮಾಡುವದಕ್ಕೆ ಬದ್ಧವಾಗಿರುತ್ತದೆ.

ಜ್ಞಾನವು—ಸತ್ಯದ ಜೀವಂತ ಜ್ಞಾನವು —ಮೂಲ— ಜಗತ್ ಕಾರಣ ಭೂಮಿಕೆಯಲ್ಲಿ ಅನುಭವಕ್ಕೆ ಬಂದರೆ, ಭಾವಪರವಶತೆಯಿಂದ ಮುಳುಗಿಸಿ ಬಿಡುವ ಉತ್ಕಟ ಪ್ರೇಮವಾಗುತ್ತದೆ. ಸರ್ವೋಽಹಂ, 'ಸರ್ವವೂ ನಾನೇ' ಎನ್ನುವ ಅನುಭವ ರೂಪವಾದ ಸ್ಥಿರವಾಗಿರುವ ಪರಮಾನಂದವು ಯಾವ ಫಲವನ್ನೂ ಪ್ರಶಸ್ತಿಯನ್ನೂ ಶ್ಲಾಘನೆಯನ್ನೂ ಅಪೇಕ್ಷಿಸದಿದ್ದರೂ ನಿತ್ಯ ಪ್ರಕಾಶರೂಪವಾದ ಸೂರ್ಯನಂತೆ ಮನೋಭೂಮಿಕೆಯಲ್ಲಿ ತ್ಯಾಗ ರೂಪವಾಗಿಯೂ ಭೌತಿಕ ಭೂಮಿಕೆಯಲ್ಲಿ ಆಶ್ಚರ್ಯಕರವಾದ ಶಕ್ತಿಯಾಗಿಯೂ ಪ್ರಬಲವಾದ ಕಾರ್ಯವಾಗಿಯೂ ಅಭಿವ್ಯಕ್ತವಾಗುತ್ತದೆ.

ಆದ್ದರಿಂದ ಜ್ಞಾನವೆಂದರೆ, ಕಾರ್ಯರೂಪದಲ್ಲಿ ತೋರಿಕೊಳ್ಳುವ ಪ್ರೇಮಪೂರ್ವಕವಾದ ತ್ಯಾಗವೆಂದು ತಿಳಿಯಬೇಕು.

ಎನಗೆ ಮಾರ್ಪಾಟಿನ ಶಂಕೆಯಿಲ್ಲ, ಸಾವಿನ ಭಯವಿಲ್ಲ,
ನಾನೆಂದೂ ಹುಟ್ಟಿದವನಲ್ಲ;
ನನಗೆ ತಂದೆ ತಾಯಿಗಳಿಲ್ಲ.
ನಾನು ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದವು.
ಅದೇ ನಾನು, ಅದೇ ನಾನು.
ಎನ್ನಿಂದ ದುಃಖವಿಲ್ಲ; ಎನ್ನಲ್ಲಿ ದುಃಖವಿಲ್ಲ,
ಎನಗೆ ಶತ್ರುವಿಲ್ಲ; ನಾನು ಶತ್ರುವಲ್ಲ.
ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದ ನಾನು.
ಅದೇ ನಾನು; ಅದೇ ನಾನು.
ಎನಗೆ ರೂಪವಿಲ್ಲ, ಮಿತಿಯಿಲ್ಲ.
ದೇಶದ ಆಚೆ, ಕಾಲದ ಆಚೆ,
ಪ್ರತಿಯೊಂದರಲಿ ನಾನಿಹೆನು,
ನನ್ನಲ್ಲಿ ಎಲ್ಲವಿಹವು.
ವಿಶ್ವದ ಆನಂದವು ನಾನು.
ಎಲ್ಲೆಲ್ಲಿಯೂ ನಾನೆ ಇಹೆನು.
ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದ ನಾನು.
ಅದೇ ನಾನು, ಅದೇ ನಾನು.
ನಾನು ಶರೀರವಿಲ್ಲದವ ಅಥವಾ ಶರೀರದ ಮಾರ್ಪಾಡುಗಳಿಲ್ಲದವ,
ನಾನು ಇಂದ್ರಿಯವಲ್ಲ, ಇಂದ್ರಿಯ ವಿಷಯವಲ್ಲ.
ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದ ನಾನು.
ಅದೇ ನಾನು, ಅದೇ ನಾನು.
ಪಾಪವೂ ನಾನಲ್ಲ, ಪುಣ್ಯವೂ ನಾನಲ್ಲ.
ದೇವಾಲಯವಲ್ಲ, ಪೂಜೆಯಲ್ಲ.
ಯಾತ್ರೆಯಲ್ಲ, ತೀರ್ಥವಲ್ಲ, ಗ್ರಂಥಗಳಲ್ಲ.
ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದ ನಾನು.
ಅದೇ ನಾನು, ಅದೇ ನಾನು.
ಎನ್ನ ಹೃದಯ ದೇಗುಲದಿ
ಪ್ರೇಮದ ಬೆಳಕು ತನ್ನ ಮಹಿಮೆಯ ಚೆಲ್ಲುತಿದೆ.
ತೋರಿಕೆಯ ಚುಚ್ಚು ಮುಳ್ಳುಗಳಿದ್ದರೂ
ಪ್ರೇಮಪುಷ್ಪವು ಸ್ವಚ್ಛಂದ ಸೌರಭವ ಪ್ರಸರುತಿಹುದು.
ಉಕ್ಕುಕ್ಕಿ ಹರಿಯುವ ಹರ್ಷದ ಚಿರಂತನ ಚಿಲುಮೆಗಳು
ಅತ್ಯುಜ್ಜ್ವಲದಿ ಥಳಥಳಿಪ ಪ್ರಭೆಯ ಸೂಸುತಿವೆ.

ಸ್ವರ್ಗೀಯ ಮಂದಾನಿಲ ರೆಕ್ಕೆಗಳ ಮೇಲೆ
ಉನ್ಮಾದಕರ ಮಧುರಗೀತೆಗಳು ಬೀಸುತಿವೆ.
ಆಹಾ ! ಶಾಂತಿ, ಆನಂದ, ಸಂಗಾನ, ಸಮರಸಭಾವ.
ಆನಂದ, ಓ, ಎಷ್ಟು ದಿವ್ಯ !
ಅಲೆ ಅಲೆಯಾಗಿ ಉರುಳುರುಳಿ ಹರಿವ ಅತ್ಯಂತ ಮಧುರಗಾನ
ಹುಚ್ಚು ಹೊಳೆ ಎನ್ನದು.
ಸುವರ್ಣಗರಿಗಳ ಸ್ವಚ್ಛಂದ ಪಕ್ಷಿಗಳೆ ಹಾಡಿ,
ಸಂತೋಷ ಮೇಣ್‌ಸ್ತುತಿಯ ಉಲ್ಲಾಸ ಗೀತೆಗಳ.
ಹರ್ಷಲಜ್ಜಿತ ಚಿಲುಮೆಯ ಸವಿ ಹನುಳೆಗಳೆ,
ಸ್ವಾಗತದ ಗಂಭೀರ ಗೀತೆಯನುಚ್ಚರಿಸಿ.
ಮುಂಜಾನೆಯುದಯದಾ ಗುಲಾಬಿಯ ರಂಗುಗಳೆ
ಹುಲ್ಲುಗಾವಲುಗಳನು, ಕೊಳಗಳನು, ಬೆಟ್ಟಗಳನಲಂಕರಿಸಿ.
ನಿರಂತರ ಕೃಪೆಯ ಪ್ರಭಾ ಮಂಡಲವು
ಶಾಂತ ಶೀತಲ ಅಮೃತ ವರ್ಷಣವ ಮೆದುವಾಗಿ ಸುರಿಸುತಿದೆ.
ಮೋಹಕ ವರ್ಣಗಳ ಕಾಮನ ಬಿಲ್ಲಿನ ಕಮಾನು
ವಿಶಾಲ ಕ್ಷಿತಿಜವನು ಸವಿನಗುಗಳಿಂ ರಂಜಿಸುತಿದೆ.
ಮಿರು ಮಿರುಗುವ ಮಂಜು ಹನಿಗಳ ಪುಟಾಣಿ ಮುತ್ತುಗಳು
ಆಗೋ ! ತಮ್ಮ ಹೃದಯಗಳಲಿ ರವಿಯನೊಳಗೊಂಡಿಹವು.
ಓ ಸಂತೋಷ ! ಒಲವು—ಬೆಳಕುಗಳ ರವಿಯು
ಎಂದೂ ಮುಳುಗದಿಹ ಜೀವನದ ಭಾನು
ನಾನಿಹೆನು ; ನಾನಿಹೆನು.
ಆ ಮೆಚ್ಚಿನ ಪ್ರಿಯತಮನು
ಹತ್ತಿರ ಹತ್ತಿರ ಬಂದನು,
ನಗು ನಗುತ ನಸು ನೋಡುತ,
ಹಾಡುತ ಕುಣಿಯುತ (ಬಂದನು)
ಸುಯ್ದು ಬಾಗಿದೆನು,
ಅವನುತ್ತರಿಸದಿದ್ದನು.
ಮಂಡಿಯೂರಿದೆನು, ಬೇಡಿದೆನು,
ಅವ ಬಿಟ್ಟು ಹೋದನು.
"ಹೀಗೇಕೆ ಕಡಿವೆ ಎನ್ನ ?
ನಿಲ್ಲು, ಬೇಡುವೆನು, ಹೋಗದಿರು ಮುನ್ನ."
ಮೆಲ್ಲನುತ್ತರಿಸಿದನವನು,

"ಇಲ್ಲ, ಇಲ್ಲ, ನಿಲ್ಲನೊಲ್ಲೆನು."
ಅತಿ ದೈನ್ಯದಲಿ ಮೊರೆಯಿಟ್ಟೆನು.
"ದಯಮಾಡಿ ಕುಳಿತುಕೊ, ಪ್ರಭುವೆ ! ಎನ್ನ ಪಕ್ಕದಲೆ,"
ಉತ್ತರಿಸಿದನವನು ದಯೆದಿಂದಲೆ,
"ನೀನೂ ಎನ್ನ ಪಕ್ಕದಲೆ ಕುಳ್ಳಿರುವೆಯ ?
ಹಾಗಾದರೆ ನಾನೂ ಕುಳಿತಿರುವೆ, ಬೇಡ ಸಂಶಯ."
ನಾನು—"ಪ್ರಿಯತಮ ! ಎನ್ನೊಡನೆ ನುಡಿಯಯ್ಯ"
ಅವನು—"ಒಳಗಿನ ಮೌನದಾಳದಲಿ ಮುಳುಗಿ ನೋಡಯ್ಯ."
ನಾನು—"ನಾನು ನಿನ್ನನಾಲಿಂಗಿಸಿ ಮುತ್ತಿಡುವೆ, ಪ್ರಭುವೆ,
ಪ್ರಿಯತಮ ! ದಯಪಾಲಿಸಿದೊಂದನೆ, ಬೇಡುವೆ."
ಅವನು—" ನೀನು ನಿನ್ನನೆ ಅಪ್ಪುವೆಯ, ಮುತ್ತಿಡುವೆಯ ?
ನಾನು ನಿನ್ನೊಡನೆ ಒಂದಾಗಿಹೆನು (ತಪ್ಪುವೆಯ ?) ಇದನರಿಯೆಯ ?
ನನ್ನ ರೂಪ ದಿವ್ಯ
ನಿನ್ನ ಪ್ರತಿರೂಪ ಭವ್ಯ,
ರೂಪದ ಬಯಕೆ ಏಕೆ ?
ಸೊಬಗಿನ ಮೂಲ ನೀನೆ ಜೋಕೆ !
ನಿನ್ನೊಡನೆ ನಾನಿರುವೆ,
ನೀನಾದರೋ ಹೊರ ಹಾರುವೆ,
ಹಾಗೆನ್ನ ಕಡೆಗಣಿಸಬೇಡ,
ನೀ ಹೊರಹೋಗಬೇಡ.
ಮಾರ್ಪಾಡಿನಾ ಶಂಕೆ ಎನಗಿಲ್ಲ, ಸಾವಿನಾ ಭಯವಿಲ್ಲ;
ನಾನೆಂದಿಗೂ ಹುಟ್ಟಿಯೂ ಇಲ್ಲ,
ಎನಗೆ ತಂದೆ ತಾಯಿಯರಿಂ ಇಲ್ಲ.
ಕೇವಲ ಸತ್ಯ, ಕೇವಲ ಜ್ಞಾನ, ಕೇವಲಾನಂದನು ನಾನೆ,
ಅದೇ ನಾನು, ಅದೇ ನಾನು.
ಓಂ ! ಓಂ ! ಓಂ !

---

# REINCARNATION AND FAMILY TIES

# ಪುನರ್ಜನ್ಮ ಮತ್ತು ಕುಟುಂಬ ಸಂಬಂಧಗಳು

## ತಾ 27–12–1902 ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ವಿಜ್ಞಾನಗಳ ಪ್ರೌಢವಿದ್ಯಾಶಾಲೆಯಲ್ಲಿ [Academy of Sciences] ಮಾಡಿದ ಉಪನ್ಯಾಸ

ಸಭ್ಯ ಸ್ತ್ರೀ ಪುರುಷರಲ್ಲಿರುವ ನನ್ನ ಆತ್ಮವೆ,

ಇಂಡಿಯಾ ದೇಶದಲ್ಲಿ, ಒಂದಾನೊಂದು ಕಾಲದಲ್ಲಿ, ಬಹಳ ಶ್ರೀಮಂತ ವರ್ತಕನೊಬ್ಬನು, ಅವನ ನಗರದಲ್ಲಿದ್ದ ಜನರಿಗೆಲ್ಲಾ ವೈಭವಯುತವಾದ ಔತನವನ್ನು ಏರ್ಪಡಿಸಿದನು. ಸಾಮಾನ್ಯವಾಗಿ ಅಂಥಾ ಸಂದರ್ಭಗಳಲ್ಲಿ ಅನೇಕ ವೇಶ್ಯೆ ನರ್ತಕಿಯರ ವೃಂದವನ್ನು ಆಹ್ವಾನಿಸುತ್ತಾರೆ. ಆದರೆ ಈಗ ಇಂಡಿಯಾದಲ್ಲಿ ಈ ಪದ್ಧತಿಯನ್ನು ಬಿಡುತ್ತಿದ್ದಾರೆ. ರಾಮನು ಹೇಳುತ್ತಿರುವ ಆ ಸಂದರ್ಭದ ಕಾಲದಲ್ಲಿ ಅದು ಪೂರ್ಣ ಪ್ರಭಾವದಿಂದ ಬಳಕೆಯಲ್ಲಿತ್ತು.

ಆ ನರ್ತಕಿಯರಲ್ಲಿ ಹುಡುಗಿಯೊಬ್ಬಳು ಕುಣಿಯುವದಕ್ಕೂ ಹಾಡುವದಕ್ಕೂ ತೊಡಗಿದಳು. ಆಕೆ ಅತ್ಯಂತ ಅಶ್ಲೀಲವೂ ಕಾಮುಕವೂ ಆದ ಹಾಡನ್ನು ಹಾಡುತ್ತಿದ್ದಳು. ಅಲ್ಲಿ ಕುಳಿತಿದ್ದ ದೊಡ್ಡ ಮನುಷ್ಯರಲ್ಲಿ ಯಾರೂ ಆ ಮರ್ಯಾದೆಗೆಟ್ಟ ಹಾಡನ್ನು ಬೇರೆ ಸಂದರ್ಭದಲ್ಲಿ ಬೇರೆಯವರಿಂದ ಕೇಳಿದ್ದರೆ—ಸಂತೋಷ ಪಡುವದಿರಲಿ—ಸಹಿಸುತ್ತಲೂ ಇರಲಿಲ್ಲ. ಆದರೆ ಅಷ್ಟು ಹೀನಾಯವಾದ ಹಾಡನ್ನು ಆಕರ್ಷಕವಾದ ಹಾವ—ಭಾವ—ವಿಲಾಸಗಳಿಂದ ಆ ಸುಂದರ ನರ್ತಕಿಯು ಹಾಡಿದಾಗ ಇಡೀ ಸಭೆಯಲ್ಲಿ ಎಲ್ಲರ ಹೃದಯದಲ್ಲಿಯೂ ಆ ಹಾಡು ಆಳವಾಗಿ ಪ್ರವೇಶಮಾಡಿತು. ಅದಕ್ಕೆ ಕಾರಣವೇನು? ಇಂಡಿಯಾದಲ್ಲಿ ಸಾಮಾನ್ಯವಾಗಿ ವಿದ್ಯಾವಂತರೂ ಸಭ್ಯ ತರುಣರೂ ಅಂಥಾ ಕೆಟ್ಟ ಗ್ರಾಮ್ಯ ಗೀತೆಗಳನ್ನು ಕೇಳುವದಕ್ಕೆ ಇಷ್ಟ ಪಡುವದಿಲ್ಲ. ಆದರೆ ಆ ಸಂದರ್ಭದಲ್ಲಿ ಆ ನೀಚ ಪದವು ಸಭಿಕರನ್ನೆಲ್ಲಾ ಸಮ್ಮೋಹನಗೊಳಿಸುವಷ್ಟು ತಂತ್ರವಾಗಿ ಅವರ ಹೃದಯದಲ್ಲಿ ನುಸುಳಿಕೊಂಡು ಹೋಗಿ ಪ್ರಬಲವಾಗಿ ಹಿಡಿಯಿತು. ಆ ಪ್ರಸಂಗವು ನಡೆದು ಕೆಲವು ತಿಂಗಳ ಮೇಲೂ ಆದಿನ ಕೇಳಿ ಮುಗ್ಧರಾಗಿದ್ದ ಅನೇಕ ವಿದ್ವಾಂಸರು ಬೀದಿಯಲ್ಲಿ ಹೋಗುತ್ತಿರುವಾಗಲೂ ತಮಗೆ ತಾವೇ ಅದೇ ತುಚ್ಛ ಪದವನ್ನು ಗೊಣಗಿ ಹಾಡಿಕೊಳ್ಳುತ್ತಿದ್ದರು; ಮರ್ಯಾದಸ್ಥರೂ ಆ ಹೇಯ ಪದವನ್ನು ತಮ್ಮಷ್ಟಕ್ಕೆ ತಾವು ಮೈಮರೆತು— ಸುತ್ತಲ ಎಚ್ಚರವಿಲ್ಲದೆ— ಸಿಳ್ಳುಹಾಕಿ ಹೇಳಿಕೊಳ್ಳುತ್ತಿರುವದು ಕಂಡುಬಂದಿತು. ಅದನ್ನು ಒಮ್ಮೆ ಕೇಳಿ ಮಾರುಹೋಗಿದ್ದ ಅವರೆಲ್ಲರೂ

ಆ ಪಾಪಿ ಪದವನ್ನು ಅತಿಯಾಗಿ ಪ್ರೀತಿಸಿ ತಮ್ಮ ತಮ್ಮ ಹೃದಯಗಳಲ್ಲಿ ಅಕ್ಕರೆಯಿಂದ ಮತ್ತೆ ಮತ್ತೆ ಅಭ್ಯಾಸ ಮಾಡಿ ಪೋಷಿಸಿಕೊಂಡಿದ್ದರು.

ಇಲ್ಲಿ ವಿಸ್ಮಯದ ಪ್ರಶ್ನೆ ಏನೆಂದರೆ, ವಿದ್ವಾಂಸರಾದ ಮರ್ಯಾದಸ್ಥರ ಮನಸ್ಸನ್ನೂ ಅಪಹಾರ ಮಾಡಿದ ಆ ಆಕರ್ಷಕ ಶಕ್ತಿಯು ಯಾವದು ? ಆ ರಂಜನೆಯಾವದು ? ಆ ಅಸಹ್ಯ ಪದವು ಏಕೆ ಅಷ್ಟು ಪ್ರಿಯವಾಯಿತು ? ಎಂದು ಅವರಲ್ಲಿ ಯಾರನ್ನಾದರೂ ಕೇಳಿದರೆ, ಅವರೆಲ್ಲರೂ ಓ ! ಆ ಹಾಡು ಎಷ್ಟು ಸೊಗಸಾಗಿದೆ; ಸವಿಯಾಗಿದೆ, ಉದಾತ್ತವಾಗಿದೆ, ಉನ್ನತಿಕರವಾಗಿದೆ, ದಿವ್ಯವಾಗಿದೆ ! ಎಂದು ಹಿಗ್ಗಿ ಹಿಗ್ಗಿ ಹೊಗಳುತ್ತಾರೆ. ಆದರೆ ಅದು ನಿಜವಲ್ಲ. ಪಾಪ ! ಅವರು ಮೋಸಹೋಗಿದ್ದಾರೆ. ಆ ನರ್ತಕಿಯು ಅದನ್ನು ಹಾಡುವದಕ್ಕೆ ಮುಂಚೆ ಅದೇ ಹಾಡು ಅವರಿಗೆ ಹೇಯವಾಗಿತ್ತು. ಆದರೆ ಆ ಚೆಲುವೆಯು ಅದನ್ನು ರಮ್ಯವಾಗಿ ಹಾಡಿದ ಮೇಲೆ ಆ ಪಾಪಿ ಪದವು ಅವರಿಗೆ ಅತ್ಯಂತ ಪ್ರಿಯವೂ ಪ್ರಾಣಪದಕವೂ ಆಯಿತು. ಪದವೇ ಉತ್ತಮವಾಗಿದೆ ಎಂಬುದು ತಪ್ಪು ; ಅವರ ಭ್ರಮೆ. ನಿಜವಾದ ರಂಜನೆಯು ಆ ಲಾವಣ್ಯವತಿಯ ಕಂಠದಲ್ಲಿಯೂ ಮುಖಭಾವದಲ್ಲಿಯೂ ಮನೋಹರ ನಯನಗಳಲ್ಲಿಯೂ ಮಂದಹಾಸದಲ್ಲಿಯೂ ಮುಂಗುರುಳುಗಳಲ್ಲಿಯೂ ಮೋಹಕ ರಾಗ ವಿನ್ಯಾಸಗಳಲ್ಲಿಯೂ ಆಲಾಪನಾ ವೈಖರಿಯಲ್ಲಿಯೂ ಅಂಗಾಂಗಗಳ ಚಲನ ವಲನಗಳಲ್ಲಿಯೂ ಲಯಬದ್ಧವಾದ ನಾಟ್ಯದಲ್ಲಿಯೂ ಇದ್ದಿತು. ನಿಜವಾದ ಚಿತ್ತಾಕರ್ಷಣ ಶಕ್ತಿಯು ಆ ಮನೋರಮೆಯಲ್ಲಿದ್ದಿತು. ಆ ರಮಣಿಯ ಹಾವ–ಭಾವ–ವಿಲಾಸಗಳಲ್ಲಿದ್ದ ರಮಣೀಯತೆಯು ಆ ಕೀರ್ತನೆಯ ಮೇಲೆ ಆರೋಪಿಸಲ್ಪಟ್ಟಿತು.

ಪ್ರಪಂಚದಲ್ಲಿ ನಡೆಯುವದು ಹೀಗೆಯೇ. ಒಬ್ಬ ಬೋಧಕನು ಬರುತ್ತಾನೆ. ಅವನಿಗೆ ಸುಂದರವಾದ ಮುಖವೂ ಮಧುರವಾದ ಕಂಠವೂ ಮನೋಹರವಾದ ಕಣ್ಣು ಮೂಗುಗಳೂ ಇರುತ್ತವೆ. ಅವನ ಧ್ವನಿಯೂ ವಾಣಿಯೂ ಸ್ಪಷ್ಟವಾಗಿಯೂ ಆಕರ್ಷಕವಾಗಿಯೂ ಇರುತ್ತವೆ. ಅವನ ಹಾವ–ಭಾವಗಳೂ ಮೋಹಕವಾಗಿರುತ್ತವೆ; ಓ ! ಅವನು ಆಡಿದ ಮಾತೆಲ್ಲಾ ಬಹಳ ಸೊಗಸಾಗಿರುತ್ತದೆ; ಅತ್ಯಂತ ಆಕರ್ಷಕವಾಗಿರುತ್ತದೆ; ಎಷ್ಟು ಪ್ರಿಯವಾಗಿರುತ್ತದೆ ! ಎಲ್ಲರ ಮೆಚ್ಚಿಕೆಗೂ ಪಾತ್ರವಾಗಿರುತ್ತದೆ. ಇದರಿಂದಲೇ ಜಗತ್ತು ಮೋಸಹೋಗುವದು. ಅವನ ಸೌಂದರ್ಯ–ಮಾಧುರ್ಯಗಳು ಹೇಗಾದರೂ ಇರಲಿ; ಅವನ ಉಪದೇಶದಲ್ಲಿರುವ ತತ್ತ್ವವೇನೆಂಬದನ್ನು—ಸತ್ಯವೆಷ್ಟೆಂಬುದನ್ನು—ಯಾರೂ ಪರೀಕ್ಷಿಸುವದಿಲ್ಲ. ಆ ನರ್ತಕಿಯು ಹಾಡಿನಲ್ಲಿರುವ ವಿಷಯವೇನೆಂಬದನ್ನು ಯಾರೂ ವಿಚಾರಿಸುವದಿಲ್ಲ. ಸಭಿಕರಿಗೆ ಆ ಬೋಧನೆಯು ಅಷ್ಟು ಆಕರ್ಷಕವಾಗುವಂತೆಯೂ ಪ್ರಿಯವಾಗುವಂತೆಯೂ ಸೊಗಸಾಗುವಂತೆಯೂ ಮಾಡುವದು ಬೋಧಕನ ಅಭಿನಯವೂ ವಾಗ್ವೈಖರಿಯೂ ನಿರೂಪಣೆಯ ವೈಶಿಷ್ಟ್ಯವೂ ರೂಪವೂ ಬಾಹ್ಯಾಡಂಬರವೂ ಆಗಿವೆ.

ಹಿಂದೆ ಒಂದು ದಿನ ಬಹಳ ಒಳ್ಳೆಯ ಮಿತ್ರರಾದ ಮಾನ್ಯ ಶ್ರೋತೃಗಳೊಬ್ಬರು ರಾಮನೊಡನೆ ಒಬ್ಬ ಸ್ವಾಮಿಗಳ ವಿಚಾರವಾಗಿ—ಸ್ವಾಮಿ ವಿವೇಕಾನಂದರ ವಿಚಾರವಾಗಿ— ಮಾತನಾಡುತ್ತಿದ್ದರು. "ಅವರಿಗೆ ಸುಂದರವಾದ ಕಣ್ಣು ಮೂಗುಗಳಿರಲಿಲ್ಲವೆ?" ಎಂಬ ಪ್ರಶ್ನೆ ಮೂಡಿತು. ನೀವು ಉಪನ್ಯಾಸವನ್ನು ಕೇಳುವದಕ್ಕೆ ಹೋಗುತ್ತೀರಾ? ಅಥವಾ ಉಪನ್ಯಾಸಕರ ಕಣ್ಣು ಮೂಗುಗಳನ್ನು ನೋಡುವದಕ್ಕೆ ಹೋಗುತ್ತೀರಾ?

ಇದೇ ಪ್ರಪಂಚದ ರೀತಿ. ಅನೇಕ ಉಪನ್ಯಾಸಕರ ಆಕರ್ಷಣೆಯು ಅವರ ಮಾತಿನ ರೀತಿಯಲ್ಲಿಯೂ ವಾಗ್ಮಿತೆಯಲ್ಲಿಯೂ ಅವರ ಕಂಠಧ್ವನಿಯಲ್ಲಿಯೂ ಇರುತ್ತದೆ. ಆ ಆಕರ್ಷಣೆಯನ್ನು ಅವರ ಉಪನ್ಯಾಸದ ಮೇಲೆ ಅಧ್ಯಾರೋಪಿಸಿ ಮುಗ್ಧರಾಗುತ್ತಾರೆ. ವಸ್ತುಗಳನ್ನು ಸ್ವತಂತ್ರವಾಗಿ ತೂಕಮಾಡಿ; ವಿಷಯಗಳನ್ನು ಸ್ವತಂತ್ರವಾಗಿ ವಿಮರ್ಶೆ ಮಾಡಿ. ನಿಜವಾದ ಉಪನ್ಯಾಸಕರ ಕಡೆ ಹೆಚ್ಚು ಲಕ್ಷ್ಯವಿಡಿ; ಅವರ ದೇಹದ ಕಡೆ ಗಮನ ಕೊಡಬೇಡಿ. ಈ ಮಾತುಗಳು ಬಹಳ ಕಠಿಣವಾಗಿಯೂ ಭಯಂಕರವಾಗಿಯೂ ತೋರಬಹುದು. ಆದರೆ ರಾಮನು ವ್ಯಕ್ತಿಗಳನ್ನು— ಅವಿಚಾರದಿಂದ— ಗೌರವಿಸತಕ್ಕವನಲ್ಲ. ರಾಮನು ನಿಮ್ಮನ್ನು ಗೌರವಿಸುತ್ತಾನೆ; ಸತ್ಯ ಸ್ವರೂಪರಾದ ನಿಮ್ಮನ್ನು. ಸತ್ಯವೇ ನಿಮ್ಮ ನಿಜ ಸ್ವರೂಪ; ರಾಮನು ಆ ಅರ್ಥದಲ್ಲಿ ನಿಮ್ಮನ್ನು ಗೌರವಿಸುತ್ತಾನೆ. ನೀವು ರಾಮನ ಭಾಷಾ ಶೈಲಿಯನ್ನು ಮೆಚ್ಚದೇ ಇರಬಹುದು; ನಿರೂಪಣದ ರೀತಿಯನ್ನು ಇಷ್ಟ ಪಡದೇ ಇರಬಹುದು; ಈ ನಿಮ್ಮ ಸ್ತ್ರೀ ಪುರುಷ ರೂಪದಲ್ಲಿರುವ ನನಗೇ ನಾನು ಹೇಳಿಕೊಳ್ಳುವದೇನೆಂದರೆ, ನಿಮಗೆ ನಿಜವಾದ ಸುಖವೂ ನಿಜವಾದ ಶಾಂತಿಯೂ ಬೇಕಾದರೆ ನೀವು ರಾಮನ ಭಾಷಣಗಳನ್ನೂ ಉಪನ್ಯಾಸಗಳನ್ನೂ ಕೇಳಬೇಕು. ಅವು ನಿಮಗೆ ಆನಂದವನ್ನು ತರುತ್ತವೆ. ಅವುಗಳಲ್ಲಿರುವ ವಿಷಯಗಳ ತಿರುಳನ್ನು ಸ್ವಂತವಾಗಿ—ಸ್ವತಂತ್ರವಾಗಿ—ತೂಕಮಾಡಿ. ಅವುಗಳನ್ನು ವಿಚಾರ ಮಾಡಿ. ಆ ಶಬ್ದಗಳನ್ನೂ ಮಾತುಗಳನ್ನೂ ಚಿಂತನೆಮಾಡಿ, ನಿಮ್ಮ ಧ್ಯಾನವೂ ಆ ಮಾತಿನ ಮೇಲೇ ಇರಲಿ. ಮನೆಗೆ ಹೋದಮೇಲೆ ಅವನ್ನು ನೆನಪು ಮಾಡಿಕೊಂಡು ನಿಮ್ಮ ಆಚರಣೆಯಲ್ಲಿ ತರಲು ಪ್ರಯತ್ನಮಾಡಿ.

ವೇದಾಂತ ಧರ್ಮದ ಮೇಲೆ ಮಾತನಾಡುವದು ರಾಮನಿಗೆ ಬೇಕಾಗಿತ್ತು; ಆದರೆ ಇಲ್ಲಿ ಅನೇಕ ಪ್ರಶ್ನೆಗಳಿವೆ. ರಾಮನು ಉತ್ತರಕೊಡಬೇಕೆಂದು ಈ ಪ್ರಶ್ನೆಗಳು ಕಳಿಸಲ್ಪಟ್ಟಿವೆ. ಈ ಎಲ್ಲಾ ಪ್ರಶ್ನೆಗಳೂ ಮತ್ತು ಜಗತ್ತಿನಲ್ಲಿ ಯಾರಿಗೆ ಯಾವ ಪ್ರಶ್ನೆಯು ಹೊಳೆದರೂ ಅವೆಲ್ಲವೂ ಈ ನಗರದಲ್ಲಿ ರಾಮನು ಮಾಡಲಿರುವ ಉಪನ್ಯಾಸಗಳಲ್ಲಿ ಉತ್ತರವನ್ನು ಕಾಣುತ್ತವೆ. ಈ ಪ್ರಶ್ನೆಗಳಿಗೂ ಇತರ ಎಲ್ಲಾ ಪ್ರಶ್ನೆಗಳಿಗೂ ಸರಿಯಾದ ಉತ್ತರಗಳು ಕಾಲಕ್ರಮದಲ್ಲಿ ದೊರಕುತ್ತವೆ. ರಾಮನಿಗೆ ಯಾವ ಪ್ರಶ್ನೆಯನ್ನು ಕೇಳದಿದ್ದರೂ ರಾಮನು ಒಂದೊಂದೇ ಪ್ರಶ್ನೆಯನ್ನೂ ಸಮಸ್ಯೆಯನ್ನೂ

ಪ್ರಮೇಯವನ್ನೂ ತೆಗೆದುಕೊಂಡು ಉಪನ್ಯಾಸಗಳನ್ನು ಮಾಡುತ್ತಾ ಹೋಗುತ್ತಾನೆ. ಆದರೆ ಇಲ್ಲಿ ಎದುರಿಗಿರುವ ಪ್ರಶ್ನೆಗಳಿಗೆ ಮೊದಲು ಉತ್ತರ ಕೊಡುತ್ತಾನೆ.

ಈ ದಿನ ರಾತ್ರಿ, ಅಥವಾ ಯಾವದೊಂದು ರಾತ್ರಿ ಅಥವಾ ಮಧ್ಯಾಹ್ನ ಈ ಎಲ್ಲಾ ಪ್ರಶ್ನೆಗಳಿಗೂ ಉತ್ತರ ಹೇಳಲಾಗುವದಿಲ್ಲ. ಒಂದು ರಾತ್ರಿಗೆ ಒಂದು ಪ್ರಶ್ನೆಯನ್ನು ತೆಗೆದುಕೊಳ್ಳಬಹುದು; ಮತ್ತು ಆ ಪ್ರಶ್ನೆಯೇ ಆ ರಾತ್ರಿಯ ಉಪನ್ಯಾಸಕ್ಕೆ ವಿಷಯವಾಗಬಹುದು. ಈ ಮೊದಲನೆಯ ಪ್ರಶ್ನೆಯನ್ನು ತೆಗೆದುಕೊಳ್ಳೋಣ.

ಈ ದಿನದ ವಿಷಯವನ್ನು ಪ್ರಾರಂಭ ಮಾಡುವದಕ್ಕೆ ಮೊದಲು, ಬೈಬಲ್, ಅಲ್ ಕೊರಾನ್, ವೇದಗಳು ಮತ್ತು ಗೀತಾ, ಇವುಗಳ ವಿಷಯದಲ್ಲಿ ಕೆಲವು ಮಾತುಗಳನ್ನು ಆಡಬಹುದು. ತಮ್ಮ ಅಭಿಮಾನ ಗೌರವಗಳಿಗೆ ಪಾತ್ರವಾದ ಮಹಾವ್ಯಕ್ತಿಗಳಿಂದ ಈ ಗ್ರಂಥಗಳು ಬಂದಿವೆಯೆಂದು ಅವುಗಳಲ್ಲಿ ಸ್ವಲ್ಪವೂ ಸಂಶಯವಡದೆ, ಜನರು ಸಂಪೂರ್ಣ ನಂಬಿಕೆಯನ್ನಿಡುತ್ತಾರೆ. ಕ್ರಿಸ್ತನು ಸದ್ಗುಣ—ಸಚ್ಛೀಲಗಳುಳ್ಳವನೂ ಉತ್ತಮ ಪ್ರಭಾವಶಾಲಿಯೂ ಆಗಿದ್ದನು. ಬೈಬಲ್ ಗ್ರಂಥದಲ್ಲಿ ಬರೆದಿರುವದೆಲ್ಲಾ ಅವನ ಬಾಯಿಯಿಂದಲೇ ಬಂದಂತೆ ಹೇಳಿದ್ದಾರೆ. ಆದ್ದರಿಂದ ಅದನ್ನು ನಾವು ಒಪ್ಪಿಕೊಳ್ಳಬೇಕು. ಕೃಷ್ಣ ಮಹಾತ್ಮನಾಗಿದ್ದನು, ಅವನು ಮಹಾಕಾರ್ಯಗಳನ್ನು ಮಾಡಿದನು ,ಅವನ ಶ್ರೀಮುಖದಿಂದ ಗೀತೆಯು ಬಂದಿರುವದರಿಂದ ಅದನ್ನು ಪೂರ್ಣವಾಗಿಯೂ ಏಕೈಕವಾಗಿಯೂ ಒಪ್ಪಿಕೊಳ್ಳಬೇಕು. ಬುದ್ಧನು ಮಹಾಪುರುಷನು, ದಯಾಮಯನು ಇಂಥಾ ಗ್ರಂಥದಲ್ಲಿರುವದು ಅವನ ಉಪದೇಶವು. ಆದ್ದರಿಂದ ಅದರಲ್ಲಿ ನಾವು ಸಂಪೂರ್ಣ ನಂಬಿಕೆಯನ್ನಿಟ್ಟು ನಡೆಯಬೇಕು; ಆಲೋಚನೆಯನ್ನೇ ಮಾಡಬಾರದು. ವಿಚಾರವನ್ನು ನಿಲ್ಲಿಸಬೇಕು. ಧ್ಯಾನವನ್ನೂ ಕೈಬಿಡಬೇಕು; ಅವನು ಹೇಳಿದ್ದನ್ನೆಲ್ಲಾ ಸತ್ಯವೆಂದು ನಂಬಬೇಕು. ಕೆಲವು ನಿಮಿಷಗಳ ಹಿಂದೆ ಹೇಳಿದ ನರ್ತಕಿಯ ಪ್ರಸಂಗದಲ್ಲಿ ಆಕೆಯ ಪ್ರೇಕ್ಷಕರೂ ಶ್ರೋತೃಗಳೂ ಮಾಡಿದ ತಪ್ಪನ್ನೇ ಈ ಮೇಲಿನ ಉದಾಹರಣೆಯಲ್ಲಿನ ಜನರು ಮಾಡುತ್ತಿಲ್ಲವೆ? ಇವೆರಡೂ ಒಂದೇ ಬಗೆಯ ತಪ್ಪುಗಳು, ಇವುಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಉಪದೇಶಕನ ಉಪದೇಶವೇ ಒಂದು, ಅವನ ಗುಣಶೀಲಗಳೂ ಜೀವನ ಸೌಂದರ್ಯವೂ ಬೇರೊಂದು. ಅನೇಕ ವೇಳೆ ಹೀಗಾಗುವದುಂಟು ;—ಒಬ್ಬ ಮನುಷ್ಯನು ಅವನ ಕಾಲದಲ್ಲಿ ಅತ್ಯಂತ ಶ್ರೇಷ್ಠನಾಗಿರಬಹುದು. ಆದರೆ ಅವನ ಉಪದೇಶವು ಅಪೂರ್ಣವೂ ದೋಷಯುಕ್ತವೂ ಆಗಿರಬಹುದು; ಪ್ರಪಂಚದಲ್ಲಿರುವ ಎಲ್ಲಾ ಮತ—ಪಂಥಗಳ ಅಭಿಮಾನಕ್ಕೂ ಈ ಭ್ರಮೆಯೇ ಆಧಾರವು. ಜಗತ್ತಿನಲ್ಲಿರುವ ಎಲ್ಲಾ ಮತಧರ್ಮಗಳ ಜಗಳಗಳಿಗೂ ರಣರಂಗಗಳಿಗೂ ಈ ಭ್ರಾಂತಿಯೇ ಕಾರಣವು.

"ಅವನು ಸಾಕ್ಷಾತ್ ದೇವತೆಯಂತೆ ಬರೆದನು" ಎಂದು ಡಾಕ್ಟರ್ ಜಾನ್‌ಸನ್ ಹೇಳಿದುದು ಆಲಿವರ್ ಗೋಲ್ಡ್‌ಸ್ಮಿತ್‌ನ ವಿಷಯವಾಗಿ, ಎಂಬುದು ನಿಮಗೆ ಗೊತ್ತಿದೆ.

ಅವನು ವೈದ್ಯಶಾಸ್ತ್ರಿಯ [ಎಂ. ಡಿ.] ಡಾಕ್ಟರನಾಗಿದ್ದನು. ಗೋಲ್ಡ್‌ಸ್ಮಿತ್ ತಿನ್ನುವಾಗಲೂ ಮಾತನಾಡುವಾಗಲೂ ಸರಿಯಾಗಿದ್ದನು. ಆದರೆ ತಿನ್ನುವ ಮತ್ತು ಮಾತನಾಡುವ ರೀತಿಯನ್ನು ವಿವರಿಸುವಾಗ ಅವನು ತಾನೆಂದೂ ಕೆಳಗಿನ ದವಡೆಯನ್ನು ಅಲ್ಲಾಡಿಸುವದಿಲ್ಲವೆಂದು ಹೇಳುತ್ತಿದ್ದನು. ಯಾವಾಗಲೂ ಮೇಲಿನ ದವಡೆಯೇ ಅಲ್ಲಾಡುವದು; ಕೆಳಗಿನ ದವಡೆಯಲ್ಲ;— ಎಂದು ಹೇಳುತ್ತಿದ್ದನು. ಆ ವಿಷಯದ ಮೇಲೆ ಡಾಕ್ಟರ್ ಜಾನ್‌ಸನ್‌ನೊಡನೆ ಅವನು ದೊಡ್ಡ ವಿವಾದ ಮಾಡಿದನು. ತನ್ನ ತಪ್ಪನ್ನೇ ಸರಿಯೆಂದು ಎತ್ತಿಹಿಡಿಯುವದರಲ್ಲಿ ಅವನೆಂದೂ ಜಗ್ಗದ ಹಟಮಾರಿ ಮೂರ್ಖನಾಗಿದ್ದನು. ನಾವು ಮಾತನಾಡುವಾಗಲೂ ತಿನ್ನುವಾಗಲೂ ಚಲಿಸುವದು ಕೆಳದವಡೆಯೇ ಹೊರತು ಮೇಲು ದವಡೆಯಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಇಡೀ ತಲೆಯನ್ನೇ ತಿರುಗಿಸಿದಾಗ ಮೇಲಿನ ದವಡೆಯೂ ಚಲಿಸುತ್ತದೆ ; ಅಷ್ಟೆ. ಆದರೂ ಗೋಲ್ಡ್‌ಸ್ಮಿತ್‌ನು, ಮೇಲಿನ ದವಡೆಯೇ ಚಲಿಸುವದು, ಕೆಳಗಿನ ದವಡೆ ಎಂದೂ ಚಲಿಸುವದಿಲ್ಲ—ಎಂದು ಸಾಧಿಸಿದನು.

ವಾಸ್ತವ ಜೀವನದ ವಿಷಯವನ್ನು ಹೇಳುವಾಗ, ಅವನು ಸಂಪೂರ್ಣ ಸರಿಯೇ. ಆದರೆ ಅವನ ಸ್ವಂತ ಅನುಭವವನ್ನೂ ಸ್ವಂತ ಕೃತಿಯನ್ನೂ ಸ್ವಂತ ಜೀವನವನ್ನೂ ಅವನು ವಿವರಿಸಲಾರನು. ಕಾರ್ಯ ಮಾಡುವದೇ ಒಂದು ವಿಷಯವಾದರೆ, ನಾವು ಹೇಗೆ ಕಾರ್ಯ ಮಾಡುತ್ತೇವೆ, ಎಂಬ ತತ್ತ್ವ ವಿಚಾರವನ್ನು ತಿಳಿಯುವದೇ ಇನ್ನೊಂದು ವಿಷಯವು. ಪ್ರತಿಯೊಬ್ಬರೂ ಇಂಗ್ಲಿಷ್ ಭಾಷೆಯನ್ನು ಮಾತನಾಡಬಹುದು ; ಆದರೆ ಇಂಗ್ಲಿಷ್ ವ್ಯಾಕರಣ ಶಾಸ್ತ್ರವನ್ನು ತಿಳಿದವರು ಬಹಳ ಕಡಿಮೆ. ಪ್ರತಿಯೊಬ್ಬರೂ ಯಾವದಾದರೊಂದು ಬಗೆಯಿಂದ ತರ್ಕ ಮಾಡುತ್ತಿರುತ್ತಾರೆ; ಆದರೆ ತರ್ಕಶಾಸ್ತ್ರವನ್ನು ಬಲ್ಲವರು ಬಹಳ ಕಡಿಮೆ; ಅಥವಾ ಅನುಮಾನ ತರ್ಕವನ್ನು ಓದಿದವರೂ ಬಹಳ ಕಡಿಮೆ. ಹಾಗೆಯೇ ಆದರ್ಶವಾದ ಜೀವನವನ್ನು ನಡೆಸುವದೇ ಒಂದು ವಿಷಯ; ಅದರ ತತ್ತ್ವಶಾಸ್ತ್ರವನ್ನೂ ಅದಕ್ಕೆ ಕಾರಣವನ್ನೂ ಯುಕ್ತಿಗಳನ್ನೂ ತಿಳಿಸುವ ಶಕ್ತಿಯೇ ಬೇರೊಂದು ವಿಷಯ. ಜನರು ಮಾಡುವ ತಪ್ಪೇ ಇದು. ಬೋಧಕರ ದೈಹಿಕ ಆಕರ್ಷಣೆ—ರಮ್ಯತೆಗಳನ್ನು ಅಥವಾ ಅವರ ವೈಯಕ್ತಿಕ ಶೀಲವನ್ನು ಅವರ ಬೋಧನೆಯ ಮೇಲೆ ಆರೋಪಿಸಿ ಅವರ ಗುಲಾಮರಾಗುತ್ತಾರೆ. ಎಚ್ಚರಿಕೆ ! ಎಚ್ಚರಿಕೆ ! ಹುಷಾರ್ ! ಹುಷಾರ್ ! ಎಂದು ರಾಮನು ಹೇಳುತ್ತಾನೆ.

ಕ್ರಿಸ್ತನ ಕಾಲದಲ್ಲಿ ಬಹಳ ಸ್ವಲ್ಪ ಪುಸ್ತಕಗಳಿದ್ದವು. ಆದರೂ ಸಾಹಿತ್ಯ–ಕಲಾಶಾಸ್ತ್ರಗಳಲ್ಲಿಯೂ ದೇವತಾ ಶಾಸ್ತ್ರಗಳಲ್ಲಿಯೂ ಪರಿಣತರಾದವರು [Master of Arts and Doctors of Divinity] ಬೈಬಲ್ ಶಾಸ್ತ್ರದಲ್ಲಿ ಹೇಳಿರುವದನ್ನು ವ್ಯಾಖ್ಯಾನ ಮಾಡುವದಕ್ಕೆ ತಮ್ಮ ಮೆದುಳನ್ನೆಲ್ಲಾ ಹಿಂಡಿಕೊಳ್ಳುತ್ತಾರೆ. ಮಹಮ್ಮದನೂ ಉತ್ತಮವಾದ ವಿಷಯಗಳನ್ನು ಹೇಳಿದನು. ಅವರಿಗೆ

ಆ ಸ್ಫೂರ್ತಿ ಎಲ್ಲಿಂದ ಬಂತು? ಆ ವಿಚಾರಗಳೆಲ್ಲಾ ಅವರಿಗೆ ಎಲ್ಲಿಂದ ಬಂದವು? ಅವುಗಳನ್ನು ಅವರು ಬೇರೆ ಯಾವ ಮೂಲದಿಂದಲೂ ಪಡೆಯದೆ ನಿಮ್ಮೊಳಗೆ ಕೂಡ ಇರುವ ಸರ್ವಮೂಲದಿಂದ ನೇರಾಗಿಯೇ ಪಡೆದರು.

ಮನುವಿನ ಕಾಲದಲ್ಲಿಯೂ ಬಹಳ ಸ್ವಲ್ಪ ಪುಸ್ತಕಗಳಿದ್ದವು. ಆದರೆ ಮನುವು ಹಿಂದೂಗಳಿಗೆ ಧರ್ಮಶಾಸ್ತ್ರದ ಮೇಲೆ ಶ್ರೇಷ್ಠವಾದ ಗ್ರಂಥವನ್ನು ಕೊಟ್ಟನು. ಹೋಮರ್‌ನ ಕಾಲದಲ್ಲಿಯೂ ಹೆಚ್ಚು ಪುಸ್ತಕಗಳು ಇರಲಿಲ್ಲ. ಆದರೂ ಪ್ರತಿಯೊಂದು ಭಾಷೆಗೂ ಪರಿವರ್ತನೆಯನ್ನು ಹೊಂದುತ್ತಿರುವ "ಇಲಿಯಡ್ ಮತ್ತು ಒಡಿಸ್ಸಿ" ಎಂಬ ಪದ್ಯ ಕಾವ್ಯವನ್ನು ಅವನು ಕೊಟ್ಟನು. ಅರಿಸ್ಟೋಟಲ್‌ನು ಮಾಸ್ಟರ್ ಆಫ್ ಆರ್ಟ್ಸ್ ಅಥವಾ ಡಾಕ್ಟರ್ ಆಫ್ ಡಿವಿನಿಟಿ— ಈ ಯಾವ ಪದವಿ– ಪ್ರಶಸ್ತಿಗಳನ್ನೂ ಪಡೆದಿರಲಿಲ್ಲ. ಆದರೂ ಮಾಸ್ಟರ್ ಆಫ್ ಆರ್ಟ್ಸ್ ಮಾಡಿದವರು ಅವನ ಪುಸ್ತಕಗಳನ್ನು ಓದಬೇಕು.

ಕ್ರಿಸ್ತನೂ ಕೃಷ್ಣನೂ ಎಲ್ಲಿಂದ ಸ್ಫೂರ್ತಿಯನ್ನು ಪಡೆದರು? ಅವರ ಒಳಗಿನಿಂದಲೇ. ಈ ಜನರೆಲ್ಲಾ ತಮ್ಮ ಒಳಗಿನಿಂದಲೇ ಸ್ಫೂರ್ತಿಯನ್ನು ಪಡೆದರೆ, ನೀವೂ ಹಾಗೆ ಪಡೆಯುವದಕ್ಕೆ ಆಗುವದಿಲ್ಲವೇ? ಖಂಡಿತವಾಗಿಯೂ ನಿಮಗೂ ಸಾಧ್ಯ. ಅವರು ಯಾವ ಮೂಲದಿಂದಲೂ ಉಗಮದಿಂದಲೂ ಮೂಲ ಚಿಲುಮೆಯಿಂದಲೂ ಸ್ಫೂರ್ತಿಯನ್ನು ಪಡೆದರೋ ಅದು ನಿಮ್ಮಲ್ಲಿಯೇ ಹಾಗೆಯೇ ಇದೆ. ಹೀಗಿರುವಾಗ ಈ ಪ್ರಪಂಚದಲ್ಲಿ ಹೊರಗೆ ಸಾವಿರಾರು ವರ್ಷಗಳಿಂದ ಇರುವ ಹಳಸಿದ ನೀರಿಗಾಗಿ ಏಕೆ ಬಾಯಾರಿ ಬಸವಳಿಯಬೇಕು? ನಿಮ್ಮೊಳಗೇ ನೀವು ನೇರಾಗಿ ಹೋಗಿ ಅಲ್ಲಿರುವ ಅಮೃತವನ್ನು ಆಳವಾಗಿ ಹೀರಬಹುದು. ಚಿಲುಮೆಗಳು ನಿಮ್ಮೊಳಗೇ ಇವೆ.

ಸಹೋದರರೆ, ಮತ್ತು ನನ್ನ ಆತ್ಮವೆ, ಆ ಜನರೆಲ್ಲಾ ಆ ಕಾಲದಲ್ಲಿ ಜೀವಿಸಿದ್ದರು, ನೀವು ಈಗ ಜೀವಿಸಿದ್ದೀರಿ; ಸಾವಿರಾರು ವರ್ಷಗಳಿಂದ ಕೆಡದಂತೆ ಸುವಾಸನಾ ದ್ರವ್ಯಗಳ ಮೂಲಕ ಸಂಸ್ಕರಿಸಿ ಇಟ್ಟಿರುವ [ಮಮ್ಮಿ] ಮೃತ ದೇಹಗಳಂತೆ ಆಗಬೇಡಿ. ಜೀವಂತ ಜನರನ್ನು ಸತ್ತವರ ಕೈಯಲ್ಲಿ ಹಾಕಬೇಡಿ. ಆ ದೇವ ಪ್ರಸಾದವಾದ 'ಮನ್ನ'ವೂ—ದಿವ್ಯವಾದ ಅಮೃತವೂ—ನಿಮ್ಮೊಳಗೇ ಇದೆ. ಪ್ರಾಚೀನ ಗ್ರಂಥಗಳನ್ನು ನೀವು ತೆಗೆದುಕೊಂಡಾಗ ಅವುಗಳಲ್ಲಿರುವ ಪ್ರತಿಯೊಂದು ಶಬ್ದಕ್ಕೂ ನಿಮ್ಮನ್ನು ನೀವು ಮಾರಿಕೊಳ್ಳಬೇಕೆಂದು ತಿಳಿಯಬೇಡಿ. ನೀವೇ ಸ್ವತಂತ್ರವಾಗಿ ವಿಚಾರಮಾಡಿ; ಚಿಂತನೆ ಮಾಡಿ. ಆ ವಿಚಾರಗಳನ್ನು ನಿಮ್ಮೊಳಗೇ ಅನುಭವಕ್ಕೆ ತಂದು ಕೊಂಡು ಆಚರಣೆಯಲ್ಲಿ ಅಳವಡಿಸಿ, ಜೀವನದಲ್ಲಿ ಪರೀಕ್ಷಿಸಿ, ಸಮರ್ಥನೆ ಪಡೆದ ಹೊರತು ಕ್ರಿಸ್ತನು ಹೇಳುವದನ್ನಾಗಲೀ ವೇದಗಳೂ ಗೀತೆಗಳೂ ಬೈಬಲ್‌ಗಳೂ ಹೇಳುವದನ್ನಾಗಲೀ ನೀವು ತಿಳಿಯಲು ಶಕ್ತರಾಗುವದಿಲ್ಲ. ಮಹಾಕವಿ ಮಿಲ್ಟನ್ನನನ್ನು ಅರ್ಥಮಾಡಿಕೊಳ್ಳಬೇಕಾದರೆ ಮಿಲ್ಟನ್ನನೇ ಆಗಬೇಕೆಂದು ಹೇಳುತ್ತಾರೆ. ಕ್ರಿಸ್ತನನ್ನು ತಿಳಿಯಬೇಕಾದರೆ

ನೀವೂ ಕ್ರಿಸ್ತನೇ ಆಗಬೇಕು. ಕೃಷ್ಣನನ್ನು ತಿಳಿಯಬೇಕಾದರೆ ನೀವೂ ಕೃಷ್ಣನೇ ಆಗಬೇಕು. ಬುದ್ಧನನ್ನು ತಿಳಿಯಬೇಕಾದರೆ ನೀವೂ ಬುದ್ಧನೇ ಆಗಬೇಕು. ಆಗಬೇಕು—ಎನ್ನುವದರ ಅರ್ಥವೇನು? ಬುದ್ಧರಾಗುವದಕ್ಕೆ ನೀವು ಇಂಡಿಯಾದಲ್ಲಿ ಹುಟ್ಟಬೇಕೆ? ಇಲ್ಲ, ಇಲ್ಲ. ನೀವು ಕ್ರಿಸ್ತರಾಗುವದಕ್ಕೆ 'ಜೂಡಿಯಾ'ದಲ್ಲಿ ಹುಟ್ಟಬೇಕೆ? ಇಲ್ಲ. ಮಹಮ್ಮದ್‌ರಾಗಲು ನೀವು ಆರೇಬಿಯಾದಲ್ಲಿ ಹುಟ್ಟಬೇಕೆ? ಇಲ್ಲ, ಹಾಗಾದರೆ, ಬುದ್ಧ, ಕ್ರಿಸ್ತ, ಮಹಮ್ಮದ್ ಆಗುವದು ಹೇಗೆ? ಒಂದು ಸಣ್ಣ ಕಥೆಯಿಂದ ಇದನ್ನು ತಿಳಿಸಬಹುದು.

ಲೈಲಾ ಮಜ್ನೂರ ಪ್ರೇಮವನ್ನು ವರ್ಣಿಸುವ ಒಂದು ಸುಂದರವಾದ ಪ್ರೇಮಗೀತೆಯನ್ನು ಒಬ್ಬ ರಸಿಕನು ಓದುತ್ತಿದ್ದನು. ಆ ಪದ್ಯದ ನಾಯಕನಾದ ಮಜ್ನುವನ್ನು ಬಹಳವಾಗಿ ಮೆಚ್ಚಿ ಕೊಂಡು ಅವನು ತಾನೂ ಮಜ್ನುವಾಗಲು ಪ್ರಯತ್ನಿಸಿದ. ಅದಕ್ಕಾಗಿ ಅವನು ಆ ಪದ್ಯದ ನಾಯಕಿಯ ಚಿತ್ರವನ್ನು ತೆಗೆದುಕೊಂಡು ಆಲಂಗಿಸಿ, ಅದನ್ನು ತನ್ನ ಹೃದಯದ ಮೇಲೆ ಇಟ್ಟುಕೊಂಡು, ಕಣ್ಣೀರು ಸುರಿಸುತ್ತಿದ್ದನು. ಅವನು ಆ ಚಿತ್ರವನ್ನು ಒಂದು ನಿಮಿಷವೂ ಬಿಟ್ಟಿರುತ್ತಿರಲಿಲ್ಲ. ಆದರೆ ಕೃತ್ರಿಮವಾದ ಪ್ರೇಮವು ಬಹಳ ಕಾಲ ಇರಲಾರದು. ಸ್ವಾಭಾವಿಕವಾದ ಪ್ರೇಮವನ್ನು ಅನುಕರಣ ಮಾಡುವದು ಸಾಧ್ಯವಲ್ಲ: ಆದರೂ ಅವನು ಅನುಕರಣ ಮಾಡಲು ಪ್ರಯತ್ನ ಮಾಡುತ್ತಿದ್ದನು.

ಅವನಲ್ಲಿಗೆ ಅವನ ಮಿತ್ರನೊಬ್ಬನು ಬಂದು "ತಮ್ಮ! ಏನು ಮಾಡುತ್ತಿದ್ದಿ? ಮಜ್ನು ಆಗುವದು ಹೀಗಲ್ಲ. ನೀನು ಮಜ್ನು ಆಗಬೇಕಾದರೆ ಅವನ ಪ್ರೇಯಸಿಯನ್ನು ನೀನು ತೆಗೆದುಕೊಳ್ಳಬೇಕಾಗಿಲ್ಲ; ಆದರೆ ಮಜ್ನುವಿನ ನಿಜವಾದ ಪ್ರೇಮವು ಮಾತ್ರ ನಿನ್ನಲ್ಲಿರಬೇಕು. ಅವನ ಪ್ರೇಮದ ವಸ್ತುವನ್ನೇ ನೀನೂ ಇಟ್ಟುಕೊಳ್ಳುವದು ಅಗತ್ಯವಿಲ್ಲ; ಆದರೆ ಆ ಪ್ರೇಮದ ಉತ್ಕಟತೆಯೇ ನಿನ್ನಲ್ಲಿಯೂ ಇರಬೇಕು. ನಿನ್ನ ಪ್ರೇಯಸಿಯನ್ನು—ಪ್ರೇಮದ ನಾಯಕಿಯನ್ನು—ನೀನೇ ಆರಿಸಿಕೊಳ್ಳಬಹುದು; ಆದರೆ ಮಜ್ನುವಿನಲ್ಲಿದ್ದ ಆ ಉತ್ಕಟ ಪ್ರೇಮವೇ ನಿನ್ನಲ್ಲಿಯೂ ಇರಬೇಕು ನಿಜವಾದ ಮಜ್ನು ಆಗುವದು ಹಾಗೆ." ಎಂದು ಹೇಳಿದನು.

ಹಾಗೆ ನೀವು ಕ್ರಿಸ್ತನೂ ಬುದ್ಧನೂ ಮಹಮ್ಮದನೂ ಕೃಷ್ಣನೂ ಆಗಬೇಕಾದರೆ ಅವರು ಮಾಡಿದಂತೆ ನೀವು ಮಾಡಬೇಕಾಗಿಲ್ಲ; ಅವರ ಜೀವನದ ಕಾರ್ಯಗಳನ್ನು ನೀವು ಅನುಕರಣ ಮಾಡಬೇಕಾಗಿಲ್ಲ; ನೀವು ಅವರ ನಡವಳಿಕೆಯ ಗುಲಾಮರು ಆಗಬೇಕಾಗಿಲ್ಲ,—ಎಂದು ರಾಮನು ಹೇಳುತ್ತಾನೆ. ನೀವು ಅವರ ಕೃತಿಗಳಿಗೂ ಹೇಳಿಕೆಗಳಿಗೂ ನಿಮ್ಮ ಸ್ವಾತಂತ್ರ್ಯವನ್ನು ಮಾರಿಕೊಳ್ಳದೆ, ನೀವು ಅವರ ಭಾವನೆಗಳ ತೀವ್ರತೆಯನ್ನೂ ಅವರ ಅನುಭವದ ಆಳವನ್ನೂ ಅವರ ಆಳವಾದ ಮನೋಭಾವವನ್ನೂ

ವಿಚಾರವನ್ನೂ ಅವರ ನಿಜವಾದ ಚೇತನಶಕ್ತಿಯನ್ನೂ ಕಂಡುಕೊಳ್ಳಬೇಕು, ಅನುಭವ ಮಾಡಬೇಕು. ಅದೇ ಮನೋಭಾವವನ್ನೂ ಸತ್ತ್ವವನ್ನೂ ನಿಮ್ಮ ಜೀವನದಲ್ಲಿ ವ್ಯಕ್ತಮಾಡಿದರೆ, ಈಗ ನಿಮ್ಮ ಸುತ್ತಲಿರುವ ಸನ್ನಿವೇಶಗಳೂ ಪರಿಸ್ಥಿತಿಗಳೂ ಬದಲಾಯಿಸಲ್ಪಡಬೇಕು. ಇವತ್ತು ರಾತ್ರಿ ಕ್ರಿಸ್ತನು ಹುಟ್ಟಿದ್ದರೆ ಏನು ಮಾಡುತ್ತಿದ್ದನು? ಅವನು ಈಗಲೂ ಶಿಲುಬೆಯ ಮೇಲೇರಿ ಮೊಳೆಗಳನ್ನು ಹೊಡಿಸಿಕೊಳ್ಳುತ್ತಿದ್ದನೆ? ಎಂದಿಗೂ ಇಲ್ಲ. ನೀವು ಈಗ ಕ್ರಿಸ್ತರಾಗಿಯೂ ಬದುಕಬಹುದು. ಕ್ರಿಸ್ತನು ತನ್ನ ನಿಶ್ಚಿತಾಭಿಪ್ರಾಯಗಳಿಗಾಗಿ ತನ್ನ ಜೀವವನ್ನೇ ಬಲಿಕೊಟ್ಟನು. ಆದರೆ ಷೋಪೆನ್ ಹೇರನು [ Schopenhauer] ತನ್ನ ನಿಶ್ಚಿತಾಭಿಪ್ರಾಯಗಳಿಗಾಗಿ ಬದುಕಿದನು. ಮತ್ತು ಅನೇಕ ವೇಳೆ ನಿಮ್ಮ ನಿಶ್ಚಿತಾಭಿಪ್ರಾಯಗಳಿಗಾಗಿಯೂ ನಿಮ್ಮ ದೃಢ ಸಂಬಿಕೆಗಳಿಗಾಗಿಯೂ ಸಾಯುವದಕ್ಕಿಂತಲೂ ಬದುಕುವದೇ ಕಷ್ಟವಾಗುತ್ತದೆ.

ಈ ದಿನದ ಉಪನ್ಯಾಸದ ಉಪೋದ್ಘಾತವನ್ನು ಹೀಗೆ ಸಂಗ್ರಹ ಮಾಡಬಹುದು: "ಪ್ರತಿಯೊಂದು ವಿಷಯದ ಸ್ವಂತ ಯೋಗ್ಯತೆಯನ್ನು ಪರೀಕ್ಷೆಮಾಡಿ ಪರಿಗ್ರಹಿಸಿ. ಧರ್ಮೋಪದೇಶಕನ ವ್ಯಕ್ತಿತ್ವವನ್ನೂ ಜೀವನವನ್ನೂ ಅವನ ಉಪದೇಶದಲ್ಲಿ ತಲೆ ಹಾಕುವದಕ್ಕೆ ಅವಕಾಶ ಕೊಡಬೇಡಿ. ಅವನ ಜೀವನವನ್ನೂ ಉಪದೇಶವನ್ನೂ ಬೇರೆ ಬೇರೆಯಾಗಿ ವಿಚಾರಮಾಡಬೇಕು."

ಈ ದಿನದ ಮೊದಲನೆಯ ಪ್ರಶ್ನೆ ಹೀಗಿದೆ: "ಪುನರ್ಜನ್ಮವು ಸತ್ಯವಾದರೆ ಕುಟುಂಬ ಸಂಬಂಧಗಳನ್ನು ಅದು ಕಡಿದು ಹಾಕುವದಿಲ್ಲವೆ?" ಅದೇ ಪ್ರಶ್ನೆಯ ಇನ್ನೊಂದು ಭಾಗವು: "ಮತ್ತು ಈ ಲೋಕದ ಜೀವನದಲ್ಲಿ ಸ್ನೇಹ ಸಂಬಂಧವುಳ್ಳವರು, ಪರ ಲೋಕದಲ್ಲಿಯೂ ಸೇರುವದಿಲ್ಲವೆ?"

ಇದೊಂದು ಸೊಗಸಾದ ಪ್ರಶ್ನೆ. ಇದನ್ನು ನಾವು ಭಾಗ ಭಾಗವಾಗಿ ತೆಗೆದು ಕೊಳ್ಳೋಣ. "ಪುನರ್ಜನ್ಮವು ನಿಜವಾದರೆ, ಅದು ಕುಟುಂಬ ಸಂಬಂಧಗಳನ್ನು ಒಡೆಯುವದಿಲ್ಲವೆ?"

ಈ ಪ್ರಪಂಚದಲ್ಲಿ ಕುಟುಂಬ ಸಂಬಂಧಗಳು ಎನ್ನುವವು ಇವೆಯೆ?—ಎನ್ನುವದನ್ನು ರಾಮನು ಸುಮ್ಮನೆ ತಿಳಿಯಬೇಕಾಗಿದೆ. ನಿಮಗೆ ಯಾವದಾದರೂ ಕುಟುಂಬ ಸಂಬಂಧಗಳು ಇವೆಯೆ? ಮಗನು ದೊಡ್ಡವನಾಗುವವರೆಗೆ ತಂದೆಯೊಡನೆ ಜೀವಿಸಿರುತ್ತಾನೆ. ಮಗನು ದೊಡ್ಡವನಾಗಿ ವಿದ್ಯಾವಂತನೂ ಉದ್ಯೋಗಸ್ಥನೂ ಆಗಿ ಚೆನ್ನಾಗಿ ಸಂಪಾದಿಸುತ್ತಿರುವಾಗ ತನ್ನ ತಂದೆಯನ್ನು ದೂರವಿಡುತ್ತಾನೆ. ತನ್ನ ಸಂಪ್ಪಾದನೆಯಿಂದ ತಂದೆ ಏಕೆ ಪ್ರಯೋಜನವನ್ನು ಪಡೆಯಬೇಕು?— ಎಂದು ಕೂಡಲೇ ಮಗನು ತಂದೆಯ ಸಂಬಂಧವನ್ನು ಕಡಿದು ಕೊಳ್ಳುತ್ತಾನೆ. ಮಗನಿಗೆ ಸ್ವಂತವಾದ

ಕುಟುಂಬವಿದೆ. ಮಗನು ಜರ್ಮನಿಗೋ ಎಲ್ಲಿಗಾದರೂ ಬೇರೆ ದೇಶಕ್ಕೆ ಹೋಗಬಹುದು. ತಂದೆಯೂ ಮತ್ತೊಂದು ದೇಶಕ್ಕೆ ಹೋಗಬಹುದು. ಎಲ್ಲಿದೆ ಕುಟುಂಬ ಸಂಬಂಧ?

ಹೌದು, ಕುಟುಂಬ ಬಂಧನವು ಇದ್ದಂತೆ ತೋರುತ್ತದೆ, ಅದು ಬರಿಯ ಹೆಸರಿನಲ್ಲಿ. 'ನಾನು ಜಾನ್‌ಸ್ಮಿತ್; ನನ್ನ ತಂದೆ ಜಾರ್ಜ್‌ಸ್ಮಿತ್ ಆಗಿದ್ದ.' ಇದೇ ಹೆಸರು, ಬರೀ ಹೆಸರು. ಹೆಸರಿನಲ್ಲಿ ಏನಿದೆ? ಅದರಲ್ಲಿ ಏನಾದರೂ ಸಂಬಂಧವು—ಬಂಧನವು ಇದೆಯೆ? ನೋಡೋಣ.

ಒಬ್ಬ ಹುಡುಗನು ಇಲ್ಲಿ ಹುಟ್ಟುತ್ತಾನೆ; ಒಬ್ಬ ಹುಡುಗಿಯು ಇನ್ನೆಲ್ಲಿಯೋ ಹುಟ್ಟುತ್ತಾಳೆ. ಹುಡುಗ ಅಮೆರಿಕದವನು; ಹುಡುಗಿ ಜರ್ಮನಿಯವಳು. ಇಬ್ಬರೂ ಮದುವೆಯಾಗುತ್ತಾರೆ. ಹುಡುಗಿಯ ಕುಟುಂಬ ಸಂಬಂಧ ಎಲ್ಲಿಯೋ ಇತ್ತು; ಹುಡುಗನ ಕುಟುಂಬ ಸಂಬಂಧ ಇನ್ನೆಲ್ಲಿಯೋ ಇತ್ತು. ಆದರೆ ಅವರು ಮದುವೆಯಾದರು. ಓ! ಹಿಂದಿನ ಸಂಬಂಧಗಳು ಎಲ್ಲಿಗೆ ಹೋದವು? ಈಗ ಹಳೆಯ ಸಂಬಂಧ—ಬಂಧಗಳು ಹೋಗಿ ಹೊಸ ಸಂಬಂಧ—ಬಂಧನಗಳು ಉಂಟಾಗಿವೆ. ಈ ಹೊಸ ಸಂಬಂಧವು ವಿಚ್ಛೇದವಾಗುವ— ಹರಿದುಹೋಗುವ— ಕಾಲವು ಬರುತ್ತದೆ. ಆ ಗಂಡೂ ಆ ಹೆಣ್ಣೂ ಪುನಃ ಬೇರೆ ಬೇರೆ ಮದುವೆಯಾಗುತ್ತಾರೆ. ಅವರ ವಿವಾಹ ಸಂಬಂಧವು ಎಲ್ಲಿದೆ? ನೀವು ಅವರನ್ನು ಬಿಡಲಾಗದಂತೆ ಸ್ಥಿರವಾಗಿಟ್ಟಿರುವದು ಸಾಧ್ಯವೆ? ಒಬ್ಬ ಹುಡುಗನೂ ಅವನ ತಂಗಿಯೂ ಒಬ್ಬ ತಂದೆ—ತಾಯಿಯ ಮಕ್ಕಳಾದ್ದರಿಂದ ಒಂದೇ ಮನೆಯಲ್ಲಿ ತಮ್ಮ ಬಾಲ್ಯವನ್ನು ಕಳೆಯುತ್ತಾರೆ. ಇಲ್ಲಿ ಒಬ್ಬರಿಗೊಬ್ಬರು ಗಂಟುಬಿದ್ದಂತೆ ಅವರಲ್ಲಿ ಕುಟುಂಬದ ಗಂಟುಗಳಿವೆ— ಕೌಟುಂಬಿಕ ಸಂಬಂಧವಿದೆ. ಆ ಹುಡುಗನು ಯುವಕನಾಗಿ ಆಸ್ಟ್ರೇಲಿಯಾಕ್ಕೆ ಹೋಗುತ್ತಾನೆ; ಅಲ್ಲಿ ಅವನು ತನ್ನ ಸ್ವಂತ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾನೆ. ಅವನ ತಂಗಿಯು ತರುಣಿಯಾಗಿ ಫ್ರ್ಯಾನ್ಸ್‌ಗೆ ಹೋಗಿ ಲಗ್ನವಾಗಿ ಫ್ರೆಂಚ್ ಲೇಡಿಯಾಗುತ್ತಾಳೆ. ಎಲ್ಲಿವೆ ಸಂಬಂಧಗಳು? ಬಂಧಗಳು? ಗಂಟುಗಳು?

"ಪುನರ್ಜನ್ಮವು ನಿಜವಾದರೆ, ಕುಟುಂಬದ ಸಂಬಂಧಗಳನ್ನು ಅದು ಕಡಿದು ಹಾಕುವದಿಲ್ಲವೆ?" ಎಂಬಿದೇ ಪ್ರಶ್ನೆ. ಈ ಪ್ರಪಂಚದಲ್ಲಿ ಕುಟುಂಬ ಸಂಬಂಧಗಳೇ ಇಲ್ಲ— ಎನ್ನುವದೇ ಉತ್ತರ. ಸಂಬಂಧವೇ ಇಲ್ಲದಿರುವಾಗ, ಅದು ಯಾವದನ್ನು ಒಡೆಯಬೇಕು? ಅದು ಕುಟುಂಬ ಸಂಬಂಧವನ್ನು ಕಡಿಯುವದಿಲ್ಲ; ಏಕೆಂದರೆ ಕುಟುಂಬ ಸಂಬಂಧವೇ ಎಲ್ಲಿಯೂ ಇಲ್ಲ.

ಆದರೆ, ಕೌಟುಂಬಿಕ ಸಂಬಂಧಗಳು ನಿಜವಾಗಿಯೂ ಇರುವವೆಂದು ಇಟ್ಟುಕೊಂಡರೂ ಮತ್ತು ಕೆಲವು ಕಾಲವಾದರೂ ಆ ಸಂಬಂಧಗಳನ್ನು ನಾವು ಪ್ರಯತ್ನಪಟ್ಟು

ಸ್ಥಿರವಾಗಿ ಉಳಿಸಿಕೊಳ್ಳಬಹುದೆಂದು ಒಪ್ಪಿಕೊಂಡರೂ ಪುನರ್ಜನ್ಮವು ಅದನ್ನು ಒಡೆಯುವದಿಲ್ಲ. ನಿಮಗೆ ಎಷ್ಟೋ ಮಕ್ಕಳಿರಬಹುದು; ಅವುಗಳಲ್ಲಿ ಒಂದು ಸಾಯ ಬಹುದು. ನೀವು ಕೌಟುಂಬಿಕ ಸಂಬಂಧಗಳನ್ನು ಸ್ಥಿರವಾಗಿ ಉಳಿಸಿಕೊಳ್ಳಬೇಕೆಂದು ಪ್ರಯತ್ನ ಮಾಡತಕ್ಕವರು; ಆದರೆ ನಿಮ್ಮ ಕುಟುಂಬದಿಂದ ಒಂದು ಕಸಿದುಕೊಳ್ಳಲ್ಪ ಟ್ಟಿತು; ಈ ಪ್ರಪಂಚದಲ್ಲಿಯೇ ಸಂಬಂಧವು ಕಡಿದುಹೋಯಿತು. ಆದರೆ ಕಾಲಾಂತ ರದಲ್ಲಿ ಈ ಸಂಬಂಧಗಳು ಉತ್ತಮ ಗೊಳ್ಳುವವೆಂದೂ ಇಲ್ಲಿ ಕಡಿದುಹೋದ ಸಂಬಂಧಗಳು ಲೋಕಾಂತರದಲ್ಲಿ ಪುನಃ ಕೂಡಿಸಲ್ಪಡುವವೆಂದೂ ಕೆಲವರು ನಂಬು ತ್ತಾರೆ. ಇಲ್ಲಿ ಕಡಿದು ಹೋಗಿರುವ ಸಂಬಂಧಗಳು ಸ್ವರ್ಗದಲ್ಲಿಯೋ ಲೋಕಾಂತರ ದಲ್ಲಿಯೋ ಮತ್ತೆ ಕೂಡಿಕೊಳ್ಳಬೇಕೆಂದು ನಿಮ್ಮ ಬಯಕೆಯಿದ್ದರೆ, ಯಾವ ಭೂಗೋಳ ಶಾಸ್ತ್ರವೂ ಭೌತವಿಜ್ಞಾನಶಾಸ್ತ್ರವೂ ಖಗೋಳಶಾಸ್ತ್ರವೂ ವಿಳಾಸವನ್ನು ಕೊಡ ಲಾರದ ಕಾಲ್ಪನಿಕ ಸ್ವರ್ಗವನ್ನು ನಿಜವಾಗಿರುವದೆಂದು ಭಾವಿಸಿಕೊಳ್ಳಬೇಕಾದು ದಿಲ್ಲ. ನಿಮ್ಮ ಬಂಧು ಮಿತ್ರರೊಡನೆ ನಿಮ್ಮ ಸಂಬಂಧವು ಹೆಚ್ಚು ಕಾಲ ಮುಂದು ವರಿಯಬೇಕೆಂದು ನಿಮ್ಮ ಅಪೇಕ್ಷೆಯಿದ್ದರೆ, ಕರ್ಮ ಹಾಗೂ ಪುನರ್ಜನ್ಮದ ನಿಯ ಮದ ಪ್ರಕಾರ —ಮನುಷ್ಯನು ತನ್ನ ಅದೃಷ್ಟಕ್ಕೆ ತಾನೇ ಸ್ವಾಮಿಯಾದುದರಿಂದ— ಮರಣಾನಂತರವೂ ಪ್ರೇಮ ಸಂಬಂಧವು ಮುಂದುವರಿಯಬಹುದು. ನಿಮ್ಮ ವೈಯ ಕ್ತಿಕ ಬಂಧಗಳನ್ನೂ ಸಂಬಂಧಗಳನ್ನೂ ನೀವೇ ಮಾಡಿಕೊಳ್ಳತಕ್ಕವರು. ನೀವು ಸಾಯು ವಾಗ, ಯಾರ ವಿಷಯದಲ್ಲಿಯಾದರೂ ನಿಮಗೆ ಆಳವಾದ ಪ್ರೇಮವಿದ್ದರೆ ನಿಮ್ಮ ಮುಂದಿನ ಜನ್ಮದಲ್ಲಿ, ನಿಮ್ಮ ಪ್ರೀತಿಯ ವ್ಯಕ್ತಿಯೇ ಬೇರೆ ದೇಹದಲ್ಲಿ ಹುಟ್ಟಿ ನಿಮ್ಮೊಡನೆ ಸ್ನೇಹ ಸಂಬಂಧ ಪಡೆದಿರುವದನ್ನು ಕಾಣಬಹುದು. ನಿಮ್ಮ ವರ್ತ ಮಾನ ಜನ್ಮದಲ್ಲಿ ಆ ವ್ಯಕ್ತಿಯಲ್ಲಿ ಪ್ರೀತಿಯನ್ನು ಕಳೆದುಕೊಂಡು, ಆ ವ್ಯಕ್ತಿಯೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳುವದೂ ನಿಮಗೆ ಬೇಡವಾದರೆ ಜನ್ಮ–ಕರ್ಮ ಗಳ ನಿಯಮದಂತೆ ಮುಂದಿನ ಜನ್ಮದಲ್ಲಿ ನಿಮಗೂ ಆ ವ್ಯಕ್ತಿಗೂ ಯಾವ ಸಂಬಂಧವೂ ಇರುವದಿಲ್ಲ. ಆ ನಿಯಮದ ಪ್ರಕಾರ ನಿಮಗೆ ಬೇಡವಾದವರೂ ಮರಣಾನಂತರ ನಿಮಗೆ ಒತ್ತಾಯದಿಂದ ಬಂದು ಗಂಟುಬೀಳುವರೆಂದೂ ಬೇಕಾದ ಮಿತ್ರರಾದರೂ ಸಂಬಂಧ ಪಡದೆ ಹಾರಿಹೋಗುವರೆಂದೂ ಆಗುವದಿಲ್ಲ. ಯಾರ ಸಾನ್ನಿಧ್ಯವು ನಿಮಗೆ ಅತಿ ಭಯಂಕರವಾಗಿದೆಯೋ ಅವರೇ ದೈವ ಪ್ರೇರಿತರಾಗಿ ನಿಮ್ಮ ಮೇಲೆ ಬಂದು ಒತ್ತಾಯದಿಂದ ಎರಗುತ್ತಾರೆಂದು ವೇದಾಂತವು ಹೇಳುವದಿಲ್ಲ. ಒಬ್ಬಳು ಹೆಂಗಸು ಆಕೆಯ ಗಂಡನಿಂದ ವಿಚ್ಛೇದವನ್ನು ಪಡೆದಿದ್ದರೆ, ಮತ್ತು ಅವನನ್ನು ಪುನಃ ನೋಡುವದು ಆಕೆಗೆ ಬೇಡವಾದರೆ, ಕರ್ಮನಿಯಮದ ಪ್ರಕಾರ— ಅವನಿಗೂ ಬೇಡ ವಾದರೆ—ಅವನೇನೂ ಆಕೆಯನ್ನು ಪೀಡಿಸುವದಿಲ್ಲ. ಯಾರನ್ನು ಆಕೆ ನೋಡಬೇಕೋ ಯಾರೊಡನೆ ಸಂಬಂಧವನ್ನು ಇಟ್ಟುಕೊಳ್ಳಬೇಕೋ ಅದನ್ನು ಮುಂದಿನ ಜನ್ಮದಲ್ಲಿ ಆಕೆಯೇ ನಿಶ್ಚಯಿಸಿಕೊಳ್ಳುತ್ತಾಳೆ.

ಈ ವಿಷಯದಲ್ಲಿ ಬಹಳ ತಪ್ಪು ತಿಳಿವಳಿಕೆಗಳಿವೆ. ಅವೆಲ್ಲವನ್ನೂ ಒಂದೊಂದಾಗಿ ವಿಚಾರಮಾಡಬೇಕಾಗಿದೆ. ಯೂರೋಪ್, ಅಮೆರಿಕಾಗಳಲ್ಲಿ ಸಾಮಾನ್ಯವಾಗಿ ಜನರೆಲ್ಲಾ ತಪ್ಪಾಗಿ ತಿಳಿದುಕೊಂಡಿರುವ ಸ್ವರ್ಗದ ವಿಚಾರವನ್ನು ತೆಗೆದುಕೊಳ್ಳೋಣ. ಅದನ್ನು ಕ್ರೈಸ್ತರ ಸ್ವರ್ಗವೆಂದು ಕರೆಯೋಣವೆ? ಅಲ್ಲ; ಅದನ್ನು ಚರ್ಚಿನ ಸ್ವರ್ಗವೆಂದು ಕರೆಯೋಣ. ಸ್ವರ್ಗದ ಭಾವನೆಯಲ್ಲಿ ಪರಸ್ಪರ ವಿರೋಧ ಪ್ರಯೋಗವಿಲ್ಲವೆ? ಸ್ವರ್ಗವೆಂದರೆ ಎಲ್ಲರೂ ಒಟ್ಟು ಸೇರಿ ಕುಳಿತು, ಜೀವಿಸುವ ಸ್ಥಳವೆಂದು ತಿಳಿದಿದ್ದಾರೆ. ಸತ್ಯಕ್ಕಾಗಿ. ದಯವಿಟ್ಟು ಸ್ವಲ್ಪ ಆಲೋಚನೆ ಮಾಡಿರಿ, ವಿಚಾರ ಮಾಡಿರಿ, ಎಂದು ರಾಮನು ಕೇಳಿಕೊಳ್ಳುತ್ತಾನೆ. ಎಲ್ಲಿ ನಿಮಗೆ ಪರಿಮಿತಿ ಇದೆಯೋ ಅಲ್ಲಿ ಪೂರ್ಣಸುಖವು ಇರಬಲ್ಲದೆ? ಪರಿಮಿತಿಯಲ್ಲಿ ಏನಾದರೂ ಸುಖವಿರುವದುಂಟೆ? ಅಸಾಧ್ಯ. ಅಸಾಧ್ಯ. ನಿಮ್ಮ ಸ್ವರ್ಗದಲ್ಲಿ ಎಷ್ಟೋ ಜನ ಎದುರಾಳಿಗಳೂ ಪ್ರತಿಸ್ಪರ್ಧಿಗಳೂ ಇದ್ದರೆ. ಹಿಂದೆ ಸತ್ತವರೆಲ್ಲರೂ ಮುಂದೆ ಸಾಯುವರೆಲ್ಲರೂ ಇವತ್ತು ರಾತ್ರಿ ಸಾಯುತ್ತಿರುವವರೂ—ಇಂಡಿಯಾದಲ್ಲಿ ಆಗಲೀ ಆಸ್ಟ್ರೇಲಿಯಾದಲ್ಲಿ ಆಗಲೀ ಅಮೆರಿಕಾದಲ್ಲಿ ಆಗಲಿ, ಯಾವ ದೇಶದಲ್ಲಿಯೋ ಆಗಲಿ ಸತ್ತವರೆಲ್ಲಾ—ಸೇರಿರುವ—ಸೇರುವ—ಸ್ಥಳದಲ್ಲಿ ಏನಾದರೂ ಸುಖ ಸಿಕ್ಕಬಹುದೆ? ಅಲೆಕ್ಸಾಂಡರ್ ಸೆಲ್ಕರ್ಕನು,

"ನಾನವಲೋಕಿಸುವ ಸರ್ವಕು ನಾನೆ ಸಾರ್ವಭೌಮು,
ಎನ್ನಧಿಕಾರವ ವಿರೋಧಿಸುವರಾರಿಲ್ಲ ನಾನೆ ನಿಸ್ಸೀಮು."

ಎಂದು ಹೇಳಿರುವದು ನಿಮಗೆ ಗೊತ್ತಿದೆ. ನೀವು ಒಂದು 'ಕಾರ್'ನಲ್ಲಿ ಕುಳಿತಿರುವಾಗ "ಇಡೀ ಕಾರಿನಲ್ಲಿ ನಾನೊಬ್ಬನೇ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು" ಎನಿಸುತ್ತದೆ—ನಿಮಗೆ ಬೇರೆಯವರು ಕಾರಿನೊಳಗೆ ಬಂದರೆ ನಿಮಗೆ ಸ್ವಲ್ಪ ಅಸಮಾಧಾನವಾಗುತ್ತದೆ. ನೀವು ನಿಮ್ಮ ಕೋಣೆಯಲ್ಲಿ ಕುಳಿತಿರುವಾಗ, ನಿಮ್ಮ ಭೇಟಿಗಾಗಿ ಯಾರಾದರೂ ಬಂದರೆ, "ಮನೆಯಲ್ಲಿಲ್ಲ, ಮನೆಯಲ್ಲಿಲ್ಲ" ಎಂದು ನಿಮ್ಮ ಜವಾನನಿಂದ ಹೇಳಿಸುವದಿಲ್ಲವೆ?

ನಿಮಗೆ ಮನೆಯೂ ಆಸ್ತಿಯೂ ಇದೆ ; ಬೇರೆಯವರಿಗೂ ಮನೆಗಳೂ ಆಸ್ತಿಗಳೂ ಇವೆ. ನಿಮ್ಮ ಬೈಬಲ್ ಆಗಲಿ, ವೇದವಾಗಲಿ ಉಪದೇಶಮಾಡುವದಕ್ಕೆ ವಿರುದ್ಧವಾಗಿ ಇತರರಿಗಿಂತಲೂ ನಿಮಗೆ ಹೆಚ್ಚು ಐಶ್ವರ್ಯವಿರಬೇಕಾಗಿತ್ತೆಂದು ಬಯಸುತ್ತೀರಿ. ಎಲ್ಲರೂ ನಿಮಗೆ ಅಡಿಯಾಳಾಗಿರಬೇಕೆಂದು ಬಯಸುತ್ತೀರಿ. ಕೆಲವು ಕ್ರೈಸ್ತರು—ನಿಜವಾದ ಕ್ರೈಸ್ತರಲ್ಲ, ಕ್ರೈಸ್ತರೆಂದು ತಪ್ಪಾಗಿ ಕರೆಯಲ್ಪಟ್ಟವರು—ತಾವು ಪ್ರಯಾಣ ಮಾಡುತ್ತಿರುವ ಹಡಗಿನಲ್ಲಿ ಒಬ್ಬ ಬೌದ್ಧನೋ ಮಹಮ್ಮದೀಯನೋ ಹಿಂದುವೋ ಪ್ರವಾಸ ಮಾಡುತ್ತಿರುವದನ್ನು ಕಂಡರೆ ಅಸಹ್ಯಪಟ್ಟುಕೊಳ್ಳುವುದಿಲ್ಲವೆ?

ಪಟ್ಟುಕೊಳ್ಳುವದಿಲ್ಲವೆ? ಇದನ್ನು ರಾಮನು ತನ್ನ ಅನುಭವದಿಂದ ಹೇಳುತ್ತಾನೆ. ತಮ್ಮೊಡನೆ ಒಂದೇ ಸ್ಥಳದಲ್ಲಿ—ವಾಹನದಲ್ಲಿ—ಬೇರೆ ಮತಸ್ಥರ ಇರುವಿಕೆಯನ್ನು ಕ್ರೈಸ್ತರು ಸಹಿಸುವದಿಲ್ಲ. ಅವರ ಸಂತೋಷವನ್ನು ಅದು ಕೆಡಿಸುತ್ತದೆ. ಸ್ವರ್ಗದಲ್ಲಿಯಾದರೂ ನಿಮ್ಮ ಸುತ್ತಲೂ ಅನೇಕ ಬಗೆಯ ಜನರನ್ನು ನೋಡುತ್ತೀರಿ. ಅವರಲ್ಲಿ ನಿಮಗಿಂತಲೂ ಬಹಳ ಮುಂದುವರಿದಿರುವರೆಂದೂ ಮೇಲೇರಿರುವರೆಂದೂ ನೀವೇ ತಿಳಿದಿರುವ ಕ್ರಿಸ್ತನನ್ನೂ ಬುದ್ಧನನ್ನೂ ಹೋಲುವ, ನಿಮಗಿಂತಲೂ ಉತ್ತಮರಾದ ಎಷ್ಟೋ ಮಹಾತ್ಮರಿರುತ್ತಾರೆ. ಆ ಸ್ವರ್ಗದಲ್ಲಿ ಅದರಿಂದ ನಿಮಗೆ ಸಂತೋಷವಾಗುವದೋ? ಸಂತೋಷವಾಗಬಹುದೋ? ಈ ವಿಷಯವನ್ನು ಸ್ವಲ್ಪ ಆಲೋಚನೆಮಾಡಿ, ವಿಚಾರ ಮಾಡಿ.

ಎಲ್ಲೆಲ್ಲಿ ಭಿನ್ನ ಭೇದವಿದೆಯೋ ತಾರತಮ್ಯವಿದೆಯೋ ಅಲ್ಲಿ ಸುಖವಿರಲಾರದು. ಅಲ್ಲಿ ಸುಖವಿರುವದು ಅಸಾಧ್ಯ, ಎಂದೆಂದಿಗೂ ಅಸಂಭವ. ನಿಮ್ಮ ಸಂತೋಷವನ್ನು ಕೆಡಿಸುವದಾವದು? ಇನ್ನೊಬ್ಬರ ದರ್ಶನವೇ ನಿಮಗೆ ಅಸಮಾಧಾನವನ್ನುಂಟುಮಾಡಬಹುದು. ತನ್ನ ಸುಖಕ್ಕಾಗಿ ತಾನೇ ತಾನಾಗಬೇಕೆಂದೂ ತಾನು ಸ್ವಚ್ಛಂದವಾಗಿರಬೇಕೆಂದೂ ಪ್ರತಿಯೊಬ್ಬನೂ ಇಚ್ಛಿಸುತ್ತಾನೆ. ಬೈಬಲ್ ನಿಮಗೆ ವರದಾನಮಾಡಿದೆಯೆಂದು ತಪ್ಪಾಗಿ ತಿಳಿದಿರುವ ಈ ಬಗೆಯ ಸ್ವರ್ಗದಲ್ಲಿ ಯಾವ ಸುಖವೂ ಇರಲಾರದು.

ಸ್ವಲ್ಪವಾದರೂ ಯುಕ್ತಿ ಯುಕ್ತವಾಗಿಯೂ ವಿಚಾರ ಸಮ್ಮತವಾಗಿಯೂ ತೋರುವದಕ್ಕಾಗಿ ಬೈಬಲ್ಲನ್ನು ನಾವು ಯಾವ ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕು? "ನಾವು ಸ್ವರ್ಗದಲ್ಲಿ ಸೇರುತ್ತೇವೆ" ಎಂದು ಬೈಬಲ್‌ನಲ್ಲಿ ಇದೆ. ನಾವೆಲ್ಲರೂ ಸ್ವರ್ಗದಲ್ಲಿ ಸೇರುತ್ತೇವೆ. ನಮ್ಮ ಮಿತ್ರರನ್ನು ನಾವು ಸ್ವರ್ಗದಲ್ಲಿ ಸಂಧಿಸುತ್ತೇವೆ. ಇದರ ಅರ್ಥವೇನು? ಇದರ ನಿಜವಾದ ಅರ್ಥವೇನು? ಅದನ್ನು ಸರಿಯಾಗಿ ಅರ್ಥಮಾಡಿಕೊಂಡು ವ್ಯಾಖ್ಯಾನ ಮಾಡಬೇಕು. ನಾವೆಲ್ಲರೂ ಸ್ವರ್ಗದಲ್ಲಿ ಸೇರುವೆವೆಂದು ಹೇಳಿರುವ ಆ ಬೈಬಲ್ಲಿನಲ್ಲಿಯೇ—ನ್ಯೂ ಟೆಸ್ಟಮೆಂಟಿನಲ್ಲಿಯೇ—ಸ್ವರ್ಗ ಸಾಮ್ರಾಜ್ಯವು ನಿಮ್ಮೊಳಗೇ ಇದೆ; ದೇವರ ರಾಜ್ಯವು ನಿಮ್ಮೊಳಗೇ ಇದೆ."ಎಂದು ಹೇಳಿರುವದು ನಿಮಗೆ ಗೊತ್ತಿಲ್ಲವೆ? ಆದ್ದರಿಂದ "ದೇವರ ರಾಜ್ಯವು, ನಿಜವಾದ ಸ್ವರ್ಗವು ನಿಮ್ಮೊಳಗೇ ಇದೆ, ಅದು ಹೊರಗಿಲ್ಲ". ಆದ್ದರಿಂದ, ಸ್ವರ್ಗವನ್ನು ನಿಮ್ಮಿಂದ ಹೊರಗೆ ಭಾವಿಸಬೇಡಿ; ಅದಕ್ಕಾಗಿ ಅಂತರಿಕ್ಷದಲ್ಲಿ ನಕ್ಷತ್ರಗಳ ಮಧ್ಯದಲ್ಲಿ ನೋಡಬೇಡಿ. ದೇವರ ಮೇಲೆ ಸ್ವಲ್ಪ ಕನಿಕರವಿರಲಿ. ಆ ದೇವರು ಮೋಡಗಳ ಮೇಲೆ ವಾಸಮಾಡುತ್ತಿದ್ದರೆ ಆ ಬಡಪಾಯಿಯು ಚಳಿ ಹಿಡಿದು ಸೆಟೆದು ಎಂದೋ ಸತ್ತಿರುತ್ತಿದ್ದನು. ಸ್ವರ್ಗವು ನಿಮ್ಮೊಳಗೇ ಇದೆ; ದೇವರೂ ನಿಮ್ಮೊಳಗೇ ಇದ್ದಾನೆ. ಸ್ವಲ್ಪ ನಿಮ್ಮೊಳಗೇ ನೋಡಿಕೊಳ್ಳಿ.

ಪರಮಾತ್ಮ ಪ್ರಜ್ಞೆಯ ಆನಂದ ಸ್ಥಿತಿಯಲ್ಲಿ ಧುಮುಕಿರಿ. ದೇವರೊಡನೆ ಪೂರ್ಣ ಏಕತ್ವದಲ್ಲಿ ಹಾರಿರಿ. ನಿರ್ವಾಣ ಸ್ಥಿತಿಯಲ್ಲಿ ಪ್ರವೇಶಮಾಡಿ, ದಿವ್ಯವಾದ ಪರಮಾನಂದ

ಸ್ಥಿತಿಯನ್ನು ಅನುಭವ ಮಾಡಿ. ನೀವು ಬರಿ ಸ್ವರ್ಗದಲ್ಲಿರುವದಲ್ಲ ; ನೀವೇ ಸ್ವರ್ಗವಾಗು ವಿರಿ. ಈಗಲೇ ಸ್ವರ್ಗವಾಗಿದ್ದೀರಿ. ಅಲ್ಲಿ ನೀವು ಇಡೀ ಜಗತ್ತಿನೊಡನೆ ಒಂದಾಗಿರುತ್ತೀರಿ. ಅಲ್ಲಿ ನೀವು ಎಲ್ಲಾ ಸತ್ತವರೊಡನೆಯೂ ಜೀವಂತರಾದ ಎಲ್ಲರೊಡನೆಯೂ ಈ ಪ್ರಪಂಚ ದಲ್ಲಿ ಮುಂಚೆ ಹುಟ್ಟಬಹುದಾದ ಎಲ್ಲರೊಡನೆಯೂ ಸ್ವರ್ಗವು ನಿಮ್ಮೊಳಗೇ ಇದೆ; ಇದುವರೆಗೆ ತಿಳಿಸಿರುವ ರೀತಿಯಲ್ಲಿ ಸ್ವರ್ಗದಲ್ಲಿ ನಾವೆಲ್ಲರೂ ಸೇರುತ್ತೇವೆ. ಜೀವನ್ಮು ಕ್ತನು—ಇಲ್ಲಿ ಬದುಕಿರುವಾಗಲೇ ಈಗಲೇ ಬಿಡುಗಡೆ ಹೊಂದಿರುವವನು— ಯಾವಾ ಗಲೂ ಸ್ವರ್ಗದಲ್ಲಿಯೇ ಇರುತ್ತಾನೆ ; ಅವನು ಜೀವಂತರಾಗಿರುವ ಎಲ್ಲರೊಡನೆಯೂ ಸತ್ತಿರುವೆಲ್ಲರೊಡನೆಯೂ ಒಂದಾಗಿರುತ್ತಾನೆ. ಮುಂದೆ ಈ ಜಗತ್ತಿನಲ್ಲಿ ಹುಟ್ಟಬಹು ದಾದ ಎಲ್ಲರೊಡನೆಯೂ ಅವನು ಒಂದಾಗಿರುತ್ತಾನೆ. ಎಲ್ಲಾ ನಕ್ಷತ್ರಗಳೂ ಎಲ್ಲಾ ಪ್ರಾಣಿಗಳೂ ತನ್ನ ಆತ್ಮನೇ ಎಂದು ಅವನು ತಿಳಿದು ಭಾವಿಸುತ್ತಾನೆ. ಅವನು ನಿಜ ವಾದ ದೇವತ್ವವೂ ನಿಜವಾದ ಇರುವಿಕೆಯೂ ನಿಜವಾದ ವಸ್ತುವೂ ಅರಿವಿಗೆ ನಿಲು ಕದ ದೇವರೂ ತಾನೇ ಎಂದು ತಿಳಿದು ಭಾವಿಸುತ್ತಾನೆ. ಸರ್ವವೂ ಅವನೇ ಆಗಿ ದ್ದಾನೆ; ಆದ್ದರಿಂದ ಅವನು ಸ್ವರ್ಗದಲ್ಲಿದ್ದಾನೆ; ಮತ್ತು ಆ ಸ್ವರ್ಗದಲ್ಲಿ ಎಲ್ಲರೊಡ ನೆಯೂ ಸೇರುತ್ತಾನೆ.

ಈಗ ಬಹಳ ಮುಖ್ಯವಾದ ಏನೊಂದು ವಿಷಯವನ್ನು ಹೇಳುತ್ತೇನೆ. ಈ ಪ್ರಪಂ ಚದಲ್ಲಿರುವ ಜನರು ತಮ್ಮ ಬಯಕೆಯ ವಸ್ತುಗಳನ್ನು ಸೇರಲು ಇಚ್ಛಿಸುತ್ತಾರೆ. ಅವುಗಳ ಪ್ರಾಪ್ತಿಗಾಗಿ ಅವರು ಅತಿಯಾಗಿ ಹಂಬಲಿಸಿದರೂ ಅವು ಲಭಿಸುವುದಿಲ್ಲ. ಅವು ಏಕೆ ಅವರಿಗೆ ದೊರಕುವದಿಲ್ಲ? ಅವು ದೊರಕುವದಾದರೂ ಹೇಗೆ? ಇಷ್ಟ ವಸ್ತುವು ತಮಗೆ ಲಭಿಸಲಿಲ್ಲವೆಂದು ಜನರು ಎದೆಯೊಡೆದುಕೊಳ್ಳುತ್ತಾರೆ; ಅವರು ಪ್ರೀತಿಹತರಾಗಿ, ಮೋಹಹತರಾಗಿ, ಆಶಾಹತರಾಗಿ, ಅತಿಯಾಗಿ ವ್ಯಥೆಪಡುತ್ತಾ ಕಾಲವನ್ನೂ ಜೀವನವನ್ನೂ ವ್ಯರ್ಥಮಾಡಿ, ಭಗ್ನವನ್ನೂ ಮಾಡಿಕೊಳ್ಳುತ್ತಾರೆ. ಇದು ಏಕೆ ಹೀಗಾಗುತ್ತದೆ? ಏಕೆಂದರೆ ಅವರು ಸ್ವರ್ಗದಲ್ಲಿ ಸೇರುವದಿಲ್ಲ; ಅದೇ ಮುಖ್ಯವಾದ ಕಾರಣ. ಪ್ರಾಪಂಚಿಕವಾದ ಐಶ್ವರ್ಯಕ್ಕಾಗಿ ಹಂಬಲಿಸುತ್ತಿ ರುವ ಓ ಪ್ರಪಂಚದ ಜನರೆ, ನಿಮ್ಮ ಸ್ನೇಹಿತರೂ ಸಂಬಂಧಿಗಳೂ ನಿಮ್ಮನ್ನು ಬಿಟ್ಟಿರ ಬಾರದೆಂದೂ ಪ್ರಾಪಂಚಿಕ ಭೋಗ ಭಾಗ್ಯಗಳು ನಿಮ್ಮನ್ನು ಹುಡುಕಿಕೊಂಡು ಬರ ಬೇಕೆಂದೂ ನಿಮ್ಮ ಪ್ರಿಯ—ಪ್ರೇಯಸಿಯರಿಗಾಗಿ ನಿಮ್ಮ ಶಕ್ತಿಯನ್ನೆಲ್ಲಾ ವ್ಯರ್ಥಮಾಡಿ. ಕೊಳ್ಳುತ್ತೀರಿ. ಉನ್ನತಸ್ಥಾನಗಳನ್ನು ಬಯಸಿ ನಿರಾಶೆಹೊಂದುವ ಜನರೆ! ನೀವು ಇತರರನ್ನು ಪ್ರೇಮಿಸುವದಕ್ಕೆ ಬದಲು ಅವರು ನಿಮ್ಮನ್ನು, ನೀವು ನಿರೀಕ್ಷಿಸು ವಷ್ಟು ಉತ್ಕಟ ಭಾವದಿಂದ ಪ್ರೇಮಿಸಬೇಕೆಂದು ಬಯಸಿದರೆ ರಾಮನ ಹಿತೋಪ ದೇಶದಂತೆ ನಡೆಯಿರಿ. ಏಕೆಂದರೆ ಪ್ರವೇಶ ಸಾಧ್ಯವಲ್ಲದ ಗುಪ್ತಸ್ಥಾನಕ್ಕೆ ಪ್ರವೇಶ ದೊರಕಿಸಿ ಕೊಡುವ ಉಪಾಯವೇ ಅದು ; ಬಯಕೆಯ ಎಲ್ಲಾ ಗುಪ್ತ ವಿಷಯಗಳ

ಭಂಡಾರದ ಬೀಗವನ್ನೂ ಬಿಚ್ಚುವದಕ್ಕೆ ಅದೊಂದೇ ಗುರು ಕೀಲಿಯು. ಎಲ್ಲರೂ ನಿಮ್ಮನ್ನು ಸೇರಬೇಕಾದರೆ, ಎಲ್ಲವೂ ನಿಮ್ಮನ್ನು ಹುಡುಕಿಕೊಂಡು ಬರಬೇಕಾದರೆ ಅದು ಸ್ವರ್ಗದಲ್ಲಿಯೇ ಸರಿ. ಸ್ವರ್ಗದಲ್ಲಿ ಸೇರುವದೆಂದರೆ ಏನು? "ನೀವು ನನ್ನನ್ನು ಪ್ರೀತಿಸುತ್ತೀರಾ?" "ದಯವಿಟ್ಟು ವಿಶ್ವಾಸವಿರಬೇಕು" ಎಂದು ಕೇಳಿ, ಬಯಸಿ ಬೇಡುವ ಕೀಳು ಬಗೆಯು, ಹಕ್ಕನ್ನೂ ಒಡೆತನವನ್ನೂ ಸ್ಥಾಪಿಸುವ, ಪ್ರೇಮದಲ್ಲಿ ಯಾವ ರೀತಿಯ ದಿವ್ಯತೆಯೂ ಇಲ್ಲ. ನಾನು – ನೀನು ಎನ್ನುವ ನಮ್ಮಿಬ್ಬರಿಗಿಂತಲೂ ಹೆಚ್ಚು ಉನ್ನತವಾದ ತತ್ತ್ವದಲ್ಲಿ ನಿಂತು ನೀವು ನನ್ನ ಅಭಿಮಾನವನ್ನೂ ಚಿಂತೆಯನ್ನೂ ಬಿಟ್ಟು, ನನ್ನನ್ನು ಕಳೆದುಕೊಂಡಾಗ ನಾನು ನಿಮ್ಮಿಂದ ಆಕರ್ಷಿತನಾಗಿ ನಿಮ್ಮ ಸಮೀಪದಲ್ಲಿಯೇ ಇರುತ್ತೇನೆ. ನಿಮ್ಮ ಲಕ್ಷ್ಯವನ್ನು ನನ್ನ ಮೇಲಿರಿಸಿ, ನನ್ನನ್ನು ಅಭಿಮಾನಿಸಿ, ನನ್ನಿಂದ ಪ್ರೀತಿಯನ್ನು ಅಧಿಕಾರಯುತವಾಗಿ ಬೇಡಿದರೆ, ಅದು ನನ್ನನ್ನು ಆಕರ್ಷಿಸುವದಕ್ಕೆ ಬದಲು, ನನ್ನಲ್ಲಿ ಅಸಹ್ಯಭಾವವನ್ನು ಹುಟ್ಟಿಸಿ ವಿಕರ್ಷಣ ಮಾಡುವದು, ದೂರೀಕರಿಸುವದು. ಇದು ಪ್ರಕೃತಿನಿಯಮ. ಇದು ಅಪರಿಹಾರ್ಯವೂ ನಿರ್ದಯವೂ ನಿರ್ದಾಕ್ಷಿಣ್ಯವೂ ಕಠೋರವೂ ಬದಲಾಯಿಸಲಸಾಧ್ಯವಾದ ಪ್ರಕೃತಿ ನಿಯಮ. ಬಯಕೆಯನ್ನು ಮೀರಿ ನೀವು ಏರಿದ ಕ್ಷಣವೇ ಬಯಕೆಯ ವಿಷಯವು ನಿಮ್ಮನ್ನು ಹುಡುಕಿಕೊಂಡು ಬರುತ್ತದೆ. ಆದರೆ, ನೀವು ಹಲುಬಿ, ಹಂಬಲಿಸಿ, ಬಯಸಿ, ಕೇಳಿ, ಬೇಡುವ ಭಾವವನ್ನು ವಹಿಸಿದ ಕ್ಷಣವೇ ನೀವು ದೂರೀಕರಿಸಲ್ಪಡುತ್ತೀರಿ. ನಿಮ್ಮ ಬಯಕೆಯ ವಸ್ತುವು ನಿಮಗೆಂದಿಗೂ ಲಭಿಸಲಾರದು, ಲಭಿಸುವದಿಲ್ಲ. ವಸ್ತುವನ್ನು ಮೀರಿ ಮೇಲೆ ನಿಲ್ಲಿರಿ. ಹಾಗಾದರೆ ಅದು ನಿಮ್ಮನ್ನು ಹುಡುಕಿಕೊಂಡು ಬರುವದು. ಇದೇ ಪ್ರಕೃತಿ ನಿಯಮವು. ಆದರೆ, "Seek and it shall be given to you, knock and it shall be opened unto you" "ಅನ್ವೇಷಿಸು, ಆಕಾಂಕ್ಷಿಸು, ಅಭ್ಯರ್ಥಿಸು, ಪ್ರಾರ್ಥಿಸು, ಅದು ನಿನಗೆ ಕೊಡಲ್ಪಡುತ್ತದೆ ; ತಟ್ಟು, ನೂಕು, ಅದು ನಿನಗೆ ತೆರೆಯಲ್ಪಡುತ್ತದೆ." ಎಂದೂ ಹೇಳಿದೆ. ಅದನ್ನು ತಪ್ಪಾಗಿ ತಿಳಿದುಕೊಂಡಿದ್ದೇವೆ. "Seek and you will never find; Knock and it shall never be opened unto you" "ಬಯಸಿದರೆ ನಿನಗೆಂದಿಗೂ ದೊರಕುವದಿಲ್ಲ; ತಟ್ಟಿದರೆ, ನಿನಗೆಂದಿಗೂ (ಬಾಗಿಲು) ತೆರೆಯುವದಿಲ್ಲ." ಇದು ಹೀಗೇ ಅಲ್ಲವೆ? ಒಬ್ಬ ಭಿಕ್ಷುಕ ನಿಮ್ಮಲ್ಲಿಗೆ ಬಂದರೆ ನೀವು ಅಸಹ್ಯ ಪಟ್ಟುಕೊಳ್ಳುವದಿಲ್ಲವೆ? ಬಡ ಜನರನ್ನು ಬೀದಿಯಲ್ಲಿ ನಡೆಯುವದಕ್ಕೆ ಸಹ ಬಿಡುವದಿಲ್ಲ; ಅವರನ್ನು ಸೆರೆಮನೆಗೆ ಕಳಿಸುತ್ತಾರೆ. ಇದು ನಿಜವಲ್ಲವೆ? ರಾಮನೂ ಸೆರೆಮನೆಯನ್ನು ಕಂಡನು; ಸೆರೆಯಾಳುಗಳಲ್ಲಿ ಅನೇಕರ ಅಪರಾಧವು ಬಡತನ ಒಂದೇ ಆಗಿದ್ದಿತು, ಅವರು ಭಿಕ್ಷುಕರೆಂಬುದು ಮಾತ್ರ ಆಗಿದ್ದಿತು. "ಬಡಮನೆಗೆ [ poor house ] ಹೋಗಿರಿ; ನಿಮ್ಮಿಂದ ನಮಗೆ ಅವಮಾನವಾಗುತ್ತದೆ." ಎಂದು ಜನ ಹೇಳುತ್ತಾರೆ, ಅಲ್ಲವೆ?

ನೀವು ದೇವರಲ್ಲಿಗೆ ಹೋಗಬೇಕೆನ್ನುತ್ತೀರಿ; ಮಲಿನವಾದ ವಸ್ತ್ರಗಳಿಂದ ಭಿಕಾರಿಯ ಮನೋಭಾವದಿಂದ ಹೋದರೆ, ನಿಮಗೆ ದೇವರ ಸನ್ನಿಧಿಯಲ್ಲಿ ಪ್ರವೇಶವು ಹೇಗೆ ದೊರಕುತ್ತದೆ? ದೊರಕುವದಿಲ್ಲ. ನೀವು ರಾಜನಲ್ಲಿಗೆ ಹೋಗಬೇಕಾದರೆ ಉತ್ತಮವಾದ ಉಡಿಗೆಗಳನ್ನೇ ಧರಿಸಿಕೊಂಡು ಹೋಗಬೇಕು; ನೀವು ದೇವರಲ್ಲಿಗೆ ಹೋಗಬೇಕಾದರೆ ನಿಷ್ಕಾಮವಾದ ಉಡಿಗೆಯನ್ನೇ ಧರಿಸಬೇಕು. ನೀವು ದೇವರನ್ನು ನೋಡಬೇಕಾದರೆ, ಸ್ವರ್ಗ ಸಾಮ್ರಾಜ್ಯವನ್ನು ಕಂಡುಕೊಳ್ಳಬೇಕಾದರೆ ಬೇಕೆಂಬುದೇ ಇಲ್ಲದಿರುವಿಕೆಯ ವಸ್ತ್ರವನ್ನು ಧರಿಸಬೇಕು. ನೀವು ಎಲ್ಲಾ ಕೊರತೆಯನ್ನೂ ಬಯಕೆಯನ್ನೂ ಮೀರಿ ನಿಲ್ಲಬೇಕು.

"ಮೊದಲು ಸ್ವರ್ಗ ಸಾಮ್ರಾಜ್ಯವನ್ನು ಬಯಸಿ, ಸಾಧಿಸಿ; ಮಿಕ್ಕ ಎಲ್ಲವೂ ತಮ್ಮಿಂದ ತಾವೇ ಸೇರಿ ಕೊಳ್ಳುತ್ತವೆ !" ಇದೇ ನಿಯಮ.

'ಮನುಷ್ಯನು ತನ್ನ ಅದೃಷ್ಟಕ್ಕೆ ತಾನೇ ಸ್ವಾಮಿ' ಎಂದು ಕರ್ಮ ನಿಯಮವು ಹೇಳುತ್ತದೆ. ನಮ್ಮ ಸನ್ನಿವೇಶಗಳನ್ನೂ ಸಂದರ್ಭಗಳನ್ನೂ ಪರಿಸ್ಥಿತಿಗಳನ್ನೂ ನಾವೇ ರೂಪಿಸಿಕೊಳ್ಳುತ್ತೇವೆ. ಪ್ರತಿಯೊಂದು ಮಗುವೂ ತನ್ನ ತಂದೆಗೆ ತಾನೇ ತಂದೆಯಾಗಿದೆ; ಪ್ರತಿಯೊಬ್ಬ ಮಗಳೂ ತನ್ನ ತಾಯಿಗೆ ತಾನೇ ತಾಯಿಯಾಗಿದ್ದಾಳೆ. ಇದು ಲೋಕ ವಿರುದ್ಧವಾಗಿ ಕಾಣಬಹುದು; ಅಸಂಬದ್ಧವಾಗಿಯೂ ಕಾಣಬಹುದು. ಓ, ಆದರೆ ಇದು ಪೂರ್ಣ ಸತ್ಯ; ಇದು ಸತ್ಯದ ಹೊರತು ಬೇರೆಯಲ್ಲ.

ಕರ್ಮದ ನಿಯಮದಂತೆ [ರಾಮನು ಇದನ್ನು ಈಗ ಪೂರ್ಣವಾಗಿ ವಿಚಾರ ಮಾಡುವದಿಲ್ಲ; ಆದರೆ ಸದ್ಯದ ವಿಷಯಕ್ಕೆ ಸಂಬಂಧಪಟ್ಟಷ್ಟು ಮಾತ್ರವೇ ತೆಗೆದು ಕೊಳ್ಳುತ್ತಾನೆ.] ನೀವು ವಿಷಯಗಳನ್ನು ಬಯಸುವಾಗ, ಎಲ್ಲಿಯವರೆಗೆ ಅವುಗಳಿಗಾಗಿ ಹಂಬಲಿಸಿ ಆಶೆಮಾಡುತ್ತೀರೋ ಅಲ್ಲಿಯವರೆಗೆ ಅವುಗಳು ನಿಮಗೆ ನಿರಾಕರಿಸಲ್ಪಡುತ್ತವೆ. ನೀವು ಕೆಲವು ಕಾಲ ಹಂಬಲಿಸಿ, ಹಾತೊರೆದು, ಬಯಸಿ, ಇಚ್ಛಿಸಿ, ಅಪೇಕ್ಷಿಸಿದರೂ ವಸ್ತುವು ಲಭಿಸದಿರುವಾಗ ಆಶೆ ಮಾಡುವದಕ್ಕೆ ಬೇಸರವಾಗಿ, ಆ ವಿಷಯದ ಕಡೆ ಬೆನ್ನು ಹಾಕಿ, ತಿರುಗಿ, ಅದರಲ್ಲಿ ಅನಾಸಕ್ತಿಯಿಂದಲೂ ಜುಗುಪ್ಸೆಯಿಂದಲೂ ನಿರಾಶೆಯಿಂದಲೂ ಇರುವಾಗ ಆ ವಸ್ತುವು ತಾನಾಗಿಯೇ ಬರುತ್ತದೆ. ಇದೇ ಕರ್ಮದ ನಿಯಮವು.

ಮನುಷ್ಯನು ಮುಂದೆ ಮುಂದೆ ನಡೆಯಬೇಕಾದರೆ, ಒಂದೊಂದು ಹೆಜ್ಜೆಯನ್ನೂ ಮೇಲೆತ್ತಿ ಕೆಳಗಿಳಿಸಬೇಕು. ಹೀಗೆಯೇ ನಿಮ್ಮ ಆಶೆಗಳು ಸಫಲವಾಗಬೇಕಾದರೆ, ಕರ್ಮನಿಯಮದ ಪ್ರಭುತ್ವದಲ್ಲಿ, ನೀವು ಆಶೆಯನ್ನು ಮೆಟ್ಟಿ ಮೀರಿ ಆಶೆಯನ್ನು ಬಿಡುವ ಸ್ಥಿತಿಯೂ ಸಮಯವೂ ಬರಬೇಕು. ಆಗಲೇ ಅದರಿಂದಲೇ

ಆಶೆಗಳು ತೃಪ್ತಿಯಾಗುತ್ತವೆ. ಸಾಮಾನ್ಯವಾಗಿ ಕರ್ಮನಿಯಮದ ವಿಷಯವಾಗಿ ಬರೆಯುವ ಲೇಖಕರು ಅದರ ವಿಧಿಮುಖದ ಮೇಲೆ ಎಲ್ಲಾ ಮಹತ್ವವನ್ನೂ ಇಡುತ್ತಾರೆ; ಆ ಪ್ರಶ್ನೆಯ ನಿಷೇಧಮುಖವನ್ನು ಗಣನೆಗೇ ತೆಗೆದುಕೊಳ್ಳುವದಿಲ್ಲ. ನಿಮ್ಮ ಎಲ್ಲಾ ಇಚ್ಛೆಗಳೂ ಆಸೆಗಳೂ ಸಫಲವಾಗಬೇಕು, ಪೂರ್ತಿಯಾಗಬೇಕು— ಎಂದು ರಾಮನು ಹೇಳುತ್ತಾನೆ. ನೀವು ಬಯಸಿದ್ದೆಲ್ಲಾ ನಿಮ್ಮೆದುರಿಗೇ ಬರಬೇಕು. ಆದರೆ ಅದರಲ್ಲಿ ಒಂದು ವಿಧಿ ಇದೆ. ನೀವು ನಿಮ್ಮ ಬಯಕೆಗಳನ್ನು ಬಿಡುವ ಸ್ಥಿತಿಯು ನಿಮ್ಮಲ್ಲಿ ಬರಬೇಕು. ಆಗ ಆ ಬಯಕೆಗಳು ಪರಿಪೂರ್ತಿಯಾಗುತ್ತವೆ. ಈ ವಿಷಯವನ್ನು ಎಲ್ಲರೂ ತಿಳಿಯಲಿಲ್ಲವೆಂದು ರಾಮನು ಭಾವಿಸುತ್ತಾನೆ. ರಾಮನು "ಹೆರ್ಮೆಟಿಕ್ ಬ್ರದರ್‌ಹುಡ್ ಹಾಲ್"ನಲ್ಲಿ ಹಿಂದೆ ಮಾಡಿದ ಉಪನ್ಯಾಸಗಳನ್ನು ಈ ಜನರು ಕೇಳದಿರುವದೇ ಇದಕ್ಕೆ ಕಾರಣವೆಂದು ತೋರುತ್ತದೆ. ಒಳ್ಳೆಯದು, ಈಗ ನಿಮಗದು ತಿಳಿಯದಿದ್ದರೆ, ಬೇರೆ ಸಮಯದಲ್ಲಿ ಈ ವಿಷಯವನ್ನು ತೆಗೆದುಕೊಳ್ಳಲಾಗುತ್ತದೆ.

ಇನ್ನೊಂದು ವಿಷಯ. ತಮ್ಮ ಸಂಬಂಧಗಳನ್ನೂ ಬಾಂಧವ್ಯಗಳನ್ನೂ ನಿರಂತರವಾಗಿ ಇಟ್ಟುಕೊಳ್ಳಬೇಕೆಂದೂ ತಮಗೆ ಇಷ್ಟವಾದವರೆಲ್ಲಾ ಯಾವಾಗಲೂ ಒಟ್ಟಿಗೆ ಕೂಡಿರಬೇಕೆಂದೂ ಹೆಚ್ಚು ಸಂಖ್ಯೆಯ ಜನರು ಅಪೇಕ್ಷಿಸುತ್ತಾರೆ. ನಿಮ್ಮ ಪ್ರಾಪಂಚಿಕ ಸಂಬಂಧಗಳನ್ನು ಎಂದೆಂದಿಗೂ ಸ್ಥಿರವಾಗಿರುವಂತೆ ಮಾಡಿಕೊಳ್ಳಬೇಕೆಂಬದು ಹುಚ್ಚು ಭಾವನೆಯೆಂದು ಎಲ್ಲೆಲ್ಲಿಯೂ ಅತ್ಯಂತ ಉಚ್ಚವಾದ ಧ್ವನಿಯಲ್ಲಿ ಸಾರಿ ಸಾರಿ ಹೇಳಬೇಕು. ಅಸ್ಥಿರವಾದ ಸಂಬಂಧಗಳನ್ನು ಸ್ಥಿರವಾಗಿ ಮಾಡುವದು ಎಂದಿಗೂ ಸಾಧ್ಯವಲ್ಲ. ಅದು ಪೂರ್ಣ ನಿರಾಶೆಗೆ ವಿರುದ್ಧವಾಗಿ ಆಶೆ ಮಾಡಿದಂತೆಯೇ ಸರಿ; ನಿರ್ಗತಿಕವಾದ ಭರವಸೆ. ನಿಮ್ಮ ಪ್ರಾಪಂಚಿಕವಾದ ಸಂಬಂಧಗಳನ್ನು ಸ್ಥಿರಗೊಳಿಸಲು ಎಂದೆಂದಿಗೂ ಸಾಧ್ಯವಲ್ಲ. ಪ್ರಾಪಂಚಿಕವಾದ ಯಾವದನ್ನೂ ಶಾಶ್ವತಗೊಳಿಸುವದು ಸಾಧ್ಯವಲ್ಲ; ಎಂದೆಂದಿಗೂ ಸಾಧ್ಯವಲ್ಲ. ಇದೊಂದು ದುರ್ದೈವದ ಭಾವನೆಯೆಂದೂ ಹುಚ್ಚು ಕಲ್ಪನೆಯೆಂದೂ ನಿಮ್ಮ ಹೃದಯಗಳಲ್ಲಿ ಪ್ರವೇಶ ಮಾಡಲಿ; ನಿಮ್ಮ ಆತ್ಮಗಳಲ್ಲಿ ಆಳವಾಗಿ ಇಳಿಯಲಿ. ಈ ಮಾತನ್ನು ಎಷ್ಟೆಷ್ಟು ಸಲ ಪುನಃ ಪುನಃ ಹೇಳಿದರೂ ರಾಮನಿಗೆ ಬೇಸರವಿಲ್ಲ. ಈ ಪ್ರಪಂಚದಲ್ಲಿ ಯಾವದೂ ಸ್ಥಿರವಲ್ಲ, ಯಾವದೂ ಶಾಶ್ವತವಲ್ಲ. ನಿಮ್ಮೊಳಗಿರುವ ದೇವತ್ವ ಒಂದೇ—ದೇವರು ಒಂದೇ—ಸ್ಥಿರವಾದುದು; ನೀವೇ ದೇವರು ಎನ್ನುವದೇ ನಿತ್ಯಸತ್ಯ, ಶಾಶ್ವತ ಸತ್ಯ. ಈ ದೇಹವನ್ನು ಎಂದೆಂದಿಗೂ ಇರುವಂತೆ ಮಾಡುವದು ಸಾಧ್ಯವೇ ಇಲ್ಲ. ನೀವು ಐದು ಲಕ್ಷ ಕೋಟಿ ವರ್ಷಗಳು ಬದುಕಿದರೂ ಒಂದು ದಿನ ಸಾಯಲೇ ಬೇಕು. ಸೂರ್ಯನೇ ಒಂದು ದಿನ ಸಾಯುತ್ತಾನೆ; ಭೂಮಿಯೂ ಸಾಯುತ್ತದೆ. ನಕ್ಷತ್ರಗಳೂ ನಾಶವಾಗುತ್ತವೆ. ನಾಶವೆಂದರೆ ಬದಲಾವಣೆ ಎಂದು ಅರ್ಥ. ನಿಮ್ಮ ಶರೀರವು ಪ್ರತಿ ಸೆಕೆಂಡ್‌ನಲ್ಲಿಯೂ ಬದಲಾವಣೆ ಹೊಂದುತ್ತಿರುವಂತೆ ಈ ಎಲ್ಲವೂ ಬದಲಾವಣೆ ಹೊಂದುತ್ತಿರುವದರಿಂದ

ಯಾವುದನ್ನೂ ಸ್ಥಿರಗೊಳಿಸುವದು ಸಾಧ್ಯವಲ್ಲ. ಏಳು ವರ್ಷಗಳ ಅನಂತರ ನಿಮ್ಮ ಶರೀರವು ಪೂರ್ಣವಾಗಿ ಹೊಸದಾಗುತ್ತದೆ.

ಹೀಗೆಯೇ ನಿಮ್ಮ ಸಂಬಂಧಗಳೂ ಬಾಂಧವ್ಯಗಳೂ ಬದಲಾವಣೆಯಾಗುತ್ತಾ ಬದಲಾವಣೆಯಾಗುತ್ತಾ ಹೋಗುತ್ತವೆ. ಅವನ್ನು ಸಂತತ ಏಕರೂಪವಾಗಿ ಇಟ್ಟು ಕೊಳ್ಳುವದು ಸಾಧ್ಯವಲ್ಲ. ಆ ದಿಶೆಯಲ್ಲಿ ನಿಮಗೇನಾದರೂ ಅತ್ಯಾಸಕ್ತಿ ಇದ್ದರೆ ಬಿಟ್ಟು ಬಿಡಿ.

ಪರ್ವತಗಳ ಮೇಲಕ್ಕೆ ನದಿಗಳು ಹರಿಯಲೂ ಬಹುದು,
ಗಾಳಿಗಳು ಕೆಳಮುಖವಾಗಿ ಬೀಸಲೂ ಬಹುದು,
ಬೆಂಕಿಯು ತಂಪಾದ ಕಿರಣಗಳ ಹೊರ ಸೂಸಬಹುದು,
ರವಿಯು ತಾ ಕತ್ತಲೆಯ ಹೊರಚೆಲ್ಲಲೂ ಬಹುದು.

ಆದರೆ ಪ್ರಾಪಂಚಿಕ ಸಂಬಂಧಗಳ ಅಸ್ಥಿರತೆಯು ಮಾತ್ರ ವ್ಯರ್ಥವಾಗುವದಿಲ್ಲ ಅಥವಾ ನಿಷ್ಫಲವಾಗುವದಿಲ್ಲ. ಇದೇ ಪ್ರಕೃತಿ ನಿಯಮ. ಇದು ನಿಮಗೆ ಒಪ್ಪಿಗೆಯಾಗದೆ, ನೀವು ಬೇರೆ ಬಗೆಯಿಂದ ತಿಳಿದಿದ್ದರೆ, ಅದು ನಿಮ್ಮ ತಪ್ಪು ತಿಳಿವಳಿಕೆ. ಹೇಗೆ ಒಂದು ನದಿಯಲ್ಲಿ ಬೇರೆ ಬೇರೆ ದಿಕ್ಕುಗಳಿಂದ ನೀರಿನ ಮೇಲೆ ತೇಲಿ ಬರುವ ಮರದ ತುಂಡು ಗಳು ಕ್ಷಣಕಾಲ ಸಂಧಿಸಿ, ಸ್ವಲ್ಪ ಕಾಲ ಒಂದರೊಡನೆ ಒಂದು ಸೇರಿದ್ದರೂ ಬಲವಾದ ಗಾಳಿಯೂ ಅಲೆಯೂ ಬಂದು ಒಂದೊಂದು ದಿಮ್ಮಿಯನ್ನು ಒಂದೊಂದು ದಿಕ್ಕಿಗೆ ಕೊಚ್ಚಿಕೊಂಡು ಹೋಗುತ್ತವೆಯೋ ಹಾಗೆ ನಮ್ಮ ಕೌಟುಂಬಿಕ ಸಂಬಂಧಗಳಿವೆ. ತೆರೆಗಳಿಂದ ಕೊಚ್ಚಿ ಒಯ್ಯಲ್ಪಟ್ಟ ಆ ಮರದ ಕೊರಡುಗಳು ಆ ನದಿಯಲ್ಲಿ ತೇಲಿ ಹೋಗುವಾಗ ಎಲ್ಲಿಯೋ ಯಾವಾಗಲೋ ಒಂದರೊಡನೊಂದು ಮತ್ತೆ ಸೇರಬಹುದು. ಆದರೆ ಪುನಃ ಸ್ವಲ್ಪ ಕಾಲದಲ್ಲಿ ಅವು ಅಗಲಲೇ ಬೇಕಾಗುತ್ತದೆ. ನಿಮ್ಮ ಇಡೀ ಜೀವನದಲ್ಲಿ ಹೇಗೋ ಹಾಗೆಯೇ ನಿಮ್ಮ ನಿತ್ಯ ಜೀವನದಲ್ಲಿಯೂ ತಂದೆ, ತಾಯಿ, ಅಣ್ಣ ತಮ್ಮಂ ದಿರು, ಅಕ್ಕ ತಂಗಿಯರು ಯಾವಾಗಲೂ ಕೂಡಿರುವದಿಲ್ಲ. ಊಟಕ್ಕಾಗಿಯೋ ಮಾತಿ ಗಾಗಿಯೋ ಅವರು ಕೆಲವು ನಿಮಿಷಗಳು ಕೂಡಿದ್ದು, ತಮ್ಮ ತಮ್ಮ ಬೇರೆ ಬೇರೆ ಕೋಣೆಗಳಿಗೋ ಆಫೀಸುಗಳಿಗೋ ಉದ್ಯೋಗಗಳಿಗೋ ಹೋಗುತ್ತಾರೆ. ಪ್ರತಿ ಯೊಂದು ಗೃಹಕೃತ್ಯದ ಕೌಟುಂಬಿಕ ಸಣ್ಣ ವೃತ್ತದಲ್ಲಿ ನಿತ್ಯವೂ ಕಾಣಬಹುದಾದ ಯೋಗ ವಿಯೋಗಗಳನ್ನೇ ವಿಶಾಲವಾದ ಜಗಜ್ಜೀವನದಲ್ಲಿ ಕಾಣುತ್ತೇವೆ. ನಿಮಗೆ ಅತ್ಯಂತ ಪ್ರಿಯರಾದವರೊಡನೆಯೂ ನೀವು ಎಷ್ಟೇ ಪ್ರಯತ್ನಪಟ್ಟರೂ ಎಂದೆಂ ದಿಗೂ ಕೂಡಿರುವದು ಸಾಧ್ಯವಲ್ಲ. ಪ್ರಕೃತಿ ನಿಯಮವು ಇಷ್ಟು ಉಗ್ರವಾಗಿರುವಾಗ ಮುಗ್ಧರಾದ ಮಕ್ಕಳಂತೆ ಏಕೆ ಆಡಬೇಕು ? ಈ ಸಂಬಂಧಗಳೆಲ್ಲಾ ಇಷ್ಟು ಅಸ್ಥಿರವೂ ಅವಿಶ್ವಸನೀಯವೂ ಆಗಿರುವದರಿಂದ ಯಾವದು ಎಂದೆಂದಿಗೂ ಇರುವದೋ

ಸ್ಥಿರವಾಗಿಯೂ ಶಾಶ್ವತವಾಗಿಯೂ ಇರುವದೋ ಅದರ ಚಿಂತೆಯನ್ನು ಹೆಚ್ಚಾಗಿ ಏಕೆ ಹಚ್ಚಿಕೊಳ್ಳಬಾರದು? ಯಾವದನ್ನು ನೀವು ಎಂದೂ ಬಿಟ್ಟಿರಲಾರಿರೋ ಯಾವದ ರಿಂದ ನೀವು ಬೇರೆ ಅಲ್ಲವೋ ಯಾವದು ನಿಮ್ಮ ಸ್ವರೂಪವೇ ಆಗಿದೆಯೋ ಅದರ ವಿಷಯದಲ್ಲಿ ಏಕೆ ಹೆಚ್ಚು ಆಲೋಚನೆಯನ್ನೂ ವಿಚಾರವನ್ನೂ ಮಾಡಿ, ಅದನ್ನು ಸಾಧಿಸುವದಕ್ಕೂ ಅನುಭವ ಮಾಡುವದಕ್ಕೂ ಪ್ರಯತ್ನ ಮಾಡಬಾರದು? ತೋರಿ ಹಾರುವ ಸುಳ್ಳು ಸಂಬಂಧಗಳಿಗಾಗಿ ಎಂದೆಂದಿಗೂ ಇರುವ ಸತ್ಯವನ್ನೂ ಶಾಶ್ವತ ತತ್ತ್ವವನ್ನೂ ಏಕೆ ಬಲಿಕೊಡಬೇಕು?

ಇಂಡಿಯಾದೇಶದಲ್ಲಿ ಹೊಸದಾಗಿ ಮದುವೆಯಾದ ಒಬ್ಬ ತರುಣಿಯಿದ್ದಳು. ಒಂದು ದಿನ ಆಕೆಯು ತನ್ನ ಅತ್ತೆಯೊಡನೆಯೂ ಅತ್ತಿಗೆಯೊಡನೆಯೂ ಕುಳಿತಿದ್ದಳು. ಅವರು ಬಹಳ ವಿನೋದವಾಗಿ ಮಾತನಾಡುತ್ತಿದ್ದರು. ಆ ನೂತನ ವಧುವಿನ ಪತಿಯು ಆ ಸಮಯದಲ್ಲಿ ಆ ಸನ್ನಿವೇಶದಲ್ಲಿರಲಿಲ್ಲ. ಯಾವದೋ ವಿಷಯವನ್ನು ಕುರಿತು ಮಾತ ನಾಡುತ್ತಾ ಅತ್ತಿಗೆಯು ಆ ವಧುವಿನ ಗಂಡನನ್ನು [ಅಂದರೆ ತನ್ನ ತಮ್ಮನನ್ನು] ಆಕ್ಷೇ ಪಿಸಿದಳು, ದೂಷಿಸಿದಳು. ಆ ಸಂದರ್ಭದಲ್ಲಿ ರಾಮನೂ ಅಲ್ಲಿಯೇ ಇದ್ದನು. ರಾಮನು ಆ ವಧುವಿನ ಮುಖದಿಂದ ಹಿತವೂ ವಿಹಿತವೂ ಮಧುರವೂ ಆದ ಈ ಮಾತನ್ನು ಕೇಳಿದನು: "ಅತ್ತಿಗೆ! ನೀವು ನಿಮ್ಮ ಸಹೋದರರೊಡನೆ ಇನ್ನು ಹೆಚ್ಚೆಂದರೆ ನಾಲ್ಕೆಂಟು ದಿನಗಳು ಇರಬಹುದು. ನಾನಾದರೋ ಆ ನನ್ನ ದೇವರೊಡನೆ ಜೀವಮಾನ ವೆಲ್ಲಾ ಕೂಡಿರಬೇಕು, ಸ್ನೇಹದಿಂದಿರಬೇಕು, ಅವರನ್ನು ಭಕ್ತಿಯಿಂದ ಸೇವಿಸಿ ಅವರ ಪ್ರೇಮಾನುಗ್ರಹಕ್ಕೆ ಪಾತ್ರಳಾಗಬೇಕು. ಅವರಲ್ಲಿ ನಾನು ಎಳ್ಳಷ್ಟೂ ದೋಷವನ್ನು ಎಣಿಸಲಾರೆ. ಅವರು ನನಗೆ ಸಕಲ ಸದ್ಗುಣಸಂಪನ್ನರಾದ ಪತಿದೇವರು, ಮಹಾ ಪ್ರಭುಗಳು. ಬೇರೆ ಯಾರು ಅವರಲ್ಲಿ ದೋಷವನ್ನು ಹೇಳಿದರೂ ನನ್ನ ಪ್ರೇಮವು ಸಹಿಸಲಾರದು. ನೀವು ನನಗಿಂತಲೂ ಅವರಿಗಿಂತಲೂ ಹಿರಿಯರು. ಆದ್ದರಿಂದ ನೀವು ನಮ್ಮ ದೋಷವನ್ನು ಹೇಳಿ ತಿದ್ದಬಹುದು. ಆದರೆ ನನ್ನ ದೇವರಲ್ಲಿ ನಿಮಗೆ ತೋರಬಹುದಾದ ದೋಷವನ್ನು ನನ್ನ ಎದುರಿಗೆ ಹೇಳಬೇಡಿ. ನಾಲ್ಕು ದಿನಗಳು ಜೊತೆಗಿರಬಹುದಾದ ನಿಮಗಾಗಿ, ಎಂದೆಂದಿಗೂ ನನ್ನೊಡನೆ ಎಡೆಬಿಡದೆ ನನ್ನ ಆತ್ಮ ನಾಗಿ ಅತ್ಯಂತ ಪ್ರೇಮದಿಂದಿರಬೇಕಾದ ನನ್ನ ಪರಮಾತ್ಮನೊಡನೆ—ತಿಳಿಯದ ಬಾಲಕಿಯಂತೆ—ನಾನು ಮನಸ್ಸನ್ನು ಕೆಡಿಸಿಕೊಳ್ಳಲಾರೆ. ದೋಷವನ್ನು ಕಂಡವ ರಲ್ಲಿ ಪ್ರೇಮವುಕ್ಕುವುದಿಲ್ಲ, ಪ್ರೇಮ ಉಕ್ಕಿದಲ್ಲಿ ದೋಷವು ಕಾಣುವದಿಲ್ಲ. ನನಗೆ ಶಾಶ್ವತ ಪ್ರೇಮವೂ ಶಾಶ್ವತ ಸಂಗವೂ ಸೇವೆಯೂ ಮಾತ್ರ ಬೇಕು. ಆ ಶಾಶ್ವತ ವಸ್ತು ವಿಗಾಗಿಯೂ ಶಾಶ್ವತ ಪ್ರೇಮಕ್ಕಾಗಿಯೂ ಮಿಕ್ಕ ಎಲ್ಲವನ್ನೂ ತ್ಯಾಗ ಮಾಡುತ್ತೇನೆ: ಬಲಿಗೊಡುತ್ತೇನೆ. ಅತ್ತಿಗೆ! ಕ್ಷಮಿಸಿ, ನೀವು ನನ್ನ ಪ್ರೇಮದ ಪರೀಕ್ಷೆಗಾಗಿಯೂ ನನ್ನಲ್ಲಿ ಈ ಉನ್ನತ ಭಾವನೆಯನ್ನು ಕೆರಳಿಸುವದಕ್ಕಾಗಿಯೂ ಈ ಮಾತನ್ನು

ಹೇಳಿರುವಂತೆ ತಿಳಿಯುತ್ತೇನೆ. ನೀವು ನನಗಿಂತಲೂ ದೊಡ್ಡವರು, ತಿಳಿದವರು, ಪೂಜ್ಯರು. ನೀವು ಈ ನನ್ನ ಭಾವನೆಯನ್ನು ಒಪ್ಪಿಕೊಂಡು ಆಶೀರ್ವದಿಸುತ್ತೀರೆಂದು ನಿಮಗೆ ನಮಸ್ಕರಿಸುತ್ತೇನೆ" ಎಂದು ಆ ನವವಧುವು ವಿವೇಕಿಯಾದ ಮಹಾ ಪ್ರೌಢೆಯಂತೆ, ಧರ್ಮಾತ್ಮರು ತಲೆದೂಗುವ ರೀತಿಯಲ್ಲಿ, ಧರ್ಮದೇವತೆಯೇ ಮೆಚ್ಚಿ ಕೃಪಾವರ್ಷಣ ಮಾಡುವಂತೆ, ಅಮೃತರೂಪವಾದ ಮಾತನ್ನಾಡಿದಳು.

ಆ ಬಾಲಕಿಗಿದ್ದಷ್ಟು ವಿವೇಕವಾದರೂ ನಮಗೆ ಬೇಕು. ಆಕೆಯ ಮಾತಿನಲ್ಲಿ ಶಾಶ್ವತ ವಸ್ತುವಿಗಾಗಿ ಆಕೆಯು ಎಷ್ಟು ಬೆಲೆಯನ್ನೂ ಮಹತ್ವವನ್ನೂ ಕೊಟ್ಟಿದ್ದಾಳೆ ಎಂಬದನ್ನು ನಾವು ಗಮನಿಸಬೇಕು. ಸತಿಗೆ ಪತಿಯೇ ಪರದೈವವೆಂಬ ಧರ್ಮತತ್ತ್ವವನ್ನು ಗೌರವಿಸಿ, ಆಕೆಯು ನಿತ್ಯ ಸತ್ಯವಾದ ಪರಮಾತ್ಮನ ಸ್ಥಾನದಲ್ಲಿ ಪತಿಯನ್ನಿರಿಸಿ ಶಾಶ್ವತವಾದ ವಸ್ತುವಿನಲ್ಲಿ ಎಲ್ಲಾ ವಿವೇಕಿಗಳಿಗೂ ಇರಬೇಕಾದ ಅಚಲವೂ ದೃಢವೂ ನೈಜವೂ ತೀವ್ರವೂ ಆದ ಭಾವನೆಯನ್ನು ವ್ಯಕ್ತಮಾಡಿದ್ದಾಳೆ. ಪ್ರಾಪಂಚಿಕವಾದ ಯಾವ ಸಂಬಂಧವೂ ಸ್ಥಿರವಲ್ಲ. ಆದರೆ ನಿಮ್ಮ ನಿಜವಾದ ಆತ್ಮನೊಡನೆ ನೀವು ನಿಮ್ಮ ಜೀವಮಾನವನ್ನೆಲ್ಲಾ ಕಳೆಯಬೇಕು. ಆತ್ಮ ಶಾಶ್ವತವಾದುದು. ಅದರ ಸಂಬಂಧವನ್ನು ಕಡಿದು ಕೊಳ್ಳುವದಾಗಲೀ ಅದರಿಂದ ಬೇರ್ಪಡುವದಾಗಲೀ ಸಾಧ್ಯವಿಲ್ಲ. ತೋರಿ ಹಾರುವ ವರ್ತಮಾನ ಕಾಲದ ವಸ್ತುಗಳಿಗಾಗಿ ನಿಜವಾದ ಆತ್ಮನೊಡನೆ ನೀವು ಕಡಿದು ಕೊಳ್ಳಬಾರದು. ನಿಮ್ಮನ್ನು ನೀವು ಆ ಚಂಚಲ ವಸ್ತುಗಳಿಗಾಗಿ ಏಕೆ ಮಾರಿಕೊಳ್ಳುತ್ತೀರಿ? ನಿಮ್ಮನ್ನು ನೀವೇ ಕೀಳ್ಮಾಡಿ, ಅಲ್ಪವಾಗೆಣಿಸುವ, ತೃಣೀಕರಿಸುವ ಜೀವನವನ್ನು ಏಕೆ ನಡೆಸುತ್ತೀರಿ? ನಿಮ್ಮೊಳಗಿನ ದೇವರನ್ನು ಏಕೆ ಅನುಭವಮಾಡುವದಿಲ್ಲ? ನಿಮ್ಮ ನಿಜವಾದ ಆತ್ಮನಿಂದ ಏಕೆ ಒಡೆದುಕೊಳ್ಳುತ್ತೀರಿ? ಸಾಕಷ್ಟು ವಿವೇಕಿಗಳಾಗಿರಿ.

ಬುದ್ಧದೇವನಲ್ಲಿಗೆ ಒಬ್ಬ ಮನುಷ್ಯನು ಬಂದು ಅವನ (ಬುದ್ಧನ) ಕುಟೀರಕ್ಕೆ ಹೋಗಲು ಹೇಳಿದನು. ಬುದ್ಧ ದೇವನು ಹಿಂದೆ ರಾಜ ಕುಮಾರನೂ ಚಕ್ರವರ್ತಿಯೂ ಆದ ಗೌತಮನಾಗಿದ್ದು ಮುಂದೆ ಪರಿವ್ರಾಜಕನಾದನು. ಅವನು ಸರ್ವಸ್ವವನ್ನೂ ತ್ಯಾಗಮಾಡಿ ಸಂನ್ಯಾಸಿಯಾದನು. ಅವನು ಪರಿವ್ರಾಜಕನಾಗಿ ಏನನ್ನೂ ಕೇಳದೆ ಬೇಡದೆ ಊರಿಂದೂರಿಗೆ ತಿರುಗುತ್ತಿದ್ದನು. ಅವನು ತನ್ನ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದ ಪಾತ್ರೆಯಲ್ಲಿ ಯಾರಾದರೂ ಏನಾದರೂ ಆಹಾರವನ್ನು ಹಾಕಿದರೆ ಒಳ್ಳೆಯದಾಯಿತು; ಇಲ್ಲವಾದರೆ ಬುದ್ಧನು ತನ್ನ ದೇಹಕ್ಕಾಗಿ ಹುಲ್ಲುಕಡ್ಡಿಯಷ್ಟೂ ಚಿಂತಿಸುತ್ತಿರಲಿಲ್ಲ: ಈ ಪ್ರಾಪಂಚಿಕ ಜೀವನವನ್ನು ಅವನು ಸ್ವಲ್ಪವೂ ಲೆಕ್ಕಿಸುತ್ತಿರಲಿಲ್ಲ. ಅವನು ತನ್ನ ತಂದೆಯ ರಾಜ್ಯಕ್ಕೆ ಹೋಗಿ, ಭಿಕ್ಷುಕನ ವೇಷದಲ್ಲಿ—ಸನ್ಯಾಸಿಯ ಉಡಿಗೆಯಲ್ಲಿ ಬೀದಿಗಳಲ್ಲಿ ಸಂಚರಿಸುತ್ತಿದ್ದನು. ಬುದ್ಧನನ್ನು ಭಿಕ್ಷುಕನೆಂದು ಕರೆಯುವದು ತಪ್ಪಾಗಬಹುದು. ಅವನದು ಭಿಕ್ಷುಕವೃತ್ತಿಯಲ್ಲ. ಅವನು ರಾಜಾಧಿರಾಜ, ಅವನದು

ರಾಜಶ್ರೀ, ರಾಜವೈಭವ, ರಾಜವಿಭೂತಿ, ಮಹಾ ಭವ್ಯತೆ. ಅವನು ಯಾವುದನ್ನೂ ಬಯಸುವದಿಲ್ಲ. ಅವನು ಏನನ್ನೂ ಕೇಳುವದಿಲ್ಲ. ದೇಹವು ಸತ್ತರೇನು? ಸಾಯಲಿ— ಎಂದು ಅವನ ಭಾವನೆ. ಶರೀರದ ಯೋಗಕ್ಷೇಮದ ಚಿಂತೆಯು ಸಹ ಅವನಿಗಿಲ್ಲ. ಅವನು ಆಹಾರ ವಸ್ತ್ರಗಳನ್ನು ಕೇಳುವದಕ್ಕೆ ಸಹ ನಿಮ್ಮಲ್ಲಿಗೆ ಬರುವದಿಲ್ಲ.

ಆ ಭಿಕ್ಷುವಿನ ಉಡುಪಿನಲ್ಲಿ ಬುದ್ಧನು ಬೀದಿಗಳಲ್ಲಿ ತಿರುಗುತ್ತಿರುವದನ್ನು ಕೇಳಿದ ಅವನ ತಂದೆಯು ಬಹಳ ವ್ಯಥೆಯಿಂದ ಅವನಲ್ಲಿಗೆ ಬಂದು ಕಣ್ಣೀರುಗರೆಯುತ್ತಾ "ವತ್ಸ! ಪ್ರಿಯ ರಾಜಕುಮಾರ, ನಾನೆಂದೂ ಈ ನಿನ್ನ ಕಾರ್ಯವನ್ನು ಮಾಡಲಿಲ್ಲ, ನಿನ್ನ ಈ ವೇಷವನ್ನು ಹಾಕಲಿಲ್ಲ. ನನ್ನ ತಂದೆಯೂ ಅಂದರೆ ನಿನ್ನ ಅಜ್ಜನೂ ಈ ನಿನ್ನ ಭಿಕ್ಷುಕನ ಉಡಿಗೆಯನ್ನು ಧರಿಸಲಿಲ್ಲ. ನಿನ್ನ ಮುತ್ತಜ್ಜನೂ ಈ ವೃತ್ತಿಯನ್ನು ನಡೆಸಲಿಲ್ಲ. ನಾವೆಲ್ಲರೂ ಪರಂಪರೆಯಾಗಿ ರಾಜರಾಗಿದ್ದೇವೆ; ನೀನೂ ರಾಜವಂಶಕ್ಕೆ ಸೇರಿದವನು. ಈ ಭಿಕ್ಷುವೃತ್ತಿಯಿಂದ ನಮ್ಮ ಇಡೀ ರಾಜವಂಶಕ್ಕೇ ಅಪಕೀರ್ತಿಯನ್ನೂ ನಾಚಿಕೆಗೇಡನ್ನೂ ಈಗ ನೀನೇಕೆ ತರುತ್ತಿದ್ದಿ? ದಯವಿಟ್ಟು ಹೀಗೆ ಮಾಡಬೇಡ, ಹೀಗೆ ಮಾಡಬೇಡ, ನಮ್ಮ ಗೌರವವನ್ನು ಉಳಿಸು" ಎಂದು ಕೇಳಿಕೊಂಡನು.

ಬುದ್ಧನು ಮುಗುಳು ನಗೆಯಿಂದ "ನಾನು ಯಾವ ವಂಶಕ್ಕೆ ಸೇರಿದವನೆಂಬುದನ್ನು ಹಿಂದಿರುಗಿ ನೋಡುತ್ತೇನೆ. ನನ್ನ ಹಿಂದಿನ ಜನ್ಮಗಳನ್ನೂ ಸ್ಮರಿಸುತ್ತೇನೆ. ನಾನು ಬಂದಿರುವ ವಂಶವು ಉದ್ದಕ್ಕೂ ಎಲ್ಲಾ ಕಾಲದಲ್ಲಿಯೂ ಭಿಕ್ಷುಕರ ವಂಶವೇ ಆಗಿದೆ. ಅದಕ್ಕೆ ನಿದರ್ಶನವೇನೆಂದರೆ, ಇಲ್ಲಿ ಒಂದು ಬೀದಿ ಇದೆ, ಆ ಕಡೆಯಿಂದಲೂ ಇನ್ನೊಂದು ಬೀದಿಯು ಬರುತ್ತಿದೆ. ನೀವೂ ನಿಮ್ಮ ಹಿಂದಿನ ಜನ್ಮಗಳಿಂದ ಆ ರಸ್ತೆಯಲ್ಲಿ ಬಂದಿದ್ದೀರಿ; ನಾನು ಈ ರಸ್ತೆಯಿಂದ ಬರುತ್ತಿದ್ದೇನೆ. ಈ ಜನ್ಮದಲ್ಲಿ ನಾವು ಈ ಎರಡು ರಸ್ತೆಗಳೂ ಸಂಧಿಸುವ ಕತ್ತರಿಯಲ್ಲಿ ಸೇರಿದ್ದೇವೆ. ಈಗ ನಾನು ನನ್ನ ದಾರಿಯಲ್ಲಿ ಹೋಗಬೇಕು; ನೀವು ನಿಮ್ಮ ದಾರಿಯಲ್ಲಿ ಮುಂದುವರಿಯಬೇಕು" ಎಂದು ಹೇಳಿದನು.

ಈ ಬಂಧಗಳೂ ಸಂಬಂಧಗಳೂ ಎಲ್ಲಿವೆ? ನಿಮಗೆ ಮಕ್ಕಳಿದ್ದಾರೆಂದು ಹೇಳುತ್ತೀರಿ. ಈ ದೇಶದ ನಾಗರಿಕತೆಯಲ್ಲಿ ಅಸಭ್ಯವೆಂದು ತಿಳಿದಿರುವದನ್ನು ನಾನೇನಾದರೂ ಹೇಳಿದರೆ, ನೀವು ದಯವಿಟ್ಟು ಕ್ಷಮಿಸಬೇಕು. ಈ ಮಕ್ಕಳು ನಿಮ್ಮವರೆಂದು ಹೇಳುತ್ತೀರಿ. ಈ ಮಗನು ನನ್ನ ಮಾಂಸದ ಮಾಂಸವೆಂದೂ ನನ್ನ ರಕ್ತದ ರಕ್ತವೆಂದೂ ನನ್ನ ಮೂಳೆಯ ಮೂಳೆಯೆಂದೂ ಹೇಳುತ್ತೀರಿ. ಮುದ್ದು ಮಗನೆಂದು ಅಪ್ಪಿಕೊಳ್ಳುತ್ತೀರಿ; ಹತ್ತಿರವೇ ಇಟ್ಟುಕೊಳ್ಳುತ್ತೀರಿ. ಆದರೆ ಇದರಲ್ಲಿರುವ ತತ್ತ್ವವನ್ನು ದಯವಿಟ್ಟು ವಿಚಾರಮಾಡಿ. ನಿಮ್ಮ ಮತ್ತು ನಿಮ್ಮ ಮಗನ ಸಂಬಂಧವನ್ನು ಶಾಶ್ವತಗೊಳಿಸಬೇಕೆಂದು ಬಯಸುತ್ತೀರಿ. ನಿಮ್ಮ ಶರೀರದಿಂದ

ನಿಮ್ಮ ಮಗನು ಹುಟ್ಟಿರುವನೆಂಬ ಕಾರಣದಿಂದ ಆ ಸಂಬಂಧವನ್ನು ನಿರಂತರಗೊಳಿಸ ಬೇಕೆಂದು ನೀವು ವಾದಿಸುವದಾದರೆ, ನಿಮ್ಮ ಶರೀರದಲ್ಲಿಯೇ ಹುಟ್ಟಿರುವ ಹೇನು–ಚೀರುಗಳ ಗತಿಯೇನು? ಅವುಗಳೂ ನಿಮ್ಮ ಬೆವರಿನಿಂದ ಹುಟ್ಟಿದ ಮಕ್ಕಳಲ್ಲವೆ? ಅವೂ ನಿಮ್ಮ ರಕ್ತದ ರಕ್ತವಲ್ಲವೆ? ಅವುಗಳಲ್ಲಿರುವ ರಕ್ತವು ನಿಮ್ಮಿಂದ ಹೀರಿದ ರಕ್ತವಲ್ಲವೆ? ಅವುಗಳಲ್ಲಿರುವ ಜೀವವು ನಿಮ್ಮ ಜೀವವೇ ಅಲ್ಲವೆ? ಸ್ವಲ್ಪ ಹೇಳಿ. ಆ ಒಂದು ಬಗೆಯ ಮಕ್ಕಳನ್ನು ಮುದ್ದಿಸಿ, ನಿಮ್ಮ ಪ್ರೇಮವನ್ನೆಲ್ಲಾ ಸುರಿದು ಪೋಷಿಸುತ್ತಿರುವಾಗ ಈ ಬಗೆಯ (ಹೇನು–ಕೂರೆಗಳು) ಮಕ್ಕಳನ್ನು ಕೊಲ್ಲುವದು ಎಷ್ಟು ಅವಿವೇಕ? ಎಷ್ಟು ಅನ್ಯಾಯ? ನಿಮ್ಮ ತರ್ಕವನ್ನೂ ನ್ಯಾಯವನ್ನೂ ವಿಚಾರಮಾಡಿ. ಹೀಗೆ ಹೇಳಿದ್ದರಿಂದ, ನೀವು ನಿಮ್ಮ ಮಕ್ಕಳ ವಿಷಯದಲ್ಲಿ ಕ್ರೂರವಾಗಿರಬೇಕೆಂದೂ ಅವರ ಯೋಗಕ್ಷೇಮವನ್ನು ವಹಿಸಬಾರದೆಂದೂ ಅರ್ಥವಲ್ಲ. ರಾಮನು ಹಾಗೆ ಹೇಳುವನೆಂದು ತಿಳಿಯಬೇಡಿ. ಇಡಿಯ ಜಗತ್ತನ್ನೇ ನಿಮ್ಮ ಸ್ವರೂಪವಾಗಿ ಕಾಣ ಬೇಕೆಂದು ರಾಮನು ಹೇಳುವಾಗ ನಿಮ್ಮ ಮಕ್ಕಳನ್ನು ಬಿಡಬೇಕೆಂದು ಹೇಳುತ್ತಾನೆಯೇ? ಇಡಿಯ ಜಗತ್ತಿನಲ್ಲಿ ನಿಮ್ಮ ಮಕ್ಕಳು ಸೇರುವದಿಲ್ಲವೆ? ರಾಮನ ಮಾತನ್ನು ಅಪಾರ್ಥ ಮಾಡಿಕೊಳ್ಳಬೇಡಿ. ರಾಮನು ಹೇಳುವದಿಷ್ಟೆ: "ನಿಮ್ಮ ಕುಟುಂಬ ಸಂಬಂಧಗಳು ನಿಮ್ಮ ಅಭ್ಯುದಯವನ್ನು ಹಿಮ್ಮೆಟ್ಟಿಸುವದಕ್ಕೆ ಅವಕಾಶ ಕೊಡಬೇಡಿ; ಅವು ನಿಮ್ಮ ಆಧ್ಯಾತ್ಮ ಮಾರ್ಗದಲ್ಲಿ ಎಡರು ತೊಡರಾಗದಿರಲಿ. ಪರಮಾರ್ಥಪಥದಲ್ಲಿ ಮುಂದು ವರಿಯುವದಕ್ಕೆ ಕುಟುಂಬ ಸಂಬಂಧಗಳು ನಿಮಗೆ ಅಡ್ಡಿಯಾಗದಿರಲಿ.

ಈ ದೇಹವು, ರಾಮನೆಂದು ಕರೆಯುವ ನಿಮ್ಮ ಆತ್ಮನೇ ಸಂನ್ಯಾಸವನ್ನು ತೆಗೆದು ಕೊಂಡು, ಕೌಟುಂಬಿಕ ಸಂಬಂಧಗಳನ್ನು ಬಿಟ್ಟು, ಪ್ರಾಪಂಚಿಕ ಸ್ಥಾನಮಾನಗಳನ್ನೂ ತ್ಯಜಿಸಿದಾಗ, ಕೆಲವು ಜನರು ರಾಮನಲ್ಲಿಗೆ ಬಂದು "ಸ್ವಾಮಿ! ನಿಮ್ಮ ಹೆಂಡತಿ, ಮಕ್ಕಳು, ಬಂಧುಗಳು, ಮತ್ತು ವಿದ್ಯಾರ್ಥಿಗಳು—ಇವರು—ನಿಮ್ಮಿಂದ ಸಹಾಯ ಪಡೆಯುವ ಅವರ ಹಕ್ಕನ್ನು ಏಕೆ ನಿರ್ಲಕ್ಷಿಸಿದ್ದೀರಿ?" ಎಂದು ಕೇಳಿದರು. ಅದಕ್ಕೆ ರಾಮನು ಅವರಲ್ಲಿದ್ದ ತನ್ನ ಸಹೋದ್ಯೋಗಿಗಳಾದ ಪ್ರೊಫೆಸರರನ್ನು ಕುರಿತು "ನೀವು ಪ್ರೊಫೆಸರ್, ಕಾಲೇಜಿನಲ್ಲಿ ತತ್ತ್ವಶಾಸ್ತ್ರದ ವಿಷಯದಲ್ಲಿ ಉಪನ್ಯಾಸಮಾಡುತ್ತೀರಿ. ನಿಮ್ಮ ಹೆಂಡತಿ ಮಕ್ಕಳಿಗೆ ನಿಮಗಿರುವಷ್ಟು ವಿದ್ವತ್ತು ಇದೆಯೆ? ನಿಮ್ಮ ಚಿಕ್ಕಮ್ಮ ದೊಡ್ಡಮ್ಮಂದಿರಿಗೂ ಅಜ್ಜಿಗೂ ಸಹೋದರರಿಗೂ ನಿಮ್ಮಷ್ಟು ಪಾಂಡಿತ್ಯವಿದೆಯೆ? ಇಲ್ಲವಾದರೆ, ಅವರಿಗೆ ಉಪನ್ಯಾಸಮಾಡಿ ವಿದ್ಯಾವಂತರನ್ನು ಮಾಡದೆ ಈ ವಿಶ್ವವಿದ್ಯಾ ನಿಲಯಕ್ಕೆ ಏಕೆ ಬರುತ್ತೀರಿ? ನಿಮ್ಮ ಹೆಂಡತಿ ಮಕ್ಕಳಿಗೂ ಅಜ್ಜಿಗೂ ಸಹೋದರರಿಗೂ ಸೇವಕರಿಗೂ ಏಕೆ ಉಪನ್ಯಾಸಮಾಡುವದಿಲ್ಲ?" ಎಂದು ಕೇಳಿದನು. ತನ್ನ ಉಪ ನ್ಯಾಸಗಳು ಅವರಿಗೆ ಅರ್ಥವಾಗುವದಿಲ್ಲವೆಂದು ಆ ಪ್ರೊಫೆಸರ್ ಹೇಳಿದರು. ಅದಕ್ಕೆ ರಾಮನು ಹೇಳಿದ್ದೇನೆಂದರೆ,

"ನೋಡಿ; ಈ ಸಂಬಂಧಿಗಳೆಲ್ಲಾ—ಈ ಹೆಂಡತಿ, ಈ ಮಕ್ಕಳು, ಅಜ್ಜಿ ಇವರೆಲ್ಲಾ ನಿಮ್ಮ ನಿಜವಾದ ನೆಂಟರೂ ನೆರೆಯವರೂ ಅಲ್ಲ. ನಿಮ್ಮ ನಾಯಿಯು ನಿಮ್ಮನ್ನು ಒಂದು ನಿಮಿಷವೂ ಬಿಡದಂತೆ ಹಗಲಿರುಳೂ ಜೊತೆಯಲ್ಲಿರಬಹುದು; ಅಜ್ಞರ ದೃಷ್ಟಿಯಿಂದ ಅದು ನಿಮ್ಮ ನಿರಂತರ ಸಂಗಾತಿಯೂ ಇರಬಹುದು. ಆದರೂ ಆ ನಾಯಿಯೂ ಸೇವಕನೂ ಅಜ್ಜಿ ಮೊದಲಾದವರೂ ನಿಮ್ಮ ನಿಜವಾದ ನೆಂಟರೂ ನೆರೆಯವರೂ ಆಗಬಲ್ಲರೆ? ನೀವು ಯಾರು? ನೀವು ದೇಹವಲ್ಲ; ನಿಜವಾದ ಆತ್ಮವೇ ನೀವು; ನೀವು ಯುರೋಪಿಯನ್ ತತ್ತ್ವಶಾಸ್ತ್ರಜ್ಞ [Philosopher] ರಾಗಿರುವದರಿಂದ ನೀವೇ ಆತ್ಮನೆಂಬದನ್ನು ಒಪ್ಪುವದಿಲ್ಲ. ನೀವು ಮನಸ್ಸಾಗಿದ್ದೀರಿ. ನಿಮ್ಮ ಮನಸ್ಸು ಯಾವ ಅತ್ಯುಚ್ಚ ಸ್ಥಾನದಲ್ಲಿ ಜೀವಿಸುವದೋ ಅಲ್ಲಿಯೇ ಯಾವಾಗಲೂ ನಿಮ್ಮೊಡನೆ ಯಾರು ಇರುವರೋ ಅವರೇ ನಿಮ್ಮ ನೆಂಟರು, ನೆರೆಯವರು. ನೀವು ಓದುತ್ತಿರುವ ವಿಷಯವನ್ನೇ ಓದುತ್ತಾ ಅದನ್ನೇ ಚಿಂತನಮಾಡುತ್ತಾ ತಮ್ಮ ದಿವಾನ ಖಾನೆಯಲ್ಲಿ ಅದೇ ಗ್ರಂಥಗಳನ್ನು ಓದುತ್ತಾ ಇರುವ ಬಿ. ಎ., ಎಂ. ಎ., ವಿದ್ಯಾರ್ಥಿಗಳೇ ನಿಮ್ಮ ನೆಂಟರು, ನೆರೆಯವರು. ನೀವು ಕೋಣೆಯಲ್ಲಿ ಕುಳಿತು ಓದುತ್ತಿರುವಾಗ ನೀವು ಕೋಣೆಯಲ್ಲಿದ್ದೀರೆಂದು ಜನರು ಹೇಳುತ್ತಾರೆ. ನೀವು ಆಗ ಕೋಣೆಯಲ್ಲಿರುತ್ತೀರೋ ನಿಮ್ಮ ಭಾವನೆಗಳಲ್ಲಿಯೂ ವಿಚಾರಗಳಲ್ಲಿಯೂ ಇರುತ್ತೀರೋ—ನಿಜವಾಗಿ ಹೇಳಿ. ಓದುವ ಕೋಣೆಯಲ್ಲಿ ನೀವು ಓದುತ್ತಿರುವಾಗ ನಾಯಿಯು ನಿಮ್ಮ ತೊಡೆಯ ಮೇಲೆ ಕುಳಿತಿದ್ದರೂ ನಿಮ್ಮ ಮಕ್ಕಳು ಒಳಗೆ ಬಂದು ಚೇಷ್ಟೆ ಮಾಡಿದರೂ ನಿಮ್ಮ ಲಕ್ಷ್ಯಕ್ಕೇ ಬರುವದಿಲ್ಲ. ನೀವು ಆಗ ತತ್ತ್ವವಿಚಾರದ ಭೂಮಿಕೆಯಲ್ಲಿರುತ್ತೀರಿ; ತಮ್ಮ ತಮ್ಮ ಮನೆಗಳಲ್ಲಿ ಅದೇ ವಿಷಯವನ್ನೇ ಓದುತ್ತಾ ವಿಚಾರಮಾಡುತ್ತಾ ಇರುವ ವಿದ್ಯಾರ್ಥಿಗಳೇ ನಿಮ್ಮ ಸಮೀಪದವರು. ಆದ್ದರಿಂದ ನಿಮ್ಮ ದೊಡ್ಡಮ್ಮಗೂ ಅಜ್ಜಿಗೂ ನಾಯಿಗೂ ಸೇವಕನಿಗೂ ಸಹಾಯ ಮಾಡುವದಕ್ಕಿಂತಲೂ ಹೆಚ್ಚಾಗಿ ನಿಮ್ಮ ನಿಜವಾದ ಸಹವಾಸಿಗಳಾದ ಆ ವಿದ್ಯಾರ್ಥಿಗಳಿಗೆ ಸಹಾಯಮಾಡಬಹುದು. ನಿಮ್ಮ ಮನೋಭಾವಕ್ಕೆ ಸಮೀಪವಾಗಿಯೂ ಅದೇ ಭೂಮಿಕೆಯ ಮೇಲೂ ಜೀವಿಸುವವರೇ ನಿಮ್ಮ ನೆರೆಯವರು. ಆದರೆ ಒಂದೇ ಮನೆಯಲ್ಲಿ ಜೀವಿಸುವವರು ನಿಮ್ಮ ಸಂಗಡಿಗರಲ್ಲ. ಏಕೆಂದರೆ ಇಲಿಗಳೂ ನೊಣಗಳೂ ನಾಯಿಗಳೂ ಬೆಕ್ಕುಗಳೂ ನಿಮ್ಮ ಮನೆಯಲ್ಲಿ ನಿಮ್ಮ ಜೊತೆಗೇ ವಾಸಮಾಡುತ್ತವೆ.

ಮುಂದಿನ ಜನ್ಮದಲ್ಲಿ ನೀವು ಅಜ್ಞರಾದ ಈ ಅಜ್ಜಿ ಮತ್ತು ದೊಡ್ಡಮ್ಮ ಮೊದಲಾದವರ ಮನೆಯಲ್ಲಿ ಹುಟ್ಟುವದಿಲ್ಲ. ನಿಮ್ಮ ಭಾವನೆಗಳೂ ವಿಚಾರಗಳೂ ಇರತಕ್ಕವರ ಹಿತವಾದ ಸನ್ನಿವೇಶದಲ್ಲಿಯೇ ಹುಟ್ಟುತ್ತೀರಿ. ಮುಂದಿನ ಜನ್ಮದಲ್ಲಿ ನಿಮ್ಮ ಮನೋಭಾವಕ್ಕೆ ಅತ್ಯಂತ ಸಮೀಪ ಮನೋಭಾವವುಳ್ಳವರ ಮನೆಯಲ್ಲಿಯೇ ಹುಟ್ಟುತ್ತೀರಿ. ಹೀಗೆ ನೀವು ಯಾವಾಗಲೂ ಕೌಟುಂಬಿಕ ಸಂಬಂಧಗಳನ್ನು ಬದಲಾಯಿಸುತ್ತಲೇ

ಇರುತ್ತೀರಿ. ಪ್ರೇಮವೆಂದರೆ ಏನು? ನಿಮ್ಮ ಪ್ರೀತಿಗೆ ಪಾತ್ರರಾದವರಂತೆಯೇ ನೀವೂ ಭಾವಿಸುವದೇ ಪ್ರೇಮವು. ಬೇರೇನೂ ಅಲ್ಲ. ನೀವು ಪ್ರೀತಿಸುವ ಮನುಷ್ಯನ ಸುಖ ದುಃಖಗಳು ನಿಮ್ಮವೇ ಆಗುತ್ತವೆ. ಯಾವ ವಿಷಯಗಳು ನಿಮಗೆ ನೋವನ್ನುಂಟು ಮಾಡುತ್ತವೆಯೋ ಅವೇ ವಿಷಯಗಳು ಅವನಿಗೂ ನೋವನ್ನುಂಟು ಮಾಡುತ್ತವೆ. ನಿಮಗೆ ಸಂತೋಷವನ್ನು ಉಂಟುಮಾಡುವ ವಿಷಯಗಳೇ ಅವನಿಗೂ ಸಂತೋಷ ವನ್ನು ಉಂಟುಮಾಡುತ್ತವೆ. ಅದೇ ಪ್ರೇಮ. ಅವನನ್ನು ನೀವು ಪ್ರೀತಿಸುತ್ತೀರಿ. ಒಬ್ಬ ಮನುಷ್ಯನನ್ನು ನೀವು ಪ್ರೀತಿಸುವದು ಅವನಿಗಾಗಿ ಅಲ್ಲ; ಅವನಲ್ಲಿ ನಿಮ್ಮನ್ನೇ ನೀವು ಪ್ರೀತಿಸುತ್ತೀರಿ. ಬೇರೆ ಅಲ್ಲ. ನಿಮ್ಮನ್ನು ನೀವು ಪ್ರೀತಿಸಬಲ್ಲಿರೇ ಹೊರತು ಬೇರಲ್ಲ. ಉದಾಹರಣೆಗಾಗಿ, ರಾಮ, ಸೋಮ, ಭೀಮ ಎಂಬ ಮೂರು ಜನರಿದ್ದಾರೆ. ರಾಮನಿಗೆ ಸೋಮನಲ್ಲಿರುವದಕ್ಕಿಂತಲೂ ಹೆಚ್ಚು ಗುಣ ಸ್ವಭಾವಗಳ ಸಾಮ್ಯವು ಭೀಮನಲ್ಲಿದ್ದರೆ, ರಾಮನು ಸೋಮನಿಗಿಂತಲೂ ಹೆಚ್ಚಾಗಿ ಭೀಮನಲ್ಲಿಗೇ ಆಕರ್ಷಿತನಾಗುತ್ತಾನೆ.

ಹೀಗೆ ನಿಮ್ಮ ಕುಟುಂಬ ಸಂಬಂಧಗಳು ಪುನಃ ಪುನಃ ಒಡೆದೊಡೆದು ಕೂಡಿ ಕೊಳ್ಳುತ್ತವೆ. ಹೀಗೆ ಪ್ರೇಮವೆಂದರೆ, ಬೇರೊಬ್ಬ ಮನುಷ್ಯನಲ್ಲಿ ನಿಮ್ಮ ಕೆಲವು ಭಾವನೆ ಗಳನ್ನೂ ವಿಚಾರಗಳನ್ನೂ ಗುಣಶೀಲಗಳನ್ನೂ ಕಂಡುಕೊಳ್ಳುವದೇ ಆಗಿದೆ. ನಿಮ್ಮ ನಿಮ್ಮ ಪೂರ್ಣವಾದ ಪ್ರತಿರೂಪವೇ ಇರುವ ಮನುಷ್ಯನಲ್ಲಿ ನೀವು ಪೂರ್ಣವಾಗಿ ಪ್ರೇಮಮಾಡುತ್ತೀರಿ.

ಈ ವಿಚಾರವು ನಮ್ಮನ್ನು ಈ ದಿನ ರಾತ್ರಿ ರಾಮನು ತೆಗೆದುಕೊಳ್ಳದಿರುವ ಇನ್ನೊಂದು ವಿಷಯಕ್ಕೆ ತರುತ್ತದೆ. ಅದೊಂದು ಬಹಳ ಮುಖ್ಯ ವಿಷಯ. ನಿರ್ಭ ಯತೆಯೇ ಆ ವಿಷಯ. ಭಯವು ಹೇಗೆ ಉತ್ಪತ್ತಿಯಾಗುತ್ತದೆ? ಭಯಕ್ಕೆ ಕಾರಣ ವೇನು? ನಿಮ್ಮ ಬಂಧುತ್ವವನ್ನೂ ಸಂಬಂಧವನ್ನೂ ಎಂದೆಂದಿಗೂ ಒಂದೇ ರೀತಿಯಿರು ವಂತೆ ಮುಂದುವರಿಸಬೇಕೆಂಬ ಬಯಕೆಯೇ—ಆಸಕ್ತಿಯೇ—ಎಲ್ಲಾ ಭಯಕ್ಕೂ ಮೂಲವಾಗಿದೆಯೆಂದು ತೋರಿಸಬೇಕಾಗಿದೆ. ಹೆದರಬೇಡಿ, ಹೆದರಬೇಡಿ ಎಂದು ಜನರು ಹೇಳುತ್ತಾರೆ. ಇದೆಷ್ಟು ಅಸಂಬದ್ಧವಾದುದು! ಭಯವು ನಿಮ್ಮ ವಶ ದಲ್ಲಿದೆಯೆಂದೂ ನಿಮ್ಮ ಮೇಲೆ ಇಲ್ಲವೆಂದೂ ಅವರ ಭಾವನೆ. ಭಯಕ್ಕೆ ರಾಮನು ಪರಿಹಾರವನ್ನು ಹೇಳುತ್ತಾನೆ. ಆದರೆ ಈಗ ಆ ವಿಷಯವನ್ನು ಬಿಟ್ಟು, ,ರಾಮನು ಅದನ್ನು ಬೇರೊಂದು ಸಮಯದಲ್ಲಿ ತೆಗೆದುಕೊಳ್ಳುತ್ತಾನೆ.

ಒಂದು ಉಪನಿಷತ್ತಿನ ಅನುವಾದವಾಗಿರುವ ಒಂದು ಪದ್ಯವನ್ನು ಈಗ ವಾಚನ ಮಾಡಿ ಮುಗಿಸುತ್ತಾನೆ. ಹಿಂದೂಸ್ಥಾನದ ಒಂದು ಶಬ್ದವನ್ನಾದರೂ ನೀವು ಕಲಿಯ ಬೇಕೆಂದು ರಾಮನು ಇಚ್ಛಿಸುತ್ತಾನೆ. ಈ ಅನುವಾದವು ಅಷ್ಟು ಸರಿಯಾಗಿಲ್ಲ, ಚೆನ್ನಾ ಗಿಲ್ಲ, ಆದರೂ ಕೆಲವು ಮಟ್ಟಿಗೆ ಅರ್ಥವಾಗಬಹುದು.

ಸಕಲ ಲೋಕಗಳ ಇರುವಿಕೆಗೆ ಆತ್ಮನೇ ಆಧಾರ,
ಅದರಿಂದ ಸಕಲಕ್ಕೂ ಶ್ರೇಷ್ಠತರನ ಸ್ಪರ್ಶ ಆತ್ಮ ಸಿಪರ್ಕಾರ,
ಪರಮಾಣುಗಳಿಗಿಂತಲೂ ಅತ್ಯಂತ ಸೂಕ್ಷ್ಮ ಪರಮಾಣು,
ಅಪರಿಮಿತ ಆದಿ ಮೂಲನು ಆತ್ಮ, ಅತ್ಯಂತ ಅಂತಿಮಕು ಅಂತಿಮನು.
ಸರ್ವಜೀವರ ಹೃದಯಗಳಲಿ ಇಹನು.
ಸ್ಥಿರವಾಗಿಹನು, ಸರ್ವವ್ಯಾಪಕನು ! ನಿದ್ರಿಸಿಹನು,
ಅನಿದ್ರಿತನು, ಲೋಕದಲಿ ಸಂಚರಿಸಿಹನು;
ಅತ್ಯಂತ ದಿವ್ಯ ಚೇತನವ ಕಾಂಬುದೆಂತು ?
ಸಂತೋಷವನು ಮೀರಿಹ ಹರ್ಷ, ಜೀವಕ್ಕು ಹೊರಗೆ ಇಹುದು.
ಶರೀರರಹಿತವಾದದನು ಕಾಣುತಲೆ ಶರೀರಗಳಲಿ.
ಅಸ್ಥಿರವಾದವುಗಳಲೆ ಸ್ಥಿರವಾದುದನು
ಸಕಲ ವಸ್ತುಗಳನಾಲಿಂಗಿಸಿಯು ಸಕಲ ಮಧ್ಯದಲ್ಲಿಹುದು,
ಜ್ಞಾನೋದಯವಾದ ಮನವು ಶೋಕವನು ನೀಗುತಿಹುದು.

ಓಂ ! ಓಂ ! ಓಂ !

# FORE    ST TALKS

# ಅರಣ್ಯ ಭಾಷಣಗಳು

ಮಹತ್ತಾದ ಆಲೋಚನೆಗಳೂ ವಿಚಾರಗಳೂ ಜಗತ್ತಿನಲ್ಲಿ ಒಮ್ಮೆ ಉದಯವಾಗಿ ರೂಪಿತವಾದ ಮೇಲೆ, ಅವುಗಳನ್ನು ತಪ್ಪಾಗಿ ನಿರೂಪಿಸಬಹುದು, ಭಂಗಪಡಿಸಬಹುದು, ಅಥವಾ ನಿರರ್ಥಕವನ್ನಾಗಿ ಮಾಡಲೂ ಬಹುದು; ಕೆಲವು ಕಾಲ ಓನ್ನೆಲೆಗೆ ಸರಿಯುವಂತೆಯೂ ಮಾಡಬಹುದು; ಆದರೆ ಅವು ನಾಶವಾಗ ಬಾರದೆಂದು ನಿಯತವಾಗಿವೆ. ಪೂರ್ಣಕಾಲದಲ್ಲಿ, ಮಾನವ ವಿಚಾರದ ಉತ್ಕರ್ಷವೂ ನೈತಿಕ ವಿಕಾಸವೂ ಒಂದು ಘಟ್ಟವನ್ನು ಮುಟ್ಟಿ, ಸಮಾಜ ಜೀವನದಲ್ಲಿ ಅವುಗಳನ್ನು ಅಳವಡಿಸುವದಕ್ಕೆ ಸಾಧ್ಯವಾಗುವ ವರೆಗೆ ಆ ಆಲೋಚನೆಗಳೂ ಭಾವನೆಗಳೂ ವಿಚಾರಗಳೂ ತಮ್ಮದೇ ಆದ ರೀತಿಯಲ್ಲಿ ಜೀವಂತವಾಗಿ ಮುಂದುವರಿಯುತ್ತವೆ.

ಈಗ ಭೂಮಿಯಲ್ಲಿ ನೆಟ್ಟಿರುವ ಸಣ್ಣ ಬೀಜವು ಮೊಳಕೆಯಾಗಿ, ಅನೇಕ ಸಲ ಬಿಸಿಲು ಮಳೆಗಳು ಒಂದಾದ ಮೇಲೆ ಒಂದು ಪುನಃ ಪುನಃ ಬಿದ್ದು, ದೊಡ್ಡ ಗಿಡವಾಗುವ ವರೆಗೆ ಸುಮ್ಮನೆ ಸ್ತಬ್ಧವಾಗಿರಬೇಕು. ಬಹಳ ಕಾಲವಾಗುವದಕ್ಕೆ ಮುಂಚೆ ನೀವೇ ಪುನಃ ಬಂದು ನೋಡಿ! ಅದು, ಯಾವ ಬಿರುಗಾಳಿಯೂ ಅಲ್ಲಾಡಿಸಲಾರದ ಮಹಾವೃಕ್ಷವಾಗಿರುತ್ತದೆ.

ಈ ವಿಚಾರಗಳನ್ನು ಬೇಕಾದರೆ ಕಾರ್ಯಸಾಧ್ಯವಲ್ಲದ ಆದರ್ಶವೆಂದು ಕರೆಯಿರಿ; ಆದರೆ ಅವು ಸತ್ಯ; ಸತ್ಯವನ್ನು ಭೂಮಿಯಲ್ಲಿ ಹಾಕಿ ಬಗ್ಗು ಬಡಿದರೆ, ತುಳಿದೊಟ್ಟಿದರೆ, ಪುನಃ ಅದು ಎದ್ದು ಚಿಮ್ಮುತ್ತದೆ. ದೇವರ ಅನಂತ ವರ್ಷಗಳು ಸತ್ಯಕ್ಕೇ ಮೀಸಲಾದ ಆಯುಷ್ಯವು.

ಇದು ಮಾನವ ಹೃದಯದ ಜ್ವಾಲಾಮುಖಿಯಿಂದ ಹೇರಳವಾಗಿ ಹೊರ ನುಗ್ಗುತ್ತಿರುವ ಅಗ್ನಿಮಯವಾದ ವಿಚಾರ ಪ್ರವಾಹವು.

ಬಹುದೂರದ (ಬಹುಕಾಲದ) ಸಂತಾನಪರಂಪರೆಯನ್ನು ಪೋಷಿಸುವ ಅಮೃತ ಪ್ರವಾಹಗಳುಳ್ಳ, ಗಗನಚುಂಬಿತ ಶಿಖರಗಳ ಬೋಧೋತ್ಸಾಹದ ಉತ್ಪ್ಲವನವೇ ಇದು!

ಓಂ! ಓಂ! ಓಂ!

# Civilization
## ನಾಗರಿಕತೆ

ರಾಮನು ದೇವದಾರು ಪೀತದಾರು ವೃಕ್ಷಗಳ ಕೆಳಗೆ ನೀಳವಾಗಿ ಮೈಚಾಚಿ, ಆರಾಮವಾಗಿ ಮಲಗಿದ್ದಾನೆ. ಅವನು ಮೃದುವಾದ ಮರಳಿನ ಹಾಸಗೆಯ ಮೇಲೆ, ತಂಪಾದ ಕಲ್ಲಿನ ತಲೆದಿಂಬಿಗೆ ಒರಗಿ, ಎತ್ತಿಮಡಿಸಿದ ಎಡ ಮೊಣಕಾಲಿನ ಮೇಲೆ ಬಲದ ಕೆಳಕಾಲನ್ನು ನಿರ್ಲಕ್ಷ್ಯವಾಗಿರಿಸಿ, ತುಂಬಿದ ಹೃದಯದಿಂದ ಶುದ್ಧವಾದ ಹೊಸ ಹೊಸ ಗಾಳಿಯನ್ನು ಹೀರುತ್ತಾ, ಪೂರ್ಣಾನಂದದಿಂದ ದಿವ್ಯವಾದ ಪ್ರಕಾಶವನ್ನು ಮುತ್ತಿಡುತ್ತಾ, ಓಂ ಗಾನಮಾಡುತ್ತಾ, ಪಕ್ಕದಲ್ಲಿ ಜುಳು ಜುಳು ಹರಿಯುತ್ತಿರುವ ಹೊಳೆಯು ವೇಳೆಯನ್ನು ತೋರಿಸುತ್ತಿರುವಾಗ, ಸ್ವಾನಂದದಲ್ಲಿ ಮುಳುಗಿ ಉದಾಸೀನ ನೆಂಬಂತೆ ಮಲಗಿರುವ ರಾಮನನ್ನು ನಾಗರಿಕ ಅಲ್ಪೋದ್ಧತನೊಬ್ಬನು ಅರ್ಧ ಪರಿಹಾಸ ದಿಂದ ಪ್ರಶ್ನೆಮಾಡಿದನು :

"ನಿಮ್ಮ ಏಷ್ಯಾಖಂಡದ ಸೋಮಾರಿತನವನ್ನು ನಮ್ಮ ಅಮೆರಿಕಾ ದೇಶಕ್ಕೆ ಏಕೆ ಆಮದು ಮಾಡುತ್ತೀರಿ? ಹೊರಗೆ ಹೋಗಿ, "ಏನಾದರೂ ಒಳ್ಳೆಯದನ್ನು ಮಾಡಿ".

ರಾಮ: "ನನ್ನ ಪ್ರಿಯ ಆತ್ಮ! ಒಳ್ಳೆಯ ಕಾರ್ಯವನ್ನು ಮಾಡಬೇಕೆಂದು ಹೇಳಿದೆ. ಆ ಉದ್ಯೋಗರಂಗದಲ್ಲಿ ಉಸಿರು ಕಟ್ಟುವಷ್ಟು ಜನರು ಮಿತಿಮೀರಿ ತುಂಬಿಲ್ಲವೆ? ನನ್ನಷ್ಟಕ್ಕೇ ನನ್ನನ್ನು ಬಿಡಿ; ನನ್ನನ್ನೂ ನನ್ನ ರಾಮನನ್ನೂ ಬಿಟ್ಟುಬಿಡಿ.

ಸೋಮಾರಿತನವೆಂದು ಹೇಳಿದೆಯ ? ಪೌರ್ವಾತ್ಯ ಮೈಗಳ್ಳತನ ? ಏಕೆ? ಸೋಮಾರಿತನವೆಂದರೇನು ?

"ಸಂಪ್ರದಾಯ ಶರಣತೆಯ ಕೆಸರು ಗುಂಡಿಯಲ್ಲಿ ಬಿದ್ದು ಒದ್ದಾಡುತ್ತಾ, ಪದ್ಧತಿಯ ಮತ್ತು ನೀಟುಗಾರಿಕೆಯ ಪ್ರವಾಹದಲ್ಲಿ ಕೊಚ್ಚಿ ಹೋಗಲು ಅವಕಾಶ ಕೊಟ್ಟು, ದೃಶ್ಯಜಾಲದ ಬಾವಿಯಲ್ಲಿ ಸತ್ತ ಭಾರದಂತೆ ಮುಳುಗಿ, ಆಸ್ತಿಪಾಸ್ತಿಗಳ ಹೊಂಡದಲ್ಲಿ ಸಿಕ್ಕಿ ಬಿದ್ದು, ದೇವರ ಚಿಂತನೆಯಲ್ಲಿ ಕಳೆಯಬೇಕಾದ ಕಾಲವನ್ನು ಬಂಗಾರವನ್ನು ಸಂಪಾದಿಸುವದರಲ್ಲಿ ಕಳೆಯುತ್ತಾ ಅದನ್ನು ಪರೋಪಕಾರ ವೆಂದು ಕರೆದುಕೊಳ್ಳುತ್ತೀಯ? ವಾಸ್ತವವಾಗಿ ಬೇರೆಯವರಂತೆ ನೀವು ಜೀವಿಸುತ್ತಾ ಊಟದಲ್ಲಿಯೂ ಉಡಿಗೆಯಲ್ಲಿಯೂ ನಡಿಗೆಯಲ್ಲಿಯೂ ನಿದ್ರೆಯಲ್ಲಿಯೂ ನಗುವಿನಲ್ಲಿಯೂ ಅಳುವಿನಲ್ಲಿಯೂ—ಮಾತಿನ ವಿಚಾರ ಹಾಗಿರಲಿ—ಸ್ವಲ್ಪವೂ ಸ್ವಾತಂತ್ರ್ಯವಿಲ್ಲದಿರುವುದು ಸೋಮಾರಿತನವಲ್ಲವೆ? ನಿಮ್ಮ ದೇವತ್ವವನ್ನೇ ಮರೆತಿರುವುದು ಮೈಗಳ್ಳತನವಲ್ಲವೆ? ಈ ಧಾವಂತವೂ ಚಿಂತಾತಂಕವೂ ಗೋಣುಮುರಿಯುವ

ಅಪಾಯಕರವಾದ ಸುಡು ಸುಡು ಆತರವೂ ಉದ್ವೇಗದ ನುಗ್ಗಾಟ-ಜಗ್ಗಾಟಗಳೂ ಏತಕ್ಕಾಗಿ? ಇತರರಂತೆ ಡಾಲರ್ ಸಾರ್ವಭೌಮನನ್ನು ಸಂಗ್ರಹಿಸುವದಕ್ಕೋ ಏತಕ್ಕಾಗಿ? ಇತರರಂತೆ ಭೋಗಿಸುವುದಕ್ಕೊ? ಎಚ್ಚರ! ಭೋಗದ ಬೆನ್ನು ಹತ್ತಿ ಓಡುವುದರಲ್ಲಿ ಸುಖಭೋಗವಿಲ್ಲ. ಇನ್ನೊಬ್ಬರ ಅಭಿಪ್ರಾಯಗಳಿಂದ ಮೋಸಹೋಗುವ ಪೆದ್ದಣ್ಣಗಳಿರಾ! ನಿಮ್ಮ ನಿಜವಾದ ಸುಖಭೋಗವನ್ನು ಏಕೆ ಮುಂದೂಡುತ್ತೀರಿ? ಇಲ್ಲಿ ಈ ಪ್ರಕೃತಿಯ ಉದ್ಯಾನದಲ್ಲಿ, ಮನೋಹರವಾದ ಈ ಪರ್ವತಪ್ರವಾಹದ ತೀರದಲ್ಲಿ ಕುಳಿತು, ಸ್ವಚ್ಛಂದವಾದ ಗಾಳಿ, ಬೆಳ್ಳಿಯ ಬೆಳಕು, ಚೆಲ್ಲಾಟದ ನೀರು, ಹಚ್ಚ ಹುಲ್ಲಿನಿಂದ ಹಸುರಾದ ಭೂಮಿ—ನಿಮ್ಮ ರಕ್ತವು ನಿಜವಾಗಿಯೂ ಈ ಯಾವ ವಸ್ತುಗಳಿಂದ ನಿರ್ಮಾಣವಾಗಿದೆಯೋ ಆ ನಿಮ್ಮ ನಿಜವಾದ ರಕ್ತ ಸಂಬಂಧಿಗಳ ಸಹವಾಸ ಸುಖವನ್ನು ಏಕೆ ಅನುಭವಿಸುವದಿಲ್ಲ? ನಾಗರಿಕ ರಾಷ್ಟ್ರಗಳೆಲ್ಲಾ ಜಾತಿಮತಗಳೆಂಬ ಚರ್ಮ ಬಂಧನದಲ್ಲಿ ಸಿಕ್ಕಿಕೊಂಡಿವೆ. ಅವು ಮಿಕ್ಕ ಮಾನವ ಜನಾಂಗದಿಂದ ತಮ್ಮನ್ನು ತಾವು ಬೇರ್ಪಡಿಸಿಕೊಂಡು, ಬಿಡುಬೀಸ್ಲಾಗಿ ತೆರೆದ ಪ್ರಕೃತಿಯಿಂದಲೂ ನೂತನವೂ ಸುಗಂಧಭರಿತವೂ ಸ್ವಾಭಾವಿಕವೂ ಆದ ಜೀವನದಿಂದ ತಮ್ಮನ್ನು ತಾವು ಗಡೀಪಾರು ಮಾಡಿಕೊಂಡು ಮುಚ್ಚಿದ ದಿವಾನಖಾನೆಗಳೊಳಗೆ—ಕತ್ತಲೆಯ ಬಂದೀಖಾನೆಗಳೊಳಗೆ, ಗುಹೆಗಳೊಳಗೆ ಸೇರಿಕೊಳ್ಳುತ್ತವೆ. ನಾಗರಿಕ ದೇಶಗಳು ವಿಶಾಲಜಗತ್ತಿನಿಂದ ತಮ್ಮನ್ನು ತಾವು ದೂರೀಕರಿಸಿಕೊಂಡು, ಸಮಸ್ತ ಸೃಷ್ಟಿಯಿಂದಲೂ ಬಹಿಷ್ಕರಿಸಿಕೊಂಡು, ಸಸ್ಯವರ್ಗ ಪ್ರಾಣಿವರ್ಗಗಳಿಂದಲೂ ಹೊರಬೀಳುತ್ತವೆ. ನಾಗರಿಕ ಜನಾಂಗವು ತಾವೇ ಶ್ರೇಷ್ಠರೆಂಬ ಡಾಂಭಿಕ ರೀತಿಯನ್ನು ಪ್ರತಿಷ್ಠೆಯನ್ನು ಗೌರವಾರ್ಹತೆಯನ್ನೂ ಖ್ಯಾತಿಯನ್ನೂ ತಮಗೆ ತಾವು ದುರಹಂಕಾರದಿಂದ ಹಚ್ಚಿಕೊಂಡು ಇತರರ ಸವಿನಯ ಸಂಬಂಧವನ್ನು ಕತ್ತರಿಸಿಕೊಂಡು ಪ್ರತ್ಯೇಕತೆಯ ಜಡತೆಯಲ್ಲಿ ಬೀಳುತ್ತಾರೆ. ದಯೆ ಇರಲಿ, ನಾಗರಿಕ ಮಿತ್ರರೆ, ನಿಮ್ಮ ಮೇಲೆ ನಿಮಗೆ ಕರುಣೆಯಿರಲಿ.

ವ್ಯವಸ್ಥಿತವಾದ ಚಾತುರ್ಯದ ಮೂಲಕ ಹೆಚ್ಚು ಬಡವರ ಆಸ್ತಿಯಿಂದ ಅಪಹರಿಸಲ್ಪಟ್ಟು ನಿಮ್ಮ ಸ್ವತ್ತುಗಳಿಗೆ ಸೇರಿಸಲ್ಪಟ್ಟ ಐಶ್ವರ್ಯವು, ಹೊಟೇಲುಗಳಿಂದಲೂ ಮದ್ಯದಂಗಡಿಗಳಿಂದಲೂ ಅಸಹ್ಯಕರವಾದ ಭೋಜನಗಳನ್ನು ಭುಜಿಸಿ, ಕಾಂತಿಹೀನವೂ ಅಸ್ವಾಭಾವಿಕವೂ ಆದ ಮುಖಭಾವವನ್ನು ಪಡೆಯುವುದಕ್ಕೆ ನಿಮ್ಮನ್ನು ಶಕ್ತರನ್ನಾಗಿ ಮಾಡಿ, ಕೃತ್ರಿಮತೆಯ ದುರ್ಗಂಧದಿಂದ ಉಸಿರು ಕಟ್ಟಿಸುವ ಕೋಣೆಗಳೆಂಬ ಪೆಟ್ಟಿಗೆಗಳಲ್ಲಿ ನಿಮ್ಮನ್ನು ಸೆರೆ ಹಾಕಿ, ದೈಹಿಕವೂ ಮಾನಸಿಕವೂ ಆದ ಎಲ್ಲಾ ಬಗೆಯ ಸಹಜವಲ್ಲದ ಉತ್ತೇಜನಗಳಿಂದ ಉದ್ವಿಗ್ನವಾದ ಮನಸ್ಸಿನ ಅಸ್ವಸ್ಥತೆಯಲ್ಲಿ ಸರ್ವಕಾಲದಲ್ಲಿಯೂ ನಿಮ್ಮನ್ನು ಎಸೆಯುತ್ತದೆ. ಕೇವಲ ಆತ್ಮವಂಚನೆಗಾಗಿ, ಇಷ್ಟೆಲ್ಲಾ ಗೊಂದಲವೂ ಆಡಂಬರವೂ ಅಟ್ಟಹಾಸವೂ ಏತಕ್ಕಾಗಿ? ಅಂಥಾ ಕಾಲ್ಪನಿಕ ಸುಖಗಳಿಗಾಗಿ ನಿಜಸುಖವನ್ನು ಏಕೆ ತೊರೆಯುತ್ತೀರಿ? ಗುರಿಬಿಟ್ಟೇಕೆ ಬಳಸು ತೊಳಲಾಟ? ಬನ್ನಿ, ಈಗಲೇ ಇಲ್ಲಿಯೇ

ನಿಮ್ಮೊಳಗೇ ಇರುವ ನಿಜಸುಖದ ನಿಧಿಯನ್ನು ನೋಡಿ. ಬನ್ನಿ, ಈ ಹಚ್ಚನೆಯ ಹುಲ್ಲಿನ ಹಾಸಿನ ಮೇಲೆ ನಿಶ್ಚಿಂತೆಯಿಂದ ಮಲಗಿಕೊಳ್ಳಿ.

ನಿಮ್ಮ ಜೀವನವನ್ನು ಭದ್ರಪಡಿಸುವುದಕ್ಕಾಗಿ ಬೆಳ್ಳಿಯ ಅಥವಾ ಬಂಗಾರದ ಅನುಗ್ರಹವನ್ನು ಬಯಸಿ ನಿಮ್ಮ ಶಕ್ತಿಯನ್ನೆಲ್ಲಾ ವ್ಯರ್ಥಮಾಡಬೇಡಿ. ಧನಿಕರಾಗುವದರಿಂದಾಗಲೀ ಸಮಯಕ್ಕೆ ಸರಿಯಾಗಿ ವಿಮೆಯ ಕಂತುಗಳನ್ನು ಕಟ್ಟುವುದರಿಂದಾಗಲೀ ನಿಮ್ಮ ಜೀವನವನ್ನು ನೀವು ಭದ್ರಪಡಿಸಿಕೊಳ್ಳಬಹುದೆ? ಭ್ರಾಂತನಾದ ಅಮೃತಾತ್ಮ! ರುಚಿಕರವಾದ ಕ್ಷುದ್ರವಸ್ತುಗಳಿಗಾಗಿ, ನೂಕುನುಗ್ಗು ದಾಮಾದಣಿಗಳ ಜನಜೀವನದಲ್ಲಿ ಸಮಾಧಾನದ ಬದುಕನ್ನೇಕೆ ಬಯಸುತ್ತೀರಿ?

ಪ್ರಪಂಚದ ಗೀಳು ನಮ್ಮಲ್ಲಿ ಅತಿಯಾಗಿಹುದು; ತಡವಾಗಿಯೋ ಬೇಗಲೋ
ಗಳಿಸುತಲಿ, ಬಳಸುತಲಿ, ಕಳೆಯುತಲಿ, ನಮ್ಮ ಶಕ್ತಿಗಳ ನಿರರ್ಥಕಗೊಳಿಸುವೆವು,
ಪ್ರಕೃತಿಯಲಿ ನಮದಾಗಿಹುದನತ್ಯಲ್ಪವನೆ ಕಾಣುವೆವು;
ನಮ್ಮ ಹೃದಯಗಳ ತೆತ್ತಿಹೆವು,—ಹೀನ ವರವ!
ಚಂದ್ರನಿಗೆ ವಕ್ಷದಲಿ ಉಬ್ಬೇರುತಿಹ ಕಡಲ ರವ,
ಎಲ್ಲ ಕಾಲದಲಿ ಹುಯ್ಯಲಿಡುತಿಹ ಗಾಳಿಗಳು,
ಈಗ ನಿದ್ರಿಸುತ್ತಿಹ ಹೂವುಗಳಂತೆ ಒಟ್ಟಾದ ಪವನಗಳು.
ಇವುಗಳಿಗು, ಎಲ್ಲವುಗಳಿಗು ನಾವು ಶ್ರುತಿಗೂಡಿಲ್ಲ;
ಮಹಾದೇವ! ಯಾವ ಪ್ರಕೃತಿ ಸೌಂದರ್ಯವೂ ನಮ್ಮ ಮನವ ಕಲಕುವದಿಲ್ಲ.
ಅದಕಿಂತ ನಾನು ನಶಿಸಿ ಹೋದ ಮತದಿ ಪೂಜಾರಿಯಾಗಿರುತಿದ್ದೆ.
ನೊಗಸಾದ ಈ ಹುಲ್ಲು ಮೈದಾನದಲಿ ನಿಂತು, ಹತಾಶನಾಗದಂತಿದ್ದೆ
ಮನೋಹರ ಪ್ರಕೃತಿಯ ನಸು ನೋಟಗಳ ಪಡೆಯುವೆನು.
ಸಮುದ್ರದಿಂದುದಯಿಪಾ ಕಾಮರೂಪಿ ದೇವತೆಯ ನೋಡುವೆನು;
ಅಥವಾ ಹಳೆಯ ಸಮುದ್ರೋಪದೇವತೆಯಾದುವಾ ಕುಸುಮಿತ ಕಹಳೆಯನು
ಕೇಳುವೆನು.

[ವರ್ಡ್ಸ್‌ವರ್ತ್].

ಮುಂದುವರಿದ ರಾಷ್ಟ್ರಗಳೆನ್ನಿಸಿಕೊಂಡ ಯೂರೋಪ್ ಅಮೆರಿಕಾ ದೇಶಗಳು ಗರ್ವಭಂಗವಾಗುವ ಘಟ್ಟಗಳಲ್ಲಿ ಮಾತ್ರ ಮುಂದುವರಿದಿವೆ. ಉತ್ಕರ್ಷವನ್ನು ಸಾಧಿಸುವದೆಂದರೆ ಆಧ್ಯಾತ್ಮಿಕ ಅಥವಾ ಬೌದ್ಧಿಕ ಉತ್ಕರ್ಷವು. ನಿಜವಾದ ಅಭ್ಯುದಯವು ನಿಜವಾದ ಮನುಷ್ಯನನ್ನು ಮುಟ್ಟಬೇಕು; ಅವನ ಬರಿ ನೆರಳಿನ ಮೇಲೆ ವ್ಯರ್ಥವಾಗಬಾರದು. ಭೌತಿಕವಾದ ಭೋಗ ಭಾಗ್ಯಗಳಿಗೆ ಅಭ್ಯುದಯವು ಏನೂ ಸಂಬಂಧವಿಲ್ಲ.

ಅನಾವಶ್ಯಕವಾದ ಆವಶ್ಯಕತೆಗಳನ್ನು ಬೆಳೆಸಿಕೊಳ್ಳುವುದಕ್ಕೂ ಅಭ್ಯುದಯವು ಸಂಬಂಧವಿಲ್ಲ. ಪ್ರಾಚೀನ ಆರ್ಯರು ಭವ್ಯವಾದ ಗ್ರಂಥಗಳನ್ನು ಬರೆಯುತ್ತಾ ಕೃತಕವಲ್ಲದ ವಿಮುಕ್ತ ಜೀವನವನ್ನು ನಡೆಸುತ್ತಾ ಈ ಪ್ರಪಂಚದಲ್ಲಿ ಯಾವುದನ್ನೂ ತಮ್ಮ ಸ್ವತ್ತು ಎಂದುಕೊಳ್ಳದ. ಮಿತವಾದ ಪದಾರ್ಥಗಳಿಂದ ಇತಿಹಾಸವು ಪುನಃ ಪುನಃ ಅನುಸರಿಸಬಹುದಾದಂಥ ಒಂದು ಬಗೆಯ ದಿವ್ಯ ಜೀವನವನ್ನು ನಡೆಸಿದರು. ಸದ್ಯಃಕಾಲದ ನಾಗರಿಕತೆಯು ತನ್ನ ಮುಖ್ಯವಾದ ಗುರಿಯಿಂದ ಬೇರೆ ಕವಲು ದಾರಿಯನ್ನು ಹಿಡಿದಿದೆ. ಬೆಲೆಗಳ ಏರಿಳಿಕೆಗಳಿಗೆ ಒಳಪಟ್ಟ ದವಸಧಾನ್ಯಗಳ ವಿಷಯವನ್ನು ಮಾತನಾಡಿದಂತೆ ಮನುಷ್ಯನ ವಿಚಾರವನ್ನೂ ಮಾತನಾಡುತ್ತಿದ್ದೇವೆ. ಇದನ್ನೆಲ್ಲಾ ಮೀರಿ ನಿಲ್ಲಿ. ನಿಮ್ಮ ಮೇಲೆ ಯಾವ ಬೆಲೆಯನ್ನೂ ಹೇರುವುದಕ್ಕೆ ಆಗುವುದಿಲ್ಲ.

ಪ್ರದರ್ಶನ ಪ್ರಿಯರಾದ ಬೂಟಾಟಿಕೆಯ ಭಕ್ತರೆ, ನಿಮಗೆ ಆರ್ಯರ ಆದರ್ಶವಾದ ಸಂನ್ಯಾಸವು. ತ್ಯಾಗವು, ಆಲಸ್ಯಗೇಡಿಗಳ ಕನಸಾಗಿ ಕಾಣುತ್ತದೆ. ದಯವಿಟ್ಟು ಬಹಳ ಹುಷಾರಾಗಿರಿ; ನಿಮ್ಮನ್ನು ಚೆನ್ನಾಗಿ ಅಲ್ಲಾಡಿಸಿ, ಎಚ್ಚರಗೊಳಿಸಿ, ನೀವೆಂಥಾ ಭಯಂಕರ ಸ್ವಪ್ನವನ್ನು ಕಾಣುತ್ತಿದ್ದೀರೆಂಬುದನ್ನು ತಿಳಿಯುವಂತೆ ಮಾಡುವ ಕಾಲವು ಪಕ್ವವಾಗಿದೆ.

**The civilized man without renunciation through love is only a more experienced and wiser savage.**

"ಪ್ರೇಮ ಪೂರ್ವಕವಾದ ತ್ಯಾಗವಿಲ್ಲದ ನಾಗರಿಕ ಮನುಷ್ಯನು ಹೆಚ್ಚು ಅನುಭವಿಯೂ ಜಾಣನೂ ಆದ ಅಸಂಸ್ಕೃತನೂ ಅನಾಗರಿಕನೂ ಆಗಿರುವ ಕಾಡುಮನುಷ್ಯನು ಮಾತ್ರ".

ನಾಗರಿಕ ಪ್ರಪಂಚದ ಬೆಡಗು ಬಿನ್ನಾಣಗಳಿಂದಲೂ ಕೃತಕತೆಯಿಂದಲೂ ಸಂಪ್ರದಾಯ ಶರಣತೆಯಿಂದಲೂ ಹಣದ ಹುಚ್ಚಿನಿಂದಲೂ ವ್ಯಾಮೋಹಿತರಾಗಬೇಡಿ. ಇವುಗಳೆಲ್ಲಾ ನಿರರ್ಥಕವಾದವುಗಳೆಂದು ತೋರಿಸಿಕೊಂಡಿವೆ. ಇವುಗಳನ್ನೆಲ್ಲಾ ಅಗ್ನಿಪರೀಕ್ಷೆಗೆ ಗುರಿಪಡಿಸಿ ಆಗಿದೆ. ಕಟ್ಟಿಗೆ, ಹುಲ್ಲು, ಕೂಳೆಗಳಂತೆ ಇವೆಲ್ಲವೂ ಕೊರತೆಯುಳ್ಳವುಗಳೆಂದು ಸಿದ್ಧವಾಗಿದೆ. ಜನಾಂಗದಲ್ಲಿ ಅರ್ಧಭಾಗದವರು ಹೊಟ್ಟೆಗಿಲ್ಲದೆ ನಾಯುತ್ತಿರುವಾಗ ಉಳಿದ ಅರ್ಧ ಜನರು ಕಣ್ಣಿಗೆ ಹೊಡೆಯುವಂತೆ ಎದ್ದು ಕಾಣುವ ಪೋಲು, ದುಂದು ವೆಚ್ಚ, ಅಪವ್ಯಯಗಳು, ಅನಾವಶ್ಯಕವಾಗಿ ಅತ್ಯಧಿಕವಾದ ಕುರ್ಚಿ, ಮೇಜು ಮೊದಲಾದ ಪೀಠೋಪಕರಣಗಳು, ಸುಗಂಧದ್ರವ್ಯಗಳು, ನಟನೆಗಳು, ಒಲಪು ಒಯ್ಯಾರಗಳು, ಪ್ರಚೋದಿತವಾದ ನಡವಳಿಕೆಗಳು, ಎಲ್ಲಾ ಬಗೆಯ ಅಮೂಲ್ಯ ನಿರರ್ಥಕ ವಸ್ತುಗಳು, ತುಚ್ಛವಾದ ಐಶ್ವರ್ಯಗಳು, ಅಹಿತವಾದ ಆಡಂಬರಗಳು—ಈ ಎಲ್ಲವುಗಳ ಕೆಳಗೆ ಹೂತುಹೋಗಿರುತ್ತಾರೆ.

ಒಂದನ್ನು ಬಲಿಗೊಟ್ಟು ಇನ್ನೊಂದನ್ನು ಸಾಧಿಸಿದ ಹೊರತು ಆರೋಗ್ಯ ಮತ್ತು ಆಯುಷ್ಯದೊಡನೆ ಮಾನಸಿಕಶ್ರಮವಾಗಲೀ ಕೈ ದುಡಿಮೆಯಾಗಲೀ ಹೊಂದಿಕೆಯಾಗದೆ

ಇರುವುದಿಲ್ಲ. ಆದರೆ ಈಗ ವರ್ತಮಾನ ಕಾಲದ ಪ್ರಪಂಚದಲ್ಲಿ ಕೆಲವರು ಕೈಕೆಲಸದಿಂದ ಜೀವಿಸುತ್ತಿದ್ದಾರೆ [ಅಥವಾ ಸಾಯುತ್ತಿದ್ದಾರೆ—ಎನ್ನುವುದು ಹೆಚ್ಚು ಸರಿಯಾಗಬಹುದು]; ಇತರರು ಬೌದ್ಧಿಕ [ಶ್ರಮದ] ದುಷ್ಕರವಾದ ಭೋಗವಿಲಾಸದಿಂದ ನಾಶವಾಗುತ್ತಿದ್ದಾರೆ. ಇದು ಹೇಗಿದೆಯೆಂದರೆ, ಒಂದು ಕುಟುಂಬದ ಕೆಲವು ಜನರಲ್ಲಿ ಒಣಕಲು ರೊಟ್ಟಿಯನ್ನು ಹಂಚಿ, ಮಿಕ್ಕ ಜನರಲ್ಲಿ ಬರೀ ಚೆಕ್ಕೆಯನ್ನು ಹಂಚಿದಂತೆ ಆಗಿದೆ.

ಯಾರು ಏನನ್ನಾದರೂ ತಮ್ಮ ಆಸ್ತಿಯೆಂದು ಹೊಂದಿದ್ದಾರೋ ಅವರೇ ವಿಶ್ವದ ಸ್ವಯಂ ತಿರಸ್ಕೃತ ದಟ್ಟದರಿದ್ರರ ಗಲೀಜು ಗಲ್ಲಿಗಳು; ಯಾರು ತಮ್ಮ ಹಕ್ಕೆಂದು ಏನನ್ನಾದರೂ ಸಾಧಿಸುತ್ತಾರೋ ಅವರೇ ನಿಜವಾದ ಶೂದ್ರರು; ಯಾರು ಏನನ್ನಾದರೂ ತಮ್ಮ ಸ್ವತ್ತೆಂದು ಸಂಗ್ರಹಿಸಿದ್ದಾರೋ ಅವರೇ ಕತ್ತಲೆಯ ಬಂದೀಖಾನೆಯಲ್ಲಿರುವ ಸ್ವಯಂ ಆರೋಪಿತ ಸೆರೆಯಾಳುಗಳು: ಯಾರು ಕೂಡಿ ಹಾಕುತ್ತಾರೋ ಅವರು ಶೋಚನೀಯ ಕ್ಷುದ್ರಪ್ರಾಣಿ ಜೀವಿಗಳು. ಇವರು ತಮ್ಮನ್ನು ತಾವು ರಾಜರುಗಳೆಂದೂ ಅಧ್ಯಕ್ಷರೆಂದೂ ಕರೆದುಕೊಳ್ಳುತ್ತಾ ಐಶ್ವರ್ಯದ ಕೊಚ್ಚೆ ರೊಚ್ಚಿನಲ್ಲಿ ಉಸಿರುಕಟ್ಟಿ, ಕತ್ತು ಹಿಸುಕಿ ಕೊಳ್ಳುತ್ತಿರುವ ಆತ್ಮ ಘಾತಕರು. ಇನ್ನೂ ಕೆಲವರು ತಾವು ಪ್ರವಕ್ತರೆಂದೂ ತತ್ತ್ವಜ್ಞಾನಿಗಳೆಂದೂ ಕರೆದುಕೊಳ್ಳುತ್ತಾ ಆಳವಾದ ಕತ್ತಲೆಯಲ್ಲಿ ಮುಳುಗುತ್ತಾರೆ. ದೌರ್ಬಲ್ಯ ಮತ್ತು ಭಯಗಳ ಜವುಗು ನೆಲದಲ್ಲಿ ಕೆಲವರು ಹೂತುಹೋಗಿದ್ದರೂ ಅದನ್ನೇ ಶಕ್ತಿಯೆಂದು ಕರೆದುಕೊಳ್ಳುತ್ತಾರೆ. ಆಸ್ತಿಪಾಸ್ತಿ-ಸ್ವತ್ತುಗಳೆಂಬ ಸ್ವಪ್ನ ಪಿಶಾಚಿಯಿಂದ ಗ್ರಸ್ತರಾಗಿ ದಿಕ್ಕಿಲ್ಲದಷ್ಟು ಸಂಕಟಪಡುತ್ತಾ ಇದ್ದರೂ ನೀರಿಲ್ಲದ ನೆಲದಲ್ಲಿ ಮೀನು ಹಿಡಿಯಬೇಕೆಂಬ ಭ್ರಮೆಯಿಂದ ಕೆಲವರು ತಾವಿರುವ ಕೆಳಗಿನ ಹಾಸ್ಯಾಸ್ಪದವಾದ ಸ್ಥಿತಿಯನ್ನೇ ಶ್ರೇಷ್ಠವಾದುದೆಂಬ ಪ್ರತಿಷ್ಠೆಯನ್ನು ಮೆರೆಯುತ್ತಾ ಇದ್ದಾರೆ; ಸ್ವಯಂ ಪೀಡಕರಾದ ಈ ತಪಸ್ವಿಗಳನ್ನು ಎಚ್ಚರಗೊಳಿಸಿ ವಿಮೋಚನೆ ಮಾಡಬೇಕು. ಐಶ್ವರ್ಯ, ಜ್ಞಾನ, ಬಿರುದುಗಳು, ಪ್ರಮಾಣ ಇವೇ ಮೊದಲಾದುವುಗಳ ವಿಶೇಷಾಧಿಕಾರವನ್ನೂ ದುರಹಂಕಾರವನ್ನು ತುಳಿತುಳಿದು ಮಟ್ಟಹಾಕಬೇಕು. ಸಮಾನತೆಯೇ ಸುಖದ ನಿಯಮವು. ಅನಾಗರಿಕ ಕಾಡುಮನುಷ್ಯರ ದುರಾಶೆಯೂ ತಟಕ್ಕನೆ ಕ್ರೂರ ಮುಷ್ಟಿಯಿಂದ ಹಿಡಿದುಕೊಳ್ಳುವ ಪಾಶವೀ ಪ್ರವೃತ್ತಿಯೂ ತಮ್ಮ ಸ್ವಂತ ಆಸ್ತಿಯನ್ನು ಸಂಪಾದಿಸಿ ಶೇಖರಿಸಿಕೊಳ್ಳಬೇಕೆಂಬ ಪಶುಗಳಿಗಿಂತಲೂ ಕೀಳಾದ ಒಲವೂ ಹುಚ್ಚು ಆತುರವನ್ನೂ ಕ್ಲೇಶವನ್ನೂ ಕ್ಷೋಭೆಯನ್ನೂ ಉಂಟುಮಾಡುತ್ತವೆ. ದುರಹಂಕಾರ ಮತ್ತು ನಿರರ್ಥಕವಾದ ಮಹದಾಶೆ—ಇವುಗಳ ವಿಷಮ ಶೀತಜ್ವರವು ಅಡಗಲಿ. "ನೀವು ಎಷ್ಟನ್ನು ಹೊಂದಿದ್ದೀರೋ ಅಷ್ಟೂ ನಿಮ್ಮನ್ನೂ ಹೊಂದಿರುತ್ತದೆ ಮತ್ತು ಪಿಶಾಚಿಯಂತೆ ಹಿಡಿದಿರುತ್ತದೆ." ಎಂಬ ಕಠೋರ ಸತ್ಯವನ್ನು ಪ್ರತಿಯೊಂದು ಕಿವಿಯಲ್ಲಿಯೂ ಭೈರಿಗೆಯಿಂದ ಕೊರೆದು ತುಂಬಬೇಕು.

ಸತ್ಯವನ್ನೇ ಬಯಸುವ ಸತ್ಯಕಾಮರೆ ! ನಾಗರಿಕತೆಯ ಒತ್ತಡದಿಂದಾಗಲೀ ನಿಮ್ಮ ಸುತ್ತಲಿರುವ ಪ್ರಪಂಚದ ರೀತಿ ನೀತಿಗಳಿಂದಾಗಲೀ ತುಳಿದಿಟ್ಟಂತೆ ಆಗಬೇಡಿ.

ಮುಂದುವರಿದವರೆಂದು ಭಾವಿಸಲ್ಪಟ್ಟಿರುವ ರಾಷ್ಟ್ರಗಳ ಆಡಂಬರಗಳಿಂದಲೂ ಪ್ರದರ್ಶನಗಳಿಂದಲೂ ನಿಮ್ಮನ್ನು ನೀವು ಕೀಳಾದವರೆಂದು ಭಾವಿಸಬೇಡಿ. ಅವರ "ವಾಸ್ತವ ಸಂಗತಿಗಳೂ ಅಂಕೆ ಸಂಖ್ಯೆಗಳೂ" ಕೇವಲ ಇಂದ್ರಿಯಗಳ ತಂತ್ರಗಳು, ಮೋಸಗಳು, ಕತೆಗಳು ಮತ್ತು ಕಲ್ಪನೆಗಳು; ಅವರ "ಗಟ್ಟಿ ನಾಣ್ಯವು ಅಥವಾ ಕಠೋರ ಸತ್ಯವು" ಬರಿ ಜೇಡನ ಬಲೆಯ ತಂತುವಿನಂತೆ ನಿಸ್ಸತ್ತ್ವವಾದುದು—ಅಜ್ಞಾತವಾದುದು.

In the twentieth Century the day is not far off when the progressing nations must change their forms of government or ways of living and fashion them on the principles of freedom and Vedanta.

"ಇಪ್ಪತ್ತನೇ ಶತಮಾನದಲ್ಲಿ ಪ್ರಗತಿಪರ ರಾಷ್ಟ್ರಗಳು ತಮ್ಮ ಸರಕಾರದ ರೂಪಗಳನ್ನಾಗಲೀ ಜೀವನ ಮಾರ್ಗಗಳನ್ನಾಗಲೀ ಬದಲಾಯಿಸಿ, ಸ್ವಾತಂತ್ರ್ಯ ಮತ್ತು ವೇದಾಂತದ ತತ್ತ್ವಗಳ ಮೇಲೆ ರೂಪಿಸತಕ್ಕಂಥ ದಿನಗಳು ದೂರವಿಲ್ಲ." ರಾಷ್ಟ್ರದ ಮತ್ತು ವ್ಯಕ್ತಿಗಳ ಮೋಕ್ಷವು ಆಸ್ತಿಪಾಸ್ತಿಯ ಭಾವನೆಯನ್ನು ತ್ಯಾಗಮಾಡಿ ವೇದಾಂತದ ತ್ಯಾಗ ಮನೋಭಾವವನ್ನು ವಹಿಸುವದರಲ್ಲಿದೆ. ಬೇರೆ ಗತಿಯೇ ಇಲ್ಲ.

ಸಂಗ್ರಹಣ ದಾಹದ ಜ್ವರದಿಂದ ನರಳುತ್ತಿರುವ ಎಲ್ಲಾ ನಾಗರಿಕ ಪಾಶ್ಚಾತ್ತ್ಯ ದೇಶಗಳಲ್ಲಿಯೂ ಆಸ್ತಿಸಂಪನ್ನತೆಯ ಸ್ವಪ್ನ ಪಿಶಾಚಿಯಿಂದ ಸ್ವಯಂಬಾಧಿತರಾದ ಜೇತಗಾರರನ್ನು ಬೇಗಲೋ ಬಹಳ ಬೇಗಲೋ ಎಚ್ಚರಗೊಳಿಸುವ ಸ್ಥಳಜನ್ಯ ಶಕ್ತಿಗಳು ಪ್ರಬಲವಾಗಿ ಕಾರ್ಯಶೀಲವಾಗಿವೆ. ತ್ಯಾಗದ ಪ್ರಭುತ್ವವೇ ಪ್ರಪಂಚದ ಸ್ವತಂತ್ರ ಸಾಮ್ರಾಜ್ಯವನ್ನು ಅನುಗ್ರಹಿಸಬೇಕು.

ಪ್ರಶ್ನೆ: ಹೊಸದೊಂದು ಮತಧರ್ಮವನ್ನು ನೀವು ಪ್ರತಿಪಾದಿಸುತ್ತೀರಾ?

ಉತ್ತರ: ರಾಮನು ಯಾವ ವಿಚಾರವನ್ನೂ ಪ್ರತಿಪಾದಿಸುತ್ತಿಲ್ಲ. ಸತ್ಯವು ತನ್ನನ್ನು ತಾನು ಪ್ರಕಾಶಪಡಿಸುತ್ತದೆ. ರಾಮನು ಸುಮ್ಮನೆ, ಆ ಮಹಾಪ್ರಭುವಿಗೆ-ಅವನ ಪ್ರೇರಣೆಗೆ-ಯಾವ ಅಡಚಣೆಯನ್ನೂ ವಿರೋಧವನ್ನೂ ತೋರಿಸುವದಿಲ್ಲ; ತನ್ನನ್ನು ತಾನು ಸ್ವಚ್ಛವಾಗಿ ಪಾರದರ್ಶಕವಾಗಿ ಇಟ್ಟುಕೊಂಡು, ಸತ್ಯವು ತನ್ನಮೂಲಕ ಸ್ವಚ್ಛಂದವಾಗಿ ಬೆಳಗುವದಕ್ಕೆ ಅವಕಾಶಕೊಡುತ್ತಾನೆ. ಅದು ಯಾವ ರೂಪದಿಂದಾದರೂ ಪ್ರಕಾಶಿಸಲಿ. ದೇಹವೂ ಮನಸ್ಸೂ ಎಲ್ಲವೂ ಆ ಜ್ವಾಲೆಯಿಂದ ಸ್ವಾಹಾ ಮಾಡಲ್ಪಡಲಿ. ಅದಕ್ಕಿಂತಲೂ ಹೆಚ್ಚು ಸೌಭಾಗ್ಯವು ಬೇರೊಂದಿಲ್ಲ. ಸಂದೇಶವು ನಿವೇದನೆಯಾದ ಮೇಲೆ ಅದು ಸಂದೇಶವಾಹಕವನ್ನು ಮುಗಿಸಲಿ-ಕೊಳ್ಳಲಿ.

ಪ್ರಶ್ನೆ: ನೀವು ಈಶ್ವರ ಪ್ರೇರಿತ ವಾದಿಗಳೋ ಪ್ರವಾದಿಗಳೋ? ದೂತರೋ ದಾತರೋ ಸಾಧಕರೋ ಸಿದ್ಧರೋ?

ಉತ್ತರ: ಯಾವದೂ ಇಲ್ಲ; ಅವೆಲ್ಲಾ ನನ್ನ ಘನತೆಗೆ ಕೀಳಾದವು. ನಾನೇ ಸ್ವತಃ ದೇವರು. ನೀವೂ ದೇವರೇ. ಈ ದೇಹವು ನನ್ನ ವಾಹನವು ಅಥವಾ ವಾಹಕವು.

ಪ್ರಶ್ನೆ: ನಿಮ್ಮ ಸಂದೇಶವು ಯಶಸ್ವಿಯಾಗುವದಿಲ್ಲ. ಅದನ್ನು ಜನರು ಸ್ವೀಕರಿಸುವುದಕ್ಕೆ ಸಿದ್ಧರಾಗಿಲ್ಲ.

ಉತ್ತರ: ಅದರಿಂದ ನನಗೇನು? ನನ್ನ ಮುನ್ನಡೆ ಎಂದೂ ಕಾಸೆಳೆಯುವ ವ್ಯಾಪಾರದ ಮೇಲಿಲ್ಲ. ಯುಗಯುಗಗಳು ನನ್ನವು; ಅನಂತಕಾಲವೇ ನನ್ನದು. ಕ್ರಿಸ್ತನನ್ನು ಅವನ ಜನರೇ ಕೈಬಿಟ್ಟರೂ ಇಡೀ ಜಗತ್ತೇ ಅವನನ್ನು ತೆಗೆದುಕೊಂಡಿತು. ಅವನ ಕಾಲದಲ್ಲಿ ಅವನನ್ನು ನಿರಾಕರಿಸಿದರೂ ಅನಂತರದ ಶತಮಾನ ಸಹಸ್ರಮಾನಗಳು ಅವನದಾದವು.

ಪ್ರಶ್ನೆ: ನಿಮ್ಮ ವಿಚಾರವನ್ನು ಇತಿಹಾಸವು ಸರಿಯೆನ್ನಲಾರದು.

ಉತ್ತರ: ನಿಮ್ಮ ಇತಿಹಾಸವು ಅಪೂರ್ಣವಾಗಿದೆ. ಈ ಸತ್ಯವು ಯಾವ ಅಧ್ಯಾಯವನ್ನು ಇತಿಹಾಸದಲ್ಲಿ ಬರೆಯುತ್ತದೆಯೋ ಅದನ್ನಿನ್ನೂ ನೀವು ಓದಿಲ್ಲ. ಒಬ್ಬ ಮನುಷ್ಯನ ಇಚ್ಛೆಯೇ ಆದರೂ ಇಚ್ಛಾಶಕ್ತಿಯ ಮುಂದೆ ಇತಿಹಾಸವೂ ಸುರುಟಿಕೊಂಡು ಹೋಗುತ್ತದೆ. ಒಳಗಿರುವ ನಿಜವಾದ ಕಾರಣವನ್ನು ಅರಿಯದೆ ತಪ್ಪುವದರಿಂದ ರೋಗಲಕ್ಷಣವನ್ನು ವಿಚಾರಮಾಡುವುದರಲ್ಲಿಯೇ ಇತಿಹಾಸವು ತನ್ನನ್ನು ತಾನು ಕಳೆದುಕೊಳ್ಳುತ್ತದೆ.

ಪ್ರಶ್ನೆ: ಎಮರ್‌ಸನ್‌ನ ಪ್ರಕಾರ, ಒಂದೇ ಬಗೆಯ ಭಾವನೆಯೇ ನಿಜವಾದ ಪ್ರೇಮಪಾಶವಾಗಿದೆ. ಯಾವದನ್ನೂ ಒಪ್ಪಿಕೊಂಡು ಅನುಸರಿಸದಿರುವವರಲ್ಲಿ ಆದರ್ಶಪ್ರಿಯರಾದ ನೀವು ಯಾರೊಡನೆಯೂ ಒಪ್ಪಿಕೊಳ್ಳುವಂತೆ ಕಾಣುವದಿಲ್ಲ. ನೀವು ಎಂಥಾ ಪ್ರೇಮಶೂನ್ಯವಾದ ಜೀವನವನ್ನು ಬೇಸರಬರುವಂತೆ ಎಳೆದಾಡುತ್ತಿರಬೇಕು!

ಉತ್ತರ: ನನ್ನ ವರ್ಣ ಚಿತ್ರವಾದ ಪ್ರಪಂಚವನ್ನು ಬೇರೆ ಬೇರೆ ದೃಷ್ಟಿಕೋನದಿಂದ ನೋಡುವದರಲ್ಲಿ ನಾನು ಆತ್ಮಾನಂದಪಡುತ್ತೇನೆ. ಅದನ್ನು ನಾನು ಹಿಂದಿನಿಂದ ಸಂಪ್ರದಾಯ ಪ್ರಿಯನಾಗಿ ನೋಡುತ್ತೇನೆ. ಅಲ್ಲಿ ಮುಂದಿನಿಂದ ಪ್ರಗತಿಪರ ಉದಾರವಾದಿಯಾಗಿ ಅದನ್ನು ನೋಡುತ್ತೇನೆ. ರಾಮನಾಗಿ ಅಥವಾ ಪೂರಣನಾಗಿ ಬಲಗಡೆಯಿಂದ ಅದನ್ನು ಪರೀಕ್ಷಿಸುತ್ತೇನೆ. [ಗುಡುಗುತ್ತಿರುವ ಉದಯದ—"Thundering Dawn"] ವಿಮರ್ಶಕವಾಗಿ ಎಡಗಡೆಯಿಂದ ತನಿಖೆ ಮಾಡುತ್ತೇನೆ. ಈ ಎಲ್ಲಾ ನಿಲುವುಗಳೂ ದೃಷ್ಟಿಕೋನಗಳೂ ಪೂರಾ ನನ್ನವೇ. ಮಜ್ಜಿಗೆಯನ್ನು ಕಡೆದು ಬೆಣ್ಣೆಯನ್ನು ತೆಗೆಯುವಾಗ ಒಂದು ಕೈದಾರವನ್ನು ತನ್ನ ಕಡೆಗೂ ಇನ್ನೊಂದು ಕೈದಾರವನ್ನು ಅದಕ್ಕೆ ಎದುರಾಗಿಯೂ ಎಳೆದಾಡಬೇಕಾಗುತ್ತದೆ. ಎಲ್ಲಾ ದೃಷ್ಟಿಗಳೂ ನನ್ನವೇ

ಆಗಿರುವಾಗ ನಾನು ಯಾರಿಂದಲಾದರೂ ಹೇಗೆ ಭಿನ್ನಾಭಿಪ್ರಾಯ ಹೊಂದಿರಬಲ್ಲೆನು? ಹೀಗೆ ನಾನು ಬೇರೆ ಬೇರೆ ಅಲೆಗಳಿಂದ ಉಬ್ಬೇರುತ್ತಿರುವ ಪ್ರೇಮ ಸಾಗರವೇ ಆಗಿದ್ದೇನೆ. ಪ್ರತಿಯೊಬ್ಬರಿಂದಲೂ ಎಲ್ಲರಿಂದಲೂ ಬೇರೆಯಾಗಿ ಅಭಿಪ್ರಾಯ ಪಡುವುದಕ್ಕೆ ನಾನು ಒಪ್ಪುತ್ತೇನೆ. ಬನ್ನಿ, ಬನ್ನಿ, ಭಿನ್ನತೆಯಲ್ಲಿ ಸಮ್ಮತಿಯ ಸುಖವನ್ನು [Agreement in difference] ನನ್ನೊಡನೆ ಸವಿಯಿರಿ.

ಪ್ರಶ್ನೆ: ಇದು ರಹಸ್ಯವಾದ ಅತೀಂದ್ರಿಯವಾದವಲ್ಲವೆ? ಧ್ಯಾನವಾದವಲ್ಲವೆ? ಒಬ್ಬರಿಂದೊಬ್ಬರು ಪೂರ್ಣ ಪ್ರತ್ಯೇಕವಾಗಿ ಜೀವಿಸುತ್ತಿರುವ ಎರಡು ವ್ಯಕ್ತಿಗಳಲ್ಲಿ ಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಯೊಡನೆ ಹೇಗೆ ತಾದಾತ್ಮ್ಯವನ್ನು ಪಡೆಯುವುದು ಸಾಧ್ಯ?

ಉತ್ತರ: ಒಳ್ಳೆಯದು. ಹಾಗೇ ಆಗಲಿ. ಹೇಗೆ ನೋಡಿದರೂ ನಾವು ಒಂದಾಗುವುದು ಸಾಧ್ಯವಿಲ್ಲವೆಂದು ರಾಮನಿಗೂ ಆಶ್ಚರ್ಯವಾಗುತ್ತದೆ; ಆದರೂ ನಾವು ಒಂದಾಗಿದ್ದೇವೆ.

ಕುಂಟಾದ ತತ್ತ್ವಶಾಸ್ತ್ರವು ಅದನ್ನು ತಿಳಿಸಿಕೊಡಲು ಶಕ್ತವಾಗಲಾರದು; ಇಂದ್ರಿಯಗಳೂ ಅದನ್ನು ತೋರಿಸಿಕೊಡಲು ಸಹಾಯ ಶೂನ್ಯವಾಗಿರಬಹುದು. ಆದರೂ ಅದು ಹಾಗೆಯೇ ಇದೆ. ನಿಜವಾದ ಇರುವಿಕೆಯನ್ನು ಅನುಭವ ಮಾಡಿದಾಗ ತೋರಿಕೆಗಳೆಲ್ಲಾ ಹಾರಿ ಹೋಗುತ್ತವೆ. ಪ್ರೇಮವು ಅದನ್ನು ಸಾಧಿಸಿ ತೋರಿಸುತ್ತದೆ. ತತ್ತ್ವಮಸಿ! ನೀವೇ ದೇವರು.

ಪ್ರಶ್ನೆ: "ಅದೇ ನೀನು" ಎಂದೇಕೆ ಹೇಳುತ್ತೀರಿ? ದೇವರನ್ನು ಅದು ಎಂದೇಕೆ ನಪುಂಸಕಲಿಂಗದಲ್ಲಿ ಹೇಳುತ್ತೀರಿ?

ಉತ್ತರ: ಕೆಲವರು ದೇವರನ್ನು ಸ್ವರ್ಗದಲ್ಲಿರುವ ತಂದೆ ಎಂದು ಭಾವಿಸಿ ಅದನ್ನು ಅವನು ಎಂದು ಕರೆಯುತ್ತಾರೆ. ಕೆಲವರು ದೇವರನ್ನು ದಿವ್ಯಮಾತೆಯೆಂದು ಪೂಜಿಸಿ ಆಕೆ ಎಂದು ಕರೆಯುತ್ತಾರೆ. ಇನ್ನು ಕೆಲವರು [ಪರ್ಷಿಯನ್ ಕವಿಗಳಂತೆ] ತಮ್ಮ ಪ್ರಿಯತಮೆಯೆಂದು ಭಾವಿಸುತ್ತಾರೆ. ಆದ್ದರಿಂದ ದೇವರಿಗೆ ಯಾವುದಾದರೂ ವ್ಯಕ್ತಿಪರ ಸರ್ವನಾಮವನ್ನು ಉಪಯೋಗಿಸುವುದಕ್ಕೆ ಮೊದಲು ದೇವರು ಶ್ರೀಯೋ ಶ್ರೀಮತಿಯೋ ಶ್ರೀಮಾನ್‌ನ್ನೋ ಎಂಬುದನ್ನು ನಿರ್ಣಯಿಸಬೇಕು.

ಪ್ರಶ್ನೆ: ಹಾಗಾದರೆ ದೇವರು ಯಾರು?

ಉತ್ತರ: ದೇವರು ಶ್ರೀಯೂ ಅಲ್ಲ, ಶ್ರೀಮತಿಯೂ ಅಲ್ಲ, ಶ್ರೀಯುತನೂ ಅಲ್ಲ, ಆದರೆ ಶ್ರೀಮಂತ ರಹಸ್ಯವು. (God is neither Miss nor Mrs. nor Mister, but Mystery).

ಓಂ! ಓಂ! ಓಂ!

# PROPERTY
# ಸ್ವಾಮಿತ್ವ, ಸ್ವತ್ತು, ಆಸ್ತಿ

ಈ ಮುಂದಿನ ವಿಷಯಗಳಲ್ಲಿ ಹೆಚ್ಚಿನ ಭಾಗವನ್ನು ಮೂಲತಃ, ರಸ್ತೆಯ ಮೇಲೆ ನಡೆದು ಹೋಗುವಾಗ, ದಾರಿಗಳು ಬೇರೆಯಾಗುವುದಕ್ಕೆ ಮೊದಲು, ಕೇಳಿದ ಪ್ರಶ್ನೆಗೆ ಉತ್ತರವಾಗಿ ಬರೆಯಿತು.

ದಿವ್ಯಾತ್ಮ ! ಆಸ್ತಿಯ ಹಕ್ಕುಗಳು ಎನ್ನುವ ವಿಷಯದಲ್ಲಿ ಒಮ್ಮೆ ರಾಮನ ಅಭಿಪ್ರಾಯವನ್ನು ಕೇಳಿದ್ದು ನೀನಾಗಿರಬಹುದೆ? ಅಥವಾ "Property right" ಆಸ್ತಿಯ ಹಕ್ಕುಗಳು ಎನ್ನುವ ತಪ್ಪು ಬಳಕೆಯ ಮಾತನ್ನು ತಿದ್ದಿ "Property wrong" ಆಸ್ತಿಯ ಸೊಕ್ಕುಗಳು ಎಂದು ಹೇಳಿದರೆ ರಾಮನನ್ನು ಕ್ಷಮಿಸಬೇಕು. ಒಳ್ಳೆಯದು, ಪ್ರಶ್ನೆ ಕೇಳಿದವರು ಯಾರಾದರೂ ಆಗಲಿ, ರಾಮನ ದೃಷ್ಟಿಯಿಂದ ಈ ಶರೀರದಲ್ಲಿ ಆಗಲೀ ಬೇರೆ ಶರೀರದಲ್ಲಿ ಆಗಲಿ ಅದು ನಿಮ್ಮ ಪುಣ್ಯಕರವಾದ ಆತ್ಮವೇ.

ಆಸ್ತಿ ಎಂದರೇನು? Property ಎಂದರೇನು? That which is proper to one or right for a being.

ಯಾವದು ಒಬ್ಬರಿಗೆ ನ್ಯಾಯವಾದುದೋ ಯೋಗ್ಯವಾದುದೋ ಸರಿಯಾದುದೋ ಅದು. ಒಬ್ಬನ ನ್ಯಾಯವಾದ ಗಳಿಕೆಯೇ ಆಸ್ತಿಯು. ಪ್ರಾಪರ್ಟಿ ಎನ್ನುವ ಇಂಗ್ಲಿಷ್ ಶಬ್ದಕ್ಕೆ ಒಂದು ಪದಾರ್ಥದ ಸಾಮಾನ್ಯ ಗುಣ-ಲಕ್ಷಣ ಎಂದೂ ಅರ್ಥವಾಗುತ್ತದೆ.

ಸ್ವಾಭಾವಿಕ ಹಗುರವಾಗಿರುವುದು, ಉರಿಯುವ [ದಾಹ್ಯ] ಶಕ್ತಿಯುಳ್ಳದ್ದು ಮೊದಲಾದವು ಜಲಜನಕದ ಗುಣಗಳು. ಆದರೆ ಆ ಅನಿಲವನ್ನು ತನ್ನೊಳಗೆ ಹಿಡಿದಿಟ್ಟು ಕೊಂಡಿರುವ "ಗ್ಲ್ಯಾಸ್" ಗಾಜಿನ ಪಾತ್ರೆಯು ಎಂದೂ ಆ ಅನಿಲದ ಪ್ರಾಪರ್ಟಿ [ಗುಣ-ಆಸ್ತಿ] ಆಗಲಾರದು. ಹೀಗೆ, ಮಾನವತ್ವ,-ಅಲ್ಲ-ದೇವತ್ವವೇ ನಿಮ್ಮ ಪ್ರಾಪರ್ಟಿ [ಸ್ವರೂಪ] ಗುಣ-ಆಸ್ತಿಯೇ ಹೊರತು, ನೀವು ವಾಸವಾಗಿರುವ ಮನೆಯು ಅಥವಾ ಆಭರಣವು ಎಂದೂ ನಿಮ್ಮ ಆಸ್ತಿಯಾಗಲಾರದು. ಜನರು ತಮ್ಮ ಸ್ವಾಭಾವಿಕ [ಸ್ವರೂಪ] ಗುಣ-ಆಸ್ತಿಯಾದ ದೇವತ್ವದ ಜನ್ಮ ಸಿದ್ಧವಾದ ಹಕ್ಕನ್ನು ಕಳೆದುಕೊಳ್ಳುವದಕ್ಕೆ ಇಷ್ಟಪಡುತ್ತಾರೆ. ಆದರೆ, ತಮ್ಮ ಆಸ್ತಿಯೆಂದು ತಿಳಿದಿರುವ ಮನೆ, ಭೂಮಿ, ಬಂಗಾರ ಮೊದಲಾದುವುಗಳಿಗೆ ಬಿಡದ ಪಟ್ಟಿನಿಂದ ಜಿಗುಟಾಗಿ ಅಂಟಿಕೊಂಡಿರುವದರಿಂದ ಜನರು ಬಿಡದಂತೆ ತಮ್ಮನ್ನು ತಾವೆ ಹಾಸ್ಯಾಸ್ಪದರನ್ನಾಗಿ ಮಾಡಿಕೊಳ್ಳುತ್ತಾರೆ. ಇದು ಎಂಥಾ ದೊಡ್ಡ ತಮಾಷೆ !

ಜನರು ಕಾಲಿಗೆ ಹಾಕಿಕೊಂಡಿರುವ ಬಗೆ ಬಗೆಯಾದ ಚಪ್ಪಲಿಗಳ ಮೇಲೆ ಅವರನ್ನು ವರ್ಗೀಕರಣ ಮಾಡುವುದು ಎಷ್ಟು ಅಸ್ವಾಭಾವಿಕವೋ ಅವರ ಆಸ್ತಿಪಾಸ್ತಿ-ಐಶ್ವರ್ಯಗಳ ಮೇಲೆ ವಿಭಾಗ ಮಾಡುವುದೂ ಅಷ್ಟೇ ಅಸ್ವಾಭಾವಿಕ.

ಆತ್ಮಾನುಭವಕ್ಕೆ ಒಂದೇ ಒಂದು ಅಡ್ಡಿಯೂ ತಡೆಯೂ ಆಗಿರುವದು ಆಸ್ತಿಯ ಮತ್ತು ಗಂಟು ಮೂಟೆಗಳ ಹಕ್ಕಿನ ರೂಢಿಯ ಭಾವನೆಯೇ ಆಗಿದೆಯೆಂದು ರಾಮನು ಸಾರಿ ಹೇಳುತ್ತಾನೆ. ಒಂದು ವಸ್ತುವನ್ನು ನಾವು ಹೊಂದಿರಬೇಕೆಂದು ಬಯಸಿದ ಕೂಡಲೇ ಆತ್ಮವಂಚನೆಯ ಪಿಶಾಚಿಯಿಂದ ಹಿಡಿಯಲ್ಪಡುತ್ತೇವೆ. ನತ್ಯವೇ ತಾನೆಂದು ಸಕಲವನ್ನೂ ತ್ಯಾಗ ಮಾಡುವುದೇ, ಸಕಲವೂ ತಾನಾಗಿ ಸಕಲವೂ ತನ್ನದೆಂದು ಇರುವದೇ ಶುದ್ಧವೂ ಸರಳವೂ ಸಹಜವೂ ಆದ ವೇದಾಂತವು.

Perfect democracy, equality, throwing off the load of external authority, casting aside the vain accumulative spirit throwing over-board all prerogatives, spurning the airs of superiority and shaking off the embarrassments of inferiority, is Vedanta on the material plane,

“ಪೂರ್ಣಪ್ರಜಾಪ್ರಭುತ್ವ, ಸಮಾನತೆ, ಹೊರಗಿನ ಅಧಿಕಾರ—ಪ್ರಮಾಣ—ಪ್ರಭುತ್ವ ಪ್ರಭಾವ—ಶಾಸನ—ಆಜ್ಞಾ—ಇವೇ ಮೊದಲಾದ ಶಕ್ತಿಗಳ ಹೊರೆಯನ್ನು ಎತ್ತಿ ಒಗೆಯುವದು, ವ್ಯರ್ಥವಾದ ಸಂಗ್ರಹಕಾರಕ ಮನೋಭಾವವನ್ನು ಬಿಸಾಕುವುದು, ಎಲ್ಲಾ ವಿಶೇಷಾಧಿಕಾರಗಳನ್ನು ಎತ್ತಿ ಎಸೆಯುವುದು, ತಾನೇ ಶ್ರೇಷ್ಠನೆಂಬ ಸೋಗನ್ನು ತಿರಸ್ಕರಿಸುವುದು, ತಾನು ಗುಣ, ದರ್ಜೆ, ಯೋಗ್ಯತೆ ಮೊದಲಾದುವುಗಳಲ್ಲಿ ಕೀಳೆಂಬ ಪೇಚಾಟವನ್ನು ಕೊಡವಿ ಹಾಕುವುದು—ಇವೇ ಭೌತಿಕ ಭೂಮಿಕೆಯಲ್ಲಿ ಅಳವಟ್ಟಿರುವ ವೇದಾಂತವು. ವೇದಾಂತವು ಇದೇ ಭಾವವನ್ನು ಮಾನಸಿಕ ಮತ್ತು ಆಧ್ಯಾತ್ಮಿಕ ಭೂಮಿಕೆಗಳ ಮೇಲೂ ಒಯ್ಯುತ್ತದೆ. ದೇಹ, ಮನಸ್ಸು, ಬುದ್ಧಿ, ಲೇಖನಗಳು, ಭಾಷಣಗಳು, ಸೂಕ್ತಿಗಳು, ಮನೆ, ಕುಟುಂಬ, ಕೀರ್ತಿ, ಘನತೆ, ಗೌರವ ಇವುಗಳಲ್ಲಿ ಯಾವವೂ ಎಲ್ಲವೂ ಪ್ರತ್ಯೇಕವಾಗಿ ತನ್ನದೆಂದುಕೊಳ್ಳದಿರುವದೇ ವೇದಾಂತವು. ತನ್ನನ್ನು ಒಳಗಿಟ್ಟುಕೊಂಡು ಮಿಕ್ಕ ಎಲ್ಲರನ್ನೂ ಎಲ್ಲವನ್ನೂ ಹೊರಗೆ ಹಾಕುವ ಎಲ್ಲಾ ಬೇಲಿಗಳನ್ನೂ ಮಿತಿಗಳನ್ನೂ ನಾಶಮಾಡಿ, ಪ್ರಪಂಚದಲ್ಲಿರುವ ಎಲ್ಲಾ ಶಕ್ತಿಗಳ ಮೇಲೂ ಪರಮಾಣುವಿನಿಂದ ಸೂರ್ಯ ಚಂದ್ರ ನಕ್ಷತ್ರಗಳವರೆಗೂ ದೇವರಂತೆ ಪುನಃ ಪರಮ ಪ್ರಭುತ್ವವನ್ನು—ಪರಮಾಧಿಕಾರವನ್ನು—ಪಡೆಯುವುದೇ ವೇದಾಂತವು. ವೇದಾಂತವನ್ನು ಅನುಭವಕ್ಕೆ ತಂದುಕೊಡುವದಕ್ಕಾಗಿ ಅನೇಕ ವ್ಯವಸ್ಥಿತ ಪ್ರಯತ್ನಗಳು [ಹಲವು ಸಮಯ ಅರಿವಿಲ್ಲದಂತೆ] ವಿಶಾಲ ಜಗತ್ತಿನಲ್ಲಿ ನಡೆಯುತ್ತಿವೆ. ಕಟ್ಟಕಡೆಯಲ್ಲಿ ಸಂನ್ಯಾಸದ ಬಾವುಟವು ಪ್ರಪಂಚದ ಮೇಲೆಲ್ಲಾ ಹಾರಾಡಬೇಕು.

ಕೆಲವು ವೇದಾಂತಿಗಳು ಈಗಾಗಲೇ ಸಂಪೂರ್ಣ ಪ್ರೇಮ ಪ್ರಭುತ್ವದ ಜೀವನವನ್ನು ನಡೆಸುತ್ತಿದ್ದಾರೆ; ಕೆಲವು ಸ್ಥಳಗಳಲ್ಲಿ ಇತಿಹಾಸಪೂರ್ವ ಕಾಲದಿಂದಲೂ ಈ ಅಗ್ನಿಯನ್ನು ಜೀವಂತವಾಗಿ ಇಟ್ಟುಕೊಂಡಿದ್ದಾರೆ.

ಗಂಗಾನದಿಯ ದಂಡೆಯ ಮೇಲೆ ಕುಳಿತುಕೊಂಡಿರುವ ಒಬ್ಬ ಮಹಾತ್ಮನ ಪ್ರೇಮದಿಂದ ಆಕರ್ಷಿತವಾಗಿ ಧೈರ್ಯಗೊಂಡ ದನಕರುಗಳೂ ನಾಯಿಗಳೂ ಮೀನುಗಳೂ ಹಕ್ಕಿಗಳೂ ನಿರ್ಭಯದಿಂದ ಅವನಲ್ಲಿಗೆ ಬಂದು ಅವನ ಕೈಗಳಲ್ಲಿರುವ ರೊಟ್ಟಿಯನ್ನು ಅವನ ಜೊತೆಗೆ ತಿನ್ನುತ್ತಿರುವುದನ್ನು ಸ್ವಲ್ಪ ಕಲ್ಪನೆಮಾಡಿಕೊಳ್ಳಿ. ರಾಮನು ಇನ್ನೊಂದು ಪರಮಾವಧಿಯ ದೃಷ್ಟಾಂತವನ್ನು ಕೊಡುತ್ತಾನೆ.

ಒಬ್ಬ ಸ್ವಾಮಿಗಳು ದೇಹದಲ್ಲಿ ಅತಿಶಯ ದುಸ್ಸಹವಾದ ಒಂದು ಹುಣ್ಣಿನಿಂದ ನರಳುತ್ತಿದ್ದರು. ಅದರಲ್ಲಿ ಹುಳುಗಳು ತಿನ್ನುತ್ತಿದ್ದರೂ ಅವುಗಳನ್ನು ಕೊಲ್ಲುವುದಕ್ಕೆ ಅವರು ಯಾವ ಔಷಧಿಯನ್ನೂ ಉಪಯೋಗಿಸುತ್ತಿರಲಿಲ್ಲ. ಅಥವಾ ತೃಪ್ತಿಗೊಂಡ ಕ್ರಿಮಿಗಳು ಆ ವ್ರಣದ ಕೀವಿನಿಂದ ಹೊರಬಿದ್ದರೆ ಅವುಗಳನ್ನು ತೆಗೆದುಕೊಂಡು ನಗು ನಗುತ್ತಾ ಆ ಹುಣ್ಣನ್ನೇ ತಿನ್ನುವದಕ್ಕೆ ಅವರು ಸಹಾಯ ಮಾಡುತ್ತಿದ್ದರು. ಈ ಸಣ್ಣ ದೇಹವು ಪ್ರಪಂಚದಲ್ಲಿರುವ ಪ್ರತಿಯೊಂದು ಕ್ರಿಮಿಗೂ ಸೇರಿದೆ; ಈ ವಿಶಾಲ ಜಗತ್ತು ನನಗೆ ಸೇರಿದೆ. ಈ ವಿಶ್ವವೇ ನನ್ನ ಶರೀರವು. ಗಾಳಿಯೂ ನೆಲವೂ ನನ್ನ ಉಡಿಗೆಯೂ ಚಪ್ಪಲಿಯೂ ಆಗಿವೆ.

ಸ್ವಾಮಿ ಎಂದರೆ ಎಡೆಬಿಡದೆ ದಾನಮಾಡುವವನು. ಸತ್ಯವೊಂದಿರಲಿ, ಮಿಕ್ಕ ಎಲ್ಲವೂ ಹೋಗಲಿ. ತಾನು ತೆಗೆದುಕೊಂಡ ಭಿಕ್ಷಾ ಮಾತ್ರವನ್ನು ಸಂನ್ಯಾಸಿಯು ಹೆಚ್ಚು ಹಸಿದಿರುವವರಿಗೆ ಕೊಟ್ಟುಬಿಡುತ್ತಾನೆ. ಅವನಲ್ಲಿ ಕೊಡುವುದಕ್ಕೆ ಏನೂ ಉಳಿದಿಲ್ಲದಿರುವಾಗ ಅವನು ಸಂತೋಷದಿಂದ ತನ್ನ ದೇಹವನ್ನು ನೊಣಗಳಿಗೂ ಹುಳುಗಳಿಗೂ ಹರಿದಾಡುವ ಜಂತುಗಳಿಗೂ ಕೊಟ್ಟು, ಎಲ್ಲವುಗಳ ಆತ್ಮನಾದುದರಿಂದ ಸ್ವೀಕರಿಸಿ ಭೋಗಿಸುವ ಜೀವರ ಆತ್ಮವಾಗಿಯೂ ಸಂತೋಷಪಡುತ್ತಾನೆ. ಆ ದೇಹಮಾಂಸದ ಔತಣವನ್ನು ಸೇವಿಸುವಾಗ ನೊಣಗಳಾಗಿಯೂ ಹುಳುಗಳಾಗಿಯೂ ಆನಂದಪಡುತ್ತಾನೆ. ಮೂಳೆಗಳನ್ನು ಒಣಗಿಸುವಾಗ ಗಾಳಿಯಾಗಿಯೂ ಶಾಖವಾಗಿಯೂ ಅವನು ಆನಂದಪಡುತ್ತಾನೆ.

**ಸಾಮಾನ್ಯವಾದ ದಾನ–ಧರ್ಮ** :— ಸಾಯುತ್ತಿರುವ ಬಲಿ ಪ್ರಾಣಿ ಒಂದರ ಬಾಯಿಯಲ್ಲಿ ಸ್ವಲ್ಪ ನೀರನ್ನು ಬಿಟ್ಟು, ಅದು ಅನುಭವಿಸುತ್ತಿರುವ ಚಿತ್ರ ಹಿಂಸೆಯನ್ನು ಬೆಳೆಸುವುದು ಅತ್ಯಂತ ಶ್ರೇಷ್ಠವಾದ ಪುಣ್ಯವೆಂಬಂತೆ ಸಮಾಜದ ಒಂದು ಭಾಗವನ್ನು ಕ್ರೂರವಾಗಿ ಹಿಂಡಿ, ಶೋಷಿಸಿ, ದಟ್ಟದರಿದ್ರರನ್ನಾಗಿ ಮಾಡಿ ಅವರ ಅವನತಿಗೂ ಕಾರಣರಾಗಿ ಸಂಗ್ರಹಿಸಿದ ಸಂಪತ್ತಿನಲ್ಲಿ ಅತ್ಯಲ್ಪವಾದ ನಾಮಮಾತ್ರದ ಒಂದು ಭಾಗವನ್ನು ಹಿಂದಕ್ಕೆ ಕೊಟ್ಟುಬಿಡುವುದು ಉದಾತ್ತವಾದ ದಾನವೆಂದು ಹೇಳಿಕೊಳ್ಳುವ, ಹೊಗಳುವ ಸ್ಥಿತಿಗೆ

ಸ್ವತ್ತು, ಸಂಪತ್ತು, ಸ್ವಾಮಿತ್ವದ ಭಾವನೆಯೂ ಪರಿಸ್ಥಿತಿಯೂ ಬಂದಿರುವದು ಅತ್ಯಂತ ಶೋಚನೀಯವಾದುದು. [ವ್ಯಾಜ] ಮೋಸವೆಂದು ಆರೋಪ ಮಾಡದಿರುವದು ಮಹತ್ವಾದ ಉಪಕಾರವೆಂದು ಭಾವಿಸಲ್ಪಟ್ಟಿದೆ; ಏಕೆಂದರೆ ಮೋಸವೇ ಸಾರ್ವತ್ರಿಕ ನಿತ್ಯಕ್ರಮವಾಗಿದೆ. ಸಂಸ್ಕೃತದಲ್ಲಿ ವ್ಯಾಜಃ ಎನ್ನುವ ಶಬ್ದಕ್ಕೆ ಮೂಲತಃ, ಮೋಸ, ದ್ರೋಹ, ತಂತ್ರ ಮೊದಲಾದ ಅರ್ಥವಿತ್ತು; ಆದರೆ ಈಗಿನ ಕಾಲದಲ್ಲಿ ವ್ಯಾಜ-ವ್ಯಾಜ್ಯ ಎಂಬ ಶಬ್ದವನ್ನು ಹಿತಾಸಕ್ತಿ ಎಂಬ ಅರ್ಥದಲ್ಲಿ ಬಳಸುತ್ತಿದೆ.

ಇದು ಯೂರೋಪ್-ಅಮೆರಿಕ ದೇಶಗಳ ದಾನಧರ್ಮವನ್ನು ವಿವರಿಸುತ್ತದೆ. ಇಂಡಿಯಾ ದೇಶದ ದಾನಧರ್ಮಗಳು, ಹೇಗಾದರೂ, ಅಷ್ಟಾಗಿ, ಹಸಿದು ಸಾಯುತ್ತಿರುವ ಶ್ರಮಜೀವಿಗಳಾದ ಶೂದ್ರರ ವಿಷಯದಲ್ಲಿ ಚಿಂತೆ ಮಾಡಿ, ತೊಂದರೆ ತೆಗೆದುಕೊಳ್ಳುವುದಿಲ್ಲ. ಆದರೆ ಅವು, ಹೊಟ್ಟೆಗೆ ಹೆಚ್ಚಾಗಿ ಅಜೀರ್ಣದಿಂದ ನರಳುತ್ತಿರುವ ಸೋಮಾರಿಗಳಿಗೆ ಪಾಷಾಣೀಕೃತ ಧರ್ಮದ ಅತ್ಯುನ್ನತ ಪ್ರತಿನಿಧಿಗಳಾದ ದೇವತೆಗಳ ಉಗ್ರಾಣದಲ್ಲಿ ಸಂತರ್ಪಣೆ ಮಾಡಿ, ಜಂಬ ಕೊಚ್ಚಿಕೊಳ್ಳುವ ಉದಾರದಾನಿಗಳನ್ನು ನೇರಾಗಿ ಸ್ವರ್ಗಕ್ಕೇ ಕಳಿಸುತ್ತವೆ.

ರಾಮನು ಸರಳತೆಯನ್ನೇ ಆಕರ್ಷಕವಾದ ನೀಟುಗಾರಿಕೆಯನ್ನಾಗಿ ಮಾಡುತ್ತಾನೆ. ನಿಮ್ಮನ್ನು ಹೆಚ್ಚು ಆಕರ್ಷಕವಾಗಿ ಮಾಡುವದು ಯಾವದು? ನಿಮ್ಮನ್ನು ಮುಚ್ಚಿಡುವ ಉಡಿಗೆಗಳೆ? ಅಥವಾ ನಿಮ್ಮ ಘನವಾದ ವ್ಯಕ್ತಿತ್ವವನ್ನು ಬಿಚ್ಚಿ ತೋರಿಸುವ ನಯಸಂಪನ್ನವಾದ ಸರಳ ಸೌಜನ್ಯವೆ? ಸಹಜವಾದ ಸೊಬಗೆ? ವಸ್ತ್ರಗಳಿಂದಾಗಲೀ ಬೇರೆ ಮೋಹಕ ಪ್ರಸಾಧನಗಳಿಂದಾಗಲೀ ಸೌಂದರ್ಯವನ್ನು ಸಾಲ ತೆಗೆದುಕೊಳ್ಳುವ ಕಾರಣವಿಲ್ಲ. ಸ್ವಾಭಾವಿಕವಾದ ಆರೋಗ್ಯವನ್ನೂ ನಗುವನ್ನೂ ಹರ್ಷವನ್ನೂ ಉಲ್ಲಾಸವನ್ನೂ ಧರಿಸಿರಿ.

ಯಾರಾದರೂ ಬರಲಿ, ಕದಿಯಲಿ. ಸ್ವತ್ತುಗಳ ಸ್ವಾಮಿತ್ವವನ್ನು ಶಾಸನಬದ್ಧವಾಗಿ ಮಾಡಿ ಬಡ ಸರ್ಕಾರಗಳು ತಮ್ಮನ್ನು ತಾವು ಮೂರ್ಖರನ್ನಾಗಿ ಮಾಡಿಕೊಳ್ಳಲಿ. ಅದರಿಂದ ನಿಮಗೇನು? ನೀವಂತೂ ನಿಮ್ಮ ಭಾಗವನ್ನು ಬಿಟ್ಟುಕೊಡುವದಿಲ್ಲ. ಕೇಳಿ, ಸತ್ಯವೇ ನೀವು. ಭೌತಿಕ ಸಂಪತ್ತಿನ ಕ್ಷಾರಸಾಗರದ ತುಂತುರು ಹನಿಯಾಗಿ ಖಂಡಿತ ಹೊಡೆದಾಡಬೇಡಿ; ಸತ್ಯಕ್ಕಾಗಿ ಹೋರಾಡಿ. ನಮಗೆ ವಿಶ್ವವಿದ್ಯಾಲಯದ ಪದವಿಗಳು ಬೇಕೆ? ಅವಿವೇಕ, ಅಸಂಬದ್ಧ, ಹುಚ್ಚುತನ. ಕೊನೆಯ ಪದವಿಯು ಸ್ವಯಂ ಅನುಗೃಹೀತವಾಗಿರಬೇಕು.

ಕನಸಿನಲ್ಲಿ ಕಂಡ ಹುಲಿಯನ್ನು ಸೋಲಿಸಿ ಕೊಲ್ಲುವುದಕ್ಕೆ ಕನಸಿನಲ್ಲಿ ತಯಾರಾದ ಕತ್ತಿಯೇ ಸಾಕು;—ಎನ್ನುವದು ಸತ್ಯ. ಆದರೆ ಎಚ್ಚರದ ದೃಷ್ಟಿಯಿಂದ ಸ್ವಪ್ನಲೋಕದ

ಕತ್ತಿಗೂ ಹುಲಿಗೂ ಬೆಲೆಯಿಲ್ಲ. ಲೌಕಿಕ ವಿಜ್ಞಾನ ಶಾಸ್ತ್ರಗಳ ಮತ್ತು ಕಲೆಗಳ ಹಣೆಯ ಬರಹವೂ ಇಷ್ಟೇ. ಪ್ರಪಂಚ ಜ್ಞಾನ ಮತ್ತು ಉಪಯುಕ್ತತೆಗಳ ದೃಷ್ಟಿಯಿಂದ ಅವು ಎಷ್ಟೇ ಅನಿವಾರ್ಯವಾಗಲೀ ದಿವ್ಯವಾದ ಅಧ್ಯಾತ್ಮಜ್ಞಾನದ ಎಚ್ಚರದಲ್ಲಿ ಅವುಗಳಿಗೆ ಯಾವ ಬೆಲೆಯೂ ಇಲ್ಲ. ವಿಶ್ವವಿದ್ಯಾಲಯದ ಪದವಿಗಳು, ಪ್ರಶಸ್ತಿಗಳು, ಯೋಗ್ಯತಾಪತ್ರಗಳು, ಬಿರುದುಗಳು, ಗೌರವ ಪದವಿಗಳು ಮತ್ತು ಇತರ ಮಾನಸಿಕ ಆಸ್ತಿಗಳು—ಇವೇ ಮೊದಲಾದ ಬೌದ್ಧಿಕ ಬಂಡವಾಳಕ್ಕೆ ಅತಿರೇಕ ವಾದ ಮಾನ್ಯತೆಯನ್ನೂ ಗೌರವವನ್ನೂ ಕೊಡುವದೇ ಆತ್ಮಾನುಭವದ ದಾರಿ ಯಲ್ಲಿರುವ ದೊಡ್ಡ ಎಡವುಗಲ್ಲುಗಳಲ್ಲಿ ಒಂದು. ಆತ್ಮಾನುಭವಿಯಾದ ನೆತ್ಪುರು ಷನಿಗೆ, ಪ್ರಪಂಚವು, ಪರಸ್ಪರ ಸೂಚನೆಗಳಿಂದಲೂ ಭಾವನೆಗಳಿಂದಲೂ ಸಂಭಾವನೆ ಗಳಿಂದಲೂ ತಾವೇ ಕಲ್ಪಿಸಿಕೊಂಡಿರುವ ಹುಚ್ಚು ಸಂತೆಯ ಜನರ ಅಜ್ಞಾನ ಮೋಹದ ಸೃಷ್ಟಿಮಾತ್ರವಾಗಿ ತೋರುತ್ತದೆ. ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳೂ ಸುಮ್ಮನೆ ವಶ್ಯಸುಪ್ತಿಯಲ್ಲಿರುವವನು ಒಣನೆಲದ ಮೇಲೆ ಸೃಷ್ಟಿಮಾಡಿ ಕೊಂಡಿರುವ ಸರೋವರಗಳಂತೆ ಇವೆ. ಡಾಕ್ಟರುಗಳೂ ಪ್ರೊಫೆಸರುಗಳೂ ಜಂಬ ಕೊಚ್ಚಿಕೊಂಡು ತಾವೇ ಶ್ರೇಷ್ಠರೆಂದು ಮೆರೆಯುವುದಕ್ಕೆ ಕಾರಣವಾದ ಆ ವಸ್ತುಗಳ ಜ್ಞಾನವೂ ವಶ್ಯಸುಪ್ತಿಯಲ್ಲಿರುವವನ [Hypnotism] ಜ್ಞಾನಕ್ಕಿಂತಲೂ-ಭ್ರಾಂತಿ ಗಿಂತಲೂ-ಹೆಚ್ಚಿನದೇನಲ್ಲ. ಜಗತ್ತು ಮೂಲತಃ ಆಕಾಶದ್ರವ್ಯದಿಂದಾಗಿರುವದರಿಂದ ಈ ಜನರ ಜ್ಞಾನವೂ "ಈಥರ್" ಸ್ವಭಾವದಂತೆ ಕಾಲ್ಪನಿಕವಾದುದು. ಎಲ್ಲಾ ಪ್ರಾಪಂ ಚಿಕ ವಿಲಾಸದ ಮೂಲ ಉಗಮಕ್ಕೆ ಏರಿದ ಆತ್ಮಾನುಭವಿಯಾದ ಪುರುಷನಿಗೆ ಸೂರ್ಯ-ಚಂದ್ರ-ನಕ್ಷತ್ರಾದಿ ಮಹಾ ಮಹಾ ಗ್ರಹಗೋಳಗಳೂ ನದಿಗಳೂ ಪರ್ವತಗಳೂ ಇವು ಯಾವವೂ ಆಶ್ಚರ್ಯಕರವಾಗಿ ತೋರುವದಿಲ್ಲ ಮತ್ತು ಖಗೋಳ ಶಾಸ್ತ್ರಜ್ಞರೂ ಗಣಿತ ಶಾಸ್ತ್ರಜ್ಞರೂ ಭೂವಿಜ್ಞಾನ ಶಾಸ್ತ್ರಜ್ಞರೂ ಪ್ರಾಣಿ ಶಾಸ್ತ್ರಜ್ಞರೂ ಸಸ್ಯಶಾಸ್ತ್ರಜ್ಞರೂ ಪಡೆದಿರುವ ಬಗೆಬಗೆಯ ಪ್ರಕೃತಿವಿಲಾಸಗಳ ಜ್ಞಾನವು ಹುಡುಗಾಟವೂ ವಿನೋದವೂ ತಮಾಷೆಯೂ ಆಗಿರುವದಕ್ಕಿಂತಲೂ ಹೆಚ್ಚು ಬೆಲೆಯುಳ್ಳದೆಂದು ಆತ್ಮಾನುಭವಿಗೆ ತೋರುವದಿಲ್ಲ. ಪ್ರಾಪಂಚಿಕ ವಸ್ತುಗಳನ್ನು ತಮ್ಮ ಸ್ವತ್ತಾಗಿ ಪಡೆದಿರುವ [ಬಂಡವಾಳಶಾಹಿ] ಜನರೂ ಆ ವಸ್ತುಗಳ ಜ್ಞಾನ ವನ್ನು ಪಡೆದಿರುವ ವಿಜ್ಞಾನಿಗಳೂ ಆ ವಸ್ತುಗಳಿರುವ ಮಟ್ಟದಲ್ಲಿಯೇ ಸಮಭೂಮಿಯಲ್ಲಿ ಯೇ ಇರುವದರಿಂದ ಇಂದ್ರಿಯ ಗೋಚರ ವಿಷಯಗಳಲ್ಲಿಯೇ ತೊಳಲಾಡುತ್ತಿರುವವ ರಾಗಿದ್ದಾರೆ. ಡಾಕ್ಟರುಗಳೂ ಪ್ರೊಫೆಸರ್‌ಗಳೂ ತತ್ತ್ವಶಾಸ್ತ್ರವೇತ್ತರೂ—ಇವರುಗಳ ಆಗ್ರಹಗಳೂ ಅನುಗ್ರಹಗಳೂ ಆಕ್ಷೇಪಗಳೂ ಸೂಚನೆಗಳೂ ಆತ್ಮಾನುಭವಿಗೆ ಅಲಕ್ಷ್ಯವೂ ಅರ್ಥಶೂನ್ಯವೂ ಆಗುತ್ತವೆ. ಸಾಮಾನ್ಯವಾಗಿ ವಿಶ್ವವಿದ್ಯಾನಿಲಯಗಳೂ ಪ್ರದರ್ಶನ ಗಳೂ ಸಂತೆಗಳೂ ಜಾತ್ರೆಗಳೂ ಭ್ರಮೆಯನ್ನು ಬೆಳೆಸತಕ್ಕ ಸಾಧನಗಳೇ ಆಗಿವೆ. ಸಾಮಾನ್ಯ ನಿಯಮವಾಗಿ ಚರ್ಚ್‌ಗಳೂ ದೇವಾಲಯಗಳೂ ಗೋಷ್ಠಿಗಳೂ ಸಭೆಗಳೂ

ಮೋಹನ ವಿದ್ಯೆಯಿಂದ ಪ್ರೇರಿತವಾದ ಜಗತ್ತಿನ ನಿದ್ರೆಯನ್ನು ಬೆಳೆಸತಕ್ಕ ಸಾಧನಗಳೇ ಆಗಿವೆ. ಸೂರ್ಯನು ಮಂಜುಗಡ್ಡೆಯಷ್ಟು ತಣ್ಣಗಾದರೂ ಅಥವಾ ಚಂದ್ರನು ಸೂರ್ಯನಿಗಿಂತಲೂ ಬಹಳ ಹೆಚ್ಚಿನ ಉಷ್ಣತೆಯನ್ನು ಪಡೆದರೂ ಬೆಂಕಿಯ ಉರಿಯು ಕೆಳಗಿನಿಂದ ಮೇಲಕ್ಕೆ ಏರುವದಕ್ಕೆ ಬದಲು ಮೇಲಿನಿಂದ ಕೆಳಕ್ಕೆ ಇಳಿದರೂ ಆಕಾಶವೆಲ್ಲಾ ಕಾಗದದ ಸುರುಳಿಯಂತೆ ಸುತ್ತಿ ಎಸೆಯಲ್ಪಟ್ಟರೂ ಜೀವನ್ಮುಕ್ತನು ಆಶ್ಚರ್ಯಪಡುವದಿಲ್ಲ.

ಬ್ರಾಹ್ಮಣರು ಪ್ರಪಂಚವನ್ನು ಆಳುತ್ತಿದ್ದ ಕಾಲವೊಂದಿತ್ತು. ಕ್ಷತ್ರಿಯರು ತಮ್ಮ ಕ್ಷಾತ್ರಧರ್ಮದಿಂದ ರಾಜ್ಯವಾಳಿದ ಕಾಲವೂ ಇತ್ತು. ಇದು ವೈಶ್ಯರು [ಬಂಡವಾಳಶಾಹಿಗಳು] ಪ್ರಭುತ್ವ ನಡೆಸುತ್ತಿರುವ ಕಾಲವಾಗಿದೆ. ಇದರ ಅನಂತರ ತ್ಯಾಗಶೀಲರಾದ [ಸಂನ್ಯಾಸ ಭಾವದಿಂದ ಅನುಗೃಹೀತರಾದ] ಶೂದ್ರರಲ್ಲಿ ಶ್ರಮ ಜೀವಿಗಳ ಪರಮಾಧಿಕಾರವು ನಡೆಯುವ ಕಾಲವು ಬರುತ್ತದೆ.

ಯೂರೋಪ್ ಅಮೇರಿಕ ದೇಶಗಳಲ್ಲಿ ಕಾರ್ಮಿಕರಾದ ಶೂದ್ರರು ಆನುವಂಶಿಕವಾದ ನಿಯಮದಿಂದಲೂ ಧಾರ್ಮಿಕ ವಿಧಿಗಳಿಂದಲೂ ಬದಲಾಯಿಸುವದಕ್ಕೆ ಸಾಧ್ಯವಾಗದ ರೀತಿಯಲ್ಲಿ ಸ್ಥಿರತೆಯುಳ್ಳವರಾಗಿಯೂ ಗಡುಸಾಗಿಯೂ ದೃಢವಾಗಿಯೂ ಇಲ್ಲ. ಆದರೂ ಅವರ ವಿಷಯವು ಬಹಳ ಅತೃಪ್ತಿಕರವಾಗಿದೆ. ಇಂಡಿಯಾ ದೇಶದಲ್ಲಿ ಜಾತಿ ಪದ್ಧತಿಯು ಈ ಅನರ್ಥವನ್ನೂ ಅನ್ಯಾಯವನ್ನೂ ಎರಡರಷ್ಟು ಹೆಚ್ಚಿಸಿ ಎಲ್ಲಾ ಪಕ್ಷದವರ ಆತ್ಮವಂಚನೆಯನ್ನು ಬೆಳೆಸುವದಕ್ಕೂ ಸಹಾಯ ಮಾಡಿದೆ. ಇದು ಮುಷ್ಕರಗಳನ್ನು ತಪ್ಪಿಸುತ್ತದೆ; ಆದರೆ ಇಡೀ ರಾಷ್ಟ್ರವನ್ನು ತಿಳಿಗೇಡಿ ಕುರಿಗಳಿಗಿಂತಲೂ ಹೆಚ್ಚು ಸಹಾಯಶೂನ್ಯರನ್ನಾಗಿಯೂ ಹೇಡಿಗಳನ್ನಾಗಿಯೂ ಮಾಡುತ್ತದೆ.

ಇದುವರೆಗೆ ವೇದಾಂತವು ಕೆಲವು ಜನರ ಮಾತ್ರದ ಪ್ರತ್ಯೇಕ ಆಸ್ತಿಯಾಗಿದೆ. ಅದು ಬಹಳವಾಗಿ ಬೌದ್ಧಿಕ ಭೂಮಿಕೆಯಲ್ಲಿಯೇ ಜೀವಿಸಿದೆ. ಈ ಶಿಶುವು ಬಹಳ ಹಿಂದೆಯೇ ಗರ್ಭಧಾರಣೆಯಾಗಿ [ಹಿಮಾಲಯದ] ಭೂಗರ್ಭದಲ್ಲಿ ಅಡಗಿದ್ದು, ಕಡೆಗೆ ಪವಿತ್ರಗಂಗೆಯೋಪಾದಿಯಲ್ಲಿ ಕೆಳಗೆ ಮೈದಾನಗಳಿಗೆ ಹರಿದು ಬಂದು, ಬ್ರಾಹ್ಮಣರನ್ನೂ ಶೂದ್ರರನ್ನೂ ಸಮಾನವಾಗಿಯೇ ತೊಳೆದು, ಎಲ್ಲಾ ಅಸ್ವಾಭಾವಿಕ ಭೇದಗಳನ್ನೂ ಕೊಚ್ಚಿ ಹಾಕಿ, ಮಾನವರನ್ನೂ ದೇವತೆಗಳನ್ನೂ ಪವಿತ್ರ ಮಾಡುತ್ತದೆ. ಮನುಷ್ಯನು ವ್ಯವಸ್ಥಿತ ಅಂಗರಚನೆಯುಳ್ಳವನೆಂದು ನಾವು ವಿರಳವಾಗಿ ಭಾವಿಸುತ್ತೇವೆ. ನೀವು ನಿಯಮಿತವಾದ ಆಹಾರವನ್ನು ಅರಿವಿನಿಂದಲೇ ತೆಗೆದುಕೊಂಡರೂ ಅದು ಜೀರ್ಣವಾಗಿ ಆಹಾರ ಸತ್ತ್ವವು ದೇಹದ ಬೇರೆ ಬೇರೆ ಅಂಗಾಂಗಗಳಿಗೆಲ್ಲಾ ನಿಮಗರಿವಿಲ್ಲದೆ ತಾನಾಗಿಯೇ ಹಂಚಿ ಹೋಗುವಂತೆ, ನೀವು ಏಕತ್ವದಲ್ಲಿಯೂ ಅಖಂಡತೆಯಲ್ಲಿಯೂ ಸಮಗ್ರತೆಯಲ್ಲಿಯೂ ಪ್ರೇಮದಲ್ಲಿಯೂ ದೇವತ್ವದಲ್ಲಿಯೂ ಮನಃಪೂರ್ವಕವಾಗಿ ಸಂಯಮ ಮಾಡುವಾಗ ಭಿನ್ನತೆಯೂ ಉಚಿತವಾದ ಬದಲಾವಣೆಯೂ ತಾವಾಗಿಯೇ ಸುಸಂಗತವಾಗಿ ವ್ಯವಸ್ಥಿತವಾಗುತ್ತವೆ.

ಇಂಡಿಯಾ ದೇಶದ ಓ ರಾಜರೇ ಬ್ರಾಹ್ಮಣರೇ ಶೂದ್ರರೇ ಮತ್ತು ಆಳುವ ವರ್ಗಗಳೇ ! ಮುಂದೆ ಕೆಲವು ವರ್ಷಗಳಲ್ಲಿ ಪ್ರಪಂಚದ ಸ್ಥಿತಿಯು ಏನಾಗಿರುತ್ತದೆ ಎಂಬ ದನ್ನು ಊಹಿಸಬಲ್ಲಿರಾ ? ಈ ಪ್ರಶ್ನೆಯು ಬಹಳ ವಿಲಕ್ಷಣವೂ ಕುತೂಹಲಕರವೂ ಆಗಿ ನಿಮಗೆ ತೋರಬಹುದು. ಆದರೂ ಮನುಷ್ಯನ ಈ ಮಣ್ಣಿನ ವರ್ಗೀಕರಣವೆಲ್ಲಾ ಕೊಚ್ಚಿಹೋಗಿ, ಭೂಮಿಯ ಮೇಲೆ ದೇವತೆಗಳು ಓಡಾಡುತ್ತಿರುವ ಒಂದು ಸ್ವಾಮಿಗಳ ಪ್ರಪಂಚವನ್ನು ರಾಮನು ತನ್ನ ಮುಂದೆ ನೋಡುತ್ತಾನೆ. ಇಂಡಿಯಾ ಚೈನಾ ಅಮೆರಿಕಾ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಭೇದಗಳೆಲ್ಲಾ ಕರಗಿ ಹೋಗಿ, ತಮ್ಮ ಸರ್ತಿಯಲ್ಲಿ ಪುನಃ ಕರಗಿ ಹೋಗುವದಕ್ಕಾಗಿ ಹೊಸ ಹರಳುಗಳು ಉತ್ಪತ್ತಿಯಾಗುತ್ತವೆ.

ಓ ಕನಸು ಕಾಣುತ್ತಿರುವ ಪ್ರಿಯತಮರೆ ! ನಿಮ್ಮ ಕಣ್ಣುಗಳಿಂದ ಪೊರೆಯನ್ನು ಕತ್ತರಿಸಿ ಹಾಕಿ; ಅತ್ಯಂತ ನಿಮ್ನ ಜಾತಿಯು ಶೂದ್ರರೊಡನೆ ಅತ್ಯಂತ ಉನ್ನತ ಸಂನ್ಯಾಸಿಗಳು ಕೈಗೆ ಕೈಸೇರಿಸಿ ಸಹಕರಿಸುವುದನ್ನು ನೋಡಿ. ಅಗೋ ನೋಡಿ ! ಸಂನ್ಯಾಸಿಯ ಭಿಕ್ಷಾ ಪಾತ್ರವು ಎಲೆಗುದ್ದಲಿಯಾಗಿಯೋ ಕಳೆಗುದ್ದಲಿಯಾಗಿಯೋ ಪರಿವರ್ತನೆಯಾಗುವದನ್ನು ನೋಡುವಿರಿ. ಸೋಮಾರಿತನವನ್ನು ಬಿಟ್ಟ ಸಂನ್ಯಾಸಿಯೂ ಸಂನ್ಯಾಸದ ಘನತೆಗೇರಿ ಸಲ್ಪಟ್ಟ ಶೂದ್ರಕರ್ಮವೂ ಎಲ್ಲರನ್ನೂ ಉತ್ತೇಜಿಸುತ್ತಿರುವ ತ್ಯಾಗ ಮನೋಭಾವವೂ ವೇಶ್ಯಾಂಗನೆಯ ನಿರ್ಲಜ್ಜ ಧೈರ್ಯದೊಡನೆ ಮಿಶ್ರವಾದ ರಾಮನ ಪವಿತ್ರತೆಯೂ ಸಿಂಹದ ನಿಶ್ಚಿತ ನಿರ್ಭಯತೆಯೊಡನೆ ಲಗ್ನವಾದ ಕುರಿಯ ಕೋಮಲತೆಯೂ—ಹೀಗೆ ಅತಿರೇಕಗಳು ಸಂಧಿಸುವದರಿಂದ ಮಧ್ಯದ ಅಸ್ವಾಭಾವಿಕ ಭೇದಗಳೆಲ್ಲಾ ಕರಗಿ ಹೋಗಿ ಇಡೀ ಪ್ರಪಂಚವು ಒಂದು ಕುಟುಂಬವಾಗುತ್ತದೆ. ಇದನ್ನೆಲ್ಲಾ ನೋಡಿ; ಅಗೋ ಅಲ್ಲಿ ಮುಂದೆ ನೋಡಿ.

ನಮಗೆ ಖಡ್ಗ ಬೇಕೋ ಬೆಂಕಿ ಬೇಕೋ ? ಯಾವದೂ ಬೇಡ; ಪೊಲೀಸ್ ಬೇಕೆ ? ಅದೂ ಬೇಡ. ಇದೊಂದು ಕಾರ್ಯಸಾಧ್ಯವಲ್ಲದ ಆದರ್ಶವೋ ? ಸ್ವಪ್ನ ಸಾಮ್ರಾಜ್ಯವೋ ? ಅಲ್ಲ. ಹುರುಳಿಲ್ಲದ ಚಿತ್ತ ಭ್ರಾಂತಿಯೋ ? ಅಲ್ಲ. ಕಮ್ಯೂನಿಸಂ ? ಸಮತಾವಾದವೋ ? ಸೋಷಿಯಾಲಿಸಂ ? ಸಮಾಜ ಸಮತಾವಾದವೋ ? ಇರಬಹುದು. ಆದರೆ, ಇಂಡಿಯಾ ದೇಶಕ್ಕೆ ವೇದಾಂತದ ಅತ್ಯಂತ ಸ್ವಾಭಾವಿಕವಾದ ಪ್ರಯೋಗ—ದೇಶೀಯ ಬೆಳವಣಿಗೆ-ಆಗಬೇಕು. ಓ ಭಾರತೀಯರೆ ? ನಿಮ್ಮನ್ನು ನೀವು ತಿಳಿದು, ಈ ತ್ಯಾಗಜೀವನವನ್ನು ನಡೆಸಿದರೆ, ರೋಗವೆಲ್ಲಿರುತ್ತದೆ ? ಮಾನಸಿಕವಾದ ರೋಗವು ಹೋಯಿತೆಂದರೆ, ಭೌತಿಕ ರೋಗವೂ ಓಡಿ ಹೋಗಿಯೇ ಹೋಗುತ್ತದೆ. ಇದರಲ್ಲಿ ಮೋಸದ, ಒಳಸಂಚಿನ ಕಾರ್ಯವೇನೂ ಅಗತ್ಯವಿಲ್ಲ; ರಾಜಕೀಯ ನೈಪುಣ್ಯ ವಾಗಲಿ, ವ್ಯವಹಾರಚಾತುರ್ಯವಾಗಲೀ ಸಂದೇಹವಾಗಲೀ ಭಯವಾಗಲೀ ಅವಶ್ಯವಿಲ್ಲ. ಅವೆಲ್ಲಾ ಹೇಡಿಗಳಾದ ದೇವಘಾತಕರಿಗೆ ಇರಲಿ.

"ನಾನು ರಾಮ ಸಾರ್ವಭೌಮ; ನಿಮ್ಮ ಹೃದಯವೇ ಅವನ ಸಿಂಹಾಸನವು. ವೇದಗಳಲ್ಲಿ ನಾನು ಉಪದೇಶಿಸಿದಾಗಲೂ ಕುರುಕ್ಷೇತ್ರದಲ್ಲಿಯೂ ಜೆರೂಸಲೇಂನಲ್ಲಿಯೂ ಮೆಕ್ಕಾದಲ್ಲಿಯೂ ನಾನು ಬೋಧಿಸಿದಾಗಲೂ ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ತಪ್ಪಾಗಿ ತಿಳಿದುಕೊಂಡರು. ನಾನು ಪುನಃ ನನ್ನ ಧ್ವನಿಯನ್ನು ಎತ್ತುತ್ತೇನೆ. ನನ್ನ ಧ್ವನಿಯೇ ನಿಮ್ಮ ಧ್ವನಿಯು. ತತ್ತ್ವಮಸಿ ನೀವು ನೋಡುವುದೆಲ್ಲಾ ನೀವೇ ಆಗಿದ್ದೀರಿ.

ನಿಮ್ಮಲ್ಲಿ ಕೆಲವರು ಹುಬ್ಬುಗಂಟಿಕ್ಕಿ ಮುಖವನ್ನು ಸಿಂಡರಿಸಿಕೊಳ್ಳುತ್ತಿದ್ದೀರಿ. ಕೆಲವರು ನಿಮ್ಮ ಮೂಗುಗಳನ್ನು ಮೂವತ್ತು ಅಂಶಗಳ ಕೋನಕ್ಕೆ ಸೊಟ್ಟ ತಿರುಗಿಸಿಕೊಂಡಿದ್ದೀರಿ. ಕೆಲವರು ಬೇಸರದಿಂದ ಕಾಗದವನ್ನು ಎಸೆದಿದ್ದೀರಿ. ನೀವು ಏನಾದರೂ ಮಾಡಬಹುದು; ಆದರೆ ಈಶ್ವರೀ ಸಂಕಲ್ಪವು, ದೈವ ನಿಯಾಮಕವು ತನ್ನ ಕೆಲಸ ಮಾಡಲೇ ಬೇಕು; ಮಾಡಿಯೇ ಮಾಡುತ್ತದೆ. ಯಾವ ಶಕ್ತಿಯೂ ರಾಜರೂ ದೇವತೆಗಳೂ ದೆವ್ವಗಳೂ ಅದನ್ನು ತಡೆಗಟ್ಟಲಾರರು. ಸತ್ಯದ ಆಜ್ಞೆಯನ್ನು ತಪ್ಪಿಸಿಕೊಳ್ಳುವದೇ ಸಾಧ್ಯವಿಲ್ಲ. ಎದೆಗೆಡಬೇಡಿ. ರಾಮನ ತಲೆಯೇ ನಿಮ್ಮ ತಲೆ. ನಿಮಗೆ ಬೇಕಾದರೆ ಅದನ್ನು ಕತ್ತರಿಸಿರಿ; ಆದರೆ ಅದರ ಸ್ಥಳದಲ್ಲಿ ಬೇರೆ ಸಾವಿರಾರು ತಲೆಗಳು ಬೆಳೆಯುತ್ತವೆ.

ಷಾಮ್ಸ್ ಟ್ಯಾಬ್ರಿಸ್ ಇದೇ ರಾಗವನ್ನೇ ಹಾಡಿದ್ದಾನೆ. ಪಂಜಾಬಿನ ಪ್ರಿಯ ಬುಲ್ಲಾಷಾ ಮತ್ತು ಗೋಪಾಲಸಿಂಗ್ ಇದನ್ನೇ ಹಾಡಿದ್ದಾರೆ! ಜೀಸಸ್ಸನು ಇದೇ ಸತ್ಯವನ್ನೇ ತೊದಲು ನುಡಿಯಿಂದ ಹೇಳಿದನು! ಮಹಮ್ಮದನೂ ಇದೇ ಬಾಲಚಂದ್ರನನ್ನೇ ನೋಡಿದನು! ಅವೆಲ್ಲಾ ನನಗೆ ಮುಖ್ಯವಲ್ಲ. ರಾಮನ [Id] ಸಹಜಪ್ರವೃತ್ತಿಯು, ಅವನು ಆಕಯನ್ನು ನೋಡಿದಾಗ ಬರುತ್ತದೆ. ಹಳೆಯ ಸತ್ಯವು ಯಾವಾಗಲೂ ಹೊಸದೇ. ನಿಮಗೇ ಅನುಭವ ಬಂದಾಗ ನಿಮ್ಮ [Id] ಸಹಜಪ್ರವೃತ್ತಿಯು ಬರುತ್ತದೆ. ನೀವು ವಿವೇಕದಿಂದ ಎಚ್ಚರಗೊಂಡು ಆತ್ಮನನ್ನು ಅಥವಾ ದೇವರನ್ನು ಅಥವಾ ಸತ್ಯವನ್ನು ಅರಿತಕೂಡಲೇ-ಆ ಕ್ಷಣವೇ—ಎಲ್ಲಾ ಪ್ರವಾದಿಗಳೂ ಧರ್ಮಸ್ಥಾಪಕರೂ ಮತಾಚಾರ್ಯರೂ ಮಹಾತ್ಮರೂ ನಿಮ್ಮ ಅಜ್ಞಾನದಿಂದ ಕಲ್ಪಿತರಾದ ವೀರರೂ ನಿಮ್ಮಲ್ಲಿಯೇ ಮುಳುಗಿ ಹೋಗುತ್ತಾರೆ; ಅವರೆಲ್ಲಾ ನಿಮ್ಮ ಸ್ವರೂಪರೇ ಎಂಬುದನ್ನು ಕಂಡುಕೊಳ್ಳುತ್ತೀರಿ.

ಓಂ! ಓಂ! ಓಂ!

# REFORMER
# ಸುಧಾರಕ

ಎತ್ತರಕೆ. ಎತ್ತರಕೆ ಇನ್ನೂ ಹೆಚ್ಚು ಎತ್ತರಕೆ,
ನೀ ಭೂಮಿಯಿಂದ ಮೇಲೇರಿ ಚಿಮ್ಮುತಿರುವೆ;
ಬೆಂಕಿಯಾ ಮೋಡದಂತೆ, ನೀನುತ್ತರಕೆ
ನೀಲಾಕಾಶದಲಿ ದೂರ ಹಾರುತಿರುವೆ:
ಹಾಡುತಲಿ ನೀ ಜಿಗಿಯುತಿನ್ನು ಏರುತಿರುವೆ,
ಏರುತಲಿ ನಿಲ್ಲದಿರುತೆಂದೆಂದು ಹಾಡುತಿರುವೆ.

—ಷೆಲ್ಲಿ.

## ಪವಿತ್ರವಾದ ನೆರಳು

ಬಹಳ ಕಾಲದ ಹಿಂದೆ ಬಹಳ ಒಳ್ಳೆ ಯುವಕನಾದ ಒಬ್ಬ ಮಹಾತ್ಮನಿದ್ದನು. ಇದನ್ನು ತಿಳಿದು ಆಶ್ಚರ್ಯಚಕಿತರಾದ ದೇವತೆಗಳು, ಒಬ್ಬ ಸಾಮಾನ್ಯ ಮರ್ತ್ಯನು ಇಷ್ಟು ದೈವೀ ಸಂಪತ್ಸಮೃದ್ಧನಾಗಿರುವುದು ಹೇಗೆ ಸಾಧ್ಯವೋ ನೋಡಬೇಕೆಂದು ಸ್ವರ್ಗದಿಂದ ಇಳಿದು ಬಂದರು. ನಕ್ಷತ್ರವು ಬೆಳಕನ್ನೂ ಹೂವು ಪರಿಮಳವನ್ನೂ ಅರಿವಿಲ್ಲದೆ ಚೆಲ್ಲುತ್ತಿರುವಂತೆ ಅವನು ತನ್ನ ನಿತ್ಯ ಜೀವನದಲ್ಲಿ ಸುಮ್ಮನೆ ಸದ್ಗುಣಗಳನ್ನು ಪ್ರಸರಿಸುತ್ತಾ ಹೋಗುತ್ತಿದ್ದನು.

" He gave. he forgave " ಅವನು ಕೊಟ್ಟನು, ಕ್ಷಮಿಸಿಬಿಟ್ಟನು" "ಅವನು ದಾನ ಮಾಡಿದನು; ಕ್ಷಮಾದಾನ ಮಾಡಿದನು." ಈ ಎರಡು ಶಬ್ದಗಳು ಅವನ ನಿತ್ಯ ಜೀವನ ಧರ್ಮವನ್ನು ಸಾರಭೂತವಾಗಿ ಸಂಗ್ರಹಿಸುವಂತಿದ್ದವು. ಆದರೂ ಶಬ್ದಗಳು ಎಂದೂ ಅವನ ಬಾಯಿಯಿಂದ ಹೊರ ಬೀಳುತ್ತಿರಲಿಲ್ಲ. ಯಾವಾಗಲೂ ಸಿದ್ಧವಾಗಿರುತ್ತಿದ್ದ ನಗೆ, ದಯೆ, ಸಹನೆ ಮತ್ತು ದಾನ ಇವುಗಳ ಮೂಲಕ ಆ ಶಬ್ದಾರ್ಥವು ವ್ಯಕ್ತವಾಗುತ್ತಿದ್ದಿತು.

ದೇವತೆಗಳು ದೇವರಿಗೆ ಹೇಳಿದರು: "ಓ ಪ್ರಭುವೆ, ಇವನಿಗೆ ಸಿದ್ಧಿಗಳನ್ನು ಅನುಗ್ರಹಿಸು."

ದೇವರು ಹೇಳಿದರು: "ಆಗಲಿ. ಅವನಿಗೇನು ಬೇಕು ಕೇಳಿ."

ಅವರು ಆ ಮಹಾತ್ಮನಿಗೆ ಹೇಳಿದರು: "ನಿನ್ನ ಹಸ್ತಸ್ಪರ್ಶದಿಂದ ಯಾವ ರೋಗವಾದರೂ ಗುಣವಾಗಬೇಕೆಂದು ನೀನು ಇಚ್ಛಿಸುವೆಯ ?"

ಆ ಮಹಾತ್ಮನು ಹೇಳಿದನು : "ಇಲ್ಲ. ಆ ಕಾರ್ಯವನ್ನು ದೇವರು ಮಾಡಬೇಕೆಂದು ಬೇಡುವೆನು."

"ಪಾಪಿಗಳ ಹೃದಯವನ್ನು ಪರಿವರ್ತನೆಮಾಡಿ ಅವರನ್ನು ಸರಿಯಾದ ದಾರಿಯಲ್ಲಿ ನಡೆಸಬೇಕೆಂದು ಬಯಸುವೆಯ ?"

"ಇಲ್ಲ ಅದು ದೇವತೆಗಳ ಕರ್ತವ್ಯವು ; ನಾನು ಸುಮ್ಮನೆ ಪ್ರಾರ್ಥಿಸುವೆನು ; ಪರಿವರ್ತನೆ ಮಾಡುವುದಿಲ್ಲ."

"ನಿನ್ನ ಸದ್ಗುಣಗಳ ಪ್ರಭೆಯಿಂದ ಜನರನ್ನು ಆಕರ್ಷಿಸಿ ಸಮಾಧಾನದ ಒಂದು ಆದರ್ಶವಾಗಬೇಕೆಂದೂ ಇದರಿಂದ ದೇವರ ಮಹಿಮೆಯನ್ನು ತೋರಿಸಬೇಕೆಂದೂ ನಿನಗೆ ಇಷ್ಟವಿದೆಯೇ ?"

"ಇಲ್ಲ ; ನನ್ನಲ್ಲಿಗೆ ಜನರು ಆಕರ್ಷಿತರಾದರೆ, ಅವರು ದೇವರಿಂದ ದೂರವಾಗುತ್ತಾರೆ ; ಪರಕೀಯರಾಗುತ್ತಾರೆ. ತನ್ನ ಮಹಿಮೆಯನ್ನು ತೋರಿಸುವುದಕ್ಕೆ ದೇವರಿಗೆ ಬೇರೆ ಮಾರ್ಗಗಳಿವೆ."

"ಹಾಗಾದರೆ ನಿನ್ನ ಇಚ್ಛೆ ಏನು ?" ಎಂದು ದೇವತೆಗಳು ಕೇಳಿದರು.

"ನಾನು ಏನನ್ನು ಬಯಸಬೇಕು ?" ಎಂದವನು ನಗುತ್ತಾ ಕೇಳಿದನು. "ದೇವರ ಅನುಗ್ರಹ ಒಂದಿದ್ದರೆ, ಅದರಿಂದ ಎಲ್ಲವೂ ಪ್ರಾಪ್ತಿಯಾಗಬೇಕಲ್ಲವೆ ?"

ಆದರ, ದೇವತೆಗಳು, "ನೀನು ಯಾವುದಾದರೂ ಒಂದು ಸಿದ್ಧಿಯನ್ನು ಕೇಳಲೇಬೇಕು ; ಇಲ್ಲವಾದರೆ ಯಾವುದಾದರೊಂದು ಸಿದ್ಧಿಯನ್ನು ನಿನ್ನ ಮೇಲೆ ಒತ್ತಾಯದಿಂದ ನೀಡುತ್ತೇವೆ" ಎಂದರು. ಆಗ ಆ ಮಹಾತ್ಮನು ಹೇಳಿದ "ಒಳ್ಳೆಯದು; ನಾನೆಂದೂ ಅರಿಯದಂತೆ ನಾನೆಂದೆಂದಿಗೂ ಮಹತ್ತಾದ ಒಳ್ಳೆಯದನ್ನೇ ಮಾಡುತ್ತಿರಬೇಕು."

ದೇವತೆಗಳಿಗೆ ಬಹಳ ದಿಗ್ಭ್ರಮೆಯಾಯಿತು. ಅವರೆಲ್ಲರೂ ಕೂಡಿ ಆಲೋಚನೆ ಮಾಡಿ, ಈ ಮುಂದಿನ ಯೋಜನೆಯನ್ನು ನಿಶ್ಚಯಿಸಿದರು.

ಪ್ರತಿಯೊಂದು ಸಲವೂ ಆ ಮಹಾತ್ಮನ ನೆರಳು ಹಿಂದೆ ಬಿದ್ದರೂ ಯಾವ ಪಕ್ಕದಲ್ಲಿ ಬಿದ್ದರೂ ಅವನಿಗೆ ಕಾಣಬಾರದು ; ಆದರೆ ಅದು ಯಾರ ಮೇಲೆ ಬಿದ್ದರೂ ಅವರ ರೋಗವನ್ನು ಗುಣಪಡಿಸಬೇಕು; ನೋವನ್ನು ಕಳೆಯಬೇಕು; ದುಃಖವನ್ನು ಶಮನ ಮಾಡಬೇಕು; ಈ ಶಕ್ತಿ ಅವನ ನೆರಳಿನಲ್ಲಿರಬೇಕು.

ಅದು ಹಾಗೆಯೇ ಆಯಿತು. ಆ ಮಹಾತ್ಮನು ಹೋಗುತ್ತಿರುವಾಗ ಅವನ ಎಡಕ್ಕೋ ಬಲಕ್ಕೋ ಅಥವಾ ಹಿಂದಕ್ಕೋ ನೆಲದ ಮೇಲೆ ಬಿದ್ದ ಅವನ ನೆರಳು

ಒಣಗಿದ ಬೆಂಗಾಡು ದಾರಿಗಳನ್ನು ಹಚ್ಚ ಹಸುರಾಗಿಯೂ ಸೊರಗಿ ಸುರುಟಿ ಹೋದ ಗಿಡಗಳನ್ನು ಕಳೆತುಂಬಿ ಕುಸುಮಿತವಾಗಿ ನಳನಳಿಸುವಂತೆಯೂ ಬತ್ತಿಹೋಗಿದ್ದ ಹೊಳೆಗಳಲ್ಲಿ ನಿರ್ಮಲ ಜಲವು ಹರಿಯುವಂತೆಯೂ ಬಿಳಿಚಿ ಕೊಂಡ ಪುಟ್ಟ ಮಕ್ಕಳು ಹೊಸ ಕಾಂತಿಯಿಂದ ಕಳೆಗಟ್ಟಿ ನಲಿಯುವಂತೆಯೂ ದುಃಖಿತರಾಗಿದ್ದ ತಾಯಿಯರು ಸಂತೋಷದಿಂದ ಉಲ್ಲಸಿತರಾಗುವಂತೆಯೂ ಮಾಡಿತು.

ಆದರೆ ಆ ಮಹಾತ್ಮನು, ನಕ್ಷತ್ರವು ಬೆಳಕು ಚೆಲ್ಲುವಂತೆಯೂ ಹೂವು ಸುಗಂಧ ಬೀರುವಂತೆಯೂ ಸದ್ಗುಣ–ಸಚ್ಛೀಲಗಳ ಪುಣ್ಯಪುಂಜವನ್ನು ಹರಡುತ್ತಾ ಸುಮ್ಮನೆ ತನ್ನ ನಿತ್ಯಜೀವನದಲ್ಲಿ ತೊಡಗಿದ್ದನು.

ಜನರು ಅವನ ಸೌಜನ್ಯವನ್ನು ಗೌರವಿಸಿ. ಅವನ ಸಿದ್ಧಿಯ—ಪವಾಡಗಳ—ವಿಷಯವನ್ನೇನೂ ಅವನೊಡನೆ ಮಾತನಾಡದೆ, ಅವನನ್ನು ಮೌನವಾಗಿ ಅನುಸರಿಸುತ್ತಿದ್ದರು. ಕಾಲಾನುಕ್ರಮದಲ್ಲಿ ಜನರು ಅವನ ಹೆಸರನ್ನು ಸಹ ಮರೆತು, ಅವನನ್ನು "ಪವಿತ್ರವಾದ ನೆರಳು" ಎಂದೇ ಕರೆಯುತ್ತಿದ್ದರು.

"ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ"

ಸತ್ಯದ ಮಹತ್ತಿನ ಮುಂದೆ ಎಲ್ಲಾ ತೋರಿಕೆಗಳೂ ಮತ್ತು ವ್ಯಕ್ತಿಗಳ ಹಾಗೂ ಐಶ್ವರ್ಯಗಳ ವ್ಯರ್ಥವಾದ ಪ್ರದರ್ಶನಗಳೂ ಆವಿಯಾಗಿ ಶೂನ್ಯ ಪ್ರಾಯವಾಗುವಷ್ಟು ನಿಮ್ಮ ಶ್ರದ್ಧೆಯು ಸತ್ಯದ ವಿಷಯದಲ್ಲಿ ಅಪಾರವಾಗಿ ಬೆಳೆಯಲಿ. ಮತ್ತು "ಸತ್ಯವೇ ನಾನು, ಬ್ರಹ್ಮವೇ ನಾನು" ಎನ್ನುವ—ಸತ್ಯದಲ್ಲಿ ನಿಮ್ಮ—ತಾದಾತ್ಮ್ಯ ಭಾವವು ನೈಜವೂ ವಾಸ್ತವವೂ ಆದರೆ, ದ್ವೇಷ ಬಾಣಗಳು ನಿಮ್ಮನ್ನು ಭೇದಿಸಲಾರವು ; ಖಡ್ಗಮೃಗವು ತನ್ನ ಕೊಂಬನ್ನು ತೂರಿಸುವುದಕ್ಕೆ ನಿಮ್ಮಲ್ಲಿ ಜಾಗವೇ ಸಿಗಲಾರದು; ಹುಲಿಯು ತನ್ನ ಹಲ್ಲುಗಳನ್ನೂ ಪಂಜವನ್ನೂ ಊರಲು ಸತ್ಯಸ್ವರೂಪವಾದ ನಿಮ್ಮ ಶರೀರದಲ್ಲಿ ಅವಕಾಶವೇ ಸಿಕ್ಕಲಾರದು; ಖಡ್ಗವು ಇರಿದು ನುಗ್ಗಲು ನಿಮ್ಮ ಚಿನ್ಮಯದೇಹದಲ್ಲಿ ಸ್ಥಳವೇ ಇರಲಾರದು ; ನಿಮ್ಮ ದೇಹದ ಮೇಲೆ ಸುರಿಮಳೆಯಾಗುವ ಫಿರಂಗಿಯ ಗುಂಡುಗಳು ನಿಮ್ಮನ್ನು ಮುಟ್ಟಲಾರವು.

ಸತ್ಯ ಒಂದರೊಡನೆಯೇ ನಿಮ್ಮ ಒಪ್ಪಂದವಿರಬೇಕು. ನೀವು ಒಬ್ಬರೇ ಅಸಹಾಯಕರಾಗಿ ಸತ್ಯಕ್ಕಾಗಿ ಬದುಕಬೇಕು, ಸತ್ಯಕ್ಕಾಗಿ ಸಾಯಬೇಕು. ಸತ್ಯನಿಷ್ಠ ಜೀವನದ ಸ್ವರ್ಗೀಯ ಔನ್ನತ್ಯದಲ್ಲಿ ನೀವು ಒಬ್ಬರೇ ಉಳಿದರೂ ಧರ್ಮ ಸೂರ್ಯನೇ ನಿಮಗೆ ಸಾಕಷ್ಟು ಸತ್ಸಂಗವಾಗಬೇಕು. ನಿಮ್ಮ ಜೀವಂತ ಸಲಹೆಯನ್ನು ಪಡೆಯುವದಕ್ಕಾಗಿ ಹೊಳೆ ಹರಿದಂತೆ ಗೆಳೆಯರು ಹರಿದು ಬರಲು ತೊಡಗುತ್ತಾರೆ. ಹೀಗೆ ರಚನೆಯಾದ ಸಂಸ್ಥೆಯು ಸ್ವಾಭಾವಿಕವಾಗಿರುತ್ತದೆ. ಅಧರ್ಮ ಮಾರ್ಗದಿಂದ ಸಂಸ್ಥೆಯನ್ನು

ರಚಿಸಲು ಹಂಬಲಿಸಬೇಡಿ. "ನಾನು ಯಾರನ್ನೂ ಮತಾಂತರಗೊಳಿಸಿ, ಪರಿವರ್ತನೆ, ಮಾಡಿ, ಶಿಷ್ಯಸಂಗ್ರಹ ಮಾಡುವದು ನನಗೆ ಬೇಕಾಗಿಲ್ಲ; ಸುಮ್ಮನೆ ನನಗೆ ಸತ್ಯ ಒಂದೇ ಬೇಕು. ಸತ್ಯಕ್ಕೆ ರಕ್ಷಣೆಯಾಗಲಿ ರಕ್ಷಕರಾಗಲಿ ಅವಶ್ಯವಿಲ್ಲ. ಸೂರ್ಯ ಪ್ರಕಾಶಕ್ಕೆ ಪ್ರಚಾರಕರಾಗಲೀ ಸಂದೇಶವಾಹಕರಾಗಲೀ ಅಗತ್ಯವಿದೆಯೆ? ನಾನು ಸತ್ಯವನ್ನು ಪ್ರಸಾರಮಾಡುವದಿಲ್ಲ; ಸತ್ಯವು ನನ್ನನ್ನು ವೇಗವಾಗಿ—ತೀವ್ರವಾಗಿ—ಪ್ರೇರಿಸುತ್ತದೆ; ತಾನೇ ಪ್ರಸರಣವಾಗುತ್ತದೆ.

ಆಯಾ ದೇಶ—ಕಾಲ—ಪರಿಸ್ಥಿತಿಗಳಿಗೆ ಅನುಗುಣವಾಗಿ ಹೊಂದಿಕೊಳ್ಳಬೇಕೆಂದು ವಿಕಾಸವಾದಿಗಳು ಹೇಳುತ್ತಾರೆ: "ಒಟ್ಟಿನ ಮೇಲೆ ವಿಚಾರಮಾಡಿದರೆ, ಉಚಿತವಾದಷ್ಟೆ ಬಿಟ್ಟು ಕೊಡುವ, ಒಪ್ಪಿಕೊಳ್ಳುವ, ರಿಯಾಯಿತಿಯನ್ನು ತೋರಿಸುವ ಔದಾರ್ಯವೂ ಕೌಶಲವೂ ಇದ್ದರೆ ಈ ಜಗತ್ತಿನಲ್ಲಿ ಜೀವಿಸುವದು ಅಷ್ಟು ಕಷ್ಟವಾಗಲಾರದು. ಬದುಕಿನ ಹೋರಾಟವೆನ್ನಿಸಿಕೊಳ್ಳುವ ಒತ್ತಡದಲ್ಲಿ ಅವರೂ ಅವರ ವಂಶದವರೂ ತಮ್ಮ ವೈಶಿಷ್ಟ್ಯವನ್ನೂ ಸ್ವಾತಂತ್ರ್ಯವನ್ನೂ ಕಾದುಕೊಂಡು ಜೀವಿಸಬಹುದು. ಹೌದು, ಜೀವನ ಕಲೆಯನ್ನು ಬಲ್ಲವನೇ, ಅದರಲ್ಲಿ ಪರಿಣತನೇ ಋಷಿ. ಎಲ್ಲಾ ಜಗತ್ತೂ ಅವನೊಡನೆ ಸಮಶ್ರುತಿಗೊಳ್ಳಬೇಕು. ಏಕೆಂದರೆ ಅವನು ಎಲ್ಲಾ ಜಗತ್ತಿನೊಡನೆ ಸಮಶ್ರುತಿಗೊಳ್ಳುತ್ತಾನೆ. ಆಶಾಪರವಾದ ಕ್ಷುದ್ರ ಅಹಂಕಾರವನ್ನು ಪರಿತ್ಯಜಿಸುವದರ ಮೂಲಕ ಎಲ್ಲವದರೊಡನೆ ಹೊಂದಿಕೊಳ್ಳುವ ಸತ್ಪುರುಷನ ಎದುರು ಅಡ್ಡಿ ಆತಂಕಗಳು ಹೇಗೆ ಬರಬಲ್ಲವು? "ಪರಹಿತ—ಚಿಂತನೆ ಮಾಡುವ ಶಿಶುವು ಮಾತ್ರ ಬದುಕಬಲ್ಲದು". ಎಂಬ ವಿಜ್ಞಾನದ ತತ್ತ್ವವನ್ನು ಜನರು ತಪ್ಪಾಗಿ ಅನ್ವಯಿಸುವ ಹೆಚ್ಚಿನ ಸಂಭವವಿದೆ.

ಪರಹಿತ ಚಿಂತನೆ, ಪರೋಪಕಾರ, ಎಂದರೇನು?

ನಿರಂತರವಾಗಿ ಹೊರಗೇ ನೋಡುತ್ತಿರಬೇಕು—ಎಂದು ಇದರ ಅರ್ಥವೆ? ಜನರ ನಿರೀಕ್ಷೆಗಳೇನು? ಅಪೇಕ್ಷೆಗಳೇನು? ಅವರಿಗೆ ಯಾವದು ಒಪ್ಪಿಗೆ? ಅವನಿಗೆ ಯಾವದು ಪ್ರಿಯ? ಯಾವದು ಹಿತ?—ಅವುಗಳನ್ನೇ ಯಾವಾಗಲೂ ವಿಚಾರ ಮಾಡುತ್ತಿರಬೇಕೆ? ಸಾಧಿಸುತ್ತಿರಬೇಕೆ? "ರಿಯಾಯಿತಿ ತೋರಿಸುವ ಜಾಣತನ" ಎಂದರೆ, ಜನರ ಅಭಿಪ್ರಾಯಗಳಿಗೆಲ್ಲಾ ಒಪ್ಪಿಕೊಳ್ಳುವದೆಂದು ಅರ್ಥವೆ? ಅಥವಾ ಮಾನವ ಸೇವೆಯೆಂದರೆ ಮಾಡು, ಮಾಡು. ಮಾಡು, ಎಂಬ ಎಡೆಬಿಡದೆ ಕರ್ಮವನ್ನು ಮಾಡುತ್ತಿರುವ ಜ್ವರವೆ?

ಅಲ್ಲ, ಹಾಗಲ್ಲ. ಸತ್ಯನಿಷ್ಠೆಯ ವ್ಯಕ್ತಿತ್ವ ಒಂದೇ ನಿಜವಾದ ಜನೋಪಕಾರ, ಜನತಾಸೇವೆ. ಯಾರು ಸುಮ್ಮನೆ ಸಂತೋಷದಲ್ಲಿಯೂ ಪ್ರೇಮದಲ್ಲಿಯೂ ತಮ್ಮ

ಮನಸ್ಸನ್ನು ಪ್ರತಿಗೂಡಿಸಿಕೊಂಡಿರುವವರೋ ಮತ್ತು ತಮಗೆ ತಿಳಿದಿರುವ ಸತ್ಯ ವನ್ನು ದಯಾ ದಾಕ್ಷಿಣ್ಯಗಳೂ ಅನುಸರಣೆಗಳೂ ಇಲ್ಲದೆ ಅವುಗಳ ಸೆಪದಿಂದ ವಿರೂ ಪಮಾಡದೆ ತಮಗೆ ತಿಳಿದಂತೆ ಸರಳವಾಗಿ ತಿಳಿಸುವವರೋ ಅವರು ಮಾತ್ರ ದೀರ್ಘಾ ವಧಿಯಲ್ಲಿ ಯಶಸ್ವಿಯಾಗಿಯೂ ಸಾರ್ಥಕವಾಗಿಯೂ ಜೀವಿಸುತ್ತಾರೆ. ಹೇಗೆ ಹೊಲದಲ್ಲಿ ಬೆಳೆದಿರುವ ಒಂದು ಕಲ್ಲಂಗಡಿಯ ಹಣ್ಣು ಪಕ್ವವಾಗುತ್ತಿರುವಾಗ ಅದೇ ಋತುಮಾನದ ಪ್ರಭಾವದಿಂದ ಆ ಹೊಲದಲ್ಲಿ ಬೆಳೆದ ಬೇರೆ ಸಾವಿರಾರು ಹಣ್ಣು ಗಳೂ ಪಕ್ವವಾಗುತ್ತಿರಬೇಕೋ ಹಾಗೆ ನಿಮ್ಮ ಎದೆಯಲ್ಲಿ ಹೊಸದೂ ಆಶ್ಚರ್ಯ ಕರವೂ ಆದ ಭಾವನೆಗಳು—ವಿಚಾರಗಳು—ತಿಕ್ಕಾಡುತ್ತಿರುವಾಗ, ನಿಮ್ಮ ಸುತ್ತಲಿರುವ ಸಾವಿರಾರು ಜನರೂ ತಮ್ಮೊಳಗೆ ಅದೇ ರೀತಿಯಲ್ಲಿ ಅಥವಾ ನಿಶ್ಚಿತ ವಾಗಿಯೂ ಅದೇ ಭಾವನೆಗಳನ್ನೇ ಹೊಂದಿ ಚಿಂತಿಸುತ್ತಿರಬೇಕೆಂದು ಖಂಡಿತವಾಗಿಯೂ ತಿಳಿಯಿರಿ. ವಸಂತಕಾಲದಲ್ಲಿ ಒಂದು ಎಲೆಯೋ ಒಂದು ಹೂವಿನ ದಳವೋ ಅಥವಾ ಕೇಸರವೋ ಒಂದು ಮರದಲ್ಲಿ ರಚನೆಯಾಗುವದಕ್ಕೆ ತೊಡಗಿದಾಗ ಅಥವಾ ಒಂದು ಗಿಡವು ಭೂಮಿಯೊಳಗಿಂದ ಒಡೆದು ಮೇಲಕ್ಕೆ ಪುಟಿಯುತ್ತಿದ್ದಾಗ ಸುತ್ತಲೂ ನೂರಾರು ಸಾವಿರಾರು ಗಿಡಗಳು ಹಾಗೆಯೇ ಚಿಗುರುತ್ತಿರುತ್ತವೆ. ತಾಯಿಯ ಗರ್ಭ ದಲ್ಲಿ ಬೆಳೆಯುತ್ತಿರುವ ಶಿಶುವು ಎಷ್ಟು ಪವಿತ್ರವೋ ಹೊಸದೊಂದು ನೈತಿಕ, ಬೌದ್ಧಿಕ ಅಥವಾ ಆಧ್ಯಾತ್ಮಿಕ ಜನ್ಮವೂ ಅಷ್ಟೇ ಪವಿತ್ರವು. ಅದನ್ನು ಮುಚ್ಚಿಡುವದು ಒಂದು ಬಗೆಯ ದೈವದ್ರೋಹ—ಧರ್ಮದ್ರೋಹವು.

ನಿಮಗೆ ನೀವು ನಿಜವಾಗಿಯೂ ನಿರ್ವಂಚನೆಯಾಗಿಯೂ ಇದ್ದರೆ, ಸರ್ವರಿಗೂ ನೀವು ನಿಜವಾಗಿಯೂ ನಿರ್ವಂಚನೆಯಾಗಿರುವದನ್ನು ಕಂಡು ನಿಮಗೆ ಆಶ್ಚರ್ಯವಾಗ ಬಹುದು. ಸತ್ಯದ ಪರವಾಗಿ ದಯೆಯೂ ದಾಕ್ಷಿಣ್ಯವೂ ಅನುಸರಣೆಯೂ ತ್ಯಾಗವೂ ಇರಬೇಕು. ಸತ್ಯವು ಒಂದೇ ನಿಷ್ಪಾಪವಾದೀತು. ವ್ಯಕ್ತಿಗಳಿಗೂ ತೋರಿಕೆಗಳಿಗೂ ಬಿರುದು ಗಳಿಗೂ ಐಶ್ವರ್ಯಗಳಿಗೂ ವಿದ್ಯೆಗೂ ನಾಮರೂಪಗಳಿಗೂ ನಾವು ತೋರಿಸುವ ಗೌರವವೇ ವಿಗ್ರಹಾರಾಧನೆ. ಪ್ರಾಪಂಚಿಕ ಜಾಣತನವು ಅಜ್ಞಾನದ ಕ್ಷಮೆಯೂನೆವವೂ ಆಗುತ್ತದೆ.

"ಜೀವವೋ ಸಾವೋ ನನಗೆ ಸತ್ಯವೇ ಮುಖ್ಯ; ನನಗೆ ಸತ್ಯ ಒಂದೇ ಬೇಕು. ಪಾಪವೋ ದುಃಖವೋ ನಾನು ಒಳಗಿನ ಪ್ರತಿಭೆಗೆ ನೈಜವಾಗಿರುತ್ತೇನೆ."

"ಓ ಸತ್ಯವೇ ನಿನ್ನನ್ನು ನಾನು ಪ್ರೀತಿಸುತ್ತೇನೆ. ಓ ಪ್ರೇಮವೇ! ನಿನಗೆ ನಾನು ಸತ್ಯವಾಗಿರುತ್ತೇನೆ. ಏನನ್ನೋ ಸಾಧಿಸಬೇಕೆಂದೂ ಹೇಳಿಕೊಳ್ಳುವಷ್ಟು ಫಲ ಗಳನ್ನು ಪಡೆಯಬೇಕೆಂದೂ ಸಾಧ್ಯವಾದಷ್ಟು ಅತ್ಯಂತ ಹೆಚ್ಚಿನ ಸಂಖ್ಯೆಯ ಮತಾಂತರ ದವರನ್ನೂ ಅನುಯಾಯಿಗಳನ್ನೂ ಬೆಳೆಸಬೇಕೆಂದೂ ಇರುವ ಹಂಬಲವೇ ದೊಡ್ಡ

ಕೇಡಿನ ಶಕ್ತಿಯು. ವಾಸ್ತವಾಂಶಗಳನ್ನೂ ಅಂಕೆ ಸಂಖ್ಯೆಗಳನ್ನೂ ತಿಳಿಯಬೇಕೆಂಬ ಚಿಂತಾತುರಗಳೂ ಅನೇಕ ಬಗೆಯ ಹಾನಿಗಳಿಗೆ ಕಾರಣವಾಗುತ್ತದೆ. ಅಂಟುರೋಗ ವನ್ನು ಹರಡಿ ಆ ಇಡೀ ರಾಷ್ಟ್ರವನ್ನೇ ಕೆಡಿಸುವಷ್ಟೂ ಕಂಗೆಡಿಸುವಷ್ಟೂ ವಿಷವು ಒಂದು ಹೆಣದಲ್ಲಿ ಇದ್ದ ಮಾತ್ರಕ್ಕೆ ಅದು ಆ ಹೆಣದ ಮಹತ್ತನ್ನು ತೋರಿಸಬಹುದೆ? ಅನೇಕ ಸಂದರ್ಭಗಳಲ್ಲಿ ಕೆಲವು ಮತ ಧರ್ಮಗಳ ದುರಭಿಮಾನದ ಸಾಂಕ್ರಾಮಿಕ ರೋಗವು ಅಷ್ಟು ವಿಪತ್ಕರವಾಗುತ್ತದೆ.

ತಾವು ನೆಟ್ಟ ಗಿಡವು ಬೇಗ ಫಲವಾಗಬೇಕೆಂದೂ ಕೂಡಲೇ ತಾವು ಫಲವನ್ನು ತಿನ್ನಬೇಕೆಂದೂ ಜನರಿಗೆ ಬಹಳ ಆತುರವಿರುತ್ತದೆ. ಶ್ರದ್ಧೆಯ ಕೊರತೆಯೂ ಸ್ವಾರ್ಥ ತೆಯೂ ಇದಕ್ಕೆ ಕಾರಣವು. ಹಲವು ತಲೆಮಾರುಗಳ ಅನಂತರ ಫಲವನ್ನು ಕೊಟ್ಟ ಗಿಡಗಳನ್ನು ಹಾಕಿದ್ದ ಜೀಸಸ್, ನಾನಕ್ ಮೊದಲಾದ ಇನ್ನೂ ಕೆಲವರು ತಮ್ಮ ದೇಹಗಳನ್ನೇ ಅವುಗಳಿಗೆ ಬಡ ಗೊಬ್ಬರವಾಗಿ ಮಾಡಿದರು.

ಕೆಲವು ಬೋಧಕರೂ ಉಪದೇಶಕರೂ ಧೂಮಕೇತುಗಳಂತೆ, ಅವುಗಳ ಬೃಹತ್ತಾಗಿರುವ ಜ್ವಾಲಾಮಯ ಪುಚ್ಛವು ನೀಳವಾಗಿಯೂ ಅಗಲವಾಗಿಯೂ ಇದ್ದರೂ ವಾಸ್ತವವಾಗಿ ತೂಕವೇ ಇಲ್ಲದಿರುವಂತೆ, ತಮ್ಮ ಹಿಂಬಾಲಕರ ಆಡಂಬ ರದ ಮಹತ್ತಾದ ಬಾಲವನ್ನು ಸಂಗ್ರಹಿಸಬೇಕೆಂದು ಮಾತ್ರ ಮಹತ್ವಾಕಾಂಕ್ಷೆಯುಳ್ಳವ ರಾಗಿರುತ್ತಾರೆ.

ಬಾಣ—ಬಿರಸು—ಪಟಾಕಿಗಳ ಸುಡುಮದ್ದಿನ ದೀಪೋತ್ಸವದ ಮಹಾ ಪ್ರಕಾ ಶವು ಜನಜಂಗುಳಿಯನ್ನು ಬೆರಗುಮಾಡಿ ಆಕರ್ಷಿಸುತ್ತದೆ; ಆದರೆ ಸಾಕ್ಷಾತ್ ಆ ಪ್ರದರ್ಶನವು ಮುಗಿದ ಮೇಲೆ ಸ್ಥಾಯಿಯಾದ ಯಾವದೂ ಉಳಿಯುವದಿಲ್ಲ. ಕ್ಷಣಿಕ ವಾದ ಆ ಪಟಾಕಿಯ ಡಬಡ್ಡಾಳಿಕೆಯ ಬೆಳಕಿನಲ್ಲಿ ಯಾರಾದರೂ ಎಂದಾದರೂ ಸುಧಾ ರಿಸುವದು ಸಾಧ್ಯವೆ? ತಳಮಳಗೊಂಡು ಹಾರಾಡುತ್ತಿರುವ ಹೃದ? ಬಡ ಮೇಣದ ಬತ್ತಿಯ ಬೆಳಕಾದರೂ ಚಿಂತೆಯಿಲ್ಲ. ನಿರಂತರವೂ ಸ್ಥಿರವೂ ಆದ ಬೆಳಕೇ ನಿಜವಾಗಿಯೂ ಉಪಯೋಗವಾಗಿ ಅನುಗ್ರಹ ಮಾಡುವದು.

ನಿಮ್ಮ ವ್ಯಕ್ತಿತ್ವದ ಗುರುತ್ವಾಕರ್ಷಣ ಕೇಂದ್ರವನ್ನು ನಿಮ್ಮಿಂದ ಹೊರಗೆಸೆಯ ಬೇಡಿ. ಶೀಲದಲ್ಲಿ, ಶುದ್ಧವಾದ ಪ್ರೇಮವೂ ಸ್ವಾರ್ಥತ್ಯಾಗವೂ ಅತ್ಯವಶ್ಯವಾದ ಗುಣ ಗಳು. ಪರಹಿತ ಸಾಧನೆ ಎಂಬುದು ಆನುಷಂಗಿಕ, ಆಗಂತುಕ, ದೈವಾಯತ್ತವು.

ಸ್ವರ್ಗೀಯ ತಾಪಿನಲಿ, ನೀಲಾಕಾಶದಲಿ, ಥಳಥಳಿಸುತಲೆ
ಅಥವಾ ನೇಸರಿಲ್ಲದೆ, ಚಂಡ ಮಾರುತಗಳಲಡಗುತಲೆ
ಸೂರ್ಯನಲೆ ಕಣ್ಣಿಟ್ಟು ಧರಿತ್ರೀ ದೇವಿ ಸುತ್ತುತಿರೆ,

ಬಿಸಿಲಿನಲಿ, ಬಿರುಗಾಳಿಯಲಿ ಸಮನಾಗಿ ಮಹಾಮಹಿಮು,
ತಡವರಿಸದಲೆ, ತತ್ತರಿಸದಲೆ, ಬದಲಿಸದಲೆ ಸಂಚರಿಸುತಿರೆ,
ಇದರಂತೆ, ಶಕ್ತಿ, ಗುರಿ, ಕಾಲಗಳಿರುವ, ಮಹಿಮಾ ಮಹೀಪುತ್ರ !
ನೀ ಬೆಳಕಿನಲಿ ಕತ್ತಲಿಯಲಿ ಬಿಡದಂತೆ ಮುನ್ನುಗ್ಗು ಸಾಹಸಿಯೆ !

ಇಂಡಿಯಾದಲ್ಲಿ, ಒಂದು ಕ್ಷೇತ್ರದಲ್ಲಿ ಕೆಲಸಮಾಡುವ ಕಾರ್ಯಕರ್ತರ ಸೇವೆಗಳನ್ನು, ಇನ್ನೊಂದು ಕ್ಷೇತ್ರದಲ್ಲಿ ಅವರು ತಪ್ಪು ಮಾಡಿದರೆಂಬ ಕಾರಣದಿಂದ ಅಲ್ಲಗಳೆಯುವ ಒಲವು ಜನರಲ್ಲಿದೆ. ಒಬ್ಬ ಉಪದೇಶಕನ ಜೀವನ ಪದ್ಧತಿಯೂ ಅಭ್ಯಾಸಗಳೂ ಅಂಗೀಕಾರಕ್ಕೆ ಅರ್ಹವಲ್ಲವೆಂಬ ಕಾರಣದಿಂದ ಆವನ ಬೋಧೆಯನ್ನೂ ತಿರಸ್ಕರಿಸಿ ಬಿಡುತ್ತೇವೆ. ಹೀಗೆ ದೇಶದಲ್ಲಿ ಸಹಕಾರವೇ ಬಹಳ ಮಟ್ಟಿಗೆ ಅಸಾಧ್ಯವಾಗಿದೆ. ಆಕಳು ಸವಾರಿಗೆ ಸಲ್ಲದೆಂದು ಅದರ ಹಾಲನ್ನು ಬಿಟ್ಟಂತೆಯೂ ಹೆಣ್ಣು ಕುದುರೆಯು ಹಾಲು ಕೊಡುವದಿಲ್ಲವೆಂದು ಅದರ ಸವಾರಿಯನ್ನೂ ಅಲ್ಲಗಳೆದಂತೆಯೂ ಈ ಚಾಳಿಯಾಗಿದೆ.

ವೇಗವಾಗಿ ಓಡಬಲ್ಲವರಾದ ಮಾತ್ರಕ್ಕೆ ಓಟದ ಜೂಜಿನಲ್ಲಿ ಗೆಲ್ಲಲಾರರೆಂದೂ ಬಲಿಷ್ಠರಾದ ಮಾತ್ರಕ್ಕೆ ಯುದ್ಧದಲ್ಲಿ ಜಯಿಸಲಾರರೆಂದೂ, ಆದರೆ. ಎಲ್ಲಾ ಯಶಸ್ಸೂ ಸಹಕಾರ—ಸಂಘಟನೆಗಳಲ್ಲಿ ಇವೆಯೆಂದೂ ಪ್ರಕೃತಿ ತತ್ತ್ವವಾದಿಗಳ ಸ್ಪಷ್ಟವಾದ ನಿರೀಕ್ಷಣೆ ಪರೀಕ್ಷಣೆಗಳು ತೋರಿಸುತ್ತವೆ. ಪೈಪೋಟಿಗಿಂತಲೂ ಮೊದಲು ಜನರ ಸಂಗ—ಸಂಸರ್ಗಗಳಿವೆ. ಮಾನವ ಜನತೆಯಲ್ಲಿ ಸಂಸರ್ಗ—ಸಂಯೋಗಗಳನ್ನು ಹೇಗೆ ಸಾಧಿಸಬೇಕು ? ಸಂಸರ್ಗಕ್ಕಾಗಿಯೇ ಸಂಸರ್ಗವು ಯಶಸ್ವಿಯಾಗುವದಿಲ್ಲ. ನಮ್ಮ ದೇಹದಂಥ ಪ್ರಾಕೃತಿಕ ಅವಯವ ಸಂಘಾತಗಳು ಜಡವಾದವುಗಳು. ಎಲ್ಲಾ ವಿಜ್ಞಾನವೂ ಪರಸ್ಪರ ಸಹಾಯ—ಸಹಕಾರ—ಸಂಯೋಗ—ಸಮಾನ ಪ್ರಯತ್ನ—ಇವುಗಳ ಫಲಿತಾಂಶವು. ಆದರೆ ಯಾವ ಇಬ್ಬರು ವಿಜ್ಞಾನಿಗಳೂ ಕೂಡಿ ಬಾಳಬೇಕಾದುದಿಲ್ಲ. ಒಂದೇ ತತ್ತ್ವದಲ್ಲಿ ನಿಷ್ಠೆಯಿರುವದರಲ್ಲಿಯೇ ವಿಜ್ಞಾನಿಗಳ ಸಂಘೀಕರಣವಿದೆ. ಪ್ರಪಂಚದಲ್ಲೆಲ್ಲಾ ಪ್ರೇಮ, ಕ್ರೀಡೆ, ನಿಷ್ಕಪಟಭಾವ ಈ ಗುಣಗಳ ವ್ಯವಹಾರಶೀಲ ಸಮಾನ ಧರ್ಮವು ಮಕ್ಕಳಲ್ಲಿವೆ. ಪ್ರತಿಯೊಂದು ಮಗುವೂ ತನ್ನ ಪ್ರಿಯ—ಮಧುರ ಆತ್ಮನಲ್ಲಿ ಸ್ವಾಭಾವಿಕವಾಗಿ ಹೊಂದಿರುವ ಆದರಾಸಕ್ತಿಗಳಿಂದಲೇ ಐಕಮತ್ಯವು ಬರುತ್ತದೆ. ತನ್ನ ವಿಷಯದಲ್ಲಿ ತನ್ನ ಸಂಗಡಿಗರೆಲ್ಲಾ ಒಳ್ಳೆಯ ಅಭಿಪ್ರಾಯವನ್ನು ತಳೆಯ ಬೇಕೆಂಬ ಬಯಕೆಯೇ ಶೀಲದಲ್ಲಿರುವ ಸತ್ಯಸಂಧತೆಯನ್ನು ನಾಶಮಾಡುತ್ತದೆ. ಕಪಟ ಸಮಾಜದ ಅಸ್ತಿಭಾರವೇ ಇದು. ಅತಿರೇಕವೂ ವ್ಯತಿರಿಕ್ತವೂ ವಕ್ರವೂ ಆದ ಅಭಿರುಚಿಗಳು ಇರಬಹುದಾದ ಜನರನ್ನು ಮೆಚ್ಚಿಸಬೇಕೆಂಬ ಬಯಕೆಯಿಂದ ಉಂಟಾಗುವ ಹೆಚ್ಚಿನ ಒತ್ತಡವೇ ಅವನು ಬೇರೆ ಪರಿಸ್ಥಿತಿಯಲ್ಲಿ

ಮಾಡದಿರಬಹುದಾದ ಕಾರ್ಯಗಳನ್ನು ಮಾಡುವದಕ್ಕೆ ಪ್ರೇರಿಸುತ್ತದೆ. ಮದ್ಯ ಪಾನದ ಅಭ್ಯಾಸವು ಮದ್ಯಪಾಯಿಗಳಾದ ಮಿತ್ರರಲ್ಲಿರುವ ಸಹಾನುಭೂತಿಯಿಂದಲೂ ಗೌರವದಿಂದಲೂ ಸಾಮಾನ್ಯವಾಗಿ ಪ್ರೇರೇಪಿತವಾಗುತ್ತದೆ.

ಸತ್ಯವನ್ನೇ ನಾವು ಒಳ್ಳೆಯದು ಎನ್ನುತ್ತೇವೆ. ಸತ್ಯವನ್ನು ಅನುಸರಿಸುವ ದೊಂದೇ ಒಳ್ಳೆಯದು ಮಾಡುವದು. ಸತ್ಯವು ನಿಮ್ಮನ್ನು ಶಕ್ತರನ್ನಾಗಿ ಮಾಡು ತ್ತದೆ. ಸತ್ಯವು ನಿಮ್ಮನ್ನು ವಿಮೋಚನೆ ಮಾಡುತ್ತದೆ. ತನಗೆ ತಾನು ನಿಯಮ ಶೀಲನಾಗಿರುವದರಿಂದ ಹೊರಗಿನ ಅಧಿಕಾರ—ನಿಯಮಗಳಿಂದ ನಾವು ಬಿಡುಗಡೆ ಯನ್ನು ಹೊಂದಿ ಸ್ವತಂತ್ರರಾಗುತ್ತೇವೆ. ಇದೇ ಘನತೆ, ಗೌರವ. ಬಲವೇ ನ್ಯಾಯ ವನ್ನು ಸಾಧಿಸಲಾರದು. ಆದರೆ ನ್ಯಾಯವೂ ಧರ್ಮವೂ ಹಿಡಿದ ಪಟ್ಟು ಬಿಡದಿರುವ ಧೃತಿಯಲ್ಲಿಯೂ ದೃಢವಾದ ಆಗ್ರಹದಲ್ಲಿಯೂ ನಿತ್ಯತ್ವದ ಸಾಧನೆಯಲ್ಲಿಯೂ ತನ್ನನ್ನು ತಾನು ಸಮರ್ಥನೆ ಮಾಡಿಕೊಳ್ಳುತ್ತದೆ. ಈ ಧೃತಿಯೇ ಆಗ್ರಹವೇ ಶಕ್ತಿಯು, ಬಲವು. ನಿರ್ಬಲವಾದುದು ಸಾಯುತ್ತದೆ. ದೇವರು ಯಾವದನ್ನು ಉಳಿಯ ಗೊಡುತ್ತಾನೋ ಅದರಿಂದ ಅವನ ಉದ್ದೇಶವು ತಿಳಿಯುತ್ತದೆ. ಪ್ರಕೃತಿಯ ಪುಸ್ತಕ ದಲ್ಲಿ ದೇವರು ತನ್ನ ಸ್ವಂತ ಬೆರಳುಗಳಿಂದಲೇ ಸ್ಪಷ್ಟವಾಗಿಯೂ ನಿಸ್ಸಂದಿಗ್ಧವಾಗಿಯೂ ಬರೆಯುತ್ತಾನೆ: "ದೌರ್ಬಲ್ಯದ ಹೊರತು ಬೇರೆ ಪಾಪವಿಲ್ಲ; ಅದಕ್ಕೆ ಅಜ್ಞಾನವೇ ಕಾರಣ."

ಯಾವದು ಎಂಥಾ ವಿರೋಧ ಸನ್ನಿವೇಶದಲ್ಲಿಯೂ ಕೆಡದೆ, ಸಾಯದೆ, ಒತ್ತಾ ಯದಿಂದ ಬದುಕಿ, ಬೆಳೆಯುವದೋ ಅದು ದೇವರ ಉದ್ದೇಶಕ್ಕೆ ಅನುಸಾರವಾಗಿಯೇ ಇರಬೇಕು. ನಿಯಮವೆಂದರೆ ಕಂಡಿರುವ ವಿದ್ಯಮಾನದ ಸಾಮಾನ್ಯೀಕರಣವು. ಪ್ರಕೃ ತಿಯ ವೇದವಾಕ್ಯವು ಈ ನಿಯಮವನ್ನು ಕೊಡುತ್ತದೆ:

"ಯಾವದು ನ್ಯಾಯವೋ ಸರಿಯೋ ಅದು ಒಡನೆಯೋ ತಡವಾಗಿಯೋ ಶಕ್ತಿ ಸಂಪನ್ನವಾಗಿ ತನ್ನನ್ನು ತಾನು ಸಮರ್ಥನೆ ಮಾಡಿಕೊಳ್ಳುತ್ತದೆ." ಸತ್ಯವು ದೃಢವಾ ದಂದು; ಅದು ಗುಳ್ಳೆಯಂತೆ ಮುಟ್ಟಿದ ಕೂಡಲೇ ಒಡೆಯುವದಿಲ್ಲ. ಅಲ್ಲ, ನೀವು ಅದನ್ನು ಚೆಂಡಿನಂತೆ ದಿನವೆಲ್ಲಾ ಒದೆಯುತ್ತಿರಬಹುದು; ಆದರೂ ಸಂಜೆಯೊಳಗೆ ಅದು ದುಂಡಾಗಿಯೂ ದೃಢವಾಗಿಯೂ ಸುಭದ್ರವಾಗಿಯೂ ಇರುತ್ತದೆ. ದೇವರೇ ಪ್ರಪಂಚವನ್ನು ನಿಯಮಶೀಲವಾಗಿ ಆಳುತ್ತಿದ್ದಾನೆ. ಶಕ್ತಿಯೇ, [ mighty, nay, almighty Truth ] ಅಲ್ಲ, ಸರ್ವಶಕ್ತವಾದ ಸತ್ಯವೇ ಜಯಶಾಲಿಯಾಗುತ್ತದೆ. ಸತ್ಯ ವೆಂದರೆ ಆಶ್ಚರ್ಯಪಡಬೇಡಿ; ಭಯಪಡಬೇಡಿ; ನಿಮ್ಮ ಹೃದಯದ ಆಳದಿಂದ "ನಾನೇ ದೇವರು" ಎಂದು ಹೇಳಿ.

ಯಾವ ಪಕ್ಷವು ಸತ್ಯವನ್ನು ಹೆಚ್ಚಾಗಿ ಕಾರ್ಯಶೀಲ ಮಾಡುತ್ತದೆಯೋ ಯಾವದು ಅನಂತ ಶಕ್ತಿಯೊಡನೆ ಹೆಚ್ಚು ಶ್ರುತಿಗೂಡಿ ಕೆಲಸಮಾಡುತ್ತದೆಯೋ, ಯಾವದು ಸರ್ವ ಶಕ್ತಿತ್ವವನ್ನು ಹೆಚ್ಚಾಗಿ ವ್ಯಕ್ತಮಾಡುತ್ತದೆಯೋ ಅದೇ ಯಶಸ್ವಿಯೂ ಶ್ರೇಷ್ಠತರವೂ ಆಗುತ್ತದೆ. ಸತ್ಯಪ್ರಜ್ಞೆಯು ಶಕ್ತಿಯನ್ನೂ ಜಯವನ್ನೂ ತರುತ್ತದೆ; "ನಾನು ಬ್ರಾಹ್ಮಣ ನಾನು ಸಂನ್ಯಾಸಿ" ಎಂಬ ಪ್ರಜ್ಞೆಯೂ ಕೂಡ ದೇಹಾಭಿಮಾನವಾದುದರಿಂದ ನಿಮ್ಮನ್ನು ಮೆಟ್ಟು ಹೊಲಿಯುವ ಚಮ್ಮಾರನನ್ನಾಗಿ ಮಾಡುತ್ತದೆ. ವಿವೇಕಿಯಾದ ಶ್ರುತಿಯು ಈ ಚರ್ಮ [ದೇಹ] ಪ್ರಜ್ಞೆಯ ಚಂಡಾಲತ್ವದ ವಿರುದ್ಧವಾಗಿಯೇ ಪುನಃ ಪುನಃ ನಿಮ್ಮನ್ನು ಎಚ್ಚರಿಸುವದು.

ಸತ್ಯಸಂಧನಾದ ನಿಸ್ವಾರ್ಥಿ ಪುರುಷನು ಚಪ್ಪಲಿಮಾರುವವನ ವ್ಯಾಪಾರದಲ್ಲಿಯೂ ಉದಾತ್ತವಾದ ಸಂನ್ಯಾಸ ಮನೋಭಾವವನ್ನು ತರಬಹುದು. ಆ ವ್ಯಾಪಾರವನ್ನು—ಉದ್ಯೋಗವನ್ನು —ಮಾಡಿದ ಮಾತ್ರದಿಂದಲೇ ನೀವು ಶೂದ್ರರಾಗುವದಿಲ್ಲ. ಹೆಂಗಸರು, ಮಕ್ಕಳು, ಶೂದ್ರರೇ ರಾಷ್ಟ್ರೀಯತಾ ವೃಕ್ಷದ ಬೇರುಗಳು; ಇವರ ಸರಿಯಾದ ವಿದ್ಯಾಭ್ಯಾಸ—ಯೋಗ ಕ್ಷೇಮಗಳನ್ನೇ ಇಂಡಿಯಾದಲ್ಲಿ ನಿರ್ಲಕ್ಷ್ಯ ಮಾಡಿದೆ. ಶ್ರೇಷ್ಠತರ ವರ್ಗಗಳೆಂದು ಕರೆಸಿಕೊಳ್ಳುವ ಅತ್ಯುತ್ಕೃಷ್ಟ ಜನರೇ ಆ ವೃಕ್ಷದ ಫಲಗಳು.

ಹಣ್ಣನ್ನು ಮರದ ಮೇಲೆಯೇ ಇಟ್ಟಿರುವ ಪ್ರಯತ್ನದಲ್ಲಿ ನಮ್ಮ ಎಲ್ಲಾ ಕಾಲವನ್ನೂ ವ್ಯರ್ಥವಾಗಿ ವ್ಯಯಮಾಡುವದು ಬೇಡ. ಬೇರುಗಳನ್ನು ಲಕ್ಷಿಸಿ, ಆದರಿಸಿ, ಸರಿಯಾಗಿ ನೀರೆರೆದು ಆಹಾರವನ್ನು ಕೊಟ್ಟು ಪೋಷಿಸಬೇಕು.

ಪ್ರಿಯ ಸುಧಾರಕರೆ! ಶ್ರೀಮಂತರ ಅಭಿರುಚಿಗಳಿಗೆ ಪ್ರಿಯವಾಗುವ ಆಹಾರವನ್ನು ಒದಗಿಸುವದರಿಂದ ನಿಮ್ಮ ವ್ಯಕ್ತಿತ್ವದ ಘನತೆ ಗೌರವಗಳು ತಾತ್ಕಾಲಿಕವಾಗಿ ಹೆಚ್ಚಬಹುದು; ಆದರೆ, ಸತ್ಯ ಧರ್ಮಗಳು ಬಡ ಜನರಿಂದಲೇ ಹೆಂಗಸರು ಮಕ್ಕಳಿಂದಲೇ ಮುಂದುವರಿಯುತ್ತವೆ; ಅವರಿಂದ ಮಾತ್ರವೇ ಸಾಧನೆಯಾಗುತ್ತದೆ. ಇದಕ್ಕೆ ಇತಿಹಾಸವೇ ಸಾಕ್ಷಿ. ಉಪನ್ಯಾಸಗಳನ್ನು ಕೇಳುವದಕ್ಕೆ ಅಧಿಕಾರಿಗಳು ಹೆಚ್ಚಾಗಿ ಬಂದಾಗ ಬೋಧಕರು ಸಂತೋಷಪಟ್ಟು ತಮ್ಮನ್ನು ತಾವು ಮೆಚ್ಚಿಕೊಂಡು ಹೊಗಳಿಕೊಳ್ಳುವ ಒಲವು, ಗೀಳು ಅವರಿಗಿರುತ್ತದೆ. ಒಳ್ಳೆಯದು, ಈಗಿನ ಕಾಲದಲ್ಲಿ ಬೇರೆಯವರಿಗಿಂತಲೂ ಸರ್ಕಾರದ ನೌಕರರು ಹೆಚ್ಚು ಬುದ್ಧಿಶಾಲಿಗಳೆಂಬುದು ನಿಜ; ಅವರಿಂದ ಸ್ವಲ್ಪ ಪ್ರಯೋಜನವೂ ಆಗಬಹುದು. ಆದರೆ ಅವರಿಂದ ದೇಶೋದ್ಧಾರವಾಗುವದೆಂದು ನಿರೀಕ್ಷಿಸಬಾರದು. ಯಾರು ತಮ್ಮ ಸ್ವಾತಂತ್ರ್ಯವನ್ನು ಕ್ಷುದ್ರವೇತನಕ್ಕಾಗಿ [ಅದು ಸಾವಿರಾರು ರೂಪಾಯಿಗಳ ಸಂಬಳವೇ ಇರಬಹುದು] ಮಾರಿಕೊಂಡಿರುವರೋ, ಯಾರು ಈಗ ತಮ್ಮ ಜೀವನಕ್ಕೆ ಅತ್ಯವಶ್ಯವಾದ ಕೇಡಿನ ನಿತ್ಯಗಟ್ಟಲೆಯ ಕೆಲಸಗಳಿಂದ ವೀರ್ಯಶೋಷಣೆಯನ್ನು ಪಡೆದಿದ್ದಾರೋ ಯಾರು ಮಿತಿಮೀರಿದ ಕಾರ್ಯಗಳಿಂದ

ಶಕ್ತಿಯನ್ನು ಕಳೆದು ಕೊಂಡಿದ್ದಾರೋ ಅವರಿಂದ ರಾಷ್ಟ್ರ ನಿರ್ಮಾಣದಂಥ ಮಹಾಕಾರ್ಯವೂ ರಾಷ್ಟ್ರಸೇವೆಯೂ ಆಗಲಾರದು. ಆ ಗೌರವನೀಯ ಪಾಷಾಣ ದಂಥ ಠಾಕೂರ್‌ಜೀಗಳು—ತಮ್ಮ ಪೂಜ್ಯ ಬಂಧನದ ಹಾಗೂ ಉನ್ನತ ನಿಸ್ಸಹಾಯ ಕತೆಯ ಉಚ್ಚ ಪೀಠದಿಂದ—ಕಷ್ಟಪಟ್ಟು ಸಂಪಾದಿಸಿದ ತಮ್ಮ ಸೇವಕರ ಹೊಗಳಿಕೆಯ ಮೋಹಕ ಗೀತೆಗಳನ್ನೂ ಆಪ್ಯಾಯನಕರವಾದ ಸ್ತುತಿಯ ಜೋಗುಳಗಳನ್ನೂ ಗೌರವ ಪ್ರತಿಷ್ಠೆಗಳನ್ನೂ ಅನುಭವಿಸಿ ಆನಂದ ಪಡಲಿ ; ಆದರೆ ನಿಜವಾದ ಧರ್ಮೋಜ್ಜೀವ ನವೂ ರಾಷ್ಟ್ರಹಿತ ಸಾಧನೆಯೂ ಬಡ ಬೇರುಗಳಿಂದಲೇ—ಬೇರುಗಳಿಂದ ಮಾತ್ರವೇ —ಆಗ ತೊಡಗುತ್ತದೆ.

ಇಂಡಿಯಾದಲ್ಲಿ, ಕಾರ್ಯಕರ್ತರುಗಳು ರಾಷ್ಟ್ರ ವೃಕ್ಷದ ಬೇರುಗಳಿಗೆ ನೀರೆರೆ ಯದೆ, ಎಲೆಗಳಿಗೂ ಹಣ್ಣುಗಳಿಗೂ [ಶ್ರೀಮಂತರಿಗೂ ಮಧ್ಯಮ ಶ್ರೇಣಿಯ ಸಭ್ಯ ರಿಗೂ] ನೀರು ಹೊಯ್ದು ಉಪಚರಿಸುವದರಲ್ಲಿ ತಮ್ಮ ಶಕ್ತಿಗಳನ್ನೆಲ್ಲಾ ವ್ಯಯಮಾಡಿ ದುದೇ ಎಷ್ಟೋ—ಅನೇಕ—ಚಳವಳಿಗಳು ನಿಷ್ಫಲವಾಗುವದಕ್ಕೆ ಮುಖ್ಯ ಕಾರಣವಾಯಿತು. ಬಡ ಶೂದ್ರರಿಗೆ ಬೆಳಕು—ಬದುಕುಗಳ ಅಗತ್ಯವಿದೆ. “ಏನೇನೂ ಗತಿಯಿಲ್ಲದ ಏನೇನೂ ಪ್ರಯೋಜನವಿಲ್ಲದ, ತೃಣಪ್ರಾಯರು, ಶೂನ್ಯಪ್ರಾಯರು” ಎಂದು ತಿಳಿ ಯಲ್ಪಟ್ಟಿರುವ ಬಡ ನಿಮ್ನವರ್ಗಗಳನ್ನು ಮೇಲೆತ್ತಬೇಕೆಂದು ನೀವು ಸಾಹಸಮಾಡಿ ದರೆ, ನಿಮ್ಮ ಮೇಲೆ ಜನರು ಉಗ್ರವಾಗಿ ದಾಳಿಮಾಡುತ್ತಾರೆ. ಆದರೆ ಶೂನ್ಯವು [ಸೊನ್ನೆಯು] ಕೂಡ ಪ್ರಧಾನ ಸಂಖ್ಯೆಯಾದ ೧ ಒಂದು, ಎನ್ನುವದರ ಬಲಗಡೆಯಲ್ಲಿ ಇಡಲ್ಪಟ್ಟಾಗ ಅದರ ಬೆಲೆಯನ್ನು ಹತ್ತು ಪಟ್ಟು ಹೆಚ್ಚಿಸುತ್ತದೆ ಎನ್ನುವದನ್ನು ನೆನಪಿ ನಲ್ಲಿಡಿ. ನಿಮ್ಮ ೧ ಒಂದು ಎನ್ನುವದು ಮಾತ್ರ ಸಂಖ್ಯೆಗಳೊಡನೆ ಅಥವಾ ಸೊನ್ನೆ ಗಳೊಡನೆ ಸರಿಯಾದ ರೀತಿಯಲ್ಲಿ ಸಮೀಕರಣವಾಗಿ ತಾದಾತ್ಮ್ಯವನ್ನೂ ಅನನ್ಯತೆ ಯನ್ನೂ ಹೊಂದಲಿ. “ತತ್ತ್ವಮಸಿ” “ತತ್—ತ್ವಂ—ಅಸಿ” ಅದೇ ನೀನಾಗಿದ್ದಿ.

ಹೆಂಗಸರೂ, ಮಕ್ಕಳೂ, ಶೂದ್ರರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳಲ್ಲವೆಂದು ಕೆಲ ವರು ಹೇಳುತ್ತಾರೆ. ಈ ದೃಷ್ಟಿಯೇ ಭಾವನೆಯೇ ವೇದಾಂತವನ್ನು ಮಹತ್ತಾದ ಆದರೆ ಸಂಶಯಾಸ್ಪದವಾದ ಸೂತ್ರವಾಗಿಯೂ ಕೇವಲ ತತ್ತ್ವವಾಕ್ಯವಾಗಿಯೂ ಉಳಿಸಿದೆ. ಜನರು ಅದನ್ನು ಸತ್ಯವೆಂದು ತಿಳಿದಿಲ್ಲ.

ಪ್ರತಿಯೊಂದು ಮಗುವೂ ಸೂರ್ಯನ ಬೆಳಕಿಗೂ ಗಾಳಿಗೂ ಅರ್ಹತೆಯುಳ್ಳ ದಾದರೆ, ಆಧ್ಯಾತ್ಮಿಕವಾದ ಬೆಳಕಿಗೂ ಗಾಳಿಗೂ ಏಕೆ ಅರ್ಹವಲ್ಲ ? ಬ್ರಹ್ಮ ವಿದ್ಯೆಗೆ ಯಾರನ್ನಾದರೂ ಏಕೆ ಹೊರಗಿರಿಸಬೇಕು ? ಅಜ್ಞಾನ ಮತ್ತು ದೌರ್ಬಲ್ಯಗಳ ರಹಸ್ಯ ಮಂದಿರಗಳನ್ನೂ ಮುಚ್ಚಿದ ಮನೆಗಳನ್ನೂ ನೆಲಮಾಳಿಗೆಯ ಒಳಕೋಣೆಗಳನ್ನೂ ತುಳಿದು ಹಾಕಿರಿ. ದಿವ್ಯವಾದ ಬೆಳಕೂ ಗಾಳಿಯೂ ಎಲ್ಲರನ್ನೂ ಅನುಗ್ರಹಿಸಲಿ !

ನೈತಿಕ ವಿಧಿಗಳನ್ನೂ ಆಜ್ಞೆಗಳನ್ನೂ ಜನರ ಮೇಲೆ ಹೇರುವದರಿಂದ ಆಧ್ಯಾತ್ಮಿಕ ದಾರಿದ್ರ್ಯವು [ಭಿಕಾರಿತನವು] ಉಂಟಾಗುತ್ತದೆ. ಉನ್ನತ್ತ ನೀತಿ ಬೋಧಕರು ಸತ್ಯ ಸ್ವರೂಪದ ಜ್ಞಾನವನ್ನು ತಾವೂ ಪಡೆದು ಇತರರಿಗೂ ತಿಳಿಸುವದಕ್ಕೆ ಬದಲು ಸದ್ಗುಣ ಸಚ್ಛೀಲಗಳ ಬಾಹ್ಯ ರೂಪಗಳನ್ನು ಒತ್ತಾಯದಿಂದ ಹೇರುವದರಿಂದ ತಮ್ಮ ಉದ್ದೇಶ ವನ್ನು ತಾವೇ ನಿಷ್ಫಲಗೊಳಿಸಿಕೊಳ್ಳುತ್ತಾರೆ. ಪ್ರತಿಯೊಬ್ಬರೂ ತಮ್ಮ ತಮ್ಮ ಬೆಳಕಿಗೆ ಅನುಗುಣವಾಗಿ ನಡೆಯುತ್ತಾರೆ. ತಮ್ಮ ಮುಂದಿರುವ ಬಾವಿಯನ್ನು ಕಂಡವರು ಯಾರೂ ಅದರೊಳಗೆ ಬೀಳುವದಿಲ್ಲ. "ಹೀಗೆ ಮಾಡು" "ಹೀಗೆ ಮಾಡಬೇಡ" ಎನ್ನುವ ನಮ್ಮ ವಿಧಿ ನಿಷೇಧಗಳೆಲ್ಲಾ ಮನುಷ್ಯನಲ್ಲಿರುವ ಪಶುತ್ವಕ್ಕೆ ಮಾತ್ರ ಅನ್ವಯಿಸು ತ್ತವೆ. ನಾವು ಒಬ್ಬ ಬಾಲಕಗೋ ಬಾಲಕಿಗೋ "ನೀನು ಇದನ್ನು ಮಾಡಲೇಬೇಕು, ಅಥವಾ ಅದನ್ನು ಮಾಡಲೇಬೇಕು" ಎಂದು ವಿಧಿಸಿದರೆ ಅವನಲ್ಲಿ ಅಥವಾ ಅವಳಲ್ಲಿ ಇರುವ ವಿಚಾರ ಶಕ್ತಿಯು ತನ್ನನ್ನು ಅಲಕ್ಷ್ಯ ಮಾಡಿದರೆಂದೂ ಕಡೆಗಣಿಸಿದರೆಂದೂ ಕೋಪಿಸಿಕೊಂಡು ಪ್ರತಿಭಟಿಸುತ್ತದೆ. ನಮ್ಮ ವಿಧಿರೂಪ ಆಜ್ಞೆಗಳು, ಶಾಸನಗಳು ಕುದುರೆಯನ್ನು [ಪಶುವನ್ನು] ಅದರ ಸವಾರನ [ವಿಚಾರಶಕ್ತಿಯು] ಕೆಳಗಿನಿಂದ ಓಡಿ ಸುವದಕ್ಕೆ ಪ್ರಯತ್ನಪಟ್ಟಂತೆ ಆಗುತ್ತದೆ. ಮಕ್ಕಳನ್ನು ಆಳುವ ಪ್ರಯತ್ನದಲ್ಲಿ ಅಥವಾ ಅವರ ಸ್ವಂತ ವಿಚಾರದ ಹೊರತು ಬೇರೆ ಅಧಿಕಾರವನ್ನು ಅವರ ಮೇಲೆ ಚಲಾ ಯಿಸುವ ಯತ್ನದಲ್ಲಿ, ಅವರು ದಂಗೆಯೇಳುವ, ಎದುರು, ಬೀಳುವ, ಪ್ರತಿಭಟಿಸುವ ಮನೋಭಾವವನ್ನು ಅವರಿಗೆ ಕಲಿಸುತ್ತೇವೆ. ಎಲ್ಲಿ ಒತ್ತಾಯದ ಆಳಿಕೆಯೂ ನಿಯಮ ನಿಬಂಧನೆಗಳೂ ಪ್ರತಿಭಟನೆಯನ್ನು ಹುಟ್ಟಿಸುವದಿಲ್ಲವೋ ಅಲ್ಲಿ ಕ್ಷೀಣತೆಯನ್ನೂ ವಿನಾಶವನ್ನೂ ಉಂಟುಮಾಡುತ್ತದೆ. ಮನಶ್ಶಾಸ್ತ್ರದ ಒಂದು ನಿಯಮದಂತೆ, ಯಾವ ದೊಂದು ಸೂಚನೆಯು ಪ್ರತ್ಯಕ್ಷವಾಗದೆ—ನೇರವಾಗದೆ—ಹೆಚ್ಚು ಪರೋಕ್ಷವಾದಷ್ಟೂ ಮನುಷ್ಯನ ಸ್ವಾಭಾವಿಕ ಸ್ಥಿತಿಯಲ್ಲಿ, ಅದರ ಪರಿಣಾಮವು ಹೆಚ್ಚು ಪ್ರಬಲವಾಗಿರು ತ್ತದೆ. ನಮ್ಮ ಒತ್ತಾಯದ ನೀತಿಬೋಧನೆಗಳಲ್ಲಿ, ಒಬ್ಬ ಸಾಮಾನ್ಯ ಮನುಷ್ಯನು, ಸ್ವಾಭಾವಿಕವಾಗಿ, ಒಂದು ಸೂಚನೆಯನ್ನು ವಿರೋಧವಾಗಿಯೇ ತೆಗೆದುಕೊಳ್ಳುತ್ತಾನೆ. ಯಾವದೊಂದನ್ನು ನಿಷೇಧ ಮಾಡುವದರಿಂದಲೂ ತಿರಸ್ಕಾರ ಮಾಡುವದರಿಂದಲೂ ಅದರ ಆಶೆಯನ್ನು ಮತ್ತಷ್ಟು ಬೆಳೆಸುತ್ತದೆ.

ಜನರ ಸ್ವಭಾವವೂ ಪದ್ಧತಿಯೂ ದೇವರನ್ನು ಸಹ ಉಳಿಸುವದಿಲ್ಲ. ಪ್ರತಿ ದಿನದ ಅಥವಾ ತಿಂಗಳು ತಿಂಗಳ ಅನ್ನವನ್ನು ಕೊಟ್ಟು ಸೇವಿಸುವದಕ್ಕಾಗಿ ಅವರ ಅಮೋಘವಾದ ಜೀವಾತ್ಮನ ಮುಂದೆ, ಮನೆಯ ಬಾಗಿಲಲ್ಲಿ ಪರಮಾತ್ಮನೂ ಕೈಕಟ್ಟಿ ಕೊಂಡು ನಿಂತಿರಬೇಕು. ಯೋಗ ಸಿದ್ಧಿಗಳನ್ನು ಬಯಸುವ ಒಬ್ಬ ಗಿರಾಕಿಯು ಧರ್ಮದ ವ್ಯಾಪಾರಿಯೊಬ್ಬರಲ್ಲಿ ಹೋದನು. ತನಗೆ ಅತ್ಯಂತ ಪ್ರಿಯವಾದ ಪ್ರಾಪಂಚಿಕ ಇಷ್ಟಾ ರ್ಥವನ್ನು ಸಾಧಿಸುವದಕ್ಕೆ, ಪುರಶ್ಚರಣೆಗಾಗಿ ಸಹಾಯವಾಗುವ ಒಂದು ದಿವ್ಯವಾದ

ಮಂತ್ರವನ್ನು ಉಪದೇಶ ಮಾಡಬೇಕೆಂದು ಆ ಪೂಜ್ಯ ಸಿದ್ಧನನ್ನು ಆ ಗಿರಾಕಿಯು ಕೇಳಿದನು. ಆ ಫಕೀರನು ಆ ಮಂತ್ರವನ್ನು ಹೇಳಿದನು; ಆದರೆ ಅದು ಫಲಿಸುವದಕ್ಕಾಗಿ ಒಂದು ವಿಚಿತ್ರವೆನ್ನುವ ನಿಬಂಧನೆಯನ್ನು ವಿಧಿಸಿದನು : "ಇಷ್ಟು ನಿಯಮಿತವಾದ ಕಾಲದಲ್ಲಿ ನೀನು ಈ ಮಂತ್ರವನ್ನು ಜಪಿಸುತ್ತಿರುವಾಗ ಒಂದು ಮಂಗನ ಕಲ್ಪನೆಯು ನಿನ್ನ ಮನಸ್ಸಿನಲ್ಲಿ ಹಾಯದಿರಲಿ." ಆ ಫಕೀರನು ಹೀಗೆ ಹೇಳಿದನು. ಆ ಬಡಪಾಯಿಯು ಮರುದಿನವೇ ಹಿಂದಿರುಗಿ ಆ ಗುರುಗಳಲ್ಲಿ ಬಂದನು. "ಸ್ವಾಮಿ ! ಅದು ಬರಬಾರದೆಂದು ತಾವು ಮೊದಲೇ ಹೇಳದೇ ಇದ್ದಿದ್ದರೆ ಮಂಗ ಎನ್ನುವ ಭಾವನೆಯು ನನ್ನ ಮನಸ್ಸಿಗೆ ಎಂದೆಂದಿಗೂ ಬರುತ್ತಿರಲಿಲ್ಲ. ಆದರೆ ಈಗ ಮಂಗನ ಭಾವನೆಯು ನನ್ನನ್ನು ಮಂಗನ ಮುಷ್ಟಿಯಿಂದ ಬಿಡದಂತೆ ಹಿಡಿದುಕೊಂಡು ಬಿಟ್ಟಿದೆ. ಏನು ಮಾಡಿದರೂ ಅದನ್ನು ನಾನು ತಪ್ಪಿಸಿಕೊಳ್ಳಲಾರೆನು" ಎಂದು ಹೇಳಿ ಪೇಚಾಡಿದನು. ಹೀಗೆ ಪುಣ್ಯವಂತರಾದ ನಮ್ಮ ಗುರುಗಳು ಅಪವಿತ್ರತೆಯನ್ನೂ ಇತರ ಪಾಪಗಳನ್ನೂ ತಿರಸ್ಕರಿಸುವದರಲ್ಲಿ ಎಡೆಬಿಡದೆ ಅವುಗಳನ್ನು ಖಂಡಿಸುತ್ತಾ ಬರದಿದ್ದರೆ, ಅವುಗಳು ಎಂದೋ ಈ ಲೋಕವನ್ನು ಬಿಟ್ಟು ಹೋಗುತ್ತಿದ್ದವು. ದಿವ್ಯವೂ ಭವ್ಯವೂ ಆದ ಈಡನ್ ತೋಟದ ಅಘುಕ್ತ ಮೂಲೆಯಲ್ಲಿ ಅಲಕ್ಷ್ಯವಾಗಿದ್ದ ಯಾವದೋ ಒಂದು ಮರವನ್ನು ನಿಷಿದ್ಧವೆಂದು ಬೈಬಲಿನ ದೇವರು ಪ್ರತ್ಯೇಕವಾಗಿ ಸೂಚಿಸದೇ ಇದ್ದಿದ್ದರೆ ಆ ಬಡಪಾಯಿ ಆಡಮ್‌ನು ಅದರ ಹಣ್ಣನ್ನು ತಿನ್ನಬೇಕೆಂದು ಎಂದೆಂದಿಗೂ ಯೋಚಿಸುತ್ತಿರಲಿಲ್ಲ.

ಸುಧಾರಣೆಯ ಹೆಸರಿನಲ್ಲಿ ನಾವು ನಮ್ಮ ಸರ್ವಾಧಿಕಾರದ ನಿರ್ದೇಶಗಳನ್ನು ಪರಮಾವಧಿಗೆ ಒಯ್ಯುತ್ತೇವೆ. ಒಮ್ಮೆ, ನಿನ್ನ ಹೆಸರೇನು ?—ಎಂದು ಒಂದು ಮಗುವನ್ನು ಕೇಳಿದಾಗ "ಅಮ್ಮನು ನನ್ನನ್ನು ಯಾವಾಗಲೂ ಬೇಡ ! ಬೇಡ ! ಎಂದು ಕರೆಯುತ್ತಾಳೆ. ಅದೇ ನನ್ನ ಹೆಸರಿರಬೇಕು" ಎಂದು ಹೇಳಿತು. ಆದ್ದರಿಂದ ನಿಯಮ—ನಿಬಂಧನೆಗಳ ಆಜ್ಞೆಗಳ ಭಾರದ ಕೆಳಗೆ ಜನರು ತಮ್ಮ ನಿಜವಾದ ಆತ್ಮವನ್ನು ಕಳೆದುಕೊಂಡು ಬಿಟ್ಟಿದ್ದಾರೆ. ತಮ್ಮನ್ನು ತಾವು ಕೇವಲ ನಾಮರೂಪಗಳೆಂದು ಕಲ್ಪಿಸಿಕೊಂಡಿದ್ದಾರೆ.

ಇಂಡಿಯಾದಲ್ಲಿ ವ್ಯವಹಾರ ವೇದಾಂತವು ಆರೋಗ್ಯ ಸಾಧನೆಯಿಂದ ಪ್ರಾರಂಭಿಸಬೇಕಾಗಿರುವಷ್ಟು ಪುಸ್ತಕಗಳ ಮೂಲಕ ಆಗಬೇಕಾಗಿಲ್ಲ. ವೇದಾಂತವು ದೈಹಿಕವೂ ಮಾನಸಿಕವೂ ಆಧ್ಯಾತ್ಮಿಕವೂ ಆದ ಆರೋಗ್ಯವು. ಹೊಟ್ಟೆಯ ಆರೋಗ್ಯವೊಂದನ್ನು ಸರಿಯಾಗಿಟ್ಟು ಕೊಂಡಿದ್ದರೆ, ಶೀತ, ನೆಗಡಿ, ಕೆಮ್ಮು, ಜ್ವರ, ಮಧುಮೂತ್ರ ಮೊದಲಾದ ರೋಗಗಳು ಮಾತ್ರವಲ್ಲ, ಆದರೆ ಅಸೂಯೆ, ಆಲಸ್ಯ, ಅಸಮಾಧಾನ, ಕೆಟ್ಟಭಾವನೆಗಳು, ದೌರ್ಬಲ್ಯ, ಇತರ ಬಗೆಯ ಅಪವಿತ್ರ ಭಾವನೆಗಳೂ ಎಲ್ಲವೂ ಕೂಡಲೇ ಕೊಚ್ಚಿ ಹೋಗುತ್ತವೆ.

ಆವಶ್ಯಕತೆಯನ್ನು ಕರಾರುವಾಕ್ಕಾಗಿ ಬೆಲೆ ಕಟ್ಟುವದೇ ನಿಜವಾದ ಸ್ವಾತಂತ್ರ್ಯವು. ಆ ಆವಶ್ಯಕತೆಯೇ ನಾನು; ಅದಾಗಿರುವದರಿಂದಲೇ ಬಿಡುಬಿಚ್ಚಾಗಿದ್ದೇನೆ. ನನ್ನನ್ನು ನಾನು ತಿಳಿಯುವದರಲ್ಲಿ ನಿಜವಾದ ಆರೋಗ್ಯವಿದೆ. ನೀವು ಆತ್ಮನನ್ನು ತಿಳಿಯದಿದ್ದರೆ, ನಿಮ್ಮ ಆರೋಗ್ಯವೆಂಬುದು ಕೆಟ್ಟ ರೋಗಕ್ಕೆ ಒಳ್ಳೆಯ ಮುಸುಕು ಮಾತ್ರ. ಸ್ವಸ್ಥತೆ, ಸಮಗ್ರತೆ, ಸರ್ವ ಪವಿತ್ರತೆ ಇವು ಒಂದೇ ಜಾತಿಗೆ ಸೇರಿದ ಶಬ್ದಗಳು. ಐಕ್ಯತಾ ಭಾವನೆಯೇ ಆರೋಗ್ಯ. ಆ ಏಕತ್ವದಲ್ಲಿ ಜೀವಿಸಿರಿ; ಈ ಪ್ರಪಂಚದಲ್ಲಿ ಯಾವದರ ಮಹತ್ವದಿಂದಲೂ ಮುಳುಗಿ ಹೋಗಿಬಿಡಬೇಡಿ, ಕುಸಿದು ಹೂತುಹೋಗಿ ಬಿಡಬೇಡಿ. ನಿಮಗೆ ಇಷ್ಟ ಬಂದುದನ್ನು ಹೇಳಿ; ನೀವು ಹೇಳಲೇ ಬೇಕಾದುದನ್ನಲ್ಲ. ಜೀವನದ ಸಮಸ್ಯೆಗಳು ಪರಿಹಾರವಾಗದೆ ಇರಲಾರವು; ಏಕೆಂದರೆ ಜೀವನವೇ ಸಮಸ್ಯೆಗಳ ಪರಿಹಾರವು. ಆರೋಗ್ಯವು, ಸ್ವಸ್ಥತೆಯು, ಬಿಡು ಬಿಚ್ಚಾಗಿ ವ್ಯಕ್ತವಾಗಲಿ. ಯಾವ ಉದ್ದೇಶವನ್ನೂ ಒಳಗೆ ಬಚ್ಚಿಟ್ಟು ಕೊಳ್ಳಬೇಡಿ. ಕೂಡಲೇ ಪರಿತ್ಯಾಗ ಮಾಡಬೇಕಾದ ಅನ್ಯಾಯವಾದ —ಅನುಚಿತವಾದ— ಆಸ್ತಿಯು, ನಿಮ್ಮ ಉದ್ದೇಶಗಳೇ—ವಿಷಯಗಳೇ—ಆಗಿವೆ. ನೇರವಾಗಿ ನೋಡಿ: ಗಿಡಮರಗಳನ್ನೂ ನದಿಗಳನ್ನೂ ಧೈರ್ಯವಾಗಿಯೂ ನಿರ್ಭಯವಾಗಿಯೂ ನೋಡುವಂತೆ ಪ್ರತಿಯೊಬ್ಬರನ್ನೂ ಎಲ್ಲರನ್ನೂ ಧೀರವಾಗಿ ನೋಡಿ. ಮಗುವು ಯಾರಲ್ಲಿಯೂ ಯಾವ ವ್ಯಕ್ತಿತ್ವವನ್ನೂ ಕಲ್ಪಿಸಿ, ಬಾಚಿ, ನೋಡುವದಿಲ್ಲ. ಹಾಗೆ ನೀವೂ ಯಾರನ್ನು ನೋಡಿದರೂ ಅವರಲ್ಲಿ ನಿಮ್ಮನ್ನೇ ನೋಡಬೇಕು; ಅಪರಿಚಿತರನ್ನು ಕಂಡಂತೆ ಕಾಣಬಾರದು. ಅನುಭವದಿಂದ [ಅಂದರೆ ಕಷ್ಟ—ನಷ್ಟ—ನಿಷ್ಠುರಗಳಿಂದಲೂ ಸೋಲಿನಿಂದಲೂ ಪ್ರಯತ್ನಗಳು ನಿಷ್ಫಲವಾಗುವದರಿಂದಲೂ ಸಾವು—ನೋವು—ಅಪಮಾನಗಳಿಂದಲೂ] ಕಲಿತ ಪಾಠಗಳಿಂದ ತಾವು ಹೆಚ್ಚು ಜಾಣರಾಗಿದ್ದೇವೆಂದು ತಿಳಿದಿರುವ ಹಿರಿಯರಿಗಿಂತಲೂ ಜೀವನದ ಆಟವಾಡುವ ಮಕ್ಕಳು ಅದರ ನಿಜವಾದ ನಿಯಮಗಳನ್ನೂ ಸಂಬಂಧಗಳನ್ನೂ ಹೆಚ್ಚು ಸ್ಪಷ್ಟವಾಗಿಯೂ ಚೆನ್ನಾಗಿಯೂ ಅರಿಯುತ್ತಾರೆ. ಶಂಕೆಯಿಲ್ಲದೆ, ಹಿಂಜರಿಯದೆ, ಒಂದೇ ಮನಸ್ಸಿನಿಂದ ಹಿಡಿದುಕೊಂಡರೆ ತುರುಚಿಯ ಗಿಡವಾದರೂ ಏನೂ ಅಪಾಯ ಮಾಡುವದಿಲ್ಲ; ಆದರೆ ಹಿಂದುಮುಂದು ನೋಡುತ್ತಾ ಸಂಶಯ ಬುದ್ಧಿಯಿಂದ ಸುಮ್ಮನೆ ಮುಟ್ಟಿದರೆ ಸಾಕು, ಸುಟ್ಟ ಕಡಿತ ಹಚ್ಚಿ ಚರ್ಮವನ್ನು ಕೆರಳಿಸುತ್ತದೆ. ಕೆಲವರು ಒಳ್ಳೆಯ ಕಾರ್ಯಕರ್ತರಿದ್ದಾರೆ. ಅವರ ಖಾಸಗಿ ಸಂಭಾಷಣೆಗಳಲ್ಲಿ ಗುಪ್ತಚಾರರ ಶಂಕೆಯು ಎಚ್ಚರಿಕೆಯೂ ಪತ್ತೇದಾರರ ವಿಷಯದ ಜಾಣತನದ ಭಯವೂ ಬಹಳ ಹೆಚ್ಚಾಗಿ ತುಂಬಿರುತ್ತದೆ. ಈ ಯೋಗ್ಯರಾದ ಸುಧಾರಕರೇ ಸ್ವತಃ ಕಳ್ಳರೆಂದು ರಾಮನು ಧೈರ್ಯವಾಗಿ ಹೇಳುತ್ತಾನೆ. ಪ್ರಿಯ ಪತ್ತೇದಾರರೇ! ಮಧುರ ಬೇಹುಗಾರರೇ! ಗುಪ್ತಚಾರರೇ ನಿಮಗೆ ಸಂಪೂರ್ಣ ಸುಸ್ವಾಗತ! ನೀವು ನಮಗೆ ಬಹಳ ಬೇಕಾದವರು. ನಿಮ್ಮ ಹಿಂದಿನ ವೇತನವೇನಾದರೂ ಇದ್ದರೆ, ಅದಕ್ಕಿಂತಲೂ ನಾವು ನಿಮಗೆ ಅನಂತ ಗುಣವಾಗಿ ಕೊಡುತ್ತೇವೆ. ದಯವಿಟ್ಟು "ನನ್ನನ್ನು" ನೈಜವಾಗಿ

ಕಂಡುಹಿಡಿಯಿರಿ. "ನಿಮ್ಮನ್ನು ಪ್ರಾರ್ಥಿಸುತ್ತೇನೆ; ನನ್ನ ರಹಸ್ಯವನ್ನೆಲ್ಲಾ ಭೇದಿಸುವಂಥ ಗುಪ್ತಚಾರರಾಗಿರಿ. ನನ್ನಲ್ಲಿರುವುದನ್ನೆಲ್ಲಾ ಸಂತೋಷದಿಂದ ನಿಮಗೆ ಕೊಟ್ಟು ಬಿಡುತ್ತೇನೆ; ನಿಮ್ಮ ಎಲ್ಲಾ ಕಾಮಗಳನ್ನೂ ಆಶ್ಚರ್ಯಕರವಾಗಿ ಸಂತೃಪ್ತಿ ಮಾಡುತ್ತೇನೆ. ನಿಮ್ಮ ಎಲ್ಲಾ ಕೊರತೆಗಳೂ ಕಳೆದುಹೋಗುತ್ತವೆ; ನೀವು ಇನ್ನೆಂದೂ ನೋವನ್ನು ಅನುಭವಿಸುವುದಿಲ್ಲ; ಬಡತನವು ತೂರಿ ಹೋಗುತ್ತದೆ; ಎಲ್ಲಾ ಸಾಮ್ರಾಜ್ಯಗಳೂ ನಿಮ್ಮ ಕಾಲಕೆಳಗೆ ಬಂದು ಬೀಳುತ್ತವೆ. ರಹಸ್ಯಕಾಮಿಗಳಾದ ನಿಮ್ಮ ಹೃದಯವು ಧನ್ಯವಾದುದು! ಬನ್ನಿ, ಬನ್ನಿ, ನಿಮ್ಮ ಆತ್ಮನೇ ಆದ ರಾಮನ ರಹಸ್ಯವನ್ನು ಶೋಧಿಸಿರಿ, ಭೇದಿಸಿರಿ, ಸಾಧಿಸಿರಿ."

ಆರೋಗ್ಯನಿಯಮದ ಆವಶ್ಯಕತೆಗಾಗಿಯೇ ಪ್ರತಿಯೊಬ್ಬ ಆರೋಗ್ಯವಂತನೂ ಕೆಲಸಮಾಡುತ್ತಿರಬೇಕು. ಮಗುವಿಗೆ ಯಾವ ಉದ್ದೇಶವೂ ಇಲ್ಲ; ಆದರೂ ಭೂಮಿಯ ಮೇಲಿರುವ ಅತ್ಯಂತ ಕ್ರಿಯಾಶೀಲ ಜೀವಿಗಳಲ್ಲಿ ಅದು ಒಂದು.

**Vedanta requires of you to hit hard, play your part manfully. But hang not your joy on the event, let every stroke be propelled and impelled by joy, not always be aiming vainly at joy.**

"ನೀವು ಕಷ್ಟಪಟ್ಟು ಚೆನ್ನಾಗಿ ಕೆಲಸಮಾಡಬೇಕೆಂದು, ಅವಿರತವಾಗಿ ಪ್ರಯತ್ನ ಮಾಡಬೇಕೆಂದು ವೇದಾಂತವು ಅಪೇಕ್ಷಿಸುತ್ತದೆ. ಈ ಜಗನ್ನಾಟಕದಲ್ಲಿ ನಿಮ್ಮ ಪಾತ್ರವನ್ನು ನೀವು ಶ್ರದ್ಧೆಯಿಂದಲೂ ಪೌರುಷದಿಂದಲೂ ನಡೆಸಬೇಕು, ನಟಿಸಬೇಕು. ಆದರೆ ಯಾವ ಘಟನೆಯ ಮೇಲೂ ಕ್ರಿಯೆಯ ಮೇಲೂ ಫಲದ ಮೇಲೂ ನಿಮ್ಮ ಆನಂದವನ್ನು ನೀವು ತೂಗುಗಟ್ಟ ಬೇಡಿ. ನಿಮ್ಮ ಪ್ರತಿಯೊಂದು ಕ್ರಿಯೆಗೂ ಆನಂದವೇ ಪ್ರೇರಕವಾಗಲಿ; ಆನಂದವೇ ಪ್ರಚೋದಕವಾಗಲಿ. ನೀವು ಯಾವಾಗಲೂ ವ್ಯರ್ಥವಾಗಿ ಆನಂದವನ್ನೇ ಗುರಿಯಾಗಿ ಇಟ್ಟುಕೊಳ್ಳಬಾರದು."

ಆನಂದವು ನಿಮ್ಮ ಗುರಿಯಾಗಿ ಮುಂದೆ ಇದ್ದರೆ, ಅದು ಯಾವಾಗಲೂ ಬಿಸಿಲ್ಗುದುರೆಯಂತೆ ಮುಂದೆ ಮುಂದೆಯೇ ಹೋಗುತ್ತಿರುತ್ತದೆ ; ಎಂದೂ ಕೈಗೆ ಸಿಕ್ಕುವದಿಲ್ಲ, ದಕ್ಕುವದಿಲ್ಲ. ನಮ್ಮ ಸ್ವರೂಪವೇ ಆನಂದ; ಅದನ್ನು ಹೊಸದಾಗಿ ಪಡೆಯುವದಲ್ಲ. ಆದ್ದರಿಂದ ಎಲ್ಲಾ ಕಾರ್ಯಗಳಿಗೂ ಅದೇ ಪ್ರೇರಕವಾಗಬೇಕು. ಯಾವದಕ್ಕೂ ಬೇಸರವೇ ಬರಬಾರದು.

ಯಾರು ಸತ್ಯ—ಧರ್ಮದಲ್ಲಿ ಭದ್ರವಾಗಿ ನಿಲ್ಲುತ್ತೀರೋ ಅವರು ಲೋಕವೆಲ್ಲಾ ವಿರುದ್ಧವಾದರೂ ಭಯಪಡಬೇಕಾಗಿಲ್ಲ. ಸಂಪ್ರದಾಯಶೀಲ ಅಜ್ಞಾನದ ಈ ತೋರಿಕೆಯ ಅಪಾರವಾದ ಬಹು ಸಂಖ್ಯಾತರು ಹೊಸ ಎಲೆಗಳ ಮತ್ತು ಹಸುರು

ಹುಲ್ಲಿನ ಎಸಳುಗಳ ಮೇಲೆ ಹೇರಳ ತಂಡ ತಂಡವಾಗಿ ತುಂಬಿರುವ ಬೆಳಗಿನ ಮಂಜು ಹನಿಗಳ ಸೈನ್ಯಗಳಂತೆ ಇವೆ. ಓ ಸೂರ್ಯದೇವನೆ! ಕರಗಿ ಹೋಗುವ ಈ ಬಹುಸಂಖ್ಯಾತರು ನಿಮ್ಮನ್ನು ಸ್ವಾಗತಿಸುವದಕ್ಕಾಗಿ ಸುಮ್ಮ ಸುಮ್ಮನೆ ಥಳಥಳಿಸುತ್ತಿದ್ದಾರೆ. ಸತ್ಯರೂಪ ಸೂರ್ಯನಲ್ಲಿ ನೀವು ಒಂದಾಗಿ ಭಾವಿಸಿರಿ; ಒಂದು ಹಿಡಿಯಷ್ಟು ಇರುವ ತಳಮಳಿಸುವ ಲಕ್ಷಾಂತರ ಜನರು ನಿಮಗೆ ವಿರೋಧವಾದರೆ ಭಯವೇನು? ನಿಮ್ಮ ಪರವಾಗಿ ಇನ್ನೂ ಬಹುಸಂಖ್ಯಾತರೇ ಇದ್ದಾರೆ. ಕಲ್ಲು ಬಂಡೆಗಳು, ಮರಗಳು, ನದಿಗಳು, ಮಂದಮಾರುತ, ಸೂರ್ಯ—ಚಂದ್ರ—ನಕ್ಷತ್ರಗಳು ನಿಮ್ಮ ಕಡೆಗೇ ಇದ್ದಾರೆ. ಕಾಲವೂ ನಿಮ್ಮ ಸಹಾಯಕ್ಕೇ ಇದೆ. ಹಗಲೂ ಶತಮಾನಗಳೂ ನಿಮ್ಮವೇ. ಅನಂತವೇ ನಿಮ್ಮದಾಗಿದೆ; ಸರ್ವವನ್ನೂ ಆಲಿಂಗಿಸುವ, ಸರ್ವವನ್ನೂ ಒಳಗೊಂಡಿರುವ ಪ್ರಕೃತಿಯು ನಿಮ್ಮೊಡನೆ ಇದೆ. ನೀವು ವಿರೋಧಿಗಳನ್ನು ಸುತ್ತುಗಟ್ಟಿ ಇರುವಿರೇ ಹೊರತು ಅವರು ನಿಮ್ಮನ್ನು ಸುತ್ತುಗಟ್ಟಿಲ್ಲ. ಅನಿರೀಕ್ಷಿತವನ್ನು—ಆಕಸ್ಮಿಕವನ್ನು—ನೀವೇ ಸುತ್ತುಗಟ್ಟಿ ಸೆರೆ ಹಿಡಿಯಿರಿ.

ದೇವರು ನಿಮ್ಮ ಮೂಲಕ ಕೆಲಸಮಾಡಲಿ; ಹಾಗಾದರೆ ಕರ್ತವ್ಯವೇನೂ ಉಳಿಯುವದಿಲ್ಲ;—ದೇವರೇ ನಿಮ್ಮ ಮೂಲಕ ಬೆಳಗಲಿ. ದೇವರು ತಾನೇ ದರ್ಶನ ಕೊಡಲಿ. ದೇವರಂತೆ, ಬಾಳಿ; ದೇವರಾಗಿ ಬಾಳಿರಿ, ದೇವರನ್ನೇ ತಿನ್ನಿ, ದೇವರನ್ನೇ ಕುಡಿಯಿರಿ. ದೇವರನ್ನೇ ಉಸಿರಾಡಿ. ಸತ್ಯವನ್ನು ಅನುಭವಕ್ಕೆ ತಂದುಕೊಳ್ಳಿ; ಉಳಿದುದೆಲ್ಲಾ ತಮ್ಮ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುತ್ತವೆ; ಸರಿ ಹೋಗುತ್ತವೆ. ನಿಮ್ಮ ಒಳಗೇ ಇರುವ ಸ್ವರ್ಗಸಾಮ್ರಾಜ್ಯದಲ್ಲಿ ಜೀವಿಸಿರಿ; ಅದೇ ನೀವು. ಮಿಕ್ಕ ಎಲ್ಲವೂ ತಾವಾಗಿಯೇ ಬಂದು ನಿಮ್ಮನ್ನು ಸೇರಿಕೊಳ್ಳುತ್ತವೆ.

ಓಂ! ಓಂ! ಓಂ!

# ಕ ಥೆ ಗ ಳು

## ೧. ಲಾರ್ಡ್‌ಬೈರನ್

ಸ್ವಾತಂತ್ರ್ಯದ ಚೇತನ ಶಕ್ತಿಯು ತನ್ನ ಮೂಲಕ ಕೆಲಸಮಾಡಲು ಅವನು ಅವಕಾಶ ಕೊಟ್ಟನು. ಅವನು ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿದ್ದಾಗ, ಒಂದು ವಿವಾಹ ಮಹೋತ್ಸವದಲ್ಲಿ ಕ್ರಿಸ್ತನು ನೀರನ್ನು ದ್ರಾಕ್ಷಾರಸವಾಗಿ ಪರಿವರ್ತನೆ ಮಾಡಿದ ಪವಾಡದ ಮೇಲೆ, ಅವನ ವರ್ಗದ ವಿದ್ಯಾರ್ಥಿಗಳೆಲ್ಲಾ ಪರೀಕ್ಷೆಯಲ್ಲಿ ಒಂದು ಪ್ರಬಂಧವನ್ನು ಬರೆಯಬೇಕಾಯಿತು. ಓ! ಕೆಲವು ವಿದ್ಯಾರ್ಥಿಗಳು ಬಹಳ ಕಷ್ಟಪಟ್ಟು ಬರೆದರು. ಇನ್ನು ಕೆಲವರು, ತಮಗೆ ನಿಯಮಿತವಾದ ಕಾಲದಲ್ಲಿ, ಅತಿಥಿಗಳ ವೇಷ ಭೂಷಗಳು ಹೇಗಿದ್ದವು? ಹೇಗೆ ಔತನವನ್ನು ಏರ್ಪಡಿಸಿದ್ದರು? ವರ್ಚಸ್ವಿಯಾದ ಕ್ರಿಸ್ತನು ಹೇಗೆ ಕಾಣುತ್ತಿದ್ದನು? ಮೊದಲಾದ ವಿಷಯ ಮೇಲೆ ವಿವರಿಸಿ, ವಿಸ್ತರಿಸಿ ನೀಳವಾದ ಕತೆಗಳನ್ನೇ ಬರೆದರು. ಈ ಎಲ್ಲಾ ಕಾಲದಲ್ಲಿಯೂ ಬೈರನ್ನನು ಒಳಮಾಳಿಗೆಯನ್ನು ನೋಡುತ್ತಾ ಇತರ ವಿದ್ಯಾರ್ಥಿಗಳ ಮುಖಗಳನ್ನು ಪರೀಕ್ಷಿಸುತ್ತಾ ಬಹಳ ಮಟ್ಟಿಗೆ, ತಮಾಷೆಯಾಗಿ, ಮೆಲ್ಲನೆ ಸಿಳ್ಳು ಹಾಕುತ್ತಾ ಕುಳಿತಿದ್ದನು. ಆ ಪರೀಕ್ಷಾ ಕಾಲದ ಅವಧಿಯು ಮುಗಿಯುತ್ತಿರುವಾಗ ಅವರ ಪ್ರೊಫೆಸರ್, ಸುತ್ತಲೂ ಎಲ್ಲರ ಹತ್ತಿರವೂ ಹೋಗಿ ಅವರವರು ಬರೆದಿದ್ದ ಪ್ರಬಂಧ ಪುಸ್ತಕಗಳನ್ನು ಸಂಗ್ರಹಿಸುತ್ತಾ ಬೈರನ್‌ನ ಹತ್ತಿರ ಬಂದು ಹಾಸ್ಯವಾಗಿ "ನೀನು ಬಹಳ ಕಷ್ಟಪಟ್ಟು ಎಲ್ಲರಿಗಿಂತಲೂ ಹೆಚ್ಚಾಗಿ ಬರೆದಿದ್ದಿ; ನಿನಗೆ ಬಹಳ ಆಯಾಸವಾಗಿರಬೇಕು". ಎಂದು ಹೇಳಿದರು. ಅವನು ಏನನ್ನೂ ಬರೆಯದೆ ಖಾಲಿ ಪುಸ್ತಕವನ್ನು ಕೊಡಬಹುದಾದ ಖಾಲಿ ತಲೆಯ "ಬೃಹಸ್ಪತಿ" ಎಂದು ಅವರು ತಿಳಿದಿದ್ದರು. ಆದರೆ ಬೈರನ್ನನು "ದಯವಿಟ್ಟು ಒಂದು ನಿಮಿಷ ತಾಳಿ" ಎಂದು ಹೇಳಿ ಯಾವದೋ ಒಂದು ವಾಕ್ಯವನ್ನು ತೋಚಿದಂತೆ ಗೀಚಿ ಅವರಿಗೆ ಪುಸ್ತಕವನ್ನು ಕೊಟ್ಟನು. ಬಹುಶಃ ಮೂರು ವಾರಗಳ ಮೇಲೆ ಪರೀಕ್ಷೆಯ ಫಲಿತಾಂಶವನ್ನು ಪ್ರಕಟಿಸಿದರು. ಕೆಲವು ಪ್ರಬಂಧಗಳನ್ನು ಗೌರವದಿಂದ ಬಹಳ ಚೆನ್ನಾಗಿವೆಯೆಂದು ತಿಳಿಸಿದರು. ಆದರೆ ಪ್ರಥಮ ಬಹುಮಾನವು ಬೈರನ್‌ಸಿಗೆ ಬಂದಿರುವದನ್ನು ಕೇಳಿ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು. ಬೈರನ್ನನ ಪ್ರಬಂಧದ ಅತಿ ಶ್ರೇಷ್ಠ ಗುಣವನ್ನು ತಿಳಿಸಿ ವಿದ್ಯಾರ್ಥಿಗಳಿಗೆ ಒಪ್ಪಿಸುವದಕ್ಕಾಗಿ ಆ ಪ್ರೊಫೆಸರು ಕ್ಲಾಸಿನಲ್ಲಿ ಆ ಎಲ್ಲಾ ವಿದ್ಯಾರ್ಥಿಗಳ ಎದುರಿಗೂ ಮೆಚ್ಚುಗೆಯಿಂದ ಓದಿ ಹೇಳಿದರು. ಇದೊಂದೇ ವಾಕ್ಯವು ಆ ಇಡೀ ಪ್ರಬಂಧವಾಗಿತ್ತು:

"The water saw its Lord and blushed"

"ನೀರು ತನ್ನ ಪ್ರಭುವನ್ನು ಕಂಡು ನಾಚಿ ಬಿಳಿಚಿಕೊಂಡಿತು." ಅವನು ಹಿಂಡಿ ಹಿಸುಕಿ ಬಲಾತ್ಕಾರದಿಂದ ಯಾವ ವ್ಯಾಖ್ಯಾನವನ್ನೂ ಮಾಡಿರಲಿಲ್ಲ. ಈ ವಾಕ್ಯಪ್ರಭಾವವು—ಸ್ವಾಭಾವಿಕವಾಗಿಯೂ ಸರಳವಾಗಿಯೂ ತಾನೇ ತಾನಾಗಿಯೂ ಮಧುರವಾಗಿಯೂ ಹೊರ ಹೊಮ್ಮಿತ್ತು. ಆತ್ಮಸ್ಫೂರ್ತಿಯಿಂದ ಸ್ವಾಭಾವಿಕವಾಗಿ ನಡೆಯುವ ಎಲ್ಲಾ ಕಾರ್ಯಗಳಂತೆ ಈ ಸೂತ್ರಪ್ರಾಯವಾದ ಕೃತಿಯು ಸಮಗ್ರವಾಗಿಯೂ ಸುಂದರವಾಗಿಯೂ ಸಾರಭೂತವಾಗಿಯೂ ಸ್ವತಂತ್ರವಾಗಿಯೂ ಗಂಭೀರವಾಗಿಯೂ ಕಾವ್ಯಮಯವಾಗಿಯೂ ಮನೋಹರವಾಗಿಯೂ ಇದ್ದಿತು.

ನಯನವು ನೋಡದೇ ಇರಲಾರದು. ನಾವೋ
ಕಿವಿಗಳನು ಸುಮ್ಮನಿರಲು ವಿಧಿಸಲಾರೆವು;
ನಮ್ಮ ಇಚ್ಛೆಗೆ ವಿರುದ್ಧವೋ ಅನುಸಾರವೋ
ನಮ್ಮ ದೇಹಗಳು ಸೋಂಕಿನಿಂ ತಿಳಿಯುವವು.
ಈ ಅಪಾರ ವಸ್ತುಗಳೊಳಗೆ ತಾನಾಗಿಯೇ ಎಂದಿಗೂ
ಏನೂ ಆಗಲಾರದೆಂದು ಯೋಚಿಸುವೆಯೋ ಇಂದಿಗೂ
ಆದರೂ ನಾವಿನ್ನೂ ಪಡೆಯಲು ಅರಸುತಲೇ ಇರಬೇಕು.

[ವರ್ಡ್ಸ್‌ವರ್ತ್]

## ೨. ಗಾನ ವಿದ್ಯಾಗುರು

ಒಂದು ಕ್ರೈಸ್ತ ದೇವಾಲಯದಲ್ಲಿ ಒಂದು ಸೊಗಸಾದ ವಾದ್ಯವಿತ್ತು. ಅದು ಎಷ್ಟು ಸೊಗಸಾಗಿತ್ತೆಂದರೆ, ಅದರ ರಕ್ಷಕರು ಅದನ್ನು ಮುಟ್ಟುವದಕ್ಕೆ ಸಾಮಾನ್ಯ ಸಂಗೀತಗಾರರಿಗೆ ಅವಕಾಶ ಕೊಡುತ್ತಿರಲಿಲ್ಲ. ಒಂದು ದಿನ ದೇವಾಲಯದಲ್ಲಿ ಪ್ರಾರ್ಥನೆಯನ್ನು ನಡೆಸುತ್ತಿದ್ದಾಗ ಬಡ ಉಡಿಗೆಗಳನ್ನು ಧರಿಸಿದ್ದ ಅಪರಿಚಿತನೊಬ್ಬನು ಒಳಗೆ ಬಂದು ಆ ವಾದ್ಯವನ್ನು ಬಾರಿಸಲು ಬಯಸಿದನು. ಆದರೆ ಅವನಿಗೆ ಅವಕಾಶ ಕೊಡಲಿಲ್ಲ. ಆ ಪಾದ್ರಿಗೂ ಅವನ ಪರಿಚಯವಿರಲಿಲ್ಲವಾದ್ದರಿಂದಲೂ ಅವಕಾಶ ಕೊಡುವದು ಅಸಾಧಾರಣ ಅನುಗ್ರಹವೆನಿಸಿದ್ದರಿಂದಲೂ ಅವನಿಗೆ ವಾದ್ಯವನ್ನು ಕೊಡಲಿಲ್ಲ. ಆ ಕಲಾಪಗಳು ಮುಗಿದು, ಬಾರಿಸುತ್ತಿದ್ದ ಸಂಗೀತಗಾರನು ಆ ವಾದ್ಯವನ್ನು ಬಿಟ್ಟ ಮೇಲೆ, ಈ ಹೊಸ ಮನುಷ್ಯನು ಯಾರಿಗೂ ತಿಳಿಯದಂತೆ ಕಳ್ಳತನದಿಂದ ಮೆಲ್ಲನೆ ಆ ವಾದ್ಯದ ಹತ್ತಿರಕ್ಕೆ ಹೋದನು. ಅವನು ವಾದ್ಯದ ಮೇಲೆ ಕೈಯಿಟ್ಟ ಕೂಡಲೇ ಆ ವಾದ್ಯವು ತನ್ನ ವಲ್ಲಭನನ್ನು ಗುರುತಿಸಿ ಗೌರವಿಸಿದಂತೆ ಸ್ವರ್ಗೀಯ

ಗಾನವನ್ನು ಸುರಿಸುವದಕ್ಕೆ ತೊಡಗಿತು. ಮೇಲಿದ್ದ ದೇವಾಲಯವನ್ನು ಬಿಡುವವರಲ್ಲಿದ್ದ ಭಕ್ತವೃಂದವು ತರಂಗ ತರಂಗವಾಗಿ ಬರುತ್ತಿದ್ದ ಭವ್ಯವಾದ ಆ ಮಧುರ ನಾದವನ್ನು ಕೇಳಿ ಬೆರಗಾಗಿ, ಮಂತ್ರಮುಗ್ಧರಾದಂತೆ ಆನಂದ ಪರವಶರಾದರು. ಅವರು ಆ ಸ್ಥಳವನ್ನು ಬಿಡದೆ, ಹೊರಟವರು ಕುಳಿತು ಬಿಟ್ಟರು. ಆಶ್ಚರ್ಯಕರವಾದ ಈ ಸಂಗೀತವನ್ನು ಪ್ರಯೋಗಿಸಿ ಬಾಜಿಸಿದವನು ಗಾನವಿದ್ಯಾ ವಿಶಾರದ ರಾಜಗುರುವಾಗಿದ್ದನು. ಆ ಬಗೆಯ ವಾದ್ಯವನ್ನು ನೂತನವಾಗಿ ಕಂಡು ಹಿಡಿದು ನಿರ್ಮಾಣ ಮಾಡಿದ ಕಲಾಕೋವಿದನೇ ಅವನಾಗಿದ್ದನು.

ನಮಗಾಗಿ ಒಂದು ಮಹಾಕಾರ್ಯ ಮಾಡುವದಕ್ಕೆ ನಮ್ಮ ಆತ್ಮನಿಗೂ ದೇವರಿಗೂ ಅವನ ಪ್ರೇಮಕ್ಕೂ ಅವಕಾಶ ಕೊಡುವದಿಲ್ಲ. ಈ ದೇಹಕ್ಕೂ ಮನಸ್ಸಿಗೂ ನಾವು ಗಮನ ಕೊಡುವದು ಹೆಚ್ಚು. ಅವರ ಯೋಗ ಕ್ಷೇಮ ನಿರ್ವಹಣೆಯಲ್ಲಿಯೇ ನಮ್ಮ ಕಾಲವೂ ಶಕ್ತಿಯೂ ಎಲ್ಲಾ ವ್ಯಯವಾಗುತ್ತವೆ. ಆದ್ದರಿಂದ ಅವುಗಳಿಂದ ಹೊರಡುವದು ಅತಿ ಸಾಮಾನ್ಯವಾದ ಸ್ವರವೇ. ಆ ಮಹಾ ಪ್ರಭು ಗುರುದೇವನೇ ಈ ವಾದ್ಯದ ಮೇಲೆ ಆಡಲಿ, ಕೈ ಆಡಲಿ, ನುಡಿಸಲಿ. ಅವನ ಮಹಾ ಪ್ರೇಮವು ನಮ್ಮ ಹೃದಯ ತಂತಿಯನ್ನು ಮಿಡಿದ ಒಡನೆಯೇ ಎಂದೆಂದೂ ಕನಸಿನಲ್ಲಿ ಸಹ ಕಂಡಿರದಂಥ ಸುಂದರ ಮಧುರ ಗಾನವು ಹರಿಯ ತೊಡಗುತ್ತದೆ. ವಿಸ್ಮಯಕರವಾದ ಬೆಳಕೂ ಇಂಪಾದ ಸ್ವರ ಮೇಳವೂ ಸುರಿಯ ತೊಡಗುತ್ತದೆ ; ದಿವ್ಯವಾದ ಮಧುರರಾಗವು ಸ್ಫೋಟವಾಗ ತೊಡಗುತ್ತದೆ : ಸ್ವರ್ಗೀಯ ಆತ್ಮಾವೇಶದ ಮಹಾ ಕಾವ್ಯವು ಉದಯವಾಗುತ್ತದೆ.

## ೩. ಮೃತ್ಯುವನ್ನು ಮೋಸಪಡಿಸುವದು

ಮೂಲರೂಪದಿಂದ ಪ್ರತಿರೂಪ ಯಾವದೆಂಬುದನ್ನು ಹೇಳಲಾರದಷ್ಟು ಪೂರ್ಣತೆಯಿಂದ ತನ್ನನ್ನು ತಾನು ಪ್ರತಿರೂಪ ಮಾಡಿಕೊಳ್ಳತಕ್ಕಂಥ ಜಾಣ ಮನುಷ್ಯನೊಬ್ಬನು ಒಂದಾನೊಂದು ಕಾಲದಲ್ಲಿ ಇದ್ದನು. ಮೃತ್ಯುದೇವತೆಯು ತನ್ನಲ್ಲಿಗೆ ಬರುತ್ತಾನೆಂಬದು ಅವನಿಗೆ ಗೊತ್ತಿತ್ತು; ಅವನಿಂದ ತಪ್ಪಿಸಿ ಕೊಳ್ಳುವದಕ್ಕೆ ಏನು ಮಾಡುವದೆಂಬದು ತಿಳಿಯದೆ. ಕೊನೆಗೆ ಸಮರ್ಥವೆನ್ನಬಹುದಾದ ಒಂದು ಉಪಾಯವನ್ನು ನಿಶ್ಚಯಿಸಿದನು. ಅವನು ತನ್ನನ್ನು ತಾನು ಹನ್ನೆರಡು ರೂಪಗಳನ್ನಾಗಿ ಮಾಡಿಕೊಂಡನು. ಮೃತ್ಯು ದೇವತೆಯು ಬಂದಾಗ ನಿಜವಾದ ಮನುಷ್ಯನಾರೆಂಬದು ತಿಳಿಯದೆ, ಇದ್ದುದರಿಂದ ಯಾರನ್ನೂ ಮುಟ್ಟದೇ ಬಿಟ್ಟು ಹೋದನು. ಆ ದೇವತೆಯು ದೇವರಲ್ಲಿಗೆ ಬಂದು, ಇಂಥಾ ಪರಿಸ್ಥಿತಿಯಲ್ಲಿ ತನ್ನ ಕರ್ತವ್ಯವನ್ನು ಹೇಗೆ ನಿರ್ವಹಿಸಬೇಕೆಂದು ಕೇಳಿದನು. ಈ ಮನುಷ್ಯನನ್ನು ತೆಗೆದು ಕೊಂಡುಹೋಗುವದಕ್ಕೆ ಪುನಃ

ಪ್ರಯತ್ನ ಮಾಡುವದಕ್ಕಾಗಿ, ದೇವರ ಸಲಹೆಯನ್ನು ಪಡೆದು ಭೂಲೋಕಕ್ಕೆ ಹಿಂದಿರುಗಿದನು. ಮೃತ್ಯು ದೇವನು ಆಶ್ಚರ್ಯದಿಂದ ಹೇಳಿದನು: "ಮಹಾಪುರುಷ ! ನಿನ್ನ ಜಾಣ್ಮೆಯೂ ಮಹಿಮೆಯೂ ಆಶ್ಚರ್ಯಕರವಾಗಿದೆ. ಹೇಗೆ ಒಂದೇ ಬಗೆಯ ಹನ್ನೆರಡು ಪ್ರತಿರೂಪಗಳನ್ನು ಮಾಡಿದ್ದಿ ! ನಿನ್ನ ಸಿದ್ಧಿಯು ಅದ್ಭುತವಾದುದು; ಒಂದಕ್ಕೊಂದಕ್ಕೆ ಯಾವದರಲ್ಲಿಯೂ ಸ್ವಲ್ಪವೂ ವ್ಯತ್ಯಾಸವಿಲ್ಲ. ಆದರೆ, ಒಂದೇ ಒಂದು ದೋಷವಿದೆ; ಒಂದರಲ್ಲಿ ಮಾತ್ರವೇ ತಪ್ಪಿದ್ದಿ" ಎಂದನು. ಒಮ್ಮೆಗೇ ನಿಜವಾದ ಆ ಮೂಲ ಮನುಷ್ಯನು ಹಾರಿ ಮುಂದೆ ಬಂದು "ಹಾ ! ಹಾ ! ಯಾವದರಲ್ಲಿ ತಪ್ಪಿದ್ದೇನೆ ? ಹೇಳು." ಎಂದು ಆತುರದಿಂದ ಕೇಳಿದನು. ಮೃತ್ಯುವು "ಓಹೋ ! ಇದರಲ್ಲಿಯೇ, ಈ ಪ್ರಶ್ನೆಯಲ್ಲಿಯೇ !" ಎಂದು ಜಡವಾದ ಮಿಕ್ಕ ಮೂಲ ಪ್ರತಿರೂಪಗಳಿಂದ ಈ ಜಾಣನನ್ನು ಬೇರ್ಪಡಿಸಿ ಹೇಳಿದನು. ಯಾರಲ್ಲಿಯಾದರೂ ಒಂದೇ ತಪ್ಪೆಂದರೆ, "ನಾನು ಸರಿಯೆ ? ನಾನು ಯೋಚನೆ ಮಾಡಿದ್ದು ಸರಿಯೆ ? ನಾನು ಮಾತಾಡಿದ್ದು ಸರಿಯೆ ? ನಾನು ಮಾಡಿದ್ದು ಸರಿಯೆ ?" ಎಂದು ಕೇಳುವದು. ಪ್ರೇಮಾತ್ಮ ! ನೀನು ಸರಿಯಲ್ಲದೆ ಮತ್ತೇನಾಗಬಲ್ಲೆ ? ನಾನು ಕರ್ತೃ, ನಾನು ಭೋಕ್ತೃ "ನಾನು ಮಾಡತಕ್ಕವನು, ನಾನು ಅನುಭವಿಸತಕ್ಕವನು" ಎಂಬ ಸಣ್ಣ ಹಸುಳೆಯನ್ನು ಮೃತ್ಯುವು ಅಪಹರಿಸಿ ಒಯ್ಯುತ್ತದೆ.

## ೪. ಇದು ನನ್ನ ಮೂಲಂಗಿ

ಕ್ಷಾಮಕಾಲದಲ್ಲಿ ಒಬ್ಬ ಬಡವಿಯು ಸತ್ತಳು. ಯಮಧರ್ಮರಾಜನು ಚಿತ್ರಗುಪ್ತರ [ಗುಪ್ತಚಿತ್ರದ] ಸಹಾಯದಿಂದ ಆಕೆಯ ಪುಣ್ಯ ಪಾಪ ಕರ್ಮಗಳ ಮರಣಾನಂತರದ ಶೋಧವನ್ನು ನಡೆಸುವಾಗ, ಹೊಟ್ಟೆಗಿಲ್ಲದೆ ಸಾಯುತ್ತಿದ್ದ ಒಬ್ಬ ಭಿಕ್ಷುಕನಿಗೆ ಒಂದು ಮೂಲಂಗಿಯನ್ನು ಒಮ್ಮೆ ದಾನ ಮಾಡಿದ್ದು ಹೊರತು ಬೇರೆ ಯಾವ ದಾನಧರ್ಮವನ್ನೂ ಆಕೆಯು ಮಾಡಿರಲಿಲ್ಲವೆಂದು ಸಿದ್ಧವಾಯಿತು. ಯಮನ ಆಜ್ಞೆಯಂತೆ ಆ ಮೂಲಂಗಿಯು [ಅದರ ಪ್ರತಿರೂಪವು] ತರಲ್ಪಟ್ಟಿತು. ಈ ಮೂಲಂಗಿಯು ಆಕೆಯನ್ನು ಸ್ವರ್ಗಕ್ಕೆ ಒಯ್ಯಬೇಕಾದುದಾಗಿತ್ತು. ಆಕೆಯು ಅದನ್ನು ಹಿಡಿದುಕೊಂಡಳು; ಅದು ಆಕೆಯನ್ನು ಎತ್ತಿಕೊಂಡು ಮೇಲಕ್ಕೆ ಏರುವದಕ್ಕೆ ತೊಡಗಿತು.

ಅಷ್ಟರೊಳಗೆ ಅಲ್ಲಿಗೆ ಆ ಹಳೆಯ ಬಿಕ್ಷುಕ ಬಂದನು. ಅವನು, ಅಂತರಿಕ್ಷದಲ್ಲಿ ಏರಿಹೋಗುತ್ತಿದ್ದ ಆಕೆಯ ಹರಕು ಸೀರೆಯ ಜೂಲನ್ನು ಹಿಡಿದುಕೊಂಡನು. ಆಕೆಯೊಡನೆ ಅವನೂ ಏರಲು ತೊಡಗಿದನು. ಮೂರನೆಯ ಮನುಷ್ಯನೊಬ್ಬನು ಅಷ್ಟರಲ್ಲಿ ಓಡಿಬಂದು, ದೈನ್ಯದಿಂದ ಬೇಡಿಕೊಂಡು, ಆ ಭಿಕ್ಷುಕನ ಕಾಲುಗಳನ್ನು ಹಿಡಿದುಕೊಂಡನು. ಆ ಪಾದಗಳಿಂದ ಜೋತುಬಿದ್ದ ಅವನೂ ಮೇಲಕ್ಕೆ ಏರಲು

ತೊಡಗಿದನು. ಹೀಗೆ ಆ ಒಂದು ಮೇಲೆತ್ತುವ ಮೂಲಂಗಿಯಿಂದ ಒಬ್ಬರ ಕೆಳಗೆ ಒಬ್ಬರಂತೆ ಅನೇಕ ಜನರ ಒಂದು ದೀರ್ಘ ಮಾಲೆಯೇ ಮೇಲೆ ಒಯ್ಯಲ್ಪಡತೊಡಗಿತು. ಆಶ್ಚರ್ಯವೆಂದರೆ, ತನ್ನೊಬ್ಬಳನ್ನೇ ಹಿಡಿದು ಮೇಲೇರುತ್ತಿದ್ದ ಇಷ್ಟೆಲ್ಲಾ ಜನರ ತೂಕವೂ ಆಕೆಗೆ ಭಾರವೆನಿಸಲಿಲ್ಲ. [ಕನಸಿನಲ್ಲಿಯೂ ಎಷ್ಟೋ ಸಲ ಹೀಗೆಯೇ ಕಾಣುವದಿಲ್ಲವೆ?]

ಸುರಕ್ಷಿತರಾದ ಈ ಜನರು ಸ್ವರ್ಗದ್ವಾರದ ವರೆಗೂ ಮೇಲೆ ಮೇಲೆ ಏರುತ್ತಲೇ ಹೋದರು. ಅಲ್ಲಿ ಆ ಮುದುಕಿಯು ಕೆಳಗೆ ನೋಡಿದಳು. ಆಕೆಯು ಯಾವ ಭಾವನೆಯಿಂದ ಪ್ರೇರಿತಳಾದಳೋ ತಿಳಿಯದು ; ಎಂಜಿನ್ನಿನ ಬೆನ್ನು ಹತ್ತಿದ್ದ ರೈಲು ಗಾಡಿಗಳಂತಿದ್ದ ಆ ಜನ ಪರಂಪರೆಯನ್ನು ನೋಡಿ "ಇಷ್ಟೊಂದು ಜನ ನನ್ನ ಸೀರೆಯ ಚುಂಗನ್ನು ಹಿಡಿದು ಮೇಲೇರಿ ಬಂದಿದ್ದೀರಾ? ಮುಟ್ಠಾಳರೇ! ತೊಲಗಿ; ಇದು ನನ್ನ ಮೂಲಂಗಿ" ಎಂದು ಹೇಳಿ, ಅವರನ್ನು ಆಟ್ಟುವಂತೆ ಮೂಲಂಗಿಯನ್ನು ಹಿಡಿದುಕೊಂಡಿದ್ದ ಎರಡೂ ಕೈಗಳನ್ನೂ ಎಚ್ಚರವಿಲ್ಲದೆ ಬಿಚ್ಚಿ ಬೀಸಿದಳು. ಆ ಮೂಲಂಗಿಯನ್ನು ಬಿಟ್ಟು ಕಳಚಿಕೊಂಡ ಕೂಡಲೇ ಆ ಮುದುಕಿಯೊಡನೆ ಆ ಜನ ರೈಲಿನ ಸಾಲೇ ಪೂರಾ ಭೂಮಿಗೆ ಬಿದ್ದಿತು.

ವಿಷಯವನ್ನು ಸರಳವಾಗಿ ತಿಳಿಸಿದೆ; ಇದರ ನೀತಿಯೂ ತತ್ತ್ವವೂ ಏನೆಂಬುದನ್ನು ನೀವೇ ತಿಳಿದುಕೊಳ್ಳಿ.

## ೫. ಸಮಾನತೆ

ಬೆಟ್ಟಕ್ಕೂ ಅಳಿಲಿಗೂ ಜಗಳವಾಯಿತು;
ಮೊದಲಿನದು ಎರಡನೆಯದನ್ನು 'ಪುಟ್ಟಪ್ರಾಣಿ' ಎಂದಿತು.
ಪುಟು ಪುಟು ಪುಟಿಯುತ್ತಿದ್ದ ಆ ಪುಟಾಣಿ ಹೇಳಿತು:
"ನೀನು ಬಹಳ ದೊಡ್ಡವನು ಸಂಶಯವಿಲ್ಲ,
ಆದರೆ ಎಲ್ಲಾ ಬಗೆಯ ಋತುಗಳೂ ಸೇರಿ ವರ್ಷವಾದಂತೆ
ಸಣ್ಣ ದೊಡ್ಡ ವಸ್ತುಗಳೆಲ್ಲಾ ಸೇರಿ [ಗ್ರಹ]ಗೋಳವಾಗುತ್ತವೆ.
ನನ್ನ ಸ್ಥಾನದಲ್ಲಿ ನಾನಿರಲು ನನಗೇನೂ ಅಪಮಾನವಿಲ್ಲ.
ನಿನ್ನಷ್ಟು ದೊಡ್ಡ ನಾನಲ್ಲದಿರೆ,
ನನ್ನಷ್ಟು ಸಣ್ಣ ನೀನೂ ಇಲ್ಲ.
ನನ್ನ ಅರ್ಧ ಚಟುವಟಿಕೆಯೂ ನಿನಗಿಲ್ಲ.
ನೀ ಬಹಳ ಮುದ್ದಾದ ಅಳಿಲ ಜಾಡನು
ಮಾಡಬಲ್ಲೆಯೆಂಬುದನ್ನು ನಾನಲ್ಲಗಳೆಯಲಾರೆನು.

ಸಹಜ ಶಕ್ತಿಗಳು ಬೇರೆ ಬೇರೆ ;
ಸಕಲವೂ ಸರಿಯಾಗಿಯೇ ಇವೆ; ಜಾಣ್ಮೆಯು ವ್ಯವಸ್ಥೆಯಾಗಿವೆ.
ನನ್ನ ಬೆನ್ನಿನ ಮೇಲೆ ನಾ ಕಾಡುಗಳ ಹೊರಲಾರೆನಾದರೆ,
ನೀ ಕರಟಕಾಯನೂ ಕಡಿಯಲಾರೆ, ಒಡೆಯಲಾರೆ,

## ೬. ಆಟಗಾರನಂತೆ ಕೆಲಸ ಮಾಡು

ಪ್ರಶ್ನೆ: ಸ್ವಾಮೀಜೀ ! ನಮ್ಮ ಆತ್ಮನೇ ಸಂಪೂರ್ಣ ಜ್ಞಾನ ಸ್ವರೂಪವೆಂದು ಹೇಳುತ್ತೀರಿ. ಆದ್ದರಿಂದ ಪುಸ್ತಕಗಳನ್ನು ಓದದೆ, ಈಗ ಬರಲಿರುವ ನನ್ನ ನ್ಯಾಯ ಶಾಸ್ತ್ರದ ಪರೀಕ್ಷೆಯಲ್ಲಿ ಅತ್ಯಂತ ಶ್ರೇಷ್ಠ ಬಹುಮಾನವನ್ನು ಪಡೆಯುವದಕ್ಕೆ ಯಾವ ದಾದರೂ ವೇದಾಂತ ಸಾಧನೆಯ ದಿವ್ಯದೃಷ್ಟಿಯಿದ್ದರೆ ದಯವಿಟ್ಟು ನನಗೆ ಹೇಳಿ.

ಉತ್ತರ: ಒಬ್ಬ ರಾಜಕುಮಾರನು ಬಾಲ್ಯದಲ್ಲಿ ಶ್ರೀಮಂತರ ಬಾಲಕರೊಡನೆ ಕಣ್ಣಾ ಮುಚ್ಚಾಲೆ ಆಟವಾಡುತ್ತಿದ್ದನು. ಹುಡುಗರನ್ನು ಹುಡುಕಲು ಅವನು ಬಹಳ ಕಷ್ಟಪಡಬೇಕಾಗುತ್ತಿತ್ತು. ಅದನ್ನು ನೋಡುತ್ತಿದ್ದ ಸಮೀಪಸ್ಥನೊಬ್ಬ "ರಾಜಪುತ್ರ ! ಈ ಬಾಲಕರನ್ನು ಕಂಡುಹಿಡಿಯಲು ಇಷ್ಟೊಂದು ಗೊಂದಲವೇಕೆ ಮಾಡುತ್ತಿ ? ನೀನು ಯಾರೆಂಬದನ್ನು ಮರೆತೆಯ ? ನಿನ್ನ ರಾಜತ್ವದ ಅಧಿಕಾರವನ್ನು ಚಲಾಯಿಸಿ ಆಜ್ಞೆ ಮಾಡಿದರೆ, ಈ ಕ್ಷಣವೇ ಎಲ್ಲರೂ ಓಡಿ ಬಂದು ನಿನಗೆ ನೆಲಮುಟ್ಟಿ ನಮಸ್ಕರಿಸುತ್ತಾರೆ" ಎಂದನು. ಆಗ ರಾಜಕುಮಾರನು "ಪೆದ್ದಪ್ಪ ! ಹಾಗಾದರೆ ಆಟದ ರುಚಿಯೇ ಹೋಗಿ ಬಿಡುತ್ತದೆ. ಈ ಕ್ರೀಡೆಯಲ್ಲಿ ಸ್ವಾರಸ್ಯವೇ ಉಳಿಯುವದಿಲ್ಲ." ಎಂದು ಹೇಳಿದನು. ಹೀಗೆಯೇ ನೀವು ನಿಜವಾಗಿಯೂ ಸರ್ವಜ್ಞ—ಸರ್ವಶಕ್ತನಾದ, ಸಮಸ್ತವನ್ನೂ ಆಳುವ ಪರಮೇಶ್ವರನೇ. ಆದರೂ ನಿಮ್ಮ ವಿದ್ಯಾ ವಿಷಯಗಳ ಶೋಧವನ್ನು ನೀವೇ ವಿನೋದವಾಗಿ ಪ್ರಾರಂಭಿಸಿರುವದರಿಂದ [ಜಗತ್ತಿನ ಎಲ್ಲಾ ಬಗೆಯ ಅಧ್ಯಯನ ಮತ್ತು ಸಾಧನಗಳ ಕಣ್ಣಾ ಮುಚ್ಚಾಲೆಯ ಚಕ್ರಭೀಮನ ಕೋಟೆಯಲ್ಲಿ] ಇಡೀ ಆಟವನ್ನೇ ಪೂರಾ ಸೋಲಿಸುವ ಅಧಿಕಾರವನ್ನು ಪ್ರಯೋಗಿಸುವದು ನ್ಯಾಯವಲ್ಲ. ಯಾವ ಭೂಮಿಕೆಯಲ್ಲಿ ಭೂತ—ಭವಿಷ್ಯತ್—ವರ್ತಮಾನಗಳು ಮತ್ತು ಸಹಸ್ರಾರು ಸೂರ್ಯ ಚಂದ್ರ ನಕ್ಷತ್ರಗಳೂ ನಿಮ್ಮ ಆತ್ಮನೇ ಆಗಿವೆಯೋ, ಅಲ್ಲ, ನಿಮ್ಮ ಅಪಾರವಾದ ಜ್ಞಾನ ಸಾಗರದಲ್ಲಿ ಎಲ್ಲಾ ವಸ್ತುಗಳೂ ಕೇವಲ ಅಲೆಗಳೂ ಸುಳಿಗಳೂ ಆಗಿವೆಯೋ ಅಲ್ಲಿ ನಿಮ್ಮ ನ್ಯಾಯಶಾಸ್ತ್ರದ ಪರೀಕ್ಷೆಗಳೂ ಪ್ರಾಪಂಚಿಕ ಯಶಸ್ಸೂ ಯಾವ ಮಹತ್ವದವು? ನಿಮಗೆ ದಿವ್ಯದೃಷ್ಟಿಯು, ಅತೀಂದ್ರಿಯ ದೃಷ್ಟಿಯ ಶಕ್ತಿಯು ಬೇಕಾದರೆ, ಯಾವದರಿಂದ ಯಾವದಕ್ಕಾಗಿ ಅದನ್ನು ಅಪೇಕ್ಷಿಸುತ್ತೀರೋ ಆ ಇಂದ್ರಿಯ ಭೂಮಿಕೆಯನ್ನೇ ಬಿಡಬೇಕು ಅಥವಾ ಬಿಟ್ಟು ಮೇಲೇರಬೇಕು.

ಮೀನನ್ನು ಹಿಡಿಯುವದಕ್ಕೆ ದೊಡ್ಡ ಬಲೆಯನ್ನು ಬೀಸಿತ್ತು. ಮೀನುಗಳು ಬಲೆಯಲ್ಲಿ ಬಿದ್ದ ಮೇಲೆ ಅವುಗಳ ಅದ್ಭುತ ಶಕ್ತಿಯಿಂದ ಆ ಬಲೆಯನ್ನೇ ಎಳೆದುಕೊಂಡು ಒಯ್ದುಬಿಟ್ಟವು. ವೇದಾಂತದ ಆ ನೂತನ ದಿವ್ಯದೃಷ್ಟಿಯು ಆಶಾಜಾಲವನ್ನೇ ಪೂರಾ ಹೊತ್ತುಕೊಂಡು ಒಯ್ಯುವ ಆ ವಿಲಕ್ಷಣ ಮೀನು. ಯಾವದಾದರೂ ಗ್ರಂಥವನ್ನು ಓದುವಾಗ ಅಥವಾ ಜ್ಞಾನವನ್ನು ಅಭ್ಯಾಸಮಾಡುವಾಗ ಅಹಂಕಾರದಿಂದಲೂ ದ್ವೈತ ಭಾವದಿಂದಲೂ ಅರಿವಿಲ್ಲದೆ ತಪ್ಪಿಸಿಕೊಳ್ಳುವದರಿಂದ ಜ್ಞಾನಾರ್ಜನೆಯ ಸಾಮಾನ್ಯ ಪದ್ಧತಿಯು ಅತೀಂದ್ರಿಯ ದೃಷ್ಟಿಯ ವೇದಾಂತ ಸಾಧನೆಯೇ.

ಮುಹಮ್ಮದೀಯ ಸಾಧುವಾದ ಇಮಾಂ ಘಿಜಲಿಯು, ವಿದ್ಯಾರ್ಥಿ ಜೀವನದಲ್ಲಿ, ಅವನ ನಿತ್ಯದ ಶ್ರಮಪೂರಿತವಾದ ಅಭ್ಯಾಸದನಂತರ ಒಂದು ರಾತ್ರಿ ಓದುತ್ತಿರುವಾಗ ನಿದ್ರೆ ಮಾಡಿದನು. ಆಗ ಅವನಿಗೆ ವಿದ್ಯಾಧಿದೇವತೆಯಾದ ಖ್ವಾಜಾ ಖಿಜಾರನು ದರ್ಶನ ಕೊಟ್ಟು, ಅವನ ಕಿವಿಗಳಲ್ಲಿಯೂ ಬಾಯಿಯಲ್ಲಿಯೂ ಸುಮ್ಮನೆ ಊದುವದರಿಂದ ಪ್ರಪಂಚದ ಸಮಸ್ತ ಜ್ಞಾನವನ್ನೂ ಅವನಿಗೆ ಅನುಗ್ರಹಿಸುವದಾಗಿ ಹೇಳಿದನು. ಆದರೆ ಇಮಾಂ ಘಿಜಲಿಯ ಸ್ವಾಭಿಮಾನವು ಅದನ್ನು ನಿರಾಕರಿಸಿತು. ಆದರೆ ಅದಕ್ಕೆ ಬದಲಾಗಿ ಅವನು ಮಧ್ಯ ರಾತ್ರಿಯ ವರೆಗೂ ಓದುತ್ತಿರುವದಕ್ಕೆ ಬೇಕಾದ ದೀಪದ ಎಣ್ಣೆಯನ್ನು ಒದಗಿಸುವ ವರವನ್ನು ಬೇಡಿದನು. ಸ್ವರ್ಗದ ಹಿಂಬಾಗಿಲಿನಿಂದ ಕದ್ದು ಒಳಗೆ ಪ್ರವೇಶಿಸುವದಕ್ಕೆ ಮನಸ್ಸೊಪ್ಪದೆ, ಸಮೀಪದ ಸೀಳುದಾರಿಗಿಂತಲೂ ದೂರದಾರಿಯನ್ನೇ ಅವನು ಉತ್ತಮವೆಂದು ಆರಿಸಿಕೊಂಡನು.

ದೇವರು ಹೇಗೆ ನಡೆದುಕೊಳ್ಳಬೇಕೆಂದು ಅವನಿಗೆ ಬುದ್ಧಿಯನ್ನು ಹೇಳಬೇಡಿ. ನಿಮ್ಮ ಇಚ್ಛೆಯನ್ನು ಅವನಿಗೆ ಆದೇಶವನ್ನಾಗಿ ನೀಡಬೇಡಿ. ನಿಮ್ಮನ್ನು ನೀವು ಸಮರ್ಪಣ ಮಾಡಿಕೊಳ್ಳಿ. ನಾನು ಎನ್ನುವ ಚಿಕ್ಕ ಆತ್ಮವನ್ನು—ಅಹಂಕಾರವನ್ನು—ಬಿಟ್ಟು ಬಿಡಿ; ಸುಳ್ಳು ಬಯಕೆಗಳನ್ನು ತ್ಯಜಿಸಿ, ಹೀಗೆ ಮಾಡಿದರೆ ನಿಮ್ಮ ತನುಮನಗಳಲ್ಲಿ ಬೆಳಕೇ ತುಂಬಿಕೊಳ್ಳುತ್ತದೆ. ಹೆಸರಿಗೆ ಯೋಗ್ಯವಾದ ಎಲ್ಲಾ ನಿಜವಾದ ಜ್ಞಾನವೂ ವಿದ್ಯೆಯೂ ಒಳಗಿನಿಂದಲೇ ಬರುತ್ತವೆ; ಪುಸ್ತಕಗಳಿಂದಾಗಲೀ ಹೊರಗಿನ ಮನಸ್ಸುಗಳಿಂದಾಗಲೀ ಬರುವದಿಲ್ಲ. ಅಸಾಧಾರಣ ಪ್ರತಿಭಾಶಾಲಿಗಳೂ ಸಂಶೋಧನಾ ಕ್ಷೇತ್ರಗಳಲ್ಲಿ ಮೂಲಭೂತವಾದ ಕಾರ್ಯ ನಡೆಸಿದವರೂ ಎಲ್ಲಾ ಹಂಬಲಗಳಿಂದಲೂ ಆತುರ ಕಾತರಗಳಿಂದಲೂ ಬಹಳ ದೂರ ದೂರವಾಗಿ, ತಮ್ಮ ಮನಸ್ಸನ್ನೂ ವ್ಯಕ್ತಿತ್ವವನ್ನೂ ಸ್ವಾರ್ಥಪರವಾದ ಒಲವುಗಳಿಂದ ಬಿಡುಗಡೆ ಮಾಡಿ, ಕೇವಲ ಭಾವದಲ್ಲಿ ಮುಳುಗಿರುವಾಗಲೇ ತಮ್ಮ ಪರೀಕ್ಷೆಗಳನ್ನೂ ಶೋಧಗಳನ್ನೂ ನಡೆಸಿದ್ದಾರೆ. ಅವರು ತಮ್ಮನ್ನು ತಾವು ಪಾರದರ್ಶಕವಾಗಿ ಮಾಡಿಕೊಂಡಿದ್ದರಿಂದ ಜ್ಞಾನ ಪ್ರಕಾಶವು ಅವರ ಮೂಲಕ ಬೆಳಗಿತು; ಅವರು ಪುಸ್ತಕಗಳ ಮೇಲೆ ಬೆಳಕನ್ನು ಚೆಲ್ಲಿದರು; ಪುಸ್ತಕ ಭಂಡಾರಗಳನ್ನೆಲ್ಲ ಪ್ರಕಾಶ ಪಡಿಸಿದರು. ಕಾರ್ಯವೆಂದರೆ ಇದು. ರಾಮನು ಕೆಲಸವೆಂದರೆ ಕತ್ತೆಚಾಕರಿ,

ಗುಲಾಮ ಚಾಕರಿ ಎಂದು ಎಂದೂ ಅರ್ಥಮಾಡುವದಿಲ್ಲ. ಕರ್ಮವೆಂದರೆ ವೇದಾಂತ ದಲ್ಲಿ ನಿಜಾತ್ಮನೊಡನೆ ಅವಿರೋಧವಾದ ಏಕತಾಲ—ಮಧುರಸ್ವರ ಸ್ಪಂದನಗಳು; ಮತ್ತು ವಿಶ್ವದೊಡನೆ ಸುಸ್ವರ—ಸ್ನೇಹ ಸಂಬಂಧ. ಒಂದೇ ಆದ ನಿಜತತ್ತ್ವದಲ್ಲಿ ನಿಸ್ಸ್ವಾರ್ಥವಾದ ಸಂಗಮ—ಇದೇ ನಿಜವಾದ ಕರ್ಮ; ಆದರೆ ಇದಕ್ಕೆ ಅನೇಕ ವೇಳೆ ಕರ್ಮವಲ್ಲವೆಂದೂ ಸೋಮಾರಿತನವೆಂದೂ ಹಣೆಯಬರಹದ ತಲೆಚೀಟಿಯನ್ನು ಹಚ್ಚಿ ನಿಂದನೆಯ ಸುಡು ಮುದ್ರೆಯನ್ನು ಒತ್ತುತ್ತಾರೆ. ವೇದಾಂತದ ಮನೋಭಾವ ದಲ್ಲಿ ಕೈಗೊಂಡ ಅತ್ಯಂತ ಪ್ರಯಾಸಕರವಾದ ಕಾರ್ಯವೂ ಕೂಡ ಸಂಪೂರ್ಣ ಸಂತೋಷ ವಾಗಿಯೂ ಆಟವಾಗಿಯೂ ಕಾಣುವದೇ ಹೊರತು, ಶ್ರಮಪೂರಿತ ಕರ್ಮವಾಗಿಯೂ ಹೊರೆಯಾಗಿಯೂ ತೋರುವದಿಲ್ಲ.

"Having nothing to do, be always doing" sums up Vedantic teaching".

"ಮಾಡುವದಕ್ಕೆ ಯಾವ ಕಾರ್ಯವೂ ಇಲ್ಲದೆ, ಯಾವಾಗಲೂ ಮಾಡುತ್ತಿರು". ಎಂಬೀ ವಾಕ್ಯದಲ್ಲಿ ವೇದಾಂತದ ಬೋಧೆಯ ಸಾರವೆಲ್ಲಾ ಸಂಗ್ರಹವಾಗಿದೆ. ಓ ಸಂತೋಷಿಯಾದ ಕೆಲಸಗಾರನೆ, ನೀನು ಯಶಸ್ಸನ್ನು ಬೆನ್ನುಹತ್ತಿ ಬಯಸುವದನು ಬಿಟ್ಟರೆ, ಯಶಸ್ಸು ನಿನ್ನನ್ನು ಹುಡುಕಿಕೊಂಡು ಬೆನ್ನುಹತ್ತಿ ಬರುತ್ತದೆ.

## ೭. ವಾಯುವಿಗೆ

ಯಾವದೂ ಚಲಿಸುವದಿಲ್ಲ ಸುತ್ತಲೂ
ಆದರೂ ಆ ಸದ್ದನಾಲಿಸು ಎತ್ತಲೂ
ಸ್ವೂ ಊ ಊ ನೀ ಸುಯ್ಯು
ಓ, ದೇಹವಿಲ್ಲದ ವಾಯು
ನಿಲ್ಲು, ತಡೆ, ಇತ್ತಕಡೆ, ಬಾ.
ಯಾವೆಡೆಗೆ? ನಮಗೆ ಪಿಸುನುಡಿ ತುಂಬಾ,
ನೀ ಉದ್ದಕೂ ವೇಗದಲಿ ಬೀಸುವೆಯೋ?
ಕಾಣದಂತೆ ಸುತ್ತಿ ಸುತ್ತಿ ಸುಳಿಯುವೆಯೋ?
ಗಿಡ ಮರಗಳ ತಲೆಗಳು ಒಲಿದೊಲಿದು ಬಾಗಿ,
ನಮ್ಮೆದುರಿಗೆ ಪರಿಮಳ ಬೀರುತಲೆ ಸಾಗಿ,
ನಮ್ಮ ಹಿಂದೆಯು ನೀ ಸುತ್ತಿ ಸುಳಿವೆ;
ನಮ್ಮ ಕಿವಿಗಳಲಿ ರಭಸದಿಂ ನುಗ್ಗುವೆ,
ನಮ್ಮ ಕೆನ್ನೆಗಳ ಮೇಲೆ ಪ್ರೀತಿಯಿಂದುಜ್ಜುವೆ.

ಜಾರುತಲೆ ಜಗುಳುತಲೆ ಚಿಂತಾಭರದಿ,
ಮರ್ಮರಿಸುತಲೆ ಗೊಣಗುಟಲೆ ಮೃದುರವದಿ,
ಶೋಕರಾಗದಲಿ ಶ್ಮಶಾನ ಗೀತೆಯ ನುಡಿವೆ ಜವದಿ.
ಸ್ವೂ ಊ ಊ ಸುಯ್ ಸುಯ್ ಸುಯ್ಯು !
ಓ ! ದೇಹವಿಲ್ಲದ ವಾಯು !
ನಿಲ್ಲು, ತಡೆ, ಇತ್ತಕಡೆ, ಬಾ,
ಯಾವ ಕಡೆ ನಮ್ಮ ಎಡೆ ಪಿಸುನುಡಿದು ಬಾ,
ನೀನುದ್ದಕೂ ವೇಗದಲಿ ಬೀಸುವೆಯೋ ?

ಓಂ ! ಓಂ ! ಓಂ !

## ಪ್ರೇಮ

ನಾನೆ ಆದಿ, ನಾನೆ ಅಂತ್ಯ
ಈ ಮೂರ್ಪಡುವ ವಿಶ್ವವೆಲ್ಲಕೆ, ಸತ್ಯ,
ಓ, ಮಾನವನೆ, ಇದರಾಚೆಗೇನಿಲ್ಲ ;
ಏಕೆನೆ, ನನ್ನಿಂದಲೇ ಸೂತ್ರಿತವಾಗಿಹವು ಎಲ್ಲ.
ಮಾಲೆಯಲಿ ದಾರದಿಂ ಮಣಿಗಳಂತೆ.
ನಾನೆ ನೀರಿನ ನಿರ್ಮಲತೆ ನೂತನತೆ,
ಸೂರ್ಯಚಂದ್ರರ ಪ್ರಭೆಯು,
ಪವಿತ್ರ ಭಾವನೆಯ ಸಾರಸಿರಿಯು,
ಶಬ್ದಗಳ ಶಬ್ದ, ಮನುಜರಲಿ ಮನುಜ,
ನಾನೆ ಜೀವನದ ಜೀವ ಓ ಮನುಜ !
ಎಲ್ಲ ನಿಜ ಭಕ್ತಿಯೂ ಕೇಂದ್ರ ಶಕ್ತಿ,
ಎಲ್ಲ ಭೂತಗಳ ಬೀಜವೆ ನಾನು ಶಿವಶಕ್ತಿ,
ನನ್ನ ನಿಯಮಗಳ ತಮ್ಮ ಕೃತಿಗಳಲಿ ಪಾಲಿಸುತೆ,
ಸತ್ಯದಲಿ ನನ್ನನಾರು ಪೂಜಿಪರೊ ನುತಿಸುತ್ತೆ
ಆ ಬಲಿಷ್ಠರ ಮೋಕ್ಷ್ ವಿವೇಕಿಗಳ ಜಾಣ್ಮೆ ನಾನೆ.
ತಮ್ಮ ಗುರಿ ಗಂತವ್ಯ ನಾನೆನುತ ಪರಿಗಣಿಸಿ,
ತಮ್ಮ ಹೃದಯಗಳ ಓ ಮನುಜ ! ಪ್ರೇಮದಲೆ ಇರಿಸಿ,
ಸರ್ವದಾ ನಾನೆ ಅವರಿಗೆ ಮಾರ್ಗದರ್ಶಿ, ವಿಮೋಚನೆಗೆ,
ದುಷ್ಕರ್ಮ ಜನ್ಮಗಳ ಉಕ್ಕೇರುತಿಹ ಜೀವನದಿಯಿಂ ಹೊರಗೆ.

ಯಾರ ಆಣತಿಯಿಂದೆ ಬುದ್ಧಿ ಯೋಚಿಪ್ಪದು?
ಯಾರ ಆಜ್ಞೆಯಿಂ ಜೀವ ಬದುಕಿಹುದು?
ಯಾರ ಬೆಳಕಿಂ ಮನವು ಗ್ರಹಿಸುವದು?
ಯಾವದದು ಕಿವಿಗಳನು ಕಣ್ಣುಗಳ ಬೆಳಗುತಿಹುದು?
ಅದು ಕಿವಿಯ ಕಿವಿ, ಮನದ ಮನ,
ಅದು ನುಡಿಯ ನುಡಿ, ಜೀವನದ ಜೀವ; ಪ್ರಾಣದಾ ಪ್ರಾಣ,
ಅದು ಕಣ್ಣಿನಾ ಕಣ್ಣು ಆತ್ಮದಾ ಆತ್ಮ,
ಅದು ನಾವು ನೋವುಗಳ ಅನ್ನದೊಲು ತಿನ್ನುವದು, ಅದೆ ಪರಮಾತ್ಮ!

* * *

## ಎಲ್ಲವೂ ಪ್ರೇಮ

ತತ್ತ್ವವನ್ನು ತಿಳಿಯುವದೆಂದರೆ ಸತ್ಯವನ್ನು ಪ್ರೇಮಿಸುವದು. ಸತ್ಯವೆಂದರೆ ಏನು? ತತ್ತ್ವಮಸಿ ಅಥವಾ ನೀವೇ ಪ್ರೇಮ ಸ್ವರೂಪರು. ಪ್ರೇಮವೇ ಬೇರೆ ಬೇರೆ ಹಂತಗಳಿಂದ ಕ್ರಮ ಕ್ರಮವಾಗಿ ಸಂಯೋಗ ಪ್ರವೃತ್ತಿ, ಸಂಸಕ್ತಿ, ಗುರುತ್ವಾಕರ್ಷಣ ಅತ್ಯಾಶೆ, ಆಶೆ, ಮಹದಾಸೆ, ದುರಾಶೆ, ಉತ್ಕಾಂಕ್ಷೆ—ಈ ಮೊದಲಾದ ಶಕ್ತಿಗಳಾಗಿ ವ್ಯಕ್ತವಾಗುತ್ತದೆ. ಈ ಪ್ರೇಮವೇ ಬಗೆ ಬಗೆಯ ರೂಪಗಳ ಮತ್ತು ತೀವ್ರತೆಯ ಸ್ಪಂದನಗಳಿಂದ ಕಾಂತಶಕ್ತಿಯಾಗಿಯೂ ವಿದ್ಯುಚ್ಛಕ್ತಿಯಾಗಿಯೂ ಪ್ರಕಾಶ, ಶಾಖ ಶಬ್ದ, ಮೊದಲಾದ ಶಕ್ತಿಗಳಾಗಿಯೂ ತೋರಿಕೊಂಡಿದೆ. ಭೌತಿಕ ಪರಮಾಣುಗಳೆಂದರೆ ಶಕ್ತಿಗಳ ಕೇಂದ್ರಗಳು—ಎನ್ನುವದೇ ಅತ್ಯಂತ ನಿಷ್ಕೃಷ್ಟವೂ ಯಥಾರ್ಥವೂ ಆದ ಭಾವವು, ಜ್ಞಾನವು. ವಸ್ತುವು ಅಂತಿಮ ವಿಭಜನೆಯಲ್ಲಿ ಕೇಂದ್ರೀಕೃತವೂ ಸಾಂದ್ರೀಕೃತವೂ ಆದ ಪ್ರೇಮವೆಂದು ಸಿದ್ಧವಾಗುತ್ತದೆ. ಅನೇಕತೆಯಲ್ಲಿ ಏಕತೆ, ಭಿನ್ನತೆಯಲ್ಲಿ ಏಕತಾನತೆ, ಸುಸಂಗತಿ; ವೈವಿಧ್ಯತೆಯಲ್ಲಿ ಸಾಂಗತ್ಯ, ಐಕ್ಯ—ಇದರ ಶೋಧವೇ ಎಲ್ಲಾ ನಿಯಮಗಳೂ ಆಗಿವೆ. ಈ ನಿಯಮವೇ ಪ್ರೇಮವು. ನಿಮ್ಮ ಕುತೂಹಲಿಗಳಾದ ಪತ್ತೇದಾರರಲ್ಲಿಯೂ ವಂಚಕರಾದ ಗುಪ್ತಚಾರರಲ್ಲಿಯೂ ಸಂದೇಹಾಸ್ಪದರಾದ ಸ್ನೇಹಿತರಲ್ಲಿಯೂ ಉಪದ್ರವಕಾರಿಗಳಾದ ಶತ್ರುಗಳಲ್ಲಿಯೂ ದ್ರೋಹಿಗಳಾದ ಸಂಗಾತಿಗಳಲ್ಲಿಯೂ ಕೆಲಸಮಾಡುತ್ತಿರುವದು ಪ್ರೇಮದ ಹೊರತು ಬೇರೆ ಶಕ್ತಿಯಲ್ಲ. ಈ ಜಗತ್ತನ್ನು ಆಳುವ ಸರಕಾರವು ಪ್ರೇಮದ ಹೊರತು ಬೇರೆಯಲ್ಲ. ಕಾರ್ಲೈಲ್‌ನು "Hatred is inverted love" "ವಿಪರ್ಯಸ್ತ ಪ್ರೇಮವೇ ದ್ವೇಷ; ತಲೆ ಕೆಳಗಾದ ಪ್ರೇಮವೇ ದ್ವೇಷ" ಎಂದು ಹೇಳಿದ್ದಾನೆ. ಕಿಕ್ಕಿರಿದ ಪ್ರೇಮವೇ ಭಯ; ಇಲ್ಲವಾದರೆ ಪ್ರಿಯವು ಭಯವನ್ನು ಜಯಿಸುವದು ಹೇಗೆ? ಒಂದು ಸಹಸ್ರ ಪೌಂಡುಗಳನ್ನು ಇಟ್ಟುಕೊಂಡು ಅರಣ್ಯದಲ್ಲಿ ಹೋಗುವ ಮನುಷ್ಯನು

ಆ ಹಣದ ಪ್ರೇಮದಿಂದಲೇ ಭಯಪಡುತ್ತಾನೆ. ಸ್ವತಂತ್ರವಾಗಿ ಬಿಡುಬೀಸ್ಯಾದ ಮನುಷ್ಯನು ಸಂಧಿಸಿದವರನ್ನೆಲ್ಲಾ ಸ್ವಾಗತಿಸಿ, ಅಭಿನಂದಿಸುತ್ತಾನೆ. ಸ್ವಚ್ಛಂದ ಪುರುಷನು ಏಕಪ್ರಕಾರವಾದ ಪ್ರೇಮ ಪ್ರಸರಣದ [ಪರಿಚಲನದ] ಆನಂದವನ್ನು ಅನುಭವಿಸುತ್ತಾನೆ. ಪ್ರೇಮವು ಒಂದೇ ಸತ್ಯವಾಗಿರುವ ಶಕ್ತಿಯು, ಪ್ರೇಮವು ತಾನೆಂಬದೇ ಮುಕ್ತಿಯು—ವಿಮೋಚನೆಯು. ಅರಿತೋ ಅರಿಯದೆಯೋ ಆ ಕೇವಲ ಪ್ರೇಮಪ್ರಜ್ಞೆಯನ್ನು ಸಂಪಾದಿಸುವದಕ್ಕೆ ನಡೆಸುವ ಹೋರಾಟವೇ ಜೀವನವು; ಆ ಗುರಿಯನ್ನು ಮುಟ್ಟುವದಕ್ಕೆ ಅತ್ಯಂತ ಶೀಘ್ರವಾದ ದಾರಿಯನ್ನು ಹಿಡಿಯಲು ಇಚ್ಛೆಯುಳ್ಳವನಾಗಿರುವದೇ ವಿವೇಕವು, ಜಾಣ್ಮೆಯು. ವಿಧವಿಧವಾದ ಪ್ರೇಮ ಶಕ್ತಿಗಳನ್ನು, ಆ ಗುರಿಯನ್ನು ಸಾಧಿಸುವದಕ್ಕೆ ಸರಿಯಾಗಿ ಹೊಂದಿಸಿಕೊಳ್ಳುವದೇ ಸದ್ಗುಣವು.

ಪ್ರೇಮದಲ್ಲಿ ವಿಶ್ವಾಸಘಾತವೆನ್ನುವದಿಲ್ಲ; ಅಥವಾ ಯಾರಾದರೂ ದ್ರೋಹಿಗಳೆನ್ನುವರೂ ಇಲ್ಲ. ನಿಷ್ಠೆಯಿಲ್ಲದವನು, ವಿಶ್ವಾಸವಿಲ್ಲದವನು ಎಂಬದಿಲ್ಲ. ಯಾವನೊಬ್ಬನು ಯೆಹೂದಿಯೋ ಮಹಮ್ಮದೀಯನೋ ಶೂದ್ರನೋ ಬ್ರಾಹ್ಮಣನೋ ಎಂಬದರ ಮೇಲೆ ಅವನಲ್ಲಿರುವ ಸಾಧ್ಯತೆಯ ವಿಷಯದಲ್ಲಿ ನಮ್ಮ ಭಾವನೆಗೆ ಪರಿಮಿತಿಯನ್ನು ಹಾಕುವದಕ್ಕೆ ನಮಗೆ ಅಧಿಕಾರವಿಲ್ಲ. ಯಾವದೊಂದು ಮತತತ್ತ್ವಕ್ಕೋ ಸಿದ್ಧಾಂತಕ್ಕೋ ಪ್ರಮಾಣ ಪೂರ್ವಕವಾಗಿ ದಾಸರಾದವರು ಸಹ ವಿಮೋಚನೆ ಹೊಂದಲು ಬದ್ಧರಾಗಿದ್ದಾರೆ. ಕೃಷ್ಣನು ಗೋಪಿಯರನ್ನು ಅವರ ಗಂಡಂದಿರು ಎನ್ನಿಸಿಕೊಂಡವರ ಮನೆಗಳಿಂದ ಹೊರಗೆಳೆದಂತೆ ದೇವರು—ಸತ್ಯವು—ನಿಮ್ಮನ್ನು ಅಸಹಜತೆಯ ಹಾಗೂ ಸಂಪ್ರದಾಯ ಶೀಲತೆಯ ಹಿಡಿತದಿಂದ ಹೊರ ಸೆಳೆಯಬೇಕು.

ಮನುಷ್ಯನ ನಿಜವಾದ ಆತ್ಮನೆಂದರೆ ಇಂದ್ರಿಯಾತೀತವಾದ ಪ್ರೇಮವೇ ಹೊರತು ಬೇರೆ ಅಲ್ಲ. ನೀವೇ ಪ್ರೇಮ ಸ್ವರೂಪರು. ಓ ನೀವೇ ವಿಶ್ವಾತ್ಮರು. ನೀವೇ ಒಂದು ಕಡೆ ಲೈಲಿಯ ಕಳಕಳಿಸುವ ಕೆನ್ನೆಗಳಲ್ಲಿ ನಾಚಿ ಕಳೆಯೇರುವ ಗುಲಾಬಿಯ ಕಾಂತಿಯಾಗಿದ್ದೀರಿ. ಇನ್ನೊಂದು ಕಡೆ ಮಜ್ನುವಿನ ರಕ್ತ ಚಿಮ್ಮುವ ಹೃದಯದಲ್ಲಿ ಪ್ರೀತಿ ಕಾತರದ ಕಾರಂಜಿಯಾಗಿದ್ದೀರಿ. ವಾಸ್ತವ ಜೀವನದಲ್ಲಿ ಈ ಸತ್ಯವನ್ನು ಮನಗಂಡು ಭಾವಿಸುವದೇ ಪರಿಶುದ್ಧತೆ. ಆದರೆ ಯಾರು ವಿಷಯಗಳನ್ನು ಬಯಸಿ, ಅವು ತಮ್ಮಲ್ಲಿ ಒಂದಾಗಿಲ್ಲವೆಂಬಂತೆ, ಭಿನ್ನವೆಂಬಂತೆ, ಹಂಬಲಿಸಿ ತೊಳಲಿ ಬೆನ್ನು ಹತ್ತುತ್ತಾರೋ ಅವರು ತಮ್ಮ ದಿವ್ಯಾತ್ಮವನ್ನು ಒತ್ತಾಯದಿಂದ ಕಿತ್ತುಹಾಕಿದಂತೆ ಆಗುವದರಿಂದ ಅಶುದ್ಧರಾಗುತ್ತಾರೆ. ದೂರವಿಡುವದೂ ಸುರುಟಿಕೊಳ್ಳುವದೂ ಮುದುರಿಕೊಳ್ಳುವದೂ ಪರಿಶುದ್ಧಿಯಲ್ಲ. ಸೌಂದರ್ಯವನ್ನು ವಿರೋಧಿಸುವದೂ ತಪ್ಪಿಸಿಕೊಳ್ಳುವದೂ ಜಿತೇಂದ್ರಿಯತ್ವದ ಶುದ್ಧಿಯಲ್ಲ. ಎಲ್ಲಿ ಎಲ್ಲಾ ಸೌಂದರ್ಯವೂ ನನ್ನಲ್ಲಿಯೇ ಹೀರಿಕೊಂಡು ಕರಗಿಹೋಗುವದೋ ಅದೇ ನಿಜವಾದ ಪರಿಶುದ್ಧಿ; ಯಾವದಾದರೂ ಒಂದು ವಸ್ತುವನ್ನು ಸೇರಬೇಕೆಂದು ಯೋಚನೆ ಮಾಡಿದರೂ

ಮಾತನಾಡಿದರೂ ಆದರಿಂದ ವಿಯೋಗ ಹೊಂದುವ ಸೂಚನೆಯ ನೋವು ಕಾಣು ವಷ್ಟು ತೀವ್ರವಾಗಿ ನಾನು ಎಲ್ಲ ವಸ್ತುಗಳೊಡನೆಯೂ ನನ್ನ ಆಧ್ಯಾತ್ಮಿಕ ಏಕತ್ವವನ್ನು ಭಾವಿಸಿ ಆನಂದಪಡುತ್ತೇನೆ.

"ಹಾಗಾದೊಡೆ ಅವನೊಡನೆ ಮಾತನಾಡಿ, ಏಕೆನೆ, ಅವ ಕೇಳಬಲ್ಲನು,
ಚೇತನವು ಚೇತನವ ಸೇರಬಲ್ಲದು;
ಉಸಿರಾಟಕ್ಕಿಂತ ಅವನೆ ಹೆಚ್ಚು ಹತ್ತಿರ, ಮೇಣ್ ಕೈಕಾಲುಗಳಿಗಿಂತ
ಹೆಚ್ಚು ಸಮೀಪ, ಸತ್ಯವಿದು.
ಸೂರ್ಯ, ಶಶಿ ನಕ್ಷತ್ರಗಳು, ಬೆಟ್ಟಗಳು ಮೈದಾನಗಳು
ಓ ಆತ್ಮ! ವಿಶ್ವವಾಳುವ ಪ್ರಭುವಿನ ದರ್ಶನವಲ್ಲವೆ ಈ ವಿಲಾಸಗಳು?"

ಟೆನ್ನಿಸನ್.

ಉರುಳುತಿಹ ಗಾಳಿಯಲಿ ನಿನ್ನ ದನಿ ಇಹುದು,
ಹರಿಯುತಿಹ ನೀರಿನಲಿ ಆ ದನಿಯು ಕೇಳುತಿಹುದು,
ಉದಿಸುತಿಹ ಸೂರ್ಯನಲಿ ನೀನೆ ನಿಂದಿಹೆಯೋ,
ಮೊಳಗುತಿಹನಲಿ ನೀನೆ ರಮ್ಯನಾಗಿಹೆಯೋ.
ಬಹುದೂರ ನೀನಿರ್ದರೂ ಎಂದಿಗೂ ಹತ್ತಿರವೆ ಇರುವೆ,
ನಿನ್ನನಾಲಿಸುವೆ ಇನ್ನೂ ಮೇಣ್ ಹರ್ಷಿಸುವೆ.
ನಿನ್ನ ದನಿಯಿಂ ಸುತ್ತಿರುವ ನಾನೆ ಏಳಿಗೆಯ ಪಡೆವೆ.
ನಾ ಸತ್ತರೂ ನಿನ್ನ ಕಳೆದು ಕೊಳ್ಳದಿರುವೆ.

ಇರುವದೆಲ್ಲಾ ಬರುವದೆಲ್ಲಾ ಒಳ್ಳೆಯದೆ—ಯಾವದು ಯೋಗ್ಯವೋ ಯಾವದು ಉಚಿತವೋ ವಿಹಿತವೋ ಹಿತವೋ ಅದೇ ದೇವರು. ಪ್ರಪಂಚದ ಚಲನ ವಲನವೆಂದರೆ ಕಾಲಾನುಗುಣವಾದ ನಿರಂತರ ಹೊಂದಾಣಿಕೆಯೇ ಹೊರತು ಬೇರೆ ಅಲ್ಲ. ಆದ್ದರಿಂದ ಪ್ರಪಂಚವು ಅಖಂಡ ಶುಭವಾಹಿನಿಯು ಹೊರತು ಬೇರೆಯಲ್ಲ. ಎಲ್ಲೆಲ್ಲಿ ಜನರ ಹಿಂದಿನ ಸಂಪ್ರದಾಯ ಶೀಲ ಹೊಂದಾಣಿಕೆಯು ಓಡುತ್ತಿರುವ ಇಂದಿನ ಹೊಸ ಹೊಂದಾಣಿಕೆಗೆ ವಿರೋಧವಾಗಿದೆಯೋ ಅಲ್ಲಿ ಪ್ರತಿಭಟಿಸಲಾಗದ ತ್ವರಿತ ಗತಿಯ ಹೊಂದಾಣಿಕೆಯ ಮುನ್ನಡೆಯ [ಮಧುರ ಮೈತ್ರಿಯ ಮೇಳ ಅಥವಾ ದೇವರು] ಕೋಲಾಹಲಕಾರಿಯೂ ಥಳಥಳಾಯಮಾನವೂ ಆದ ಕ್ರಾಂತಿಯ ಪ್ರದರ್ಶನದಿಂದ ಜೊತೆಗೂಡುತ್ತದೆ.

ಸರಿಯಾದ ಪ್ರತಿ ವಸ್ತುವು ಸಿಕ್ಕ ಹೊರತು ನಾವು ಯಾವ ವಸ್ತುವನ್ನೂ ಬಿಡಲಾರೆವು. ಪ್ರಗತಿಯು ಕ್ರಮ ಕ್ರಮವಾಗಿ ಸಾವಕಾಶವಾಗಿರಬೇಕು. ಒಂದು ದೃಷ್ಟಿಯಿಂದ ಪ್ರೇಮವೂ ಆಸಕ್ತಿಯೂ ಒಂದು ಬಗೆಯ ಹಿಡಿತವು, ಬಿಗಿಹಿಡಿತವು; ಇನ್ನೊಂದು

ದೃಷ್ಟಿಯಿಂದ ತ್ಯಾಗಕ್ಕಿಂತಲೂ ಕಡಿಮೆಯೇನಲ್ಲ. ಪ್ರೇಮವು ಒಂದು ವಸ್ತುವಿನಿಂದ ಇನ್ನೊಂದು ವಸ್ತುವಿಗೆ ಹರಿಯುತ್ತದೆ. ಪ್ರೇಮದ ವಿಷಯಗಳು ಯಾವಾಗಲೂ ಬದಲಾವಣೆಯಾಗುತ್ತಲೇ ಇರುತ್ತವೆ. ಪ್ರತಿಯೊಂದು ವಿಕಾಸದ ಕ್ರಿಯೆಯಲ್ಲಿಯೂ ಬೆಳವಣಿಗೆಯಲ್ಲಿಯೂ ಅದು ಹಳೆಯ ಹಲವು ಸ್ನೇಹ ಸಂಬಂಧಗಳನ್ನು ಬಿಟ್ಟು ಬಿಡುತ್ತದೆ. ಕ್ರಮ ಕ್ರಮವಾಗಿ ಒಂದು ವ್ಯಕ್ತಿಯು ಪ್ರೇಮದೊಡನೆಯೇ ಪ್ರೇಮದಲ್ಲಿ ಬೀಳುವ [ಹೆಚ್ಚು ಸರಿಯೆಂದರೆ ಏಳುವ] ಕಾಲವು ಕೊನೆಯಲ್ಲಿ ಬರುತ್ತದೆ. ಪ್ರತಿಯೊಬ್ಬರ, ಎಲ್ಲರ ಆತ್ಮವೇ ಪ್ರೇಮದ ವಿಷಯವಾಗುತ್ತದೆ; ಮತ್ತು ಪ್ರೇಮಿಯು ತನ್ನ ಆತ್ಮನಾದ ಪರಮಾತ್ಮನಲ್ಲಿಯೇ ಲಗ್ನವಾಗುತ್ತಾನೆ; ಪುನಃ ಸಂಯೋಗವಾಗುತ್ತಾನೆ. ಈ ವಿವಾಹದ ಅನಂತರ ['Re' again, 'ligo' Unite=Religion ಆತ್ಮನಲ್ಲಿ ಪುನರ್ಮಿಳನವೇ ಧರ್ಮ] ನಿಜವಾದ ಪ್ರೇಮಿಯು ಇಡೀ ವಿಶ್ವವನ್ನೇ ತನ್ನ ಆಳವಿನಲ್ಲಿ—ಆಲಿಂಗನದಲ್ಲಿ—ಕಂಡುಕೊಳ್ಳುತ್ತಾನೆ. ಪ್ರತಿಯೊಂದು ಪದಾರ್ಥವೂ ಅವನ ಹಿಡಿವಿನಲ್ಲಿ ಬರುತ್ತದೆ. ಅಂಥವನು ಏನನ್ನು ಬಯಸಬೇಕಾಗಿದೆ? ಆಗಲೇ ನಮ್ಮ ತೋಳಿನ ತೆಕ್ಕೆಯಲ್ಲಿಯೇ ಸಿಕ್ಕಿರುವ ಮನೋಹರ ವಧುವನ್ನು ಬಯಸುವ ಆಗತ್ಯವಿದೆಯೆ?

ತನ್ನ ಆತ್ಮನೇ ಸರ್ವವೂ ಎಂದು ಒಬ್ಬನು ಕಂಡುಕೊಂಡ ಮೇಲೆ ಅವನು ಬಯಸಲಾರನು; ಆದರೆ ಎಲ್ಲವೂ ತನ್ನವೇ ಎಂದು ಸಂತೋಷಪಡುತ್ತಾನೆ. ಅವನು ತನ್ನ ಕೆಲಸವೇ ಒಳ್ಳೆಯದೆಂದು ತಿಳಿಯುತ್ತಾನೆ. ಪ್ರತಿಯೊಂದು ವಸ್ತುವೂ ಅವನಿಗೆ ಅವರ್ಣನೀಯವಾದ ಆನಂದವನ್ನು ತರುತ್ತದೆ. ಮಣ್ಣಿನಿಂದ ಮೋಡದ ವರೆಗೂ ಪರಮಾಣುವಿನಿಂದ ಅತ್ಯಂತ ಮಹತ್ತಾದ ಸೂರ್ಯನವರೆಗೂ ಹರಿದಾಡುವ ಅತ್ಯಂತ ಕನಿಷ್ಠ ಕ್ರಿಮಿಯಿಂದ ಅತ್ಯಂತ ದೂರದ ಥಳಥಳಿಸುವ ನಕ್ಷತ್ರದ ವರೆಗೂ ಎಲ್ಲವೂ ಅವನ ಮಹಿಮೆಯನ್ನೇ ಸಾರುತ್ತವೆ; ಎಲ್ಲಾ ಅವನ ಗುಣಗಳನ್ನೇ ಗಾನ ಮಾಡುತ್ತವೆ, ಕೀರ್ತನೆ ಮಾಡುತ್ತವೆ. ಅಂಥವನಿಂದ ಬೇರೆಯಾದುದು ಯಾವದೂ ಇಲ್ಲ.

ಪ್ರಪಂಚವನ್ನು ಅತಿಯಾಗಿ ಹಚ್ಚಿಕೊಳ್ಳಬೇಡಿ.

ರಾಮನು ತನ್ನೆದುರಿಗೆ ಎರಡು ವಸ್ತುಗಳನ್ನು ಕಾಣುತ್ತಾನೆ. ಒಂದು, ಬಣ್ಣ ಬಣ್ಣದ ಸುವಾಸನೆಯ ಹೂವು, ಇನ್ನೊಂದು ಕನ್ಯೆ. ಹೂವನ್ನು ವಿಭಜನೆ ಮಾಡಿದರೆ ಅದರಲ್ಲಿ ಕಣಕಣಗಳ ನಡುವೆ ಅಂಟಿಕೊಳ್ಳುವ [ಸಂಸಕ್ತ] ಸ್ವಭಾವವು ಅಥವಾ ಪ್ರವೃತ್ತಿಯು—ಶಕ್ತಿಯು—ಮಿಕ್ಕ ಎಲ್ಲಾ ಪದಾರ್ಥಗಳಲ್ಲಿರುವಂತೆ ಎಲ್ಲಾ ಕಣಗಳನ್ನೂ ಒಟ್ಟು ಸೇರಿಸಿ [Cohesion] ಹಿಡಿದುಕೊಂಡಿರುತ್ತದೆ. ಅದರಲ್ಲಿ ಉಷ್ಣತೆ, ಗುರುತ್ವಾಕರ್ಷಣ, ಕಾಂತಶಕ್ತಿ, ಮೊದಲಾದ ಬೇರೆ ಶಕ್ತಿಗಳೂ ಇವೆ.

ಕನ್ನೆಯಲ್ಲಿ ಆದರೋ ಊಹಿಸಬಹುದಾದ—ಕಲ್ಪಿಸಬಹುದಾದ—ಎಲ್ಲಾ ಕೌತುಕಗಳೂ ಚಮತ್ಕಾರಗಳೂ ವಿಸ್ಮಯಗಳೂ ಗುಟ್ಟಾಗಿ ಅಡಗಿವೆ; ಮುಖ್ಯವಾಗಿ ಅವಳ ತಲೆಯಲ್ಲಿ ಅಡಗಿವೆ. ಇಡೀ ವಿಶ್ವವನ್ನು ಒಳಗೊಂಡ ಎಲ್ಲಾ ದೇಶ ಕಾಲಗಳೂ ಅಲ್ಲಿ ತುಂಬಿವೆ. ಆ ತಲೆ ಎನ್ನುವ ಒಂದು ಚೆಂಡಿನಲ್ಲಿ ಇಡೀ ಜಗತ್ತು ಅಡಗಿಕೊಂಡಿದೆ. ಈ ವಿಶ್ವವು ತಲೆಯಲ್ಲಿ ಕೇವಲ ಭಾವನಾ ಮಾತ್ರವಾಗಿದೆ. ಒಬ್ಬರಿಂದೊಬ್ಬರಿಗೆ ಚೆಂಡನ್ನು ಎಸೆದಾಡುವಂತೆ ಒಂದು ತಲೆಯಿಂದ ಇನ್ನೊಂದು ತಲೆಗೆ ಈ ಪ್ರಪಂಚ ಭಾವನೆಯನ್ನು ಸಾಗಿಸದಿದ್ದರೆ, ಈಗ ನಮಗಿರುವಂತೆ ಪ್ರಪಂಚದ ಅನುಭವ ಇರುತ್ತಿರಲಿಲ್ಲ. ಈ ಮೋಹ ನಿದ್ರೆಯನ್ನು— ಪಶ್ಯಸುಷ್ಟಿಯನ್ನು—ಅಥವಾ ಪ್ರಪಂಚ ಕಲ್ಪನೆಯನ್ನು ನಾವು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೂ ಒಂದು ದೇಶದಿಂದ ಇನ್ನೊಂದು ದೇಶಕ್ಕೂ ಸಾಗಿಸುತ್ತೇವೆ; ಎಸೆಯುತ್ತೇವೆ. ಇದೇ ಇಡೀ ಪ್ರಪಂಚ; ನಿಮ್ಮ ಪ್ರಪಂಚ, ನಮ್ಮ ಪ್ರಪಂಚ, ನಿಮ್ಮ ಭಾವನೆ, ನೀವೇ ಮಾಡಿಕೊಂಡಿದ್ದು. ಈ ಚೆಂಡಾಟವನ್ನು ಅತಿಯಾಗಿ ನಡೆಸಬೇಡಿ, ನೆಚ್ಚಬೇಡಿ. ಇದು ನಮ್ಮದೇ ಆದ ತಲೆಚೆಂಡು [ Head-ball ], ಕಾಲುಚೆಂಡು [ Foot-ball ] ಈ ಹುಡುಗಾಟದಲ್ಲಿ ಅತಿಯಾಗಿ ರಮಿಸಬೇಡಿ.

Renunciation alone leads to immortality
ತ್ಯಾಗ ಒಂದೇ ಅಮೃತತ್ವಕ್ಕೆ ಒಯ್ಯುತ್ತದೆ.

ನಿಮ್ಮ ಮನೋನೇತ್ರದ ಮುಂದೆ [ The ballness of the world and allness of your Real-self ] ಪ್ರಪಂಚದ ಚೆಂಡುತನವನ್ನೂ ನಿಮ್ಮ ನಿಜಾತ್ಮನ ಸರ್ವಾತ್ಮತ್ವವನ್ನೂ ಸರ್ವತ್ವವನ್ನೂ ನಿರಂತರವಾಗಿ ಇಟ್ಟುಕೊಂಡು ಎಲ್ಲಾ ಚಿಂತೆಯನ್ನೂ ಭಯವನ್ನೂ ಆತುರ ಕಾತರಗಳನ್ನೂ ಕ್ಲೇಶಗಳನ್ನೂ ಎತ್ತಿ ಎಸೆಯುವದೇ ವ್ಯವಹಾರ ಯೋಗ್ಯವಾದ ತ್ಯಾಗವು. ಪ್ರಪಂಚದ ಚೆಂಡುತನವೆಂದರೆ, ಆಟಕ್ಕಾಗಿ ಚೆಂಡನ್ನು ಉಪಯೋಗಿಸುವಂತೆ ಪ್ರಪಂಚ ವ್ಯವಹಾರವನ್ನೆಲ್ಲಾ ಆಟವಾಗಿ ಎಣಿಸಬೇಕು ಎಂಬ ಸೂಚನೆಯೂ ದುಂಡಾಗಿರುವ ಚೆಂಡು ದುಂಡಾಗಿರುವ [0] ಸೊನ್ನೆಯನ್ನೂ ಸೊನ್ನೆಯು ಶೂನ್ಯವನ್ನೂ ಸೂಚಿಸುವದರಿಂದ ಪ್ರಪಂಚವನ್ನೆಲ್ಲಾ ಮಿಥ್ಯೆಯೆಂದು—ಶೂನ್ಯಪ್ರಾಯವೆಂದು—ತಿಳಿಯಬೇಕೆಂಬ ಬೋಧನೆಯೂ ಬರುತ್ತದೆ. ಚೆಂಡಿನೊಳಗೆ ಬರಿ ಪೊಳ್ಳು ಇರುವದರಿಂದ, ನಾವು ಭಾವಿಸಿದರೆ ಮಾತ್ರ ತೋರುವ ಪ್ರಪಂಚವನ್ನು ನಿಜವಲ್ಲವೆಂದು ನಮ್ಮ ತಲೆಯಿಂದ ಹೊರಗೆ ಹಾಕಿ ತಲೆಯನ್ನು ಚೆಂಡಿನಂತೆ ಹಗುರವಾಗಿಯೂ ಪೊಳ್ಳಾಗಿಯೂ [ಖಾಲಿ] ನಿರ್ಮಲ ಚಿದಾಕಾಶ ಮಾತ್ರವಾಗಿ ಮಾಡಿಕೊಳ್ಳಬೇಕು—ಎಂದು ಬೋಧೆಯಾಗುತ್ತದೆ. ನೀವು ಕಡ್ಡಾಯವಾಗಿ ನಡೆಸಲೇ ಬೇಕಾದ ಕರ್ತವ್ಯವು ಯಾವದೂ ಇಲ್ಲ; ನೀವು ಯಾರಿಗೂ ಯಾವದಕ್ಕೂ ಬದ್ಧರಲ್ಲ; ನೀವು ಯಾರಿಗೂ ಹೊಣೆಗಾರರಲ್ಲ; ನೀವು ಯಾರಿಗೂ ಋಣಿಗಳಲ್ಲ; ಸಾಲ

ತೀರಿಸಬೇಕಾದುದಿಲ್ಲ. ಎಲ್ಲಾ ಸಮಾಜಗಳಿಗೂ ರಾಷ್ಟ್ರಗಳಿಗೂ ಎಲ್ಲಕ್ಕೂ ಎದುರಾಗಿ ನಿಮ್ಮ ವೈಯಕ್ತಿಕ ಅನಂತತೆಯನ್ನು ಒತ್ತಿಹೇಳಿ, ಎತ್ತಿ ತೋರಿಸಿ, ಪ್ರತಿಪಾದಿಸಿ, ಸಾಧಿಸಿ. ಇದೇ ವೇದಾಂತವು. ಸಮಾಜವೂ ಸಂಪ್ರದಾಯಗಳೂ ಪದ್ಧತಿಯೂ ಕಾಯಿದೆಗಳೂ ನಿಯಮಗಳೂ ನಿಬಂಧನೆಗಳೂ ಆಕ್ಷೇಪಗಳೂ ವಿಮರ್ಶೆಗಳೂ ನಿಮ್ಮ ನಿಜವಾದ ಆತ್ಮನನ್ನು ಸೋಂಕಲಾರವು. ಒಂದು ಸಣ್ಣ ತೆಳುವಾದ ಸ್ತಂಭಾಕಾರದಲ್ಲಿರುವ ನೀರು ಇಡೀ ಸಮುದ್ರದ ಒತ್ತಡವನ್ನು ಸರಿಜೋಡಿಯಾಗಿ ಸಮದೂಗಬಲ್ಲದೆಂದು ಜಲ ಸಮಸ್ಥಿತಿ ಶಾಸ್ತ್ರವು [ Hydrostatics ] ಹೇಳುತ್ತದೆ. ಓ ! ವ್ಯಷ್ಟಿ ಅನಂತವೇ ! ನಿನ್ನ ಕಾಲ ಮೇಲೆ ನೀನು ನಿಲ್ಲುವದಕ್ಕೆ ಧೀರನಾಗು; ಹಾಗಾದರೆ ಇಡೀ ವಿಶ್ವದ ತೂಕವನ್ನು ತಡೆಗಟ್ಟಬಹುದು. ಇದನ್ನು ತೀವ್ರವಾಗಿ ಭಾವಿಸಿರಿ. ಭಯವನ್ನು ಎತ್ತಿ ಎಸೆಯಿರಿ, ಚಿಂತೆಯನ್ನು ಬಿಡಿ. ಪರಿಮಿತವೂ ಭೇದ್ಯವೂ ಆದ ಅಹಂಕಾರವನ್ನು ತೊಲಗಿಸಿ. ಓಂಕಾರಕ್ಕೆ ಈ ಎಲ್ಲಾ ಅರ್ಥವನ್ನೂ ಕೊಟ್ಟು ಉಚ್ಚರಿಸಿ, ಜಪಿಸಿ, ಗಾನಮಾಡಿ.

ಓಂ ! ಓಂ ! ಓಂ !

# REST-ವಿಶ್ರಾಂತಿ

ಜೀವನದ ಅನಂತ ಮುಖವಾದ ತಗಾದೆಗಳೂ ಆವಶ್ಯಕತೆಗಳೂ ಅಪೇಕ್ಷೆಗಳೂ ಆತಂಕಗಳೂ ಮತ್ತು ದೈಹಿಕ—ಮಾನಸಿಕ ಶಕ್ತಿಗಳ ಮೇಲೆ ಬಗೆ ಬಗೆಯಾದ ಹಕ್ಕು ಬಾಧ್ಯತೆಗಳ ಸಾಧನೆಗಳೂ ಪ್ರತಿಪಾದನೆಗಳೂ ಎಳೆತ ಸೆಳೆತಗಳೂ ಅಧಿಕಾರ ಚಲಾವಣೆಗಳೂ ನಿಮ್ಮನ್ನು ಸದಾ ಕಾಲದಲ್ಲಿಯೂ ಮಿತಿಮೀರಿದ ದಣಿವಿನಲ್ಲಿಯೂ ಶ್ರಮದಲ್ಲಿಯೂ ತುಯ್ತದಲ್ಲಿಯೂ ದುಡಿತ—ಎಳೆತ—ಬಿಗಿತದಲ್ಲಿಯೂ ಇಟ್ಟಿರುತ್ತವೆ. ಈ ಹೊರಗಿನ ಸಂದರ್ಭಗಳೂ ಸನ್ನಿವೇಶಗಳೂ ನಿಮ್ಮನ್ನು ಯಾವಾಗಲೂ ಗೂಟದ ಮೇಲೆ ತೂಗು ಗಟ್ಟಿರುವ ರೀತಿಯ ಸ್ಥಿತಿಯಲ್ಲಿಡುವದಕ್ಕೆ ಅವಕಾಶ ಕೊಟ್ಟರೆ ನಿಮ್ಮ ಗೋರಿಯನ್ನು ನೀವು ಕ್ಷಿಪ್ರವಾಗಿ, ಆಯುಷ್ಯ ತುಂಬುವದಕ್ಕೆ ಮುಂಚೆಯೇ ತೋಡಿಟ್ಟುಕೊಂಡಂತೆ ಆಗುತ್ತದೆ.

ಅದನ್ನು ಹೇಗೆ ತಪ್ಪಿಸಿಕೊಳ್ಳಬೇಕು ? ಕೆಲಸದಿಂದ ಹಿಂದೆಗೆಯುವದನ್ನಾಗಲೀ ದೈನಂದಿನದ ಕಾರ್ಯಗಳನ್ನು ಕೈಬಿಡುವದನ್ನಾಗಲೀ ರಾಮನು ಸಲಹೆ ಮಾಡುವದಿಲ್ಲ. ಆದರೆ, ನೀವು ಎಂಥಾ ಪ್ರಯಾಸಕರವೂ ಕಷ್ಟಕರವೂ ದುರ್ಭರವೂ ಪರೀಕ್ಷಕವೂ ಆದ ಕಾರ್ಯದಲ್ಲಿ ತೊಡಗಿದ್ದರೂ ನಿಮ್ಮ ಮನಸ್ಸನ್ನು ಯಾವಾಗಲೂ ಸ್ವಸ್ಥವಾಗಿಯೂ ವಿಶ್ರಾಂತವಾಗಿಯೂ ಶಾಂತವಾಗಿಯೂ ಇಟ್ಟಿರುವದಕ್ಕೆ ಸಹಾಯಕವಾದ ವೃತ್ತಿಯನ್ನೂ ಪ್ರವೃತ್ತಿಯನ್ನೂ ಅಭ್ಯಾಸ ಮಾಡುವದಕ್ಕೆ ರಾಮನು ಪ್ರೋತ್ಸಾಹಿಸುತ್ತಾನೆ. ಈ ಬುದ್ಧಿವಾದವು ವೇದಾಂತದ ತ್ಯಾಗವಲ್ಲದೆ ಬೇರೆಯಲ್ಲ. ನೀವು ಸರ್ವದಾ ತ್ಯಾಗದ ಭದ್ರವಾದ ಬಂಡೆಯ ಮೇಲೆ ನಿಲ್ಲಬೇಕು. ಆ ದೃಢವಾದ ಅನುಕೂಲ ಭೂಮಿಯ ಮೇಲೆ ಸ್ಥಿರವಾಗಿ ನಿಂತು ತಾನಾಗಿಯೇ ಬಂದ ಯಾವ ಕಾರ್ಯದಲ್ಲಿಯಾದರೂ ನೀವು ಪೂರ್ಣವಾಗಿ ತೊಡಗಿದರೆ, ನಿಮಗೆ ಶ್ರಮವಾಗುವದಿಲ್ಲ. ನೀವು ಎಂಥಾ ಕೆಲಸವನ್ನಾದರೂ ಮಾಡಬಹುದು.

ಇದನ್ನು ಇನ್ನೂ ಹೆಚ್ಚು ವಿವರಿಸಬಹುದು. ಕೆಲಸ ಮಾಡುವಾಗ ಬಿಡುವಾದ ಒಂದೊಂದು ನಿಮಿಷದಲ್ಲಿ ಪರಮಾತ್ಮನಾದ ನಿಮ್ಮ ಆತ್ಮನು ಒಬ್ಬನೇ ಸತ್ಯವೆಂದೂ ಈ ದೇಹ–ಮನಸ್ಸುಗಳ ಸಂಬಂಧವೇ ನಿಮಗಿಲ್ಲವೆಂದೂ ಅವುಗಳಿಗಾಗಿ ನೀವು ಏನೂ ಮಾಡಬೇಕಾಗಿಲ್ಲವೆಂದೂ ಮನಸ್ಸಿನಲ್ಲಿ ಚಿಂತಿಸಿರಿ. ನೀವು ಕೇವಲ ಸಾಕ್ಷಿಯು. "ನಾನು ಮಾಡತಕ್ಕವನೂ ಅಲ್ಲ, ಅನುಭವಿಸತಕ್ಕವನೂ ಅಲ್ಲ; ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಫಲದ ಸಂಬಂಧವು ನನಗಿಲ್ಲ. ಗಾಢ ನಿದ್ರೆಯಲ್ಲಿರುವಂತೆ ನಾನು ಸರ್ವದಾ ನಿಷ್ಕ್ರಿಯವಾದ ಆನಂದ ಸ್ವರೂಪ ಬ್ರಹ್ಮವೇ ನಾನು." ಹೀಗೆ ವಿಚಾರ

ಮಾಡಿ ಕಣ್ಣುಗಳನ್ನು ಮುಚ್ಚಿಕೊಂಡು ಕ್ಷಣಕಾಲ, ಅಂಗಾಂಗಗಳನ್ನೆಲ್ಲಾ ಸಡಿಲ ಬಿಟ್ಟು, ಎಲ್ಲಾ ಜವಾಬ್ದಾರಿಯ ಭಾವನೆಯ ಭಾರವನ್ನೂ ಇಳುಹಿ, ಕಳಚಿಕೊಂಡು ಶರೀರವನ್ನು ನಿರಾಯಾಸವಾಗಿಯೂ ಸುಖವಾಗಿಯೂ ಆರಾಮವಾಗಿಯೂ ಹಾಯಾಗಿಯೂ ನಿರಾತಂಕವಾಗಿಯೂ ಇಡಿ. ನಿಮ್ಮ ಹೆಗಲಿನಿಂದ—ತಲೆಯಿಂದ—ಹೊಣೆಗಾರಿಕೆಯ ಚಿಂತೆಯ ಹೊರೆಯನ್ನು ತೆಗೆದುಹಾಕುವದರಲ್ಲಿ ನೀವು ಹೆಚ್ಚು ಹೆಚ್ಚು ಯಶಸ್ವಿಗಳಾದಷ್ಟು ಹೆಚ್ಚು ಶಕ್ತಿವಂತರಾಗಿರುವಂತೆ ಭಾವಿಸುತ್ತೀರಿ.

ದೇಹದಲ್ಲಿರುವ ವೀರ್ಯವನ್ನೂ ಸತ್ತ್ವವನ್ನೂ ಆಲೋಚನಾ ಭಾವನಾ ವಿಚಾರಗಳನ್ನೂ ನರಮಂಡಲದ ಶಕ್ತಿಯೇ ಧರಿಸಿರುವದು. ಪಚನ ಕ್ರಿಯೆಯೂ ರಕ್ತ ಪರಿಚಲನೆಯೂ ಕೂದಲು ಉಗುರು ಮೊದಲಾದುವುಗಳ ಬೆಳವಣಿಗೆಯೂ ಅಂತಿಮವಾಗಿ ನರಮಂಡಲದ ಕ್ರಿಯೆಯನ್ನೇ ಅವಲಂಬಿಸಿವೆ. ನಿಮ್ಮ ಮನಸ್ಸು ಕದಡಿದ್ದರೆ, ಕ್ಷುಬ್ಧವಾಗಿದ್ದರೆ, ಅನೇಕ ಬಗೆಯ ಚಿಂತೆಯಿಂದ ಕ್ಲೇಶವಾಗಿದ್ದರೆ, ತರಾತುರಿಯೂ ಆತುರವೂ ಇದ್ದರೆ, ಇದರಿಂದ ನರಗಳ ಮೇಲೆ ಅತಿ ಹೆಚ್ಚಿನ ಹೊರೆಯು ಬೀಳುತ್ತದೆ. ಸತತೋದ್ಯೋಗದ—ಸತತೋತ್ಸಾಹದ—ಆಲೋಚನಾ ಶ್ರಮದ ರೂಪದಲ್ಲಿರುವ ನರಗಳ ಈ ಕ್ರಿಯೆಯು ಒಂದು ಪಕ್ಷದಲ್ಲಿ ಲಾಭವಾದರೂ ಇನ್ನೊಂದು ಪಕ್ಷದಲ್ಲಿ ನಿಶ್ಚಿತವಾದ ನಷ್ಟವೇ ಆಗುತ್ತದೆ. ವಿಶ್ರಾಂತಿಯೇ ಇಲ್ಲದ ಆಲೋಚನೆಯ ಮತ್ತು ಚಿಂತೆಯ ಮೂಲಕ ದೇಹದ ಜೀವಶಕ್ತಿಗಳೂ ವ್ಯಾಪಾರಗಳೂ ಕಷ್ಟ—ನಷ್ಟಗಳನ್ನು ಹೊಂದುತ್ತವೆ. ನಿಮ್ಮ ಜೀವಶಕ್ತಿಯನ್ನೂ ಪ್ರಾಣಶಕ್ತಿಯನ್ನೂ ಆರೋಗ್ಯವನ್ನೂ ರಕ್ಷಣೆ ಮಾಡಿಕೊಳ್ಳಬೇಕಾದರೆ, ನರವ್ಯೂಹದ ಕುದುರೆಯು ಜೀವನದ ಭಾರವನ್ನು ಸುಲಭವಾಗಿ ಹೊರಬೇಕಾದರೆ, ನೀವು ಅಹಂಕಾರಪೂರ್ವಕವಾದ ಭಾವನೆಗಳ ಹೊರೆಯನ್ನು ಹಗುರ ಮಾಡಿಕೊಳ್ಳಬೇಕು. ಚಿಂತಾತಂಕಗಳೂ ತವಕ—ತಲ್ಲಣಗಳೂ ಕಾತರ—ಕಳವಳಗಳೂ ಮನಃಕ್ಲೇಶಗಳೂ ನಿಮ್ಮ ಜೀವದ ಸತ್ತ್ವಸಾರವನ್ನು ಹೀರದಿರಲಿ. ಮನಸ್ಸಿನಲ್ಲಿ ಯಾವ ತೊಂದರೆ ತಾಪತ್ರಯಗಳೂ ಕಿರುಕುಳ ಕಳವಳಗಳೂ ಪೇಚಾಟಗಳೂ ಚಡಪಡಿಕೆಗಳೂ ಆತುರ ಕಾತರಗಳೂ ಇಲ್ಲದಂತೆಯೂ ಭಯ—ಚಿಂತೆಗಳಿಂದ ಕುಗ್ಗಿ ಕುಸಿಯದಂತೆಯೂ ನಿಮ್ಮ ಹೃದಯವನ್ನು ಯಾವಾಗಲೂ ಉಲ್ಲಸಿತವಾಗಿಯೂ ಹರ್ಷವಾಗಿಯೂ ಹಗುರವಾಗಿಯೂ ಇಟ್ಟುಕೊಳ್ಳುವದರಲ್ಲಿಯೇ ಪೂರ್ಣಾರೋಗ್ಯದ ಮತ್ತು ಹುರುಪಿನ ಕಾರ್ಯಶಕ್ತಿಯ ರಹಸ್ಯವಿದೆ.

ಜನರು ಯೋಗ್ಯವಾದ ಕಾರ್ಯಗಳನ್ನು ಮಾಡುವುದು ಮಾತ್ರವಲ್ಲ, ಯೋಗ್ಯವಾದ ವಿಷಯಗಳನ್ನು ಅನುಭವಿಸಿ ಸುಖಿಸುವಂತೆಯೂ ಅವರು ಉದ್ಯೋಗಶೀಲರಾಗಿರುವದು ಮಾತ್ರವಲ್ಲ, ಉದ್ಯೋಗಶೀಲತೆಯನ್ನು ಪ್ರೀತಿಸುವಂತೆಯೂ ಮಾಡಬೇಕಾದುದೇ ನಿಜವಾದ ವಿದ್ಯಾಭ್ಯಾಸದ ಸಂಪೂರ್ಣ ಉದ್ದೇಶವಾಗಿದೆ.

# ಅತ್ಯಂತ ಮುಖ್ಯವಾದ ಬುದ್ಧಿವಾದ

ಅಂತರಿಕ್ಷದ ವಿಗೋಳಾರ್ಧವೇ ನನ್ನ ಬಟ್ಟಲು, ಥಳಥಳಿಸುವ ವೇಳೆಯೇ ನನ್ನ ದ್ರಾಕ್ಷಾರಸ.

ಬಟ್ಟೆಗಳನ್ನು ಪಡೆಯುವದೋ ಇನ್ನೊಬ್ಬರ ಪ್ರೀತಿಯನ್ನು ಗಳಿಸುವದೋ ಯಾರನ್ನಾದರೂ ಸುಖಿಗಳನ್ನಾಗಿ ಮಾಡುವದೋ ಪ್ರಾಪಂಚಿಕವಾದ ಯಾವದಾದರೂ ಗುರಿಯನ್ನು ಸಾಧಿಸುವದೋ ನಿಮ್ಮ ಕರ್ತವ್ಯವೆಂದು ಭಾವಿಸಬೇಡಿ. ಈ ಗುರಿಗಳನ್ನೂ ಉದ್ದೇಶಗಳನ್ನೂ ತಿರಸ್ಕರಿಸಿ; ಎಲ್ಲಾ ಸನ್ನಿವೇಶಗಳಿಂದಲೂ ಸಂದರ್ಭಗಳಿಂದಲೂ ಸ್ವತಂತ್ರವಾಗಿ, ಲಾಭ ನಷ್ಟಗಳನ್ನು ಲಕ್ಷಿಸದೆ, ಯಾವಾಗಲೂ ನಿಮ್ಮನ್ನು ನೀವು ಶಾಂತವಾಗಿಯೂ ಸುಖಿವಾಗಿಯೂ ಇಟ್ಟುಕೊಂಡಿರುವದೇ ನಿಮ್ಮ ಉದ್ಯೋಗವನ್ನಾಗಿಯೂ ವ್ಯವಹಾರವನ್ನಾಗಿಯೂ ವ್ಯಾಪಾರವನ್ನಾಗಿಯೂ ಪ್ರವೃತ್ತಿಯನ್ನಾಗಿಯೂ ಕಸುಬನ್ನಾಗಿಯೂ ಜೀವನದ ಉದ್ದೇಶ—ಗುರಿಗಳನ್ನಾಗಿಯೂ ಮಾಡಿಕೊಳ್ಳಿ. ಈ ಜಗತ್ತಿನಲ್ಲಿ ದೇವರು ನಿಮ್ಮ ಹೆಗಲಿನ ಮೇಲೆ ಹೊರಿಸಿರತಕ್ಕಂಥ ಅತ್ಯಂತ ಮಹತ್ವದ [ಧಾರ್ಮಿಕ] ಕರ್ತವ್ಯವೆಂದರೆ ನಿಮ್ಮನ್ನು ನೀವು ಸಂತೋಷವಾಗಿ ಇಟ್ಟುಕೊಳ್ಳುವದೇ ಆಗಿದೆ. ನೀವು ಸಂತುಷ್ಟರಾಗಿಯೂ ಸುಪ್ರೀತರಾಗಿಯೂ ಶಾಂತರಾಗಿಯೂ ಇರಬೇಕೆಂಬುದೇ ನಿಮ್ಮ ನೆರೆಹೊರೆಯವರ ಅಪೇಕ್ಷೆಯು, ನಿಮ್ಮ ಸಾಮಾಜಿಕ ಕರ್ತವ್ಯವು; ನೀವು ಯಾವಾಗಲೂ ಹರ್ಷಚಿತ್ತರಾಗಿರಬೇಕೆಂಬುದೇ ನಿಮ್ಮ ಕೌಟುಂಬಿಕ ಸಂಬಂಧಗಳು ಬಯಸುವ ಕರ್ತವ್ಯವು; ಎಲ್ಲಾ ಅವಸ್ಥೆಗಳಲ್ಲಿಯೂ ನಿಮ್ಮನ್ನು ನೀವು ಸುಖವಾಗಿಟ್ಟುಕೊಂಡಿರಬೇಕೆಂಬುದೇ ನಿಮ್ಮ ವಿಷಯದಲ್ಲಿ ನಿಮಗಿರುವ ಕರ್ತವ್ಯವು. ನಿಮಗೆ ನೀವು ವಂಚನೆಯಿಲ್ಲದೆ ನಿಜವಾಗಿರಿ; ಜಗತ್ತಿನಲ್ಲಿ ಬೇರೆ ಯಾವದನ್ನೂ ಲಕ್ಷಿಸಬೇಡಿ. ಮಿಕ್ಕ ಎಲ್ಲವೂ ನಿಮಗೆ ಶರಣಾಗತವಾಗಿ, ಅವಶ್ಯ ತಲೆಬಾಗಲೇ ಬೇಕು. ಆದರೂ, ಅವು ತಲೆಬಾಗಿದರೂ ಬಿಟ್ಟರೂ ಅದರಿಂದ ನಿಮಗೇನು? ನಿಮ್ಮಷ್ಟಕ್ಕೆ ನೀವು ಸ್ವತಂತ್ರವಾಗಿಯೇ ಸುಖಿಗಳಾಗಿದ್ದೀರಿ! ಖಿನ್ನರಾಗಿಯೂ ವಿಷಣ್ಣರಾಗಿಯೂ ಮಂಕಾಗಿಯೂ ಹುಬ್ಬು ಗಂಟಿಕ್ಕಿ ಜೋಲು ಮೋರೆ ಹಾಕಿಕೊಂಡಿರುವದು ಧಾರ್ಮಿಕವೂ ಸಾಮಾಜಿಕವೂ ರಾಜಕೀಯವೂ ಕೌಟುಂಬಿಕವೂ ಆದ ಅಪರಾಧವು. ಮಿಕ್ಕ ಎಲ್ಲಾ ಅಪರಾಧಗಳಿಗೂ ಪತನ—ಪಾಪಗಳಿಗೂ ಮೂಲವಾಗಿರುವದೇ ಈ ಅಪರಾಧವು. ಈ ಅಪರಾಧಕ್ಕೆ ಅವಕಾಶ ಕೊಟ್ಟರೆ ಮಿಕ್ಕ ಎಲ್ಲಾ ಅಪರಾಧಗಳಿಗೂ ಅವಕಾಶವಾಗುತ್ತದೆ. ಆದ್ದರಿಂದ ರಾಗದ್ವೇಷರಹಿತವಾಗಿ ಪೂರ್ಣ ಪ್ರಸನ್ನರಾಗಿಯೂ ಪ್ರಶಾಂತರಾಗಿಯೂ ಇರಿ. ಹಾಗಾದರೆ ನಿಮ್ಮ ಸುತ್ತಲ ಸನ್ನಿವೇಶಗಳೂ ಪರಿಸ್ಥಿತಿಗಳೂ ಸ್ವಾಭಾವಿಕವಾಗಿಯೂ ಕಡ್ಡಾಯವಾಗಿಯೂ ನಿಮಗೆ ಅನುಕೂಲವಾಗಿ ಹೊಂದಿಕೊಳ್ಳುತ್ತವೆ. ಯಾವ ವ್ಯವಹಾರದಲ್ಲಿ ಆಗಲಿ ಚಿಂತೆ ಮಾಡುವದೂ ಕೆಡಪಡಿಸುವದೂ

ಅವಸರ ಮಾಡುವದೂ ನಿಮ್ಮ ಕರ್ತವ್ಯವಲ್ಲ. ಆತ್ಮತೃಪ್ತರಾಗಿಯೂ ಆತ್ಮ ಸಮಸ್ಥಯಿತ್ವರಾಗಿಯೂ ಸಮಚಿತ್ತರಾಗಿಯೂ ಆತ್ಮ ಪ್ರೀತರಾಗಿಯೂ ಇರುವದು ನಿಮ್ಮ ಏಕ ಮಾತ್ರ ಉದ್ಯೋಗವೂ ಕರ್ತವ್ಯವೂ ಆಗಿದೆ. ನಮ್ಮ ಮೇಲೆ ಯಾವ ಕರ್ತವ್ಯವೂ ಇಲ್ಲ; ನಮ್ಮ ಹೆಗಲ ಮೇಲೆ ಯಾವ ಹೊರೆಯೂ ಇಲ್ಲ. ನೀವು ನಿಮಗೆ ಹೊಣೆಗಾರರೇ ಹೊರತು ಬೇರೆ ಯಾರಿಗೂ ಇಲ್ಲ. ಈ ಅತ್ಯಂತ ಪವಿತ್ರ ನಿಯಮವಾದ ಸಂತೋಷ ವೃತ್ತಿಯನ್ನೂ ಶಾಂತಿಯನ್ನೂ ಭಂಗ ಮಾಡಿದರೆ ನಿಮಗೆ ನೀವೇ ಬಹಳ ಹೇಯವಾದ ಅಪರಾಧಿಗಳು. ಬೇರೆ ಜನರು ಬೆಳಿಗ್ಗೆ ಮುಂಚೆ ಎದ್ದಾಗ; ಕೋಣೆಗಳನ್ನು ಕಸ ಹೊಡೆಯುವದೋ ತೊಳೆಯುವದೋ ಉಜ್ಜುವದೋ ಆಫೀಸಿಗೆ ಹೋಗುವದೋ ಸ್ನಾನ ಮಾಡುವದೋ ಅಡಿಗೆ ಮಾಡುವದೋ ಓದುವದೋ ಬರೆಯುವದೋ ಮೊದಲಾದ ಕರ್ತವ್ಯಗಳು ತಮ್ಮ ಮುಂದೆ ಇವೆಯೆಂದು ಯೋಚಿಸಲಿ; ಆದರೆ ನೀವು ಮಾತ್ರ ಬೆಳಿಗ್ಗೆ ಮುಂಚೆ ಎದ್ದಾಗ ತಪ್ಪದೆ ಯಾವಾಗಲೂ ನಿಮಗೆ ನೀವೇ ಪರಮಾನಂದ ಸ್ವರೂಪರೆಂದು ಸಂಬೋಧಿಸಿಕೊಳ್ಳಿ. ಇದೊಂದೇ ನಿಮ್ಮ ಕರ್ತವ್ಯವು. ಇದರಿಂದ ಬೇರೆ ಕೆಲಸಗಳನ್ನು ನೀವು ಮಾಡಬಾರದೆಂದಾಗಲಿ, ಗೃಹ ಕೃತ್ಯದ ಬೇರೆ ಉದ್ಯೋಗಗಳನ್ನು ಅಲಕ್ಷ್ಯ ಮಾಡಬೇಕೆಂದಾಗಲಿ ಇದರ ಅರ್ಥವಲ್ಲ. ಇವುಗಳನ್ನು ನೀವು ಕೇವಲ ಆಟದ ಗೌಣ ವಿಷಯಗಳೆಂದೂ ನಿಮ್ಮ ಆಧ್ಯಾತ್ಮಿಕ ಆರೋಗ್ಯಕ್ಕೆ ಏನಾದರೂ ಮಾಡುತ್ತಿರಬೇಕಾದುದು ಅವಶ್ಯವಾದ್ದರಿಂದ ಈ ಕೆಲಸಗಳನ್ನು ಮಾಡುತ್ತಿರುವದಾಗಿಯೂ ಭಾವಿಸಬೇಕು. ಆದರೆ ಏನನ್ನಾದರೂ ಮಾಡುತ್ತಿರುವಾಗ ಕೈಯಲ್ಲಿರುವ ಭೌತಿಕವೆನಿಸಿರುವ [ Material ] ಕಾರ್ಯವು ಕೇವಲ ಅಭೌತಿಕವೆಂದು [ Immaterial ] ನೆನಪಿನಲ್ಲಿಡಿ. ನಿಜವಾಗಿಯೂ ನಿಮ್ಮ ಅವಶ್ಯ ಕರ್ತವ್ಯವೆಂದರೆ, ನೀವು ಆತ್ಮ ಪ್ರೀತರಾಗಿಯೂ ಆತ್ಮ ಸಂತುಷ್ಟರಾಗಿಯೂ ಆತ್ಮಾರಾಮರಾಗಿಯೂ ಇರುವದೇ ಆಗಿದೆ. ವಿದ್ಯಾರ್ಥಿಗಳೇ, ಕೇಳಿಸಂದೇಹದ ಕಾವಳದಲ್ಲಿ ಈಗ ತೂಗಾಡುತ್ತಾ ಹೊಯ್ದಾಡುತ್ತಾ ಇರುವದರಲ್ಲಿ ತೃಪ್ತರಾಗಿ, ನಿಮ್ಮ ಪರೀಕ್ಷೆಗಳ ಭಾವೀ ಫಲಿತಾಂಶಗಳ ಮೇಲೆ ನಿಮ್ಮ ಸಂತೋಷವನ್ನು ತೂಗು ಹಾಕಿದ್ದರೆ, ಯಾವಾಗಲೂ ನೀವು ಅನುಗ್ರಹವನ್ನು ಪಡೆಯಬೇಕಾದವರು ಆಗುವಿರೇ ಹೊರತು ಪಡೆದವರಾಗುವದಿಲ್ಲ. ಒಂದೇ ಗುಣ ಸ್ವಭಾವದವಸ್ತುಗಳು ತಪ್ಪದೆ, ಒಂದನ್ನೊಂದು ಸೇರುವದು ಪ್ರಕೃತಿ ನಿಯಮ. ಈಗಲೇ ದೇವರ ಆನಂದವು ನಿಮ್ಮಲ್ಲಿದ್ದರೆ, ಗೆಲುವಿನ—ಯಶಸ್ಸಿನ—ಆನಂದವೂ ನಿಮ್ಮಲ್ಲಿಗೆ ತನ್ನಿಂದತಾನೇ [ಗುರುತ್ವಾಕರ್ಷಣದಂತೆ] ಆಕರ್ಷಿತವಾಗಿ ಓಡಿ ಬರಬೇಕು. ಇದೇ ನಿಯಮ.

ನಗು, ನಗು, ನಗು, ಲೋಕವೆಲ್ಲಾ ನಿನ್ನೊಡನೆ ನಗುವದು,
ಅಳು, ಅಳು, ಅಳು, ಅತ್ತರೆ ನೀನೊಬ್ಬನೇ ಅಳಬೇಕಾಗುವದು.
ಇದಕಾಗಿ ಧೀರ ಹಳೆ ನೆಲವು ಸಾಲ ತರಬೇಕು ನಲಿವ,

ಅದಕೆ ತನ್ನದಾಗಿಹ ದುಃಖ ಬೇಕಷ್ಟು ಇದೆ. ಬಡಪ!
ಹಾಡು ಬೆಟ್ಟಗಳಿಲ್ಲಿ ಉತ್ತರಿಸುವವು. ನೋಡ,
ನಿಡುಸುಯ್ಯ್ ! ಗಾಳಿಯಲಿ ಅದು ಕೇಳದಾಗುವದು.
ಸಂತೋಷದ ಕೇಕೆ ಅನುರಣಿತವಾಗುವದು.
ಆದೊಡೆ ಚಿಂತೆಯ ಕೂಗನುಲಿಯಲು ಬೇಡ.
ಸಂತೋಷಿಸಿ ನಲಿ, ಜನರೆಲ್ಲ ನಿನ್ನನೊಲಿವರು.
ಶೋಕಿಸು, ಅವರೆ ಹಿಂದಿರುಗಿ ಪೋಪರು.
ನಿನ್ನ ಸಂತೋಷದ ಪೂರ್ಣಫಲ ಬೇಕವರಿಗೆ,
ಆದರೆ ನಿನ್ನ ಕಷ್ಟವೆಳ್ಳಷ್ಟು ಬೇಡವರಿಗೆ,
ನೀ ಹರ್ಷವಾಗಿದ್ದರೆ, ನಿನಗೆ ಸ್ನೇಹಿತರನೇಕರಾಗುವರು
ನೀ ಖಿನ್ನನಾದರೆ ನಿನ್ನಲ್ಲಿ ನೀಗಿ ತೊಲಗುವರು.
ನಿನ್ನ ಅಮೃತಮಯ ಮಧುವನು ಒಲ್ಲೆನೆನರು ಯಾರೂ
ಆದರೆ ಜೀವನದ ಗೋಳ ವಿಷವ ನೀನೆ ಕುಡಿಯಬೇಕಲ್ಲದೆ ಒಲ್ಲರಾರೂ.
ಊಟವಿಡು, ಮನೆಯೆಲ್ಲ ತುಂಬುವದು ಜನ
ಉಪವಾಸವಿರು, ಹತ್ತಿರ ಸುಳಿಯರಾರೂ, ಮನೆಯೆಲ್ಲ ನಿರ್ಜನ.
ಜಯಿಸು, ನೀಡು—ಆ ಬದುಕು ಪಾಡು,
ಆದರೆ ನೀ ಸಾಯಬೇಕೆಂದರೆ, ಯಾರೂ ನೆರವಾಗರು ನೋಡು.
ಆನಂದ ಮಂದಿರದಲ್ಲಿ ಅವಕಾಶ ವಿಶಾಲವಾಗಿಹುದು;
ಶ್ರೀಮಂತ ಜನರ ಸಾಲು ಸಾಲಿಗೆ ಅಲ್ಲಿ ಸ್ವಾಗತವಿಹುದು;
ಆದರೆ ನೋವಿನಾ ಕಿರಿದಾದ ದಾರಿಯಲಿ ಮುಣಿಬೇಕು
ನಾವೆಲ್ಲ ಒಬ್ಬೊಬ್ಬರೇ ಸಾಲಾಗಿ ಸಾಗಬೇಕು.

ಎಲ್ಲವ್ಹೀಲರ್ [Ellawheeler]

ಸುಖವು ಒಂದೇ ಒಳಿತು.
ಸುಖಿಸೆ ನಮಗೀಗಲೆ ಸಮಯ.
ಸುಖಿಸೆ ನಮಗಿಲ್ಲಿಯೆ ಸ್ಥಳವು.
ಸುಖಿಸೆ ಮಾರ್ಗವು ಪರರ ಸುಖಿಗಳ ಗೈಯುವದೆ!

---

ರಾಮನು ಈ ಎಲ್ಲವುಗಳ ಸಾರವನ್ನು ಸಂಗ್ರಹಿಸಿ ಎರಡು ಮುಖ್ಯ ವಿಷಯಗಳನ್ನು ನಿಮ್ಮ ಲಕ್ಷ್ಯಕ್ಕೆ ತರಲು ಬಯಸುತ್ತಾನೆ.

೧. ಸಣ್ಣದಾದ [ಅಲ್ಪವಾದ] ಜೀವಾತ್ಮನನ್ನು—ಅಹಂಕಾರವನ್ನು— ಅಲ್ಲಗಳೆಯುವದು.

೨. ನಿಜವಾದ ಆತ್ಮನ ಸ್ಪಷ್ಟವೂ ವಿಧಾಯಕವೂ ನಿಶ್ಚಿತವೂ ಆದ ಪ್ರತಿಪಾದನೆ—ಸಾಧನೆ.

ಮೊದಲನೆಯದು:— ವೇದಾಂತದ ರೀತಿಯಲ್ಲಿ ನಿಷೇಧಿಸುವದೆಂದರೆ—ಅಲ್ಲಗಳೆಯುವದೆಂದರೆ,—ಪರಿಪೂರ್ಣ ವಿಶ್ರಾಂತಿ, ಪೂರಾ ಸಡಿಲಗೊಳಿಸುವದು, ಬಿಡುಗಡೆ, ವಿಶ್ರಾಂತಿ, ತ್ಯಾಗ. ಈ ದೇಹವೆಂಬುವ ಹೊರೆಯನ್ನೂ ಭಾರವನ್ನೂ ನೀವು ಎಂದೂ ಹೊತ್ತು ಅತ್ತಿತ್ತ ಒಯ್ಯುವದೇ ಇಲ್ಲವೆಂಬಂತೆ, ನಿಮಗೆ ಅದರ ಸಂಬಂಧವಿಲ್ಲವೇ ಇಲ್ಲವೆಂಬಂತೆ, ಯಾವದಾದರೂ ಕಲ್ಲುಬಂಡೆ ಎಷ್ಟು ಹೊರಗಿನದೋ ಅಪರಿಚಿತವೋ ಈ ದೇಹವೂ ಅಷ್ಟೇ ಅಪರಿಚಿತವೆಂಬಂತೆ ನಿಮ್ಮ ದೇಹವನ್ನು ಕುರ್ಚಿಯ ಮೇಲೋ ಮಂಚದ ಮೇಲೋ ಹಾಸಿಗೆಯ ಮೇಲೋ ನೆಲದ ಮೇಲೋ ನಿಮಗೆ ಸಮಯ ಸಿಕ್ಕಾಗ, ಬಿಡುವಾದಾಗ, ಎಸೆಯಿರಿ; ಕೆಡವಿರಿ. ನಿಮ್ಮ ಪ್ರಯತ್ನಪೂರ್ವಕವಾದ ಮನಸ್ಸಿನಿಂದಲೂ ಇಚ್ಛೆಯಿಂದಲೂ ಸ್ವಲ್ಪವೂ ಧಾರಣಮಾಡದೆ, ನಿಮ್ಮ ದೇಹವು ಸತ್ತ ಹೆಣದಂತೆ ನೀಳವಾಗಿಯೂ ನಿಶ್ಚೇಷ್ಟವಾಗಿಯೂ ಕೆಳಗೆ ಬಿದ್ದಿರಲಿ. ದೇಹದ ಚಿಂತೆಯನ್ನು ಎಲ್ಲದರ ಚಿಂತೆಯನ್ನೂ ಪೂರಾ ಬಿಟ್ಟು ಮನಸ್ಸು ಬಿಗಿತವೆಲ್ಲಾ ಬಿಚ್ಚಿ ಸಡಿಲವಾಗಲಿ. ಎಲ್ಲಾ ಆಶೆಗಳನ್ನೂ ಮಹತ್ವಾಕಾಂಕ್ಷೆಗಳನ್ನೂ ನಿರೀಕ್ಷೆಗಳನ್ನೂ ಬಿಟ್ಟು ಅಲ್ಲಗಳೆಯಬೇಕು. ಇದೇ ನಿಷೇಧಿಸುವದು, ನಿರಾಕರಿಸುವದು, ಅಲ್ಲಗಳೆಯುವದು, ಬಿಡು ಬಿಚ್ಚಾಗಿ ಸಡಿಲಗೊಳಿಸುವದು [ Relaxation ]. ಈ ದೇಹವೆಂಬ ನಿಮ್ಮ ಆಸ್ತಿಯು ನಿಮ್ಮ ಹೃದಯವನ್ನು ಭಾರವಾಗಿ ಕೆಳಗೆ ಜಗ್ಗಿಸಿ ತೂಗದೆ, ನೆಲದ ಮೇಲೆ ಬಿದ್ದಿರಲಿ.

ಎರಡನೆಯದು:— ದೇವತ್ವ. ದೇವರ ಇಚ್ಛೆಯನ್ನೇ ನಿಮ್ಮ ಇಚ್ಛೆಯನ್ನಾಗಿ ಮಾಡಿಕೊಳ್ಳಿ. ಒಳ್ಳೆಯದಕ್ಕಾಗಲಿ ಕೆಟ್ಟದಕ್ಕಾಗಲೀ ಸುಖಕ್ಕಾಗಲೀ ದುಃಖಕ್ಕಾಗಲಿ ದೇವರ ಉದ್ದೇಶವನ್ನು ನಿಮ್ಮ ಉದ್ದೇಶವೇ ಎಂಬಂತೆ ಸಮರ್ಥನೆ ಮಾಡಿರಿ, ರಕ್ಷಣೆ ಮಾಡಿರಿ. ದೇಹವನ್ನೂ ಅದರ ಸನ್ನಿವೇಶಗಳನ್ನೂ ಮನಸ್ಸನ್ನೂ ಅದರ ಉದ್ದೇಶಗಳನ್ನೂ ಪ್ರಪಂಚವನ್ನೂ ಅದರ ಅಭಿಪ್ರಾಯಗಳನ್ನೂ ಮೀರಿರುವ ನಿಮ್ಮ ಸ್ವರೂಪವನ್ನು ಭಾವಿಸಿರಿ. ನಿಮ್ಮನ್ನು ನೀವು ಸರ್ವವ್ಯಾಪಕ ಪರಮಾತ್ಮನೆಂದೂ ಸೂರ್ಯರ ಸೂರ್ಯನೆಂದೂ ಕಾರಣ ಕಾರ್ಯ ವಿಲಾಸಗಳನ್ನು ಮೀರಿದವರೆಂದೂ ಆನಂದ ಸ್ವರೂಪರೆಂದೂ ಮುಕ್ತರಾಮನೆಂದೂ ಭಾವಿಸಿರಿ. ಓಂಕಾರವನ್ನು ಉಚ್ಚರಿಸಿರಿ, ಜಪಿಸಿರಿ. ನಿಮಗೆ ತಾನಾಗಿಯೇ ಸ್ವಾಭಾವಿಕವಾಗಿ ಹೊಳೆಯುವ ಯಾವ ರಾಗದಲ್ಲಿಯಾದರೂ ಓಂಕಾರವನ್ನು ಗಾನಮಾಡಿ. ಇದರಿಂದ ನಿಮ್ಮ ದೈಹಿಕ ತೊಂದರೆಗಳಿಗೂ

ರೋಗಗಳಿಗೂ ಕಾರಣವಾದ ಎಲ್ಲಾ ದೋಷಗಳೂ ತಾವಾಗಿಯೇ ನಿವಾರಣೆಯಾಗುತ್ತವೆ. ಪ್ರಪಂಚವಾಗಲೀ ನಿಮ್ಮ ಸುತ್ತಲ ಸನ್ನಿವೇಶವಾಗಲಿ ನೀವು ಭಾವಿಸಿದಂತೆ ನಿಮಗೆ ಕಾಣುತ್ತವೆ. ಪ್ರಪಂಚವು ನಿಮ್ಮ ಹೃದಯದ ಮೇಲೆ ಭಾರವಾಗಿ ತೂಗದಿರಲಿ. ಪ್ರಪಂಚದ ಎಲ್ಲಾ ಅಭಿಪ್ರಾಯಗಳೂ ಮತ್ತು ಸಮಾಜಗಳೂ ಕೇವಲ ನಿಮ್ಮ ಭಾವನೆಯೆಂದೂ ಇಡೀ ಪ್ರಪಂಚವು ನಿಜ ಶಕ್ತಿಯಾದ ನಿಮ್ಮ ಉಸಿರೆಂದೂ ನೆರಳೆಂದೂ ಪ್ರತಿದಿನವೂ ರಾತ್ರಿ ಹಗಲೂ ಚಿಂತಿಸಿರಿ; ಧ್ಯಾನಿಸಿರಿ. ನಿಮಗೆ ಅತ್ಯಂತ ಸಮೀಪ ನೆರೆಯಾದ ನಿಮ್ಮ ನಿಜಾತ್ಮ—ಪರಮಾತ್ಮನಿಗೆ ನೀವು ವಿನೀತರಾಗಿಯೂ ವಿಧೇಯರಾಗಿಯೂ ಇರುವದಕ್ಕಿಂತಲೂ ಅಸ್ಥಿರವೂ ಅಸ್ಪಷ್ಟವೂ ಆದ ಇತರರ ವಿವೇಚನೆಗೂ ಅಭಿಪ್ರಾಯಕ್ಕೂ ನೀವು ದಾಸರಾಗಿರುವದೇ ಶ್ರೇಷ್ಠವಾದ ಆರೋಗ್ಯ ಸ್ಥಿತಿಗೆ ಏರದಿರುವದಕ್ಕೆ ಕಾರಣವಾಗಿದೆ. ನಿಮಗಾಗಿ ನೀವು ಬದುಕ ಬೇಕೇ ಹೊರತು, ಇತರರ ಅಭಿಪ್ರಾಯಕ್ಕಾಗಿ ಬದುಕ ಬಾರದು. ಸ್ವತಂತ್ರವಾಗಿರಿ. ನಿಮ್ಮ ನಿಜವಾದ ಪತಿಯೂ ಒಡೆಯನೂ ಗುರುವೂ ಏಕಮಾತ್ರ ಪ್ರಭುವೂ ಅದ್ವಿತೀಯನೂ ಒಳಗಿನ ದೇವರೂ ಆದ ನಿಮ್ಮ ಆತ್ಮನನ್ನು ಸಂತೋಷಪಡಿಸುವದಕ್ಕೆ ಪ್ರಯತ್ನಮಾಡಿ. ಅನೇಕ ರೂಪವಾದ ಸಾರ್ವಜನಿಕರನ್ನೂ ಬಹು ಸಂಖ್ಯಾತರನ್ನೂ ಯಾವ ರೀತಿಯಿಂದಲೂ ನೀವು ತೃಪ್ತಿಪಡಿಸುವದಕ್ಕೆ ಸಾಧ್ಯವಿಲ್ಲ. ಅನಂತ ಶಿರಗಳುಳ್ಳ ಜನಜಂಗುಳಿಯನ್ನು ಸಂತೋಷ ಪಡಿಸುವದಕ್ಕೆ ನೀವು ಸಿದ್ಧರಲ್ಲ. ಯಾರ ದಾಕ್ಷಿಣ್ಯವೂ ನಿಮಗೆ ಬೇಡ. ನಿಮ್ಮ ವ್ಯಕ್ತಿತ್ವವನ್ನು ರಚನೆ ಮಾಡುವ ಶಿಲ್ಪಿ ನೀವೇ. ನಿಮ್ಮ ಸಮೀಪದಲ್ಲಿ ಯಾರೂ ಕೇಳುವವರೇ ಇಲ್ಲವೆಂಬಂತೆಯೂ ನೀವೊಬ್ಬರೇ ಇರುವಂತೆಯೂ ಭಾವಿಸಿ ನಿಮ್ಮಷ್ಟಕ್ಕೆ ನೀವು ಹಾಡಿಕೊಳ್ಳಿ. ನಿಮ್ಮ ಆತ್ಮವು ಸುಪ್ರೀತವಾದರೆ ಜನತೆಯು ಸಂತೋಷಪಡಲೇ ಬೇಕು. ಇದೇ ನಿತ್ಯಸಿದ್ಧ ನಿಯಮವು.

ಆಲೋಚನೆಗಳಲ್ಲಿಯೇ ನೆಲೆಸಿರತಕ್ಕವರು ಭ್ರಾಂತಿ ಮತ್ತು ರೋಗಗಳ ಪ್ರಭುತ್ವದಲ್ಲಿ ನೆಲೆಸಿರುತ್ತಾರೆ. ಅವರು ಬಹಳ ಪ್ರಜ್ಞಾಶಾಲಿಗಳೆಂದೂ ವಿದ್ವಾಂಸರೆಂದೂ ಕಂಡರೂ ಗೆದ್ದಲು ತಿಂದ ಮರದ ಪೊಳ್ಳು ತೊಲೆಯಂತೆ ಬರಿ ಪೊಳ್ಳಾಗಿರುತ್ತಾರೆ. ಆದ್ದರಿಂದ ಆಲೋಚನೆಯು ಕಾರ್ಯಾರ್ಥವಾಗಿ ನಿಮ್ಮ ಸೊಂಟವನ್ನು ಕಟ್ಟಿ ಪ್ರೋತ್ಸಾಹಿಸಬೇಕಾದರೂ ಅದಕ್ಕೆ ಬದ್ಧರಾಗಬೇಕಾಗಿಲ್ಲ. ಬಿಸಿಲಿನ ಶಾಖ ಹೆಚ್ಚಾದಾಗ ಅಂಗಿಯನ್ನು ತೆಗೆದು ಹಾಕಿದಂತೆಯೂ ಕುಶಲನಾದ ಕೆಲಸಗಾರನು ತನ್ನ ಕಾರ್ಯ ಮುಗಿದೊಡನೆ ಆಯುಧಗಳನ್ನು ತೆಗೆದಿಟ್ಟಂತೆಯೂ ಕಾರ್ಯಕ್ಕಾಗಿರುವ ಆಲೋಚನೆಯನ್ನು ಕಾರ್ಯ ಮುಗಿದೊಡನೆ ಬಿಟ್ಟುಬಿಡಬೇಕು.

ಕೆಲಸ ಮಾಡುತ್ತಿರುವಾಗ ನಿಮ್ಮ ಆಲೋಚನೆಗಳನ್ನು ಸಂಪೂರ್ಣವಾಗಿ ಅದರಲ್ಲಿಯೇ ಕೇಂದ್ರೀಕರಿಸಿರಬೇಕು. ಆ ಕಾರ್ಯಕ್ಕೆ ಸಂಬಂಧ ಪಡದಿರುವ ಯಾವದೂ

ನಿಮ್ಮ ಮನಸ್ಸನ್ನು ಬೇರೆಡೆಗೆ ಸೆಳೆಯಬಾರದು. ಒಂದು [ಎಂಜಿನ್] ಯಂತ್ರದಲ್ಲಿ ಬೇರೆ ಬೇರೆ ಶಕ್ತಿಗಳು ಒಂದೇ ಕಾಲದಲ್ಲಿ ಕೆಲಸ ಮಾಡುತ್ತಿದ್ದರೂ ಅದರ ಭಾಗಗಳ ಸಂಘರ್ಷಣೆಯಿಂದ ಸವೆಯದಂತೆ ಅದ್ಭುತ ಶಕ್ತಿಯಿಂದಲೂ ಮಿತ ವ್ಯಯದಿಂದಲೂ ದೊಡ್ಡ ಎಂಜಿನ್ ಕೆಲಸ ಮಾಡುವ ರೀತಿಯಲ್ಲಿ ನೀವೂ ಕೆಲಸ ಮಾಡಬೇಕು.

ಕೆಲಸ ಮುಗಿದ ಮೇಲೆ ಯಂತ್ರದ ಉಪಯೋಗದ ಆವಶ್ಯಕತೆಯಿಲ್ಲದಿರುವಾಗ, ಅದು ಪೂರಾ ನಿಂತು ಬಿಡಬೇಕು; ಹಾಗೇ ಮನುಷ್ಯನು ತನ್ನ ನಿಜಾತ್ಮನ ಪ್ರಜ್ಞಾ ಪ್ರಭುತ್ವದಲ್ಲಿ ವಿಶ್ರಾಂತಿಯನ್ನು ಪಡೆಯಬೇಕು.

ಓಂ ! ಓಂ ! ಓಂ !

# Married Life
## ವಿವಾಹಿತ ಜೀವನ

ಕನ್ನಡಕದಂತೆ—ಸುಲೋಚನದಂತೆ—ಇರಬೇಕು.

ಕನ್ನಡಕದ ಮೂಲಕ ನಾವು ಎಲ್ಲವನ್ನೂ ನೋಡುತ್ತೇವಾದರೂ ಕಣ್ಣುಗಳಿಗೆ ಅದೇನೂ ಭಾರವಾಗುವದಿಲ್ಲ. ನೋಟಕ್ಕೆ ಅದು ಅಡ್ಡಿಯಾಗುವದಕ್ಕೆ ಬದಲಾಗಿ, ಅದಕ್ಕೆ ಸಹಾಯ ಮಾಡುತ್ತದೆ. ಅದು ಇತರ ವಸ್ತುಗಳಿಗೂ ನಮ್ಮ ಕಣ್ಣುಗಳಿಗೂ ನಡುವೆ ಕನ್ನಡಕವು ತೆರೆಯಾಗುವದಕ್ಕೂ ಮರೆಯಾಗುವದಕ್ಕೂ ಬದಲು ಆ ವಸ್ತುಗಳನ್ನು ಸ್ಪಷ್ಟ ಪಡಿಸುವುದಾಗುತ್ತದೆ. ಗಂಡ ಹೆಂಡಿರ ಸಂಬಂಧವು ಹೀಗೆ ಇರಬೇಕು. ಪತಿಪತ್ನಿಯರು ಒಬ್ಬರನ್ನೊಬ್ಬರು ಮುಚ್ಚಿ, ಒಬ್ಬರಿಗೊಬ್ಬರು ತಡೆಯಾಗುವದಕ್ಕೆ ಬದಲು, ಒಬ್ಬರು ಇನ್ನೊಬ್ಬರ ಮೂಲಕ ಇಡೀ ವಿಶ್ವವನ್ನೇ ನೋಡಬೇಕು. ವೇದಾಂತ ತತ್ತ್ವದ ಅರಿವಿನ ಮೇಲೆ ಇಬ್ಬರ ಸಂಬಂಧವೂ ಸಂಯೋಗವೂ ಆಧ್ಯಾತ್ಮಿಕವಾಗಿದ್ದರೆ ಮಾತ್ರ ಇದು ಸಾಧ್ಯವಾಗುತ್ತದೆ. ಬೇರೆ ಯಾವ ಬಗೆಯಿಂದಲೂ ಸಾಧ್ಯವಲ್ಲ. ಅನ್ಯೋನ್ಯರ ವ್ಯಕ್ತಿತ್ವವನ್ನೂ ವೈಯಕ್ತಿಕ ಗೌರವಗಳನ್ನೂ ಸನ್ನಿವೇಶಗಳನ್ನೂ ನಡೆ ನುಡಿಗಳನ್ನೂ ಪದ್ಧತಿಗಳನ್ನೂ ರಾಗೋದ್ವೇಗಗಳನ್ನೂ ಅಭ್ಯಾಸಗಳನ್ನೂ ಮೀರಿ, ಆಧ್ಯಾತ್ಮಿಕ ಭೂಮಿಕೆಗೆ ಏರಿ, ಇಬ್ಬರೂ ತಮ್ಮಲ್ಲಿ ಚೈತನ್ಯ ಸ್ವರೂಪವಾದ ಆತ್ಮನನ್ನೇ ನೋಡಬೇಕು, ಮುಖ್ಯವಾಗಿ ನೋಡಬೇಕು.

ನಮಗೆ ನಮ್ಮ ಉಸಿರಿನಷ್ಟು ಹತ್ತಿರ ಬೇರೆ ಯಾವದೂ ಇಲ್ಲದಿರುವಂತೆ ಪತಿ ಪತ್ನಿಯರ ಪ್ರೇಮವಿರಬೇಕು. ಒಬ್ಬರು ಇನ್ನೊಬ್ಬರ ಪ್ರಾಣವಾಗಬೇಕು. ಒಬ್ಬರು ಇನ್ನೊಬ್ಬರ ಗುಣ ಸ್ವಭಾವಗಳನ್ನೂ ಭಾವನೆಗಳನ್ನೂ ಅಭಿಪ್ರಾಯಗಳನ್ನೂ ಅಭಿರುಚಿಗಳನ್ನೂ ಪೂರ್ಣವಾಗಿ

ಅರ್ಥಮಾಡಿಕೊಳ್ಳಬೇಕು. ಉಸಿರೇ ನಮ್ಮ ಪ್ರಾಣವಾದರೂ ಅದು ನಮ್ಮಿಂದ ಬೇರೆಯಿದೆಯೆಂದು ತೋರದಿರುವಂತೆ ಪತಿ ಪತ್ನಿಯರ ಐಕ್ಯತೆ ಇರಬೇಕು. ಒಬ್ಬರು ಇನ್ನೊಬ್ಬರಿಗೆ ಹೊರೆಯಾಗಬಾರದು. ಒಬ್ಬರು ಇನ್ನೊಬ್ಬರ ಹೃದಯದ ಮೇಲೆ ಭಾರವಾಗಿ ತೂಗಬಾರದು. ಇಬ್ಬರೂ ಸ್ವತಂತ್ರರಾಗಿರಬೇಕು. ಒಬ್ಬರಿಗೆ ಇನ್ನೊಬ್ಬರ ಭಾವನೆಯು ಹಿಂದೆಳೆಯುವದಾಗಬಾರದು. ಈಗಿನ ಪರಿಸ್ಥಿತಿಯಲ್ಲಿ, ದಂಪತಿಗಳಲ್ಲಿ, ಪುರುಷನ ಆಧ್ಯಾತ್ಮಿಕ ಪ್ರಗತಿಗೆ ಪತ್ನಿಯ ಚಿಂತೆಯು ಅಡ್ಡಿಯಾಗಿದೆ; ಮತ್ತು ಪತಿಯ ಚಿಂತೆಯು ಸ್ತ್ರೀಗೆ ದೊಡ್ಡ ಅಡಚಣೆಯಾಗಿಯೂ ಹೊರೆಯಾಗಿಯೂ ಇದೆ.

ಇಂಡಿಯಾ ದೇಶದಲ್ಲಿ ಸ್ತ್ರೀ ಪುರುಷರು ಕಣ್ಣುಗಳಲ್ಲಿ ಅಂಜನವನ್ನು ಹಚ್ಚಿಕೊಳ್ಳುತ್ತಾರೆ. ಅದನ್ನು ದೃಷ್ಟಿಗೆ ಪೋಷಕವಾಗಿ ಉಪಯೋಗಿಸುತ್ತಾರೆ. ಅದು ಕಣ್ಣುಗಳಲ್ಲಿಯೇ ಇದ್ದರೂ ನೋಟಕ್ಕೆ ತಡೆಯೂ ತೊಂದರೆಯೂ ಆಗುವದಿಲ್ಲ. ಯಾವ ಕ್ಷಣದಲ್ಲಿ ಅಂಜನವು ಕಣ್ಣುಗಳಲ್ಲಿ ಇದೆಯೆಂದು ಭಾವನೆ ಬರುತ್ತದೆಯೋ ಆಗ ಅದರಲ್ಲಿ ಏನೋ ದೋಷವಿರಬೇಕೆಂದು ಸಿದ್ಧವಾಗುತ್ತದೆ. ಸಾಮಾನ್ಯವಾಗಿ ನಮಗೆ ಹೊಟ್ಟೆ ಇರುವದೇ ನಮ್ಮ ಗಮನಕ್ಕೆ ಬರುವದಿಲ್ಲ. ಅದರಲ್ಲಿ ಸ್ವಲ್ಪ ದೋಷವಿದ್ದಾಗಲೇ ಅದು ನಮ್ಮ ಲಕ್ಷ್ಯಕ್ಕೆ ಬರುತ್ತದೆ. ಇದೇ ಪ್ರಕೃತಿ ನಿಯಮ.

ರಾಮನ ಪೂರ್ವಾಶ್ರಮದ ಪತ್ನಿಯು ಒಮ್ಮೆ ಅವನನ್ನು ಒಂದು ಪ್ರಶ್ನೆಮಾಡಿದಳು. "ನಿಮಗೆ ನನ್ನ ನೆನಪಿದೆಯೆ?" ಅದಕ್ಕೆ ರಾಮನು – "ರಾಮನು ಎಂದೂ ನೆನಪು ಮಾಡಿಕೊಳ್ಳುವದಿಲ್ಲ. ನಿನ್ನಿಂದ ಬೇರೆಯ ವಸ್ತುವನ್ನು ನೀನು ನೆನಪು ಮಾಡಿಕೊಳ್ಳಬಲ್ಲೆ. ನಿನ್ನ ಕಣ್ಣುಗಳನ್ನೂ ಮೂಗನ್ನೂ ಕೈಗಳನ್ನೂ ನೀನು ನೆನಪು ಮಾಡಿಕೊಳ್ಳುತ್ತೀಯ? ಎಂದಿಗೂ ಇಲ್ಲ. ಏಕೆ? ಅವುಗಳೆಲ್ಲಾ ನಿಮ್ಮಲ್ಲಿ ಒಂದಾಗಿವೆ. ಒಬ್ಬನು ಇನ್ನೊಬ್ಬನೊಡನೆ ಸ್ವಾಭಾವಿಕವಾಗಿ ಒಂದಾಗಿರತಕ್ಕವನು ಭಾವನೆಯಿಂದಲೂ ಒಂದಾದ ಮೇಲೆ ನೆನಪು ಮಾಡಿಕೊಳ್ಳಲಾರನು. ಈ ವಿಷಯಗಳನ್ನು ಇನ್ನಷ್ಟು ಸ್ಪಷ್ಟ ಪಡಿಸಬೇಕು.

ಒಬ್ಬ ಸ್ನೇಹಿತನಿಂದ ನಮಗೊಂದು ಪತ್ರ ಬಂದರೆ, ನಮಗೆ ಬಹಳ ಸಂತೋಷವಾಗುತ್ತದೆ; ಅದನ್ನು ನಾವು ಬಹಳ ಮೆಚ್ಚಿಕೊಂಡು ಹೊಗಳುತ್ತೇವೆ. ನಮ್ಮ ಸ್ನೇಹಿತನ ದೆಸೆಯಿಂದ ಅವನ ಪತ್ರವನ್ನು ಪ್ರೀತಿಸುತ್ತೇವೆ. ಹೀಗೆ ಗಂಡ ಹೆಂಡಿರು ಒಬ್ಬರಿಗೊಬ್ಬರು ದೇವರು ಕಳಿಸಿದ ಪತ್ರವಾಗಬೇಕು. ಗಂಡನ ದೇಹವು ಹೆಂಡತಿಗೆ ದೇವರಿಂದ ಬಂದ ಒಂದು ಬಗೆಯ ಪತ್ರವೋ ಚಿತ್ರವೋ ಆಗಬೇಕು. ಆಕೆಯು ಅವನ ದೇಹವನ್ನು ಪ್ರೀತಿಸಬಹುದು, ಗೌರವಿಸಬಹುದು; ಆದರೂ ಆ ದೇಹವು, ಅದಕ್ಕಾಗಿ ಅದು ಎನ್ನುವ ಸ್ವತಂತ್ರ ವಸ್ತುವಾಗಬಾರದು; ಎಷ್ಟೇ ಆದರೂ ಅದು [ದೇವರ] ಕೇವಲ ಪತ್ರವಾಗಬೇಕು, ಚಿತ್ರವಾಗಬೇಕು. ಹೀಗಾದರೆ, ಪತ್ನಿಯು ಪತಿಯ

ಮೂಲಕ ದೇವರನ್ನೇ ನೋಡುತ್ತಾಳೆ. ಪತ್ನಿಯು ದೇವತ್ವದ ಒಂದು ಪ್ರತೀಕವೂ ದೇವರ ಒಂದು ಚಿತ್ರವೂ ಪ್ರತಿಮೆಯೂ ಆಗಲಿ. ರಾತ್ರಿಯ ಕಾಲದಲ್ಲಿ ಅವರ ದೇಹಗಳ ಸಮಾಯೋಗವಾದರೆ ಹಗಲಿನಲ್ಲಿ ಪತ್ನಿಯು ಪತಿಯೊಡನೆ ಆಧ್ಯಾತ್ಮಿಕ ಸಮಾಯೋಗವನ್ನು ಸಾಧಿಸಬೇಕು. ರಾತ್ರಿಯಲ್ಲಿ, ಶರೀರಗಳ ಸಂಯೋಗ ಸಮಯದಲ್ಲಿಯೇ ಆಧ್ಯಾತ್ಮಿಕ ಸಂಯೋಗವನ್ನೂ ಆಕೆಯು ಅನುಭವ ಮಾಡಬೇಕು. ಒಂದು ವೇಳೆ ಹಾಗಾಗದಿದ್ದರೆ ಹಗಲಿನಲ್ಲಿ ಆ ಕೊರತೆಯನ್ನು ಭರ್ತಿ ಮಾಡಿಕೊಳ್ಳಬೇಕು. ಪ್ರತಿಯೊಂದು ಆಲಿಂಗನದಲ್ಲಿಯೂ ಆಕೆಯು ದೇವರನ್ನೇ—ದೇವತ್ವವನ್ನೇ—ಆಲಂಗಿಸುತ್ತಿರುವಂತೆ, ಅಂಗೀಕರಿಸುತ್ತಿರುವಂತೆ, ಆಸ್ವಾದಿಸುತ್ತಿರುವಂತೆ ಭಾವಿಸಬೇಕು. "ಓ ಬೆಳಕೇ ನನ್ನಲ್ಲಿಗೆ ಬಾ. ನಾನು ಜ್ಯೋತಿಯನ್ನೇ—ಪರಂಜ್ಯೋತಿಯನ್ನೇ—ಆಲಂಗಿಸುತ್ತೇನೆ". ಎಂದು ಆಕೆ ಭಾವಿಸಬೇಕು. ಈ ಆನಂದವು ಪೂರ್ಣ ಪವಿತ್ರವೂ ಸಮಗ್ರ ವಿಶ್ವದೊಡನೆ—ವಿಶ್ವಾತ್ಮದೊಡನೆ—ಐಕ್ಯವೂ ಆಗಿದೆ. ಪತ್ನಿಯು "ನೀನೇ ನನ್ನ ದೇವರು, ಸತ್ಯವೂ ಜ್ಞಾನವೂ ಅನಂತವೂ ಆನಂದವೂ ಎಲ್ಲಾ ನೀನೆ; ನಿನ್ನನ್ನು ಸ್ವೀಕರಿಸುತ್ತೇನೆ, ಸೇವಿಸುತ್ತೇನೆ; ಅಮೃತಸ್ವರೂಪವಾದ ನಿನ್ನನ್ನು ಹೀರಿಕೊಳ್ಳುತ್ತೇನೆ. ನಿನ್ನಲ್ಲಿ ಬೆರೆತು ಒಂದಾಗುತ್ತೇನೆ..." ಎಂದು ಭಾವಿಸಬೇಕು. ಹೀಗೆ ಪ್ರತಿಯೊಂದೂ ನಮಗೆ ದೇವತ್ವದ ಪ್ರತೀಕವಾಗಬೇಕು. ಆ ಭಾವನೆಯು ರಾತ್ರಿಯೇ ಬರಬೇಕು. ಬಾರದಿದ್ದರೆ ಹಗಲು ಆ ಕೊರತೆಯನ್ನು ಪೂರೈಸಿಕೊಳ್ಳಬೇಕು. ಆ ಭಾವನೆಯು ಹಗಲಿರುಳೆನ್ನದೆ ಯಾವಾಗಲೂ ಅಖಂಡವಾಗಿರಬೇಕು. ದೇವತ್ವವನ್ನು, ದೇವತ್ವವನ್ನು, ದೇವತ್ವವನ್ನು ಆಲಗಿಂಸುವದೇ ವಿವಾಹದ ಐಕ್ಯ ಭಾವವೆನ್ನಬಹುದು. ಇಡೀ ವಿಶ್ವವನ್ನೇ ನಮ್ಮ ದೇಹವನ್ನಾಗಿ ಭಾವಿಸಬೇಕು; ಎಲ್ಲಾ, ಎಲ್ಲಾ, ಎಲ್ಲಾ ತಾನೇ ಆಗಬೇಕು. ಈ ಭಾವನೆಯು ಯಾವಾಗಲೂ ಮನಸ್ಸಿನಲ್ಲಿ ಇರಬೇಕು. ಆದರೆ, ದೇಹ ಸಂಬಂಧವಾದ ಸಂಯೋಗದ ಕಲ್ಪನೆ ಸಹ ಮನಸ್ಸಿನಲ್ಲಿ ಬರಬಾರದೆಂದು ವೇದಾಂತವು ಹೇಳುತ್ತದೆ; ಆ ಬಗೆಯ ಎಲ್ಲಾ ಭಾವನೆಗಳನ್ನೂ ಬಿಟ್ಟುಬಿಡಬೇಕೆಂದೂ ಒಂದು ದೇಹದ ಮೇಲೆ ಇನ್ನೊಂದು ದೇಹವು ಎಂದೂ ಹೊರೆಯಾಗಬಾರದೆಂದೂ ನಿಜವಾದ ಚೈತನ್ಯಭೂಮಿಕೆಯಲ್ಲಿ ಯಾವಾಗಲೂ ಒಂದಾಗಿರಬೇಕೆಂದೂ ವೇದಾಂತವು ಬೋಧಿಸುತ್ತದೆ. "ದೇವತ್ವವೂ ಶಕ್ತಿಯೂ ಸಮರಸಭಾವವೂ ಸ್ವರಮೈತ್ರಿಯೂ ಏಕತಾಲವೂ ಪರಿಪೂರ್ಣ ದಿವ್ಯ ಪ್ರೇಮವೂ ವಿಶ್ವಪ್ರೇಮವೂ ನನ್ನಲ್ಲಿವೆ." ಎಂದು ಭಾವಿಸಿರಿ. ಅದೇ ನಾನು; ನಾನೇ ಅದು. ಅವನು ನನ್ನಲ್ಲಿದ್ದಾನೆ; ನಾನೇ ಅವನು. ಹಾಗಾದರೆ ನೀವು ಮದುವೆಯಾಗಿರುವ ನಿಜವಾದ ಆತ್ಮನನ್ನು ಕಾಣುತ್ತೀರಿ; ಗಿಡಗಳಲ್ಲಿಯೂ ಮರಗಳಲ್ಲಿಯೂ ನದಿಗಳಲ್ಲಿಯೂ ಎಲ್ಲವುಗಳಲ್ಲಿಯೂ ಇರುವ ನಿಜವಾದ ಆತ್ಮನನ್ನು ನೋಡುತ್ತೀರಿ. ಅದೇ ನಾನು.

ಓಂ ! ಓಂ ! ಓಂ !

# The Snares of 99

## 99ರ (ಆಶಾ) ಪಾಶ-ಜಾಲ-ಉರುಲು

"99ರ ಪಾಶದಲ್ಲಿ ಬೀಳಬೇಡ, 99ರ ಜಾಲದ ಉರುಲಿನಲ್ಲಿ ಸಿಕ್ಕಿಕೊಳ್ಳಬೇಡ" ಎಂದು ತಿಳಿದವರು ಹೇಳುತ್ತಾರೆ. ಇದರ ಅರ್ಥವೇನು?

ಒಬ್ಬ ಬಡವನು ತನ್ನ ಹೆಂಡತಿಯೊಡನೆ ಒಂದು ಸಣ್ಣ ಗುಡಿಸಿಲಿನಲ್ಲಿ ಸುಖವಾಗಿದ್ದನು, ಬಹಳ ಸುಖವಾಗಿ ವಾಸಮಾಡುತ್ತಿದ್ದನು.

ಅವನು ಹಗಲೆಲ್ಲಾ ಬಹಳ ಕಷ್ಟಪಟ್ಟು ಕೆಲಸ ಮಾಡುತ್ತಿದ್ದನು; ಆದರೂ ಇಬ್ಬರು ಬದುಕಿರಲು ಮಾತ್ರ ಸಾಕಾಗುವಷ್ಟು ಅತ್ಯಲ್ಪ ಸಂಪಾದನೆ ಆಗುತ್ತಿತ್ತು. ಅವನು ಅಷ್ಟರಲ್ಲಿಯೇ ತೃಪ್ತನಾಗಿದ್ದನು. ಅವನಿಗೆ ಬೇರೆ ಯಾವ ಪ್ರಾಪಂಚಿಕವಾದ ಬಯಕೆಯಾಗಲಿ, ಮಹದಾಶೆಯಾಗಲಿ ಇರಲಿಲ್ಲ, ಅವನಲ್ಲಿ ದ್ವೇಷಾಸೂಯೆಗಳೂ ಇರಲಿಲ್ಲ. ಅವನು ಒಳ್ಳೇ ಪ್ರಾಮಾಣಿಕನಾದ ಕೆಲಸಗಾರನಾಗಿದ್ದನು. ಅವನ ನೆರೆಯಲ್ಲಿ ಒಬ್ಬ ದೊಡ್ಡ ಶ್ರೀಮಂತ ಗೃಹಸ್ಥನಿದ್ದನು. ಆದರೆ ಅವನು ಯಾವಾಗಲೂ ಚಿಂತಾತಂಕಗಳಲ್ಲಿಯೇ ಮುಳುಗಿರುತ್ತಿದ್ದನು; ಅವನೆಂದೂ ಸುಖಿಯಾಗಿರಲಿಲ್ಲ. ಒಮ್ಮೆ ಒಬ್ಬ ವೇದಾಂತಿಗಳಾದ ಸ್ವಾಮಿಗಳು ಆ ಧನಿಕನ ಮನೆಗೂ ಬಡವನ ಮನೆಗೂ ಬಂದರು. ಆ ಧನಿಕನು ಸ್ವಾಮಿಗಳಲ್ಲಿ ತನ್ನ ವ್ಯಥೆಗಳನ್ನೆಲ್ಲಾ ಹೇಳಿಕೊಂಡನು. ಅವನ ಕಳವಳಕ್ಕೂ ಕಾತರತೆಗೂ ಅವನ ಆಸ್ತಿಯೇ ಕಾರಣವೆಂದೂ ಅದು ಅವನನ್ನು ಪಿಶಾಚಿಯ ಹಾಗೆ ಹಿಡಿದುಕೊಂಡು ಚಿಂತೆಯಲ್ಲಿ ಮುಳುಗಿಸಿದೆಯೆಂದೂ ಸ್ವಾಮಿಗಳು ಹೇಳಿದರು. "ನೋಡಪ್ಪ, ನಿನ್ನ ನೆರೆಯ ಗುಡಿಸಿಲಿನಲ್ಲಿರುವ ಬಡವನಿಗೆ ಯಾವ ಆಸ್ತಿಯೂ ಇಲ್ಲದಿದ್ದರೂ ಅವನ ಮುಖದಲ್ಲಿ ಯಾವಾಗಲೂ ಸಂತೋಷದ ಕಳೆಯು ಉಕ್ಕುತ್ತಿರುತ್ತದೆ. ಅವನ ಕೈಕಾಲುಗಳ ಮಾಂಸಖಂಡಗಳು ಎಷ್ಟು ಪುಷ್ಟವಾಗಿ ಬಲಿಷ್ಠವಾಗಿವೆ! ಅವನ ಅಂಗಾಂಗಗಳು ಎಷ್ಟು ಸುಂದರವೂ ಬಂಧುರವೂ ಆಗಿವೆ! ಅವನು ಎಷ್ಟು ಸಂತೋಷವಾಗಿಯೂ ಉಲ್ಲಸಿತವಾಗಿಯೂ ವಿನೋದವಾಗಿಯೂ ಇರುತ್ತಾನೆ! ಅವನು ಯಾವಾಗಲೂ ತನ್ನಷ್ಟಕ್ಕೇ ತಾನು ಆನಂದ ಗೀತೆಯನ್ನು ಗೊಣಗಿಕೊಳ್ಳುತ್ತಿರುತ್ತಾನೆ." ಎಂದು ಸ್ವಾಮಿಗಳು ಆ ಧನಿಕನಿಗೆ ಹೇಳಿದರು. ಅವನು ಆ ಬಡವನ ನಿಶ್ಚಿಂತತೆಯ ಆನಂದವನ್ನು ಎಂದೂ ಅನುಭವಿಸಿರಲಿಲ್ಲ. ಆ ಧನಿಕನು ಬೇರೆ ಜನರು ಬಯಸಿದಂತೆ ತನ್ನ ಸಂಪತ್ತನ್ನು ರೂಪಿಸಿಕೊಂಡಿದ್ದನು. ಸ್ವಾಮಿಗಳು ಆಡಿದ ಮಾತಿನ ಸತ್ಯತೆಯನ್ನು ಕಂಡುಹಿಡಿಯುವುದಕ್ಕಾಗಿ ಆ ಶ್ರೀಮಂತನು ಅಪೇಕ್ಷೆ ಮಾಡಿದನು. ಅದಕ್ಕಾಗಿ ಸ್ವಾಮಿಗಳ ಗುಪ್ತವಾದ ಸಲಹೆಯಂತೆ ಅವನು ಆ ಬಡವನ ಮನೆಯಲ್ಲಿ 99 ರೂಪಾಯಿಗಳ ಒಂದು ಗಂಟನ್ನು ಒಬ್ಬರಿಗೂ ತಿಳಿಯದಂತೆ ಎಸೆದನು. ಆ ಬಡವನು ಕಷ್ಟದಿಂದ ದುಡಿದ ಅಲ್ಪ ಧನದಿಂದಲೇ ಸಾಮಗ್ರಿಗಳನ್ನು ತಂದು ನಿತ್ಯವೂ ಅಡಿಗೆ ಮಾಡುತ್ತಿದ್ದ

ಅವನ ಕುಟೀರದಲ್ಲಿ ಮರುದಿನ ಬೆಂಕಿಯನ್ನೇ [ಹೊಗೆಯನ್ನೇ] ಕಾಣಲಿಲ್ಲ. ಆ ರಾತ್ರಿ ಅವರ ಮನೆಯಲ್ಲಿ ಹೊಗೆಯನ್ನೇ ಹಚ್ಚದೆ, ಅಡಿಗೆ ಮಾಡದೆ ಉಪವಾಸವಿದ್ದರು. ಮರುದಿನ ಸಂಜೆ ಸ್ವಾಮಿಗಳು ಆ ಶ್ರೀಮಂತನನ್ನು ಕರೆದುಕೊಂಡು ಆ ಬಡವನ ಮನೆಗೆ ಹೋಗಿ ಅವನ ಮನೆಯಲ್ಲಿ ಹೊಗೆಯನ್ನು ಕಾಣದಿರುವದಕ್ಕೆ ಕಾರಣವನ್ನು ಕೇಳಿದರು. ಸ್ವಾಮಿಗಳ ಸನ್ನಿಧಿಯಲ್ಲಿ ಆ ಬಡವನು ಬೇರೆ ಕಾರಣವನ್ನು ಹೇಳಿ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗದೆ ನಿಜವನ್ನು ಹೇಳಬೇಕಾಯಿತು; "ಸ್ವಾಮಿಗಳೆ! ತಮ್ಮ ಎದುರಿಗೆ ಸುಳ್ಳು ಹೇಳಲಾರೆ. ನಿತ್ಯವೂ ಕಷ್ಟಪಟ್ಟು ಕೆಲವೆ ಆಣೆಗಳನ್ನು ದುಡಿದುಕೊಂಡು ಬಂದು, ಅದರಿಂದ ಆವತ್ತಿಗೆ ಬೇಕಾಗುವಷ್ಟು ಹಿಟ್ಟನ್ನೂ ಸೊಪ್ಪನ್ನೂ ಕೊಂಡುಕೊಂಡು ಬಂದು ಬೇಯಿಸಿ ತಿಂದು ಮಲಗುತ್ತಿದ್ದೆವು. ಆದರೆ ನಿನ್ನೆ ನಮ್ಮ ಮನೆಯಲ್ಲಿ ದೈವವಶಾತ್ ತೊಂಬತ್ತೊಂಬತ್ತು ರೂಪಾಯಿಗಳಿರುವ ಒಂದು ಪೆಟ್ಟಿಗೆ ಸಿಕ್ಕಿತು. ಅದನ್ನು ಕಂಡೊಡನೆ ಅದು ಸಂಪೂರ್ಣವಾಗಿ ನೂರು ರೂಪಾಯಿ ಆಗಲು ಇನ್ನು ಒಂದೇ ರೂಪಾಯಿ ಬೇಕೆಂಬ ಕಲ್ಪನೆಯು ಮನಸ್ಸಿಗೆ ಬಂದಿತು. ಆ ಒಂದು ರೂಪಾಯಿಯನ್ನು ಭರ್ತಿ ಮಾಡುವುದಕ್ಕೋಸ್ಕರ ನಾವು ಒಂದು ಬಿಟ್ಟು ಒಂದು ದಿನ ಉಪವಾಸಮಾಡಬಹುದೆಂದೂ ಹಾಗಾದರೆ ಒಂದು ವಾರದಲ್ಲಿ ಒಂದು ರೂಪಾಯಿಯನ್ನು ಉಳಿಸಿ ಆ ತೊಂಬತ್ತೊಂಬತ್ತರ ಭಂಡಾರವನ್ನು ಒಂದು ನೂರಕ್ಕೆ ಭರ್ತಿ ಮಾಡಬಹುದೆಂದೂ ಯೋಚಿಸಿ ಉಪವಾಸ ಮಾಡುತ್ತಿದ್ದೇವೆ. ಮೊದಲು ಅವತ್ತವತ್ತಿನ ಊಟಮಾಡಿ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿದ್ದೆವು; ಈಗ ಈ ತೊಂಬತ್ತೊಂಬತ್ತರ ಉರುಲಿನಲ್ಲಿ ಸಿಕ್ಕಿ ನರಳುತ್ತಿದ್ದೇವೆ." ಎಂದನು. ಐಶ್ವರ್ಯವಂತರ ಕೃಪಣತನದ ಗುಟ್ಟೇ ಇದು. ಅವರ ಸಂಪಾದನೆಯು ಹೆಚ್ಚಿದಷ್ಟೂ, ಇನ್ನೂ ಸಾಲದು ಇನ್ನೂ ಸಾಲದು ಎಂಬ ಅವರ (ದಾಹದ) ಬಡತನವೂ ಹೆಚ್ಚುತ್ತದೆ. ಅವರಿಗೆ 99 ರೂ. ಬಂದರೆ, ಅದು 100 ರೂ. ಆಗಬೇಕು, 99,000 ರೂ. ಬಂದರೆ ಅದು 100,000 ರೂ. ಆಗಬೇಕೆಂದು ಅವರು ಬಯಸುತ್ತಾರೆ. ಬೇಕು, ಬೇಕು ಎನ್ನುವ ಅವರ ಬಯಕೆ ಬೆಳೆಯುವದೇ ಹೊರತು ಅವರಿಗೆ ಸಾಕು ಎನ್ನುವ ತೃಪ್ತಿ ಬರುವದಿಲ್ಲ.

---

## He has an axe to grind
## ಅವನಲ್ಲಿ ಮಸೆದುಕೊಳ್ಳಬೇಕಾದ ಕೊಡಲಿ ಇದೆ; ಅವನಿಗೆ ಸಾಧಿಸಿಕೊಳ್ಳಬೇಕಾದ ಸ್ವಾರ್ಥವಿದೆ.

ಬೆಂಜಾಮಿನ್ ಫ್ರ್ಯಾಂಕ್ಲಿನ್‌ನು ತನ್ನ ಸ್ವಂತ ಜೀವನ ಚರಿತ್ರೆಯಲ್ಲಿ ತನ್ನ ಬಾಲ್ಯದ ಒಂದು ಅನುಭವವನ್ನು ಹೇಳಿದ್ದಾನೆ. ಅವನು ಹುಡುಗನಾಗಿದ್ದಾಗ ಫಿಲಿಡಲ್ ಫಿಯಾದಲ್ಲಿ ಸ್ಕೂಲಿಗೆ ಹೋಗುತ್ತಿದ್ದನು. ಒಂದು ದಿನ ಅವನು ಶಾಲೆಗೆ ಹೋಗುತ್ತಿದ್ದಾಗ ಒಬ್ಬ ಕಮ್ಮಾರನು ಕೆಲಸಮಾಡುತ್ತಿದ್ದುದನ್ನು ನೋಡಿದನು. ಆಗಿನ ಕಾಲದಲ್ಲಿ ಯಂತ್ರೋಪಕರಣಗಳು ಈಗಿನ ಕಾಲದಷ್ಟು [೧೯೦೪–೫] ಸುಧಾರಣೆಯಾಗಿ

ಉತ್ತಮ ಸ್ಥಿತಿಗೆ ಬಂದಿರಲಿಲ್ಲ. ಆ ಕಮ್ಮಾರನು ತನ್ನ ಕುಲುಮೆಯಲ್ಲಿ ಕೆಲಸ ಮಾಡುತ್ತಿದ್ದನು. ಬೆಂಜಾಮಿನ್‌ನು ಒಬ್ಬ ಕುತೂಹಲಿಯಾದ ಬಾಲಕನಂತೆ ಅಲ್ಲಿ ನಿಂತು ಅವನ ಕೆಲಸವನ್ನು ನೋಡುತ್ತಿದ್ದನು. ಮಕ್ಕಳು ತಮಗೆ ಆಸಕ್ತಿಯಿರುವ ಯಾವ ಭಾವನೆಯಲ್ಲಿ ಆದರೂ ಮುಳುಗಿ ಮೈಮರೆಯುತ್ತಾರೆ. ಅವನು ಸ್ಲೇಟು ಪುಸ್ತಕಗಳ ಚೀಲವನ್ನು ಹೆಗಲಿಗೆ ಹಾಕಿಕೊಂಡು ಸ್ಕೂಲಿಗೆ ಹೋಗುತ್ತಿದ್ದನು ; ಆದರೆ ಆ ಕಮ್ಮಾರನ ಕೆಲಸವನ್ನು ನೋಡುವ ವಿನೋದ ಸುಖದಲ್ಲಿ ಅವನು ತನ್ನ ಶಾಲೆಯನ್ನೇ ಮರೆತುಬಿಟ್ಟನು. ಆ ಕಮ್ಮಾರನು ಈ ಹುಡುಗನ ಅತಿಯಾದ ಆಸಕ್ತಿಯನ್ನು ಗಮನಿಸಿದನು. ಅವನು ತನ್ನ ಆಯುಧಗಳನ್ನೂ ಉಪಕರಣಗಳನ್ನೂ ಕತ್ತಿ, ಚಾಕುಗಳನ್ನೂ ಸಾಣೆ ಹಿಡಿಯುತ್ತಿದ್ದನು. ಕಮ್ಮಾರನ ಸಹಾಯಕ ಕೆಲಸಗಾರನು ಆದಿನ ಕೆಲಸಕ್ಕೆ ಬಂದಿರಲಿಲ್ಲ. ತನ್ನ ಕೆಲಸದಲ್ಲಿ ಆ ಹುಡುಗನಿಗಿದ್ದ ಅಷ್ಟೊಂದು ಪ್ರೀತಿಯನ್ನು ನೋಡಿ ಕಮ್ಮಾರನು ಹುಡುಗನನ್ನು ಕರೆದನು. ಬೆಂಜಾಮಿನ್ನನು ಅವನಲ್ಲಿಗೆ ಹೋದನು. ಆ ಕಮ್ಮಾರನು “ಆಹಾ ! ನೀನು ಎಷ್ಟು ಒಳ್ಳೆಯ ಹುಡುಗ, ಎಷ್ಟು ಸೊಗಸಾಗಿದ್ದಿ, ಬಹಳ ಜಾಣನಾಗಿ ತೋರುತ್ತಿದ್ದಿ !” ಎಂದನು. ಚಿಕ್ಕ ಬೆಂಜಾಮಿನ್ನನು ಈ ಹೊಗಳಿಕೆಯಿಂದ ಬಹಳ ಸಂತೋಷಗೊಂಡು ಉಬ್ಬಿದನು. ಕಮ್ಮಾರನು ಬೆಂಜಾಮಿನ್ನನ ಮುಖದ ಮೇಲೆ ಉಕ್ಕುತ್ತಿದ್ದ ಸಂತೋಷದ ಕಳೆಯನ್ನು ನೋಡಿ ಮತ್ತಷ್ಟು ತನ್ನ ಹತ್ತಿರಕ್ಕೆ ಕರೆದು ಬೆನ್ನು ಚಪ್ಪರಿಸಿ, ಮುದ್ದಿಸಿ, ಆ ಸಾಣೆಯ ಕಲ್ಲನ್ನು ತಿರುಗಿಸುವದರಲ್ಲಿ ತನಗೆ ಸಹಾಯವಾಗಬೇಕೆಂದು ಕೇಳಿದನು. ಬೆಂಜಾಮಿನ್ನನು ಕೂಡಲೇ ಆ ಕೆಲಸ ಮಾಡುವದಕ್ಕೆ ತೊಡಗಿದನು. ಮಕ್ಕಳು ಸ್ವಾಭಾವಿಕವಾಗಿಯೇ ಬಹಳ ಚಟುವಟಿಕೆಯುಳ್ಳವರಾಗಿರುತ್ತಾರೆ ; ಮತ್ತು ಏನಾದರೂ ಕೆಲಸ ಮಾಡುತ್ತಿರಬೇಕೆಂದು ಬಯಸುತ್ತಾರೆ. ಅವರ ಹಾಸ್ಯ ಪ್ರವೃತ್ತಿಯನ್ನು ಸ್ವಲ್ಪ ಕೆರಳಿಸಿ, ಉಪಾಯದಿಂದ ಒಲಿಸಿಕೊಂಡರೆ, ಅವರನ್ನು ಪ್ರಪಂಚದ ಇನ್ನೊಂದು ತುದಿಗೆ ಸಹ ಕಳಿಸಿಕೊಡಬಹುದು. ಬೆಂಜಾಮಿನ್ನನು ಸಾಣೆಯ ಯಂತ್ರವನ್ನು ತಿರುಗಿಸುತ್ತಿದ್ದಾಗ ಆ ಕಮ್ಮಾರನು ಅವನನ್ನು ಹೊಗಳುತ್ತಾ ತಮಾಷೆ ಮಾಡುತ್ತಾ ಅವನಿಂದ ಕೆಲಸ ಮಾಡಿಸುತ್ತಾ ಹೋದನು. ಆ ಹುಡುಗನೂ ಖುಷಿಯಾಗಿ ಕೆಲಸಮಾಡುತ್ತಾ ಹೋದನು. ಅಷ್ಟರೊಳಗೆ ಆ ಕಮ್ಮಾರನು ಅನೇಕ ಚಾಕುಗಳನ್ನೂ ಕತ್ತಿಗಳನ್ನೂ ಕೊಡಲಿಗಳನ್ನೂ ಸಾಣೆಗೆ ಹಿಡಿದು ಹರಿತ ಮಾಡಿಕೊಂಡನು. ಬಹಳ ಹೊತ್ತಾದುದರಿಂದ ಆ ಹುಡುಗನಿಗೆ ಆಯಾಸವಾಗಿ ಶಾಲೆಯ ಮತ್ತು ಬಾಲಕರ ಪ್ರಾರ್ಥನೆಯ ಸಮಯದ ನೆನಪು ಬಂದು, ಆ ಕೆಲಸವನ್ನು ಬಿಟ್ಟು ಹೊರಡಬೇಕೆನ್ನಿಸಿತು. ಆದರ ಅವನನ್ನು ಹೊಗಳುತ್ತಾ ತಮಾಷೆ ಮಾಡುತ್ತಾ ಇದ್ದ ಕಮ್ಮಾರನು “ಓ, ಎಷ್ಟು ಒಳ್ಳೆ ಹುಡುಗ ನೀನು ; ಎಷ್ಟು ಚುರುಕಾಗಿದ್ದಿ, ಮುದ್ದಾಗಿದ್ದಿ, ಶಾಲೆಯಲ್ಲಿ ನಿಮ್ಮ ಉಪಾಧ್ಯಾಯರು ಯಾರೂ ನಿನ್ನನ್ನು ಶಿಕ್ಷಿಸುವದಿಲ್ಲವೆನ್ನುವದು ನನಗೆ ಗೊತ್ತು. ಬೇ ಹುಡುಗರು ಮೂರು ಗಂಟೆಗಳಲ್ಲಿ ಮಾಡುವ ಅಭ್ಯಾಸವನ್ನು ನೀನು ಒಂದೆ

ಗಂಟೆಯಲ್ಲಿ ಮಾಡಬಲ್ಲಿ. ಆದ್ದರಿಂದ ನಿನ್ನ ಗುರುಗಳು ನಿನ್ನ ಮೇಲೆ ಸಿಟ್ಟುಮಾಡುವದಿಲ್ಲ. ನೀನು ಎಲ್ಲರಿಗೂ ಬಹಳ ಅಚ್ಚು ಮೆಚ್ಚಾಗಿದ್ದಿ" ಎಂದು ಪ್ರೋತ್ಸಾಹಿಸುತ್ತಿದ್ದನು. ಒಂದಾದ ಮೇಲೆ ಒಂದರಂತೆ ಅವನು ತನ್ನ ಆಯುಧಗಳನ್ನು ಹರಿತ ಮಾಡುತ್ತಲೇ ಇದ್ದನು; ಆ ಬಾಲಕನನ್ನು ಬಿಡಲೇ ಇಲ್ಲ. ಬೆಳಿಗ್ಗೆ ೧೦ ಗಂಟೆಗೆ ಪ್ರಾರ್ಥನೆಯ ಸಮಯವಾದರೆ, ೧೨ ಗಂಟೆಗೆ ಕಮ್ಮಾರನಿಂದ ಬಿಡುಗಡೆ ಆಯಿತು. ಆಗ ಅವನು ಶಾಲೆಗೆ ಹೋದನು. ಆ ದಿನ ಅವನು ಬಹಳ ತಡವಾಗಿ ಬಂದುದರಿಂದ ಉಪಾಧ್ಯಾಯರು ಅವನನ್ನು ಬೆತ್ತದಿಂದ ಚೆನ್ನಾಗಿ ಹೊಡೆದರು. ಕಮ್ಮಾರನ ಕುಲುಮೆಯಲ್ಲಿ ಬಹಳ ಹೊತ್ತು ಕೆಲಸಮಾಡಿ ಸೋತಿದ್ದ ಕೈಗಳು ಮಾಸ್ತರಿಂದ ಏಟನ್ನೂ ತಿಂದು ಹುಣ್ಣಾದವು. ಇದರ ಪರಿಣಾಮವಾಗಿ ಒಂದು ವಾರ ಅವನು ನರಳಬೇಕಾಯಿತು. ಆಗ ಅವನು ಪಾಠವನ್ನು ಓದುವದೂ ಸಾಧ್ಯವಾಗಲಿಲ್ಲ. ಅಂದಿನಿಂದ ಅವನ ಜೀವಮಾನದಲ್ಲೆಲ್ಲಾ ಯಾರಾದರೂ ಅವನನ್ನು ಹೊಗಳಿದ ಕೂಡಲೇ " He has an axe to grind " "ಅವನು ಮಸೆದು ಕೊಳ್ಳಬೇಕಾದ ಕೊಡಲಿ ಇದ್ದೇ ಇದೆ; ಅದರಲ್ಲಿ ಅವನ ಸ್ವಾರ್ಥ ಸಾಧನೆಯ ಉದ್ದೇಶವು ಇದ್ದೇ ಇದೆ" ಎಂದು ಅವನ ಮನಸ್ಸಿನಲ್ಲಿ ಬರುತ್ತಿತ್ತು. ಬಾಲ್ಯದ ಆ ಘಟನೆಯ ಅನಂತರ ಬೆಂಜಾಮಿನ್ ಫ್ರ್ಯಾಂಕ್ಲಿನ್ನನು ಮುಖಸ್ತುತಿಯ ಜಾಲದಲ್ಲಿ ಎಂದೂ ಬೀಳಲಿಲ್ಲ ; ಹೊಗಳಿಕೆಗೆ ಮೋಸಹೋಗಲಿಲ್ಲ.

ಓಂ ! ಓಂ ! ಓಂ !

## Hoarding of Wealth
## ಸಂಪತ್ತಿನ ಸಂಗ್ರಹ

ಒಬ್ಬ ಸಂನ್ಯಾಸಿಯ ಹತ್ತಿರ ಇದ್ದ ಕೆಲವು ತಾಮ್ರದ ನಾಣ್ಯಗಳನ್ನು ಕೆಲವು ಹುಡುಗರಿಗೆ ಅವರು ಕೊಟ್ಟುಬಿಡುವದರಲ್ಲಿ ಇದ್ದರು. ಅವನ್ನು ಪಡೆಯುವದಕ್ಕಾಗಿ ಹಲವರು ಬಡವರು ಅವರಲ್ಲಿಗೆ ಬಂದರು; ಆದರೆ ಆ ಯತಿಯು ಅವರಿಗೆ ಕೊಡಲೊಪ್ಪಲಿಲ್ಲ. ಕೊನೆಗೆ ಆನೆಯ ಮೇಲೆ ಕುಳಿತಿದ್ದ ಒಬ್ಬ ರಾಜನು ಅವರಲ್ಲಿಗೆ ಬಂದನು. ಆ ಸ್ವಾಮಿಗಳು ತಮ್ಮ ಕೈಯಲ್ಲಿದ್ದ ತಾಮ್ರದ ನಾಣ್ಯಗಳನ್ನು ರಾಜನು ಕುಳಿತಿದ್ದ ಆನೆಯ ಮೇಲಿನ ಅಂಬಾರಿಯೊಳಗೆ ಎಸೆದರು. ಸ್ವಾಮಿಗಳ ಈ ಅನಿರೀಕ್ಷಿತವಾದ ಕಾರ್ಯದಿಂದ ರಾಜನು ಆಶ್ಚರ್ಯಪಟ್ಟನು. ರಾಜನು ಅತ್ಯಂತ ದರಿದ್ರ ಮನುಷ್ಯನಾದುದರಿಂದ ಅವನಿಗಾಗಿಯೇ ತಾವು ಹಣವನ್ನು ಕೊಟ್ಟಿದ್ದೆಂದು ಸ್ವಾಮಿಗಳು ಹೇಳಿದರು. ತಾನು ಹೇಗೆ ಅತ್ಯಂತ ದರಿದ್ರನಾಗಬಹುದೆಂಬುದನ್ನು ರಾಜನು ಕೇಳಿದನು. ರಾಜನ ಸಂಪತ್ತಿನಿಂದಲೂ ಮತ್ತು ಹೆಚ್ಚು ಹೆಚ್ಚು ರಾಜ್ಯಗಳು ತನಗೆ

ಬೇಕೆಂದು ಎಡೆಬಿಡದ ಹಸಿವು ಬಾಯಾರಿಕೆಗಳು ರಾಜನಿಗಿರುವದರಿಂದಲೂ ಅವನು ಎಲ್ಲರಿಗಿಂತಲೂ ಹೆಚ್ಚು ಬಡವನೆಂದು ಯತಿಗಳು ಹೇಳಿದರು. ಆದ್ದರಿಂದ ರಾಜನು ಅತ್ಯಂತ ದರಿದ್ರನು.

ಒಬ್ಬ ಮನುಷ್ಯನು ಒಂದು ಪೆಟ್ಟಿಗೆಯಲ್ಲಿ ರಾಶಿರಾಶಿಯಾಗಿ ಹಣವನ್ನು ಕೂಡಿ ಸುತ್ತಿದ್ದನು. ಅಲ್ಲಿ ಒಬ್ಬ ಯತಿಯು ಸಮೀಪದಲ್ಲಿ ಹೋಗುತ್ತಿದ್ದನು. ದೊಡ್ಡ ದೊಡ್ಡ ಪೆಟ್ಟಿಗೆಗಳಲ್ಲಿಯೂ ಉಕ್ಕಿನ ಖಜಾನೆಗಳಲ್ಲಿಯೂ ಹಣವನ್ನು ಸಂಗ್ರಹಿಸುತ್ತಿದ್ದ ಆ ಸಾಹುಕಾರನ ಮನೆಗೆ ಆ ಯತಿಯು ಆಹ್ವಾನಿಸಲ್ಪಟ್ಟನು. ಯತಿಯು ಅದಕ್ಕೆ ಕಾರಣವನ್ನು ಕೇಳಿದನು. ಆ ಸಾಹುಕಾರನು "ಸ್ವಾಮೀ ! ನಿಮಗೆ ಯಾವ ಚಿಂತೆ ಯಿದೆ ? ಜನರು ನಿಮಗೆ ಭಿಕ್ಷೆ ನೀಡಿ, ಯೋಗಕ್ಷೇಮ ವಹಿಸುತ್ತಾರೆ. ಅವರು ಹಾಗೆ ಮಾಡದಿದ್ದರೂ ನಿಮ್ಮ ದೇಹಕ್ಕೆ ನೀವು ಹುಲ್ಲು ಕಡ್ಡಿಯಷ್ಟೂ ಗಮನಕೊಡುವ ದಿಲ್ಲ. ಆದರೆ ನಾವು ಗೃಹಸ್ಥರು, ಕುಟುಂಬಿಗಳು. ಆಶ್ರಿತರನ್ನು ರಕ್ಷಣೆ ಮಾಡ ಬೇಕು. ಅತಿಥಿಗಳನ್ನು ಸತ್ಕರಿಸಬೇಕು, ಬ್ರಹ್ಮಚಾರಿಗಳಾದ ವಿದ್ಯಾರ್ಥಿಗಳನ್ನೂ ಮನೆಯ ಬಾಗಿಲಿಗೆ ಬಂದ ವಿರಕ್ತರನ್ನೂ ಸಂನ್ಯಾಸಿಗಳನ್ನೂ ಪೋಷಣೆಮಾಡಬೇಕು. ಇವೆಲ್ಲಾ ನಮ್ಮ ಧರ್ಮವಾಗಿವೆ. ಸರಕಾರಕ್ಕೆ ಹಣವನ್ನು ಕೊಡಬೇಕು; ಸಮಾಜ ಸೇವೆಗೂ ದೇಶಸೇವೆಗೂ ದಾನಮಾಡಬೇಕು; ವ್ಯವಹಾರದಲ್ಲಿ ಅನಿವಾರ್ಯವಾಗಿ ಬರುವ ಎಷ್ಟೋ ಕಷ್ಟನಷ್ಟಗಳನ್ನು ಪರಿಹರಿಸಿಕೊಳ್ಳಬೇಕು. ಹೆಚ್ಚಿನ ವ್ಯವಹಾರ ಕ್ಕಾಗಿಯೂ ವಿವಾಹಾದಿ ವಿಶೇಷ ಶುಭಾಶುಭ ಕರ್ಮಗಳಿಗಾಗಿಯೂ ಅನಿರೀಕ್ಷಿತ ವಾಗಿ ಬರಬಹುದಾದ ವಿಪತ್ತುಗಳಿಗಾಗಿಯೂ ಹೆಚ್ಚಿನ ಹಣವನ್ನು ಸಂಗ್ರಹಿಸಿಟ್ಟಿರ ಬೇಕು......" ಎಂದು ಮೊದಲಾಗಿ ತನ್ನ ನೂರಾರು ಆವಶ್ಯಕತೆಗಳನ್ನೆಲ್ಲಾ ಹೇಳಿ ಕೊಂಡನು. ಆ ಯತಿಯು ಸುಮ್ಮನಿದ್ದನು ; ಮೌನವಾಗಿದ್ದನು. ಮರುದಿನ ಈ ಸಾಹುಕಾರನು ಆ ಯತಿಗಳ ಹಳೆಯ ಲೊಡ್ಡಾದ ಗುಡಿಸಲಿಗೆ ಹೋದನು. ಅವನು ಅಲ್ಲಿಗೆ ಬಂದಾಗ ಆ ಸಂನ್ಯಾಸಿಗಳು ಕಷ್ಟಪಟ್ಟು ಒಂದು ದೊಡ್ಡ ಗುಂಡಿಯನ್ನು ತೋಡಿ, ಅದರಲ್ಲಿ ದುಂಡಾದ ಕಲ್ಲುಗಳನ್ನು ಹಗಲೆಲ್ಲಾ ರಾಶಿ ರಾಶಿಯಾಗಿ ಹಾಕುತ್ತಿ ದ್ದರು. ಇದನ್ನು ನೋಡಿ ಸಾಹುಕಾರನು "ಸ್ವಾಮಿ ! ಸ್ವಾಮಿ ! ಇದೇನು ಮಾಡು ತ್ತಿದ್ದೀರಿ ?" ಎಂದು ಆಶ್ಚರ್ಯಖೇದದಿಂದ ಕೇಳಿದನು. ಅದಕ್ಕೆ ಆ ಯತಿಗಳು "ಈ ಕಲ್ಲುಗಳು ಎಷ್ಟು ದುಂಡಗೆ ಎಷ್ಟು ಸುಂದರವಾಗಿವೆ ಕಾಣುವದಿಲ್ಲವೆ ? ಇವುಗಳ ನ್ನೆಲ್ಲಾ ಸಂಗ್ರಹಿಸುತ್ತಿದ್ದೇನೆ" ಎಂದರು. ಆ ಧನಿಕನು ನಕ್ಕು "ಅದನ್ನೇಕೆ ಸ್ವಾಮಿ, ಕೂಡಿಸುತ್ತಾ ಇದ್ದೀರಿ ? ಇವೇನು ಅಪರೂಪವೇ ? ಅಲ್ಲಿ ನೋಡಿ ಇಂಥಾ ಕಲ್ಲುಗಳ ದೊಡ್ಡದೊಂದು ಪರ್ವತವೇ ಇದೆ. ಇಷ್ಟು ಶ್ರಮಪಟ್ಟು ಇವುಗಳನ್ನೆಲ್ಲಾ ರಾಶಿ ಹಾಕಿದ್ದರಿಂದ ಏನು ಪ್ರಯೋಜನ ?" ಎಂದು ಕೇಳಿದನು. ಆ ಯತಿಗಳು "ಇವುಗಳ ಆವಶ್ಯಕತೆಯ ಕಾಲವು ಬರಬಹುದೆಂದು ಕೂಡಿ ಹಾಕುತ್ತಿದ್ದೇನೆ. ಅಷ್ಟರಲ್ಲಿ ಯಾವ

ದಾದರೂ ದೊಡ್ಡ ಪ್ರವಾಹವು ಬಂದು ಆ ಪರ್ವತವನ್ನೇ ಕೊಚ್ಚಿಕೊಂಡು ಹೋಗ ಬಹುದು. ಆಗ ಏನು ಮಾಡಬೇಕು? ಅದಕ್ಕಾಗಿ ಈ ಕಲ್ಲುಗಳನ್ನೆಲ್ಲಾ ಕೂಡಿ ಹಾಕುತ್ತಿದ್ದೇನೆ" ಎಂದು ಹೇಳಿದರು. ಸಾಹುಕಾರ: "ಅದು ಹೇಗೆ ಸಾಧ್ಯ? ಸ್ವಾಮಿ, ಪರ್ವತವೇ ಕೊಚ್ಚಿ ಹೋಗುವದು ಸಾಧ್ಯವೆ? ಎಂಥಾ ಹುಚ್ಚು ಕಲ್ಪನೆ!" ಯತಿಗಳು: "ಮಹಾಶಯ! ನೀನೇ ಈ ಪಾಠವನ್ನು ನನಗೆ ಕಲಿಸಿದ್ದು. ದೇವರು ನಿನಗೆ ಆಹಾರ ವನ್ನು ಒದಗಿಸದಿರುವ ಕಾಲವೇ ಬರುವದಿಲ್ಲ. ಬೆಳ್ಳಿ ಬಂಗಾರಗಳನ್ನು ವಿಪುಲವಾಗಿ ಸಂಗ್ರಹಿಸುವದರಲ್ಲಿಯೇ ನಿನ್ನ ಕಾಲವನ್ನೆಲ್ಲಾ ಶಕ್ತಿಯನ್ನೆಲ್ಲಾ ದುಂದುಮಾಡುವ ದರಲ್ಲಿ ಏನು ಪ್ರಯೋಜನ? ಈಗ ನನ್ನಿಂದ ಒಂದು ಪಾಠವನ್ನು ಕಲಿ. ಲಕ್ಷ್ಯವಿ ಲ್ಲದೆ ಹೀಗೆ ಪೋಲು ಮಾಡುವದಕ್ಕೂ ಹಾಳು ಮಾಡುವದಕ್ಕೂ ಜೀವನವಿಲ್ಲ. ಅಲ್ಪವೂ ಕ್ಷುದ್ರವೂ ಆದ ಯೋಗಕ್ಷೇಮದ ಚಿಂತೆಗಾಗಿಯೂ ನಿರ್ವಹಣೆಗಾಗಿಯೂ ಬಾಳನ್ನು ಹಾಳು ಮಾಡಿಕೊಳ್ಳಬಾರದು".

ಓಂ! ಓಂ! ಓಂ!

## Queries about God
## ದೇವರ ವಿಷಯದಲ್ಲಿ ಪ್ರಶ್ನೆಗಳು

ಒಂದಾನೊಂದು ಕಾಲದಲ್ಲಿ ಒಬ್ಬ ಮಹಮ್ಮದೀಯ ಚಕ್ರವರ್ತಿಯ ಸಮೀಪಕ್ಕೆ ಅವನ ಮಂಡಲಾಧಿಪತಿಯೊಬ್ಬನು [Qazi or Governor] ಬಂದನು. ಆ ಅಧಿಕಾ ರಿಯ ಧಾರ್ಮಿಕ ನಟನೆಗಳಿಗಾಗಿ ಬಹಳವಾಗಿ ಗೌರವಿಸುತ್ತಿದ್ದ ಚಕ್ರವರ್ತಿಯು ಅವನ ಯೋಗ್ಯತೆಯನ್ನು ಪರೀಕ್ಷೆ ಮಾಡಬೇಕೆಂದು ಬಯಸಿದನು. ಅವನು ಸ್ವತಃ ವಿದ್ವಾಂಸ ನಾಗಿರಲಿಲ್ಲ. ಆದರೆ ತನಗೆ ಮಂಡಲಾಧಿಪತ್ಯವು ಲಭಿಸಬೇಕೆಂದು ಅಪೇಕ್ಷಿಸುತ್ತಿದ್ದ ಜಾಣನೊಬ್ಬನು ಈ ಪ್ರಶ್ನೆಗಳನ್ನು ದೊರೆಗೆ ಸೂಚಿಸಿದನು. ಚಕ್ರವರ್ತಿಯು ಮೊದಲಿನ ಮಂಡಲಾಧಿಪತಿಯನ್ನು ಕುರಿತು, "ದೇವರು ಯಾವ ದಿಕ್ಕಿಗೆ ಮುಖವನ್ನು ತಿರುಗಿಸಿ ಕೊಂಡಿರುತ್ತಾನೆ? ಅವನು ಕುಳಿತಿರುವದೆಲ್ಲಿ? ಅವನು ತಿನ್ನುವದೇನನ್ನು? ಅವನು ಮಾಡುವದೇನು? ಎಂದು ಕೇಳಿದನು. ಅವನು ತನಗೆ ತೃಪ್ತಿಯಾಗುವಂತೆ ಉತ್ತರ ಕೊಟ್ಟರೆ, ಅವನಿಗೆ ಹೆಚ್ಚಿನ ಅಧಿಕಾರ ಕೊಡುವದಾಗಿ ಹೇಳಿದನು. ದೊರೆಯು ಕೇಳಿದ ಪ್ರಶ್ನೆಗಳು ಬಹಳ ಕಠಿಣವಾಗಿರಬೇಕೆಂದು ಅವನು ಭಾವಿಸಿದನು. ರಾಜನನ್ನು ಹೊಗಳಿ ಅವನ ಗುಣಗಳನ್ನು ಕೊಂಡಾಡಿ, ಅವನನ್ನು ಹೇಗೆ ಖುಷಿಯಾಗಿಟ್ಟಿರಬೇಕೆಂಬದು ಆ ಮಂಡಲಾಧಿಪತಿಗೆ ಗೊತ್ತಿತ್ತು. ಆ ಪ್ರಶ್ನೆಗಳಿಗೆ ಉತ್ತರ ಕೊಡುವದಕ್ಕೆ ಒಂದು ವಾರ ತನಗೆ ಅವಕಾಶ ಕೊಡಬೇಕೆಂದು ಅವನು ಕೇಳಿಕೊಂಡನು.

ಆ ಎಂಟು ದಿನಗಳು ಆ ಮಂಡಲಾಧಿಪತಿಯು ಉತ್ತರಕ್ಕಾಗಿ ಹಗಲಿರುಳೂ ಆಲೋಚನೆ ಮಾಡಿದನು. ಆದರೆ ಅವನು ಯಾವ ತೀರ್ಮಾನಕ್ಕೂ ಬರಲಿಲ್ಲ. ರಾಜನಿಗೆ ತೃಪ್ತಿಯಾಗುವಂತೆ ಹೇಗೆ ಉತ್ತರಿಸಬೇಕು? ಇದು ಅವನಿಗೆ ಹೊಳೆಯಲಿಲ್ಲ. ಕೊನೆಯಲ್ಲಿ ಎಂಟನೇ ದಿನವೂ ಬಂದಿತು ; ಪ್ರಯೋಜನವಾಗಲಿಲ್ಲವಾದ್ದರಿಂದ ಹೆಚ್ಚು ಅವಕಾಶವನ್ನು ಪಡೆಯುವದಕ್ಕಾಗಿ ತನಗೆ ಕಾಯಿಲೆಯಾಗಿದೆಯೆಂದು ಸೋಗು ಹಾಕಿದನು. ಪಾಜಿ ಎನ್ನುವ ಸೇವಕನು ಅವನಲ್ಲಿಗೆ ಬಂದು, ಸಮಾಚಾರವೇನೆಂದು ಕೇಳಿದನು. ಅಧಿಪತಿಯು "ತೊಲಗು ಆಚೆ; ನನ್ನನ್ನು ಕಾಡಬೇಡ, ನಾನು ಸಾಯುವದರಲ್ಲಿದ್ದೇನೆ" ಎಂದು ರೇಗಿದನು. ಸೇವಕನು "ಸ್ವಾಮೀ ! ನಿಮಗಾಗಿ ನಾನು ಸಾಯುತ್ತೇನೆ; ನಿಮಗೆ ಯಾವ ರೀತಿಯ ತೊಂದರೆಯೂ ಆಗಬಾರದು. ದಯವಿಟ್ಟು ವಿಷಯವೇನೆಂಬುದನ್ನು ತಿಳಿಸಿ" ಎಂದು ಬೇಡಿದನು. ಒಡೆಯನು ಸೇವಕನಿಗೆ ತನ್ನ ಸಮಸ್ಯೆಯನ್ನು ವಿವರಿಸಿದನು. ಈ ಸೇವಕನು ಯಾವ ಗೌರವವೂ ಇಲ್ಲದ ಬಹಳ ಕೆಳಗಿನ ಅಧಿಕಾರದಲ್ಲಿದ್ದನು. ಅವನು ಗಾರೆಯನ್ನು ಅರೆಯುವ ಕೆಲಸದವನಾಗಿದ್ದನು. ಆದರೆ ಅವನು ಆ ಅಧಿಪತಿಯ ಶಿಷ್ಯನೂ ವಿದ್ವಾಂಸನೂ ಆಗಿದ್ದನು. ರಾಜನ ಪ್ರಶ್ನೆಗಳಿಗೆ ತಾನು ಉತ್ತರಿಸುವದಾಗಿಯೂ ತನಗೊಂದು ಆಜ್ಞಾಪತ್ರವನ್ನು ಕೊಡಬೇಕೆಂದೂ ತನ್ನ ಉತ್ತರವು ರಾಜನಿಗೆ ಸಮಾಧಾನವನ್ನು ಕೊಡದಿದ್ದರೆ ತನ್ನ ಗುರುವಿಗೆ ಬದಲಾಗಿ ತಾನೇ ಸಾಯುವದಾಗಿಯೂ ಅವನು ತಿಳಿಸಿದನು. ಅಷ್ಟರಲ್ಲಿ ಒಬ್ಬ ರಾಜದೂತನು ಬಂದುದರಿಂದ, ಸಂದೇಹಪಡುತ್ತಿದ್ದ ಮಂಡಲಾಧಿಪತಿಯು ಆ ಸೇವಕನಿಗೆ ಕೂಡಲೇ ಆಜ್ಞೆಮಾಡಿ ಕಳಿಸಿದನು. ಆ ಸೇವಕನು ತನ್ನ ಹರಕುಬಟ್ಟೆಗಳಲ್ಲೆಲ್ಲಾ ಉತ್ತಮವಾದುದನ್ನು ಹಾಕಿಕೊಂಡು ಹೊರಟನು. ಅವನು ವೇದಾಂತಿಯಾಗಿದ್ದನು. ಇಂಡಿಯಾ ದೇಶದಲ್ಲಿ ರಾಜರುಗಳು ಯಾವಾಗಲೂ ಸ್ವಾಮಿಗಳಲ್ಲಿ ಹೋಗಿ ಧರ್ಮಜ್ಞಾನವನ್ನೂ ಬ್ರಹ್ಮಜ್ಞಾನವನ್ನೂ ಪಡೆಯುತ್ತಾರೆ. ಈ ಸೇವಕನು [ಪಾಜೀ] ನಿರ್ಭಯವಾಗಿ ರಾಜನಲ್ಲಿಗೆ ಹೋಗಿ "ಪ್ರಭುವೇ ! ತಾವು ಯಾವ ಪ್ರಶ್ನೆಯನ್ನಾದರೂ ಮಾಡಬಹುದು" ಎಂದು ಹೇಳಿದನು. ರಾಜ : "ನಿನ್ನ ಗುರುಗಳಿಗೆ ಕೇಳಿದ ಪ್ರಶ್ನೆಗೆ ನೀನು ಉತ್ತರ ಕೊಡಬಲ್ಲೆಯ ?" ಪಾಜಿ : "ಓಹೋ, ಉತ್ತರ ಕೊಡಬಲ್ಲೆ ; ಆದರೆ ಪ್ರಶ್ನೆ ಕೇಳುವವನು ಶಿಷ್ಯನೆಂದೂ ಉತ್ತರ ಹೇಳುವವನು ಗುರುವೆಂದೂ ತಮಗೆ ತಿಳಿದೇ ಇದೆ. ತಾವು ನಿಜವಾದ ಮುಸಲ್ಮಾನರು; ಆದ್ದರಿಂದ ಪವಿತ್ರಶಾಸ್ತ್ರದಂತೆ ನಡೆಯತಕ್ಕವರು. ಶಾಸ್ತ್ರ ನಿಯಮಪ್ರಕಾರ ಉತ್ತರ ಹೇಳುವ ನನಗೆ ಗೌರವ ಸ್ಥಾನವನ್ನು ಕೊಟ್ಟು, ನೀವು ಸ್ವಲ್ಪ ಕೆಳಗೆ ಕುಳಿತುಕೊಳ್ಳಬೇಕು."

ರಾಜನು ಇದಕ್ಕೆ ಒಪ್ಪಿ, ಅವನು ಧರಿಸುವದಕ್ಕೆ ಉತ್ತಮವಾದ ವಸ್ತ್ರಗಳನ್ನು ಕೊಟ್ಟು, ತನ್ನ ಸಿಂಹಾಸನದ ಮೇಲೆಯೇ ಅವನನ್ನು ಕುಳ್ಳಿರಿಸಿ, ತಾನು ಕೆಳಗೆ ಮೆಟ್ಟಿಲಿನ ಮೇಲೆ ಕುಳಿತುಕೊಂಡನು.

ರಾಜ : "ಒಂದು ಮುಖ್ಯವಾದ ವಿಚಾರವಿದೆ. ನಿಮ್ಮ ಉತ್ತರಗಳು ನನಗೆ ಸಮರ್ಪಕವಾಗಿಯೂ ಸಮಾಧಾನಕರವಾಗಿಯೂ ಇಲ್ಲವಾದರೆ ನಿಮ್ಮ ಬಾಳು ಮುಗಿಯಬೇಕಾಗುತ್ತದೆ.

ಪಾಜೀ: "ಓಹೋ ! ಅದು ಮೊದಲೇ ಗೊತ್ತಿರುವ ವಿಷಯ."

"ದೇವರು ಎಲ್ಲಿ ಕುಳಿತುಕೊಳ್ಳುತ್ತಾನೆ ?" ಇದೇ ಮೊದಲನೆಯ ಪ್ರಶ್ನೆ. ಇದಕ್ಕೆ ಕೇವಲ ಮಾತಿನಿಂದ ಉತ್ತರ ಕೊಡುವದಕ್ಕಿಂತಲೂ ಪ್ರತ್ಯಕ್ಷವಾಗಿ ತೋರಿಸಬೇಕೆಂದು, ಅವನು ಒಂದು ಆಕಳನ್ನು ತರಲು ಹೇಳಿದನು. ರಾಜಸೇವಕರು ಕೂಡಲೇ ಆಕಳನ್ನು ತಂದರು.

"ಈ ಆಕಳಿನಲ್ಲಿ ಹಾಲಿದೆಯಲ್ಲವೆ? ಇದರಲ್ಲಿ ಹಾಲು ಎಲ್ಲಿ ಕುಳಿತಿದೆ ?"

ರಾಜ : "ಹಾಲು ಹಸುವಿನ ಕೆಚ್ಚಲಿನಲ್ಲಿ ಇದೆ."

ಪಾಜೀ : "ಅದು ತಪ್ಪು ; ಹಾಲು, ಹಸುವಿನ ಇಡೀ ದೇಹದಲ್ಲಿ ವ್ಯಾಪಿಸಿದೆ. ಈಗ ಈ ಹಸು ಹೋಗಲಿ. ಈ ಹಾಲಿನಲ್ಲಿ ಬೆಣ್ಣೆ ಎಲ್ಲಿದೆ? ಹಾಲಿನಲ್ಲಿ ಬೆಣ್ಣೆ ಇದೆ ಎಂದು ಹೇಳುತ್ತೀರಿ. ಆದರೆ ಎಲ್ಲಿದೆ ಹೇಳಿ ನೋಡೋಣ."

ಇದಕ್ಕೆ ಯಾರೂ ಉತ್ತರ ಹೇಳಲಿಲ್ಲ.

ಪಾಜೀ "ಈ ಹಾಲಿನಲ್ಲಿ ಬೆಣ್ಣೆ ಎಲ್ಲಿ ಕುಳಿತಿದೆ ಎಂದು ಹೇಳಲಾರಿರಿ ; ಆದರೂ ಬೆಣ್ಣೆಯು ಹಾಲಿನಲ್ಲಿ ಇದೆಯೆಂದು ನಂಬಲೇ ಬೇಕು. ಬೆಣ್ಣೆ ನಿಜವಾಗಿಯೂ ಹಾಲಿನಲ್ಲಿ ಎಲ್ಲ ಕಡೆಯೂ ತುಂಬಿದೆ. ಹೀಗೆಯೇ ಇಡೀ ವಿಶ್ವದಲ್ಲಿ ದೇವರು ಎಲ್ಲೆಡೆಯೂ ಎಲ್ಲ ವಸ್ತುಗಳಲ್ಲಿಯೂ ತುಂಬಿದ್ದಾನೆ. ಬೆಣ್ಣೆಯು ಹಾಲಿನಲ್ಲಿ ಎಲ್ಲೆಡೆಯೂ ತುಂಬಿರುವಂತೆ ಹಾಲು ಹಸುವಿನ ದೇಹದಲ್ಲಿ ಎಲ್ಲೆಡೆಯೂ ತುಂಬಿದೆ. ನಿಮಗೆ ಹಾಲು ಬೇಕಾದರೆ, ಆಕಳ ಕೆಚ್ಚಲಿನಿಂದ ಹಾಲನ್ನು ಹಿಂಡಿಕೊಳ್ಳಬೇಕು. ಹೀಗೆ ನಿಮಗೆ ದೇವರು ಬೇಕಾದರೆ ನಿಮ್ಮ ಹೃದಯದಿಂದಲೇ ಅವನನ್ನು ಪಡೆದುಕೊಳ್ಳಬೇಕು; ದೇವರಿಗಾಗಿ ಧ್ಯಾನ—ಜ್ಞಾನ ಸಾಧನಗಳಿಂದ ನಿಮ್ಮ ಹೃದಯವನ್ನೇ ದೋಹನ ಮಾಡಬೇಕು. ರಾಜಾ ! ನಿನ್ನ ಪ್ರಶ್ನೆಗೆ ಉತ್ತರ ಸಿಕ್ಕಿತೆ ?"

ರಾಜ: "ಓಹೋ ! ನನ್ನ ಮೊದಲನೆಯ ಪ್ರಶ್ನೆಗೆ ಸರಿಯಾದ ಉತ್ತರವಾಯಿತು. ಮುಂದಿನ ಪ್ರಶ್ನೆಗೆ ಉತ್ತರವಾಗಲಿ."

ದೇವರು ಏಳನೆಯ ಸ್ವರ್ಗದಲ್ಲಿ ಇದ್ದಾನೆಂದು ಹೇಳುವ ಜನರೆಲ್ಲಾ ರಾಜನ ದೃಷ್ಟಿಯಲ್ಲಿ ಗೌರವವನ್ನು ಕಳೆದುಕೊಂಡರು. ಆ ಭಾವನೆ ಸರಿಯಲ್ಲವೆಂದೂ ಹಾಸ್ಯಾಸ್ಪದವೆಂದೂ ರಾಜನಿಗೆ ಮನವರಿಕೆ ಆಯಿತು.

ಎರಡನೆಯ ಪ್ರಶ್ನೆ: "ದೇವರ ಮುಖವು ಯಾವ ದಿಕ್ಕಿಗೆ ತಿರುಗಿರುತ್ತದೆ? ದೇವರು ಯಾವ ದಿಕ್ಕಿಗೆ ನೋಡುತ್ತಾನೆ? ಪೂರ್ವಕ್ಕೋ, ಪಶ್ಚಿಮಕ್ಕೋ ಉತ್ತರಕ್ಕೋ ದಕ್ಷಿಣಕ್ಕೋ?" ಇದು ಬಹಳ ವಿಚಿತ್ರವಾದ ಪ್ರಶ್ನೆಯಾಗಿದೆ: ಆ ಜನರು ದೇವರನ್ನು ಒಂದು ವ್ಯಕ್ತಿಯೆಂದು ಭಾವಿಸಿದ್ದರು.

ಪಾಜೀ: "ಒಳ್ಳೆಯದು, ಒಂದು ದೀಪವನ್ನು ತನ್ನಿ." ಸೇವಕರು ಒಂದು ಮೇಣದ ಬತ್ತಿಯನ್ನು ತಂದು ದೀಪ ಹಚ್ಚಿ ಇಟ್ಟರು.

ಪಾಜೀ "ಈಗ ಹೇಳಿ ಈ ದೀಪವು ಯಾವ ದಿಕ್ಕಿಗೆ ಮುಖವಾಗಿದೆ? ಯಾವ ದಿಕ್ಕಿಗೆ ನೋಡುತ್ತಿದೆ? ದೀಪವು ಯಾವದೊಂದು ದಿಕ್ಕನ್ನು ನೋಡುತ್ತಿಲ್ಲ. ಆದರೆ ಸರ್ವತ್ರ ಸಮವಾಗಿ ವ್ಯಾಪಕವಾಗಿದೆ. ದೇವರು ನಿಮ್ಮ ಹೃದಯದಲ್ಲಿರುವ ದೀಪವಾಗಿರುವದರಿಂದ ಆ ಜ್ಞಾನ ಜ್ಯೋತಿಯ ಬೆಳಕು ಎಲ್ಲೆಡೆಯೂ ಸಮವಾಗಿ ಚೆಲ್ಲಿದೆ."

ತನ್ನ ಎರಡನೆಯ ಪ್ರಶ್ನೆಗೂ ಸರಿಯಾದ ಉತ್ತರವು ಸಿಕ್ಕಿತೆಂದು ರಾಜನಿಗೆ ಸಂತೋಷವಾಯಿತು.

"ದೇವರು ಏನು ಮಾಡುತ್ತಾನೆ?" ಇದು ಮೂರನೆಯ ಪ್ರಶ್ನೆ. ಪಾಜಿಯು ರಾಜನಿಗೆ ಹೇಳಿ ತನ್ನ ಗುರುವಾದ ಮಂಡಲಾಧಿಪತಿಯನ್ನು ಕರೆಸಿದನು. ತನ್ನ ಶಿಷ್ಯನಾದ ಸೇವಕನು ರಾಜನ ಸಿಂಹಾಸನದ ಮೇಲೆ ಕುಳಿತಿರುವದನ್ನು ನೋಡಿ ಅಧಿಪತಿಗೆ ಆಶ್ಚರ್ಯವಾಯಿತು. ಸೇವಕನಾದ ಪಾಜಿಯು ಕುಳಿತುಕೊಳ್ಳಬೇಕಾದ ಸ್ಥಳದಲ್ಲಿ ತನ್ನ ಗುರು ಕ್ವಾಜಿಯನ್ನೂ ಮಂಡಲಾಧಿಪಕ್ವಾಜಿಯು ಕುಳಿತುಕೊಳ್ಳಬೇಕಾದ ಸ್ಥಳದಲ್ಲಿ ರಾಜನನ್ನೂ ಕುಳ್ಳಿರಿಸಿ. ತಾನು ಮೊದಲಿನಂತೆಯೇ ಪಾಜಿಯು ರಾಜನ ಸಿಂಹಾಸನದಲ್ಲಿ ಕುಳಿತಿದ್ದನು.

ಪಾಜೀ: "ಇದೇ ನೋಡಿ, ದೇವರ ಕಾರ್ಯ, ದೇವರ ಮಹಿಮೆ; ದೇವರು ಯಾವಾಗಲೂ ವಸ್ತುಗಳು ಚಲಿಸುತ್ತಿರುವಂತೆ ಮಾಡುತ್ತಾನೆ. ಪಾಜಿಯನ್ನು ರಾಜನನ್ನಾಗಿಯೂ ರಾಜನನ್ನು ಕ್ವಾಜಿಯನ್ನಾಗಿಯೂ ಕ್ವಾಜಿಯನ್ನು ಪಾಜಿಯನ್ನಾಗಿಯೂ ಬದಲಾವಣೆ ಮಾಡುತ್ತಿರುತ್ತಾನೆ." ಜಗತ್ತಿನಲ್ಲಿ ಇದೇ ನಡೆಯುತ್ತಿರುವದು. ಯಾವದೋ ಒಂದು ವಂಶವು ಒಂದು ಕುಟುಂಬವು ಉಚ್ಚ್ರಾಯ ಸ್ಥಿತಿಗೆ ಏರುತ್ತದೆ; ಅನಂತರ ಅದು ಕಾಲಾನುಗುಣವಾಗಿ ಇಳಿದು ಕಣ್ಮರೆಯಾಗುತ್ತದೆ. ಅನಂತರ ಬೇರೆ ಯಾವದೋ ಒಂದು ವಂಶವು ಅದರ ಸ್ಥಾನಕ್ಕೆ ಬರುತ್ತದೆ. ಯಾವನೋ ಒಬ್ಬ ಮನುಷ್ಯನು ಕೆಲವು ಕಾಲ ಉನ್ನತವಾದ ಗೌರವವನ್ನು ಪಡೆಯುತ್ತಾನೆ. ಅನಂತರ ಬೇರೊಬ್ಬನು ಆ ಸ್ಥಾನಕ್ಕೆ ಬರುತ್ತಾನೆ. ದಿನವೂ ವರ್ಷವರ್ಷವೂ ಹೀಗೆಯೇ ನಡೆದಿದೆ. ಈ ಜಗತ್ತಿನಲ್ಲಿ ಸರ್ವ ಕಾಲದಲ್ಲಿಯೂ ಈ ಬದಲಾವಣೆ ನಡೆಯುತ್ತಿದೆ. ಅಂದಿನಿಂದ ಆ ಪಾಜಿಯು ಕ್ವಾಜಿಯಾದನು.

ಓಂ! ಓಂ! ಓಂ!

## Never be Disturbed
## ಎಂದೂ ಅಶಾಂತರಾಗಬೇಡಿ

ಒಂದಾನೊಂದು ರಾಜ್ಯದಲ್ಲಿ ಆಗ ತಾನೇ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ಬಂದಿದ್ದ ಉದಾತ್ತ ಸ್ವಭಾವದವನೂ ವಿದ್ವಾಂಸನೂ ಘನತೆಯುಳ್ಳವನೂ ಗಂಭೀರ ಗುಣಶಾಲಿಯೂ ಆದ ರಾಜನಿದ್ದನು. ಬಹಳ ವರ್ಷಗಳು ಕಳೆದರೂ ಅವನು ಲಗ್ನವಾಗಲಿಲ್ಲ. ಪ್ರಜೆಗಳು ರಾಜ್ಯಕ್ಕೆ ಉತ್ತರಾಧಿಕಾರಿಯನ್ನು ಅಪೇಕ್ಷಿಸುತ್ತಿದ್ದುದರಿಂದ ರಾಜನು ಲಗ್ನವಾಗದಿರುವದಕ್ಕಾಗಿ ಬಹಳ ಕಳವಳಗೊಂಡಿದ್ದರು. ರಾಜನು ತನಗೆ ಇಷ್ಟವಾದ ವಧುವನ್ನು ತಾನೇ ಆರಿಸಿಕೊಂಡು ವಿವಾಹವಾಗಬಹುದೆಂದು ಜನರು ಎಡೆಬಿಡದೆ ಒತ್ತಾಯಮಾಡತೊಡಗಿದರು. ತನಗೆ ಬೇಕಾದ ಯಾವ ಕನ್ಯೆಯನ್ನಾದರೂ ಮದುವೆಯಾಗಲು ಜನರು ಒಪ್ಪುವದಾದರೆ ತಾನು ಲಗ್ನವಾಗುವದಾಗಿ ರಾಜನು ಹೇಳಿದನು. ಆ ರಾಜ್ಯದಲ್ಲಿ ಪ್ರಣಯಕ್ಕಾಗಿ ಆಗಲಿ, ಪರಿಣಯಕ್ಕಾಗಿ ಆಗಲೀ ಯಾರಿಗೂ ಸ್ವಾತಂತ್ರ್ಯವಿರಲಿಲ್ಲ. ಅವರೆಲ್ಲರೂ ಪದ್ಧತಿ ಬದ್ಧರಾಗಿದ್ದರು. ಆದರೂ ರಾಜನ ಇಚ್ಛೆಗೆ ಸ್ವಾತಂತ್ರ್ಯವನ್ನು ಕೊಡದಿದ್ದರೆ ಅವನು ಜೀವಮಾನವೆಲ್ಲಾ ಅವಿವಾಹಿತನಾಗಿ ಉಳಿಯಬಹುದೆಂದು ಹೆದರಿ, ಪ್ರಜೆಗಳು ಅವನ ಸ್ವೇಚ್ಛೆಯಾದ ಆಯ್ಕೆಗೆ ಹಿಂದೆಂದೂ ಯಾರಿಗೂ ಕೊಡದಿದ್ದ ವಿಶೇಷವಾದ ಅವಕಾಶವನ್ನು ಕೊಟ್ಟರು. ಆಗ ರಾಜನು ಮಹತ್ತಾದ ವಿವಾಹ ಮಹೋತ್ಸವಕ್ಕಾಗಿ ಸಿದ್ಧತೆ ಮಾಡಲು ತನ್ನ ಆಸ್ಥಾನದ ಮಹಾಜನರಿಗೂ ಅಧಿಕಾರಿಗಳಿಗೂ ಆಜ್ಞೆಮಾಡಿದನು. ಭವ್ಯವಾದ ಅತ್ಯಂತ ರಾಜ ವೈಭವದ ರೀತಿಯಿಂದ ಸಕಲ ಸಿದ್ಧತೆಗಳೂ ನಡೆದವು. ಆ ನಿಯಮಿತವಾದ ದಿನ ಮಹತ್ತಾದ ಸಂಭ್ರಮದಿಂದ ಸರ್ವ ಸೈನ್ಯವೂ ಸಿದ್ಧವಾದವು. ಪ್ರತಿಯೊಬ್ಬರೂ ತಮ್ಮ ತಮ್ಮ ಅತ್ಯಂತ ಜಾಜ್ವಲ್ಯಮಾನವಾದ ವಸ್ತ್ರಾಲಂಕಾರಗಳಿಂದ ಭೂಷಿತರಾಗಿ ಉತ್ಕೃಷ್ಟವಾದ ವಾಹನಗಳಲ್ಲಿಯೂ ಸಾರೋಟು ಗಾಡಿಗಳಲ್ಲಿಯೂ ಉತ್ಸವ ಹೊರಟರು. ರಾಜನು ಮಧ್ಯದಲ್ಲಿ ರಥದಲ್ಲಿ ಹೋಗುತ್ತಿರುವಾಗ ಎರಡು ಕಡೆಗಳಲ್ಲಿಯೂ ಸೈನ್ಯಗಳು ಸಾಗುತ್ತಿದ್ದವು. ಯಾವದೊಂದು ದೊಡ್ಡ ರಸ್ತೆಯನ್ನು ಹಿಡಿಯದೆ ರಾಜನ ನಿರ್ದೇಶದಂತೆ ಎಲ್ಲರೂ ಹೋಗುತ್ತಿದ್ದರು. ಅವರು ಅತಿ ನಿಬಿಡವಾದ ಗೊಂಡಾರಣ್ಯದಲ್ಲಿ ಪ್ರವೇಶಿಸಿ ಬಹಳ ದೂರ ಹೋದರು. "ಇದೇನು ನಮ್ಮ ರಾಜನು ಈ ಅರಣ್ಯದಲ್ಲಿ ಒಂದು ಸರೋವರವನ್ನೋ ಮರವನ್ನೋ ಕಲ್ಲನ್ನೋ ಲಗ್ನವಾಗುವನೋ ಹೇಗೆ?" ಎಂದು ಜನರು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಅವರಿಗೆ ಆಶ್ಚರ್ಯ! ರಾಜನ ಉದ್ದೇಶವು ಯಾರಿಗೂ ತಿಳಿಯದು. ಎಲ್ಲಾ ರಹಸ್ಯಮಯ. ಅವನನ್ನು ಕೇಳುವ ಧೈರ್ಯ ಯಾರಿಗೂ ಇಲ್ಲ. ಆ ಅಡವಿಯಲ್ಲಿ ಕೊನೆಗೆ ಅವರು ಒಂದು ಗುಡಿಸಿಲಿನ ಸಮೀಪ ಬಂದರು. ಅದರ ಹತ್ತಿರ ಸ್ಫಟಿಕದಂತೆ ನಿರ್ಮಲವಾದ ಸುಂದರವಾದೊಂದು ಸರೋವರವಿದ್ದಿತು. ಆ ಸರೋವರದ ಸುತ್ತಲೂ

ಮನೋಹರವೂ ಭವ್ಯವೂ ಸ್ವಾಭಾವಿಕವೂ ಆದ ಹಣ್ಣಿನ ಗಿಡಗಳ ತೋಟವಿದ್ದಿತು. ಅಲ್ಲಿ ಒಂದು ಮರದ ಕೊಂಬೆಗಳಿಗೆ ತೂಗು ಕಟ್ಟಿದ ಒಂದು ಹಗ್ಗದ ಜೋಲಿಯಲ್ಲಿ ಒಬ್ಬ ಮುದುಕನು ಮಲಗಿದ್ದನು. ಇದನ್ನು ನೋಡಿದ ಜನರು, "ಇದೇನು ನಮ್ಮ ರಾಜನು ಈ ಮುದುಕನನ್ನು ಮದುವೆಯಾಗುವನೇ?" ...ಎಂದು ತಮ್ಮೊಳಗೇ ಮಾತನಾಡಿ ಕೊಳ್ಳುತ್ತಿದ್ದರು. ಅರ್ಧ ಸೈನ್ಯವೇ ಮುಂದುವರಿಯಿತು. ಆದರೆ ರಾಜನು ಕುಳಿತಿದ್ದ ಆನೆಯು ಆ ಸ್ಥಳವನ್ನು ಸೇರಿದ ಕೂಡಲೇ ರಾಜನು ಎಲ್ಲರಿಗೂ "ನಿಲ್ಲಿ" ಎಂದು ಆಜ್ಞೆ ಮಾಡಿದನು. ಕೂಡಲೇ ಆ ಸ್ಥಳದಲ್ಲಿ, ಜೋಲಿಯ ಮೇಲೆ ಮಲಗಿದ್ದ ತನ್ನ ತಂದೆಯನ್ನು ಮೆಲ್ಲನೆ ಮೃದುವಾಗಿ ತೂಗುತ್ತಿದ್ದ ಸುಂದರಿಯೂ ಮನೋಹರಿಯೂ ಕೋಮಲಾಂಗಿಯೂ ಆದ ಕನ್ಯೆಯೊಬ್ಬಳು ಕಾಣಿಸಿಕೊಂಡಳು.

ಆ ರಾಜನು ಸಿಂಹಾಸನಕ್ಕೆ ಬರುವದಕ್ಕೆ ಮೊದಲು ಆ ಅಡವಿಗೆ ಅನೇಕ ಸಲ ಬಂದಿದ್ದನು. ಆ ಕನ್ಯೆಯ ವರ್ತನೆಯನ್ನೆಲ್ಲಾ ನೋಡಿದ್ದನು. ಆಕೆಯು ಯಾವಾಗಲೂ ಅತ್ಯಂತ ವಿಧೇಯಳಾಗಿಯೂ ಕರ್ತವ್ಯನಿಷ್ಠಳಾಗಿಯೂ ಇರುವದನ್ನು ಕಂಡಿದ್ದನು. ಆಕೆಯು ನೀರನ್ನು ತಂದು ತಂದೆಗೆ ಸ್ನಾನಮಾಡಿಸಿ ಊಟಮಾಡಿಸಿ ಅತ್ಯಂತ ಭಕ್ತಿ ವಿಶ್ವಾಸದಿಂದ ಸೇವೆ ಮಾಡುತ್ತಿದ್ದಳು ; ಉಜ್ಜುವ, ತಿಕ್ಕುವ, ತೊಳೆದು ಬಳಿಯುವ, ಅಡಿಗೆ ಮಾಡುವ ಎಲ್ಲಾ ಕಷ್ಟ ಕಾರ್ಯಗಳನ್ನೂ ಆಕೆಯು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದಳು. ಆದರೆ ಆಕೆಯು ಯಾವ ಕೆಲಸ ಮಾಡುವಾಗಲೂ ಸ್ವಚ್ಛಂದವಾದ ಪಕ್ಷಿಯಂತೆ ಆನಂದವಾಗಿ ಹಾಡಿಕೊಂಡು ಸಂತೋಷವಾಗಿಯೂ ಗೆಲವಾಗಿಯೂ ಕಳೆಯಾಗಿಯೂ ವಿನೋದವಾಗಿಯೂ ಉಲ್ಲಾಸವಾಗಿಯೂ ಹರ್ಷಚಿತ್ತವಾಗಿಯೂ ಇರುತ್ತಿದ್ದಳು. ಆಕೆಯ ನಿರಂತರವಾದ ಈ ಸಂತೋಷ ವೃತ್ತಿಯು ಆ ರಾಜ ಕುಮಾರನ ಮೇಲೆ ಬಹಳ ಸತ್ಪರಿಣಾಮ ಮಾಡಿದ್ದರಿಂದ, ತಾನು ಎಂದಾದರೂ ಲಗ್ನವಾಗುವದಾದರೆ ಈ ಅಪೂರ್ವ ಬಾಲಿಕೆಯನ್ನೇ ಲಗ್ನವಾಗಬೇಕೆಂದು ಅವನು ಬಹಳ ಹಿಂದೆಯೇ ಪ್ರತಿಜ್ಞೆ ಮಾಡಿಕೊಂಡಿದ್ದನು. ಆನೆ, ಕುದುರೆ, ರಥ, ಸೈನಿಕರಿಂದ ಕೂಡಿದ ಈ ಎಲ್ಲಾ ವೈಭವದ ದೃಶ್ಯವನ್ನು ಆ ಮುಗ್ಧ ಕನ್ಯೆಯು ಬೆರಗಾಗಿ ನಿಟ್ಟಿಸಿ ನೋಡುತ್ತಿದ್ದಳು. ತನ್ನ ಗುಡಿಸಿಲಿನ ಮುಂದೆಯೇ ಎಷ್ಟೋ ಸಲ ಹಿಂದೆ ಹಾದು ಹೋಗಿದ್ದ ಕುದುರೆ ಸವಾರನು ರಾಜಕುಮಾರನೆಂಬದು ಆಕೆಗೆ ತಿಳಿಯದು. ಈ ಎಲ್ಲಾ ಅದ್ಭುತ ದೃಶ್ಯವು ಏನೆಂದು ಆಕೆಯು ತನ್ನ ತಂದೆಯನ್ನು ಕೇಳಿದಳು. ದೂರ ದೇಶದಲ್ಲಿದ್ದ ರಾಜಕುಮಾರಿಯನ್ನು ಲಗ್ನವಾಗಲು ಹೋಗುತ್ತಿದ್ದ ವರನಾದ ರಾಜನ ಪರಿವಾರವು ಇದೆಲ್ಲಾ ಇರಬೇಕೆಂದು ಆ ಮುದುಕನು ಹೇಳಿದನು. ಆಗ ರಾಜನು ಆನೆಯಿಂದ ಇಳಿದು, ಆ ವೃದ್ಧನಲ್ಲಿಗೆ ಹೋಗಿ, ಪೌರ್ವಾತ್ಯ ದೇಶದ ಪದ್ಧತಿಯಂತೆ ಅವನ ಪಾದಗಳಲ್ಲಿ ನಮಸ್ಕರಿಸಿದನು. ಆ ವೃದ್ಧನು "ವತ್ಸ ! ನಿನಗೇನು ಬೇಕು ?" ಎಂದು ಕೇಳಿದನು. ರಾಜನ ಮುಖವು ಸಂತೋಷದಿಂದ ಕಳೆಗೊಂಡಿತು ; "ನನ್ನನ್ನು

ನೀವು ದಯವಿಟ್ಟು ನಿಮ್ಮ ಅಳಿಯನನ್ನಾಗಿ ಮಾಡಿಕೊಳ್ಳಬೇಕು" ಎಂದು ಬೇಡಿದನು. ಮುದುಕನ ಹೃದಯವು ಸಂತೋಷದಿಂದ ಹಾರಿತು. ಅವನ ಆನಂದಾವೇಶಕ್ಕೆ ಮಿತಿಯೇ ಇರಲಿಲ್ಲ. ಆದರೂ ಅವನು "ರಾಜಾ ! ನಾವು ಬಡವರು, ಬಹಳ ಬಡವರು ; ನೀನು ತಪ್ಪಾಗಿ ತಿಳಿದಿರಬಹುದು. ಬಡ ವನವಾಸಿಯ ಮಗಳನ್ನು ನೀನು ಮದುವೆಯಾಗಲು ಬಯಸುವದು ಹೇಗೆ ಸಾಧ್ಯ ?" ಎಂದು ಕೇಳಿದನು. ಈ ಮನೋಹರೆಯಾದ ಕನ್ಯೆಯ ಹೊರತು ಬೇರೆ ಯಾರನ್ನೂ ತಾನು ಇಷ್ಟು ಪ್ರೀತಿಸಲಿಲ್ಲವೆಂದು ರಾಜನು ಹೇಳಿದನು. "ಹಾಗಾದರೆ, ಆಕೆಯು ನಿನ್ನವಳೇ" ಎಂದು ವೃದ್ಧನು ಹೇಳಿದನು. ಈ ತಂದೆಯು ವೇದಾಂತಿಯಾದ ತಪಸ್ವಿಯಾಗಿದ್ದನು; ತನ್ನ ತತ್ತ್ವಜ್ಞಾನವನ್ನು ಇವನು ತನ್ನ ಮಗಳಿಗೂ ಬೋಧಿಸಿದ್ದನು. ಮದುವೆಯಲ್ಲಿ ತನ್ನ ಮಗಳಿಗೆ ಕೊಡುವದಕ್ಕೆ ತನ್ನಲ್ಲಿ ಯಾವ ಬಳುವಳಿಯೂ ಇಲ್ಲವೆಂದೂ ತನ್ನ ಆಶೀರ್ವಾದ ಮಾತ್ರವನ್ನೇ ಕೊಡಬಹುದೆಂದೂ ಮುದುಕನು ರಾಜನಿಗೆ ಹೇಳಿದನು. ಆಗ ರಾಜನು ವಧುವಿಗೆ ಎಲ್ಲಾ ಬಗೆಯಾದ ಸುಂದರ ವಸ್ತ್ರಾಲಂಕಾರಗಳನ್ನೂ ಕೊಟ್ಟು ಅವುಗಳನ್ನು ಧರಿಸಲು ಬೇಡಿಕೊಂಡನು. ಆಕೆಯು ಹಾಗೆಯೇ ಮಾಡಿದಳು. ಆದರೆ ಆಕೆಯು ರಾಜನಲ್ಲಿಗೆ ಬರಿಗೈಯಲ್ಲಿ ಹೋಗಲಿಲ್ಲ. ಅವಳ ಹತ್ತಿರ ಒಂದು ಬಳುವಳಿಯಿತ್ತು. ಅದೇನು ? ರಾಜನು ಆಕೆಗೆ ಕೊಟ್ಟ ಕೆಲವು ಸಂಪುಟಗಳ ಒಂದರಲ್ಲಿ ಆಭರಣಗಳನ್ನು ಇಡುವದಕ್ಕೆ ಬದಲು, ತಾನು ತಂದೆಯ ಮನೆಯಲ್ಲಿ ಹಾಕಿಕೊಳ್ಳುತ್ತಿದ್ದ ಹರಕು ಬಟ್ಟೆಗಳನ್ನು ಹಾಕಿಟ್ಟಳು. ಈಗ ಅಲ್ಲಿ ಮುದುಕನು ಒಬ್ಬನೇ ಉಳಿದುದರಿಂದ, ಅವನ ಉಪಚಾರಕ್ಕಾಗಿ ಒಬ್ಬ ಸೇವಕನನ್ನು ರಾಜನು ಬಿಟ್ಟು ಹೋದನು. ರಾಜನಿಂದ ಆ ಮುದುಕನು ಬೇರೆ ಏನನ್ನೂ ಬಯಸಲಿಲ್ಲ.

ರಾಜನು ತನ್ನ ವಧುವನ್ನು ಅರಮನೆಗೆ ಕರೆದು ಕೊಂಡು ಹೋದನು. ಆಕೆಯು ಕೀಳು ಜಾತಿಯವಳೆಂದು ಮೊದಲು ಮೊದಲು ದರ್ಬಾರಿನ ಜನರು ಆಕೆಯನ್ನು ಪ್ರೀತಿಸುತ್ತಿರಲಿಲ್ಲ. ಆ ರಾಜವರ್ಗದ ಜನರೂ ಶ್ರೀಮಂತರೂ ತಮ್ಮ ತಮ್ಮ ಹೆಣ್ಣು ಮಕ್ಕಳನ್ನೂ ತಮ್ಮ ಸೋದರ—ಸೋದರಿಯರ ಮಕ್ಕಳನ್ನೂ ರಾಜನಿಗೆ ಮದುವೆ ಮಾಡಿಕೊಡಬೇಕೆಂದು ಬಯಸುತ್ತಿದ್ದುದರಿಂದ ಈ ಹೀನ ವರ್ಣದ ಕನ್ಯೆಯು ತಮ್ಮನ್ನೆಲ್ಲಾ ಮೀರಿಸಿ ರಾಣಿಯಾದುದರಿಂದ ಅವರೆಲ್ಲರಿಗೂ ಆಕೆಯ ವಿಷಯದಲ್ಲಿ ಅಸೂಯೆ ಉಂಟಾಯಿತು. ಆಕೆಯನ್ನು ರಾಣಿಯೆಂದು ಗೌರವಿಸುವದು ಹೇಗೆ ? ಇದು ಅವರ ಸ್ವಾಭಿಮಾನಕ್ಕೆ ಬಹಳ ನೋವನ್ನುಂಟುಮಾಡಿತು. ಆದರೆ ಆ ಹೊಸ ಮಹಾರಾಣಿಯು ಆಕೆಯ ಮಧುರ ಸ್ವಭಾವದಿಂದಲೂ ಮೃದುವಾದ ಮಾತಿನಿಂದಲೂ ಮನೋಹರವಾದ ವರ್ತನೆಯಿಂದಲೂ ಎಲ್ಲರನ್ನೂ ರಂಜನೆಮಾಡಿ ಪ್ರೀತಿಯಿಂದ ಒಲಿಸಿಕೊಂಡಳು. ಕ್ರಮೇಣ ಎಲ್ಲರೂ ಆಕೆಯನ್ನು ಬಹಳ ಅಕ್ಕರೆಯಿಂದ ಪ್ರೀತಿಸ ತೊಡಗಿದರು. ಆಕೆಯು ಯಾವಾಗಲೂ ಬಹಳ ಸಮಾಧಾನವಾಗಿಯೂ ಶಾಂತವಾಗಿಯೂ

ಇರುತ್ತಿದ್ದಳು. ಆಕೆಯು ಯಾವ ವಿಷಯಕ್ಕೂ ಎಂದಿಗೂ ಎಂಥಾ ಸಂದರ್ಭಗಳಲ್ಲಿಯೂ ಅಸಮಾಧಾನವನ್ನೂ ಉದ್ವೇಗವನ್ನೂ ಹೊಂದುತ್ತಿರಲಿಲ್ಲ. ಒಂದು ವರ್ಷದ ಮೇಲೆ ರಾಣಿಗೆ ಒಬ್ಬಳು ಮಗಳು ಹುಟ್ಟಿದಳು. ಮಗುವು ಬಹಳ ಮುದ್ದಾಗಿದ್ದಿತು. ರಾಜನೂ ರಾಣಿಯೂ ಬಹಳ ಸಂತೋಷವಾಗಿದ್ದರು !

ಮಗುವಿಗೆ ಮೂರು ನಾಲ್ಕು ವರ್ಷಗಳಾದ ಮೇಲೆ, ರಾಜ್ಯದಲ್ಲಿ ಅತ್ಯಂತ ಅನಿಷ್ಟಕರವಾದಂಥ ದಂಗೆಯೇಳುವದೆಂದೂ ಬಂಡಾಯವಾಗುವದೆಂದೂ ರಾಜನು ರಾಣಿಗೆ ಹೇಳಿದನು. ರಾಣಿಯು ಅಂಥ ಪರಿಸ್ಥಿತಿಗೆ ಕಾರಣವೇನೆಂದು ಕೇಳಿದಳು. ಆಕೆಯನ್ನು ಮದುವೆಯಾದಾಗ ಮತ್ಸರಪೀಡಿತರಾದ ಮಂತ್ರಿಗಳೂ ಅಧಿಕಾರಿಗಳೂ ಈಗ ಕೀಳು ತಾಯಿಗೆ ಹುಟ್ಟಿದ ಬಾಲಕಿಯು ಮುಂದೆ ರಾಜ್ಯಾಧಿಕಾರಕ್ಕೆ ಬರುವದನ್ನು ಸಹಿಸಲಾರರೆಂದು ರಾಜನು ಆಕೆಗೆ ಹೇಳಿದನು. ಅವರಿಗೆ ರಾಜವಂಶದ ರಾಜಕುಮಾರನೇ ಬೇಕಾಗಿರುವದರಿಂದ ಮಂತ್ರಿಗಳೊಬ್ಬರ ಮಗುವನ್ನು ರಾಜನು ದತ್ತು ತೆಗೆದುಕೊಳ್ಳಬೇಕೆಂದು ಅವರು ಇಚ್ಛಿಸಿದರು. ಆದರೆ, ತಾವು ಹಾಗೆ ಮಾಡಿದರೆ, ಬಾಲಕಿಯು ದೊಡ್ಡವಳಾದ ಮೇಲೆ, ಬಹಳ ಮಟ್ಟಿಗೆ ಆಕಗೂ ದತ್ತು ಪುತ್ರನಿಗೂ ವೈರವುಂಟಾಗುವದರಿಂದ ರಾಜ್ಯದಲ್ಲಿ ಅನರ್ಥವುಂಟಾಗುವದೆಂದು ರಾಜನು ಹೇಳಿದನು. ಅಂಥಾ ದುಷ್ಪರಿಣಾಮವನ್ನು ತಪ್ಪಿಸಲು ತಾನು ಬಹಳವಾಗಿ ಯೋಚಿಸುತ್ತಿರುವದಾಗಿಯೂ ವಿಶಾಲ ರಾಜ್ಯದ ಹಿತದೃಷ್ಟಿಯಿಂದ ರಾಜಕುಮಾರಿಯನ್ನು ಕೊಲ್ಲಿಸಿ ಬಿಡುವದೇ ಉತ್ತಮವೆಂದೂ ಅನಿವಾರ್ಯವೆಂದೂ ತಾನು ಕೊನೆಯ ತೀರ್ಮಾನಕ್ಕೆ ಬಂದಿರುವದಾಗಿಯೂ ರಾಜನು ರಾಣಿಗೆ ಹೇಳಿದನು. ಆಗ ಆ ಗ್ರಿಸೆಲ್ಡಾ [ಹೆಸರಿನ] ರಾಣಿಯು ರಾಜನಿಗೆ ಈ ಅತ್ಯಂತ ವಿಲಕ್ಷಣವಾದ ಉತ್ತರವನ್ನು ಕೊಟ್ಟಳು. ಇದು ರಾಜನ ವಿಷಯದಲ್ಲಿ ಆಕೆಯ ವರ್ತನೆಯನ್ನೂ ಕರ್ತವ್ಯವನ್ನೂ ನಿದರ್ಶಿಸುತ್ತದೆ.

"ಮಹಾರಾಜ ! ನಾನು ಇಲ್ಲಿಗೆ ಬಂದಂದಿನಿಂದ ಈ ಸಿಂಹಾಸನದ ಸೌಖ್ಯವನ್ನು ನಿನ್ನೊಡನೆ ಅನುಭವಿಸುವ ಆಶೆಯು ನನಗೆ ಸ್ವಂತವಾಗಿ ಇರಲಿಲ್ಲವೆಂಬುದು ನಿನಗೇ ಗೊತ್ತಿದೆ. ನಿನ್ನ ಇಚ್ಛೆಯನ್ನೇ ಆಶೆಯನ್ನೇ ನನ್ನ ಇಚ್ಛೆಯೆಂದೂ ಆಶೆಯೆಂದೂ ಪೂರ್ಣವಾಗಿ ಮಾಡಿಕೊಂಡಿದ್ದೇನೆ. ನನ್ನ ಪ್ರತ್ಯೇಕತೆಯೂ ವ್ಯಕ್ತಿತ್ವವೂ ನಿನ್ನಲ್ಲಿ ಮುಳುಗಿ ಹೋಗಿದೆ; ನಿನ್ನ ಇಚ್ಛೆಗೂ ಉದ್ದೇಶಕ್ಕೂ ವಿರೋಧವಾಗದೆ ನಿನ್ನ ಸೇವೆಗೆ ಸಾಧನವಾಗಿರುವಷ್ಟು ಮಟ್ಟಿಗೆ ಮಾತ್ರ ನನ್ನಲ್ಲಿ ವ್ಯಕ್ತಿತ್ವ ಉಳಿದಿದೆ. ಮಗಳನ್ನು ತೆಗೆದುಬಿಡಬೇಕೆಂಬುದು ನಿನ್ನ ಇಚ್ಛೆಯಾದರೆ ಹಾಗೆಯೇ ಆಗಲಿ. ನನ್ನ ಹೃದಯಾಂತರಾಳದಲ್ಲಿ ಮಗಳನ್ನು ಎಂದೂ ನನ್ನವಳೆಂದು ಭಾವಿಸಿಲ್ಲ."

ಮಧ್ಯರಾತ್ರಿಯಲ್ಲಿ ಮಗಳನ್ನು ಯಾರೋ ಕರೆದುಕೊಂಡು ಹೋದರು. ಕೆಲವು ಗಂಟೆಗಳ ಮೇಲೆ ರಾಜನು ಹಿಂದಿರುಗಿ ಬಂದು, ಮಗಳನ್ನು ಕೊಲೆಮಾಡುವದಕ್ಕಾಗಿ

ಕೊಲೆಗಡುಕರಿಗೆ ಕೊಟ್ಟು ಬಂದುದಾಗಿ ಹೇಳಿದನು. ಯಾವ ಅನಿಷ್ಟವೂ ಸಂಭವಿಸಿಯೇ ಇಲ್ಲವೇನೋ ಎಂಬಂತೆ ರಾಣಿಯು ಸಮಾಹಿತಳೂ ಮನಃಕ್ಷೋಭೆ ಇಲ್ಲದವಳೂ ಸ್ಥಿರಚಿತ್ತಳೂ ಶಾಂತಳೂ ಸಂತೋಷ ವೃತ್ತಿಯುಳ್ಳವಳೂ ಆಗಿದ್ದಳು. ಆಕೆಯ ತಂದೆಯು ಬೋಧಿಸಿದ ನಿಜವಾದ ವೇದಾಂತವು ಆಕೆಯಲ್ಲಿ ಅಳವಟ್ಟಿತ್ತು. ಹೊರಗಿನ ಯಾವ ಆಗುಹೋಗುಗಳೂ ಎಂಥಾ ಪರಿಸ್ಥಿತಿಗಳೂ ಆಕೆಯ ಮನಸ್ಸಿನಲ್ಲಿ ಏರುಪೇರುಗಳನ್ನೂ ಆವೇಗ–ಉದ್ವೇಗಗಳನ್ನೂ ಉಂಟುಮಾಡುತ್ತಿರಲಿಲ್ಲ.

ಮಗಳನ್ನು ಕೊಲೆಮಾಡಿದ್ದರಿಂದ ರಾಜ್ಯದಲ್ಲಿ ಎಲ್ಲರಿಗೂ ಬಹಳ ಸಂತೋಷವಾಗಿದೆಯೆಂದು ರಾಜನು ಹೇಳಿದನು. ಒಂದು ವರ್ಷದ ಮೇಲೆ ರಾಣಿಗೆ ಪುನಃ ಒಬ್ಬ ಮಗನು ಹುಟ್ಟಿದನು. ಎಲ್ಲರೂ ಇದನ್ನು ಪ್ರೀತಿಸುತ್ತಿದ್ದರು. ಬಾಲಕನಿಗೆ ಐದಾರು ವರ್ಷಗಳಾದಾಗ, ಇವನು ಮುಂದೆ ರಾಜನಾಗಬಾರದೆಂದು ರಾಜ್ಯದಲ್ಲಿ ಪುನಃ ಎಲ್ಲೆಡೆಯೂ ಪ್ರತಿಭಟನೆಯೂ ದೊಡ್ಡ ಕೂಗೂ ಎದ್ದವು. ವಿರೋಧಿಗಳು ಪ್ರಬಲರಾಗಿರುವದರಿಂದ ರಾಜ್ಯದಲ್ಲಿ ಅಂತರ್ಯುದ್ಧವಾಗದೆ ಶಾಂತಿಯು ನೆಲೆಸಬೇಕಾದರೆ ಈ ಮಗನನ್ನೂ ಕೊಂದುಬಿಡಬೇಕೆಂದು ರಾಜನು ಹೇಳಿದನು. ಆಗಲೂ ರಾಣಿಯು ಸಂತೋಷಚಿತ್ತಳಾಗಿ ನಗುನಗುತ್ತಲೇ ಇದ್ದಳು. "ಇಡೀ ದೇಶವೇ ನನ್ನ ನಿಜವಾದ ಆತ್ಮ ; ನನ್ನ ಸ್ವಂತ, ವೈಯಕ್ತಿಕ ಎನ್ನುವದು ಯಾವದೂ ಇಲ್ಲ. ನಾನು ಸೂರ್ಯನಂತೆ ಇದ್ದೇನೆ. ನಾನು ಯಾವಾಗಲೂ ಕೊಡತಕ್ಕವಳು" ಎಂದಳು. ನಮಗೆ ಯಾವದರಲ್ಲಿಯೂ ಆಸಕ್ತಿಯಿಲ್ಲದೆ ಇದ್ದರೆ, ಯಾವದಕ್ಕೂ ನಾವು ನಮ್ಮದೆಂದು ಜೋತುಬೀಳದೆ ಇದ್ದರೆ, ಯಾವ ಘಟನೆಯು ನಮ್ಮ ಸಂತೋಷವನ್ನು ಭಂಗಗೊಳಿಸಬಲ್ಲದು? ಸೂರ್ಯನು ಸರ್ವಕಾಲದಲ್ಲಿಯೂ ಬೆಳಕನ್ನು ಬೀರುತ್ತಲೇ ಇದ್ದರೂ ನಿರಂತರವಾಗಿ ಬೆಳಗುತ್ತಲೇ ಇರುತ್ತಾನೆ. ಒಂದು ದಿನ ಮಧ್ಯರಾತ್ರಿಯಲ್ಲಿ ಆ ರಾಜಕುಮಾರನನ್ನೂ ಕೊಲೆಗಾರರು ಗುಪ್ತವಾಗಿ ಕರೆದುಕೊಂಡು ಹೋದರು.

ಕೆಲವು ವರ್ಷಗಳ ಮೇಲೆ ರಾಣಿಗೆ ಮೂರನೆಯ ಮಗುವು ಜನನವಾಯಿತು. ಅದಕ್ಕೂ ಮೂರು ನಾಲ್ಕು ವರ್ಷಗಳಾದಾಗ ಅದನ್ನೂ ವಧಕಾರರು ತೆಗೆದುಕೊಂಡು ಹೋದರು.

ಈಗ ಇಂಥಾ ಉಗ್ರವಾದ ಅಗ್ನಿ ಪರೀಕ್ಷೆಗಳಲ್ಲಿ ಆ ರಾಣಿಯು ತನ್ನ ಶಾಂತಿಯನ್ನು ಸಂರಕ್ಷಣೆ ಮಾಡಿಕೊಂಡುದು ಹೇಗೆ? ಆಕೆಯು ಅರಮನೆಗೆ ಬಂದಂದಿನಿಂದ ನಿತ್ಯವೂ ತನ್ನ ಹಳೆಯ ಹರಕು ಬಟ್ಟೆಗಳನ್ನಿಟ್ಟುಕೊಂಡಿದ್ದ ಏಕಾಂತ ಗೃಹಕ್ಕೆ ಏಕಾಂಗಿಯಾಗಿ ಹೋಗಿ ರಹಸ್ಯವಾಗಿ ಸೇರಿಕೊಳ್ಳುತ್ತಿದ್ದಳು. ಅಲ್ಲಿ ಆಕೆಯು ತನ್ನ ರಾಜವೈಭವದ ವಸ್ತ್ರಾಲಂಕಾರಗಳನ್ನೆಲ್ಲಾ ಬಿಚ್ಚಿ ತೆಗೆದಿಟ್ಟು, ತನ್ನ ಹಳೆಯ ಹರಕು ಬಟ್ಟೆಗಳನ್ನು ಹಾಕಿಕೊಂಡು, ಹಿಂದಿನ ವನವಾಸದ ತಪಸ್ವಿನಿಯ ಪರಿಶುದ್ಧ ಜೀವನವನ್ನೂ

ತಂದೆಯ ವೇದಾಂತ ಬೋಧೆಯ ಆನಂದ ಸ್ಥಿತಿಯನ್ನೂ ನೆನೆಸಿಕೊಂಡು ಪದ್ಮಾಸನ ದಲ್ಲಿ ಕುಳಿತು ಕಣ್ಣು ಮುಚ್ಚಿಕೊಂಡು "ಅಹಂ ಬ್ರಹ್ಮಾಸ್ಮಿ, ಸೋಹಂ" "ಆ ಪರ ಮಾತ್ಮನೇ ನಾನು" ಎಂದು ಧ್ಯಾನಿಸುತ್ತಿದ್ದಳು. "ಕಿರೀಟಧಾರಣ ಮಾಡಿರುವ ತಲೆಯು ಯಾವಾಗಲೂ ಚಿಂತಾಭರಿತವಾಗಿ ನೆಮ್ಮದಿಯಿಲ್ಲದಿರುತ್ತದೆ" ಎಂದು ಷೇಕ್ಸ್‌ಪಿಯರ್ ಹೇಳಿದ್ದಾನೆ. ತಾನು ಕಾನನದ ಕಾಸಾರ ತೀರದಲ್ಲಿ ಸ್ವಚ್ಛಂದವಾಗಿಯೂ ಆನಂದವಾಗಿಯೂ ಗಾನಮಾಡುತ್ತಿದ್ದ ಕನ್ನೆಯಾಗಿದ್ದುದನ್ನು ಆಕೆಯು ತನ್ನ ಹೃದಯಾಂತರಾಳದಲ್ಲಿ ನೆನಪಿಟ್ಟು ಕೊಂಡಿದ್ದಳು. ಈಗ ಇಲ್ಲಿ ಆಕೆಯು ರಾಜನ ಅರಮನೆಯಲ್ಲಿ ತನ್ನ ಸ್ವಾತಂತ್ರ್ಯವನ್ನು ಕಳೆದು ಕೊಂಡು ಸೆರೆಯಾದಂತಿದ್ದಳು ; ಆದರೆ ವ್ಯವಹಾರದಲ್ಲಿ ಆಕೆಯು ಸಿಕ್ಕುಬಿದ್ದು ಸಂಕಟಪಡಲಿಲ್ಲ. ಯಾವದರಲ್ಲಿಯೂ ಆಕೆಯು ಆಸಕ್ತಳಾಗಲಿಲ್ಲ; ಮತ್ತು ತನ್ನ ನಿಜಾತ್ಮನನ್ನು ಸುತ್ತಲ ಎಲ್ಲಾ ಪರಿಸ್ಥಿತಿಗಳಿಂದಲೂ ನಿರಂತರವಾಗಿ ಪ್ರತ್ಯೇಕವಾಗಿಟ್ಟುಕೊಂಡಿದ್ದಳು. ಆಕೆಯು ಸಂತತವಾಗಿ ಬ್ರಾಹ್ಮೀಸ್ಥಿತಿಯಲ್ಲಿಯೇ ಮುಳುಗಿರುತ್ತಿದ್ದಳು. ಎಲ್ಲಾ ಆಶೆಗಳನ್ನೂ ಆಕಾಂಕ್ಷೆಗಳನ್ನೂ ಆಸಕ್ತಿಗಳನ್ನೂ ಪರಿತ್ಯಜಿಸಿ ಆಕೆಯು ಮನಸ್ಸನ್ನು ಪವಿತ್ರವಾಗಿಟ್ಟುಕೊಂಡಿದ್ದಳು. ಆಕೆಯು ಯಾವ ಹೊಣೆಗಾರಿಕೆಯನ್ನೂ ಭಾವನೆಯಿಂದ ಹೊರಲಿಲ್ಲ ; ಯಾರಿಗೂ ಯಾವ ಕರ್ತವ್ಯಕ್ಕೂ ಬದ್ಧಳಾಗಲಿಲ್ಲ. ಬಡತನದಲ್ಲಿಯೇ ಇರಲಿ, ಸಿರಿತನ ದಲ್ಲಿಯೇ ಇರಲಿ ಎಲ್ಲಾ ಆಶೆಗಳಿಂದಲೂ ಆಸಕ್ತಿಗಳಿಂದಲೂ ಸಂಬಂಧಗಳಿಂದಲೂ ಕೊರತೆಗಳಿಂದಲೂ ಆವಶ್ಯಕತೆಗಳಿಂದಲೂ ನಾವು ಕಳಚಿಕೊಳ್ಳಬೇಕು. ನಾವು ಯಾವಾಗಲೂ ಮುಕ್ತರೇ. ಆ ರಾಣಿಯು ಅರಮನೆಯಲ್ಲಿ ಇರುವ ಎಲ್ಲಾ ಕಾಲದಲ್ಲಿಯೂ ತನ್ನ ಸ್ಥಿತಿಯನ್ನು ಈ ರೀತಿಯಿಂದಲೇ ಇಟ್ಟು ಕೊಂಡಿದ್ದಳು.

ಒಂದು ರಾತ್ರಿ ರಾಜನು ರಾಣಿಯ ಹತ್ತಿರ ಬಂದು, ತಮ್ಮ ಹೆಣ್ಣು ಮಕ್ಕಳನ್ನೂ ಗಂಡುಮಕ್ಕಳನ್ನೂ ಯಾವಾಗಲೂ ಕೊಲ್ಲುತ್ತಿರುವದು ಹಿತವೂ ಸಾಧ್ಯವೂ ಅಲ್ಲವೆಂದೂ ಬೇರೆ ಮಗುವನ್ನು ದತ್ತು ತೆಗೆದುಕೊಳ್ಳುವ ಇಚ್ಛೆಯೂ ತನಗಿಲ್ಲವೆಂದೂ ತಿಳಿಸಿದನು. ಆದ್ದರಿಂದ ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸುವದಕ್ಕಾಗಿ ಬಹಳ ಆಲೋಚನೆ ಮಾಡಿ, ಇನ್ನೊಂದು ಲಗ್ನ ಮಾಡಿಕೊಳ್ಳುವದೇ ಯೋಗ್ಯವೆಂದು ತಾನು ನಿಶ್ಚಯ ಮಾಡಿರುವದಾಗಿ ರಾಜನು ತನ್ನ ಪತ್ನಿಗೆ ಹೇಳಿದನು. ಅನ್ಯರಿಂದ ಸುಖವನ್ನು ಪಡೆಯದೆ, ಆನಂದ ಸ್ವರೂಪವಾದ ತನ್ನ ಆತ್ಮನಲ್ಲಿಯೇ ಯಾವಾಗಲೂ ಆಕೆಯು ರಮಿಸುತ್ತಿದ್ದುದರಿಂದ, ತನ್ನ ಸುಖಕ್ಕೆ ರಾಜನು ಕಾರಣನೆಂದು ಆಕೆ ಎಂದೂ ತಿಳಿದಿರಲಿಲ್ಲ. ಆದ್ದರಿಂದ ರಾಜನ ಇಚ್ಛೆಗೆ ಕೂಡಲೇ ಆಕೆಯು ಮನಃಪೂರ್ವಕವಾಗಿ ಒಪ್ಪಿಕೊಂಡಳು. ಆಕೆಯು ತನ್ನ ಸರ್ವ ಸುಖವನ್ನೂ ಒಳಗಿನ ದೇವರಿಂದ ಪಡೆಯುತ್ತಿದ್ದಳೇ ಹೊರತು ತನ್ನ ಗಂಡನಿಂದಾಗಲೀ ತಂದೆಯಿಂದಾಗಲೀ ಮಕ್ಕಳಿಂದಾಗಲೀ ಪಡೆಯುತ್ತಿರಲಿಲ್ಲ. ಎಂಥಾ ಪರಿಸ್ಥಿತಿಯಲ್ಲಿಯೂ ತಳಮಳಗೊಳ್ಳದೆ, ಒಂದೇ ಸಮನಾಗಿರುವ ಆಕೆಯ

ಸಮಾಧಾನವನ್ನೂ ಸಂತೋಷವನ್ನೂ ನೋಡಿ ರಾಜನಿಗೆ ಅತ್ಯಂತ ಆಶ್ಚರ್ಯವಾಯಿತು; ಆಗಿನ ಹೊಸ ಸನ್ನಿವೇಶದಲ್ಲಿ ಆಕೆಯ ಇಚ್ಛೆಯೇನೆಂದು ಕೇಳಿದನು. ತನ್ನ ಪತಿಯ ಇಚ್ಛೆಯೇ ತನ್ನ ಇಚ್ಛೆಯೆಂದೂ ತನಗೆ ಬೇರೆ ಇಚ್ಛೆಯೇ ಇಲ್ಲವೆಂದೂ ರಾಣಿಯು ಹೇಳಿದಳು. ಆಕೆಯು ಅರಮನೆಯಲ್ಲಿದ್ದರೆ ಸ್ನೇಹ ಸಮಾಧಾನಗಳಿಗೆ ಭಂಗ ಬರಬಹು ದಾದುದರಿಂದ ಆಕೆಯು ಹೊರಟುಹೋಗುವದೇ ಲೇಸೆಂದು ರಾಜನು ಹೇಳಿದನು. ಆ ಕೂಡಲೇ ರಾಣಿಯು ತನ್ನ ರಾಜ ವೈಭವದ ವಸ್ತ್ರಾಭರಣಗಳನ್ನೆಲ್ಲಾ ಬಿಚ್ಚಿಟ್ಟು, ಪುನಃ ತನ್ನ ವನವಾಸಿ ಭಿಕ್ಷುಕಿಯ ಹಳೆಯ ಹರಕು ಬಟ್ಟೆಗಳನ್ನೇ ಧರಿಸಿಕೊಂಡು ಅರ ಮನೆಯನ್ನು ಬಿಟ್ಟು, ತನ್ನ ಅರಣ್ಯದ ಮನೆಗೆ ಹಿಂದಿರುಗಿ ಹೋದಳು. ಆಗಲೂ ಆಕೆಯು ಸಂತೋಷವಾಗಿಯೇ ಇದ್ದಳು. ಸಮಸ್ತ ರಾಜವೈಭವವನ್ನೂ ಪರಿತ್ಯಾಗ ಮಾಡಿ ಬಂದ ಮಗಳನ್ನು ನೋಡಿದ ತಂದೆಯೂ ಎಂದಿನಂತೆ ಸಂತೋಷವಾಗಿಯೇ ಇದ್ದನು. ತನ್ನನ್ನು ಸೇವಿಸುತ್ತಿದ್ದ ರಾಜನ ಸೇವಕನನ್ನು ವೃದ್ಧನು ಕೂಡಲೇ ರಾಜ ನಲ್ಲಿಗೇ ಹಿಂದಕ್ಕೆ ಕಳಿಸಿಕೊಟ್ಟನು.

ಒಂದು ದಿನ ರಾಜನು ಆಕೆಯನ್ನು ಸಂತೈಸುವ ಉದ್ದೇಶದಿಂದ ಕುದುರೆಯ ಮೇಲೆ ಆಕೆಯ ಪರ್ಣ ಕುಟೀರದ ಮುಂದೆ ಹಾದುಹೋಗುತ್ತಿದ್ದನು. ಆದರೆ ಆಕೆಯು ನಗು ನಗುತ್ತಲೇ ಸಂತೋಷವಾಗಿರುವದನ್ನು ನೋಡಿ, ಆಕೆಯನ್ನು ಸಮಾಧಾನಮಾಡುವ ಆವಶ್ಯಕತೆಯು ರಾಜನಿಗೆ ಕಾಣಲಿಲ್ಲ. ಆಗ, ಪುನಃ ಅರಮನೆಗೆ ಬಂದು ನೂತನ ವಧುವನ್ನು ಸ್ವೀಕರಿಸಿ ಸ್ವಾಗತಿಸುವದಕ್ಕೆ ಆಕೆಯು ಬರಬಲ್ಲಳೇ ?—ಎಂದು ರಾಜನು ಆಕೆಯನ್ನು ಕೇಳಿದನು. ಅದಕ್ಕೆ ಆಕೆಯು ಸಂತೋಷದಿಂದ ಒಪ್ಪಿದಳು. ಆಕೆಯು ಮೊದಲಿನಂತೆ ಅರಮನೆಗೆ ಬಂದು, ಮಂತ್ರಿಗಳೂ ಅಧಿಕಾರಿಗಳೂ ಅವರ ಪತ್ನಿ ಯರೂ ಆಶ್ಚರ್ಯಪಡುವಂತೆ ತನ್ನ ಪತಿಯ ಪುನರ್ವಿವಾಹಕ್ಕಾಗಿ—ಅತಿಶಯ ಸುಂದರವಾಗಿಯೂ ಮನೋಹರವಾಗಿಯೂ ವ್ಯವಸ್ಥೆಗಳನ್ನು ಮಾಡಿದಳು. ಆಗಿನ ಏರ್ಪಾಡಿನಂತೆ ನವವಧುವು ದೊಡ್ಡ ಸೈನ್ಯದೊಡನೆ ಸುವರ್ಣ ರತ್ನಾಭರಣಗಳ ಭವ್ಯ ವಾದ ಬಳುವಳಿಯನ್ನು—ವರೋಪಚಾರಗಳನ್ನು—ತೆಗೆದುಕೊಂಡು ರಾಜನಲ್ಲಿಗೆ ಬರಬೇಕಾಗಿತ್ತು. ಆಕೆಯು ಹಾಗೆಯೇ ಮಹಾ ವೈಭವದಿಂದಲೂ ಆಡಂಬರದಿಂ ದಲೂ ರಾಜಧಾನಿಯೊಳಗೆ ಬಂದಳು. ರಾಜನ ಅನುಜ್ಞೆಯಂತೆ ಮಹಾರಾಣಿಯು ಆಸ್ಥಾನದ ಇತರ ಮಹಿಳೆಯರೊಡನೆ ಆ ನೂತನ ವಧುವಿಗೆ ಮಹಾ ರಾಜವೈಭವದ ಸ್ವಾಗತವನ್ನು ನೀಡಿದಳು. ಆಕೆಯನ್ನು ನೋಡಿದ ಕೂಡಲೇ ಮಹಾರಾಣಿಯು ಸ್ವಂತ ತಾಯಿಯಂತೆ ಆ ಹೊಸ ವಧುವನ್ನು ಪ್ರೀತಿಸಿ, ಮುತ್ತಿಟ್ಟು, ಆಲಂಗಿಸಿದಳು. ಮದು ವಣಿಗಿತ್ತಿಯ ಸೌಂದರ್ಯವನ್ನು ನೋಡಿ ಮಹಾರಾಣಿಯೂ ಇತರ ಶ್ರೀಮಂತ ಮಹಿಳೆ ಯರೂ ಬೆರಗಾಗಿ ಹೋದರು. ಆದರೆ ಹಳೆಯ ರಾಣಿಯ ಅಸಾಧಾರಣವಾದ ನೈತಿಕ ಸೌಂದರ್ಯವನ್ನು ನೋಡಿ ಎಲ್ಲರೂ ಹೆಚ್ಚು ವಿಸ್ಮಯ ಮೂಕರಾದರು. ವಧುವಿನ

ಜೊತೆಗೆ ಇಬ್ಬರು ಪುಟ್ಟ ಸಹೋದರರಿದ್ದರು. ಆ ದೇಶದ ಪದ್ಧತಿಯಂತೆ ಶ್ರೀಮಂತ ಸ್ತ್ರೀ ಪುರುಷರು ಆದಿನ ಅರಮನೆಯಲ್ಲಿ ದೊಡ್ಡ ಔತಣದ ಭೋಜನ ಮಾಡಬೇಕಾಗಿತ್ತು. ಎಲ್ಲಾ ಕಾರ್ಯಗಳಲ್ಲಿಯೂ ಹಳೆಯ ಮಹಾರಾಣಿಯೇ ಅಧ್ಯಕ್ಷಿಣಿಯಾಗಿದ್ದಳು. ಆಕೆಯ ಸೌಮ್ಯವೂ ಶಾಂತವೂ ಪ್ರಸನ್ನವೂ ಆದ ಸ್ವಭಾವವನ್ನೂ ಗಂಭೀರ ವರ್ತನೆಯನ್ನೂ ನೋಡಿ ಎಲ್ಲ ಜನರ ಹೃದಯವೂ ಕರಗಿ ಕಣ್ಣುಗಳಲ್ಲಿ ನೀರು ಸುರಿಯಿತು. ವಿವಾಹ ಕಾರ್ಯಕಲಾಪಗಳೆಲ್ಲಾ ಮುಗಿದ ಮೇಲೆ ತಾನು ಅರಮನೆಯನ್ನು ಬಿಟ್ಟು ಪುನಃ ಅರಣ್ಯದ ತೌರುಮನೆಗೆ ತಂದೆಯ ಸಮೀಪಕ್ಕೆ ಹೋಗುವದಾಗಿಯೂ ಪುನಃ ಅವಶ್ಯವಾದಾಗ ಕರೆಯುವದಕ್ಕೆ ಸಂಕೋಚ ಪಡಬಾರದೆಂದೂ ರಾಣಿಯು ಮಹಾರಾಜನಿಗೆ ಹೇಳಿದಾಗ ಅಲ್ಲಿದ್ದ ಎಲ್ಲಾ ಸ್ತ್ರೀ ಪುರುಷರ ಮನಸ್ಸೂ ಕರಗಿ, ಕರುಣೆಯ ಸೆಲೆಯೊಡೆದು ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರು ತಮ್ಮ ಹೃದಯದ ಕಾಠಿಣ್ಯಕ್ಕಾಗಿ ಪಶ್ಚಾತ್ತಾಪ ಪಟ್ಟರು. "ಮಹಾಮಾತೆ ! ನೀನು ಭಿಕ್ಷುವಿನ ಪುತ್ರಿ ಅಲ್ಲಮ್ಮ ದೇವಪುತ್ರಿ, ದೇವರ ಮಗಳು". ಎಂದು ಅವರು ಉದ್ಗಾರಮಾಡಿದರು. ದೇಶದ ಶಾಂತಿಯನ್ನು ರಕ್ಷಣೆ ಮಾಡುವದಕ್ಕಾಗಿ ತನ್ನ ಮಕ್ಕಳನ್ನು ಕೊಲೆಮಾಡುವದಕ್ಕೆ ಆಕೆಯು ಹೇಗೆ ಅವಕಾಶ ಕೊಟ್ಟು ಮಹಾ ಬಲಿದಾನಮಾಡಿದ್ದಳೆಂದು ಅವರು ಮರ ಮರ ಮರುಗಿ ಮಾತನಾಡಿಕೊಂಡರು. ಇದನ್ನು ಕೇಳಿದ ಹೊಸರಾಣಿಯೂ ಅಳತೊಡಗಿದಳು. "ಅಯ್ಯೋ ! ನಿಮ್ಮ ಪುತ್ರ ಪುತ್ರಿಯರೆಲ್ಲಾ ಕೊಲೆಯಾದ ರಕ್ತದ ಹೊಳೆಯಲ್ಲಿ ಹಾದು ನಾನು ಈ ಅರಮನೆಗೆ ಬರಬೇಕಾಯಿತೆ ?" ಎಂದು ಸಣ್ಣ ರಾಣಿಯು ದೊಡ್ಡ ರಾಣಿಗೆ ಹೇಳಿ ಗೋಳಾಡಿದಳು. ನಿರಪರಾಧಿಗಳಾದ ಸ್ವಂತ ಮಕ್ಕಳನ್ನೇ ಕೊಲ್ಲಿಸಿದ್ದು ಘೋರ ಪಾಪವೂ ಅನ್ಯಾಯವೂ ಆಯಿತೆಂದು ಎಲ್ಲರೂ ಸೇರಿ ಕ್ರೂರ ಹೃದಯಿಯಾದ ರಾಜನನ್ನು ನಿಂದಿಸತೊಡಗಿದರು.

ಆಗ ರಾಜನು ಎದ್ದು, ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿರಲು "ಮಂತ್ರಿಗಳೆ, ಅಧಿಕಾರಿಗಳೆ, ಶ್ರೀಮಂತ ಜನರೆ, ಬಂಧುಗಳೆ, ಉದಾತ್ತಭಾವದ ಮಹಿಳೆಯರೆ ! ಮಹಾರಾಣಿ ಒಬ್ಬಳ ಹೊರತು ನೀವೆಲ್ಲರೂ ದುಃಖಿಸುತ್ತಿದ್ದೀರಿ, ಅಳುತ್ತಿದ್ದೀರಿ. ಸುಖ–ದುಃಖ ಮಿಶ್ರವಾದ ಭಾವನೆಗಳಿಂದ ನಾನೂ ಅಳುತ್ತಿದ್ದೇನೆ. ಓ ಪ್ರಜೆಗಳೆ ! ನಿಮ್ಮನ್ನು ನಾನು ದೂಷಿಸುವದಿಲ್ಲ. ನೀವೆಲ್ಲಾ ನನ್ನ ಮಕ್ಕಳು. ನನ್ನ ಕಣ್ಣುಗಳಿಂದಲೂ ನೀರು ಹರಿಯುತ್ತಿದೆ, ನಿಜ. ಆದರೆ ಅದು ಶೋಕದ ಕಣ್ಣೀರಲ್ಲ; ಇದು ಸುಖ ಸಂತೋಷಗಳ ಬಾಷ್ಪ; ಆನಂದಬಾಷ್ಪ. ನಿಮ್ಮ ದುಃಖಾಶ್ರುವೂ ಆನಂದ ಬಾಷ್ಪವಾಗಲಿ". ಎಂದು ಹೇಳಿ ಗ್ರಿಸೆಲ್ಡಾ ರಾಣಿಯನ್ನು ಕುರಿತು "ದೇವೀ ! ಎಂಥಾ ಘೋರ ವಿಪತ್ತು ಬಂದರೂ ಇಡೀ ರಾಜ್ಯದಲ್ಲಿ ನೀನೊಬ್ಬಳೇ ಯಾವಾಗಲೂ ಸಂತೋಷ ಚಿತ್ತದಿಂದಿರತಕ್ಕವಳು. ದೇವರ ದಯದಿಂದ ಈಗ ನಿನಗೆ–ನಿಮಗೆಲ್ಲಾ–ಸಂತೋಷದ ವಿಷಯವನ್ನೇ ಹೇಳಬೇಕಾಗಿದೆ. ನನಗೂ ಪರಮಾಪ್ತ ಜನರಿಂದ

ಕೆಲವು ಗಂಟೆಗಳ ಮುಂಚೆ ಈ ರಹಸ್ಯವು ತಿಳಿದು ಅತ್ಯಾಶ್ಚರ್ಯವೂ ಅತ್ಯಾನಂದವೂ ಆಯಿತು. ಈ ನೂತನ ವಧುವು, ಆಕೆಯನ್ನು ವಿವಾಹ ಮಾಡಿಕೊಡುವದಕ್ಕಾಗಿ ಇಲ್ಲಿಗೆ ಕರೆತಂದಿರುವ ರಾಜನ ಔರಸಪುತ್ರಿಯಲ್ಲ; ಈತನ ಸಾಕುಮಗಳು. ಈಕೆಯು ಸಹೋದರರಿಬ್ಬರೂ ಹಾಗೆಯೇ ಸಾಕು ಮಕ್ಕಳು. ಈ ಮಕ್ಕಳು ಅನಾಥರಾಗಿ ಆ ರಾಜನಿಗೆ ದೈವಯೋಗದಿಂದ ಸಿಕ್ಕರು. ಅವನು ಇವರ ಆಕರ್ಷಕವಾದ ಸೌಂದರ್ಯಕ್ಕಾಗಿ ಮನಸೋತು ಇವರನ್ನು ತನ್ನ ಮಕ್ಕಳೆಂಬಂತೆ ಪ್ರೀತಿಸಿ ಪಾಲಿಸಿದನು. ಈ ಮೂವರೂ ನನ್ನ ಮತ್ತು ಮಹಾರಾಣಿ ಗ್ರಿಸೆಲ್ಡಾಳ ಮಕ್ಕಳು. ಇವರನ್ನು ಕೊಲೆಮಾಡುವದಕ್ಕಾಗಿ ತೆಗೆದುಕೊಂಡು ಹೋದ ಕೊಲೆಗಾರರು ನಿರಪರಾಧಿಗಳಾದ ಈ ಎಳೆಮಕ್ಕಳನ್ನು ನಿರ್ದಯವಾಗಿ ಕೊಲ್ಲುವದಕ್ಕೆ ಮನಸ್ಸು ಬಾರದೆ ಇವರನ್ನು ಒಯ್ದು ಆ ರಾಜನಿಗೆ ಕೊಟ್ಟರು. ನನ್ನ ಮಗಳೆಂಬದನ್ನು ತಿಳಿಯದೆ ಆ ರಾಜನು ಈಕೆಯನ್ನು ನನಗೆ ಲಗ್ನಮಾಡಿಕೊಡಲು ಇಷ್ಟೆಲ್ಲಾ ಪ್ರಯತ್ನಮಾಡಿದನು. ಆದರೆ ಆಗಬಾರದುದು ಆಗುವದಕ್ಕೆ ಮುಂಚೆ ದೈವಾನುಗ್ರಹದಿಂದ ಈ ವಿಷಯವೆಲ್ಲಾ ತಿಳಿದು ನಾವು ಧನ್ಯರಾದೆವು.'' ಎಂದು ಹೇಳಿದನು.

ಹೀಗೆ ಸಮಸ್ತ ಪ್ರಜೆಗಳ ಸಮ್ಮತಿಯಿಂದಲೂ ಸಂತೋಷದಿಂದಲೂ ಗ್ರಿಸೆಲ್ಡಾನೇ ಮಹಾರಾಣಿಯಾಗಿ ಉಳಿದಳು. ಆಕೆಯ ಮಕ್ಕಳೇ ರಾಜ್ಯಕ್ಕೆ ಉತ್ತರಾಧಿಕಾರಿಗಳಾದರು. ಇದರಿಂದ, ದೇವರು ತನ್ನ ಭಕ್ತರನ್ನು ಎಂದೂ ಕೈಬಿಡುವದಿಲ್ಲವೆಂದೂ ತನ್ನ ಮೇಲಿನ ನಿಷ್ಕಾಮ ಪ್ರೇಮದಿಂದ ಭಕ್ತರು ತನಗಾಗಿ ಮಾಡಿದ ತ್ಯಾಗವನ್ನು ಕೃತಜ್ಞನಾದ ದೇವರು ಬಡ್ಡಿಸಹಿತ ತೀರಿಸುವನೆಂದೂ ಸ್ಪಷ್ಟವಾಗುತ್ತದೆ.

ಪ್ರತಿಯೊಬ್ಬ ವಿವಾಹಿತ ಸ್ತ್ರೀಯೂ ತನ್ನ ಪ್ರೇಮದಲ್ಲಿ ಇಂಥಾ ರಾಜಯೋಗ್ಯವಾದ ಸಮರ್ಪಣೆಯನ್ನು ಮಾಡಲಿ. ಇಂಡಿಯಾ ದೇಶದಲ್ಲಿ ಇವರನ್ನು ಪತಿವ್ರತೆಯರೆಂದು ಕರೆಯುತ್ತಾರೆ. ಪತ್ನಿಯು ಪತಿಯಲ್ಲಿಯೂ ಪತಿಯು ಪತ್ನಿಯಲ್ಲಿಯೂ ಒಂದಾಗಿ ಜೀವಿಸಬೇಕು. ಸ್ತ್ರೀಯರು ಪತಿವ್ರತೆಯರಾಗಿರುವಂತೆ ಪುರುಷರೂ ಪತ್ನೀವ್ರತಸ್ಥರಾಗಬೇಕು. ಪತ್ನಿಯು ಪತಿಯಲ್ಲಿ ದೇವರನ್ನೇ ನೋಡಬೇಕು; ತನ್ನ ತನುಮನಗಳನ್ನೂ ಸಮಸ್ತವನ್ನೂ ಪತಿಗೆ ಪ್ರೀತಿಯಿಂದ ಒಪ್ಪಿಸಬೇಕು. ಪತಿಯೂ ಪತ್ನಿಯಲ್ಲಿರುವ ದೇವರಿಗೆ ತನ್ನನ್ನು ಪೂರ್ಣವಾಗಿ ಒಪ್ಪಿಸಿಕೊಳ್ಳಬೇಕು. ಇಬ್ಬರಲ್ಲಿಯೂ ವೈಯಕ್ತಿಕ ಎನ್ನುವದೂ ಸ್ವಾರ್ಥ ಎನ್ನುವದೂ ಯಾವದೂ ಇಲ್ಲ. ಇಂಡಿಯಾ ದೇಶದಲ್ಲಿ ವಿವಾಹ ಮಹೋತ್ಸವು ಸಾಮಾನ್ಯವಾಗಿ ನದಿಗಳ ತೀರದಲ್ಲಿ, ಬಯಲಿನಲ್ಲಿ, ಮನೋಹರವಾದ ಮಂದಮಾರುತವು ಬೀಸುತ್ತಿರುವಾಗ, ಸೂರ್ಯನು ಹಿತವಾಗಿ ತಲೆಯ ಮೇಲೆ ಬೆಳಗುತ್ತಿರುವಾಗ ನಡೆಯುತ್ತದೆ. ಹೆಣ್ಣು ತನ್ನ ಕೈಯನ್ನು ಗಂಡಿನ ಕೈಯಲ್ಲಿಡಬೇಕು; ಗಂಡು ಹೆಣ್ಣಿನ ಕೈಯನ್ನು ಹಿಡಿದು ಎರಡು ಕೈಗಳನ್ನೂ

ದೇವರಿಗೆ ಒಪ್ಪಿಸಬೇಕು. ಗ್ರಿಸೆಲ್ಡಾಗೆ ಹೇಗೆ ಯಾವ ಆಸಕ್ತಿಯೂ ಇರಲಿಲ್ಲವೋ ಹಾಗೆ ಹೆಣ್ಣಿಗೆ ಯಾವ ಆಸಕ್ತಿಯೂ ಇರಬಾರದು; ತಮ್ಮನ್ನು ತಾವು ದೇವರಿಗೆ, ಆತ್ಮನಿಗೆ ಒಪ್ಪಿಸಿಕೊಳ್ಳಬೇಕು.

ಪುರುಷರೂ ಹೀಗೆಯೇ ಮಾಡಬೇಕು. ಗಂಡನು ಹೆಂಡತಿಯಲ್ಲಿಯೂ ಹೆಂಡತಿಯು ಗಂಡನಲ್ಲಿಯೂ ತನ್ನ ತನ್ನ ಪ್ರತ್ಯೇಕ ವ್ಯಕ್ತಿತ್ವವನ್ನು ಕಳೆದುಕೊಂಡರೆ ವಿವಾಹಿತ ಜೀವನವು ಸುಖಿಯಾಗದೆ ಇರುವದೇ ಇಲ್ಲ. ಏಕಾತ್ಮಭಾವದಿಂದಲೇ ಜೀವನವೂ ಪ್ರೇಮವೂ ಸುಖಪ್ರದವಾಗುತ್ತವೆ.

ಓಂ ! ಓಂ ! ಓಂ !

# PRANAYAMA AND WILL POWER

## ಪ್ರಾಣಾಯಾಮ ಮತ್ತು ಇಚ್ಛಾಶಕ್ತಿ

[ರಾಮನು ಆನಂದಾವೇಶದಲ್ಲಿ ತನ್ನನ್ನು ತಾನು ಮರೆತಿದ್ದಾನೆ !]

ನಿಜವಾದ ಆತ್ಮನಿಗೆ ಜನ್ಮವಿಲ್ಲ ; ಸೂಕ್ಷ್ಮ ಶರೀರಿಯು ಜನ್ಮ ತಳೆಯುತ್ತಾನೆ. ನಿಜವಾದ ದೇವರು ಜನನ ಮರಣಗಳನ್ನು ಮೀರಿದ್ದಾನೆ. ವಿಶ್ವವೇ ನನ್ನ ದೇಹವು; ಎಲ್ಲಾ ಗಾಳಿಯೂ ನನ್ನ ಉಸಿರು, ವೃಕ್ಷಗಳೇ ನನ್ನ ರೋಮಗಳು, ನದಿಗಳು ನನ್ನ ನರ ನಾಡಿಗಳು, ಪರ್ವತಗಳೇ ನನ್ನ ಮೂಳೆಗಳು.

ಕೆಲವು ಸ್ಥಳಗಳಲ್ಲಿ ಸಂಧ್ಯಾ [ಸಂಧಿ] ಪ್ರಕಾಶವು ದೀರ್ಘವಾಗಿರುತ್ತದೆ. ಇತರ ಸ್ಥಳಗಳಲ್ಲಿ ಸೂರ್ಯನು ಕ್ಷಿತಿಜದ ಮೇಲಕ್ಕೆ ಒಮ್ಮೆಗೇ ನೆಗೆಯುತ್ತಾನೆ. ನೀವು ಸೇರ ಬೇಕಾಗಿರುವ ನಿಮ್ಮ ಗುರಿಗೂ ನಿಮಗೂ ನಡುವೆ ಅಲ್ಲಲ್ಲಿ ತಡೆತಡೆದು ತಾಮಸ ವಾಗಿ ಹೋಗುತ್ತೀರೋ ಅಥವಾ ಒಂದೇ ಸಲಕ್ಕೆ ಹಾರುತ್ತೀರೋ ಎನ್ನುವದು ಪೂರಾ ನಿಮ್ಮ ಇಚ್ಛೆಯ ಮೇಲೂ ಆಯ್ಕೆಯ ಮೇಲೂ ಅವಲಂಬಿಸುತ್ತದೆ. ಕಾಮವೇ ಶಕ್ತಿಪ್ರಕಾಶ, ಉಷ್ಣ, ವಿದ್ಯುತ್. ಶಬ್ದ ಮೊದಲಾದ ರೂಪಗಳಿಂದ ತೋರುವ ಶಕ್ತಿ. ಭೌತ ವಸ್ತುವೂ ಒಂದು ಬಗೆಯ ಶಕ್ತಿಯೆಂದು ವಿಜ್ಞಾನಿಗಳು ತೋರಿಸಿಕೊಟ್ಟಿ ದ್ದಾರೆ. ಲೀಬ್‌ನಿಟ್ಸನು ಪರಮಾಣುಗಳೇ ಶಕ್ತಿಕೇಂದ್ರಗಳೆಂದು ತಿಳಿಯುತ್ತಾನೆ. ಘನ ವಸ್ತುವೂ ಸಹ ನನ್ನ ಇಚ್ಛೆಯೇ. ಮಂಜು ಗಡ್ಡೆಯು ನೀರಲ್ಲದೆ ಬೇರಲ್ಲ; ನೀರಂತು ನೀರೇ. ರೂಪವೂ ನಾನೇ, ರೂಪದಲ್ಲಿ ಇರುವವನೂ ನಾನೇ. ಎಲ್ಲಾ ನೀನೇ, ಎಲ್ಲಾ ನಾನೇ. ಈ ಅರಿವಿಗೆ ಎಚ್ಚರಗೊಂಡು ಏರಿರಿ. ಯೋಗ ತತ್ತ್ವ ಶಾಸ್ತ್ರವು ನಿಮ್ಮನ್ನು ಹುಡುಕಿಕೊಂಡು ಬರಬೇಕು. ಸಕಲವೂ ನಿಮ್ಮಲ್ಲಿಗೇ ಬರು ತ್ತವೆ. ಜನರು ಬೆನ್ನು ಮೂಳೆಯಿಂದ [ಕಶೇರುಕದಿಂದ] ಬಹಳ ತಪ್ಪುದಾರಿಯನ್ನು ಹಿಡಿಯುತ್ತಾರೆ; ಅವರು ಮುಖ್ಯವಾದ ಮಾರ್ಗವನ್ನು ಕಳೆದುಕೊಂಡು ಸಂದಿಗೊಂದಿ ಗಳಲ್ಲಿಯೂ ಓಣಿಗಳಲ್ಲಿಯೂ ತಿರುಗುತ್ತಾರೆ. 8 ಎನ್ನುವ ಈ ಅಂಕೆಯನ್ನು ಒಂದರ ಮೇಲೆ ಒಂದರಂತೆ ಹಲವು ಸಲ ಇಟ್ಟರೆ, ಉದ್ದಕ್ಕೂ ಎರಡು ಹರಿಗಳಲ್ಲಿ ತೂತುಗಳಿ ರುವದರಿಂದ ಎರಡು ಕಾಲುವೆಗಳಾಗುತ್ತವೆ. ಈ ಕಾಲುವೆಗಳನ್ನು ತೆರೆಯಬೇಕೆಂದು ಶಾಸ್ತ್ರಗಳು ಒತ್ತಿ ಹೇಳುತ್ತವೆ. ಇದನ್ನು ಸಾಧಿಸುವದಕ್ಕಾಗಿ ಹನ್ನೆರಡು ವರ್ಷಗಳು ಗ್ರಂಥಾವಲೋಕನವನ್ನೂ ಅಭ್ಯಾಸವನ್ನೂ ಮಾಡಿದವನಿಗೆ ರಾಮನು ರಹಸ್ಯವನ್ನು ಹೇಳಿದನು. ಈ ಅಲ್ಪಕಾಲದಲ್ಲಿ ತಾನು ಎಲ್ಲವನ್ನೂ ಸಾಧಿಸಿ, ಎಂದಿಗಿಂತಲೂ ಗುರಿಯ ಹೆಚ್ಚು ಹತ್ತಿರ ಹತ್ತಿರಕ್ಕೆ ಕೈ ಹೋಗಿರುವದಾಗಿ ಆತನು ಇವತ್ತು ಬಂದು

ಹೇಳಿದನು. ಸುಷುಮ್ನೆಯನ್ನು ತೆರೆಯಬೇಕೆಂಬ ರೀತಿಯ ಸಾಧನೆಯನ್ನು ಮಾಡ ತಕ್ಕ ಜನರು ತಮ್ಮನ್ನು ತಾವೇ ತಪ್ಪು ದಾರಿಗೆ ಎಳೆಯುತ್ತಾರೆ. ನಾವು ತೆಗೆದು ಕೊಂಡ ಆಹಾರವು ಹೊಟ್ಟೆಯೊಳಗೆ ಹೋಗಿ, ಆಮ್ಲಜನಕದೊಡನೆ ಸೇರಿ, ಜಠರ ರಸ ಗಳೊಡನೆ ಬೆರೆತು, ಅನ್ನನಾಳದಲ್ಲಿ ಹರಿದುಹೋಗುತ್ತದೆ. ಅಲ್ಲಿ ಆಗುವ ಆಹಾರ ಪರಿವರ್ತನೆಗಳನ್ನು ತಿಳಿಯದಿದ್ದರೂ ಸ್ವಾಭಾವಿಕವಾಗಿ ನಡೆಯುವ ಪಚನ ಕಾರ್ಯ ವೆಲ್ಲಾ ನಡೆಯುವಂತೆ ಸರಿಯಾದ ರೀತಿಯಲ್ಲಿ ಸಾಧನೆಮಾಡಿದರೆ ಆತ್ಮಾನುಭವಕ್ಕೆ ಆಗಬೇಕಾದುದೆಲ್ಲಾ ತಾನಾಗಿಯೇ ಆಗುತ್ತದೆ. ಶಾಸ್ತ್ರ ಗುರುಗಳ ನಿರ್ದೇಶ ದಂತೆ ಪ್ರಯತ್ನ ಮಾಡಿದರೆ ಸುಷುಮ್ನೆಯು ತಾನಾಗಿಯೇ ತೆರೆಯುತ್ತದೆ "ಪ್ರಾಣ ನಿರೋಧ ಮಾಡಬೇಕೆ?" ಅರ್ಥವಿಲ್ಲದ ಇಂಥಾ ವಿಷಯಗಳಲ್ಲಿ ನಿಮ್ಮ ಕಾಲವನ್ನು ಪೋಲು ಮಾಡಬೇಡಿ. ಈ ಕ್ರಮಗಳಿಂದ ನಿಮಗೆ ಪ್ರಯೋಜನವಾಗುವದಿಲ್ಲ. ಪ್ರಾಣ ವನ್ನು ಬಿಗಿಹಿಡಿಯುವದರಿಂದ ಮನಸ್ಸನ್ನು ಬಿಗಿ ಹಿಡಿಯುವದಕ್ಕೆ [ control ] ಆಗುವದಿಲ್ಲ. ಈ ಮಾರ್ಗಗಳನ್ನು ಅವಲಂಬಿಸಿ ಯಾರೂ ತಮ್ಮ ಮನಸ್ಸನ್ನು ಕೇಂದ್ರೀ ಕರಿಸುವದಕ್ಕೆ—ಸಂಯಮಮಾಡುವದಕ್ಕೆ—ಸಾಧ್ಯವಾಗುವದಿಲ್ಲ. ಉಸಿರನ್ನು ಕ್ಷಣಕಾಲ ತಡೆಹಿಡಿದ ಮಾತ್ರಕ್ಕೆ ಮನಸ್ಸನ್ನು ಹಿಡಿದು ನಿಲ್ಲಿಸಲು ಸಾಧ್ಯವಿಲ್ಲ. ಈ ತರ್ಕವು ತಪ್ಪಾದುದು. ಪ್ರಾಣ ನಿರೋಧವೆಂದರೆ ಮನೋ ನಿರೋಧವೆಂದು ತಿಳಿಯ ಬೇಕೆಂದು ಪ್ರತಿಯೊಬ್ಬ ಹಠಯೋಗಿಯೂ ಜನರ ಮೇಲೆ ಒತ್ತಾಯದಿಂದ ಪ್ರಭಾವ ಬೀರುತ್ತಾನೆ. ಆದರೆ, ಮನಸ್ಸಿನ ಚಲನೆಯನ್ನು ನಿಲ್ಲಿಸಿದರೆ ಪ್ರಾಣಸ್ಪಂದನವೂ ನಿಲ್ಲುವದೆಂಬುದು ಮಾತ್ರ ನಿಜ.

ರಾಮನು ಈ ಕೊನೆಯ ವಿಪರೀತ ಮಾರ್ಗವನ್ನು ಅನುಸರಿಸಿದನು. ಯಾರು ಯಾರು ಎಷ್ಟೆಷ್ಟು ಬುದ್ಧಿವಾದ ಹೇಳಿದರೂ ರಾಮನು ಪ್ರಾಣ ನಿರೋಧ ಮಾಡುವ ಸಾಮಾನ್ಯ ಮಾರ್ಗವನ್ನು ಅನುಸರಿಸಲಿಲ್ಲ. ಅವನು ಮನಸ್ಸನ್ನು ಹಿಡಿತಕ್ಕೆ [ control ] ತಂದೊಡನೆ ಪ್ರಾಣವೂ ಹಿಂಬಾಲಿಸಿ ಹಿಡಿತಕ್ಕೆ ಬಂದಿತು. ಅವನು ಒಮ್ಮೆ ಸ್ನಾನ ಮಾಡುವಾಗ ಒಂದು ಸರೋವರದಲ್ಲಿ ಎತ್ತರದಿಂದ ಹಾರಿ ಮುಳುಗಿದನು. ಜೊತೆ ಗಿದ್ದ ಸ್ನೇಹಿತರೂ ನೀರಿನಲ್ಲಿ ಹಾರಿ, ಮುಳುಗಿ, ಕೂಡಲೇ ಹೊರಗೆ ಬಂದು ರಾಮನಿ ಗಾಗಿ ಕಾದರು. ಎಲ್ಲರಂತೆ ಅವನು ಹೊರಗೆ ಬರಲಿಲ್ಲವಾದ್ದರಿಂದ ಅವನು ಮುಳುಗಿ ಸತ್ತಿರಬೇಕು ಅಥವಾ ಮೊಸಳೆಯು ಅವನನ್ನು ಹಿಡಿದು ತಿಂದಿರಬೇಕು ಎಂದು ಎಲ್ಲರೂ ನಿಶ್ಚಯಿಸಿದರು. ಎಲ್ಲರೂ ಬಹಳ ಗಾಬರಿಯಾಗಿದ್ದರು. ಆದರೆ ಸ್ವಲ್ಪ ಹೊತ್ತಿನ ಮೇಲೆ ರಾಮನು ಹೊರಗೆ ಬಂದು, ಇಚ್ಛಾ ಮಾತ್ರದಿಂದ ಉಸಿರನ್ನು ಬಿಗಿ ಹಿಡಿಯ [ಪ್ರಾಣ ನಿರೋಧ ಮಾಡ] ಬಹುದೆಂದು ತೋರಿಸಿ, ಎಲ್ಲರನ್ನೂ ದಂಗು ಬಡಿಸಿದನು. ನಿಜಾತ್ಮಸಾರದಲ್ಲಿ ನೆಲೆಗೊಂಡು ಅನುಭವ ಪಡೆಯುವದಕ್ಕೆ ಪ್ರಯತ್ನಮಾಡಿ ದೇವ ರಲ್ಲಿ ಒಂದಾಗಿರಿ. ಪ್ರಾಣವು ನಿಮ್ಮ ಬಡ, ಕನಿಷ್ಠ ಸೇವಕನಾದ್ದರಿಂದ, ವಿಶ್ವಪ್ರಾಣವನ್ನು

ಸ್ವಾಧೀನಕ್ಕೆ ತಂದುಕೊಳ್ಳಿ. ನಿರ್ಮೋಹರಾಗಿರಿ. "ಓ ರಾಮ! ಓ ಕೃಷ್ಣ!" ಎಂದು ತಾಯಿಯು ಮಕ್ಕಳ ಕಿವಿಯಲ್ಲಿ ಪಿಸು ದನಿಯಿಂದ ಉಸಿರುವಾಗ, ಅವರನ್ನು ಆ ದೇಹಗಳ ಮೂಲಕ ರಾಮನೆಂದೂ, ಕೃಷ್ಣನೆಂದೂ ಮೋಹಗೊಳಿಸುತ್ತಾಳೆ.

ಓ ದಿವ್ಯ ಪ್ರಜ್ಞಾನ ಘನ! ಎಚ್ಚರಗೊಳ್ಳು. ವಿಶ್ವನಾಥ! ಲೋಕೇಶ್ವರ! ಸೂರ್ಯರ ಸೂರ್ಯ! ಅನುಭವ ಪಡೆಯಬೇಕೆಂಬದೇ ಮುಖ್ಯವಾದ ವಿಷಯ. ಓ ಪ್ರಕಾಶಗಳ ಪ್ರಕಾಶ! ಅದೇ ನಾನಾಗಿದ್ದೇನೆ! ನೀನು ಪುರುಷನೋ ಸ್ತ್ರೀಯೋ ಭಿಕ್ಷುಕನೋ ರಾಜನೋ ದರಿದ್ರನೋ ದುಃಖಾರ್ತನೋ ಹತಭಾಗ್ಯನೋ ಏಕಾಗಿದ್ದಿ? ನೀನು ಅದಾಗಿದ್ದೀ ಎಂದು ಭಾವಿಸಿರುವದರಿಂದ ಅದಾಗಿದ್ದಿ. ನೀನೇ ದೇವರೆಂದು ಭಾವಿಸು; ನೀನೇ ದೇವರಾಗುತ್ತಿ,—ದೇವರಾಗಿರುವೆ. ಒಂದು ಮನೆಯನ್ನು ಕಟ್ಟಬೇಕಾದರೆ ಬಹಳ ಕಾಲ ಹಿಡಿಯುತ್ತದೆ; ಆದರೆ ಅದನ್ನು ಸ್ವಲ್ಪ ಕಾಲದಲ್ಲಿಯೇ ನಾಶ ಮಾಡಬಹುದು. "ನಾನು ಮನುಷ್ಯ" ಎಂಬ ಕತ್ತಲುಗವಿಯನ್ನು ನಿರ್ಮಿಸುವದಕ್ಕೆ ಬಹಳ ಕಾಲವನ್ನು ತೆಗೆದುಕೊಂಡಿದ್ದಿ. ಆದರೆ ಅದನ್ನು ಒಮ್ಮೆಗೇ ನಾಶಮಾಡು. ನೀನೇ ದೇವಾಧಿದೇವ! ನಿಜವಾದ ಆತ್ಮನಲ್ಲಿ, ಆತ್ಮನಾಗಿ ಏಳಿ. ಪ್ರಕಾಶಗಳ ಪ್ರಕಾಶದಲ್ಲಿ ನಿಮ್ಮನ್ನು ನೀವು ಎಸೆದುಕೊಳ್ಳಿ! ಇಡೀ ಲೋಕಗಳೇ ಚೈತನ್ಯಸ್ವರೂಪರಾದ ನಿಮ್ಮೆದುರಿಗೆ ಹರಡಿರುವದನ್ನು ನೋಡಿ! ಉದಯಿಸುತ್ತಿರುವ ಸೂರ್ಯನು ಇನ್ನೂ ಕ್ಷಿತಿಜದ ಕೆಳಗೆ ಇರುವಾಗ ಇಂಡಿಯಾದೇಶದಲ್ಲಿ ಬಹಳ ಸರಿಯಾದ ಕಾಲ; ಆ ಮನೋಜ್ಞವಾದ ದೃಶ್ಯವು ಮನಸ್ಸನ್ನು ಮೇಲೆತ್ತುತ್ತದೆ. ಚಿನ್ನಿಯನ್ನು ದಾಂಡಿನಿಂದ ಮೊದಲ ಸಲ ಹೊಡೆದು ಮೇಲೆಗೆರಿಸುವಂತೆ ಸಂಧ್ಯಾ ಸಮಯದ ಸುಂದರ ದೃಶ್ಯದಿಂದ ಮೊದಲು ಸ್ಫೂರ್ತಿಯನ್ನು ಪಡೆದರೆ ಅನಂತರ ಉಲ್ಲಾಸಕರವಾದ ಔನ್ನತ್ಯಕ್ಕೆ ಏರಬಹುದು. ಮೊದಲ ಹೊಡೆತದಿಂದ ಚಿನ್ನಿಯು ಮೇಲೇರಿದಾಗ ಅದಕ್ಕೆ ಮತ್ತೊಂದು ಬಿರುಸಾದ ಏಟನ್ನು ಕೊಟ್ಟು ವಾಯುಮಂಡಲದಲ್ಲಿ ದೂರ ತೂರುತ್ತೇವೆ. ಹಾಗೆಯೇ ಸಮಯ ಸನ್ನಿವೇಶಾದಿಗಳ ಸ್ಫೂರ್ತಿಯ ಪ್ರಭಾವದಿಂದ ಮನಸ್ಸು ಅತ್ಯಂತ ಉನ್ನತ ಸ್ವರ್ಗದಲ್ಲಿ ದೇವರೇ ಆಗುವ ವರೆಗೂ ಅದನ್ನು ಮೇಲೇರಿಸಬೇಕು. ಹಕ್ಕಿಗಳ ಗಾನಗಳು, ಮಂದಮಾರುತನ ಮಧುರವಾದ ಗಂಧ, ಜುಳು ಜುಳು ಹರಿಯುವ ಜಲಝರಿಗಳ ಮಂಜುಳನಾದ; ಮನೋಹರವಾದ ಪ್ರಕೃತಿ ದೃಶ್ಯ, ಇವೇ ಮೊದಲಾದವುಗಳಿಂದ ಸ್ಫೂರ್ತಿಯನ್ನು ಪಡೆದು ಮನಸ್ಸು ಮೇಲೇರಿ, ಭಾವನೆಯ ಭಾಷೆಯಲ್ಲಿ ಓಂಕಾರವನ್ನು ಉಚ್ಚರಿಸಿ ಗಾನಮಾಡಿರಿ. ಕನ್ನಡಿಯಲ್ಲಿ ನಿಮ್ಮನ್ನೇ ನೀವು ನೋಡಿಕೊಂಡಂತೆ ಉದಯ ಸೂರ್ಯನನ್ನು ನೋಡಿ. ನಾನು ಬೇರೆ, ಸೂರ್ಯನು ಬೇರೆ ಎನ್ನುವ ದ್ವೈತ ದೃಷ್ಟಿಯಿಂದ ನೋಡಬಾರದು. ಎಲ್ಲಕ್ಕಿಂತಲೂ ಅತ್ಯಂತ ಶ್ರೇಷ್ಠವೂ ಉನ್ನತವೂ ನಾನೇ. ನಾನೇ ಅವನು. ಇಂಡಿಯಾದೇಶದಲ್ಲಿ ಸ್ತ್ರೀಯರು ತಮ್ಮ ಹೆಬ್ಬೆರಳುಗಳ ಮೇಲೆ ಸಣ್ಣ ಕನ್ನಡಿಗಳನ್ನು ಧರಿಸಿರುತ್ತಾರೆ. ಅವರು ಅವುಗಳಲ್ಲಿ

ನೋಡುವಾಗ ಆ ಕನ್ನಡಿಯನ್ನು ಗಮನಿಸದೆ ತಮ್ಮ ಹೊರಗೆ ತಮ್ಮ ಮುಖ ಗಳನ್ನೇ ನೋಡಿಕೊಳ್ಳುತ್ತಾರೆ. ಮುಖಗಳು ಹೊರಗೆ ಕನ್ನಡಿಯಲ್ಲಿ ಬೇರೆಯಾಗಿ ತೋರಿದರೂ ಅವರು ಅವನ್ನು ಬೇರೆಯಾಗಿ ಎಣಿಸುವದಿಲ್ಲ, ತಮ್ಮ ಮುಖವೆಂದೇ ತಿಳಿಯುತ್ತಾರೆ. ಹಾಗೆಯೇ ವೇದಾಂತಿಯು ಸೂರ್ಯನನ್ನು ತನ್ನ ಆತ್ಮನೆಂದೇ ಅನು ಭವದಿಂದ ತಿಳಿಯುತ್ತಾನೆ. ನಾನೇ ಸೂರ್ಯರ ಸೂರ್ಯ! ನನ್ನ ಒಂದು ನೆರಳೇ ಸೂರ್ಯನು. ಓಂಕಾರದ ಅರ್ಥವೇ "ಅದು ನಾನಾಗಿದ್ದೇನೆ" ಎಂದು. ಇದನ್ನು ಭಾಷೆಯಿಂದಲೂ ಭಾವನೆಯಿಂದಲೂ ಕೃತಿಯಿಂದಲೂ ಉಚ್ಚರಿಸಿರಿ.

"ಮಗು, ಬಾ !" ಎಂದರೆ ಈ ಮಾತಿನಲ್ಲಿ ಪ್ರೀತಿಯ ಕಾವು ಅಷ್ಟಾಗಿ ಕಾಣುವ ದಿಲ್ಲ. ಈ ಮಾತು ಹಗುರವಾಗಿ ಸಡಿಲವಾಗಿದೆ; ಸತ್ತ್ವವಿಲ್ಲ. ಆದರೆ, ಯಾವ ಮಗುವನ್ನು ನೀವು ಬಹಳ ಕಾಲದಿಂದ ನೋಡಬೇಕೆಂದು ಹಂಬಲಿಸುತ್ತಿರುವಿರೋ ಅದೇ ಆಕಸ್ಮಾತ್ ಬಂದು ಬಿಟ್ಟರೆ, "ಓ ! ಬಾ ಮಗು ಬಾ ಬಾ !" ಎಂದು ಸಂಭ್ರಮ ದಿಂದ ಕರೆಯುತ್ತಾ, ನಿಮ್ಮ ಪ್ರತಿಯೊಂದು ನರನಾಡಿಯಿಂದಲೂ ಕೂದಲಿನಿಂದಲೂ ಪ್ರಿಯ ಭಾವದ ಕಾವು ಚಿಮ್ಮುವದೋ ಎನ್ನುವಂತೆ ಕಾತರದಿಂದ ಓಡಿಹೋಗಿ ಆ ಮುದ್ದು ಮಗುವನ್ನು ಎತ್ತಿಕೊಂಡು, ಅಪ್ಪಿಕೊಂಡು ಮುತ್ತಿಡುತ್ತೀರಿ; ಆ ಮಗುವನ್ನು ತಿಂದುಬಿಡುವಿರೋ ಎನ್ನುವಂತೆ ಸಹಸ್ರಸಲ ಮುದ್ದಿಸುತ್ತೀರಿ. ಇದೇ ಭಾವನೆಯ ಭಾಷೆ. ಹೀಗೆ ನಿಮ್ಮ ದೇಹದ ಪ್ರತಿಯೊಂದು ಎಳೆಎಳೆಯಿಂದಲೂ ಭಾವಭರಿತವಾಗಿ ಓಂಕಾರವನ್ನು ಉಚ್ಚರಿಸಿ. ಸ್ವಲ್ಪ ಶಕ್ತಿಯಿಂದ ಪ್ರಾರಂಭಿಸಿ. ಶಬ್ದವು ಮೊದಲು ಕಂಠ ದಿಂದಲೂ, ಅನಂತರ ಎದೆಯಿಂದಲೂ ಅನಂತರ ಅದರ ಕೆಳ ಕೆಳಗಿನಿಂದಲೂ ಕೊನೆಗೆ ಬೆನ್ನು ಹುರಿಯ ಮೂಲದಿಂದಲೂ ಎದ್ದು ಬರುತ್ತದೆ. ಬೆನ್ನುಮೂಳೆಯ [spine— ಕಶೇರುಕದ] ಬುಡದಲ್ಲಿ ವಿದ್ಯುತ್ತಿನ ಆಘಾತವೂ ಸುಷುಮ್ನೆಯ ಉದ್‌ಘಾಟನವೂ ಆಗುತ್ತವೆ. ನಿಮ್ಮ ಉಸಿರಾಟವು ಲಯಬದ್ಧವಾಗುತ್ತದೆ, ರೋಗಾಣುಗಳೆಲ್ಲಾ ನಾಶ ವಾಗುತ್ತವೆ. ಸೂರ್ಯನಿಗೆ ಚಂದ್ರನ ಸಂಬಂಧವಿರುವಂತೆ ತನಗೆ ಸೂರ್ಯನ ಸಂಬಂಧ ವಿದೆಯೆಂದು ವೇದಾಂತಿಯು ನೋಡುತ್ತಾನೆ. "ಚಂದ್ರನು ತಾನೇ ಸ್ವತಂತ್ರವಾಗಿ ಬೆಳಗು ತ್ತಿರುವಂತೆ ಕಂಡರೂ ಅದರ ಎಲ್ಲಾ ಬೆಳಕೂ ಸೂರ್ಯನಿಂದಲೇ ಬರುತ್ತಿರುವಂತೆ ಸೂರ್ಯನು ಸ್ವಯಂಪ್ರಕಾಶವುಳ್ಳವನಂತೆ ಕಂಡರೂ ಆ ಪ್ರಕಾಶವೂ ಅವನ ಮಹಿಮಾ ವೈಭವವೂ ನನ್ನದೇ" ಎಂದು ವೇದಾಂತಿಯು ತಿಳಿದು ಭಾವಿಸುತ್ತಾನೆ.

ನಿಮ್ಮ ಕನಸಿನಲ್ಲಿ ನೀವು ಅನೇಕ ವಸ್ತುಗಳನ್ನು ನೋಡುತ್ತೀರಿ; ಒಂದು ವಿದ್ಯು ದ್ದೀಪವನ್ನೂ ಸೂರ್ಯ ಚಂದ್ರ ನಕ್ಷತ್ರಗಳನ್ನೂ ನೀವು ಕನಸಿನಲ್ಲಿ ನೋಡಬಹುದು. ನಿಮ್ಮ ಎಚ್ಚರದಲ್ಲಿ ಹೊರಗೆ ಕಾಣುವ ದೀಪವಾಗಲೀ ಸೂರ್ಯಚಂದ್ರ ನಕ್ಷತ್ರಗಳಾ ಗಲೀ ನಿಮ್ಮ ಕನಸಿನಲ್ಲಿ ನಿಮ್ಮೊಳಗೆ ಬಂದು ಕಾಣಿಸಿಕೊಳ್ಳುವದಿಲ್ಲ. ಕನಸಿನಲ್ಲಿ

ಯಾವ ಬೆಳಕೂ ಇಲ್ಲದೆ ಎಲ್ಲಾ ವಸ್ತುಗಳನ್ನೂ ನೋಡಿ ಎಲ್ಲಾ ವ್ಯವಹಾರಗಳನ್ನೂ —ಎಚ್ಚರದಲ್ಲಿ ಹೇಗೋ ಹಾಗೆ— ಮಾಡುತ್ತೀರಿ, ಇಷ್ಟೆಲ್ಲಾ ಕಾಣುವದಕ್ಕೂ ಮಾಡು ವದಕ್ಕೂ ಬೆಳಕಿಲ್ಲದೆ ಹೇಗೆ ಸಾಧ್ಯ? ಆ ಬೆಳಕು ಯಾವದು? ಎಚ್ಚರದಲ್ಲಿ ಕಂಡ ವಸ್ತು ಗಳ ನೆನಪಿನಿಂದ ಮನಸ್ಸು ಕನಸಿನಲ್ಲಿ ಎಲ್ಲವನ್ನೂ ಕಲ್ಪಿಸಿಕೊಳ್ಳಬಹುದು. ಆದರೆ ಅದರ ಆ ವೃತ್ತಿಗಳಲ್ಲಿ ತುಂಬಿಕೊಳ್ಳುವ ಬೆಳಕು ಯಾವದು? ಅದು ನಿಮ್ಮ ನಿಜಾತ್ಮನ ಅರಿವಿನ ಬೆಳಕಲ್ಲದೆ ಬೇರಾವದು? ನಿಮ್ಮ ಕನಸಿನಲ್ಲಿ ಕಾಣುವ ಸೂರ್ಯನ ಪ್ರಕಾಶ ವೈಭವವು ನಿಮ್ಮ ಪ್ರಜ್ಞಾ ಪ್ರಕಾಶವೇ ಆಗಿದೆ. ಸೂರ್ಯನ ಮಹಿಮಾ ವೈಭವ ವನ್ನು ನನ್ನ ಮಹಿಮಾ ವೈಭವದ ಮೂಲಕ ನೋಡುತ್ತೇನೆ. ಇದು ವೇದಾಂತಿಯ ದೃಷ್ಟಿ, ಭಾವನೆ. ಭೌತಿಕ ಪ್ರಪಂಚದಲ್ಲಿ ಸೂರ್ಯನು ಪ್ರಕಾಶಕ್ಕೂ ಜ್ಞಾನಕ್ಕೂ ಸಂಕೇತವಾಗಿದ್ದಾನೆ. ಆದ್ದರಿಂದ ನಾನು ಸೂರ್ಯನ ಕಡ ನೋಡಿದಾಗ ನಾನೇ ಜ್ಞಾನ ಪ್ರಕಾಶವೆಂದು ಭಾವಿಸುತ್ತೇನೆ. ಸೂರ್ಯನು ಸಕಲ ಗ್ರಹಗಳ ಪರಿಭ್ರಮಣಕ್ಕೆ ಕಾರಣನಾದ್ದರಿಂದಲೂ ಎಲ್ಲರಿಗೂ ಪ್ರಾಣಶಕ್ತಿಯನ್ನು ಕೊಡುವದರಿಂದಲೂ ಸೂರ್ಯನು ಶಕ್ತಿಯ ಸಂಕೇತವು.

ಅ—ಉ—ಮ ಗಳು ಸೇರಿದ ಓಂಕಾರವನ್ನು ಇನ್ನೊಂದು ರೀತಿಯಿಂದ ಅರ್ಥ ಮಾಡಿ ಅನುಭವಕ್ಕೆ ತಂದುಕೊಳ್ಳಬಹುದು.

ಅ ಎನ್ನುವದು ಇರುವಿಕೆಗೂ ಜೀವಕ್ಕೂ ಪ್ರಾಣಕ್ಕೂ ಸಂಕೇತ.
ಉ ಎನ್ನುವದು ಬೆಳಕಿಗೂ ಅರಿವಿಗೂ ಸಂಕೇತ.
ಮ ಎನ್ನುವದು ಆನಂದಕ್ಕೂ ಸುಖಕ್ಕೂ ಸಂಕೇತ.

ಸೂರ್ಯನಲ್ಲಿ ಓಂಕಾರವು ಬಂಗಾರದ ಗೂಢ ಲಿಪಿಗಳಿಂದ ಬರೆದಿರುವ ಗುಪ್ತ ಸಂಕೇತವನ್ನು ಪಡೆದಿದೆ. ಲಿಖಿತ ಶಬ್ದವಾದ ಓಂಕಾರದ ಭೌತಿಕ ಸಂಕೇತವಾದ ಸೂರ್ಯನು ನಿಜಾತ್ಮನಾದ ನನ್ನ ಪ್ರತೀಕವಾಗಿದ್ದಾನೆ.

ಎಲ್ಲಾ ಗ್ರಹಗಳನ್ನೂ ಆಕರ್ಷಿಸುವ ಸೂರ್ಯನು ಉಜ್ಜ್ವಲವಾದ ಸೌಂದರ್ಯದ ಸಂಕೇತವು! ಆಹಾ ಎಷ್ಟು ದಿವ್ಯವಾಗಿದೆ! ಅದು ಆನಂದದ ಪ್ರತೀಕವು! "ನಾನೇ ಇರುವಿಕೆ, ಸತ್ಯ, ಮಹಿಮಾ ವೈಭವ! ಎಲ್ಲಾ ಗುಣಗಳೂ ನನ್ನವೇ, ನಾನೇ!

ಸತ್ಯ—ಜ್ಞಾನ—ಆನಂದ ಸ್ವರೂಪನಾದ ನನ್ನ ವಿಕೃತ—ವಿಚಿತ್ರ—ಭೌತಿಕ ರೂಪವೇ ಸೂರ್ಯನು! ಓಂಕಾರವನ್ನು ನಾನು ಪೂಜಿಸುವದಿಲ್ಲ, ಓಂಕಾರವೇ ನನ್ನನ್ನು ಪೂಜಿಸುತ್ತದೆ! ಯಾರ ಸುತ್ತಲೂ ಎಲ್ಲಾ ಗ್ರಹಗಳೂ ಸಮಸ್ತ ಸ್ವರ್ಗೀಯ ಹಾಗೂ ಮಾನವ ಶರೀರಗಳೂ ತಿರುಗುತ್ತಿವೆಯೋ ಆ ಸೂರ್ಯನೇ ನಾನು! ತನ್ನ ಎಲ್ಲಾ ಭಾಗಗಳನ್ನೂ ತೋರಿಸುವದಕ್ಕಾಗಿಯೂ ತನ್ನ ಎಲ್ಲಾ ಸೌಂದರ್ಯವನ್ನೂ ನನ್ನೆದುರಿಗೆ

ಬಿಚ್ಚಿಡುವದಕ್ಕಾಗಿಯೂ ಇಡಿ ವಿಶ್ವವೇ ಮಂಡಲಾಕಾರವಾಗಿ ಸುತ್ತಿಸುತ್ತಿ ತಿರುಗುತ್ತಿದೆ. ಸೂರ್ಯನು ನನಗಾಗಿ ನನ್ನೆದುರಿಗೆ ಬೆಳಗುತ್ತಿದ್ದಾನೆ.

ಕ್ರಿಸ್ತನ ಹೃದಯವೂ
ಷೇಕ್ಸ್‌ಪಿಯರ್‌ನ ಮಿದುಳೂ
ಪ್ಲೇಟೋನ ಮನಸ್ಸೂ

ಈ ಎಲ್ಲವೂ ನನ್ನ ಮಹಿಮೆಯಿಂದಲೇ ಪೋಷಿತವಾಗಿವೆ ; ನನ್ನ ಸೂರ್ಯ ಪ್ರಕಾಶವನ್ನೇ ಪಾನಮಾಡಿವೆ. ಸೂರ್ಯನ ಪ್ರಾಣಶಕ್ತಿಯಿಂದಲೇ ತಮ್ಮ ಅಂಗಾಂಗಗಳೆಲ್ಲಾ ಚಲಿಸುವವೆಂದು ಜನರು ತಿಳಿಯುವಂತೆ ಸೂರ್ಯನ ಸಾನ್ನಿಧ್ಯವು ಮಾಡುತ್ತದೆ. ಆದರೆ ಇದನ್ನೆಲ್ಲಾ ನಡೆಸುವದು ನನ್ನ ಸ್ವರ್ಣಮಯ ಸಾನ್ನಿಧ್ಯವೇ.

ಸೂರ್ಯರ ಸೂರ್ಯನೂ ಪ್ರಕಾಶಗಳ ಪ್ರಕಾಶವೂ ಆದ ನನ್ನಲ್ಲಿ ಜೀವಿಸಿರಿ ! ನನ್ನ ಸಾನ್ನಿಧ್ಯ ಸಾಗರದಿಂದ ಲೋಕ ಲೋಕಗಳೆಲ್ಲಾ ಅಲೆಅಲೆಯಾಗಿ ಬರುತ್ತಿವೆ. ನಾನೇ ಮಹಾ ರಾಜಾಧಿರಾಜ; ಚಕ್ರವರ್ತಿಗಳಿಗೆಲ್ಲಾ ಸಾರ್ವಭೌಮ ! ಸೂರ್ಯ ರಶ್ಮಿಗಳಲ್ಲಿ ನಾನು ನಗುತ್ತೇನೆ. ನಾನೇ ಯೋಧರ ಮಾಂಸ ಖಂಡಗಳು ಚಲಿಸುವಂತೆ ಮಾಡುತ್ತೇನೆ ! ಎಲ್ಲೆಲ್ಲಿಯೂ ನಡೆಯುತ್ತಿರುವದು ನನ್ನ ಇಚ್ಛೆಯೇ ! ನನ್ನ ಸಾಮ್ರಾಜ್ಯವೇ ನನ್ನ ಮಹಿಮೆಯೇ ಪ್ರತಿಯೊಂದು ಪ್ರಾಣಿಗೂ ಅವರ ನಿತ್ಯದ ಅನ್ನವನ್ನು ಕೊಡುತ್ತಿದೆ ; ಈ ಭೂಮಿಯು ಸುತ್ತುತ್ತಿರುವದೂ ನನ್ನ ಮಹಿಮೆಯಿಂದಲೇ. ಕೆಟ್ಟ ಆಲೋಚನೆಗಳೂ ಪ್ರಾಪಂಚಿಕ ಕಾಮಗಳೂ ನನ್ನ ಸನ್ನಿಧಿಯಲ್ಲಿ ತೋರಿಕೊಳ್ಳುವದಕ್ಕೆ ಅಧಿಕಾರವೇ ಇಲ್ಲ.

ನನ್ನ ಪವಿತ್ರ ಸನ್ನಿಧಿಯಲ್ಲಿ ಪ್ರವೇಶಿಸುವದಕ್ಕೆ ಕ್ಷುದ್ರ ಕಾಮಗಳಿಗೆ ಅಧಿಕಾರವಿಲ್ಲ. ಕಾಮ ಕ್ರೋಧಾದಿಗಳು ಅಂಧಕಾರದ ಸಂತಾಪ ಭಾವಗಳು ! ಅತ್ಯಂತ ನೀಚವಾದುದನ್ನೂ ಅತ್ಯಂತ ಉಚ್ಚವಾದುದನ್ನೂ ನಾನೇ ವ್ಯಾಪಿಸಿದ್ದೇನೆ. ನಾನು ಪ್ರೇಕ್ಷಕನೂ ಪ್ರದರ್ಶನಕಾರನೂ ಆಗಿದ್ದೇನೆ. ಕ್ರಿಸ್ತನಲ್ಲಿರುವವನು ನಾನೇ ! ಅತ್ಯಂತ ಕಳಂಕಿತನಲ್ಲಿಯೂ ಇರುವವನು ನಾನೇ. ಸರ್ವವೂ ನಾನೇ ! ನಿಮ್ಮ ಕಾಮದ ವಿಷಯವು ಏನೇನು ಇದೆಯೋ ಅದೆಲ್ಲಾ ನಾನೇ. ಗುಡುಗಿನಲ್ಲಿ ಮೊಳಗುತ್ತಿರುವವನೂ ಸಮುದ್ರಗಳಲ್ಲಿ ಉಕ್ಕೇರುತ್ತಿರುವವನೂ ನಾನೇ. ಫ್ರ್ಯಾಂಕ್ಲಿನ್, ನ್ಯೂಟನ್, ಕಾಲ್ವಿನ್, ಪ್ರವಾದಿಗಳ ಹೃದಯಗಳೂ ನಾನೇ. ಉದ್ಯಾನವನಗಳ ಮತ್ತು ಪ್ರಕೃತಿದೃಶ್ಯಗಳ ಮೂಲ ಚೆಲುವೆಯು ನಾನೇ. ಓಂಕಾರಕ್ಕೆ ಈ ಎಲ್ಲಾ ಭಾವಗಳನ್ನೂ ಅರ್ಥಗಳನ್ನೂ ಕೊಟ್ಟು, ಅದನ್ನು ಉಚ್ಚಾರಣೆ ಮಾಡಿ, ಗಾನಮಾಡಿ, ಅದರಲ್ಲಿಯೇ ಜೀವಿಸಿರಿ; ನೀವೇ ದೇವರಾಗಿ ನಡೆಯಿರಿ, ನುಡಿಯಿರಿ. ಮಹತ್ತಲ್ಲದ ಯಾವ ಕಾಮಕ್ಕಾದರೂ

ತಲೆಬಾಗುವದು ಸ್ವಾಭಿಮಾನಶೂನ್ಯತೆಯನ್ನು ತೋರಿಸುತ್ತದೆ. ನಿಮ್ಮ ಭವ್ಯವಾದ ಮಹಿಮೆಯಲ್ಲಿಯೂ ಘನತೆಯಲ್ಲಿಯೂ ವರ್ತಿಸಿರಿ. ಪ್ರಾಪಂಚಿಕವಾದ ಯಾವ ಬಯಕೆಯಾದರೂ ನಿಮ್ಮನ್ನು ಸೆಳೆದರೆ ನೀವು ಓಂಕಾರವನ್ನು ಗಾನಮಾಡುತ್ತಿಲ್ಲವೆಂದು ತಿಳಿಯಬೇಕು.

ಸುಷುಮ್ನಾದ್ವಾರವು ತೆರೆಯಬೇಕೆಂದಾಗಲಿ, ಸಹಸ್ರಾರ ಕಮಲವು ಅರಳಿ ಅಮೃತಸ್ರಾವವಾಗಬೇಕೆಂದಾಗಲಿ ಕಾಲವನ್ನು ವ್ಯರ್ಥವಾಗಿ ಕಳೆಯಬೇಡಿ. ಎಲ್ಲಾ ತಾವಾಗಿಯೇ ಆಗುತ್ತವೆ. ನಿಮ್ಮ ಸಾಧನಕ್ಕೆ ಅದ್ಭುತ ಫಲಗಳು ಹೊಳೆಯುತ್ತವೆ. ಭಯ, ಚಿಂತೆ, ಕಾತರತೆ, ಕಳವಳ ಮೊದಲಾದ ಎಲ್ಲವನ್ನೂ ಮೀರಿ ಭರವಸೆಯಿಂದಲೂ ಶಾಂತಿಯಿಂದಲೂ ಇರಿ. ಎಲ್ಲಾ ಜ್ಞಾನವೂ ನಿಮಗೆ ಬರುತ್ತದೆ. ಜಗತ್ತು ತಾನಾಗಿಯೇ ಒಲಿದು ನಿಮ್ಮಲ್ಲಿಗೆ ಬರುತ್ತದೆ. ಪ್ರತಿಯೊಂದು ಪದಾರ್ಥವೂ ನಿಮ್ಮಲ್ಲಿ ವಶವರ್ತಿಯಾದ ನಿಷ್ಠೆಯನ್ನು ತೋರಿಸುತ್ತದೆ. ಸುತ್ತು ಬಳಸಿನ ವಕ್ರ ಮಾರ್ಗಗಳಿಂದ ಭ್ರಾಂತಿಗೊಳಗಾದರೆ ಪಶ್ಚಾತ್ತಾಪ ಪಡಬೇಕಾಗುತ್ತದೆ. "ತತ್ತ್ವಮಸಿ" ಆ ಪರಮಾತ್ಮ ಚೈತನ್ಯವೇ ನೀವಾಗಿದ್ದೀರಿ !

ಓಂ ! ಓಂ ! ಓಂ !

# RAMA'S POEMS

# ರಾಮನ ಪದ್ಯಗಳು

## BLOOD RELATIONS

## ರಕ್ತ ಸಂಬಂಧಗಳು

ಓ ನನ್ನ ನೇರ ರಕ್ತಸಂಬಂಧಗಳು
ನನ್ನೆಲ್ಲ ರಕ್ತನಾಳಗಳಲಿ ಸ್ಪಂದಿಸಿಹವು.
ಗಿಡ ಮರವು ಗಾಳಿ ಬೆಳಕು ನೀರುಗಳು
ಮಿಕ್ಕೆಲ್ಲ ಸಂಬಂಧಗಳು ತಪ್ಪದೆ ಶೃಂಖಲೆಗಳು.
ಪರ್ವತಗಳು ನದಿಗಳು ಸೂರ್ಯ ಮೇಣ್ ಮಳೆಗಳು
ನನ್ನ ಮೂಳೆಯು ಮೂಳೆ, ನನ್ನ ರಕ್ತದ ರಕ್ತ, ಇವುಗಳು,
ಜಾಜಿ ಮಲ್ಲಿಗೆ ಗುಲಾಬಿ ಸಂಪಿಗೆಗಳು ನಗು ನಗುತ್ತಿವೆ
ನನ್ನ ಹೃದಯದ ಹೃದಯದಲಿ ಆ ಹರ್ಷ ತುಂಬಿಹುದು.
ನಗರದ ಬೀದಿಗಳಲಿ ನಡೆವಂತೆ ಎನ್ನಲ್ಲಿ
ಕಪಲುಗಳು, ಗಾಳಿಗಳು, ಭೂಮಿಗಳು, ಓಡುತಿಹವು.
ದಿವ್ಯ ರಾಗಗಳಲಿ ಸ್ವರ್ಗೀಯ ಗಾನದಲಿ,
ನನ್ನ ಅನಂತ, ಅನಂತಾನಂದವೇ ವ್ಯಕ್ತವಾಗಿಹುದು;
ತಾರೆಗಳ ಥಳಥಳಿಪ ಕಣ್ಣೀರ ಹನಿಗಳನು
ಸುರಿಯುವಾ ಮಳೆಗಳಲಿ ವರ್ಷಿಸುತ್ತಿಹೆನು;
ಗಂಗಾ ನದಿಯ ಇಂಪಾದ ಗಾನವೂ
ಒಲಿಯುವಾ ದೇವದಾರುಗಳ ಇನಿದನಿಯೂ
ಸಾಗರದ ಹೋರಾಟದಾ ಮಾರ್ದನಿಯು,
ಹಸುವಿನಾ ಕೂಗು,
ಮಂಜಿನಾ ದ್ರವ ಹನಿಯು,
ಭಾರದಿಂ ಕೆಳಗಿಳಿವ ಮೋಡ,
ಪುಟ್ಟ ಹಕ್ಕಿಗಳ ಪಟ ಪಟವೆನುವ ಸದ್ದು
ಮಂದಿಯಾ ಗೊಳ್ಳೆನುವ ಗಟ್ಟಿ ನಗು,
ಸೂರ್ಯನಾ ಸುವರ್ಣ ಕಿರಣಜಾಲ,
ನಿಶ್ಶಬ್ದ ತಾರೆಯಾ ಥಳಥಳ ಮಿರುಗು,

ತೊಳ ತೊಳಗುವಾ ರಜತ ಚಂದ್ರನ ಬೆಳಕು,
ದೂರವೂ ಸಮೀಪವೂ ಚೆಲ್ಲುತಿಹ ಕಾಂತಿ,
ಉರಿಯುತಿಹ ಕತ್ತಿಯಾ ಹೊಳಪು,
ಉಜ್ವಲ ರತ್ನಗಳ ಥಳಥಳಿಪ ಕಳೆಯು,
ಕಡಲ ಬೆಳಕು ಮನೆಯಾ ಸಂಜ್ಞಾ ಜ್ಯೋತಿಯ ಪ್ರಭೆಯು,
ಕತ್ತಲ ಕಾವಳದ ರಾತ್ರಿಯಲಿ ;
ಸೇಬಿನ ಸಮೃದ್ಧಿಯ ಭೂಮಿ, ಸ್ವರ್ಗದಾ ದಿವ್ಯಸಂಪತ್ತು,
ಶಬ್ದವಿಲ್ಲದಾ ಶಬ್ದ, ಉರಿಯಿಲ್ಲದಾ ದೀಪ,
ಕಪ್ಪಿಲ್ಲದಾ ಕತ್ತಲೆಯು, ರೆಕ್ಕೆಯಿಲ್ಲದಾ ಹಾರಾಟ,
ಮನವಿಲ್ಲದಾಲೋಚನೆಯು, ಕಣ್ಣಿಲ್ಲದಾ ನೋಟ.
ಬಾಯಿಯಿಲ್ಲದಾ ಮಾತು, ಕೈಯಿಲ್ಲದಾ ಹಗುರ ಹಿಡಿತ,
ನಾನೇ, ನಾನೇ, ನಾನೇ, ನಾನೇ.

## The world, the world is naught to me

### ಈ ಪ್ರಪಂಚವು, ಪ್ರಪಂಚವು ಶೂನ್ಯವು ನನಗೆ

ನನ್ನ ಆತ್ಮವು, ಆತ್ಮವು ಸರ್ವಸ್ವವು ನನಗೆ.
ಈ ದೇಹವು, ಎಲ್ಲಿಗೆ ಹೋದರು, ಏನಾದರೇನು ನನಗೆ,
ಎಸೆದಾಡಿದರು ಇಲ್ಲಿ—ಅಲ್ಲಿ, ಅಥವಾ ಸತ್ತರು ಏನು ನನಗೆ,
ಸ್ವಚ್ಛಂದಾತ್ಮ ನಾನು, ಕ್ಷಾರ ಸಾಗರದ ತುಷಾರದಂತೆ
ಅಪ್ಪಳಿಸಿದರು ಇತ್ತಿಂದತ್ತ ಅಥವಾ ಮೇಲೆ ಮತ್ತೆತ್ತಲೋ!
ಸುಖ ಸಂತೋಷಗಳೆ ಬನ್ನಿ, ಬನ್ನಿ; ಸಂಕಟಗಳೆ, ನೀವೂ ಬನ್ನಿ,
ನನಗೆ ನೀವೆಲ್ಲ ಸಮ, ಒಂದೆ, ಒಂದೇ.
ಆದಿತ್ಯದೇವ ಬೆಳಗುವನು ಉದ್ಯಾನಗಳ ಅಂತೆ. ಹಾಳನೆಲವ
ಹಾಗೆ ನಾನೂ ವಿಧಿಯು ಮಾರ್ಪಾಡುಗಳ ಬೆಳಗುವೆನು ಸುಮತಿಯಿಂದ.
ಮೋಡಗಳು ಗಗನದಲಿ ಏರಿ, ತೋರಿ, ಅಡಗಿಹವು,
ನಿರ್ಮಲೋನ್ನತ ವಿಶಾಲ ನೀಲಾಕಾಶ ಸಾಗರವೊಳಿಗೂ ಬಾಧ್ಯವಲ್ಲ.
ಜೀವನವೊ ಸಾವೊ ಆರೋಗ್ಯವೋ ರೋಗವೋ
ಎನ್ನಲ್ಲಿ ಹಬೆಯಂತೆ ಎದ್ದು ಆಡಿ, ಅಡಗುವುವಲ್ಲೆ.
ಯೌವನದ ನೇರಗೆರೆ, ಮುಪ್ಪಿನಾ ವಕ್ರಗೆರೆ
ಕಾಗದದ ಪರಿ ಇರುವ ಎನ್ನ ಮೇಲೆಳೆದಿರುವ ರೇಖಾಕೃತಿಗಳು.
ಗೆಲುವು ಸೋಲುಗಳ ಭೇದ ಎನಗಿಲ್ಲ.
ಏಕನೆ, ನಾನೆ ಮುಕ್ತ, ನಾನೇ ಮುಕ್ತ, ಮುಕ್ತ ನಾನೇ.

ಸಕಲ ಗ್ರಹಗಳ, ಸೂರ್ಯರ ತಾರೆಗಳ ಗಗನಗಳ
ದೂರ ಹಿಂದಟ್ಟಿ ಬಹಳ ಮೇಲೇರಿ ಹಾರುತಿದೆ,
ಹರಿದಾರವಿಲ್ಲದಾ ಎನ್ನ ಮುಕ್ತಿ ಸ್ವಾತಂತ್ರ್ಯದಾ ಗಾಳೀಪಟವು,
ಹರ್ಷ ಗೀತೆಗಳ ಪಾಡುವೆನು ತುಂಬಿದೆದೆಯಿಂ ನಾನು,
ನಾ ಮುಕ್ತ, ನಾ ಮುಕ್ತ, ನಾ ಮುಕ್ತ, ಮುಕ್ತ ನಾನೇ ;
ಪ್ರಪಂಚವೇನಿಲ್ಲ, ಪ್ರಪಂಚ ಶೂನ್ಯವೆನಗೆ.

ಓಂ !

## Goodbye
## ಸ್ವಸ್ತಿ, ಶುಭಮಸ್ತು, ನಮಸ್ತೇ

ಚಂದ್ರನು ಮೇಲೇರಿಹ, ಚಂದ್ರನನು ನೋಡುವರು,
ನಿನ್ನ ಹುಬ್ಬುಗಳ ಬೆಳಕ ಪಾನಗೈಯುವೆ,
ಪೂರ್ಣ ನಿಬಿಡವಹ ಮಹಾ ಪ್ರದರ್ಶನಗಳ ನಡೆಸುವರು,
ದೃಷ್ಟಿ ಮೂಲವಹ ನಿನ್ನನೆ ನಾ ನಿರೀಕ್ಷಿಸುವೆ ನಿರೀಕ್ಷಿಸುವೆ !
ಬೇಡ, ಕರೆಯಬೇಡ, ವೈದ್ಯರನು, ಶಸ್ತ್ರವೈದ್ಯರನು, ಯಾರನೂ.
ಎನಗೆ ಎನ್ನ ನೋವೇ ಸಕಲ ಸುಖವು.
ನಾಗರಿಕರೇ ! ನಗರಗಳೆ, ಸ್ವಸ್ತಿ ! ಶುಭಮಸ್ತು, ನಮಸ್ತೇ !
ತಲೆ ತಿರುಗಿಸುವ ಸ್ವರ್ಗೀಯ ಔನ್ನತ್ಯಗಳೆ ! ಓ ಸ್ವಾಗತವು.
ಓ ನೀಟುಗಾರಿಕೆಯೆ, ಪದ್ಧತಿಯೆ, ಗುಣ—ದೋಷಗಳೆ,
ಓ ನಿಯಮವೇ, ಸಂಪ್ರದಾಯವೇ, [ಕಲ್ಪಿತವೆ] ಶಾಂತಿಯ ರಣವೆ !
ಓ ಮಿತ್ರರೆ, ಶತ್ರುಗಳೆ, ಬಂಧುಗಳೆ, ಬಂಧನವೆ,
ಸ್ವತ್ತೆ, ರಾಗವೆ, ತಪ್ಪು, ಸರಿಯೆ.
ನಮಸ್ತೇ ಓ ಕಾಲ—ದೇಶಗಳೆ, ನಮಸ್ತೇ !
ನಮಸ್ತೇ ! ಓ ಜಗವೆ, ಹಗಲು, ರಾತ್ರಿಗಳೆ,
ಎನ್ನ ಪ್ರಿಯಕರಗಳು ಹೂವುಗಳು ಹಾಡು ಬೆಳಕು,
ಹಗಲು ಎನಗೆ ಪ್ರಿಯವು ರಾತ್ರಿ ಎನಗೆ ಪ್ರಿಯವು,
ಎಲ್ಲಾ ಕತ್ತಲು, ಬೆಳಕೂ ಎನ್ನಲ್ಲಿ ಕರಗಿಹವು
ಓ ಎಂಥಾ ಶಾಂತಿ, ಸಮಾಧಾನ, ಆನಂದ !
ಎನ್ನ ಪ್ರೇಮವನು, ಎನ್ನನೂ ಓ ಎನ್ನನೊಬ್ಬನೇ ಬಿಟ್ಟು ಬಿಡಿರಿ.
ನಮಸ್ತೇ, ನಮಸ್ತೇ, ನಮಸ್ತೇ.

ಓಂ ! ಓಂ ! ಓಂ !